# ಅಭಿಜ್ಞಾನ

## ಡಾ ಕೆ ಕೃಷ್ಣಮೂರ್ತಿ ಅಭಿನಂದನ ಗ್ರಂಥ



## ಅಭಿಜ್ಞಾನ • • •

ವಿದ್ವನ್ಮಣಿ ಡಾ. ಕೆ. ಕೃಷ್ಣಮೂರ್ತಿಗಳ ಸಾಧನೆ ಸಿದ್ಧಿಗಳನ್ನು ಮನಗಂಡು ಅವರನ್ನು ಉಚಿತರೀತಿಯಿಂದ ಅಭಿನಂದಿಸಬೇಕೆಂದು ಅವರ ವಿದ್ವನ್ಮಿತ್ರರೂ ಅಭಿಮಾನಿಗಳೂ ಶಿಷ್ಯರೂ ಮೂರು ವರ್ಷಗಳ ಹಿಂದೆ ಸಮಾಲೋಚಿಸಿದರು. ಕೃಷ್ಣಮೂರ್ತಿಗಳು ಇಂಗ್ಲಿಷ್ ಸಂಸ್ಕೃತ ಮತ್ತು ಕನ್ನಡ ಮೂರು ಭಾಷೆಗಳಲ್ಲಿಯೂ ಕೆಲಸ ಮಾಡಿರುವುದರಿಂದ, ಇಂಗ್ಲಿಷ್ ಮತ್ತು ಸಂಸ್ಕೃತ ಸೇರಿದಂತೆ 'Ānanda Bhārati', ಕನ್ನಡದಲ್ಲಿ 'ಅಭಿಜ್ಞಾನ' ಹೀಗೆ ಎರಡು ಅಭಿನಂದನ ಗ್ರಂಥಗಳನ್ನು ಪ್ರಕಟಿಸುವ ಸಂಕಲ್ಪ ಮಾಡಿ, ಸಂಶೋಧನ ಪ್ರಬಂಧಗಳಿಗಾಗಿ ನಾಡಿನ ಖ್ಯಾತ ವಿದ್ವಾಂಸರಿಗೆ ಪತ್ರಗಳನ್ನು ಬರೆದು ವೈಯಕ್ತಿಕವಾಗಿ ಕೋರಲಾಯಿತು. ಎರಡು ಅಭಿನಂದನ ಗ್ರಂಥಗಳಲ್ಲಿಯೂ ಭಾರತೀಯ ವಿದ್ಯೆಯ ಅಧ್ಯಯನಗಳಿಗೆ ಸೇರಿದ ಮೌಲಿಕ ಪ್ರಬಂಧಗಳು ಸಮಾವೇಶವಾಗತಕ್ಕದೆಂದೂ ಕನ್ನಡದ ಮಟ್ಟಿಗೆ ವಿಶೇಷವಾಗಿ ಕಾವ್ಯಲಕ್ಷಣ ಕ್ಷೇತ್ರದ ವಿವಿಧ ಅಂಗಗಳಾಗಿರುವ ಭಾಷೆ ವ್ಯಾಕರಣ ನಿಘಂಟುರಚನೆ ಛಂದಸ್ಸು ಕಾವ್ಯಮೀಮಾಂಸೆ ಕವಿಕಾವ್ಯವಿಚಾರ ಇಂತಹವುಗಳಿಗೆ ಪ್ರಾಮುಖ್ಯವಿರತಕ್ಕದೆಂದೂ ಸಂಪಾದಕೀಯ ಸಮಿತಿಗಳು ಉದ್ದೇಶಿದುವು. ಆ ಉದ್ದೇಶಗಳಿಗನುಗುಣವಾಗಿಯೇ ವಿದ್ವಾಂಸರಿಂದ ಪ್ರಬಂಧಗಳೂ ಬರೆದುಬಂದವು.

ಡಾ. ಕೆ. ಕೃಷ್ಣಮೂರ್ತಿ ಅವರ ಅಮೋಘ ಸಾಧನೆಗೆ ಕನ್ನಡ ವಿದ್ವತ್ಪ್ರಪಂಚದ ಕಾಣಿಕೆಯಾಗಿ 'ಅಭಿಜ್ಞಾನ' ಇದೀಗ ಕನ್ನಡ ಸಾರಸ್ವತಲೋಕದಲ್ಲಿ ದಾಖಲಾಗಿದೆ.

# ಅಭಿಜ್ಞಾನ

ಡಾ. ಕೆ. ಕೃಷ್ಣಮೂರ್ತಿ ಅಭಿನಂದನ ಗ್ರಂಥ

ಸಂಪಾದಕರು

ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ

ಡಾ. ಕೆ. ಅನಂತರಾಮು

ಡಾ. ಎನ್. ಎಸ್. ತಾರಾನಾಥ



ಡಾ. ಕೆ. ಕೃಷ್ಣಮೂರ್ತಿ ಅಭಿನಂದನ ಸಮಿತಿ

ಪರವಾಗಿ

ಡಿ.ವಿ.ಕೆ. ಮೂರ್ತಿ : ಕೃಷ್ಣಮೂರ್ತಿಪುರಂ : ಮೈಸೂರು ೪

*ABHIJNĀNA* (DR. K. KRISHNA MOORTHY FELICITATION VOLUME). Edited by the Editorial Committee. Published on behalf of Dr. K. Krishnamoorthy Felicitation Committee by D. V. K. MURTHY, Krishnamurthipuram, Mysore-570 004. First published 1995.

ಪ್ರಥಮ ಮುದ್ರಣ : ೧೯೯೫



ಮುದ್ರಕರು : ಜಿ. ಎಚ್. ಕೃಷ್ಣಮೂರ್ತಿ, ಮೈಸೂರು ಪ್ರಿಂಟಿಂಗ್ ಪ್ರೆಸ್
೧೨೧೦, ಕಾಂತರಾಜ ಅರಸು ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು ೫೭೦ ೦೦೪




# ಡಾ. ಕೆ. ಕೃಷ್ಣಮೂರ್ತಿ ಅಭಿನಂದನ ಸಮಿತಿ
## ಮೈಸೂರು

ಗೌರವಾಧ್ಯಕ್ಷರು

ಡಾ. ವಿ. ಕೆ. ಗೋಕಾಕ್

ಕಾರ್ಯಾಧ್ಯಕ್ಷರು

ಡಾ. ಕೆ. ರಾಜಗೋಪಾಲಾಚಾರ್ — ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ

ಪ್ರಧಾನ ಕಾರ್ಯದರ್ಶಿಗಳು

ಡಾ. ಆರ್. ಎಸ್. ಶಿವಗಣೇಶಮೂರ್ತಿ — ಡಾ. ಬಿ. ಚನ್ನಕೇಶವ

ಕೋಶಾಧ್ಯಕ್ಷರು

ಶ್ರೀ ಸಿ. ಎನ್. ಕೇಶವ ಪ್ರಕಾಶ್

ಕಾರ್ಯಕಾರಿ ಸಮಿತಿಯ ಸದಸ್ಯರು

| | |
|---|---|
| ಡಾ. ಜಿ. ಎಸ್. ಗಾಯಿ | ಶ್ರೀ ಡಿ. ವಿ. ಕೆ. ಮೂರ್ತಿ |
| ಪ್ರೊ. ಕೆ. ಎಸ್. ಕೃಷ್ಣಮೂರ್ತಿ | ಡಾ. ಎಂ. ಆರ್. ವೀರಭದ್ರಸ್ವಾಮಿ |
| ಡಾ. ಎಚ್. ಪಿ. ಮಲ್ಲೇದೇವರು | ಡಾ. ಎಚ್. ಪಿ. ದೇವಕಿ |
| ಪ್ರೊ. ಬಿ. ಕೆ. ಶಿವರಾಮಯ್ಯ | ಶ್ರೀಮತಿ ಕೆ. ಲೀಲಾ |
| ಡಾ. ಕೆ. ವಿ. ರಮೇಶ್ | ಡಾ. ಡಿ. ಎನ್. ಶಾನಭಾಗ್ |
| ಡಾ. ಡಿ. ಎ. ಶಂಕರ್ | ಡಾ. ಸಿ. ಎನ್. ರಾಮಚಂದ್ರನ್ |
| ವಿದ್ವಾನ್ ಎಚ್. ಎಸ್. ಘಾಟಕ್ | ಶ್ರೀ ಆರ್. ಗಣೇಶ್ |
| ಶ್ರೀ ಎಚ್. ಎಸ್. ಹರಿಶಂಕರ್ | ಶ್ರೀ ಎಂ. ಎನ್. ಚಂದ್ರಶೇಖರ್ |
| ಪ್ರೊ. ಕೆ. ವಿ. ಅರ್ಕನಾಥ್ | |

'ಅಭಿಜ್ಞಾನ'ದ ಸಂಪಾದಕ ಸಮಿತಿಯ ಸದಸ್ಯರು

**ಪ್ರೊ. ಬಿ. ಕೆ. ಶಿವರಾಮಯ್ಯ**

**ಡಾ. ಸಿ. ಪಿ. ಕೃಷ್ಣಕುಮಾರ್**

**ಶ್ರೀ ಆರ್. ಎಲ್. ಅನಂತರಾಮಯ್ಯ**

# ಡಾ. ಕೆ. ಕೃಷ್ಣಮೂರ್ತಿ ಅಭಿನಂದನ ಸಮಿತಿ
## ಮೈಸೂರು

### ಸ್ಥಾನೀಯ ಕಾರ್ಯದರ್ಶಿಗಳು

ಡಾ. ಎಂ. ಶಿವಕುಮಾರಸ್ವಾಮಿ, ಬೆಂಗಳೂರು
ಡಾ. ಎಂ. ಬಿ. ಪರಡ್ಡಿ, ಧಾರವಾಡ
ಡಾ. ಎಸ್. ಜಗದೀಶನ್, ಮಧುರೈ
ಡಾ. ಎಸ್. ಕೃಷ್ಣಮೂರ್ತಿ, ಮಂಗಳೂರು
ಡಾ. ಬಿ. ಎ. ದೊಡಮನಿ, ಮೈಸೂರು
ಡಾ. ಸಿ. ಎಲ್. ಎನ್. ಮೂರ್ತಿ, ಪುಟ್ಟಪರ್ತಿ
ಡಾ. ಎಂ. ಎನ್. ನಂದಕುಮಾರ್, ಲಂಡನ್
ಡಾ. ಎಚ್. ವಿ. ಸತ್ಯನಾರಾಯಣ ಶಾಸ್ತ್ರಿ, ಶಿವಮೊಗ್ಗ

### ಸಲಹಾ ಸಮಿತಿಯ ಸದಸ್ಯರು

ಪ್ರೊ. ಎಂ. ಪಿ. ಎಲ್. ಶಾಸ್ತ್ರಿ
ಪ್ರೊ. ಎಸ್. ರಾಮಚಂದ್ರರಾವ್
ಡಾ. ಕೆ.ಆರ್. ಶ್ರೀನಿವಾಸ ಅಯ್ಯಂಗಾರ್
ವಿದ್ವಾನ್ ಎನ್. ರಂಗನಾಥ ಶರ್ಮಾ
ಪ್ರೊ. ದೇ. ಜವರೇಗೌಡ
ಶ್ರೀ ನಿಟ್ಟೂರು ಶ್ರೀನಿವಾಸರಾವ್
ಡಾ. ಹಾ. ಮಾ. ನಾಯಕ
ಡಾ. ಆರ್. ಸಿ. ಹಿರೇಮಠ
ಶ್ರೀ ಮಂತ್ರೂರು ಕೃಷ್ಣಮೂರ್ತಿ
ಪ್ರೊ. ಕೆ. ಟಿ. ಪಾಂಡುರಂಗಿ
ಪ್ರೊ. ಎಚ್.ಎಮ್. ಶಂಕರನಾರಾಯಣ ರಾವ್
ಡಾ. ಡಿ. ಪಿ. ಪಟ್ಟನಾಯಕ್
ಡಾ. ಎಚ್. ಕೃಷ್ಣಮೂರ್ತಿ
ಶ್ರೀ ಬಿ. ಎನ್. ವಿ. ಸುಬ್ರಹ್ಮಣ್ಯ
ಡಾ. ಕೆ. ಕುಂಜುನ್ನಿ ರಾಜ
ಡಾ. ರಮಾರಂಜನ ಮುಖರ್ಜಿ
ಡಾ. ವಿದ್ಯಾನಿವಾಸ ಮಿಶ್ರ
ಡಾ. ಆರ್. ಸಿ. ದ್ವಿವೇದಿ
ಡಾ. ಆರ್. ಎನ್. ದಾಂಡೇಕರ್
ಪ್ರೊ. ಜೆ. ಸಿ. ರೈಟ್
ಡಾ. ಜೆ. ಎಲ್. ಬ್ರಾಕಿಂಗ್‌ಟನ್
ಡಾ. ಪಿ. ಎಸ್. ರಾಮಾನುಜಂ
ಡಾ. ಎಸ್. ಎಸ್. ಜಾನಕಿ

# ಮುನ್ನುಡಿ

ಭಾರತೀಯ ವಿದ್ಯಾಪರಂಪರೆ ಭರತಖಂಡದ ವೇದಕಾಲೀನ ಋಷಿಮುನಿಗಳಿಂದ ತೊಡಗಿ ನಮ್ಮ ಕಾಲದ ಪ್ರಾಚ್ಯ ಪಾಶ್ಚಾತ್ಯ ವಿದ್ಯಾ ವಿಚಕ್ಷಣರಾದ ದೇಶೀಯ ವಿದೇಶೀಯ ವಿದ್ವಾಂಸರವರೆಗೆ ಅವಿಚ್ಛಿನ್ನವಾಗಿ ಸಾಗಿ ಬರುತ್ತಿರುವ ಒಂದು ಅಮೃತವಾಹಿನಿ. ಅಮೃತ ವಾಹಿನಿಯಾದುದರಿಂದ ಅದು ನವನವೋನ್ಮೇಷಶಾಲಿನಿಯೂ ಆಗಿದೆ. ಈ ಪರಂಪರೆಯ ಮೂಲಕವೇ ಭಾರತೀಯ ಸಂಸ್ಕೃತಿ ಎನ್ನುವುದು ಇಂದು ಲೋಕಪ್ರಕಟವಾಗಿದೆ, ಲೋಕ ಪೂಜ್ಯವಾಗಿದೆ. ಇದು ಸಾಧ್ಯವಾದುದಾದರೂ, ವಿಶೇಷವಾಗಿ ಇಂದಿನ ಸಂದರ್ಭದಲ್ಲಿ, ಸಂಸ್ಕೃತ ಪ್ರಾಕೃತ ಭಾಷಾತಜ್ಞರಾದ ಮಹನೀಯರಿಂದ ಎನ್ನಬೇಕು. ಇವರಲ್ಲಿ ಸರ್ವಶ್ರೀ ಆರ್. ಜಿ. ಭಂಡಾರ್ಕರ್, ವಿ. ಎಸ್. ಸುಕ್ಥಂಕರ್, ಎಸ್. ಕೆ. ಬೆಲ್ವಲ್ಕರ್, ಪಿ. ಎಲ್. ವೈದ್ಯ, ಕೆ. ಬಿ. ಪಾಠಕ್, ಹರಪ್ರಸಾದ ಶಾಸ್ತ್ರಿ, ಕುಪ್ಪುಸ್ವಾಮಿ ಶಾಸ್ತ್ರಿ, ಪಿ. ವಿ. ಕಾಣೆ, ಎಸ್. ಕೆ. ಡೇ, ವಿ. ರಾಘವನ್, ಎಂ. ಹಿರಿಯಣ್ಣ, ಎ. ವೆಂಕಟಸುಬ್ಬಯ್ಯ, ಎ. ಎನ್. ಉಪಾಧ್ಯೆ, ಎಚ್. ಡಿ. ವೇಲಣಕರ್, ಪಿ. ಕೆ. ಗೋಡೆ, ವಿ. ವಿ. ಮಿರಾಶಿ, ಎಸ್. ಪಿ. ಪಂಡಿತ್, ಎಸ್. ಕೆ. ಚಟರ್ಜಿ, ಎಸ್. ಎಂ. ಖತ್ರೆ ಈ ಮೊದಲಾದವರು ನಮಗೆ ಪ್ರಾತಃ ಸ್ಮರಣೀಯರಾಗಿದ್ದಾರೆ. ತಮ್ಮ ಅವಿಶ್ರಾಂತವಾದ ಬೌದ್ಧಿಕ ವ್ಯವಸಾಯಗಳಿಂದ, ಸಾಧನೆ ಸಿದ್ಧಿಗಳಿಂದ ಇವರೊಂದಿಗೆ ಸೇರತಕ್ಕವರು, ಅಗ್ರಪಂಕ್ತಿಯ ಮನ್ನಣೆ ಪಡೆಯತಕ್ಕವರು ಎಂದರೆ ನಮ್ಮವರಾದ ಡಾ. ಕೆ. ಕೃಷ್ಣಮೂರ್ತಿಗಳು.

ಕೃಷ್ಣಮೂರ್ತಿಗಳು ಎಪ್ಪತ್ತು ಸಂವತ್ಸರಗಳ ಸಾರ್ಥಕ ವಸಂತಗಳನ್ನು ನೋಡಿದವರು. ಅವರು ವಿದ್ಯಾರ್ಥಿಯಾಗಿ ಮೇಧಾವಿಗಳು ; ತೆಗೆದುಕೊಂಡ ಪರೀಕ್ಷೆಗಳಲ್ಲೆಲ್ಲ ಪ್ರಥಮ ಶ್ರೇಣಿಯಲ್ಲಿ, ಉಚ್ಚಸ್ಥಾನದೊಂದಿಗೆ ಉತ್ತೀರ್ಣರಾದವರು, ಪದಕ ಪ್ರಶಸ್ತಿಗಳನ್ನು ಗಳಿಸಿದವರು. ಅವರು ಅಧ್ಯಾಪಕರಾಗಿ ವಿದ್ಯಾರ್ಥಿಗಳಿಗೆ ಪ್ರಿಯರು, ಸಮರ್ಥರು ; ತಮ್ಮ ಸ್ಫೂರ್ತಿಯುತ ಪಾಠಪ್ರವಚನಗಳಿಂದಲೂ ಮಾರ್ಗದರ್ಶನದಿಂದಲೂ ಆಚಾರ್ಯಪದವನ್ನು ಪಡೆದವರು. ಅವರು ವಿದ್ವಾಂಸರಾಗಿ ಶ್ರೇಷ್ಠರು ; ಬಹುಸಂಖ್ಯೆಯಲ್ಲಿ ಮೌಲಿಕ ಸಂಶೋಧನ ಪ್ರಬಂಧಗಳನ್ನೂ ಗ್ರಂಥಗಳನ್ನೂ ರಚಿಸಿದವರು. ಅವರು ವಾಗ್ಮಿಗಳಾಗಿ, ವಾದಿಗಳಾಗಿ ನೈಪುಣ್ಯವುಳ್ಳವರು ; ನಿಂತ ವೇದಿಕೆಗಳಲ್ಲಿ ಶ್ರೋತೃಗಳನ್ನು ರಂಜಿಸಿರುವವರು; ಅವರಲ್ಲಿ ವಿದ್ಯಾನುರಕ್ತಿಯನ್ನು ವರ್ಧಿಸಿದವರು; ನಮ್ಮ ದೇಶದಲ್ಲಿ, ವಿಶೇಷವಾಗಿ ಕನ್ನಡ ನಾಡಿನಲ್ಲಿ, ಸಂಸ್ಕೃತ ವ್ಯಾಸಂಗದ ಹಾಗೂ ಶಿಕ್ಷಣದ ಬೆಳೆವಣಿಗೆಗೆ ಬಗೆಬಗೆಯ

ಜವಾಬ್ದಾರಿಗಳನ್ನು ನಿರ್ವಹಿಸಿ ಹಲವು ದಶಕಗಳ ಕಾಲ ಶ್ರಮಿಸಿದವರು.

ಪ್ರತಿಭೆ, ವ್ಯುತ್ಪತ್ತಿ ಮತ್ತು ಅಭ್ಯಾಸ ಇವು ಮುಪ್ಪುರಿಗೊಂಡ ಒಂದು ಮಣಿಮಯ ಮೂರ್ತಿ ಕೃಷ್ಣಮೂರ್ತಿ. ಅವರು ನಮ್ಮ ರಾಜ್ಯದಲ್ಲಿ, ನಮ್ಮ ನಾಡಿನಲ್ಲಿ ಮಾತ್ರವಲ್ಲದೆ, ಸಂಸ್ಕೃತ ಭಾಷಾಸಾಹಿತ್ಯಗಳ ಅಧ್ಯಯನಪೀಠಗಳಿರುವ ವಿಶ್ವದ ವಿವಿಧ ಸ್ಥಳಗಳಲ್ಲಿ ತಮ್ಮ ವಿದ್ವತ್ತೆಗಾಗಿ ಪರಿಚಿತರಾಗಿದ್ದಾರೆ; ಆ ವಿದ್ವತ್ತೆಯ ಫಲಗಳಾಗಿ ಪ್ರಕಟವಾಗಿರುವ ಪ್ರಬಂಧಗಳೂ ಗ್ರಂಥಗಳೂ ಅವರ ಖ್ಯಾತಿಯನ್ನು ಬೆಳಸಿವೆ; ಅವರ ಮಾರ್ಗದರ್ಶನದಲ್ಲಿ ವಿಪುಲ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ವ್ಯಾಸಂಗ ನಡಸಿದ್ದಾರೆ, ಸಂಶೋಧನೆಗಳನ್ನು ಕೈಕೊಂಡಿದ್ದಾರೆ. ಅವರ ವಿಶೇಷೋಪನ್ಯಾಸಗಳು ದೇಶವಿದೇಶಗಳಲ್ಲಿ ನಡೆದಿವೆ. ಅವರ ಪ್ರಬಂಧಗಳಾಗಲಿ ಗ್ರಂಥಗಳಾಗಲಿ, ಮಾರ್ಗದರ್ಶನವಾಗಲಿ ಉಪನ್ಯಾಸವಾಗಲಿ ಲಾಕ್ಷಣಿಕ, ತೌಲನಿಕ, ವಿಮರ್ಶನಾತ್ಮಕ, ಸಂಶೋಧನಾತ್ಮಕ ಹೀಗೆ ಬಹುಮುಖವಾದವು; ಭೌಗೋಳಿಕವಾದ ಗಡಿರೇಖೆಗಳನ್ನು ದಾಟಿದಂಥವು. ಇವುಗಳ ಸಂಖ್ಯಾಬಾಹುಳ್ಯ ವಿಷಯ ವೈವಿಧ್ಯಗಳು ವಿಸ್ಮಯಕರವಾದವು, ಸ್ಫೂರ್ತಿಪ್ರದವಾದವು. ಇವುಗಳಿಗಾಗಿ ಸಂದ ಮನ್ನಣೆಗಳು, ಪುರಸ್ಕಾರಗಳು, ಪದವಿ ಪ್ರಶಸ್ತಿಗಳು ಅಪರಿಮಿತವಾದವು. ಕೃಷ್ಣಮೂರ್ತಿಗಳು ತಮ್ಮ ವ್ಯಕ್ತಿತ್ವದ ವರ್ಚಸ್ಸಿನಿಂದ, ವ್ಯಾಸಂಗಶೀಲತೆಯಿಂದ, ಕೃತಿರಚನೆಯ ಕಾಯಕದಿಂದ ತಮ್ಮ ಜೀವಿತವನ್ನು ಸಾರ್ಥಕಪಡಿಸಿಕೊಂಡವರಾಗಿದ್ದಾರೆ.

ಕನ್ನಡ ಭಾಷಾಸಾಹಿತ್ಯಗಳ ಸೇವೆಯಲ್ಲಿ ಸಹ ಕೃಷ್ಣಮೂರ್ತಿಗಳ ಪರಿಶ್ರಮ ಅಗಾಧವಾದುದು, ಅನನ್ಯವಾದುದು. ಅವರು ಉದ್ದಾಮ ಗುರುಪರಂಪರೆಯ ಉಭಯ ಭಾಷಾ ವಿದ್ವಾಂಸರಾದ ಗುರುಗಳ ಪ್ರೇರಣೆ ಪ್ರೋತ್ಸಾಹಗಳನ್ನು ಪಡೆದು ಕನ್ನಡ ಭಾಷೆ ಸಾಹಿತ್ಯಗಳ ಸಂವರ್ಧನೆಗೆ ಅವಶ್ಯವಾದ ಹಲವು ಗ್ರಂಥಗಳನ್ನು ಪರಿಶ್ರಮಪಟ್ಟು ಸಿದ್ಧಪಡಿಸಿದ್ದಾರೆ, ಪ್ರಬಂಧಗಳನ್ನು ಬರೆದಿದ್ದಾರೆ. ಇವುಗಳಿಂದ ಪ್ರಾಚೀನ ಕನ್ನಡ ಸಾಹಿತ್ಯದ ಮೂಲಾಧಾರಗಳು ಗಟ್ಟಿಗೊಳ್ಳುವುದು, ಅಧ್ಯಯನ ಸುಕರವಾಗುವುದು ಸಾಧ್ಯವಾಗಿವೆ. ಸಂಸ್ಕೃತದ ಪ್ರಸಿದ್ಧ ಅಲಂಕಾರ ಶಾಸ್ತ್ರಗ್ರಂಥಗಳನ್ನು ಕನ್ನಡಕ್ಕೆ ಹೃದ್ಯವಾಗಿ ಭಾಷಾಂತರಿಸಿ, ವಿಸ್ತೃತವಾದ ವಿಮರ್ಶಾತ್ಮಕ ಪೀಠಿಕೆಗಳಿಂದ ಅವನ್ನು ಅಲಂಕರಿಸಿದ್ದಾರೆ. ಹೊಸ ಕಾಲದ ಅಭಿರುಚಿಗಳಿಗೆ ಅನುಗುಣವಾಗಿ ಸಂಸ್ಕೃತದ ಪ್ರಾಚೀನ ಕಾವ್ಯಗಳಲ್ಲಿಯೂ ನಾಟಕಗಳಲ್ಲಿಯೂ ಕೆಲವನ್ನು ಸರಸವಾಗಿ ಹೊಸಗನ್ನಡದಲ್ಲಿ ಭಾಷಾಂತರಿಸಿದ್ದಾರೆ. ಸಂಸ್ಕೃತ ಕವಿ ಕಾವ್ಯಗಳಿಗೆ ಸಂಬಂಧಿಸಿದ ಪರಿಚಯಾತ್ಮಕ ಹಾಗೂ ವಿಮರ್ಶಾತ್ಮಕ ಲೇಖನಗಳನ್ನೂ ಗ್ರಂಥಗಳನ್ನೂ ರಚಿಸಿರುವುದಲ್ಲದೆ, ಉದ್ಗ್ರವಾದ ಕೆಲವು ಗ್ರಂಥಗಳನ್ನು ಭಾಷಾಂತರಿಸಿ ಸಹಾಯಮಾಡಿದ್ದಾರೆ. 'ಕವಿರಾಜಮಾರ್ಗ'ದ ಹೊಸ ಪರಿಷ್ಕರಣವನ್ನು ಹೊಸಗನ್ನಡ ಅನುವಾದ, ಟಿಪ್ಪಣಿ ಪೀಠಿಕೆಗಳೊಂದಿಗೆ ಪ್ರಸಿದ್ಧಿಸಿದ್ದಾರೆ.

ನಮ್ಮ ನಡುವೆಯಿರುವ ಕರ್ನಾಟಕದ ಪ್ರಸಿದ್ಧ ಸಂಸ್ಕೃತ ವಿದ್ವಾಂಸರಲ್ಲಿ ಸಂಸ್ಕೃತ ಭಾಷೆಗೆ ಸಂಬಂಧಿಸಿದ ಹಾಗೆ ಕವಿಕಾವ್ಯ ವಿಚಾರ, ಅಲಂಕಾರಶಾಸ್ತ್ರ, ಕಾವ್ಯಮೀಮಾಂಸೆ, ಸೌಂದರ್ಯಶಾಸ್ತ್ರ, ನ್ಯಾಯವೈಶೇಷಿಕ ಮತ್ತು ಅದ್ವೈತವೇದಾಂತ ಈ ಕೆಲವು ಕ್ಷೇತ್ರ

ಗಳಲ್ಲಿ ಶಾಸ್ತ್ರಗ್ರಂಥಗಳನ್ನು ಸಲಕ್ಷಣವಾಗಿ ಸಂಪಾದಿಸುವ, ಅವನ್ನು ತಜ್ಞತೆಯಿಂದ ವ್ಯಾಖ್ಯಾನಿಸುವ ಹಾಗೂ ವಿಮರ್ಶಿಸುವ ಸಾಮರ್ಥ್ಯ ಪಡೆದವರಲ್ಲಿ ಕೃಷ್ಣಮೂರ್ತಿಗಳು ಪ್ರಮುಖರಾಗಿದ್ದಾರೆ. ಅವರು ಕರ್ನಾಟಕದ ಕಣ್ಮಣಿಗಳಾಗಿರುವ ಸರ್ವಶ್ರೀ ಮುಳೂರು ರಂಗಾಚಾರ್ಯ, ಕೆ. ಬಿ. ಪಾಠಕ್, ಎಂ. ಹಿರಿಯಣ್ಣ, ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ, ಆರ್. ಶಾಮಶಾಸ್ತ್ರಿ, ಎ. ವೆಂಕಟಸುಬ್ಬಯ್ಯ, ಎ. ಆರ್. ಕೃಷ್ಣಶಾಸ್ತ್ರೀ, ಎ. ಎನ್. ಉಪಾಧ್ಯೆ, ತೀ. ನಂ. ಶ್ರೀಕಂಠಯ್ಯ ಈ ಹಳೆಯ ಪೀಳಿಗೆಯ ಸಂಸ್ಕೃತ ಪ್ರಾಕೃತ ವಿದ್ವಾಂಸರನ್ನು ನಮ್ಮ ಸ್ಮರಣೆಗೆ ಸುಲಭವಾಗಿ ತರತಕ್ಕವರಾಗಿದ್ದಾರೆ; ಅವರಂತೆ ಖ್ಯಾತನಾಮರಾಗಿ ಬೆಳಗಿದವರಾಗಿದ್ದಾರೆ. ಸಂಸ್ಕೃತದಲ್ಲಿಯೂ ಹಳಗನ್ನಡದಲ್ಲಿಯೂ ಛಂದೋಬದ್ಧವಾದ ಪದ್ಯಗಳನ್ನು ನಿರರ್ಗಳವಾಗಿ ರಚಿಸಬಲ್ಲ ಸಾಮರ್ಥ್ಯವೂ ಅವರಲ್ಲಿದೆ.

ವಿದ್ಯಾವಿನಯಸಂಪನ್ನರಾದ ಕೃಷ್ಣಮೂರ್ತಿಗಳ ಸಾಧನೆ ಸಿದ್ಧಿಗಳನ್ನು ಮನಗಂಡು ಅವರಿಗೆ ಎಪ್ಪತ್ತು ವರ್ಷಗಳು ತುಂಬುವ ಹೊತ್ತಿಗೆ ಅವರನ್ನು ಉಚಿತ ರೀತಿಯಿಂದ ಅಭಿನಂದಿಸಬೇಕೆಂದು ಅವರ ಅಭಿಮಾನಿಗಳೂ ಮಿತ್ರರೂ ಶಿಷ್ಯರೂ ಇಲ್ಲಿಗೆ ಸುಮಾರು ಮೂರು ವರ್ಷಗಳ ಹಿಂದೆ (ಅಕ್ಟೋಬರ್ ೧೯೯೧) ಆಲೋಚಿಸಿದರು. ಇದಕ್ಕಾಗಿ ಸಮಿತಿಗಳು ವ್ಯವಸ್ಥೆಯಾದವು. ಕೃಷ್ಣಮೂರ್ತಿಗಳು ಇಂಗ್ಲಿಷ್ ಸಂಸ್ಕೃತ ಮತ್ತು ಕನ್ನಡ ಮೂರು ಭಾಷೆಗಳಲ್ಲಿಯೂ ಕೆಲಸ ಮಾಡಿರುವುದರಿಂದ, ಇಂಗ್ಲಿಷ್ ಮತ್ತು ಸಂಸ್ಕೃತ ಸೇರಿದಂತೆ ಒಂದು, ಕನ್ನಡ ಭಾಷೆಯಲ್ಲಿ ಒಂದು ಹೀಗೆ ಎರಡು ಅಭಿನಂದನಗ್ರಂಥಗಳನ್ನು ಪ್ರಕಟಿಸಬೇಕೆಂದು ಸಾಮಾನ್ಯ ಸಮಿತಿ ನಿರ್ಧರಿಸಿತು. ಎರಡು ಸಂಪಾದಕ ಸಮಿತಿಗಳು ಏರ್ಪಾಡಾಗಿ, ಸಂಶೋಧನ ಪ್ರಬಂಧಗಳಿಗಾಗಿ ನಾಡಿನ ಖ್ಯಾತ ವಿದ್ವಾಂಸರಿಗೆ ಪತ್ರಗಳನ್ನು ಬರೆಯಲಾಯಿತು; ವೈಯಕ್ತಿಕವಾಗಿ ಕೋರಲಾಯಿತು. ಎರಡು ಅಭಿನಂದನಗ್ರಂಥಗಳಲ್ಲಿಯೂ ಭಾರತೀಯ ವಿದ್ಯೆಯ ಅಧ್ಯಯನಗಳಿಗೆ ಸೇರಿದ ಮೌಲಿಕ ಪ್ರಬಂಧಗಳು ಸಮಾವೇಶವಾಗತಕ್ಕದೆಂದೂ ಕನ್ನಡದ ಮಟ್ಟಿಗೆ ವಿಶೇಷವಾಗಿ ಕಾವ್ಯಲಕ್ಷಣಕ್ಷೇತ್ರದ ವಿವಿಧ ಮುಖಗಳಾಗಿರುವ ಭಾಷೆ ವ್ಯಾಕರಣ ನಿಘಂಟುರಚನೆ ಛಂದಸ್ಸು ಕಾವ್ಯಮೀಮಾಂಸೆ ಕವಿಕಾವ್ಯವಿಚಾರ ಇಂತಹವುಗಳಿಗೆ ಪ್ರಾಮುಖ್ಯವಿರತಕ್ಕದೆಂದೂ ಸಮಿತಿಗಳು ಉದ್ದೇಶಿಸಿದುವು. ಆ ಉದ್ದೇಶಗಳಿಗೆ ಅನುಗುಣವಾಗಿಯೇ ವಿದ್ವಾಂಸರಿಂದ ಪ್ರಬಂಧಗಳೂ ಬರೆದುಬಂದವು.

ಆಗಾಗ ಕಾರ್ಯಸಮಿತಿಯ ಸಭೆ ಸಮಾಲೋಚನೆಗಳೂ ಸಂಪಾದಕಸಮಿತಿಗಳ ಸಭೆ ಸಮಾಲೋಚನೆಗಳೂ ನಡೆದುವಾದರೂ, ತಕ್ಕಮಟ್ಟಿಗೆ ತೃಪ್ತಿಕರವಾಗಿ ಪ್ರಕಟನೆಗೆ ಅವಶ್ಯವಾಗಿದ್ದ ಧನಸಂಗ್ರಹಣೆಯ ಕೆಲಸಕಾರ್ಯಗಳು ಸಹ ಸಾಗಿದುವಾದರೂ, ಅಭಿನಂದನ ಗ್ರಂಥಗಳು ಮುದ್ರಣಗೊಂಡು ಸಿದ್ಧವಾಗುವುದು ಸಾಕಷ್ಟು ವಿಳಂಬವಾಯಿತು. ಇದಕ್ಕೆ ಕಾರಣಗಳು ಹಲವು. ನಮ್ಮ ದುರ್ದೈವದಿಂದ ಕಾರ್ಯಸಮಿತಿಯ ಗೌರವಾಧ್ಯಕ್ಷರಾಗಿದ್ದ, ಡಾ. ಕೃಷ್ಣಮೂರ್ತಿಗಳ ಹಿರಿಯ ಅಭಿಮಾನಿಗಳಾಗಿದ್ದ ಪ್ರೊ. ವಿ. ಕೃ. ಗೋಕಾಕರೂ ಪ್ರಧಾನ ಕಾರ್ಯದರ್ಶಿಗಳಾಗಿದ್ದ, ಶ್ರದ್ಧೆ ಉತ್ಸಾಹಗಳಿಂದ ಪತ್ರವ್ಯವಹಾರವೇ ಆದಿಯಾದ

ಕೆಲಸಗಳನ್ನೆಲ್ಲ ಸಮರ್ಥವಾಗಿ ನಿರ್ವಹಿಸುತ್ತಿದ್ದ ಡಾ. ಆರ್. ಎಸ್. ಶಿವಗಣೇಶಮೂರ್ತಿಗಳೂ ಸಲಹಾಸಮಿತಿಯ ಸದಸ್ಯರಾಗಿದ್ದ ಪ್ರೊ. ಆರ್. ಸಿ. ದ್ವಿವೇದಿಯವರೂ ಕಾರ್ಯಸಮಿತಿ ಸಂಪಾದಕಸಮಿತಿಗಳ ಗಣ್ಯಸದಸ್ಯರಾಗಿದ್ದ ಡಾ. ಜಿ. ಎಸ್. ಗಾಯಿ, ಎಚ್. ಪಿ. ಮಲ್ಲೇದೇವರು ಅವರೂ ನಮ್ಮನ್ನು ನಡುವೆಯೇ ಅಗಲಿದ್ದು ಕೆಲಸದ ಹಿನ್ನಡೆಗೆ ಒಂದು ಕಾರಣವಾಯಿತು; ಜೊತೆಗೆ ಕಾರ್ಯಾಧ್ಯಕ್ಷರಲ್ಲಿ ಒಬ್ಬರಾದ ಡಾ. ಕೆ. ರಾಜಗೋಪಾಲಾಚಾರ್ ಅವರು ಮೈಸೂರು ವಿಶ್ವವಿದ್ಯಾನಿಲಯದ ಸೇವೆಯಿಂದ ನಿವೃತ್ತರಾಗಿ ಬೆಂಗಳೂರಿಗೆ ತೆರಳಿದ್ದರಿಂದ ಕೆಲಸದ ನೇರ ನಿರ್ವಹಣೆಗೆ ಅಡ್ಡಿಯಾಯಿತು. ಆದರೆ ಡಾ. ಬಿ. ಚೆನ್ನಕೇಶವ ಅವರು, ಸ್ಥಾನೀಯ ಕಾರ್ಯದರ್ಶಿಗಳಾಗಿದ್ದವರು, ಪ್ರಧಾನಕಾರ್ಯದರ್ಶಿಗಳಾಗಿ ಕಾರ್ಯಸಮಿತಿಯ ಹಾಗೂ ಸಂಪಾದಕ ಸಮಿತಿಗಳ ಸಹಕಾರದಿಂದ, ಸಲಹಾಸಮಿತಿಯ ಮಾರ್ಗದರ್ಶನದಲ್ಲಿ ಕೆಲಸವನ್ನು ಯಶಸ್ವಿಯಾಗಿ ಮುನ್ನಡಸಿದ್ದಾರೆ. ಅವರಿಗೆ ಕೃಷ್ಣಮೂರ್ತಿಗಳ ಕುಟುಂಬವರ್ಗದವರು, ವಿಶೇಷವಾಗಿ ಶ್ರೀ ಸಿ. ಎನ್. ಕೇಶವಪ್ರಕಾಶ್ ಅವರು ಮತ್ತು ಶ್ರೀಮತಿ ಕೆ. ಲೀಲಾ ಪ್ರಕಾಶ್ ಅವರು ತುಂಬ ಒತ್ತಾಸೆ ಸಹಕಾರಗಳನ್ನು ನೀಡಿದ್ದಾರೆ.

ಇಲ್ಲಿ ವಿಶೇಷವಾಗಿ ಉಲ್ಲೇಖಿಸಬೇಕಾದ ಸಂಗತಿಯೊಂದಿದೆ. ಅದೆಂದರೆ: ಡಾ. ಕೆ. ಕೃಷ್ಣಮೂರ್ತಿಗಳ ಸಹಪಾಠಿಮಿತ್ರರೂ ಆಪ್ತರೂ ಅಭಿಮಾನಿಗಳೂ ಆಗಿರುವ, ಕನ್ನಡ ನಾಡಿನ ಸುಪ್ರಸಿದ್ಧ ಗ್ರಂಥಪ್ರಕಾಶಕರೂ ಸ್ವತಃ ಗ್ರಂಥಕರ್ತೃಗಳೂ ಆಗಿರುವ ಶ್ರೀ ಡಿ. ವಿ. ಕೆ. ಮೂರ್ತಿ ಅವರು ನಮ್ಮ ಭಾಗ್ಯವಿಶೇಷವೆಂಬಂತೆ ಕಾರ್ಯಸಮಿತಿಯ ಸದಸ್ಯರಲ್ಲಿ ಒಬ್ಬರಾಗಿ ಇರಲು ಒಪ್ಪಿರುವುದು ಹಾಗೂ ಇಂಗ್ಲಿಷ್-ಸಂಸ್ಕೃತ ಅಭಿನಂದನ ಗ್ರಂಥವಾಗಿರುವ 'ಆನಂದಭಾರತಿ'ಯ ಪ್ರಕಟನೆಯ ಜವಾಬ್ದಾರಿಯನ್ನೂ ಕನ್ನಡ ಅಭಿನಂದನ ಗ್ರಂಥವಾದ 'ಅಭಿಜ್ಞಾನ'ದ ಪ್ರಕಟನೆಯ ಜವಾಬ್ದಾರಿಯನ್ನೂ ಒಟ್ಟಿಗೆ ತಾವೊಬ್ಬರೇ ನಿರ್ವಹಿಸಲು ಸಿದ್ಧವಾದುದು. ಅಂತಹ ಮೈತ್ರಿಗೆ ಇಂತಹ ಧೈರ್ಯವೇ ಸ್ಪರ್ಧಿಯಾಗಬೇಕು ತಾನೇ !

'ಅಭಿಜ್ಞಾನ' ಸಂಪುಟಕ್ಕೆ ತಮ್ಮ ಮೌಲಿಕವಾದ ಸಂಶೋಧನ ಪ್ರಬಂಧಗಳನ್ನು ಸಕಾಲಕ್ಕೆ ನೀಡಿ ನಾಡಿನ ಖ್ಯಾತ ವಿದ್ವಾಂಸರು ನಮ್ಮ ಕಾರ್ಯದ ಯಶಸ್ಸಿಗೆ ಕಾರಣರಾಗಿದ್ದಾರೆ. ಒಂದೆರಡು ಲೇಖನಗಳು ನಮಗೆ ತೀರ ತಡವಾಗಿ ಕೈಸೇರುವಂತಾಗಿ ಅವು ಈ ಸಂಪುಟದಲ್ಲಿ ಸೇರಲು ಸಾಧ್ಯವಾಗದುದಕ್ಕೆ ವಿಷಾದಿಸಬೇಕಾಗಿದೆ. ಇವುಗಳಲ್ಲಿ ಕೃಷ್ಣಮೂರ್ತಿಗಳನ್ನು ಬಹುಕಾಲದಿಂದ ಬಲ್ಲವರೂ ಅವರ ಪ್ರಿಯಮಿತ್ರರೂ ಆಗಿರುವ ಪ್ರೊ. ಎಚ್. ಎಂ. ಶಂಕರನಾರಾಯಣ ರಾಯರ ಹೃದಯಂಗಮವಾದ ಲೇಖನವೇ ಸೇರದೆ ಹೋದುದರಿಂದ ಆ ವಿಷಾದ ಹೆಚ್ಚಾಗಿದೆ. ರಾಯರು ಕೃಷ್ಣಮೂರ್ತಿಗಳ ಸಂಸ್ಕೃತ ಅಲಂಕಾರಶಾಸ್ತ್ರದ ಅನುವಾದಿತ ಗ್ರಂಥಗಳನ್ನು ತುಂಬ ಸೊಗಸಾಗಿ ಮುದ್ರಣಮಾಡಿಸಿ ತಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಿದವರು; ಅವರಿಗೆ ಕಾಲಕಾಲಕ್ಕೆ ಯೋಗ್ಯರೀತಿಯಲ್ಲಿ ಗೌರವಧನ ನೀಡಿ ಅವರ ತೃಪ್ತಿ ಸಂತೋಷಗಳಿಗೆ ಕಾರಣರಾದವರು. ಆದ್ದರಿಂದ ಅವರ ಲೇಖನದ ಕೆಲವು

ಮಾತುಗಳನ್ನಾದರೂ ಇಲ್ಲಿ ಪ್ರಸ್ತಾಪಿಸದೆ ಹೋದರೆ, ಮನಸ್ಸಿಗೆ ಸಮಾಧಾನವಾಗದು. "ನಾನು ನನ್ನ ಮತ್ತು ಕೃಷ್ಣಮೂರ್ತಿಗಳ ಸ್ನೇಹವನ್ನು ಬಳಸಿಕೊಂಡು ಅವರನ್ನು ಮುಖ್ಯವಾದ ಅಲಂಕಾರಗ್ರಂಥಗಳ ಭಾಷಾಂತರಕ್ಕಾಗಿ ನಕ್ಷತ್ರಕನಂತೆ ಕಾಡತೊಡಗಿದೆ." "ಕೃಷ್ಣಮೂರ್ತಿಗಳಿಗೂ ನನಗೂ ಉಂಟಾದ ಸ್ನೇಹವನ್ನು ನಾನು ದೈವಾನುಗ್ರಹವೆಂದು ಭಾವಿಸಿದ್ದೇನೆ", "ಕನ್ನಡ ಭಾಷೆಯಲ್ಲಿರುವ ಕಾವ್ಯಗಳನ್ನು ಅಭ್ಯಾಸ ಮಾಡುವವರು ಕೃಷ್ಣಮೂರ್ತಿಗಳನ್ನು ಹೆಸರಿಸದೆ ಮುಂದೆ ಹೋಗುವಂತಿಲ್ಲ" ಎಂದು ಮುಂತಾಗಿ ಮೆಚ್ಚು ಮಾತಾಡಿ ಅವರು, "ಅವರಿಂದ ನಮ್ಮ ನಾಡು ನುಡಿಗೆ ಇನ್ನೂ ಹೆಚ್ಚಿನ ಸೇವೆ ಸಲ್ಲಬೇಕಾಗಿದೆ; ಇದಕ್ಕೆ ಬೇಕಾದ ಆರೋಗ್ಯ ಹಾಗೂ ಕನ್ನಡಿಗರ ಪ್ರೋತ್ಸಾಹ ಅವರಿಗೆ ಎಂದಿಗಿಂತಲೂ ಈಗ ಹೆಚ್ಚು ಅಗತ್ಯವಿದೆ" ಎಂದು ಅಲ್ಲಿ ಹಾರೈಸಿದ್ದಾರೆ.

ಗ್ರಂಥಪ್ರಕಟನೆಯ ಸಂದರ್ಭದಲ್ಲಿ ವಿವಿಧ ಸಮಿತಿಗಳ ಹಿರಿಯರೂ ಮಿತ್ರರೂ ನಮ್ಮನ್ನು ನಡಸಿದ್ದಾರೆ. ಡಾ. ಕೆ. ಕೃಷ್ಣಮೂರ್ತಿಗಳ ಕುಟುಂಬವರ್ಗದವರು ನಮಗೆ ಅವಶ್ಯವಾಗಿದ್ದ ಎಲ್ಲ ಸೌಕರ್ಯಗಳನ್ನೂ ಸಲಕರಣೆಗಳನ್ನೂ ಒದಗಿಸಿದ್ದಾರೆ. 'ಅಭಿಜ್ಞಾನ'ದ ಸಂಪಾದಕ ಸಮಿತಿ ತನ್ನ ಕೆಲಸವನ್ನು ಆರಂಭಿಸಿದಾಗ ವಿಶ್ವಾಸವಿಟ್ಟು ಶ್ರೀ ಎನ್. ಎಸ್. ಶಾರದಾಪ್ರಸಾದ್. ಡಾ. ಅಕ್ಕಮಹಾದೇವಿ ಮತ್ತು ಡಾ. ಸಿ. ಎಸ್. ರಾಮಚಂದ್ರ ಅವರು ಪತ್ರವ್ಯವಹಾರ, ಕರಡಚ್ಚು ತಿದ್ದುವಲ್ಲಿ ನೆರವಾಗುವುದು ಮೊದಲಾದ ಕೆಲಸಗಳನ್ನು ನೋಡಿಕೊಂಡಿದ್ದಾರೆ. ಈ ಸಮಿತಿಯ ಇತರ ಸದಸ್ಯರೂ ಹಲವು ವಿಧಗಳಲ್ಲಿ ಸಹಕರಿಸಿದ್ದಾರೆ. ಈ ದೊಡ್ಡ ಗ್ರಂಥದ ಮುದ್ರಣಕಾರ್ಯವನ್ನು ಮೈಸೂರು ಪ್ರಿಂಟಿಂಗ್ ಪ್ರೆಸ್‌ನ ಮಾಲೀಕರೂ ಕೆ. ಕೃಷ್ಣಮೂರ್ತಿಗಳ ಅಭಿಮಾನಿಗಳೂ ಆಗಿರುವ ಶ್ರೀ ಜಿ. ಎಚ್. ಕೃಷ್ಣಮೂರ್ತಿಗಳು ತುಂಬ ಅಚ್ಚುಕಟ್ಟಾಗಿ, ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಇವರೆಲ್ಲರಿಗೂ ಸಂಪಾದಕ ಸಮಿತಿಯ ಪರವಾಗಿ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಸುಪ್ರಸಿದ್ಧ ಛಾಯಾಚಿತ್ರಕಾರರಾದ ಶ್ರೀ ಟಿ. ಎಸ್. ಸತ್ಯನ್ ಅವರು ಮುಖಪುಟದಲ್ಲಿರುವ ಡಾ. ಕೆ. ಕೃಷ್ಣಮೂರ್ತಿಯವರ ಸೊಗಸಾದ ಭಾವಚಿತ್ರವನ್ನು ನಮಗಾಗಿ ಸಿದ್ಧಪಡಿಸಿಕೊಟ್ಟಿದ್ದಾರೆ. ಅವರಿಗೆ ನಮ್ಮ ಹಾರ್ದಿಕ ಕೃತಜ್ಞತೆಗಳು.

ಇದು ಹತ್ತು ಜನರು ಆಸೆಪಟ್ಟು, ನಿಂತು ಕೈಗೂಡಿಸಿರುವ ದೊಡ್ಡವರ ಕೆಲಸ, ದೊಡ್ಡ ಕೆಲಸ. ಕನ್ನಡ ನಾಡಿನ ವಿದ್ಯಾಪ್ರೇಮಿಗಳೆಲ್ಲರೂ ಈ ಕೆಲಸವನ್ನು ಸ್ವಾಗತಿಸುತ್ತಾರೆ, ಇದರಿಂದ ಸಾಧ್ಯವಾಗುವ ಎಲ್ಲ ಫಲ ಪ್ರಯೋಜನಗಳನ್ನೂ ಪಡೆಯುತ್ತಾರೆ ಎಂಬುದಾಗಿ ನಾವು ಹಾರೈಸುತ್ತೇವೆ. ಅವರೆಲ್ಲರ ಪರವಾಗಿ ಡಾ. ಕೆ. ಕೃಷ್ಣಮೂರ್ತಿಗಳಿಗೆ ಆಯುರಾರೋಗ್ಯ ಐಶ್ವರ್ಯಾದಿಗಳನ್ನು ನೀಡುವಂತೆ ಜಗನ್ನಿಯಾಮಕ ಸೂತ್ರಧಾರಶಕ್ತಿಯನ್ನು ನಾವು ಪ್ರಾರ್ಥಿಸುತ್ತೇವೆ.

ಮೈಸೂರು
೨೮-೫-೧೯೭೫

ಸಂಪಾದಕರು
**ಸಂಪಾದಕ ಸಮಿತಿಯ ಪರವಾಗಿ**

## ಪರಿವಿಡಿ

# ಕೆ. ಕೃಷ್ಣಮೂರ್ತಿ : ಜೀವನ - ಸಾಧನೆ

ಕೆ. ಎಸ್. ಕೃಷ್ಣಮೂರ್ತಿ

ಸಂಸ್ಕೃತ ಸಾರಸ್ವತಲೋಕದಲ್ಲಿ ತಮ್ಮ ಅಪಾರ ವಿದ್ವತ್ತಿನಿಂದ ದೇಶವಿದೇಶಗಳಲ್ಲಿ ಅಗ್ರಮಾನ್ಯರೆಂದು ಹೆಸರನ್ನು ಸಂಪಾದಿಸಿರುವ ಕೆ. ಕೃಷ್ಣಮೂರ್ತಿ ಕಾವೇರಿ ನದೀತೀರದಲ್ಲಿ ಶೋಭಿಸುತ್ತಿರುವ ಕೇರಳಾಪುರವೆಂಬ ಗ್ರಾಮದಲ್ಲಿ ಸಂಕೇತಿಬ್ರಾಹ್ಮಣರ ಕುಟುಂಬವೊಂದರಲ್ಲಿ ೧೯೨೩ನೆಯ ಇಸವಿಯ ಜುಲೈ ೩೦ರಂದು ಜನಿಸಿದರು. ಸಂಕೇತಿಗಳು ತಮ್ಮ ಪ್ರತಿಭೆ, ಧೈರ್ಯ, ಸಾಹಸ, ಕಷ್ಟಪಟ್ಟು ದುಡಿಯುವ ಸ್ವಭಾವ ಹಾಗೂ ಹಿಡಿದುದನ್ನು ಬಿಡದೆ ಕೊನೆಯತನಕ ಮಾಡಿ ಮುಗಿಸುವ ಛಲ ಮತ್ತು ರಸಿಕತೆ—ಇವೇ ಮೊದಲಾದ ಗುಣಗಳಿಗೆ ಹೆಸರಾದವರು. ಈ ಗುಣಗಳೆಲ್ಲವನ್ನೂ ಮೈಗೂಡಿಸಿಕೊಂಡು ಬೆಳೆದು ಸಂಸ್ಕೃತ ವಿದ್ವತ್ ಭಾಂಡಾರಕ್ಕೆ ಕೈಹಾಕಿದವರು ಕೃಷ್ಣಮೂರ್ತಿಗಳು. ಇವರ ತಂದೆ ಎಸ್. ವೆಂಕಟಸುಬ್ಬಯ್ಯ, ತಾಯಿ ಗೌರಮ್ಮ. ತಂದೆ ಸರಕಾರಿ ಶಾಲೆಯಲ್ಲಿ ಉಪಾಧ್ಯಾಯರು. ವೆಂಕಟಸುಬ್ಬಯ್ಯನವರು ಆಗಿನ ಕಾಲದ ಪಂಡಿತ ಪರೀಕ್ಷೆಗೆ ಕುಳಿತು ಉತ್ತೀರ್ಣರಾದರೆಂದು ಪ್ರಕಟವಾದರೂ ತಾಂತ್ರಿಕದೋಷವೊಂದರಿಂದಾಗಿ ಅನುತ್ತೀರ್ಣರಾಗಿ ಮಾಡಲ್ಪಟ್ಟರು. ಪುನಃ ಪರೀಕ್ಷೆಗೆ ಕುಳಿತು ಉತ್ತೀರ್ಣರಾಗಿ ಶಾಲೆಯಲ್ಲಿ ಸ್ಥಾನಮಾನಗಳನ್ನೂ ಸಂಬಳವನ್ನೂ ಹೆಚ್ಚಿಸಿಕೊಳ್ಳಬಲ್ಲವರಾಗಿದ್ದರೂ ತಾವು ಪುನಃ ಪರೀಕ್ಷೆಗೆ ಕುಳಿತುಕೊಳ್ಳುವುದಿಲ್ಲವೆಂದು ಪ್ರತಿಜ್ಞೆ ಮಾಡಿದುದರಿಂದ ಪುನಃ ಪರೀಕ್ಷೆಗೆ ಕುಳಿತುಕೊಳ್ಳಲಿಲ್ಲ. ಹಾಗಿದ್ದರೂ ಅವರ ಸಂಸ್ಕೃತ ಕನ್ನಡ ವಿದ್ವತ್ತಿಗೆ ಕೊರತೆಯಿರಲಿಲ್ಲ. ಶಾಲಾ ಉಪಾಧ್ಯಾಯರಾಗಿ ಬರುವ ಅತಿ ಕಡಮೆ ಸಂಬಳದಲ್ಲಿಯೇ ಸಂಸಾರವನ್ನು ತೂಗಿಸಿಕೊಂಡು ಹೋಗಿ ಮೂರು ಜನ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಿದರು. ವೆಂಕಟಸುಬ್ಬಯ್ಯನವರು ಮಗನಿಗೆ ಬಾಲ್ಯದಲ್ಲಿಯೇ ಅಮರ, ಶಬ್ದ ಮೊದಲಾದುವುಗಳನ್ನು ಬಾಯಿಪಾಠ ಮಾಡಿಸಿ ಅವರ ಮುಂದಿನ ವಿದ್ಯಾಭ್ಯಾಸಕ್ಕೆ ತಕ್ಕ ಬುನಾದಿ ಹಾಕಿದರು. ಮುಂದೆಯೂ ಅವರು ತಮ್ಮ ಮಗ ಪಂಡಿತಪರೀಕ್ಷೆಗೆ ಓದುವಾಗ, ಇಂಟರ್‌ಮೀಡಿಯಟ್ ತರಗತಿಗಳಲ್ಲಿದ್ದಾಗ, ಸಂಸ್ಕೃತ ಬಿ.ಎ. ಆನರ್ಸ್, ಎಂ.ಎ., ಗಳಿಗೆ ವ್ಯಾಸಂಗ ಮಾಡುವಾಗ, 'ಅಷ್ಟಾಧ್ಯಾಯಿ', 'ಶಬ್ದಮಣಿದರ್ಪಣ', 'ಶಬ್ದಾನುಶಾಸನ' ಮೊದಲಾದುವುಗಳನ್ನು ಬಾಯಿಪಾಠ ಮಾಡಿಸಿದರು. ವೆಂಕಟಸುಬ್ಬಯ್ಯನವರು ಶಿಸ್ತಿನ ಸಿಪಾಯಿ, ಛಲಗಾರ. ಆ ಶಿಸ್ತು, ಆ ಛಲ, ಆ ವಿದ್ವತ್ತು ಮೊದಲಾದ ಗುಣಗಳನ್ನು

ಕೃಷ್ಣಮೂರ್ತಿ ತಂದೆಯಿಂದಲೂ ಗಾಂಭೀರ್ಯ, ಪ್ರೀತಿವಾತ್ಸಲ್ಯ, ಸೌಜನ್ಯ ಮೊದಲಾದ ಗುಣಗಳನ್ನು ತಾಯಿಯಿಂದಲೂ ಪಡೆದರು.

ನನಗೆ ಕೃಷ್ಣಮೂರ್ತಿಗಳ ಪರಿಚಯ ನನ್ನ ಬಾಲ್ಯದಲ್ಲಿಯೇ ಆಯಿತು. ಕೃಷ್ಣಮೂರ್ತಿಗಳ ತಂದೆ ಆ ಕಾಲಕ್ಕೆ ಚಿಕ್ಕಮಗಳೂರು, ಚಿಕ್ಕನಾಯಕನ ಹಳ್ಳಿ ಮೊದಲಾದ ಸ್ಥಳಗಳಲ್ಲಿ ಉಪಾಧ್ಯಾಯರಾಗಿದ್ದವರು. ಜನ್ಮಸ್ಥಳವಾದ ಕೇರಳಾಪುರದ ಶಾಲೆಗೆ ವರ್ಗವಾಗಿ ಬಂದರು. ಆಗ ಕೃಷ್ಣಮೂರ್ತಿಗಳಿಗೆ ನಾಲ್ಕೋ ಐದೋ ವಯಸ್ಸು ಇದ್ದಿರಬೇಕು. ನಾನು ಆಗ ಕೇರಳಾಪುರದಲ್ಲಿಯೇ ಇದ್ದು ಶಾಲೆಯಲ್ಲಿ ಓದುತ್ತಿದ್ದೆ. ಶಾಲೆಯಲ್ಲಿ ತಂದೆಯವರ ಮನಸ್ಸನ್ನು ರಂಜಿಸುವ ಪಾಠ ಹಾಗೂ ಕಥೆಗಳು, ಹೊರಗೆ ಕೃಷ್ಣಮೂರ್ತಿಗಳ ಗೆಳೆತನ ನನಗೆ ಲಭಿಸಿದವು. ಅಂದಿನಿಂದ ಇಂದಿನವರೆಗೂ — ಕಾಲೇಜಿನಲ್ಲೂ ಹೊರಗೂ— ಆ ಗೆಳೆತನ ಅವಿಚ್ಛಿನ್ನವಾಗಿ ನಡೆದುಕೊಂಡುಬಂದಿದೆ. ನಾವು ಸಂಧಿಸಿದಾಗಲೆಲ್ಲ ಅನೇಕ ವಿಷಯಗಳ ಬಗ್ಗೆ ಚರ್ಚಿಸಿದ್ದೇವೆ; ಅನುಭವಗಳನ್ನು ಹಂಚಿಕೊಂಡಿದ್ದೇವೆ. ಅವರ ಈ ಜೀವನವೃತ್ತಾಂತವನ್ನು ಪರಿಚಯಮಾಡಿಕೊಡುವ ಪ್ರಯತ್ನದಲ್ಲಿ ನನ್ನ ಈ ಅನುಭವಗಳು ಸಹಾಯಮಾಡಿವೆ.

ಕೃಷ್ಣಮೂರ್ತಿಗಳು ತಮ್ಮ ಒಂಬತ್ತನೆಯ ವರ್ಷದಲ್ಲಿ ಹಾಸನ ಜಿಲ್ಲೆಯ ಅರಕಲಗೂಡಿನಲ್ಲಿ ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಅನಂತರ ಮೈಸೂರಿನ ಡಿ. ಬನುಮಯ್ಯ ಪ್ರೌಢಶಾಲೆಯಲ್ಲಿ ವ್ಯಾಸಂಗವನ್ನು ಮುಂದುವರಿಸಿದರು. ಜಿ. ರಂಗಣ್ಣ ಎಂಬುವರು ಆಗ ಬನುಮಯ್ಯ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಅವರು ಶಿಸ್ತಿಗೆ ಹೆಸರಾಗಿದ್ದರು. ವಿದ್ವಾನ್ ಶಂಕರಶಾಸ್ತ್ರಿಗಳು ಸಂಸ್ಕೃತಕ್ಕೂ ಅರಮನೆಯ ವಿದ್ವಾಂಸರಾದ ಗಂಗಾಧರಶಾಸ್ತ್ರಿಗಳು ಕನ್ನಡಕ್ಕೂ ಗುರುಗಳಾಗಿದ್ದರು. ಆ ಶಾಲೆಯ ಉಪಾಧ್ಯಾಯರು ಪ್ರೀತಿ ವಾತ್ಸಲ್ಯಗಳಿಂದ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುತ್ತಿದ್ದರು. ಆ ಸುಂದರ ವಾತಾವರಣದಲ್ಲಿ ಪ್ರೌಢಶಾಲೆಯ ವಿದ್ಯಾಭ್ಯಾಸ ಮಾಡಿ, ೧೯೩೭ರಲ್ಲಿ ಉನ್ನತ ಶ್ರೇಣಿಯಲ್ಲಿ ಎಸ್.ಎಸ್.ಎಲ್.ಸಿ., ಪರೀಕ್ಷೆಯಲ್ಲಿ ತೇರ್ಗಡೆಯಾದರು. ಇವರ ಜತೆಯಲ್ಲಿ ವ್ಯಾಸಂಗಮಾಡುತ್ತಿದ್ದ, ಮುಂದೆ ಭೌತಶಾಸ್ತ್ರ ಪ್ರಾಧ್ಯಾಪಕರಾದ; ಕೆ. ಶ್ರೀನಿವಾಸನ್ ಆ ಇಡಿಯ ಕೋರ್ಸಿನ ಪರೀಕ್ಷೆಗಳಲ್ಲೆಲ್ಲ ಪ್ರಪ್ರಥಮರಾಗಿಯೂ ಕೃಷ್ಣಮೂರ್ತಿಯವರು ದ್ವಿತೀಯರಾಗಿಯೂ ಸಿ. ಕೆ. ವೆಂಕಟನರಸಿಂಹಯ್ಯನವರು ತೃತೀಯರಾಗಿಯೂ ಉತ್ತೀರ್ಣರಾಗುತ್ತಿದ್ದರು. ಕೃಷ್ಣಮೂರ್ತಿಗಳು ಮುಂದೆ ಮೈಸೂರಿನ ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ವ್ಯಾಸಂಗವನ್ನು ಮುಂದುವರಿಸಿದರು. ಇಲ್ಲಿ ಅವರು ಸಂಸ್ಕೃತ ಭಾಷೆಯನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಂಡರು. ಸಂಸ್ಕೃತಕ್ಕೆ ವಿದ್ಯಾರ್ಥಿವೇತನ ಇದ್ದುದರಿಂದ ವಿದ್ಯಾಭ್ಯಾಸಕ್ಕೆ ಅನುಕೂಲವಾಯಿತು. ಸೀನಿಯರ್ ಇಂಟರ್‌ಮೀಡಿಯಟ್ ಪರೀಕ್ಷೆಗೆ ನಾನೂ ಕೃಷ್ಣಮೂರ್ತಿಗಳೂ ಹಾಗೂ ಇನ್ನೊಬ್ಬ ಗೆಳೆಯ ವಿ. ರಾಮಾಚಾರ್ (ಇವರು ಮುಂದೆ ಇತಿಹಾಸವಿಷಯದಲಿ ಬಿ.ಎ. ಆನರ್ ಮುಗಿಸಿ ಪೋಲೀಸ್‌ಇಲಾಖೆಯಲ್ಲಿ, ಉನ್ನತ

(ತರ್ಕಶಾಸ್ತ್ರ), ಇತಿಹಾಸ ಮೊದಲಾದ ವಿಷಯಗಳನ್ನು ಓದುತ್ತಿದ್ದೆವು. ಇಂಗ್ಲಿಷ್ ವಿಭಾಗದಲ್ಲಿ ಅಧ್ಯಾಪಕರಾಗಿದ್ದ ಎನ್. ನಾಗೇಶರಾಯರ ಮನೆಯಲ್ಲಿ (ಜಯನಗರದಲ್ಲಿದೆ) ಜತೆಗೂಡಿ ಅಭ್ಯಾಸಮಾಡುತ್ತಿದ್ದೆವು. ಇಂಗ್ಲಿಷಿನಲ್ಲಿ ಪ್ರಬಂಧಗಳನ್ನು ಗುರುಗಳಾದ ಎನ್. ನಾಗೇಶರಾಯರ ಮಾರ್ಗದರ್ಶನದಲ್ಲಿ ಬರೆದು ಪರೀಕ್ಷೆಗೆ ಸಿದ್ಧತೆಮಾಡಿಕೊಳ್ಳುತ್ತಿದ್ದೆವು. ಆಗಿನ ಕಾಲದಲ್ಲಿ ಎಲ್ಲ ವಿಷಯಗಳಲ್ಲಿ ತೇರ್ಗಡೆಯಾದರೂ ಇಂಗ್ಲಿಷ್ ವಿಷಯದಲ್ಲಿ ಅಂಕಗಳನ್ನು ಗಳಿಸುವುದು ಕಷ್ಟವಾಗಿತ್ತು. ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಜೆ. ಸಿ. ರಾಲೋ ಅವರೇ ಇಂಗ್ಲಿಷ್ ಪರೀಕ್ಷೆಯ ಉಸ್ತುವಾರಿ ವಹಿಸುತ್ತಿದ್ದರು. ಅಲ್ಲದೆ ಇಂಗ್ಲಿಷಿನ ಮೂರನೆಯ ಪ್ರಶ್ನಪತ್ರಿಕೆಯನ್ನು ಅವರೇ ಕೊಡುತ್ತಿದ್ದರು; ಮತ್ತು ಅವರೇ ಸ್ವತಃ ಉತ್ತರಪತ್ರಿಕೆಗಳ ಪರಿಶೀಲನೆ ನಡಸುತ್ತಿದ್ದರು. ಆದುದರಿಂದ ನಾವು ಇಂಗ್ಲಿಷಿಗೆ ಹೆಚ್ಚಿನ ಗಮನ ಕೊಡಬೇಕಾಗಿತ್ತು. ಈ ವ್ಯಾಸಂಗಕಾಲದಲ್ಲಿ ನಮಗೆ ಅನೇಕ ಪ್ರಯೋಜನಗಳು ಲಭಿಸಿದುವು. ಕೃಷ್ಣಮೂರ್ತಿಗಳ ವಿಷಯಸಂಗ್ರಹಣೆ, ನಿರೂಪಣೆ ಮೊದಲಾದ ವಿಧಾನಗಳಿಂದ ನಮಗೆ ಮಾರ್ಗದರ್ಶನ ದೊರೆಯಿತು. ಆ ವರ್ಷದ ಎಂದರೆ, ೧೯೩೯ನೆಯ ವರ್ಷದ ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಕೃಷ್ಣಮೂರ್ತಿಗಳು ಪ್ರಥಮದರ್ಜೆಯಲ್ಲಿ ಪ್ರಪ್ರಥಮರಾಗಿ ಉತ್ತೀರ್ಣರಾಗಿದ್ದರು. ಆ ವರ್ಷದ ಮೈಸೂರು ಸಂಸ್ಥಾನದ ಇಂಟರ್‌ಮೀಡಿಯೆಟ್ ಪರೀಕ್ಷೆಗಳಲ್ಲಿ ಒಬ್ಬರೇ ಪ್ರಥಮದರ್ಜೆಯಲ್ಲಿ ಉತ್ತೀರ್ಣರಾಗಿದ್ದುದು: ಅದು ಕೃಷ್ಣಮೂರ್ತಿಗಳೇ. ನನ್ನ ಗೆಳೆಯ ರಾಮಾಚಾರ್ ಹಾಗೂ ನಾನು ದ್ವಿತೀಯದರ್ಜೆಯಲ್ಲಿ ತೇರ್ಗಡೆಯಾಗಿದ್ದೆವು. ರಾಮಾಚಾರ್ ಅವರದು ಏಳನೆಯ ಸ್ಥಾನ. ನನ್ನದು ಹನ್ನೊಂದನೆಯ ಸ್ಥಾನ. ನಾನು ಮುಂದೆ ಕನ್ನಡ ಆನರ್ಸ್ ತೆಗೆದುಕೊಂಡೆ ಮತ್ತು ಕೃಷ್ಣಮೂರ್ತಿ ಸಂಸ್ಕೃತ ಆನರ್ಸ್ ತೆಗೆದುಕೊಂಡರು. ಕೃಷ್ಣಮೂರ್ತಿಗಳಿಗೆ ಇಂಗ್ಲಿಷ್ ವಿಷಯದಲ್ಲಿ ಆನರ್ಸ್ ವ್ಯಾಸಂಗ ಮುಂದುವರಿಸಬೇಕೆಂಬ ಅಭಿಲಾಷೆಯಿತ್ತು. ಆಗಿನ ಕಾಲದಲ್ಲಿ ಇಂಗ್ಲಿಷಿಗೆ ಒಳ್ಳೆಯ ಪ್ರಾಶಸ್ತ್ಯವಿದ್ದಿತು. ಇಂಗ್ಲಿಷ್ ವಿಷಯದಲ್ಲಿ ಎಂ.ಎ., ಮಾಡಿದರೆ ಉನ್ನತ ದರ್ಜೆಯ ಕೆಲಸ ಸಿಕ್ಕುವುದರಲ್ಲಿ ಸಂದೇಹವಿರಲಿಲ್ಲ. ಆದರೆ ವಿದ್ಯಾರ್ಥಿವೇತನದ ನೆರವಿಲ್ಲದೆ ಮುಂದಕ್ಕೆ ಓದಿಸುವುದು ಅಸಾಧ್ಯವೆಂಬ ತಂದೆಯವರ ಮಾತಿಗೆ ಬೆಲೆಕೊಟ್ಟು ಸಂಸ್ಕೃತವನ್ನು ತೆಗೆದುಕೊಂಡರು. ಹಾಗೇನಾದರೂ ಇಂಗ್ಲಿಷನ್ನು ತೆಗೆದುಕೊಂಡಿದ್ದರೆ ಇವತ್ತು ಸಂಸ್ಕೃತ ಹಾಗೂ ಕನ್ನಡಕ್ಕೆ ದೊರೆತಿರುವ ಒಬ್ಬ ವಿದ್ವನ್ಮಣಿ ಬೇರೆಯವರ ಪಾಲಾಗುತ್ತಿದ್ದರು. ವಿಧಿ ಯಾವುದೋ ರೀತಿಯಲ್ಲಿ ನಮಗೆ ತಿಳಿಯದಂತೆ ಕೆಲಸಮಾಡಿಸಿಕೊಳ್ಳುತ್ತದೆ ಎಂದು ಕೃಷ್ಣಮೂರ್ತಿಗಳು ಆಗಾಗ್ಗೆ ಹೇಳುತ್ತಿರುವುದುಂಟು; ಅದು ಇಲ್ಲಿ ನಿದರ್ಶನಕ್ಕೆ ಬಂದ ಹಾಗಾಯಿತು.

ಆಗಿನ ಕಾಲದಲ್ಲಿ ಬಿ.ಎ., ಬಿ.ಎ. (ಆನರ್ಸ್) ಮತ್ತು ಎಂ.ಎ. ತರಗತಿಗಳಲ್ಲಿ ಓದುವ

ಯನ್ನಿಟ್ಟುಕೊಂಡಿದ್ದ ವಿದ್ಯಾರ್ಥಿಗಳು ಇಲ್ಲದೆ ಇರಲಿಲ್ಲ. ಆದರೆ ಜ್ಞಾನಾರ್ಜನೆಯ ತಹತಹ ಅಂದಿನ ಬಹು ವಿದ್ಯಾರ್ಥಿಗಳಲ್ಲಿರುತ್ತಿತ್ತು. ತರಗತಿಯಲ್ಲಿ ಪಾಠಹೇಳುವ ಪ್ರಾಧ್ಯಾಪಕರು ಪಾಠದ ವಿಷಯಕ್ಕೆ ಸಂಬಂಧಪಟ್ಟಂತೆ ಬೇರೆ ಬೇರೆ ಪುಸ್ತಕಗಳನ್ನು ಓದುವಂತೆ ಸಲಹೆ ಕೊಡುತ್ತಿದ್ದರು. ವಿದ್ಯಾರ್ಥಿಗಳು ತರಗತಿ ಮುಗಿದೊಡನೆಯೇ ಪುಸ್ತಕಭಂಡಾರಕ್ಕೆ ದಾಳಿಯಿಡುತ್ತಿದ್ದರು. ಇದನ್ನು ಅದು ಯಾವ ಮಾಯದಲ್ಲಿ ತಿಳಿದುಕೊಂಡುಬಿಡು ತ್ತಿದ್ದರೋ, ಗ್ರಂಥಪಾಲಕ ಕೃಷ್ಣಗಿರಿ ಕೃಷ್ಣರಾಯರು ಆ ಪುಸ್ತಕಗಳನ್ನು ತೆಗೆದು ರೆಫರೆನ್ಸ್ ವಿಭಾಗದಲ್ಲಿ ಇಟ್ಟುಬಿಡುತ್ತಿದ್ದರು. ಆಯಾ ಗ್ರಂಥಗಳನ್ನು ಓದಿ ವಿದ್ಯಾರ್ಥಿಗಳು ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಈ ಪರಂಪರೆಯಲ್ಲಿಯೇ ಬಂದ ಕೃಷ್ಣಮೂರ್ತಿಗಳ ಓದು ಇನ್ನೂ ವೈಶಿಷ್ಟ್ಯಪೂರ್ಣವಾದುದಾಗಿತ್ತು.

ಯಾವುದೇ ವಿಷಯವಾಗಲಿ ಸಂಶಯಕ್ಕೆ ಎಡೆ ಇರದಂತೆ ತಿಳಿದುಕೊಳ್ಳಬೇಕೆಂಬ ಉತ್ಕಟಾಕಾಂಕ್ಷೆ ಕೃಷ್ಣಮೂರ್ತಿಗಳದು. ಜ್ಞಾನಾರ್ಜನೆಯ ಗುರಿಯನ್ನುಳ್ಳವರ ರೀತಿ ಇದು. ಅವರು ತರಗತಿಗೆ ಹೋಗುವ ಮೊದಲು ಅಂದು ಏನು ಪಾಠ ನಡೆಯುವುದೋ ಆ ಭಾಗ ವನ್ನು ಓದಿಕೊಂಡು ಅನುಮಾನಗಳನ್ನು ಗುರುತುಮಾಡಿಕೊಳ್ಳುತ್ತಿದ್ದರು. ತರಗತಿಯಲ್ಲಿ ಗುರುಗಳ ಮೂಲಕ ಸಂದೇಹನಿವಾರಣೆ ಮಾಡಿಕೊಳ್ಳಲು ಇದರಿಂದ ಸಹಾಯವಾಗು ತ್ತಿತ್ತು. ಆಗ ಮಹಾರಾಜಾ ಕಾಲೇಜಿನಲ್ಲಿ ಸಂಸ್ಕೃತ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಸಿ. ಆರ್. ನರಸಿಂಹಶಾಸ್ತ್ರಿ, ಎಂ. ಲಕ್ಷ್ಮೀನರಸಿಂಹಯ್ಯ, ನಂ. ಶಿವರಾಮಶಾಸ್ತ್ರಿ, ಎಚ್. ಎಲ್. ಹರಿಯಪ್ಪ ಮೊದಲಾದವರು ಬೋಧಕರಾಗಿದ್ದರು. ಸಂಸ್ಕೃತದಲ್ಲಿ ಸಾಹಿತ್ಯ ಭಾಗವಲ್ಲದೆ, ತರ್ಕಸಂಗ್ರಹ, ಪಾಣಿನೀಯ ವ್ಯಾಕರಣ, ಶಂಕರಭಾಷ್ಯ, ದರ್ಶನಗಳು—ಹೀಗೆ ಆಳವಾಗಿ ಅಭ್ಯಾಸ ಮಾಡಬೇಕಾದ ವಿಷಯಗಳಿದ್ದುವು. ಇವುಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡಲ್ಲದೆ ಇವುಗಳಲ್ಲಿ ವ್ಯುತ್ಪತ್ತಿ ಉಂಟಾಗದು. ಎಷ್ಟೋ ಸಂದೇಹಗಳು, ಸಮಸ್ಯೆ ಗಳು ಇವುಗಳ ಅಧ್ಯಯನಶೀಲನಿಗೆ ಎದುರಾಗುತ್ತವೆ. ನಿಸ್ಸಂದೇಹವಾಗಿ ಖಚಿತವಾಗಿ ತಿಳಿದುಕೊಂಡಿರುತ್ತಿದ್ದ ವಿದ್ವಾಂಸರಿದ್ದು, ಅಂಥವರ ಕೃಪೆ ದೊರಕಿದರೆ ಮಾತ್ರ, ಶಾಸ್ತ್ರ ಸಂದೋಹದ ಸಂದೇಹವನದಲ್ಲಿ ತೊಳಲಾಡುವವನಿಗೆ ನಿಧಿ ದೊರಕಿದಂತೆಯೇ. ಅಂಥ ಅದೃಷ್ಟ ಎಷ್ಟು ಜನರಿಗೆ ದೊರಕುತ್ತದೆ! ಕೃಷ್ಣಮೂರ್ತಿಗಳಿಗಾದರೋ ಎಲ್ಲವನ್ನೂ ಇದಮಿತ್ಥಂ ಎಂಬಂತೆ ತಿಳಿದುಕೊಂಡುಬಿಡಬೇಕೆಂಬ ಉತ್ಕಟ ಆಕಾಂಕ್ಷೆ. ಇದಕ್ಕಾಗಿ ಅವರು ಯಾರನ್ನೂ ಕಾಯದೆ ಗ್ರಂಥಭಂಡಾರವನ್ನು ಮೊರೆಹೊಕ್ಕು, ವಿಷಯ ಕರತಲಾಮಲಕ ವಾಗುವಂತೆ, ನಿಸ್ಸಂದೇಹಜ್ಞಾನ ಲಭಿಸುವಂತೆ ಹಲವಾರು ಗ್ರಂಥಗಳನ್ನು ಓದಿ ವಿಷಯ ಸಂಗ್ರಹ ಮಾಡುತ್ತಿದ್ದರು. ಸಂಬಂಧಪಟ್ಟ ಗ್ರಂಥಗಳನ್ನೆಲ್ಲ ಹುಡುಕಿ ಜಾಲಾಡಿ ಪಟ್ಟು ಹಿಡಿದು ಅರ್ಥಮಾಡಿಕೊಂಡೇ ತೀರುವ ಛಲ. ಇಲ್ಲಿ ಅವರ ಜೀವನದ ಒಂದು ಘಟನೆ ಯನ್ನು ನೋಡಬಹುದು : ಪಾಣಿನಿಯ ವ್ಯಾಕರಣವನ್ನು ಕಲಿಯಲು ತಿಪ್ಪೂರು ಸುಬ್ರಾಯ ಶಾಸ್ತ್ರಿಗಳೆಂಬ ವಿದ್ವಾಂಸರ ಬಳಿಗೆ ಹೋಗಿ ಕೃಷ್ಣಮೂರ್ತಿ ವ್ಯಾಕರಣವನ್ನು ಬೋಧಿಸ ಬೇಕೆಂದು ಕೇಳಿಕೊಂಡರು. ಶಾಸ್ತ್ರಿಗಳಿಗೆ ಅದು ಅವರ ಬದುಕಿನ ಕೊನೆಗಾಲ. ಆದರೂ ಆ

ವಯಸ್ಸಿನಲ್ಲಿ ವ್ಯಾಕರಣ ಹೇಳಿಕೊಡಲು ಒಪ್ಪಿದರು. ಸುಮಾರು ಎರಡು ತಿಂಗಳ ಕಾಲದಲ್ಲಿ ಅವರು ಎರಡು ಪ್ರಕರಣಗಳನ್ನು ಪಾಠಮಾಡಿ ಮುಗಿಸಿದರು. ಶಾಸ್ತ್ರಿಗಳು ತಮ್ಮ ಮೂವತ್ತು ವರ್ಷಗಳ ಅಧ್ಯಾಪನದ ಅವಧಿಯಲ್ಲಿ ವ್ಯಾಕರಣವನ್ನು ಪಾಠ ಹೇಳುವ ಸಂದರ್ಭವು ಒದಗಿ ಬಂದಿರಲಿಲ್ಲ. ಈಗ ಅವರು ತಮ್ಮ ನೆನಪಿನಿಂದಲೇ, ಹಿಂದಿನ ಅಭ್ಯಾಸದ ಬಲದಿಂದಲೇ, ವ್ಯಾಕರಣದ ಪಾಠವನ್ನು ಮಾಡಿದರು. ಅವರ ಗುರುಗಳು ಹೇಳಿ ಕೊಟ್ಟ ಪಾಠ ಅಷ್ಟರವುಟ್ಟಿಗೆ ಅವರಿಗೆ ಖಚಿತವಾಗಿದ್ದಿತು. ಇದು ಪಾಂಡಿತ್ಯ ; ಇದೇ ಕೃಷ್ಣಮೂರ್ತಿಗಳ ಆದರ್ಶ. ಆ ಸಮಯದಲ್ಲಿ ಅವರು ಸಂಗ್ರಹಿಸಿದ ವಿಷಯಗಳು, ಟಿಪ್ಪಣಿ ಅವರು ಬರೆದ ಲೇಖನಗಳು ಅವರು ಮುಂದೆ ಪಿಎಚ್.ಡಿ.ಗೆ ಮಹಾಪ್ರಬಂಧವನ್ನು ಬರೆಯಲು ನೆರವಾದುವು ಎಂಬುದನ್ನು ಕೃಷ್ಣಮೂರ್ತಿಗಳು ಇಂದಿಗೂ ಹೇಳುತ್ತಿರುತ್ತಾರೆ. ಹೀಗೆ ಕಠಿನವಿದ್ಯಾರ್ಜನೆ ಮಾಡುತ್ತ, ೧೯೪೨ರಲ್ಲಿ ಬಿ.ಎ. ಆನರ್ಸ್ ಪದವಿಯನ್ನೂ ೧೯೪೩ರಲ್ಲಿ ಎಂ.ಎ. ಪದವಿಯನ್ನೂ ಪ್ರಥಮವರ್ಗದಲ್ಲೇ ಪಡೆದರು. ಇವರ ಹಿಂದೆ ೨೦ ವರ್ಷ, ಮುಂದೆ ೧೮ ವರ್ಷ ಈ ಪ್ರಥಮವರ್ಗದವರು ಮತ್ತೊಬ್ಬರಿಲ್ಲ. ಮುಂದೆ ಉದ್ಯೋಗಕ್ಕೆ ಪ್ರಯತ್ನ. ಸುಮ್ಮನೆ ಕಾಲ ಕಳೆಯುವುದರಲ್ಲಿ ಕೃಷ್ಣಮೂರ್ತಿಗಳಿಗೆ ಅಭಿಪ್ರಾಯವಿಲ್ಲ. ಬಿ.ಟಿ., ಪರೀಕ್ಷೆಗೆ ಅಧ್ಯಯನಮಾಡಿ ಅತ್ಯುತ್ತಮ ರೀತಿಯಲ್ಲಿ ಪರೀಕ್ಷೆ ಯಲ್ಲಿ ತೇರ್ಗಡೆ ಹೊಂದಿದರು.

ಕೃಷ್ಣಮೂರ್ತಿಗಳ ಇನ್ನೊಂದು ಸಾಹಸವೆಂದರೆ, ಕಾಲೇಜಿನ ವಿದ್ಯಾಭ್ಯಾಸದ ಜತೆಯಲ್ಲೇ ಕನ್ನಡ ಪಂಡಿತ ಪರೀಕ್ಷೆಯನ್ನೂ ಮುಗಿಸಿದುದು ; ಸೀನಿಯರ್ ಇಂಟರಿನ ಬೇಸಿಗೆ ರಜದಲ್ಲಿ ಅದರ ಜೂನಿಯರ್ ಪರೀಕ್ಷೆಗೂ ಆನರ್ಸ್ ಆದ ನಂತರದ ರಜದಲ್ಲಿ ಅದರ ಸೀನಿಯರ್ ಪರೀಕ್ಷೆಗೂ ಕುಳಿತು ತೇರ್ಗಡೆಹೊಂದಿದುದು. ಇವರ ತಂದೆಯವರು 'ಶಬ್ದಮಣಿ ದರ್ಪಣ'ವನ್ನೂ 'ಶಬ್ದಾನುಶಾಸನ'ವನ್ನೂ ಆಮೂಲಾಗ್ರವಾಗಿ ಕಂಠಪಾಠ ಮಾಡಿಸಿದ್ದರು. ತನ್ನ ಅಣ್ಣ ಕೆ. ವೆಂಕಟರಾಮಯ್ಯನವರ ಜತೆಯಲ್ಲಿ ಪಂಡಿತಪರೀಕ್ಷೆಯ ಕನ್ನಡ ಪಠ್ಯ ಗಳನ್ನು ಓದಿದ್ದರಿಂದ ತಾನೂ ಈ ಪರೀಕ್ಷೆಗೆ ಕುಳಿತುಕೊಳ್ಳಬಹುದೆಂದು ಯೋಚಿಸಿ ಕೃಷ್ಣಮೂರ್ತಿಗಳು ಪಠ್ಯಗಳನ್ನೆಲ್ಲ ಪುನರಾವರ್ತನೆ ಮಾಡಿದರು. ಈ ಧೈರ್ಯದಿಂದ ಪರೀಕ್ಷೆಗೆ ಕುಳಿತರು. ಈ ಪರೀಕ್ಷೆಯಲ್ಲಿ ಕವಿತ್ವವನ್ನು ಮಾಡುವ ೫೦ ಅಂಕಗಳ ಒಂದು ಪ್ರಶ್ನಪತ್ರಿಕೆಯಿದ್ದಿತು. ಇದನ್ನು ನಿಭಾಯಿಸುವುದು ಹೇಗೆ ಎಂಬ ಸಮಸ್ಯೆ ಕೃಷ್ಣಮೂರ್ತಿ ಗಳ ಎದುರು ಬಂದಿತು. ಕದೆತ್ವವನ್ನು ಹೇಗೆ ಮಾಡುವುದು ಎಂದು ಎಷ್ಟು ಯೋಚಿ ಸಿದರೂ ದಾರಿ ತೋರಲಿಲ್ಲ. ಆಗ ಇವರ ತಂದೆಯವರು ಗಂಜಾಂ ಕೃಷ್ಣಪ್ಪನವರೆಂಬ ಪಂಡಿತರ ಮನೆಗೆ ಮಗನನ್ನು ಕರೆದುಕೊಂಡು ಹೋದರು. ಬೆಳಗ್ಗೆ ಹತ್ತು ಗಂಟೆಗೆ ಹೋದುದಕ್ಕೆ ಒಂದೆರಡು ಗಂಟೆಗಳ ಪರಿಶ್ರಮದಿಂದ ಒಂಪೆರಡು ಕಂದಪದ್ಯಗಳು ಸಿದ್ಧ ವಾದುವು. ಕೃಷ್ಣಮೂರ್ತಿಗಳಿಗೆ ಇದರಿಂದ ತೃಪ್ತಿಯಾಗಲಿಲ್ಲ. ಹೀಗಾದರೆ ಕವಿಗಳು ತಮ್ಮ ವಿಸ್ತಾರವಾದ ಕಾವ್ಯಗಳನ್ನು ರಚಿಸಲು ಸಾಧ್ಯವಾಗುತ್ತಿತ್ತೇ ಎಂಬ ಪ್ರಶ್ನೆ ಎದ್ದಿತು. ಇದರ ಮರ್ಮವನ್ನು ಅರಿಯಬೇಕು ಎಂದು ತೀರ್ಮಾನಿಸಿದರು. ಮನೆಗೆ ಬಂದು ಊಟ

ಮಾಡಿ, "ದೇವರೇ ನನಗೆ ದಾರಿ ತೋರಿಸುತ್ತಾನೆ. ಮೇಲಿನ ಶಕ್ತಿ ಮಾನವರನ್ನು ನಡೆಸು ತ್ತದೆ, ನಾನು ಎಂಬುದು ಇಲ್ಲ" ಎಂದು ನಂಬಿ, ತಮ್ಮ ಕೊಠಡಿಯಲ್ಲಿ ಕುಳಿತುಕೊಂಡು, ಪಂಪನ ಕೆಲವು ಪದ್ಯಗಳನ್ನು ಮುಂದಿಟ್ಟುಕೊಂಡು ಪದರಚನೆ ಹೇಗೆ ಬಂದಿದೆ, ಗಣಗಳು ಹೇಗೆ ಆಗಿವೆ, ಎಲ್ಲಿ ಓಟ ಹೇಗೆ ಸಾಗಿದೆ, ತೇಪೆ ಹಾಕಿದಾಗ ಹೇಗಾಗುತ್ತದೆ ಎಂಬುದನ್ನು ವಿಶ್ಲೇಷಿಸುತ್ತ ಕಾಗದದ ಮೇಲೆ ಪದ್ಯಗಳನ್ನು ಬರೆದುಕೊಂಡು ಪ್ರಸ್ತಾರಹಾಕಿ ಲೆಕ್ಕಾಚಾರ ಮಾಡುತ್ತ ಬಂದರು. ಕಂದಪದ್ಯದ ಹೊಲಿಗೆಯನ್ನು ಬಿಚ್ಚತೊಡಗಿದರು. ಕಂದ ಪದ್ಯದ ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ಮಾತ್ರೆಗಳ ಮೂರು ಗಣಗಳು ಬರುತ್ತವೆ. ಇಲ್ಲಿ ಯಾವ ಕಷ್ಟವೂ ಇಲ್ಲ. ಎರಡು ಮತ್ತು ನಾಲ್ಕನೆಯ ಪಾದ ಗಳಲ್ಲಿ ಆರನೆಯ ಸ್ಥಾನದಲ್ಲಿ ಜಗಣ ಅಥವಾ ನಾಲ್ಕು ಲಘುಗಳಿರುವ ಗಣ ಬರಬೇಕು. ಇದರಿಂದ ಮುಂದಕ್ಕೆ ಗುರು ಲಘುಗಳ ವಿನ್ಯಾಸ ಹೇಗೆ ಬಂದಿದೆ ಎಂಬುದನ್ನು ವಿಚಾರ ಮಾಡಿದರು. ಆಗ ಅವರಿಗೆ ಕಂದಪದ್ಯದ ರಚನೆ ಹೇಗಾಗುತ್ತದೆ ಎಂಬುದು ಅರ್ಥ ವಾಯಿತು. ಆಗಲೇ ಕುಳಿತು ಹತ್ತು ಹನ್ನೆರಡು ಕಂದಪದ್ಯಗಳನ್ನು ರಚಿಸಿ ತಂದೆಯವರಿಗೆ ತೋರಿಸಿದಾಗ, ಅವರಿಗೆ ಪರಮ ಸಂತೋಷವಾಯಿತು. ಈ ರೀತಿ ಪಟ್ಟುಹಿಡಿದು ಕುಳಿತು ಸಾಧಿಸುವ ಶೋಧನಮಾರ್ಗ ಕೃಷ್ಣಮೂರ್ತಿಗಳದು.

ಮುಂದೆ ಕೃಷ್ಣಮೂರ್ತಿಗಳು ೧೯೪೪ರಿಂದ ೧೯೪೯ನೆಯ ವರ್ಷದವರೆಗೆ ಬಾಗಲ ಕೋಟೆಯ ಬಸವೇಶ್ವರ ಕಾಲೇಜಿನಲ್ಲಿ ಕನ್ನಡ-ಸಂಸ್ಕೃತ ವಿಭಾಗಕ್ಕೆ ಸೇರಿದರು ; ಅಲ್ಲಿ ಮುಂದೆ ಪ್ರಾಧ್ಯಾಪಕರೂ ಆದರು. ಬಾಗಲಕೋಟೆಯ ಕಾಲೇಜಿನಲ್ಲಿದ್ದ ಕಾಲ ಕೃಷ್ಣ ಮೂರ್ತಿಗಳ ಜೀವನದಲ್ಲಿ ಒಂದು ಮಹತ್ತರ ಸಾಧನೆಗೆ ಅಡಿಗಲ್ಲನ್ನು ಹಾಕಿ, ಅವರನ್ನು ವಿದ್ವತ್‌ಪ್ರಪಂಚದ ಶ್ರೇಷ್ಠ ಪಂಡಿತನೆನ್ನಿಸಿಕೊಳ್ಳುವ ಅವಕಾಶವನ್ನು ನೀಡಿತು. ಪಿಎಚ್.ಡಿ., ಪದವಿಗೆ ಸಿದ್ಧತೆಯನ್ನು ಮಾಡಿಕೊಳ್ಳಬೇಕು ಎಂಬ ಆಸೆ ಅವರಲ್ಲಿ ಅಂಕುರಿಸಿತು. ಬಾಗಲಕೋಟೆ ಮುಂಬಯಿ ವಿಶ್ವವಿದ್ಯಾನಿಲಯದ ವ್ಯಾಪ್ತಿಯಲ್ಲಿದ್ದಿತು. ಆ ವಿಶ್ವವಿದ್ಯಾ ನಿಲಯದ ವ್ಯಾಪ್ತಿಯಲ್ಲಿರುವ ಕಾಲೇಜಿನಲ್ಲಿ ಅಧ್ಯಾಪಕರಾಗಿರುವವರಿಗೆ, ಸಂಶೋಧನ ಲೇಖನಗಳು ಪ್ರಸಿದ್ಧ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದರೆ, ಮಾರ್ಗದರ್ಶಿ ಇಲ್ಲದೆ ಪಿಎಚ್.ಡಿ. ಪದವಿಗೆ ಮಹಾಪ್ರಬಂಧವನ್ನು ಒಪ್ಪಿಸುವ ಒಂದು ಅವಕಾಶವಿದ್ದಿತು. ಕೃಷ್ಣಮೂರ್ತಿಗಳು ಆಗಲೇ ಪ್ರಮುಖ ವಿದ್ವತ್ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ತಮ್ಮ ಆರು ಪ್ರಬಂಧಗಳನ್ನು ಪರಿಶೀಲನೆಗೆ ಒಪ್ಪಿಸಿ, ಮೈಸೂರು ವಿಶ್ವವಿದ್ಯಾನಿಲಯದ ಪರೀಕ್ಷೆಗಳಲ್ಲಿ ಪಡೆದುಕೊಂಡ ಉತ್ತಮ ಫಲಿತಾಂಶಗಳ ವರದಿಯನ್ನು ಕಳುಹಿಸಿಕೊಟ್ಟರು. ಹೀಗೆ ಸ್ವತಂತ್ರವಾಗಿ ಬೊಂಬಾಯಿ ವಿಶ್ವವಿದ್ಯಾನಿಲಯದ ಪಿಎಚ್.ಡಿ., ಪರೀಕ್ಷೆಗೆ ಪ್ರಬಂಧವನ್ನು ಒಪ್ಪಿಸಲು ಅನುಮತಿ ದೊರಕಿತು. ಕೃಷ್ಣಮೂರ್ತಿಗಳಿಗೆ ಆಗ ಅವರ ಅದೃಷ್ಟವೋ ಎಂಬಂತೆ ಮಹಾವಿದ್ವಾಂಸರಾದ ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಬಾಗಲಕೋಟೆ ಕಾಲೇಜಿನಲ್ಲಿದ್ದು, ಅವರ ಪ್ರೋತ್ಸಾಹ ದೊರೆಯಿತು. ಅವರು ಕೃಷ್ಣಮೂರ್ತಿಗಳಿಗೆ ಎಲ್ಲ ರೀತಿಯ ಸಲಹೆಗಳನ್ನಿತ್ತು ಮಹಾಪ್ರಬಂಧವನ್ನು ಬರೆಯಲು ಹುರಿದುಂಬಿಸಿದರು.

ಒಂದು ಸಣ್ಣ ಕೊಠಡಿಯಲ್ಲಿ ಲೇಖನವ್ಯವಸಾಯ ನಡೆಯಬೇಕು. ಸರಿಯಾಗಿ ದೀಪ ವಿಲ್ಲ. ನೀರಿಲ್ಲ. ಕಾಲೇಜಿನಲ್ಲಿ ದಿನಚರಿಯಂತೆ ಅಧ್ಯಾಪನಕಾರ್ಯವನ್ನು ನಡೆಸಬೇಕು. ಬೆಳಗ್ಗೆ ಹನ್ನೊಂದು ಗಂಟೆಯಿಂದ ಸಂಜೆ ಐದು ಗಂಟೆಗಳವರೆಗೆ ಕಾಲೇಜಿನಲ್ಲಿರಬೇಕು. ಮಹಾಪ್ರಬಂಧವನ್ನು ಬರೆಯಲು ತನ್ನ ಕೈಯಿಂದ ಆದೀತೇ ಎಂಬ ಚಿಂತೆಯಲ್ಲಿದ್ದಾಗ' ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ಯರು ''ದಿನಕ್ಕೆ ಹತ್ತು ಪುಟಗಳಂತೆ ಬರೆಯುತ್ತಾ ಹೋಗಿ ; ಒಂದು ತಿಂಗಳಿಗೆ ಮುನ್ನೂರು ಪುಟಗಳಾಗುತ್ತವೆ'' ಎಂದು ಧೈರ್ಯ ಕೊಟ್ಟರು. ಆಗ ಕೃಷ್ಣಮೂರ್ತಿಗಳು ದೃಢಮನಸ್ಕರಾಗಿ ಎರಡು ತಿಂಗಳುಗಳಲ್ಲಿ ಪ್ರಬಂಧವನ್ನು ಬರೆದು ಮುಗಿಸಿದರು. ಊಟ ತಿಂಡಿಯ ಕಡೆಗಾಗಲಿ. ದೇಹದ ಪೋಷಣೆಯ ಕಡೆಗಾಗಲಿ ಅವರ ಮನಸ್ಸು ಹರಿಯಲಿಲ್ಲ. 'ಧ್ವನ್ಯಾಲೋಕ ಮತ್ತು ಅದರ ಟೀಕಾಕಾರರು' **(Dhwanyaloka and Its Critics)** ಎಂಬ ವಿಷಯದ ಮೇಲೆ ೪೭೦ ಪುಟಗಳ ಪ್ರಬಂಧ ವನ್ನು ಬರೆದು ಮುಂಬಯಿ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದರು. ಪ್ರಖ್ಯಾತವಿದ್ವಾಂಸ ರಾದ ಪಿ. ವಿ. ಕಾಣೆ ಮತ್ತು ಎಚ್. ಡಿ. ವೇಲಣಕರ್ ಅವರುಗಳು ಪರೀಕ್ಷಕರಾಗಿದ್ದರು. ಪಿಎಚ್.ಡಿ. ಪದವಿಗೆ ಕೃಷ್ಣಮೂರ್ತಿಗಳ ಪ್ರಬಂಧವನ್ನು ಒಪ್ಪಿಕೊಂಡ ಆ ವಿದ್ವಾಂಸರು ''ಈ ಪ್ರಬಂಧವು ನಮಗೆ ತೃಪ್ತಿ ಕೊಟ್ಟಿದೆ. ಈ ವಿದ್ಯಾರ್ಥಿಯನ್ನು ಸಮ್ಮುಖಪರೀಕ್ಷೆಗೆ **(Viva Voce)** ಕರೆಯಬೇಕಾದ ಆವಶ್ಯಕತೆಯಿಲ್ಲ'' ಎಂದು ವಿಶ್ವವಿದ್ಯಾನಿಲಯಕ್ಕೆ ಬರೆ ದರು. ಪಿಎಚ್.ಡಿ. ಪದವಿಯನ್ನು ಪಡೆದುಕೊಂಡ ಕೆ. ಕೃಷ್ಣಮೂರ್ತಿಗಳನ್ನು ಮೆಚ್ಚಿ ಕೊಂಡು ಕೆ. ಆರ್. ಶ್ರೀನಿವಾಸ್ ಅಯ್ಯಂಗಾರ್‌ಅವರು ಬರೆದ ಪತ್ರದಲ್ಲಿ ವ್ಯಕ್ತಪಡಿಸಿರುವ ಮಾತುಗಳು ಸಮರ್ಥನೀಯವಾಗಿವೆ : **'This should prove the beginning of your Post Doctoral scholarship'**—ಇದು ಕೃಷ್ಣಮೂರ್ತಿಗಳ ಮುಂದಿನ ವಿದ್ವತ್ಪೂರ್ಣ ಕೃತಿಗಳ ಮಹಾಪೂರಕ್ಕೆ ಭವಿಷ್ಯವಾಣಿಯಂತಿದೆ.

ಕೃಷ್ಣಮೂರ್ತಿಯವರು ರಜದಲ್ಲಿ ಮೈಸೂರಿಗೆ ಬಂದಿದ್ದಾಗ ಅವರ ತಂದೆಯವರು ಪ್ರಖ್ಯಾತವಿದ್ವಾಂಸರಾದ ಹಿರಿಯಣ್ಣನವರ ಬಳಿಗೆ ಕರೆದುಕೊಂಡು ಹೋದರು. ''ನನ್ನ ಮಗ ಪಿಎಚ್.ಡಿ. ಪ್ರಬಂಧವನ್ನು ಬರೆದಿದ್ದಾನೆ ; ತಾವು ಪರಾಮರ್ಶಿಸಿ ಅವನಿಗೆ ದಾರಿ ತೋರಿಸಬೇಕು'' ಎಂದು ಕೇಳಿಕೊಂಡರು. ''ಆಗಲಿ, ನಾನು ನೋಡುತ್ತೇನೆ ; ಪ್ರಬಂಧವನ್ನು ಕೊಟ್ಟು ಹೋಗಿ'' ಎಂದು ಹಿರಿಯಣ್ಣನವರು ಹೇಳಿದರು. ಅದಾದ ಎಂಟು ದಿವಸಗಳಿಗೆ ಹಿರಿಯಣ್ಣನವರಿಂದ ಒಂದು ಅಂಚೆ ಕಾರ್ಡು ಬಂದಿತು. ಇಂಥ ದಿವಸ ಬೆಳಗ್ಗೆ ಎಂಟು ಗಂಟೆಗೆ ಬರಬೇಕೆಂದು ಅದರಲ್ಲಿ ಬರೆದು ತಿಳಿಸಿದ್ದರು. ಕೃಷ್ಣಮೂರ್ತಿಗಳು ಹಿರಿಯಣ್ಣ ನವರ ಮನೆಗೆ ಹೋಗುವ ಹೊತ್ತಿಗೆ ಎಂಟು ಗಂಟೆಗೆ ಸರಿಯಾಗಿ ಅವರು ಬಾಗಿಲಿನಲ್ಲಿ ಕಾಯುತ್ತ ನಿಂತಿದ್ದರು. ಆಗ ಹಿರಿಯಣ್ಣನವರು ೭೨ ವರ್ಷ ವಯಸ್ಸಿನವರು. ಅವರು ಆ ಹಿಂದಿನ ತಲೆಮಾರಿನ ವಿದ್ವಾಂಸರಾಗಿ ಖ್ಯಾತನಾಮರಾಗಿದ್ದರು. ತಮ್ಮ ಅಭ್ಯಾಸದ ಕೊಠಡಿಯೊಳಕ್ಕೆ ಕೃಷ್ಣಮೂರ್ತಿಗಳನ್ನು ಕರೆದುಕೊಂಡು ಹೋದರು. ಅಲ್ಲಿ ಒಂದು ಸ್ಟೂಲು, ಒಂದು ಆರಾಮ ಕುರ್ಚಿ ಇದ್ದುವು. ತಾವು ಸ್ಟೂಲಿನ ಮೇಲೆ ಕುಳಿತು ಬಲವಂತ

ವಾಗಿ ಕೃಷ್ಣಮೂರ್ತಿಗಳನ್ನು ಆರಾಮಕುರ್ಚಿಯಲ್ಲಿ ಕೂರಿಸಿದರು. ಅವರ ಮೇಜಿನ ಮೇಲೆ ಹಲವಾರು ಗ್ರಂಥಗಳಿಗೆ ಗುರುತಿನ ಚೀಟಿಗಳನ್ನು ಹಾಕಿ ಇಟ್ಟಿದ್ದರು. ಪ್ರಬಂಧದ ಒಂದು ಪುಟವನ್ನು ತೆಗೆಸಿ, ಅಲ್ಲಿಯ ವಾಕ್ಯಗಳನ್ನು ಓದುವಂತೆ ಹೇಳಿದರು. ಅನಂತರ ಬೇರೆ ಕೆಲವು ಪುಟಗಳಿಂದ ಅದೇ ಸಂದರ್ಭಗಳ ವಾಕ್ಯಗಳನ್ನು ತೆಗೆಸಿ ಓದಿಸಿದರು. "ಇವು ಗಳನ್ನು ಹೇಗೆ ಅರ್ಥಮಾಡಿಕೊಳ್ಳುತ್ತೀಯೆ" ಎಂದು ಕೇಳಿದರು. ಚರ್ಚೆ ಮೂರು ಗಂಟೆ ಗಳ ಕಾಲ ನಡೆಯಿತು. 'ರಸಾನುಭವವು ಓದುಗನಲ್ಲಿಯೋ' ಎಂಬುದನ್ನು ಸ್ಪಷ್ಟಪಡಿಸು ವುದು ಅವರ ಉದ್ದೇಶವಾಗಿತ್ತು. ಬೇರೆ ಬೇರೆ ಇಂಗ್ಲಿಷ್, ಜರ್ಮನ್, ಫ್ರೆಂಚ್ ಮೊದ ಲಾದ ವಿದ್ವಾಂಸರ ವಾದಗಳನ್ನೂ ಈ ವಿಷಯದಲ್ಲಿ ಅರಿಸ್ಟಾಟಲ್, ಸಿಸಿರೋ ಮೊದ ಲಾದವರ ಅಭಿಪ್ರಾಯಗಳೇನು ಎಂಬುದನ್ನೂ ಹಲವಾರು ಗ್ರಂಥಗಳಿಂದ ತೆಗೆದು ತೋರಿಸಿ ದರು. ನಿಷ್ಕೃಷ್ಟ ಅಭಿಪ್ರಾಯವನ್ನು ಹೇಗೆ ರೂಪಿಸಿಕೊಳ್ಳಬೇಕು, ಗ್ರಂಥಪಾಠವನ್ನು ಬೇರೆ ಬೇರೆ ವಿದ್ವಾಂಸರುಗಳ ಗ್ರಂಥಗಳಿಂದ ತಾಳೆ ನೋಡಿ ತಮ್ಮ ವಾದವನ್ನು ಹೇಗೆ ಮಂಡಿಸಬೇಕು ಎಂಬುದನ್ನು ಹಿರಿಯಣ್ಣನವರು ತೋರಿಸಿಕೊಟ್ಟರು. ವಿದ್ವತ್ತು ಎಂದರೆ ಎಂಥದು, ಯಾವ ಮಟ್ಟದ್ದು, ಅದಕ್ಕೆ ಅಗತ್ಯವಾದ ಕೃಷಿ ಏನು ಎಂಬುದನ್ನು ಅಂದು ಕೃಷ್ಣಮೂರ್ತಿಗಳು ಅರ್ಥಮಾಡಿಕೊಂಡರು. "ಈ ಪ್ರಬಂಧವನ್ನು ಪುಸ್ತಕವಾಗಿ ಪ್ರಕಟಿಸಲು ನಿಮ್ಮ ಸಹಾಯ ಬೇಕು" ಎಂದು ಕೃಷ್ಣಮೂರ್ತಿಗಳು ಕೇಳಿಕೊಂಡಾಗ, "ಈಗಲೆ ಪುಸ್ತಕವನ್ನು ಪ್ರಕಟಿಸುವ ಆತುರ ಬೇಡ. ನಿನ್ನ ಪ್ರಬಂಧವನ್ನು ವಿಷಯಕ್ಕನು ಗುಣವಾಗಿ ಬೇರೆ ಬೇರೆ ಭಾಗಗಳನ್ನಾಗಿ ಮಾಡಿಕೊಂಡು ಬೇರೆ ಬೇರೆ ವಿದ್ವತ್ಪತ್ರಿಕೆಗಳಿಗೆ ಕಳುಹಿಸು. ಅವುಗಳೆಲ್ಲ ಅಚ್ಚಾದ ಮೇಲೆ ಯಾರಾದರೂ ಪ್ರಕಟಿಸಲು ಮುಂದೆ ಬಂದೇ ಬರುತ್ತಾರೆ" ಎಂದು ಸಲಹೆಕೊಟ್ಟರು. ಅದೇ ರೀತಿ ಪಿಎಚ್.ಡಿ. ಪ್ರಬಂಧವನ್ನು ೩೨ ಭಾಗಗಳಾಗಿ ಮಾಡಿ ಬೇರೆ ಬೇರೆ ಪತ್ರಿಕೆಗಳಿಗೆ ಕಳುಹಿಸಲು, ಎರಡು ವರ್ಷಗಳ ಅವಧಿ ಯಲ್ಲಿ ಅವುಗಳೆಲ್ಲ ಪ್ರಕಟವಾದುವು.

ಮುಂದೆ ಮುಂಬಯಿ ವಿಶ್ವವಿದ್ಯಾನಿಲಯವು ಕೆಲವು ನಿಯಮಗಳನ್ನು ಪುನರ್ವಿಮರ್ಶಿ ಸಿದ ಕಾರಣ, ಹೊಸ ನಿಯಮಾವಳಿಗಳ ಪ್ರಕಾರ ಕೃಷ್ಣಮೂರ್ತಿಗಳಿಗೆ ಪ್ರೊಫೆಸರ್ ಎಂಬ ಹೆಸರು ಉಳಿಯುವುದಾಗಿರಲಿಲ್ಲ. 'ಉಪನ್ಯಾಸಕ' **(Lecturer)** ಎಂದು ಕರೆದರೂ ನಿಮ್ಮದೇ ಸಂಬಳ ಇರುತ್ತದೆ ಹಾಗೂ ನಿಮ್ಮ ಸ್ಥಾನಕ್ಕೆ ಚ್ಯುತಿಯಿಲ್ಲ' ಎಂದು ಆಡಳಿತ ವರ್ಗದವರು ಆಶ್ವಾಸನೆ ಕೊಟ್ಟರೂ, ಆ ರೀತಿ ಮೊದಲಿದ್ದ ಸ್ಥಾನದ ಹೆಸರಿಲ್ಲದೆ ಅಲ್ಲಿ ಇರಲು ಮನಸ್ಸಾಗದೆ ರಾಜೀನಾಮೆ ಕೊಟ್ಟು ಕೃಷ್ಣಮೂರ್ತಿ ಮೈಸೂರಿಗೆ ಬಂದುಬಿಟ್ಟರು.

ಮೈಸೂರಿನಲ್ಲಿದ್ದುಕೊಂಡು ಮುಂದೆ ಏನು ಎಂದು ಯೋಚಿಸುತ್ತಿದ್ದಾಗ, ಲಕ್ಷ್ಮೀ ನರಸಿಂಹಯ್ಯನವರು ಕೃಷ್ಣಮೂರ್ತಿಗಳ ನೆರವಿಗೆ ಬಂದರು. ಅವರು ಕೃಷ್ಣಮೂರ್ತಿ

ಪೂರ್ವಕವಾಗಿ ಹೇಳಿದರು. ಆಗ ಕೃಷ್ಣಮೂರ್ತಿ ಶಾರದಾವಿಲಾಸ ಕಾಲೇಜಿನಲ್ಲಿ ಸಂಸ್ಕೃತ
ಅಧ್ಯಾಪಕರಾಗಿ ಸೇರಿಕೊಂಡರು. ಇದೇ ಸಮಯದಲ್ಲಿಯೇ ಎ. ಆರ್. ಕೃಷ್ಣಶಾಸ್ತ್ರಿಗಳು
ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದರು. ಅವರು ಕನ್ನಡ
ಸಂಸ್ಕೃತಗಳೆರಡರಲ್ಲೂ ಅದ್ವಿತೀಯ ಪಂಡಿತರಾಗಿದ್ದರಲ್ಲದೆ, ಖ್ಯಾತ ವಿಮರ್ಶಕರೂ
ಲೇಖಕರೂ ಆಗಿದ್ದರು. ಹಿರಿಯಣ್ಣನವರ ಮೂಲಕ ಕೃಷ್ಣಮೂರ್ತಿಗಳ ಸಾಮರ್ಥ್ಯವನ್ನು
ಅರಿತಿದ್ದ ಕೃಷ್ಣಶಾಸ್ತ್ರಿಗಳು ಕೃಷ್ಣಮೂರ್ತಿಗಳನ್ನು ಕರೆದು, ಅವರ ಪಿಎಚ್.ಡಿ. ಪ್ರಬಂಧದ
ವಿಷಯವಾದ 'ಧ್ವನ್ಯಾಲೋಕ'ದ ವಿಮರ್ಶೆಯನ್ನು ಕನ್ನಡದಲ್ಲಿ ಬರೆದುಕೊಡುವಂತೆ
ಕೇಳಿದರು. ಅಲ್ಲದೆ 'ಧ್ವನ್ಯಾಲೋಕ' ಕೃತಿಯನ್ನು ಕನ್ನಡಕ್ಕೆ ಅನುವಾದ ಮಾಡಿಕೊಡುವ
ಕೆಲಸವನ್ನೂ ಕೃಷ್ಣಮೂರ್ತಿಗಳಿಗೆ ಒಪ್ಪಿಸಿದರು. ಕನ್ನಡದಲ್ಲಿ ಉನ್ನತ ವ್ಯಾಸಂಗ
ಮಾಡುವ ವಿದ್ಯಾರ್ಥಿಗಳು ಸಂಸ್ಕೃತದ ಅಲಂಕಾರಶಾಸ್ತ್ರಗ್ರಂಥಗಳನ್ನು ಅಧ್ಯಯನ
ಮಾಡಬೇಕಾದರೆ ಇಂಗ್ಲಿಷ್ ವಿದ್ವಾಂಸರ ಕೃತಿಗಳಿಗೆ ಮೊರೆಹೊಗಬೇಕಾಗಿತ್ತು.
ಕನ್ನಡದಲ್ಲಿಯೇ ಈ ಶಾಸ್ತ್ರಗ್ರಂಥಗಳು ಬಂದರೆ ಕನ್ನಡದ ಅಧ್ಯಯನಶೀಲರಿಗೆ
ತುಂಬ ಸಹಾಯವಾಗುತ್ತದೆ. ಇಂಗ್ಲಿಷ್ ಅನುವಾದಗಳಿಗಿಂತ ಕನ್ನಡ ಅನುವಾದವು
ಕನ್ನಡದ ಅಭ್ಯಾಸಿಗಳಿಗೆ ಅರ್ಥಮಾಡಿಕೊಳ್ಳಲು ಸುಲಭವಾಗುವುದು — ಎಂಬುದು
ಕೃಷ್ಣಶಾಸ್ತ್ರಿಗಳು ಸಂಸ್ಕೃತ ಅಲಂಕಾರಶಾಸ್ತ್ರಗ್ರಂಥಗಳನ್ನು ಕನ್ನಡಕ್ಕೆ ಅನುವಾದ
ಮಾಡಿಸಲು ನಡೆಸಿದ ಪ್ರಯತ್ನದ ಉದ್ದೇಶವಾಗಿತ್ತು. "ಈ ಕೆಲಸವನ್ನು ನೀನೇ
ಮಾಡಬೇಕು ; ಇದನ್ನು ಅಚ್ಚುಮಾಡಿಸುವ ಬಗ್ಗೆ ನೀನು ಚಿಂತಿಸಬೇಡ. ಪ್ರಬುದ್ಧ
ಕರ್ಣಾಟಕದ ಪ್ರತಿ ಸಂಚಿಕೆಯಲ್ಲೂ ಐವತ್ತು–ಐವತ್ತು ಪುಟಗಳಂತೆ ಅಚ್ಚುಮಾಡಿಸೋಣ.
ನಿನಗೆ ನಿನ್ನ ಲೇಖನಗಳ ಪಡಿಯಚ್ಚಿನ ಪ್ರತಿಗಳನ್ನು ಮಾಡಿಸಿಕೊಡುತ್ತೇನೆ" ಎಂದು
ಆಶ್ವಾಸನೆಯಿತ್ತರು. "'ಧ್ವನ್ಯಾಲೋಕ'ದಲ್ಲಿ ಬರುವ ಲಕ್ಷ್ಯಪದ್ಯಗಳಲ್ಲಿ ಕೆಲವನ್ನು ಅನು
ವಾದಮಾಡು, ನೋಡುತ್ತೇನೆ" ಎಂದರು. ಕೃಷ್ಣಮೂರ್ತಿಗಳು ಮಾಡಿಕೊಟ್ಟ ಕೆಲವು
ಲಕ್ಷ್ಯಪದ್ಯಗಳ ಅನುವಾದವನ್ನು ನೋಡಿ, "ಪದ್ಯಗಳು ಚೆನ್ನಾಗಿ ಬಂದಿವೆ. ಧೈರ್ಯದಿಂದ
ಕೆಲಸಮಾಡು" ಎಂದು ಪ್ರೋತ್ಸಾಹಿಸಿದರು. 'ಪ್ರಬುದ್ಧ ಕರ್ಣಾಟಕ'ದ ಎರಡು ಸಂಚಿಕೆ
ಗಳಲ್ಲಿ ಐವತ್ತು–ಐವತ್ತು ಪುಟಗಳ ಎರಡು ಕಂತುಗಳು ಅಚ್ಚಾದುವು. ಹೀಗಿರುವಾಗ
'ಪ್ರಬುದ್ಧ ಕರ್ಣಾಟಕ'ದ ಆಗಿನ ಸಂಪಾದಕರುಗಳಾದ ತ. ಸು. ಶಾಮರಾಯರು ಹಾಗೂ
ಎನ್. ಅನಂತರಂಗಾಚಾರ್ಯರು ಕೃಷ್ಣಮೂರ್ತಿಗಳ ಬಳಿಗೆ ಬಂದು, "ಪ್ರಬುದ್ಧ
ಕರ್ಣಾಟಕದ ಐವತ್ತು–ಐವತ್ತು ಪುಟಗಳನ್ನು ಕೆ. ಕೃಷ್ಣಮೂರ್ತಿಗಳಿಗೆ ಎರವಲಾಗಿ
ಕೊಟ್ಟುಬಿಟ್ಟಿದ್ದೀರಿ ಎಂದು ಬಹುಜನ ಆಕ್ಷೇಪಣೆ ಮಾಡುತ್ತಿದ್ದಾರೆ. ಆದುದರಿಂದ
ನೀವು ಐವತ್ತು–ಐವತ್ತು ಪುಟಗಳಿಗೆ ಬದಲಾಗಿ ಅದರ ಸಾರಾಂಶವನ್ನು ಹದಿನೈದು ಪುಟ
ಗಳ ಕೆಲವೇ ಕಂತುಗಳಲ್ಲಿ ಮುಗಿಸಿಬಿಡಿ" ಎಂದರು. ಅದರಂತೆ ಕೃಷ್ಣಮೂರ್ತಿ ಬರೆದು
ಕೊಟ್ಟರು. ಎ. ಆರ್. ಕೃಷ್ಣಶಾಸ್ತ್ರಿಗಳವರಿಗೆ ಈ ವಿಷಯ ತಿಳಿಯಿತು. ಅವರು
ಮುನ್ನುಡಿಯನ್ನು ಬರೆದುಕೊಡುವುದಾಗಿ ಹೇಳಿದ್ದರು. ಮುನ್ನುಡಿಯನ್ನು ಬರೆದುಕೊಡು

ವಂತೆ ಕೇಳಲು ಕೃಷ್ಣಮೂರ್ತಿಗಳು ಬಂದಾಗ, ''ಕಡೆಯ ಎರಡು ಲೇಖನಗಳನ್ನು ಚುಟುಕಿ ಚಪ್ಪರ ಮಾಡಿಬಿಟ್ಟಿದ್ದೀಯಲ್ಲ. ಹೇಗೆ ಮುನ್ನುಡಿ ಬರೆಯಲಿ? ಈಗ ನೀನು ಬರೆದಿರುವುದು 'ಧ್ವನ್ಯಾಲೋಕ'ಕ್ಕೆ ಪೀಠಿಕೆಯಾಗಲಿ. 'ಧ್ವನ್ಯಾಲೋಕ'ವನ್ನು ಪೂರ್ತಿ ಅನುವಾದ ಮಾಡಿ ಕೊಡು. ಅದನ್ನೂ ಕಂತುಗಳಲ್ಲಿ 'ಪ್ರಬುದ್ಧ ಕರ್ಣಾಟಕ'ದಲ್ಲಿ ಅಚ್ಚು ಹಾಕಿಸೋಣ'' ಎಂದು ಹೇಳಿ, ''ನೀನು ಇಲ್ಲಿಯೇ ಕುಳಿತಿರು. ನಾನು ಈಗಲೇ ಬರುತ್ತೇನೆ'' ಎಂದು ಮನೆಯಲ್ಲೇ ಕುಳ್ಳಿರಿಸಿ, ಸೈಕಲ್ ತೆಗೆದುಕೊಂಡು ವಾಣೀವಿಲಾಸಪುರಂನಲ್ಲಿದ್ದ ಕೆ. ವಿ. ಪುಟ್ಟಪ್ಪನವರ ಮನೆಗೆ ಹೋದರು. 'ಪ್ರಬುದ್ಧ ಕರ್ಣಾಟಕ'ದಲ್ಲಿ ೪೦೦ ಪುಟಗಳನ್ನು ಕಂತಿನಂತೆ ಪ್ರಕಟಿಸಲು ಅವರ ಅನುಮತಿಯನ್ನು ಪಡೆದುಕೊಂಡು ಬಂದದ್ದಲ್ಲದೆ, 'ಕೃಷ್ಣಮೂರ್ತಿಗಳು ಬರೆದದ್ದನ್ನು ನೇರವಾಗಿ ಪೆಸ್ಸಿ ಮುದ್ರಣಾಲಯಕ್ಕೆ ಅಚ್ಚಿಗಾಗಿ ಕಳುಹಿಸಬಹುದು' ಎಂಬ ಪರವಾನಗಿಯನ್ನೂ ಪಡೆದುಕೊಂಡು ಬಂದರು. ಹೀಗೆ ಆನಂದವರ್ಧನನ 'ಧ್ವನ್ಯಾಲೋಕ', ಭಾಮಹನ 'ಕಾವ್ಯಾಲಂಕಾರ', ಮಮ್ಮಟನ 'ಕಾವ್ಯಪ್ರಕಾಶ', ದಂಡಿಯ 'ಕಾವ್ಯಾದರ್ಶ' ಮೊದಲಾದವುಗಳ ಕನ್ನಡ ಅನುವಾದಗಳು ಕಂತುಕಂತಾಗಿ 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟವಾದುವು. ಮುಂದೆ ಎಚ್. ಎಂ. ಶಂಕರನಾರಾಯಣರಾಯರು ಕೃಷ್ಣಮೂರ್ತಿಗಳಿಂದ ಅನುವಾದಗೊಂಡ ಸಂಸ್ಕೃತದ ಅಲಂಕಾರಶಾಸ್ತ್ರಗ್ರಂಥಗಳನ್ನು ತಮ್ಮ ಪ್ರಕಟನಸಂಸ್ಥೆಯಾದ ಶಾರದಾಮಂದಿರದ ಮೂಲಕ ಪ್ರಕಟಿಸಿದರು. ಕಾದಂಬರಿಗಳನ್ನೂ ಕಥೆಗಳನ್ನೂ ಪ್ರಕಟಿಸುವ ಪ್ರಕಟನಕಾರರಿಗೆ ಕೊರತೆಯೇನೂ ಇರಲಿಲ್ಲ. ದುಬಾರಿ ವೆಚ್ಚದ ಹಾಗೂ ಹಾಕಿದ ಹಣವು ಸಮರ್ಪಕವಾಗಿ ಹಿಂದಿರುಗಿ ಬರುವ ಭರವಸೆಯಿಲ್ಲದ ಸಂಸ್ಕೃತದ ಅಲಂಕಾರಶಾಸ್ತ್ರಗ್ರಂಥಗಳ ಕನ್ನಡ ಅನುವಾದವನ್ನು ಪ್ರಕಟಿಸುವುದು ಒಂದು ಸಾಹಸವೇ ಆಗಿದ್ದಿತು. ಆದರೆ ಎಚ್. ಎಂ. ಶಂಕರನಾರಾಯಣರಾಯರ ಪ್ರಕಟನ ಸಾಹಸವೂ ಕೃಷ್ಣಮೂರ್ತಿಗಳ ಸಮರ್ಥ ಅನುವಾದಗಳೂ ಕನ್ನಡದಲ್ಲಿ ಅಲಂಕಾರಶಾಸ್ತ್ರವನ್ನು ಅಧ್ಯಯನ ಮಾಡುವವರಿಗೆ ತುಂಬ ಸಹಾಯವಾದುವು.

ಕೃಷ್ಣಮೂರ್ತಿಗಳು ೧೯೪೯–೫೨ರ ವರೆಗೆ ಮೈಸೂರಿನ ಶಾರದಾವಿಲಾಸ ಕಾಲೇಜಿನಲ್ಲಿ ಸೇವೆ ಸಲ್ಲಿಸಿದ ಬಳಿಕ, ಉತ್ತರಕನ್ನಡ ಜಿಲ್ಲೆಯ ಕುಮಟದಲ್ಲಿ ಆರಂಭವಾಗಿದ್ದ ಕೆನರಾ ಕಾಲೇಜಿಗೆ ಸಂಸ್ಕೃತಪ್ರಾಧ್ಯಾಪಕರಾಗಿ ನೇಮಕಗೊಂಡು, ಅಲ್ಲಿ ೧೯೫೯ನೆಯ ಇಸವಿಯ ವರೆಗೂ ಇದ್ದರು. ಅವರ ಲೇಖನವ್ಯವಸಾಯವು ಉದ್ದಕ್ಕೂ ನಿರಂತರವಾಗಿ ನಡೆಯುತ್ತಲೇ ಇದ್ದಿತು. ಸಂಸ್ಕೃತ ಅಲಂಕಾರ ಗ್ರಂಥಗಳ ಅನುವಾದಗಳಲ್ಲದೆ, ಸಂಸ್ಕೃತ ನಾಟಕಗಳಾದ ಭಾಸನ 'ಪ್ರತಿಮಾನಾಟಕ' ಮತ್ತು 'ಯಜ್ಞಫಲ', ಭವಭೂತಿಯ 'ಉತ್ತರ ರಾಮಚರಿತ', ಶೂದ್ರಕನ 'ಮೃಚ್ಛಕಟಿಕ' ಈ ಮೊದಲಾದ ನಾಟಕಗಳು ಮತ್ತು ಭಾರವಿಯ 'ಕಿರಾತಾರ್ಜುನೀಯ' ಕಾವ್ಯ—ಇವುಗಳ ಕನ್ನಡ ಅನುವಾದಗಳೂ ಪ್ರಕಟಗೊಂಡುವು. ಸಂಸ್ಕೃತ ಅಲಂಕಾರಶಾಸ್ತ್ರವಿಷಯದ ಇಂಗ್ಲಿಷ್ ಕೃತಿಗಳೂ ಹಲವಾರು ವಿದ್ವತ್ ಪ್ರಬಂಧಗಳೂ ಕೃಷ್ಣಮೂರ್ತಿಗಳ ಲೇಖನಿಯಿಂದ ಹೊರಬಂದುವು. ೧೯೫೯ರಲ್ಲಿ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿ ನಿಯುಕ್ತ

ರಾದರು. ೧೯೮೪ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ನಿವೃತ್ತರಾದ ಮೇಲೆ. ವಿ. ಕೆ. ಗೋಕಾಕರು ಪುಟ್ಟಪರ್ತಿಯಲ್ಲಿರುವ ಸತ್ಯಸಾಯಿ ಉನ್ನತ ಶಿಕ್ಷಣ ಸಂಸ್ಥೆಗೆ **(Satya Sai Institution of Higher Learning)** ಕರಸಿಕೊಂಡರು. ಈ ವೇಳೆಗೆ ಕೃಷ್ಣಮೂರ್ತಿಗಳು ತಮ್ಮ ಸಂಶೋಧನೆಗಳಿಂದಲೂ ತಮ್ಮ ವಿದ್ವತ್ ಲೇಖನ ಗಳಿಂದಲೂ ದೇಶವಿದೇಶಗಳ ಶ್ರೇಷ್ಠಸಂಸ್ಕೃತವಿದ್ವಾಂಸರ ಶ್ರೇಣಿಯಲ್ಲಿ ಒಬ್ಬರೆಂದು ಪರಿಗಣಿತರಾಗಿದ್ದರು.

ತಮ್ಮ ಜೀವನದಲ್ಲಿ ಹೇಗೋ ತಮ್ಮ ತರಗತಿಗಳಲ್ಲಿಯೂ ಹಾಗೆಯೇ ಕೆ. ಕೃಷ್ಣಮೂರ್ತಿ ಗಳು ಕಟ್ಟುನಿಟ್ಟು. ವಿದ್ಯಾರ್ಥಿಗಳು ಕಷ್ಟಪಟ್ಟು ವಿದ್ಯಾರ್ಜನೆಮಾಡುವುದೇ ಅವರ ಪ್ರಥಮ ಗುರಿ ಎಂದು ನಂಬಿದ್ದರು. ಆದ್ದರಿಂದ ಅಧ್ಯಾಪಕರು ವಿದ್ಯಾರ್ಥಿಗಳಿಗೆ ಕಟ್ಟುನಿಟ್ಟಾಗಿ ಪಾಠ ಮಾಡಬೇಕು ಮತ್ತು ಅವರಿಗೆ ಯಾವ ಸಂಶಯವೂ ಉಳಿಯದಂತೆ ಪಾಠಗಳು ಮನದಟ್ಟಾಗಬೇಕು ಎಂಬ ಖಚಿತವಾದ ಅಭಿಪ್ರಾಯ ಹೊಂದಿದ್ದರು. ತಮ್ಮ ಸಂಸ್ಕೃತ ವಿಭಾಗದ ಅಧ್ಯಾಪಕರು ಕೂಡ ತಮ್ಮಂತೆಯೇ ತರಗತಿಗಳಲ್ಲಿ ಮನಃಪೂರ್ವಕವಾಗಿ ಪಾಠ ಮಾಡಬೇಕು ಮತ್ತು ಪಾಠ ಮಾಡುವ ಮೊದಲು ತಾವು ಪೂರ್ವಸಿದ್ಧತೆಯನ್ನು ಮಾಡಿ ಕೊಂಡು ಬರಬೇಕು ಎಂದು ನಿರೀಕ್ಷಿಸುತ್ತಿದ್ದರು. ಯಾರಿಗೆ ಎಲ್ಲಿ ಸಂದೇಹ ಬರಲಿ, ಇದು ಕಷ್ಟ, ತಿಳಿಯಲಿಲ್ಲ ಎನ್ನಲಿ, ಅವರನ್ನು ಕೂರಿಸಿಕೊಂಡು ಅವರ ಸಮಸ್ಯೆಗಳನ್ನು ಪರಿಹರಿಸಿ ಕೊಡುವುದಕ್ಕೆ ಕೃಷ್ಣಮೂರ್ತಿಗಳು ಸ್ವಲ್ಪವೂ ಹಿಂದೇಟು ಹಾಕುತ್ತಿರಲಿಲ್ಲ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇದ್ದ ಕಾಲದಲ್ಲಿ ೨೫ ಜನರನ್ನು ಡಾಕ್ಟರೇಟ್‌ಗೆ ಸಿದ್ಧಪಡಿಸಿದರು. ಅವರೆಲ್ಲ ಇಂದು ದೇಶವಿದೇಶಗಳಲ್ಲಿ ಸಂಸ್ಕೃತವಿಭಾಗಗಳಲ್ಲಿ ಉತ್ತಮ ಸೇವೆಯನ್ನು ಸಲ್ಲಿ ಸುತ್ತ ಒಳ್ಳೆಯ ಹೆಸರನ್ನು ಗಳಿಸಿರುವರು. ಒಬ್ಬ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕನು ಇಪ್ಪತ್ತೈದು ಜನರನ್ನು ಡಾಕ್ಟರೇಟ್ ಪ್ರಶಸ್ತಿಗೆ ಮಾರ್ಗದರ್ಶನಮಾಡಿ ಸಿದ್ಧಪಡಿಸು ವುದು ಎಂದರೆ ಸಾಮಾನ್ಯವಿಷಯವೇನಲ್ಲ. ಪುಟ್ಟಪರ್ತಿಯ ಸತ್ಯಸಾಯಿ ಉನ್ನತಶಿಕ್ಷಣ ಸಂಸ್ಥೆಯಲ್ಲಿ ಕೃಷ್ಣಮೂರ್ತಿಗಳು ಭಾರತೀಯ ಇತಿಹಾಸ ಮತ್ತು ಸಂಸ್ಕೃತಿ ಪೀಠದ ಅಧ್ಯಕ್ಷರಾಗಿ ನೇಮಕಗೊಂಡು, ಅಲ್ಲಿಯೂ ಐದು ಜನ ವಿದ್ಯಾರ್ಥಿಗಳನ್ನು ಪಿಎಚ್.ಡಿಗೆ ಸಿದ್ಧಗೊಳಿಸಬೇಕಾದ ದುರ್ಭರ ಜವಾಬ್ದಾರಿಯನ್ನು ಹೊರಬೇಕಾಯಿತು. ಆ ಕೆಲಸವನ್ನು ಸಮರ್ಪಕವಾಗಿ ನೆರವೇರಿಸಿ ಆ ವಿದ್ಯಾರ್ಥಿಗಳು ಪಿಎಚ್.ಡಿ. ಪದವಿಯನ್ನು ಪಡೆದು ಕೊಳ್ಳಲು ಸಹಾಯ ಮಾಡಿದರು. ಈಗ ಕೃಷ್ಣಮೂರ್ತಿಗಳು ಮೈಸೂರಿಗೆ ಬಂದು ನೆಲಸಿದ್ದಾರೆ.

ಕೃಷ್ಣಮೂರ್ತಿಗಳು ಜ್ಞಾನವನ್ನು ಸಂಪಾದಿಸಬೇಕು, ಸಂಶೋಧನೆ ನಡೆಸಬೇಕು, ತಾನು ತಿಳಿದದ್ದನ್ನು ಪ್ರಕಟಪಡಿಸಬೇಕು ಎಂಬ ಪ್ರಾಮಾಣಿಕಧ್ಯೇಯವನ್ನು ಹೊಂದಿರುವರೇ ಹೊರತು ಎಂದೂ ಯಾವ ಪ್ರಚಾರಕ್ಕಾಗಿಯೂ ಕೆಲಸ ಮಾಡಿದವರಲ್ಲ. ತಮ್ಮ ಹೆಸರನ್ನು ಪ್ರಚುರಪಡಿಸಿಕೊಳ್ಳುವುದಕ್ಕಾಗಿ ಎಂದೂ ತಾವಾಗಿ ಒಂದು ಲೇಖನವನ್ನೂ ಬರೆಯಲಿಲ್ಲ; ಒಂದು ಭಾವಚಿತ್ರವನ್ನೂ ಕೊಡಲಿಲ್ಲ. ತಮ್ಮ ಲೇಖನಗಳ ಮೇಲೆ

ಬರುತ್ತಿದ್ದ ಅಮುಖ್ಯವಿಮರ್ಶೆಗಳನ್ನು ಅವರು ಗಮನಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ಆದರೆ ಇತರ ವಿದ್ವಾಂಸರ ವಾದದಲ್ಲಿ ತಪ್ಪಿದೆ ಎಂದು ಮನದಟ್ಟಾದಾಗ, ಸತ್ಯವನ್ನು ತಿಳಿಸಬೇಕೆಂಬ ಉದ್ದೇಶದಿಂದ ಮಾತ್ರ ಅಂಥ ವಾದಗಳ ಸರಿತಪ್ಪುಗಳನ್ನು ಎತ್ತಿತೋರಿಸುತ್ತಿದ್ದರು. ತಮ್ಮ ಲೇಖನದಲ್ಲಿ ಪೊಳ್ಳುವಾದ, ಅರ್ಥವಾಗದ ಟೀಕೆ, ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ನುಡಿಯುವುದು—ಇವುಗಳಿಗೆ ಎಂದೂ ಅವಕಾಶಕೊಡುತ್ತಿರಲಿಲ್ಲ. ತಾವು ಮಂಡಿಸುವ ವಾದವು ಸರಿಯಾಗಿದೆ ಎಂಬುದನ್ನು ಖಚಿತಪಡಿಸಿಕೊಂಡೇ ಬರೆಯಲು ಕೈಹಾಕುತ್ತಿದ್ದರು. ಕಾಲೇಜಿನಲ್ಲಾಗಲಿ ವಿಶ್ವವಿದ್ಯಾನಿಲಯದಲ್ಲಾಗಲಿ ತಮ್ಮ ಕರ್ತವ್ಯದ ಕಡೆಗೆ ಪೂರ್ಣಗಮನವನ್ನು ಕೇಂದ್ರೀಕರಿಸುತ್ತಿದ್ದರೇ ಹೊರತು ಯಾವ ರಾಜಕೀಯಕ್ಕೂ ತಲೆ ಹಾಕಿದವರಲ್ಲ. ಅದರಲ್ಲಿ ಅವರಿಗೆ ನಂಬಿಕೆಯೂ ಇರಲಿಲ್ಲ. 'ಧ್ವನ್ಯಾಲೋಕ'ದ ಇಂಗ್ಲಿಷ್ ಅನುವಾದವು ಪ್ರಕಟವಾದಾಗ, ಕೆ. ಆರ್. ಶ್ರೀನಿವಾಸಯ್ಯಂಗಾರ್ ಅವರು ಕೃಷ್ಣಮೂರ್ತಿಗಳ ಬಗ್ಗೆ ಪ್ರಕಟಪಡಿಸಿರುವ ಅಭಿಪ್ರಾಯವು ಉಲ್ಲೇಖನೀಯವಾಗಿದೆ: ''ಯಾವುದೇ ಆಸಕ್ತ ಗೋಷ್ಠಿ ಅಥವಾ ಪಕ್ಷಗಳಿಗೆ ಅಂಟಿಕೊಳ್ಳದೆ, ಎಷ್ಟೋ ಕಷ್ಟಗಳು ಎದುರು ಬಂದರೂ ಧೈರ್ಯಗೆಡದೆ, ತಮಗೆ ಯೋಗ್ಯವಾದ ಮಾನ್ಯತೆ ಅಥವಾ ಉತ್ತೇಜನ ದೊರೆಯಲಿ ಬಿಡಲಿ, ತಮ್ಮ ವಿದ್ವತ್‌ಪ್ರಪಂಚದಲ್ಲಿ ತಲ್ಲೀನನಾಗಿರುವ ಕೆ. ಕೃಷ್ಣಮೂರ್ತಿ ತಾವು ಏಕಾಂಗಿಯಾಗಿ ತಮ್ಮ ದಾರಿಯಲ್ಲಿ ಮುನ್ನುಗ್ಗಿ ಸಂಸ್ಕೃತ ಪಾಂಡಿತ್ಯಪ್ರಪಂಚದಲ್ಲಿ ಅಧಿಕಾರಯುತಸ್ಥಾನವನ್ನು ಗಳಿಸಿದ್ದಾರೆ.' ಕಟ್ಟುನಿಟ್ಟಾದ ಅಧ್ಯಯನ, ಅವಿರತ ಸಂಶೋಧನೆ ಇವುಗಳ ಜತೆಗೆ ಸೇರಿದ ಪ್ರತಿಭೆ, ಸ್ಮರಣಶಕ್ತಿ—ಇವೂ ಕೃಷ್ಣಮೂರ್ತಿಗಳ ಸಾಧನೆಗೆ ಕಾರಣಗಳಾಗಿವೆ.

ಕೃಷ್ಣಮೂರ್ತಿಗಳು ಅನೇಕ ಹಿರಿಯ ವಿದ್ವಾಂಸರ ಪ್ರೋತ್ಸಾಹ, ಪ್ರೀತಿ ಮತ್ತು ಉತ್ತೇಜನಗಳನ್ನು ಗಳಿಸಿದ್ದಾರೆ. ಎ. ಆರ್. ಕೃಷ್ಣಶಾಸ್ತ್ರೀ, ಡಿ. ವಿ. ಗುಂಡಪ್ಪ, ಎಂ. ಹಿರಿಯಣ್ಣ, ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ ಮೊದಲಾದವರು ಇವರ ಸಾಮರ್ಥ್ಯವನ್ನೂ ವಿದ್ವತ್ತನ್ನೂ ಗುರುತಿಸಿ ಬೆನ್ನು ತಟ್ಟಿದ್ದಾರೆ; ಕೆಲಸಮಾಡಲು ಸ್ಫೂರ್ತಿಯನ್ನಿತ್ತಿದ್ದಾರೆ. ಕೃಷ್ಣಮೂರ್ತಿಗಳ ಜೀವನದಲ್ಲಿ ಇಂಥ ಎಷ್ಟೋ ಅಮೂಲ್ಯ ಘಟನೆಗಳು ನಡೆದಿವೆ. ಹಿರಿಯಣ್ಣನವರೂ ಕೃಷ್ಣಶಾಸ್ತ್ರಿಗಳೂ ಯಾವ ರೀತಿಯಲ್ಲಿ ಪ್ರೋತ್ಸಾಹಿಸಿದರು ಎಂಬುದನ್ನು ಆಗಲೇ ನೋಡಿದ್ದೇವೆ. ಕೃಷ್ಣಮೂರ್ತಿಗಳು ತಮ್ಮ ಸಂಶೋಧನೆಯ ಕಾರ್ಯಕ್ಕೆ ತಮಗೆ ಇಂಬುಕೊಟ್ಟು ಸಂತೋಷವನ್ನುಂಟುಮಾಡಿದ ಇನ್ನೊಂದು ಘಟನೆಯನ್ನು ಯಾವಾಗಲೂ ಸ್ಮರಿಸುತ್ತಿರುತ್ತಾರೆ: ಒಂದು ಸಲ ಎ. ಆರ್. ಕೃಷ್ಣಶಾಸ್ತ್ರಿಗಳು ಕೃಷ್ಣಮೂರ್ತಿಗಳನ್ನು ಬೆಂಗಳೂರಿನಲ್ಲಿ ಡಿ. ವಿ. ಗುಂಡಪ್ಪನವರ ಬಳಿಗೆ ಕರೆದುಕೊಂಡು ಹೋದರು. ''ಬೇರೆಯವರ ಕೈಯಲ್ಲಿ ತಪ್ಪು ಬಂದರೂ ಶಾಸ್ತ್ರದಲ್ಲಿ ಇವರ ಕೈಯಲ್ಲಿ ತಪ್ಪು ಬರುವುದಿಲ್ಲ ಎಂದು ಹಿರಿಯಣ್ಣ ನನ್ನ ಕೈಯಲ್ಲಿ ಹೇಳಿದ್ದಾರೆ. ಇವರು ಅಂಥಿಂಥ ವ್ಯಕ್ತಿಯಲ್ಲ''—ಎಂದು ಕೃಷ್ಣಶಾಸ್ತ್ರಿಗಳು ಕೃಷ್ಣಮೂರ್ತಿಯವರನ್ನು ಗುಂಡಪ್ಪನವರಿಗೆ ಪರಿಚಯಮಾಡಿಕೊಟ್ಟರು. ಆ ಹೊತ್ತಿಗಾಗಲೆ 'ಕನ್ನಡ ಕಾವ್ಯಾಲಂಕಾರ'

ವನ್ನು ಗುಂಡಪ್ಪನವರು ನೋಡಿದ್ದರು. ''ಕನ್ನಡ ಕಾವ್ಯಾಲಂಕಾರ'ದ ಮೊದಲಿನಲ್ಲಿ 'ಅರ್ಪಣೆ' ಶೀರ್ಷಿಕೆಯಡಿಯಲ್ಲಿ ನಿಮ್ಮ ತೀರ್ಥರೂಪರವರ ಬಗ್ಗೆ ಬಂದಿರುವ ಈ ಕಂದ ಪದ್ಯದಲ್ಲಿ ಎರಡನೆಯ ಚರಣ ಹಿಡಿಯುವಂತೆ ಕಾಣುತ್ತದಲ್ಲ'' ಎಂದು ಗುಂಡಪ್ಪನವರು ಕೇಳಿದರು. 'ಕನ್ನಡದಲ್ಲಿ ಯತಿ ಇಲ್ಲದೆ ಇರುವುದರಿಂದ ಹೀಗೆ ತೋರಬಹುದು' ಎಂದು ಕೃಷ್ಣಮೂರ್ತಿಗಳು ಹೇಳಿ, ಪಂಪ, ಷಡಕ್ಷರಿ ಮೊದಲಾದವರ ಒಂದೆರಡು ಪದ್ಯಗಳನ್ನು ತೆಗೆದುಕೊಂಡು ಉದಾಹರಣೆಯನ್ನು ಕೊಟ್ಟರು. ಛಂದಸ್ಸಿನ ಬಗ್ಗೆ ಅವರಿಬ್ಬರ ನಡುವೆ ವಿಚಾರವಿನಿಮಯಗಳಾದುವು. ಡಿ. ವಿ. ಗುಂಡಪ್ಪನವರಿಗೆ ಕೃಷ್ಣಮೂರ್ತಿಗಳು ಛಂದಸ್ಸಿನ ಬಗ್ಗೆ ಹೊಂದಿರುವ ಜ್ಞಾನವನ್ನು ಕಂಡು ಸಂತೋಷವಾಯಿತು. ಒಳಕ್ಕೆ ಹೋಗಿ ತಮ್ಮ ಎರಡು ಕೃತಿಗಳನ್ನು ತಂದು, 'ಶ್ರೀರಾಮ ಪರೀಕ್ಷಣಂ'ನಲ್ಲಿ ''ಪರಮಾನ್ನಕೊಟ್ಟವರಿಗೆ ಹುರಿಹಿಟ್ಟಾದರೂ ಕೊಡಬೇಡವೆ" ಎಂದೂ 'ಅಂತಃಪುರಗೀತೆ'ಯಲ್ಲಿ, "ಕೀರು ಕೊಟ್ಟವರಿಗೆ ಈ ಕಾಕಂಬಿ ಮುಯ್ಯಿ'' ಎಂದೂ ಸ್ವಹಸ್ತದಿಂದ ಬರೆದು ಸಹಿಮಾಡಿ ಅವನ್ನು ಕೃಷ್ಣಮೂರ್ತಿಗಳಿಗೆ ಕೊಟ್ಟು ಆಲಿಂಗಿಸಿಕೊಂಡು ಹರಸಿದರು. ಇದು ನಡೆದುದು ೧೯೫೮ರ ಜೂನ್ ಎರಡನೆಯ ತಾರೀಖು. ಆ ಹಿರಿಯ ವಿದ್ವಾಂಸರಿಗೆ ಮೆಚ್ಚುಗೆಯಾದ ಆ ಪುಸ್ತಕಗಳನ್ನು ನಿಧಿಯಂತೆ ಕಾಪಾಡಿಕೊಂಡು ಬಂದಿದ್ದಾರೆ, ಕೃಷ್ಣಮೂರ್ತಿಗಳು.

ರಾಷ್ಟ್ರಕವಿ ಕೆ. ವಿ. ಪುಟ್ಟಪ್ಪನವರು ಕೃಷ್ಣಮೂರ್ತಿಗಳ ವಿದ್ವತ್ತನ್ನು ಗುರುತಿಸಿ ಮೆಚ್ಚಿಕೊಂಡಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಪ್ರಕಟವಾದ 'ಸಂಸ್ಕೃತಕಾವ್ಯ' ಗ್ರಂಥದ ಮುನ್ನುಡಿಯಲ್ಲಿ, ''ಎ. ಆರ್. ಕೃಷ್ಣಶಾಸ್ತ್ರಿಗಳ 'ಸಂಸ್ಕೃತ ನಾಟಕ' ಕೃತಿಗೆ ಪೂರಕವಾಗಿ ಕೃಷ್ಣಮೂರ್ತಿಗಳ 'ಸಂಸ್ಕೃತ ಕಾವ್ಯ' ಬಂದಿದೆ'' ಎಂದು ಹೇಳುತ್ತ, ''ಇದರಲ್ಲಿಯ ಸಿದ್ಧಾಂತಗಳ ವಿಚಾರದಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿರುವುದು ಸಹಜವೆ. ಆದರೆ ಅವರ ವಿಚಾರಸರಣಿ, ವಸ್ತುಸಂಗ್ರಹ, ನಿರೂಪಣಾವಿಧಾನ—ಇವು ಅಭಿನಂದನಾರ್ಹವಾದುವು. ಡಾ. ಕೃಷ್ಣಮೂರ್ತಿಗಳು ಸಂಸ್ಕೃತ ಭಾಷೆ ಸಾಹಿತ್ಯಗಳಲ್ಲಿ ಆಳವಾದ ಪಾಂಡಿತ್ಯವುಳ್ಳವರು. ಸಂಸ್ಕೃತ ಸಾಹಿತ್ಯರಾಶಿಯನ್ನೂ ಅಲಂಕಾರ ಕಾವ್ಯಮೀಮಾಂಸಾದಿ ಶಾಸ್ತ್ರಗ್ರಂಥಗಳನ್ನೂ ಕನ್ನಡಕ್ಕೆ ಪರಿವರ್ತನೆ ಮಾಡುವ ಪ್ರಯತ್ನದಲ್ಲಿ ಇವರ ಪಾಲು ಅತ್ಯಂತ ಶ್ಲಾಘನೀಯವಾಗಿದೆ. ಇವರ 'ಧ್ವನ್ಯಾಲೋಕ', 'ಕಾವ್ಯಾಲಂಕಾರ' ಮೊದಲಾದ ಗ್ರಂಥಗಳು ಅವರ ವಿದ್ವತ್ತಿಗೂ ಪ್ರತಿಭೆಗೂ ಸಾಕ್ಷಿಯಾಗಿವೆ'' ಎಂದು ಪ್ರಶಂಸೆ ಮಾಡಿದ್ದಾರೆ. ಒಂದು ಬಾರಿ ಕೃಷ್ಣಮೂರ್ತಿಗಳು ರಾಷ್ಟ್ರಕವಿಗಳನ್ನು ಭೇಟಿಮಾಡಲು ಹೋಗಿದ್ದರು. ಪುಟ್ಟಪ್ಪನವರು ಮಾತನಾಡುತ್ತ, ತಾವು ಹಿಂದಿನ ದಿವಸ ಬರೆದಿದ್ದ 'ಶ್ರೀ ರಾಮಾಯಣದರ್ಶನ'ದ ೨೫ ಸಾಲುಗಳನ್ನು ತೋರಿಸಿ, ''ಇದರ ಛಂದಸ್ಸಿನಲ್ಲಿ ಏನು ವ್ಯತ್ಯಾಸ ಕಾಣಿಸುತ್ತದೆ ಹೇಳಿ'' ಎಂದು ಕೇಳಿದರು. ಅವುಗಳನ್ನು ನೋಡಿದ ಕೃಷ್ಣಮೂರ್ತಿಗಳು ''ಈ ಸಾಲುಗಳಲ್ಲಿ ಎಂಟು ಮಾತ್ರೆ ಗಣಗಳು ಕಾಣಿಸುತ್ತಿವೆಯಲ್ಲವೇ'' ಎಂದರು. ಆ ಛಂದಸ್ಸನ್ನು ಗುರುತಿಸಿದ ಬಗ್ಗೆ ಪುಟ್ಟಪ್ಪನವರಿಗೆ ಸಂತೋಷವಾಯಿತು. ಅಲ್ಲಿರುವ ಹಾಗೆಯೇ ಕೃಷ್ಣಮೂರ್ತಿಗಳು 'ಶ್ರೀ ರಾಮಾಯಣದರ್ಶನ'ದ

ಆ ಸಾಲುಗಳನ್ನು ಕಂದಪದ್ಯಗಳಲ್ಲಿ ಬರೆದು, ಕವಿಗಳಿಗೆ ತೋರಿಸಿದರು. ಕಂದಪದ್ಯಗಳನ್ನು ಇಷ್ಟು ಸರಳವಾಗಿ ಸುಂದರವಾಗಿ ರಚಿಸಿದ ಬಗ್ಗೆ ಪುಟ್ಟಪ್ಪನವರಿಗೆ ತುಂಬ ಸಂತೋಷವಾಯಿತು. ಪುಟ್ಟಪ್ಪನವರು ಯಾರಲ್ಲಿ ಸಾಮರ್ಥ್ಯವಿದೆ, ಯಾರು ಪರಿಷ್ಕಾರವಾಗಿ ಕೆಲಸ ಮಾಡಬಲ್ಲರು ಎಂಬುದನ್ನು ಚೆನ್ನಾಗಿ ಬಲ್ಲವರಾಗಿದ್ದರು. ಪಠ್ಯಪುಸ್ತಕ ಸಮಿತಿ ಕೃಷ್ಣಮೂರ್ತಿಗಳ ಅನುವಾದವಾದ ಭಾರವಿಯ 'ಕಿರಾತಾರ್ಜುನೀಯ' ಕಾವ್ಯದ ಮೊದಲ ಆರು ಅಧ್ಯಾಯಗಳನ್ನು ಪಠ್ಯಪುಸ್ತಕವಾಗಿ ಆರಿಸಿರುವುದಾಗಿ ಕೃಷ್ಣಮೂರ್ತಿಗಳಿಗೆ ಮಾರ್ಚ್ ತಿಂಗಳಿನಲ್ಲಿ ಒಂದು ಪತ್ರ ಬಂದಿತು. ಇದಕ್ಕೆ ಪುಟ್ಟಪ್ಪನವರೇ ಕಾರಣ ಎಂಬುದರಲ್ಲಿ ಸಂದೇಹವಿರಲಿಲ್ಲ. 'ಕಿರಾತಾರ್ಜುನೀಯ' ಸಂಸ್ಕೃತದ ಒಂದು ಶ್ರೇಷ್ಠಕಾವ್ಯ, ಜತೆಗೆ ಕಠಿನವೂ ಅಹುದು. ಆದರೆ ಉತ್ತಮವಾದ, ರಸವತ್ತಾದ ಕಾವ್ಯ. ಪಠ್ಯಪುಸ್ತಕದ ಮೂಲಕ ಆ ಕಾವ್ಯದ ಪರಿಚಯ ನಮ್ಮ ವಿದ್ಯಾರ್ಥಿಗಳಿಗಾಗಲಿ ಎಂಬ ಉದ್ದೇಶದಿಂದ ಅದನ್ನು ಪಠ್ಯಪುಸ್ತಕವಾಗಿ ಆರಿಸಲಾಗಿತ್ತು. ಕೃಷ್ಣಮೂರ್ತಿಗಳು ಸಮರ್ಥವಾಗಿ 'ಕಿರಾತಾರ್ಜುನೀಯ'ವನ್ನು ಅನುವಾದ ಮಾಡಿಕೊಟ್ಟಿದ್ದರು. ಜೂನ್ ತಿಂಗಳ ಹೊತ್ತಿಗೆ ಪಠ್ಯಪುಸ್ತಕ ವಿದ್ಯಾರ್ಥಿಗಳ ಕೈಸೇರಿತು.

ಇಂಥ ಅನೇಕ ಘಟನೆಗಳು ಕೃಷ್ಣಮೂರ್ತಿಗಳ ಜೀವನದಲ್ಲಿ ನಡೆದಿವೆ. ಕೃಷ್ಣಮೂರ್ತಿಗಳಿಗೆ ಮೈಸೂರು ವಿಶ್ವವಿದ್ಯಾನಿಲಯದ ಕವಿಗಳು, ವಿದ್ವಾಂಸರು ಮೊದಲಾದವರ ಸಹಯೋಗವೂ ಪ್ರೀತಿಯೂ ದೊರೆತಿವೆ. ಏ. ಸೀ., ತೀ. ನಂ. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್, ವಿ. ಕೃ. ಗೋಕಾಕ್ ಮೊದಲಾದವರ ಸಾಹಚರ್ಯವೂ ಪ್ರೋತ್ಸಾಹವೂ ದೊರೆತುವು. ಅಲ್ಲದೆ ಧಾರವಾಡದಲ್ಲಿದ್ದಾಗ ವಿ. ಕೃ. ಗೋಕಾಕ್, ವರಕವಿ ದ. ರಾ. ಬೇಂದ್ರೆ ಇವರುಗಳ ಸಹವರ್ತಿಗಳಾಗಿದ್ದು, ಅವರ ಜತೆ ಕಳೆದ ರಸನಿಮಿಷಗಳೆಷ್ಟೋ. ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಪಾವಟೆ, ಶಿ. ಚ. ನಂದೀಮಠ ಮೊದಲಾದವರಿಂದಲೂ ಪ್ರೀತಿಗೌರವಗಳನ್ನು ಸಂಪಾದಿಸಿದ್ದರು.

ಕೃಷ್ಣಮೂರ್ತಿಗಳ ಜೀವನದಲ್ಲಿ ವಿದ್ವಾಂಸರ ಕವಿಗಳ ಸಂಪರ್ಕವಲ್ಲದೆ, ಮಹಾಮಹಿಮರ ಸಂಪರ್ಕಗಳೂ ಅವರಿಗೆ ಆಗಿವೆ. ಆಗ್ರಾದ ಬಳಿಯ ತಾಂಡ್ಲದಲ್ಲಿದ್ದ ಪಂಡಿತ ಮಿಹಿಲಾಲ್ ಗುರುಗಳ ಸತ್ಸಂಗದ ಪರಿಚಯವನ್ನು ಕೃಷ್ಣಮೂರ್ತಿಗಳು ಧಾರವಾಡದಲ್ಲಿ ಇದ್ದಾಗ ಪಡೆದರು. ಅವರ ವಿಧಾನದಲ್ಲಿ ಧ್ಯಾನದ ಮೂಲಕ ಅನುಭಾವದ ಅನುಭವವನ್ನು ಪಡೆಯುವ ಸದವಕಾಶ ದೊರೆಯಿತು. ಆಧ್ಯಾತ್ಮಿಕಜ್ಞಾನವು ಗುರುಕೃಪೆಯಿಂದ ಲಭ್ಯವಾಗುವುದು ಎಂಬುದು ಸತ್ಸಂಗದ ದೃಢನಿಲುವು. ಈ ಸತ್ಸಂಗಮಾರ್ಗದಲ್ಲಿ ಮುನ್ನಡೆಯುವುದು ತಮ್ಮ ಸಂಶೋಧನೆ, ಸಾಧನೆ, ವಿದ್ವತ್‌ಪ್ರಸಾರದ ಜೀವನಕ್ಕೆ ಅಳವಡುವುದಿಲ್ಲ ಎಂಬುದನ್ನು ಅರಿತು, ಕೆಲವು ದಿನಗಳ ಅನುಭವದ ಬಳಿಕ ಅದನ್ನು ಕೈಬಿಟ್ಟರು.

ಬೆಳಗಾವಿಯ ರಾನಡೆ ಗುರುಮಂದಿರದಲ್ಲಿ ಕಂಚಿಯ ಹಿರಿಯ ಸ್ವಾಮಿಗಳ ಸಂದರ್ಶನವಾದುದು ಕೃಷ್ಣಮೂರ್ತಿಗಳ ಜೀವನದ ಒಂದು ಮಹತ್ವರಘಟನೆ. ಸ್ವಾಮಿಗಳನ್ನು ಭೇಟಿಮಾಡಬೇಕೆಂಬ ಉದ್ದೇಶದಿಂದ ಬೆಳಗಾವಿಗೆ ಹೊರಟರು, ಸಂಚಾರವ್ಯವಸ್ಥೆ

ದೊರಕುತ್ತದೆಯೋ ಇಲ್ಲವೋ ಎಂಬ ಸಂದಿಗ್ಧದಲ್ಲಿದ್ದಾಗ, ಹೇಗೋ ಅನುಕೂಲ ದೊರೆತು ಬೆಳಗಾವಿಗೆ ಹೋಗಿ ಸ್ವಾಮಿಗಳ ದರ್ಶನ ಪಡೆದರು. ಹಿರಿಯ ಕಂಚಿಸ್ವಾಮಿಗಳು ಮಾತ ನಾಡುವುದಿಲ್ಲ. ಅವರ ಶಿಷ್ಯನೊಬ್ಬನ ಮೂಲಕ ಕೃಷ್ಣಮೂರ್ತಿಗಳೊಂದಿಗೆ ಸಂಭಾಷಣೆ. ಸ್ವಾಮಿಗಳ ಇಂಗಿತ ಶಿಷ್ಯನ ಮೂಲಕ ಹೇಗೆ ಪ್ರಕಟವಾಗುತ್ತಿತ್ತೋ : ಇದು ಗೂಢರಹಸ್ಯ. ಕೃಷ್ಣಮೂರ್ತಿಗಳ ಜನ್ಮಸ್ಥಳವಾದ ಕಾವೇರಿತೀರದ ಊರು, ಇವರ ತಂದೆ ಮೊದಲಾದ ವಿಷಯಗಳನ್ನು ಶಿಷ್ಯನ ಮೂಲಕ ಹೇಳಿಸಿ ಕೇಳಿಸಿ ಉತ್ತರ ಪಡೆದುಕೊಂಡ ನಂತರ ಸ್ವಾಮಿ ಗಳು ಅಲಂಕಾರಶಾಸ್ತ್ರದ ಹಲವು ವಿಷಯಗಳನ್ನು ಪ್ರಸ್ತಾವಿಸಿದರು. ಸ್ವಾಮಿಗಳು ಅಲಂಕಾರಶಾಸ್ತ್ರವನ್ನು ಅಭ್ಯಾಸ ಮಾಡಿದವರಲ್ಲ; ಶಿಷ್ಯನಿಗಂತೂ ಅಲಂಕಾರಶಾಸ್ತ್ರದ ಗಂಧವಿಲ್ಲ. ಇಂಥದರಲ್ಲಿ ಅಲಂಕಾರಶಾಸ್ತ್ರದ ಗ್ರಂಥಗಳಿಂದ ವಾಕ್ಯಗಳನ್ನು ಉದ್ಧರಿಸಿ ವಾದ ವನ್ನು ಮಂಡಿಸಿದುದು ಅದ್ಭುತಘಟನೆಯೇ ಸರಿ. ಕೃಷ್ಣಮೂರ್ತಿಗಳಿಗೆ ಇದೊಂದು ಅಲಭ್ಯಲಾಭ. ಈ ಅನುಭವ ಅವರಿಗೆ ಆನಂದವನ್ನೂ ಆಶ್ಚರ್ಯವನ್ನೂ ಉಂಟು ಮಾಡಿತು.

ಕೃಷ್ಣಮೂರ್ತಿಗಳು ಪುಟ್ಟಪರ್ತಿಯ ಸತ್ಯಸಾಯಿ ಉಚ್ಚಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದರಷ್ಟೆ. ಪುಟ್ಟಪರ್ತಿಯಲ್ಲಿ ಸಾಯಿಬಾಬಾ ಅವರ ಕೃಪಾದೃಷ್ಟಿ ಇವರ ಮೇಲೆ ಸದಾ ಇತ್ತು. ಅಲ್ಲಿ ಅವರು ಹಲವು ಅಲೌಕಿಕ ಅನುಭವಗಳನ್ನು ಪಡೆದುಕೊಂಡರು. ಮೊತ್ತ ಮೊದಲನೆಯ ಸಲ ಪುಟ್ಟಪರ್ತಿಗೆ ರೈಲಿನಲ್ಲಿ ಪ್ರಯಾಣ ಮಾಡುತ್ತಿರುವಾಗಲೇ ಇವರಿಗೆ ಅರಿವಿಲ್ಲದಂತೆ ಒಂದು ಅನುಭವವಾಯಿತು ಎನ್ನುತ್ತಾರೆ: ರಾತ್ರಿ ರೈಲಿನಲ್ಲಿ ಬರುತ್ತಿರು ವಾಗ ಯಾವ ನಿಲ್ದಾಣದಲ್ಲಿ ಇಳಿಯಬೇಕು,ಅದು ಎಷ್ಟು ಹೊತ್ತಿಗೆ ತಲುಪುತ್ತದೆ ಎಂಬುದು ತಿಳಿಯದೆ ತುಂಬ ಆತಂಕಗೊಂಡಿದ್ದಾಗ, ಹಿಂದಿನ ನಿಲ್ದಾಣದಲ್ಲಿ ಹಿರಿಯರೊಬ್ಬರು ಇವರ ಗಾಡಿಗೆ ಹತ್ತಿ ಬಂದು, ಕೃಷ್ಣಮೂರ್ತಿಗಳನ್ನು ವಿಚಾರಿಸಿ, ಅವರ ಆತಂಕಕ್ಕೆ ಕಾರಣವೇನಿಲ್ಲ ಎಂದು ಧೈರ್ಯ ಹೇಳಿ, 'ನಾನೂ ಅಲ್ಲೇ ಇಳಿಯುತ್ತೇನೆ' ಎಂದು ಭರವಸೆ ಕೊಟ್ಟರು. ಆ ನಿಲ್ದಾಣ ಬಂದಾಗ ಇವರನ್ನೂ ಇವರ ಸಾಮಾನುಗಳನ್ನೂ ಇಳಿಸಿ ಮುಂದೆ ನಿಲ್ದಾಣದಿಂದ ಆಶ್ರಮಕ್ಕೆ ಹೋಗಲು ಅನುಕೂಲ ಕಲ್ಪಿಸಿಕೊಟ್ಟರು. ಅನಂತರ ಅವರಿಗೆ ವಂದನೆಯನ್ನು ಹೇಳೋಣ ಎಂದು ನೋಡಿದರೆ ಅವರಾಗಲೇ ಹೊರಟುಹೋಗಿದ್ದರು. ಆಗ್ಗೆ ಇದು ಅವರಿಗೆ ಅಸ್ವಾಭಾವಿಕವಾಗಿ ಕಾಣದೇ ಇದ್ದರೂ ಮಾರನೆಯ ದಿನ ನಾ. ಕಸ್ತೂರಿಯವರನ್ನು ಭೇಟಿಯಾಗಿ ಈ ಅನುಭವವನ್ನು ಹೇಳಿಕೊಂಡಾಗ ಬಾಬಾಅವರೇ ಆ ರೀತಿಯಲ್ಲಿ ಸಹಾಯ ಮಾಡಿದರು ಎಂದು ಕಸ್ತೂರಿಯವರು ಹೇಳಿದರಂತೆ. ಆಶ್ರಮದಲ್ಲಿ ಇದ್ದಷ್ಟು ಕಾಲದಲ್ಲಿ ಎಷ್ಟೋ ಅನುಭವಗಳು ಕೃಷ್ಣಮೂರ್ತಿಯವರಿಗೆ ಆಗಿವೆ. ಆದರೆ ಒಂದು ಅನುಭವ ವನ್ನು ಮಾತ್ರ ಕೃಷ್ಣಮೂರ್ತಿಗಳು ಇಂದಿಗೂ ಹೇಳುತ್ತಿರುತ್ತಾರೆ :

ನಾ. ಕಸ್ತೂರಿಯವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇತಿಹಾಸ ವಿಭಾಗದಲ್ಲಿ ಅಧ್ಯಾಪಕರಾಗಿದ್ದರು. ಸರಸಿಗಳು, ಕನ್ನಡದಲ್ಲಿ ಹಲವು ರೋಚಕಗ್ರಂಥಗಳನ್ನು ಬರೆದವರು. ಅವರು ಪುಟ್ಟಪರ್ತಿಯ ಆಶ್ರಮದಲ್ಲಿ ದೀರ್ಘಕಾಲ ಸೇವೆ ಸಲ್ಲಿಸಿದವರು. ಕಸ್ತೂರಿ

ಯವರು ಸಾಯಿಬಾಬಾಅವರ ಮಹಿಮೆಯನ್ನು ಹಲವು ಪದ್ಯಗಳಲ್ಲಿ ಮೋಹಕವಾದ ಶೈಲಿಯಲ್ಲಿ ರಚಿಸಿದ್ದಾರೆ. ಇದು ಎಲ್ಲ ಭಾಷೆಗಳಿಗೂ ಅನುವಾದವಾಗಿದ್ದಿತು. ಸಂಸ್ಕೃತಕ್ಕೆ ಅನುವಾದವಾಗಿರಲಿಲ್ಲ. ಆದುದರಿಂದ ಕೃಷ್ಣಮೂರ್ತಿಯವರಿಗೆ ಈ ಅನುವಾದದ ಕೆಲಸವನ್ನು ಒಪ್ಪಿಸಿದರು. ಕೃಷ್ಣಮೂರ್ತಿಗಳು ಸರಳಸುಂದರವಾದ ಸಂಸ್ಕೃತ ಭಾಷೆಯಲ್ಲಿ ಅವನ್ನು ಅನುವಾದಿಸಿದರು. ಕಸ್ತೂರಿಯವರಿಗೆ ಅದು ಮೆಚ್ಚಿಕೆಯಾಯಿತು. ಒಂದು ದಿನ ಸಾಯಿಬಾಬಾ ಅವರ ಎದುರಿಗೆ ಆ ಸಂಸ್ಕೃತಪದ್ಯಗಳನ್ನು ಓದಬೇಕೆಂದು ನಿಶ್ಚಯವಾಯಿತು. ಬಾಬಾ ಅವರು ಒಂದು ದಿನ ಸಂಜೆ ಭಕ್ತಾದಿಗಳಿಗೆ ಸಂದರ್ಶನ ಕೊಟ್ಟು ಬಂದ ಬಳಿಕ, ಗಣ್ಯರ ಸಭೆಯಲ್ಲಿ ಓದಲು ಇಪ್ಪತ್ತು ನಿಮಿಷಗಳ ಕಾಲಾವಧಿಯನ್ನು ಗೊತ್ತುಮಾಡಿದರು. ಇಪ್ಪತ್ತು ನಿಮಿಷಗಳಲ್ಲಿ ಅಷ್ಟೂ ಪದ್ಯಗಳನ್ನು ಓದಲು ಸಮಯ ಸಾಕಾಗುವುದಿಲ್ಲ. ಆದುದರಿಂದ ಕೆಲವು ಪದ್ಯಗಳನ್ನು ಕೈಬಿಡುವುದೆಂದು ತೀರ್ಮಾನಿಸಿ ಕೃಷ್ಣಮೂರ್ತಿಯವರೂ ಕಸ್ತೂರಿಯವರೂ ಸೇರಿ ಕೆಲವು ಪದ್ಯಗಳನ್ನು ಗುರುತು ಮಾಡಿದರು. ಸ್ವಲ್ಪ ಹೆಚ್ಚು ಸಮಯವನ್ನು ವಾಚನಕ್ಕೆ ಕೊಡಬೇಕೆಂದು ಕೇಳಿಕೊಳ್ಳುವ ಉದ್ದೇಶದಿಂದ ನಿಗದಿತ ದಿನ ಬಾಬಾಅವರು ತಮ್ಮ ಒಳಕೋಣೆಯಿಂದ ಹೊರಕ್ಕೆ ಬರುವ ಬಾಗಿಲಿಗೆ ಕಸ್ತೂರಿಯವರು ಅಡ್ಡವಾಗಿ ಕುಳಿತಿದ್ದರು. ಅದು ಹೇಗೋ ಬಾಬಾ ಅವರು ತಮ್ಮ ಕೋಣೆಯಿಂದ ಹೊರಹೊರಟು ಭಕ್ತಾದಿಗಳಿಗೆ ಸಂದರ್ಶನವಿತ್ತು, ಗಣ್ಯರು ಸೇರಿದ್ದ ಕೊಠಡಿಗೆ ಬಂದು ಕೃಷ್ಣಮೂರ್ತಿಗಳನ್ನು ಪದ್ಯಗಳನ್ನೋದುವಂತೆ ಸೂಚಿಸಿದರು. ಕೃಷ್ಣಮೂರ್ತಿಗಳು ಎದ್ದು ನಿಂತು ಪದ್ಯಗಳನ್ನೋದಿದರು. ಸಭೆ ಮುಗಿಯಿತು. ಮಾರನೆಯ ದಿವಸ ಕಸ್ತೂರಿಯವರು ಕೃಷ್ಣಮೂರ್ತಿಗಳನ್ನು ಭೇಟಿಮಾಡಿ ''ಕೃಷ್ಣಮೂರ್ತಿ, ಬಾಬಾಅವರ ಪವಾಡವನ್ನು ನಿನ್ನೆ ಗಮನಿಸಿದೆಯಾ!'' ಎಂದು ಕೇಳಿದರು. ಕೃಷ್ಣಮೂರ್ತಿಗಳು; 'ನನಗೇನೂ ಗೊತ್ತಾಗಲಿಲ್ಲ' ಎಂದರು. ''ನೋಡು, ನೀನು ಯಾವ ಪದ್ಯಗಳನ್ನೂ ಬಿಡದೆ ಎಲ್ಲ ಪದ್ಯಗಳನ್ನೂ ವಾಚನಮಾಡಿದೆ. ಬಾಬಾಅವರು ಇಪ್ಪತ್ತು ನಿಮಿಷಗಳಲ್ಲೇ ನೀನು ಎಲ್ಲ ಪದ್ಯಗಳನ್ನೂ ಓದುವಂತೆ ಮಾಡಿದ್ದಾರೆ'' ಎಂದರು ಕಸ್ತೂರಿಯವರು. ಕೃಷ್ಣಮೂರ್ತಿಗಳಿಗೆ ಆಶ್ಚರ್ಯ. ಇದು ಹೇಗೆ ಸಾಧ್ಯವಾಯಿತು ಎಂಬುದಕ್ಕೆ ಅವರು ಏನೂ ಹೇಳಲಾರರು. ಕೃಷ್ಣಮೂರ್ತಿಗಳು ಪವಾಡಗಳನ್ನು ಪರೀಕ್ಷಿಸದೆ ನಂಬುವವರೇನೂ ಅಲ್ಲ. ಆದರೆ ಬ್ರಹ್ಮಾಂಡದಲ್ಲಿ ಅಡಗಿರುವ ರಹಸ್ಯಗಳನ್ನು ಬಲ್ಲವರಾರು ಎನ್ನುತ್ತಾರೆ, ಕೃಷ್ಣಮೂರ್ತಿ.

ವಿದ್ವತ್‌ಪ್ರಪಂಚಕ್ಕೆ ತಮ್ಮನ್ನು ಸಮರ್ಪಿಸಿಕೊಂಡ ಕೃಷ್ಣಮೂರ್ತಿಗಳ ಜೀವನವು ಪ್ರಾರಂಭದಲ್ಲಿ ಸುಖದ ಸುಪ್ಪತ್ತಿಗೆಯೇನೂ ಆಗಿರಲಿಲ್ಲ. ಒಬ್ಬ ಶಾಲಾ ಉಪಾಧ್ಯಾಯರ ಮಗ ಎಂದಮೇಲೆ ಬಡತನ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ನಾನು ಕೂಡ ಒಬ್ಬ ಶಾಲಾ ಉಪಾಧ್ಯಾಯರ ಮಗನೇ ಆಗಿರುವುದರಿಂದ ಆಗಿನ ಕಾಲದ ಶಾಲಾ ಉಪಾಧ್ಯಾಯರ ಬದುಕಿನ ಕಷ್ಟಕಾರ್ಪಣ್ಯಗಳನ್ನು ಕಣ್ಣಾರೆ ಕಂಡಿದ್ದೇನೆ. ತಿಂಗಳಿಗೆ ಬರುವ ಇಪ್ಪತ್ತೋ ಇಪ್ಪತ್ತೈದೋ ರೂಪಾಯಿಗಳ ಸಂಬಳದಲ್ಲಿ ಗಂಡ ಹೆಂಡತಿ ಮಕ್ಕಳು ಇವರುಗಳ ಜೀವನ

ಸಾಗಿಸುವುದೆಂದರೆ ಅದೊಂದು ಸಾಹಸವೇ ಸರಿ. ತಿಂಗಳಿನ ಸಂಬಳವನ್ನು ಅಕ್ಕಿಗಿಷ್ಟು, ಬೇಳೆಗಿಷ್ಟು, ಹಾಲಿಗಿಷ್ಟು, ಸೌದೆಗಿಷ್ಟು ಎಂದು ವಿಂಗಡಿಸಿ ಇಡಬೇಕಾಗುತ್ತಿತ್ತು. ಆ ತಿಂಗಳಿಗೆ ಅದು ಸಾಕಾಗಬೇಕು. ನೆಂಟರೊ ಇಷ್ಟರೋ ಮನೆಗೆ ಬಂದರೆ ಅಥವಾ ಇತರ ಅನಿವಾರ್ಯ ಕಾರಣದಿಂದ ಹೆಚ್ಚು ಖರ್ಚಾದರೆ, ಕೆಲವು ದಿವಸ ಒಪ್ಪೊತ್ತು ಊಟ ಮಾಡಿಯೋ ಕೆಲವು ಸಾಮಾನುಗಳನ್ನೇ ಕಡಿಮೆ ಮಾಡಿಯೋ ಸರಿಹೊಂದಿಸಿಕೊಳ್ಳಬೇಕು. ಕೃಷ್ಣಮೂರ್ತಿಗಳ ತಂದೆಯವರಾದ ಎಸ್. ವೆಂಕಟಸುಬ್ಬಯ್ಯನವರು ಇದಕ್ಕೆ ಹೊರತಲ್ಲ. ಆದರೂ ಆ ಬಡತನದ ಕುಟುಂಬದಲ್ಲಿ ಸುಖಸಂತೋಷಕ್ಕೆ ಅನ್ಯೋನ್ಯತೆಗೆ ಕೊರತೆಯಿರಲಿಲ್ಲ. ತಂದೆತಾಯಿಗಳ ಪ್ರೀತಿಯ ಮಗನಾಗಿ ಅವರ ಪಾಲನೆ ಪೋಷಣೆಯಲ್ಲಿ ಬೆಳೆದ ಕೃಷ್ಣಮೂರ್ತಿಗಳು ಬಾಲ್ಯದಲ್ಲಿ ಕಷ್ಟಪಟ್ಟು ಓದಿ ಉತ್ತಮದರ್ಜೆಯಲ್ಲಿ ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿ ತಂದೆ ತಾಯಿಯರ ಸಂತೋಷ ತೃಪ್ತಿಗಳಿಗೆ ಪಾತ್ರರಾದರು. ಇಂಥ ಕುಟುಂಬಕ್ಕೆ ಗೃಹಲಕ್ಷ್ಮಿಯಾಗಿ ಕಾಲಿರಿಸಿದವರು ಕೃಷ್ಣಮೂರ್ತಿಗಳ ಶ್ರೀಮತಿಯವರಾದ ಸರೋಜ ಅವರು. ಈಕೆಯಂತೂ ಸಹನೆ ಪ್ರೀತಿ ವಾತ್ಸಲ್ಯಗಳ ಸಾಕಾರಮೂರ್ತಿ, ಸಾಕ್ಷಾತ್ ಅನ್ನಪೂರ್ಣೆ. ಪತಿಯನ್ನು ಪೂರ್ಣವಾಗಿ ಅವರ ಸಾರಸ್ವತಲೋಕಕ್ಕೆ, ಲೇಖನವ್ಯವಸಾಯಕ್ಕೆ ಬಿಟ್ಟುಕೊಟ್ಟು, ಮನೆಯ ನಿರ್ವಹಣೆಯ ಜವಾಬ್ದಾರಿಯನ್ನೆಲ್ಲ ತಮ್ಮ ತಲೆಯ ಮೇಲೆ ಹೊತ್ತುಕೊಂಡರು. ಮನೆಗೆ ಯಾರು ಬಂದರು, ಯಾರು ಹೋದರು, ಏನು ಮಾಡಬೇಕು ಎಂಬ ಚಿಂತೆ ಕೃಷ್ಣಮೂರ್ತಿಗಳಿಗೆ ಒಂದಿಷ್ಟೂ ಇರಲಿಲ್ಲ. ಏಳು ಜನ ಹೆಣ್ಣುಮಕ್ಕಳು, ಅಳಿಯಂದಿರು, ಮೊಮ್ಮಕ್ಕಳು ; ಯಾರಾದರೂ ಅವರ ಮನೆಯಲ್ಲಿ ಇರುವವರೇ ; ಬಂದುಹೋಗುವ ಅತಿಥಿಗಳಿಗಂತೂ ಲೆಕ್ಕವಿಲ್ಲ. ಇವರ ಆತಿಥ್ಯ ಯೋಗಕ್ಷೇಮಗಳನ್ನೆಲ್ಲ ಆ ತಾಯಿ ನೋಡಿಕೊಂಡರು. ಹೆಣ್ಣುಮಕ್ಕಳ ವಿದ್ಯಾಭ್ಯಾಸ, ಅವರ ಮದುವೆ ಬಸುರಿ ಬಾಣಂತಿತನ–ಒಂದೇ ಎರಡೇ—ಎಲ್ಲ ಆ ತಾಯಿಯ ಆಶ್ರಯದಲ್ಲಿ ನಡೆದುವು. ಆದರೆ ಆಕೆ ನಗುನಗುತ್ತಲೇ ಎಲ್ಲವನ್ನೂ ನಿರ್ವಹಿಸಿದ್ದಾರೆ. ಕೊಡುವುದರಲ್ಲಂತೂ ಆ ತಾಯಿಯದು ಬಿಡುಗೈ. ಹೆಣ್ಣುಮಕ್ಕಳೂ ಅಳಿಯಂದಿರೂ ಮೊಮ್ಮಕ್ಕಳೂ ಆಕೆಯನ್ನು ತಾಯಿಯೆಂದೇ ಭಾವಿಸುತ್ತಾರೆ. ಕೃಷ್ಣಮೂರ್ತಿಗಳಿಗೆ ಇವರೆಲ್ಲ ಕೊಡುವ ಗೌರವವಂತೂ ಮೆಚ್ಚತಕ್ಕದ್ದು. ಇಂದಿಗೂ ಕೃಷ್ಣಮೂರ್ತಿಗಳು ಹೇಳುವ ಮಾತಿಗೆ ಪ್ರತಿಯಿಲ್ಲ. ಯಾವಾಗಲೂ ಹರ್ಷ ತಾಂಡವವಾಡುತ್ತ ಇರುವ ಸುಂದರಸಂಸಾರ ಇವರದು.

ಬಾಲ್ಯದಲ್ಲಿ ಬಡತನವನ್ನೂ ಅನುಭವಿಸಬಹುದು, ಕಷ್ಟವನ್ನೂ ತಾಳಿಕೊಳ್ಳಬಹುದು, ಊಟ ತಿಂಡಿಗಳ ಕೊರತೆಯನ್ನೂ ಸಹಿಸಬಹುದು. ಆದರೆ ಮಧ್ಯವಯಸ್ಸಿನಲ್ಲಿ, ತುಂಬು ಸಂಸಾರದಲ್ಲಿರುವಾಗ ಆಕಸ್ಮಿಕವಾಗಿ ಬರುವ ದಾರುಣಘಟನೆ ಎಂಥವರನ್ನೂ ನಡುಗಿಸಿಬಿಡುವುದು. ಇಂಥದೊಂದು ಕ್ಲೇಶಕರವಾದ ಘಟನೆ ಕೃಷ್ಣಮೂರ್ತಿಗಳ ಜೀವನದಲ್ಲಿ ನಡೆದುಹೋಯಿತು. ತಮ್ಮ ಮಗಳ ಸೀಮಂತಕ್ಕೆಂದು ಕೊನೆಯ ಮಗಳನ್ನೂ ಮಗನನ್ನೂ ತಮ್ಮ ಬೀಗರ ಊರಿಗೆ ಕರೆದುಕೊಂಡು ಹೋದ ಸಂದರ್ಭದಲ್ಲಿ, ಮಗಳೂ ಮಗನೂ

ಯವರು ಸಾಯಿಬಾಬಾಅವರ ಮಹಿಮೆಯನ್ನು ಹಲವು ಪದ್ಯಗಳಲ್ಲಿ ಮೋಹಕವಾದ ಶೈಲಿಯಲ್ಲಿ ರಚಿಸಿದ್ದಾರೆ. ಇದು ಎಲ್ಲ ಭಾಷೆಗಳಿಗೂ ಅನುವಾದವಾಗಿದ್ದಿತು. ಸಂಸ್ಕೃತಕ್ಕೆ ಅನುವಾದವಾಗಿರಲಿಲ್ಲ. ಆದುದರಿಂದ ಕೃಷ್ಣಮೂರ್ತಿಯವರಿಗೆ ಈ ಅನುವಾದದ ಕೆಲಸವನ್ನು ಒಪ್ಪಿಸಿದರು. ಕೃಷ್ಣಮೂರ್ತಿಗಳು ಸರಳಸುಂದರವಾದ ಸಂಸ್ಕೃತ ಭಾಷೆಯಲ್ಲಿ ಅದನ್ನು ಅನುವಾದಿಸಿದರು. ಕಸ್ತೂರಿಯವರಿಗೆ ಅದು ಮೆಚ್ಚಿಕೆಯಾಯಿತು. ಒಂದು ದಿನ ಸಾಯಿಬಾಬಾ ಅವರ ಎದುರಿಗೆ ಆ ಸಂಸ್ಕೃತಪದ್ಯಗಳನ್ನು ಓದಬೇಕೆಂದು ನಿಶ್ಚಯವಾಯಿತು. ಬಾಬಾ ಅವರು ಒಂದು ದಿನ ಸಂಜೆ ಭಕ್ತಾದಿಗಳಿಗೆ ಸಂದರ್ಶನ ಕೊಟ್ಟು ಬಂದ ಬಳಿಕ, ಗಣ್ಯರ ಸಭೆಯಲ್ಲಿ ಓದಲು ಇಪ್ಪತ್ತು ನಿಮಿಷಗಳ ಕಾಲಾವಧಿಯನ್ನು ಗೊತ್ತುಮಾಡಿದರು. ಇಪ್ಪತ್ತು ನಿಮಿಷಗಳಲ್ಲಿ ಅಷ್ಟೂ ಪದ್ಯಗಳನ್ನು ಓದಲು ಸಮಯ ಸಾಕಾಗುವುದಿಲ್ಲ. ಆದುದರಿಂದ ಕೆಲವು ಪದ್ಯಗಳನ್ನು ಕೈಬಿಡುವುದೆಂದು ತೀರ್ಮಾನಿಸಿ ಕೃಷ್ಣಮೂರ್ತಿಯವರೂ ಕಸ್ತೂರಿಯವರೂ ಸೇರಿ ಕೆಲವು ಪದ್ಯಗಳನ್ನು ಗುರುತು ಮಾಡಿದರು. ಸ್ವಲ್ಪ ಹೆಚ್ಚು ಸಮಯವನ್ನು ವಾಚನಕ್ಕೆ ಕೊಡಬೇಕೆಂದು ಕೇಳಿಕೊಳ್ಳುವ ಉದ್ದೇಶದಿಂದ ನಿಗದಿತ ದಿನ ಬಾಬಾಅವರು ತಮ್ಮ ಒಳಕೋಣೆಯಿಂದ ಹೊರಕ್ಕೆ ಬರುವ ಬಾಗಿಲಿಗೆ ಕಸ್ತೂರಿಯವರು ಅಡ್ಡವಾಗಿ ಕುಳಿತಿದ್ದರು. ಅದು ಹೇಗೋ ಬಾಬಾ ಅವರು ತಮ್ಮ ಕೋಣೆಯಿಂದ ಹೊರಹೊರಟು ಭಕ್ತಾದಿಗಳಿಗೆ ಸಂದರ್ಶನವಿತ್ತು, ಗಣ್ಯರು ಸೇರಿದ್ದ ಕೊಠಡಿಗೆ ಬಂದು ಕೃಷ್ಣಮೂರ್ತಿಗಳನ್ನು ಪದ್ಯಗಳನ್ನೋದುವಂತೆ ಸೂಚಿಸಿದರು. ಕೃಷ್ಣಮೂರ್ತಿಗಳು ಎದ್ದು ನಿಂತು ಪದ್ಯಗಳನ್ನೋದಿದರು. ಸಭೆ ಮುಗಿಯಿತು. ಮಾರನೆಯ ದಿವಸ ಕಸ್ತೂರಿಯವರು ಕೃಷ್ಣಮೂರ್ತಿಗಳನ್ನು ಭೇಟಿಮಾಡಿ "ಕೃಷ್ಣಮೂರ್ತಿ, ಬಾಬಾಅವರ ಪವಾಡವನ್ನು ನಿನ್ನೆ ಗಮನಿಸಿದೆಯಾ!" ಎಂದು ಕೇಳಿದರು. ಕೃಷ್ಣಮೂರ್ತಿಗಳು; 'ನನಗೇನೂ ಗೊತ್ತಾಗಲಿಲ್ಲ' ಎಂದರು. "ನೋಡು, ನೀನು ಯಾವ ಪದ್ಯಗಳನ್ನೂ ಬಿಡದೆ ಎಲ್ಲ ಪದ್ಯಗಳನ್ನೂ ವಾಚನಮಾಡಿದೆ. ಬಾಬಾಅವರು ಇಪ್ಪತ್ತು ನಿಮಿಷಗಳಲ್ಲೇ ನೀನು ಎಲ್ಲ ಪದ್ಯಗಳನ್ನೂ ಓದುವಂತೆ ಮಾಡಿದ್ದಾರೆ" ಎಂದರು ಕಸ್ತೂರಿಯವರು. ಕೃಷ್ಣಮೂರ್ತಿಗಳಿಗೆ ಆಶ್ಚರ್ಯ. ಇದು ಹೇಗೆ ಸಾಧ್ಯವಾಯಿತು ಎಂಬುದಕ್ಕೆ ಅವರು ಏನೂ ಹೇಳಲಾರರು. ಕೃಷ್ಣಮೂರ್ತಿಗಳು ಪವಾಡಗಳನ್ನು ಪರೀಕ್ಷಿಸದೆ ನಂಬುವವರೇನೂ ಅಲ್ಲ. ಆದರೆ ಬ್ರಹ್ಮಾಂಡದಲ್ಲಿ ಅಡಗಿರುವ ರಹಸ್ಯಗಳನ್ನು ಬಲ್ಲವರಾರು ಎನ್ನುತ್ತಾರೆ, ಕೃಷ್ಣಮೂರ್ತಿ.

ವಿದ್ವತ್‌ಪ್ರಪಂಚಕ್ಕೆ ತಮ್ಮನ್ನು ಸಮರ್ಪಿಸಿಕೊಂಡ ಕೃಷ್ಣಮೂರ್ತಿಗಳ ಜೀವನವು ಪ್ರಾರಂಭದಲ್ಲಿ ಸುಖದ ಸುಪ್ಪತ್ತಿಗೆಯೇನೂ ಆಗಿರಲಿಲ್ಲ. ಒಬ್ಬ ಶಾಲಾ ಉಪಾಧ್ಯಾಯರ ಮಗ ಎಂದಮೇಲೆ ಬಡತನ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ನಾನು ಕೂಡ ಒಬ್ಬ ಶಾಲಾ ಉಪಾಧ್ಯಾಯರ ಮಗನೇ ಆಗಿರುವುದರಿಂದ ಆಗಿನ ಕಾಲದ ಶಾಲಾ ಉಪಾಧ್ಯಾಯರ ಬದುಕಿನ ಕಷ್ಟಕಾರ್ಪಣ್ಯಗಳನ್ನು ಕಣ್ಣಾರೆ ಕಂಡಿದ್ದೇನೆ. ತಿಂಗಳಿಗೆ ಬರುವ ಇಪ್ಪತ್ತೋ ಇಪ್ಪತ್ತೈದೋ ರೂಪಾಯಿಗಳ ಸಂಬಳದಲ್ಲಿ ಗಂಡ ಹೆಂಡತಿ ಮಕ್ಕಳು ಇವರುಗಳ ಜೀವನ

ಸಾಗಿಸುವುದೆಂದರೆ ಅದೊಂದು ಸಾಹಸವೇ ಸರಿ. ತಿಂಗಳಿನ ಸಂಬಳವನ್ನು ಅಕ್ಕಿಗಿಷ್ಟು, ಬೇಳೆಗಿಷ್ಟು, ಹಾಲಿಗಿಷ್ಟು, ಸೌದೆಗಿಷ್ಟು ಎಂದು ವಿಂಗಡಿಸಿ ಇಡಬೇಕಾಗುತ್ತಿತ್ತು. ಆ ತಿಂಗಳಿಗೆ ಅದು ಸಾಕಾಗಬೇಕು. ನೆಂಟರೊ, ಇಷ್ಟರೋ ಮನೆಗೆ ಬಂದರೆ ಅಥವಾ ಇತರ ಅನಿವಾರ್ಯ ಕಾರಣದಿಂದ ಹೆಚ್ಚು ಖರ್ಚಾದರೆ, ಕೆಲವು ದಿವಸ ಒಪ್ಪೊತ್ತು ಊಟ ಮಾಡಿಯೋ ಕೆಲವು ಸಾಮಾನುಗಳನ್ನೇ ಕಡಿಮೆ ಮಾಡಿಯೋ ಸರಿಹೊಂದಿಸಿಕೊಳ್ಳಬೇಕು. ಕೃಷ್ಣಮೂರ್ತಿಗಳ ತಂದೆಯವರಾದ ಎನ್. ವೆಂಕಟಸುಬ್ಬಯ್ಯನವರು ಇದಕ್ಕೆ ಹೊರತಲ್ಲ. ಆದರೂ ಆ ಬಡತನದ ಕುಟುಂಬದಲ್ಲಿ ಸುಖಸಂತೋಷಕ್ಕೆ ಅನ್ಯೋನ್ಯತೆಗೆ ಕೊರತೆಯಿರಲಿಲ್ಲ. ತಂದೆತಾಯಿಗಳ ಪ್ರೀತಿಯ ಮಗನಾಗಿ ಅವರ ಪಾಲನೆ ಪೋಷಣೆಯಲ್ಲಿ ಬೆಳೆದ ಕೃಷ್ಣಮೂರ್ತಿಗಳು ಬಾಲ್ಯದಲ್ಲಿ ಕಷ್ಟಪಟ್ಟು ಓದಿ ಉತ್ತಮದರ್ಜೆಯಲ್ಲಿ ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿ ತಂದೆ ತಾಯಿಯರ ಸಂತೋಷ ತೃಪ್ತಿಗಳಿಗೆ ಪಾತ್ರರಾದರು. ಇಂಥ ಕುಟುಂಬಕ್ಕೆ ಗೃಹಲಕ್ಷ್ಮಿಯಾಗಿ ಕಾಲಿರಿಸಿದವರು ಕೃಷ್ಣಮೂರ್ತಿಗಳ ಶ್ರೀಮತಿಯವರಾದ ಸರೋಜ ಅವರು. ಈಕೆಯಂತೂ ಸಹನೆ ಪ್ರೀತಿ ವಾತ್ಸಲ್ಯಗಳ ಸಾಕಾರಮೂರ್ತಿ, ಸಾಕ್ಷಾತ್ ಅನ್ನಪೂರ್ಣೆ. ಪತಿಯನ್ನು ಪೂರ್ಣವಾಗಿ ಅವರ ಸಾರಸ್ವತಲೋಕಕ್ಕೆ, ಲೇಖನವ್ಯವಸಾಯಕ್ಕೆ ಬಿಟ್ಟುಕೊಟ್ಟು, ಮನೆಯ ನಿರ್ವಹಣೆಯ ಜವಾಬ್ದಾರಿಯನ್ನೆಲ್ಲ ತಮ್ಮ ತಲೆಯ ಮೇಲೆ ಹೊತ್ತುಕೊಂಡರು. ಮನೆಗೆ ಯಾರು ಬಂದರು, ಯಾರು ಹೋದರು, ಏನು ಮಾಡಬೇಕು ಎಂಬ ಚಿಂತೆ ಕೃಷ್ಣಮೂರ್ತಿಗಳಿಗೆ ಒಂದಿಷ್ಟೂ ಇರಲಿಲ್ಲ. ಏಳು ಜನ ಹೆಣ್ಣುಮಕ್ಕಳು, ಅಳಿಯಂದಿರು, ಮೊಮ್ಮಕ್ಕಳು; ಯಾರಾದರೂ ಅವರ ಮನೆಯಲ್ಲಿ ಇರುವವರೇ; ಬಂದುಹೋಗುವ ಅತಿಥಿಗಳಿಗಂತೂ ಲೆಕ್ಕವಿಲ್ಲ. ಇವರ ಆತಿಥ್ಯ ಯೋಗಕ್ಷೇಮಗಳನ್ನೆಲ್ಲ ಆ ತಾಯಿ ನೋಡಿಕೊಂಡರು. ಹೆಣ್ಣುಮಕ್ಕಳ ವಿದ್ಯಾಭ್ಯಾಸ, ಅವರ ಮದುವೆ ಬಸುರಿ ಬಾಣಂತಿತನ–ಒಂದೇ ಎರಡೇ—ಎಲ್ಲ ಆ ತಾಯಿಯ ಆಶ್ರಯದಲ್ಲಿ ನಡೆದುವು. ಆದರೆ ಆಕೆ ನಗುನಗುತ್ತಲೇ ಎಲ್ಲವನ್ನೂ ನಿರ್ವಹಿಸಿದ್ದಾರೆ. ಕೊಡುವುದರಲ್ಲಂತೂ ಆ ತಾಯಿಯದು ಬಿಡುಗೈ. ಹೆಣ್ಣುಮಕ್ಕಳೂ ಅಳಿಯಂದಿರೂ ಮೊಮ್ಮಕ್ಕಳೂ ಆಕೆಯನ್ನು ತಾಯಿಯೆಂದೇ ಭಾವಿಸುತ್ತಾರೆ. ಕೃಷ್ಣಮೂರ್ತಿಗಳಿಗೆ ಇವರೆಲ್ಲ ಕೊಡುವ ಗೌರವವಂತೂ ಮೆಚ್ಚತಕ್ಕದ್ದು. ಇಂದಿಗೂ ಕೃಷ್ಣಮೂರ್ತಿಗಳು ಹೇಳುವ ಮಾತಿಗೆ ಪ್ರತಿಯಿಲ್ಲ. ಯಾವಾಗಲೂ ಹರ್ಷ ತಾಂಡವವಾಡುತ್ತ ಇರುವ ಸುಂದರಸಂಸಾರ ಇವರದು.

ಬಾಲ್ಯದಲ್ಲಿ ಬಡತನವನ್ನೂ ಅನುಭವಿಸಬಹುದು, ಕಷ್ಟವನ್ನೂ ತಾಳಿಕೊಳ್ಳಬಹುದು, ಊಟ ತಿಂಡಿಗಳ ಕೊರತೆಯನ್ನೂ ಸಹಿಸಬಹುದು. ಆದರೆ ಮಧ್ಯವಯಸ್ಸಿನಲ್ಲಿ, ತುಂಬುಸಂಸಾರದಲ್ಲಿರುವಾಗ ಆಕಸ್ಮಿಕವಾಗಿ ಬರುವ ದಾರುಣಘಟನೆ ಎಂಥವರನ್ನೂ ನಡುಗಿಸಿಬಿಡುವುದು. ಇಂಥದೊಂದು ಕ್ಲೇಶಕರವಾದ ಘಟನೆ ಕೃಷ್ಣಮೂರ್ತಿಗಳ ಜೀವನದಲ್ಲಿ ನಡೆದುಹೋಯಿತು. ತಮ್ಮ ಮಗಳ ಸೀಮಂತಕ್ಕೆಂದು ಕೊನೆಯ ಮಗಳನ್ನೂ ಮಗನನ್ನೂ ತಮ್ಮ ಬೀಗರ ಊರಿಗೆ ಕರೆದುಕೊಂಡು ಹೋದ ಸಂದರ್ಭದಲ್ಲಿ, ಮಗಳೂ ಮಗನೂ

ಕಟ್ಟೇಪುರದ ಕಾವೇರಿ ನದೀ ತೀರದಲ್ಲಿ ಇತರ ಮಕ್ಕಳೊಡನೆ ಆಟ ಆಡಲು ಹೋಗಿ, ನೀರಿನೊಳಕ್ಕೆ ಜಾರಿಬಿದ್ದು ತೀರಿಕೊಂಡ. ಈ ದುರಂತವನ್ನು ಈ ದಂಪತಿಗಳು ಹೇಗೆ ಸಹಿಸಿದರೋ, ದೇವರೇ ಬಲ್ಲ. ಕೃಷ್ಣಮೂರ್ತಿಗಳು ಮಗನ ಮೇಲೆ ತುಂಬ ಆಸೆ ಇಟ್ಟಿದ್ದರು. ಹುಡುಗನೂ ತುಂಬ ಸುಟಿಯಾಗಿಯೂ ಬುದ್ಧಿವಂತನಾಗಿಯೂ ಇದ್ದ. ದೇವರು ಇವನನ್ನು ಕಿತ್ತುಕೊಂಡ ದುರ್ಘಟನೆಯನ್ನು ಇವರು ತಾಳಿಕೊಳ್ಳಲಾರದೆ ಹೋದರು. ಕೃಷ್ಣಮೂರ್ತಿಗಳು ಆಧುನಿಕವಿದ್ಯಾಭ್ಯಾಸವನ್ನು ಹೊಂದಿ, ಆಧುನಿಕವಿಚಾರವುಳ್ಳವರಾಗಿದ್ದರು. ಆದರೂ ಕುಲೋದ್ಧಾರಕನಾಗಿ ಪುತ್ರನು ಇರುತ್ತಾನೆಂಬ ಆರ್ಷೇಯವಾದ ಮಾತಿನಲ್ಲಿ ನಂಬಿಕೆಯೂ ಇದ್ದಿತೆನ್ನಬಹುದು. ಈ ಆಘಾತವನ್ನು ಮರೆಯಲು ಕೃಷ್ಣಮೂರ್ತಿಗಳು ಪ್ರಾಪಂಚಿಕವಿಷಯಗಳನ್ನು ತೊರೆಯಲು ಪ್ರಯತ್ನಿಸಿ ಸಾರಸ್ವತ ಪ್ರಪಂಚಕ್ಕೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡರು. ತಮ್ಮ ಅಧ್ಯಯನದ ಕೊಠಡಿಯಾಯಿತು, ತಾವಾಯಿತು. ಗ್ರಂಥಭಂಡಾರದ ನಡುವೆ ಲೇಖನವ್ಯವಸಾಯದಲ್ಲಿ ಸಂಶೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಈ ಘಟನೆ ತಮ್ಮ ಜೀವನದಲ್ಲಿ ನಡೆಯದಿದ್ದರೆ ಸಂಸ್ಕೃತಸಂಶೋಧನಾಧ್ಯಯನಗಳಿಗೆ ಇಷ್ಟರಮಟ್ಟಿಗೆ ಅರ್ಪಿಸಿಕೊಳ್ಳುತ್ತಿದ್ದೆನೋ ಇಲ್ಲವೋ ಎಂಬ ಸಂದೇಹವನ್ನು ಅವರು ಒಂದೊಂದು ಸಲ ವ್ಯಕ್ತಪಡಿಸುವುದುಂಟು. ವಿಧಿಸಂಕಲ್ಪವೊಂದಿದೆ ಎಂಬುದನ್ನು ಅವರ ಜೀವನವು ಸ್ಪಷ್ಟಪಡಿಸುತ್ತದೆ.

ಕೃಷ್ಣಮೂರ್ತಿಗಳು ಕಾವ್ಯಾಲಂಕಾರ, ಕಾವ್ಯಮೀಮಾಂಸೆ, ಧ್ವನಿತತ್ವ ಮೊದಲಾದ ವಿಷಯಗಳ ಬಗ್ಗೆ ಇಂಗ್ಲಿಷು ಹಾಗೂ ಕನ್ನಡ ಭಾಷೆಗಳಲ್ಲಿ ೭೦ಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ. ಪ್ರತಿಯೊಂದೂ ಪ್ರೌಢಗ್ರಂಥವೇ ಹೊರತು, ರಂಜನೆಗಾಗಿ ಬರೆದದ್ದು ಯಾವುದೂ ಇಲ್ಲ. ೩೦೦ಕ್ಕೂ ಹೆಚ್ಚು ಲೇಖನಗಳು ಪ್ರತಿಷ್ಠಿತ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಸುಮಾರು ೭೦೦ಕ್ಕೂ ಮಿಕ್ಕು ಪುಸ್ತಕವಿಮರ್ಶೆಗಳು ಆರ್ಯನ್ ಪಾತ್ **(Aryan path)**, ಇಂಡಿಯನ್ ಪಿ.ಇ.ಎನ್. **(Indian P.E.N.)**, ಡೆಕ್ಕನ್ ಹೆರಾಲ್ಡ್ **(Deccan Herald)** ಇವೇ ಮೊದಲಾದ ಪತ್ರಿಕೆಗಳಲ್ಲಿ ಬಂದಿವೆ. ಅನೇಕ ವಿಶ್ವವಿದ್ಯಾನಿಲಯಗಳ ಪರೀಕ್ಷಕರೂ ಸಂಸ್ಕೃತ ಪ್ರಾಧ್ಯಾಪಕರನ್ನು ಆರಿಸುವ ಸಮಿತಿಗಳ ಸದಸ್ಯರೂ ಅಧ್ಯಕ್ಷರೂ ಆಗಿರುವುದಲ್ಲದೆ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ವಿದ್ವತ್ಪೂರ್ಣ ಭಾಷಣಗಳನ್ನು ಮಾಡಿರುತ್ತಾರೆ. ಮೈಸೂರು ವಿಶ್ವವಿದ್ಯಾನಿಲಯದ ಸಂದರ್ಶಕಪ್ರಾಧ್ಯಾಪಕರೆಂಬ ಗೌರವಕ್ಕೆ ಪಾತ್ರರಾಗಿ ಸೇವೆ ಸಲ್ಲಿಸಿದ್ದಾರೆ. ಕೃಷ್ಣಮೂರ್ತಿಗಳ ವಿದ್ವತ್ತನ್ನೂ ಅವರು ಸಂಸ್ಕೃತಕ್ಕೂ ಕನ್ನಡ ಭಾಷೆಗೂ ಸಲ್ಲಿಸಿರುವ ಸೇವೆಯನ್ನೂ ಪುರಸ್ಕರಿಸಿ ಹಲವು ಬಹುಮಾನ ಹಾಗೂ ಪ್ರಶಸ್ತಿಗಳನ್ನು ನೀಡಲಾಗಿದೆ. ಸಂಸ್ಕೃತದಲ್ಲಿ ಅಸಾಮಾನ್ಯ ಕೃತಿಗಳಿಗಾಗಿ ರಾಷ್ಟ್ರಪತಿ ಪ್ರಶಸ್ತಿಯೂ ಕನ್ನಡಕ್ಕೆ ಸಲ್ಲಿಸಿರುವ ಸೇವೆಗಾಗಿ ಕರ್ಣಾಟಕ ರಾಜ್ಯ ಅಕಾಡೆಮಿ ಪ್ರಶಸ್ತಿಯೂ ಇವರಿಗೆ ಲಭ್ಯವಾಗಿರುವ ಪ್ರಶಸ್ತಿಗಳಲ್ಲಿ ಮುಖ್ಯವಾದುದಾಗಿವೆ. ಸಿದ್ಧಗಂಗಾ ಕ್ಷೇತ್ರದಲ್ಲಿ ೧೯೭೮ರಲ್ಲಿ ನಡೆದ ದ್ವಿತೀಯ ಅಖಿಲ ಕರ್ಣಾಟಕ ಸಂಸ್ಕೃತ ಸಮ್ಮೇಳನದ ಅಧ್ಯಕ್ಷರಾಗಿ, ಸಂಸ್ಕೃತ ವಿದ್ವಾಂಸರ ಸನ್ಮಾನ ಸಮಾರಂಭದಲ್ಲಿ ಸನ್ಮಾನಿತರಾಗಿದ್ದಾರೆ.

೧೯೮೫ರ ಸಂಸ್ಕೃತ ಸಾಹಿತ್ಯ ಪುರಸ್ಕಾರ ರೂಪವಾಗಿ ಇಪ್ಪತ್ತೈದು ಸಹಸ್ರ ರೂಪಾಯಿಗಳನ್ನು ಇತ್ತು, ಉತ್ತರಪ್ರದೇಶ ಸರಕಾರದ ಸಂಸ್ಕೃತ ಅಕಾಡೆಮಿಯು ಕೃಷ್ಣಮೂರ್ತಿಗಳಿಗೆ ಗೌರವವನ್ನಿತ್ತಿದೆ.

ಇಂದು ಕೃಷ್ಣಮೂರ್ತಿಗಳು ಗುರುಗಳ ಹಿರಿಯರ ವಿದ್ವಾಂಸರ ಹಾಗೂ ಸ್ನೇಹಿತರ ಪ್ರೇಮಾದರಗಳಿಗೆ ಪಾತ್ರರಾಗಿ, ಕುಟುಂಬದ ಸದಸ್ಯರ ಪ್ರೀತಿಗೌರವಗಳನ್ನು ಪಡೆದುಕೊಂಡು ಜಗತ್ತಿನ ವಿದ್ವತ್ಪ್ರಪಂಚದಲ್ಲಿ ಅಧಿಕಾರವಾಣಿಯಿಂದ ನುಡಿಯಬಲ್ಲ ವಿದ್ವಾಂಸರೆಂಬ ಖ್ಯಾತಿಯನ್ನು ಪಡೆದು ಸಂತೃಪ್ತಜೀವನವನ್ನು ಸಾಗಿಸುತ್ತಿದ್ದಾರೆ.

ಕೃಷ್ಣಮೂರ್ತಿಗಳು ಭಾರತದೇಶದ ಮುಕ್ಕಾಲುಪಾಲು ವಿಶ್ವವಿದ್ಯಾನಿಲಯಗಳಿಗೆ ಒಂದಲ್ಲ ಒಂದು ಕಾರಣದಿಂದ ಭೇಟಿಕೊಟ್ಟಿದ್ದಾರೆ; ಭಾರತದ ಉದ್ದಗಲದಲ್ಲಿ ಸಂಚರಿಸಿದ್ದಾರೆ. ಆದರೆ ಇವರು ವಿದೇಶಗಳಿಗೆ ಪ್ರವಾಸ ಹೋದುದೇ ಇಲ್ಲ ಎನ್ನಬಹುದು. ವಿದೇಶಗಳ ವಿಶ್ವವಿದ್ಯಾನಿಲಯಗಳ ಸಂಸ್ಕೃತವಿಭಾಗಗಳಿಂದ ಅವರಿಗೆ ಆಹ್ವಾನ ದೊರಕಿತ್ತಾದರೂ ಅಲ್ಲಿಗೆ ಅವರು ಹೋಗಲು ಆಗಿರಲಿಲ್ಲ. ಈಗ್ಗೆ ಒಂದೂವರೆ ವರ್ಷದ ಹಿಂದೆ ಲಂಡನ್ನಿನಲ್ಲಿರುವ ಭಾರತೀಯ ವಿದ್ಯಾಭವನದಲ್ಲಿ ಭಾರತೀಯ ಸಾಹಿತ್ಯದ ಬಗ್ಗೆ ನಡೆದ ಒಂದು ಗೋಷ್ಠಿಯ ಅಧ್ಯಕ್ಷತೆ ವಹಿಸಲು ಭಾರತೀಯ ವಿದ್ಯಾಭವನದಿಂದ ಆಹ್ವಾನಿತರಾಗಿ ಲಂಡನ್ನಿಗೆ ಹೋಗಿದ್ದರು. ಭಾರತೀಯ ವಿದ್ಯಾಭವನವು ಸಂಸ್ಕೃತ ಸಾಹಿತ್ಯದ ಪ್ರಚಾರಕ್ಕಾಗಿ ಕೈಗೊಂಡ ಕಾರ್ಯಕ್ರಮಗಳನ್ನು ನೋಡಿ ಕೃಷ್ಣಮೂರ್ತಿಗಳಿಗೆ ಸಂತೋಷವಾಯಿತು. ಲಂಡನ್ನಿನ ವಿಶ್ವವಿದ್ಯಾನಿಲಯದ ಸಂಸ್ಕೃತ ವಿಭಾಗಕ್ಕೆ ಭೇಟಿ ಕೊಟ್ಟು, ಅಲ್ಲಿ ಸಂಸ್ಕೃತದ ಸಂಶೋಧನೆ ಮತ್ತು ಅಧ್ಯಯನಗಳಿಗೆ ಕೊಟ್ಟಿರುವ ಪ್ರಾಶಸ್ತ್ಯವನ್ನು ಸ್ವತಃ ಮನಗಂಡರು. ಅಲ್ಲಿಯ ಪುಸ್ತಕಭಂಡಾರದಲ್ಲಿ ತಮ್ಮ ಎಲ್ಲ ಗ್ರಂಥಗಳೂ ಇದ್ದುದನ್ನು ನೋಡಿ ಕೃಷ್ಣಮೂರ್ತಿಗಳಿಗೆ ಸಂತೃಪ್ತಿಯಾಯಿತು. ಅಧ್ಯಯನಮಾಡುವವರಿಗೆ, ಸಂಶೋಧನೆಯನ್ನು ನಡೆಸುವವರಿಗೆ ಎಲ್ಲ ಗ್ರಂಥಗಳೂ ಅವು ಪ್ರಪಂಚದ ಯಾವ ಮೂಲೆಯಲ್ಲಿ ಬೇಕಾದರೂ ಪ್ರಕಟವಾಗಿರಲಿ ಅವುಗಳನ್ನು ಆಸ್ಥೆಯಿಂದ ತರಿಸಿ ಪುಸ್ತಕಭಂಡಾರಗಳ ಮೂಲಕ ದೊರಕಿಸಿಕೊಡುವ ಪಾಶ್ಚಾತ್ಯ ವಿದ್ವಾಂಸರ ಸಂಪ್ರದಾಯ ಮೆಚ್ಚತಕ್ಕದ್ದು.

ಕೃಷ್ಣಮೂರ್ತಿಗಳ ವಿದ್ವತ್ತಿನ ಬಗ್ಗೆ ದೇಶವಿದೇಶಗಳ ವಿದ್ವಾಂಸರು ಮೆಚ್ಚಿಕೊಂಡಿದ್ದಾರೆ; ಮುಕ್ತಕಂಠದಿಂದ ಪ್ರಶಂಸೆ ಮಾಡಿದ್ದಾರೆ. ಜರ್ಮನಿಯ ವಿದ್ವಾಂಸರಾದ ಕ್ಲಾಸ್ ವೊಗೆಲ್, ರಾಯಲ್ ಏಷಿಯಾಟಿಕ್ ಸೊಸೈಟಿಯ ಜೆ. ಸಿ. ರೈಟ್, ಲಂಡನ್ನಿನ ಜೆ. ಬ್ರೌ, ವಾಲ್ಟರ್ ಗುರ್ನರ್, ಹಾರ್ವರ್ಡಿನ ಎಚ್. ಎಚ್. ಇಂಗಾಲ್ಸ್ ಮೊದಲಾದ ವಿದೇಶಿ ವಿದ್ವಾಂಸರುಗಳೂ ವಿ. ಸೀ., ಗೋವಿಂದ ಪೈ, ಗೋಕಾಕ್, ಕುನ್ಹನ್‌ರಾಜ, ಪಿ. ವಿ. ಕಾಣೆ, ಜವರೇಗೌಡ ಮೊದಲಾದ ದೇಶೀಯ ವಿದ್ವಾಂಸರುಗಳೂ ಕೃಷ್ಣಮೂರ್ತಿಗಳ ವಿದ್ವತ್ತನ್ನು ಪ್ರಶಂಸೆ ಮಾಡಿದ್ದಾರೆ.

ಜರ್ಮನಿಯ ಕ್ಲಾಸ್‌ವೊಗೆಲ್ ಕೃಷ್ಣಮೂರ್ತಿಗಳ ***Essays in Sanskrit Criticism***

ಗ್ರಂಥದ ಬಗ್ಗೆ ಹೀಗೆ ಬರೆಯುತ್ತಾರೆ: "The author is well known and esteemed in Europe a as specialist in the field of Alamkara Sastra besides S. K. De and P. V. Kane" ವಾಲ್ಟರ್ ಗುರ್ನರ್ ಅವರು 'ಧ್ವನ್ಯಾಲೋಕ'ದ ಇಂಗ್ಲಿಷ್ ಭಾಷಾಂತರದ ಬಗ್ಗೆ ಹೀಗೆಂದಿದ್ದಾರೆ:

"This is the first complete translation into English of the work which revolutionised Sanskrit literary Criticism in the ninth Century A.D. The translator has achieved a large measure of success in a very different task, painstaking and accurate in rendering." ಕನ್ನಡದ ಖ್ಯಾತ ಲೇಖಕರೂ ವಿಮರ್ಶಕರೂ ಕವಿಗಳೂ ಆದ ವಿ.ಸೀ. ಅವರು ವಾದಿರಾಜನ 'ಯಶೋಧರ ಚರಿತೆ'ಯ ಪ್ರಕಾಶನದ ಬಗ್ಗೆ ವಿಮರ್ಶೆ ಮಾಡುತ್ತ "The work is a total gift to Sanskrit Literature and to Kannada scholars who can now compare one of their own classics with its original....a really valuable piece of work" —ಎಂದು ದಿ ಇಂಡಿಯನ್ ಪಿ. ಇ. ಎನ್. ಪತ್ರಿಕೆಯಲ್ಲಿ ಬರೆದಿದ್ದಾರೆ.

ಹೀಗೆ ಬೇಕಾದಷ್ಟು ವಿಮರ್ಶೆಗಳನ್ನು ಕೊಡಬಹುದು. ಮದರಾಸಿನಲ್ಲಿರುವ ಅಭಿನವ ವಿದ್ಯಾತೀರ್ಥಸ್ವಾಮಿಗಳ ವೈಜ್ಞಾನಿಕ ಸಂಶೋಧನಸಂಸ್ಥೆಯ ಅಧ್ಯಕ್ಷರಾದ ಎಸ್. ಕೆ. ರಾಮಚಂದ್ರರಾವ್ ಅವರ ಮಾತುಗಳಿಂದ ಈ ಲೇಖನ ಭಾಗವನ್ನು ಮುಗಿಸಬಹುದು:

"ಒಬ್ಬ ವ್ಯಕ್ತಿ ಒಂದು ಜೀವಮಾನದಲ್ಲಿ ಮಾಡಲು ಅಸಾಧ್ಯವೆನಿಸುವಷ್ಟು ಕೆಲಸವನ್ನು ಈಗಾಗಲೇ ಮಾಡಿ ಮುಗಿಸಿರುವ ಡಾ. ಕೆ. ಕೃಷ್ಣಮೂರ್ತಿಗಳು ಭಾಮಹ, ದಂಡಿ, ವಾಮನ, ರಾಜಶೇಖರ, ಕ್ಷೇಮೇಂದ್ರ, ಆನಂದವರ್ಧನ, ಅಭಿನವಗುಪ್ತ, ಮಮ್ಮಟ—ಈ ಅಲಂಕಾರಿಕರ ಸುಪ್ರಸಿದ್ಧ ಸಂಸ್ಕೃತಗ್ರಂಥಗಳನ್ನೂ ಭಾಸ, ಭಾರವಿ, ಶೂದ್ರಕ, ಕಾಳಿದಾಸ, ಭವಭೂತಿ, ಶಕ್ತಿಭದ್ರ—ಈ ಕವಿಗಳ ಹಲವು ಕೃತಿಗಳನ್ನೂ ಕನ್ನಡಕ್ಕೆ ಅನುವಾದಿಸಿ, ವಿಸ್ತಾರವಾದ ಟೀಕೆಗಳನ್ನು ಬರೆದು, ಕನ್ನಡ ವಿದ್ವತ್‌ಲೋಕದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ."

* * *

ಕೆ. ಕೃಷ್ಣಮೂರ್ತಿಗಳು ಕನ್ನಡದಲ್ಲಿ ಸುಮಾರು ಇಪ್ಪತ್ತೈದು ಗ್ರಂಥಗಳನ್ನು ರಚಿಸಿದ್ದಾರೆ; ಅಲ್ಲದೆ ಪತ್ರಿಕೆಗಳಲ್ಲಿ, ಸಂಭಾವನಾಗ್ರಂಥಗಳಲ್ಲಿ ಬಂದಿರುವ ಲೇಖನಗಳು ಮತ್ತು ಪುಸ್ತಕ ವಿಮರ್ಶೆಗಳು ಹಲವು. ಕೃಷ್ಣಮೂರ್ತಿಗಳು ಕನ್ನಡದಲ್ಲಿ ರಚಿಸಿರುವ ಗ್ರಂಥಗಳನ್ನು ನಾಲ್ಕು ಗುಂಪುಗಳನ್ನಾಗಿ ವಿಂಗಡಿಸಬಹುದು:

(೧) ಸಂಸ್ಕೃತದಲ್ಲಿ ಆನಂದವರ್ಧನನು ಧ್ವನಿತತ್ತ್ವವನ್ನು ಪ್ರತಿಪಾದಿಸಿರುವ ಗ್ರಂಥವಾದ

'ಧ್ವನ್ಯಾಲೋಕ'ದ ಅನುವಾದ ಮತ್ತು ಅದಕ್ಕೆ ಒದಗಿಸಿದ ವಿದ್ವತ್ಪೂರ್ಣವಾದ ಪೀಠಿಕೆ. 'ಆನಂದವರ್ಧನನ ಕಾವ್ಯಮೀಮಾಂಸೆ' ಇವರ ಮೊದಲ ಅಲಂಕಾರಶಾಸ್ತ್ರದ ಗ್ರಂಥ. ಕನ್ನಡದಲ್ಲಿ ರಚಿತವಾದುದು ; ತರುವಾಯ ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದ ಭಾಮಹನ 'ಕಾವ್ಯಾಲಂಕಾರ', ಮಮ್ಮಟನ 'ಕಾವ್ಯಪ್ರಕಾಶ', ರಾಜಶೇಖರನ 'ಕಾವ್ಯಮೀಮಾಂಸೆ', ದಂಡಿಯ 'ಕಾವ್ಯಾದರ್ಶ', ವಾಮನನ 'ಕಾವ್ಯಾಲಂಕಾರ ಸೂತ್ರವೃತ್ತಿ', ಕ್ಷೇಮೇಂದ್ರನ 'ಕವಿಕಂಠಾಭರಣ' ಮತ್ತು 'ಔಚಿತ್ಯ ವಿಚಾರಚರ್ಚೆ'—ಇವುಗಳ ಅನುವಾದಗಳನ್ನು ಕನ್ನಡಕ್ಕೆ ತಂದಿರುತ್ತಾರೆ. ಹೀಗೆ ಕನ್ನಡಕ್ಕೆ ಅನುವಾದಿಸಿದ ಅಲಂಕಾರಶಾಸ್ತ್ರಗ್ರಂಥಗಳ ಒಂದು ಗುಂಪು ಕೃಷ್ಣಮೂರ್ತಿಗಳು ಸಂಸ್ಕೃತದಿಂದ ಕನ್ನಡಕ್ಕೆ ನೀಡಿದ ಅನುಪಮ ಕೊಡುಗೆ. ಇವುಗಳಿಗೆ ಹೆಚ್ಚಿನ ಮಹತ್ತ್ವವನ್ನು ಕೊಡಬಹುದು. ಅಲ್ಲದೆ ಅನುವಾದಕರು ಈ ಗ್ರಂಥಗಳಿಗೆ ವಿದ್ವತ್ಪೂರ್ಣವಾದ ಪೀಠಿಕೆಗಳನ್ನು ಒದಗಿಸಿರುವುದು ಅಧ್ಯಯನಶೀಲರಿಗೆ ತುಂಬ ಉಪಯುಕ್ತವಾಗಿದೆ ಎನ್ನುವುದರಲ್ಲಿ ಸಂದೇಹವಿಲ್ಲ.

(೨) ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿದ ನಾಟಕ ಹಾಗೂ ಕಾವ್ಯ—ಇವುಗಳನ್ನು ಎರಡನೆಯ ಗುಂಪಿಗೆ ಸೇರಿಸಬಹುದು : ಭಾಸನ 'ಪ್ರತಿಮಾ ನಾಟಕ', 'ಯಜ್ಞಫಲ', ಶೂದ್ರಕನ 'ಮೃಚ್ಛಕಟಿಕ', ಭವಭೂತಿಯ 'ಉತ್ತರರಾಮಚರಿತೆ', ಶಕ್ತಿಭದ್ರನ 'ಆಶ್ಚರ್ಯ ಚೂಡಾಮಣಿ' ಮತ್ತು ಭಾರವಿಯ ಕಾವ್ಯ 'ಕಿರಾತಾರ್ಜುನೀಯ.'

(೩) ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದಿಂದ ಪ್ರಕಟವಾದ 'ಸಂಸ್ಕೃತ ಕಾವ್ಯ' ಮೂರನೆಯ ಗುಂಪಿಗೆ ಸೇರುವ ಕೃತಿಗಳನ್ನು ಕುರಿತ ವಿಮರ್ಶನಗ್ರಂಥಗಳಲ್ಲಿ ಗಣನೀಯವಾದುದು. 'ಸೃಜನಶೀಲತೆ ಮತ್ತು ಸಾಹಿತ್ಯ', ಕಿರು ಹೊತ್ತಗೆಗಳಾದ 'ಕನ್ನಡ ಸಾಹಿತ್ಯದಲ್ಲಿ ಶೃಂಗಾರರಸ', 'ಭವಭೂತಿ', 'ದಂಡಿಭಾಮಹರ ಕೃತಿಗಳು : ತುಲನಾತ್ಮಕ ಅಧ್ಯಯನ', 'ಕನ್ನಡದಲ್ಲಿ ಕಾವ್ಯತತ್ತ್ವ'—ಮೊದಲಾದುವು ಅವರ ಇತರ ವಿಮರ್ಶನ ಕೃತಿಗಳು.

(೪) ಕೃಷ್ಣಮೂರ್ತಿಗಳಿಂದ ಸಂಪಾದಿತವಾಗಿ ಉತ್ತಮವಾದ ಪೀಠಿಕೆಯೊಡನೆ ಪ್ರಕಟವಾಗಿರುವ, 'ನೃಪತುಂಗದೇವಾನುಮತಂ ಶ್ರೀವಿಜಯಪ್ರಭೂತಂ ಕವಿರಾಜಮಾರ್ಗಂ' ನಾಲ್ಕನೆಯ ಗುಂಪಿಗೆ ಸೇರಿಸಬಹುದಾದ ಅಮೂಲ್ಯಕೃತಿ.

ಬೊಂಬಾಯಿ ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಗೆ ಇಂಗ್ಲಿಷಿನಲ್ಲಿ ಬರೆದು ಒಪ್ಪಿಸಿದ 'ಧ್ವನ್ಯಾಲೋಕ ಮತ್ತು ಅದರ ಟೀಕಾಕಾರರು' (***Dhwanyaloka and its Critics***) ಎಂಬ ಗ್ರಂಥದ ಸಾರವನ್ನು ಕನ್ನಡದಲ್ಲಿ 'ಆನಂದವರ್ಧನನ ಕಾವ್ಯಮೀಮಾಂಸೆ' ಎಂಬುದಾಗಿ ಬರೆದು ಪ್ರಕಟಿಸಿದರು. ಅನಂತರ 'ಧ್ವನ್ಯಾಲೋಕ'ವನ್ನು ಕನ್ನಡಕ್ಕೆ ಅನುವಾದಿಸಿದರು. 'ಆನಂದವರ್ಧನನ ಕಾವ್ಯಮೀಮಾಂಸೆ'ಯು 'ಧ್ವನ್ಯಾಲೋಕ'ಕ್ಕೆ ಒದಗಿಸಿದ ವಿದ್ವತ್ಪೂರ್ಣಪೀಠಿಕೆ ಎನ್ನಬಹುದು. ಆನಂದವರ್ಧನನಿಗೆ ಸಂಸ್ಕೃತ ಅಲಂಕಾರಶಾಸ್ತ್ರದ ಇತಿಹಾಸದಲ್ಲಿ ಅತ್ಯಂತ ಮಹತ್ತರವಾದ ಸ್ಥಾನವಿದೆ. ''ಆನಂದವರ್ಧನನು ಧ್ವನಿತತ್ತ್ವದ

ಪರಮಪ್ರಾಶಸ್ತ್ಯವನ್ನು ಸರ್ವಾದರಣೀಯವಾಗುವಂತೆ ಸ್ಥಾಪಿಸಿದ'' ಎಂದು ಲೇಖಕರು ಹೇಳಿದ್ದಾರೆ. 'ಆನಂದವರ್ಧನನ ಕಾವ್ಯಮೀಮಾಂಸೆ'ಯಲ್ಲಿ ಕಾವ್ಯಮೀಮಾಂಸೆಯ ಮೂಲ ತತ್ವಗಳನ್ನು ನಿರೂಪಿಸಿ. ಆನಂದವರ್ಧನನ ವಿಮರ್ಶೆಗೂ ಪ್ರಾಚೀನರಾದ ಅಲಂಕಾರಶಾಸ್ತ್ರಕಾರರ ಅಭಿಪ್ರಾಯಗಳಿಗೂ ಇರುವ ವ್ಯತ್ಯಾಸಗಳನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ''ಕವಿತಾಸಾಮ್ರಾಜ್ಯದಲ್ಲಿ ಸಹಜಪ್ರತಿಭೆಗೆ ಸಾರ್ವಭೌಮಸ್ಥಾನವು ಸಲ್ಲುವುದೆಂದೂ ಅದು ವಿದ್ಯುಲ್ಲತೆಯಂತೆ ಕವಿಯಲ್ಲಿ ಮಿಂಚಿ ಸಹೃದಯನ ಪ್ರತಿಭಾಮುಕುರದಲ್ಲಿ ಪ್ರತಿಭಾಸವಾಗುವುದೆಂದೂ ಅದರ ಆವಿಷ್ಕಾರದ ಪ್ರಕಾರಗಳನ್ನು ಶಾಸ್ತ್ರೀಯವಾಗಿ ಪರಿಶೀಲಿಸುವುದೇ ಕಾವ್ಯಶಾಸ್ತ್ರದ ಗುರಿ ಎಂದೂ'' ವಿವರಿಸಿದ ಆನಂದವರ್ಧನನ ನಿರೂಪಣೆಯನ್ನು ಲೇಖಕರು ವಿವರಿಸಿ, ಧ್ವನಿಸಿದ್ಧಾಂತದ ಮಹತ್ವವನ್ನು ನಿರೂಪಿಸಿದ್ದಾರೆ. ಧ್ವನಿ ಎಂದರೆ ಏನು, ಧ್ವನಿಯ ವಿಸ್ತಾರವೇನು ಎಂಬುದನ್ನು ಹೇಳಿ ಶಬ್ದ, ಅರ್ಥ, ಅಲಂಕಾರ ಮೊದಲಾದುವುಗಳನ್ನು ವಿವರಿಸಿ, ಧ್ವನಿಯ ವಿವಿಧಪ್ರಕಾರಗಳನ್ನು ಸೋದಾಹರಣವಾಗಿ ಸ್ಪಷ್ಟಪಡಿಸಿದ್ದಾರೆ. ಕನ್ನಡದ ಪ್ರಾಚೀನ ಅಲಂಕಾರ ಗ್ರಂಥಗಳಾದ 'ಕವಿರಾಜಮಾರ್ಗ', 'ಕಾವ್ಯಾವಲೋಕನ'ಗಳಲ್ಲದೆ, ಪಂಪ, ಪೊನ್ನ, ನಾಗಚಂದ್ರ, ಕುಮಾರವ್ಯಾಸ ಮೊದಲಾದ ಹಿಂದಿನ ಕವಿಗಳಿಂದಲೂ ಆಧುನಿಕರಾದ ಕುವೆಂಪು, ಪು.ತಿ.ನ., ವಿ.ಸೀ., ಅಂಬಿಕಾತನಯ ದತ್ತ ಮೊದಲಾದ ಕವಿಗಳಿಂದಲೂ ಪದ್ಯಗಳನ್ನು ಉದಾಹರಿಸಿ ವಿಶದೀಕರಿಸಿರುವುದು ಈ ಗ್ರಂಥದ ವೈಶಿಷ್ಟ್ಯವಾಗಿದೆ. ಸೂತ್ರಗಳಿಗೆ ಉದಾಹರಣೆಗಳಿದ್ದರೆ ಆ ತತ್ತ್ವಗಳು ಮನದಟ್ಟಾಗುವುದು. ಅಲ್ಲದೆ ಈ ಪದ್ಯಗಳ ರಸಾಸ್ವಾದನೆಯಿಂದ ಮನಸ್ಸಿಗೆ ಆನಂದವೂ ಆಗುತ್ತದೆ. ''ಸಂಸ್ಕೃತ ಅಲಂಕಾರಶಾಸ್ತ್ರದ ಇತಿಹಾಸದಲ್ಲಿ ಹೊಸ ದೃಷ್ಟಿಯನ್ನೂ ಹೊಸ ವಿಮರ್ಶೆಯನ್ನೂ ಕಾಣಬೇಕಾದರೆ ಮುಖ್ಯವಾಗಿ ಆನಂದವರ್ಧನನ ಧ್ವನ್ಯಾಲೋಕವನ್ನು ಅಭ್ಯಾಸ ಮಾಡಬೇಕು''—ಎಂದು ಲೇಖಕರು ಹೇಳಿರುವುದು ಸಹಜವಾಗಿದೆ.

'ಧ್ವನ್ಯಾಲೋಕ'ದ ಕನ್ನಡ ಅನುವಾದವನ್ನು ಕೃಷ್ಣಮೂರ್ತಿಗಳು ಪರಿಷ್ಕಾರವಾಗಿ ಮಾಡಿದ್ದಾರೆ. ಕಾರಿಕೆಗಳನ್ನು ಮೂಲಸಂಸ್ಕೃತದಲ್ಲಿ ಕೊಟ್ಟು, ಅದರ ಅನುವಾದವನ್ನು ಕೆಳಗೆ ಕೊಟ್ಟಿದ್ದಾರೆ. ಅನಂತರ ವೃತ್ತಿಯ ಕನ್ನಡ ಅನುವಾದವನ್ನು ಕೊಟ್ಟಿದ್ದಾರೆ. ಉದಾಹರಣಾರ್ಥವಾಗಿ ಬಂದಿರುವ ಪ್ರಾಕೃತ ಹಾಗೂ ಸಂಸ್ಕೃತ ಪದ್ಯಗಳನ್ನು ಉಚಿತವಾದ ಛಂದಸ್ಸಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಕನ್ನಡದಲ್ಲಿ ಪದ್ಯರಚನೆಯನ್ನು ಕರಗತ ಮಾಡಿಕೊಂಡಿರುವ ಕೃಷ್ಣಮೂರ್ತಿಗಳ ಭಾಷಾಂತರಗಳು ಲಲಿತವಾಗಿಯೂ ಸ್ಪಷ್ಟವಾಗಿಯೂ ರಂಜಕವಾಗಿಯೂ ಇವೆ. ಕಂದಪದ್ಯಗಳನ್ನಲ್ಲದೆ ಇತರ ಛಂದೋಭೇದಗಳನ್ನು ಕೂಡ ಪದ್ಯಗಳ ಅನುವಾದದಲ್ಲಿ ಬಳಸಿದ್ದಾರೆ. ಮೊದಲನೆಯ ಉದ್ಯೋತದ ಮೊದಲನೆಯ ಶ್ಲೋಕವನ್ನು ಹೇಗೆ ಕಂದಪದ್ಯಕ್ಕೆ ತಿರುಗಿಸಿದ್ದಾರೆ ಎಂಬುದನ್ನು ಕೆಳಗಿನ ಉದಾಹರಣೆಯಿಂದ ತಿಳಿಯಬಹುದು :

ಸ್ವೇಚ್ಛಾಕೇಸರಿಣಃ ಸ್ವಚ್ಛಸ್ವಚ್ಛಾಯಾಯಾಸಿತೇನ್ದುವಃ ।
ತ್ರಾಯನ್ತಾಂ ವೋ ಮಧುರಿಪೋಃ ಪ್ರಪನ್ನಾರ್ತಿಚ್ಛಿದೋ ನಖಾಃ ॥

ತೊಳಗುವ ತಿಳಿವೆಳಗಿಂ ಶಶಿ
ಕಳೆಯನಿಟಿಕೆಗೈದು ಭಕ್ತರೆಲ್ಲರ ಮಿಡುಕಂ ।
ಕಳೆಯಲ್ ಸಲೆ ನೆಱೆವ ನಖಾ
ವಳಿಯೆಮ್ಮಂ ಪೊರೆಗುದಾತ್ತನರಕೇಸರಿಯಾ ॥

ಶಕಟರೇಫ ಹಾಗೂ ಱಟಗಳನ್ನು ಉಳಿಸಿಕೊಂಡ ಪ್ರಾಚೀನ ಕವಿಗಳ ಶೈಲಿಯಾದರೂ, ಸ್ಪಷ್ಟಾರ್ಥದಿಂದ ಕೂಡಿದ ಸರಳಪದಪ್ರಯೋಗವು ಈ ಕಂದಪದ್ಯದಲ್ಲಿ ಬಂದಿದೆ.

ಷಟ್ಪದಿಗೆ ಒಂದು ಉದಾಹರಣೆ :

ಪ್ರಾತುಂ ಧನೈರರ್ಥಿಜನಸ್ಯ ವಾಂಛಾಂ
ದೈವೇನ ಸೃಷ್ಟೋ ಯದಿ ನಾಮ ನಾಸ್ಮಿ ।
ಪಥಿ ಪ್ರಸನ್ನಾಂಬುಧರಸ್ತಡಾಗಃ
ಕೂಪೋಽಥವಾ ಕಿಂ ನ ಜಡಃ ಕೃತೋಽಹಮ್ ॥ (೩-೧)

ಬೇಡುವರ ಮನದಾಸೆಯನು ನಾ
ನೀಡಿ ಸಲಿಸಲು ದೈವವೆನ್ನನು
ನಾಡೊಳಗೆ ಪುಟ್ಟಿಸದೆ ಪೋದುದದೆಂದು ನಂಬಿದರೂ !
ನೋಡುವೊಡೆ ವಿಧಿಯೇತಕೆನ್ನನು
ನಾಡೆ ನಿರ್ಮಲ ಸಲಿಲದಿಂದಲಿ
ಕೂಡಿರುವ ಕೆರೆಬಾವಿಯಾಗಿಯೆ ಜಡನ ನಿರ್ಮಿಸನು ॥

ಈ ಭಾಮಿನಿ ಷಟ್ಪದಿಯಲ್ಲಿ ಕನ್ನಡ ಕವಿಗಳು ಇಟ್ಟುಕೊಂಡಿದ್ದ ದ್ವಿತೀಯಾಕ್ಷರ ಪ್ರಾಸವನ್ನು ಕೂಡ ಪ್ರಯೋಗಮಾಡಿದ್ದಾರೆ.

ವೃತ್ತಕ್ಕೆ ಒಂದು ಉದಾಹರಣೆ :

ಶೂನ್ಯಂ ವಾಸಗೃಹಂ ವಿಲೋಕ್ಯಶಯನಾದುತ್ಥಾಯ ಕಿಂಚಿಚ್ಛನೈ-
ರ್ನಿದ್ರಾವ್ಯಾಜಮುಪಾಗತಸ್ಯ ಸುಚಿರಂ ನಿರ್ವರ್ಣ್ಯ ಪತ್ಯುರ್ಮುಖಮ್
ವಿಸ್ರಬ್ಧಂ ಪರಿಚುಂಬ್ಯಜಾತಪುಲಕಾಮಾಲೋಕ್ಯಗಂಡಸ್ಥಲೀಂ
ಲಜ್ಜಾನಮ್ರಮುಖೀ ಪ್ರಿಯೇಣ ಹಸತಾ ಬಾಲಾ ಚಿರಂ ಚುಂಬಿತಾ ॥

ಸಖಿಯರ್ ಪೋದುದ ಕಂಡು ಪಾಸ ದೆಸೆಯಿಂ ಮೇಲೇಳುತೊಯ್ಯೊಯ್ಯನಾ
ಸುಖನಿದ್ರಾಗತನೆಂಬವೋಲ್ ಮಲಗಿದಾ ಪ್ರಾಣೇಶನಾ ವಕ್ತ್ರಮಂ
ಸುಖದಿಂ ನೋಡುತೆ ಚುಂಬಿಸಲ್ ಕದಪಿನಾ ರೋಮಾಂಚಮಂ ಕಾಣುತುಂ
ಮುಖದೊಳ್ ನಾಣೊಗೆತಂದ ಬಾಲೆಯನವಂ ಕಾಂತಂ ಚಿರಂ ಚುಂಬಿಪಂ ॥

ಈ ಮತ್ತೇಭವಿಕ್ರೀಡಿತ ವೃತ್ತದಲ್ಲಿ ಸಂಸ್ಕೃತಪದಗಳನ್ನು ಹೆಚ್ಚಾಗಿ ಉಪಯೋಗಿಸದೆ ದೇಸೀ ಶಬ್ದಗಳನ್ನೇ ಹೆಚ್ಚಾಗಿ ಬಳಸಿ ಮೂಲದ ಸೊಗಸನ್ನು ಉಳಿಸಿಕೊಟ್ಟಿದ್ದಾರೆ.

ಪ್ರಶ್ನೆ-ಉತ್ತರ ಇರುವ ಒಂದು ಸರಸಪದ್ಯದ ಅನುವಾದದ ಸೊಗಸನ್ನು ಉದಾಹರಣೆಗೆ ತೆಗೆದುಕೊಳ್ಳಬಹುದು :

'ಕಸ್ತ್ವಂ ಭೋಃ' 'ಕಥಯಾಮಿ ದೈವಹತಕಂ ಮಾಂ ವಿದ್ಧಿ ಶಾಖೋಟಕಂ'
'ವೈರಾಗ್ಯಾದಿವಕ್ಷಿ' 'ಸಾಧುವಿದಿತಂ' 'ಕಸ್ಮಾದ್' 'ಇದಂ ಕಥ್ಯತೇ ।
ವಾಮೇನಾತ್ರ ವಟಸ್ತಮಧ್ವಗಜನಃ ಸರ್ವಾತ್ಮನಾ ಸೇವತೇ
ನಚ್ಛಾಯಾಪಿ ಪರೋಪಕಾರಕರಿಣೀ ಮಾರ್ಗಸ್ಥಿತಸ್ಯಾಪಿ ಮೇ' ॥ (೩-೪೦)

'ನೀನಾರು ಹೇಳುವೆಯ ?' 'ಕೇಳಯ್ಯ ತಿಳಿಸುವೆನು-
ವಿಧಿಹತಕ ನಾನೊಬ್ಬ ಶಾಖೋಟಕ !'
'ವೈರಾಗ್ಯ ಬಂದಂತೆ ಮಾತನಾಡುವೆ ನೀನು !'
'ಸರಿಯಾಗಿ ನೀನರಿತೆ' ; 'ಏಕೆ ಹೀಗೆ ?'

'ಹೇಳುವೆನು—ನೋಡಿಲ್ಲಿ ಎಡಕಿರುವ ವಟತರುವ-
ನದನು ಸೇವಿಸುತಿಹರು ಪಾಂಥರೆಲ್ಲ :
ದಾರಿಯಲೆ ನಾನಿರುವೆನಾದರೂ ನೆರಳೆನ್ನ
ಪರರಿಗುಪಕಾರವನು ಮಾಡಲಿಲ್ಲ' ॥

ಭೂತವು ಮನೆಮಾಡಿರುವ ಮರವೊಂದರೊಡನೆ ನಡೆದಿರುವ ಸಂಭಾಷಣೆ ಇದು. 'ಸಂಪತ್ಸಮೃದ್ಧನಾದ ಸತ್ಪುರುಷನ ನೆರೆಯಲ್ಲಿರುವ ನಿರ್ಧನನೂ ಅಭಿಮಾನಿಯೂ ಆದವನೊಬ್ಬನ ಸಂಕಟ'ವು ಈ ಪದ್ಯದಲ್ಲಿ ನಿರೂಪಿತವಾಗಿದೆ. ಈ ಪದ್ಯವನ್ನು ಸರಳವಾದ ಶಬ್ದಗಳ ಜೋಡಣೆಯಿಂದಲೇ ಸುಂದರವಾಗಿ ಹೆಣೆಯಲಾಗಿದೆ.

ಇದು ಪದ್ಯಗಳ ಭಾಷಾಂತರದ ಮಾತಾಯಿತು. ಅಲಂಕಾರಶಾಸ್ತ್ರಗ್ರಂಥಗಳಲ್ಲಿನ ಕಾರಿಕೆ ಮತ್ತು ವೃತ್ತಿಗಳ ಕನ್ನಡ ಗದ್ಯಾನುವಾದಕ್ಕೆ ಅರ್ಥಸ್ಪಷ್ಟತೆಯಿರುವ ಭಾಷೆಯೇ ಹೆಚ್ಚು ಉಪಯುಕ್ತ. ಮೂಲದಲ್ಲಿ ಇರುವುದನ್ನು ಬಿಡುವುದಾಗಲಿ, ಇಲ್ಲದೆ ಇರುವುದನ್ನು ಸೇರಿಸುವುದಾಗಲಿ ಇಲ್ಲಿ ಸಲ್ಲದು. 'ಧ್ವನ್ಯಾಲೋಕ'ದ ಎರಡನೆಯ ಉದ್ಯೋತದಲ್ಲಿ ಬರುವ ಏಳನೆಯ 'ಕಾರಿಕೆ'ಯ ಮತ್ತು ಅದರ 'ವೃತ್ತಿ'ಯ ಕನ್ನಡ ಅನುವಾದವನ್ನು ನಿದರ್ಶನಾರ್ಥ ತೆಗೆದುಕೊಳ್ಳಬಹುದು. ದೀರ್ಘವಾಗಿಲ್ಲದೆ ಇರುವುದರಿಂದ ಈ ಉದಾಹರಣೆಯನ್ನು ತೆಗೆದುಕೊಂಡಿದೆ :

ಕಾರಿಕೆ : ಶೃಂಗಾರ ಏವ ಮಧುರಃ ಪರಃ ಪ್ರಹ್ಲಾದನೋರಸಃ ।
ತನ್ಮಯಂ ಕಾವ್ಯಮಾಶ್ರಿತ್ಯ ಮಾಧುರ್ಯಂ ಪ್ರತಿತಿಷ್ಠತಿ ॥ ೭ ॥

(ರಸಗಳಲ್ಲೆಲ್ಲ ಶೃಂಗಾರವೇ ಅತ್ಯಂತ ಮಧುರವೂ ಆಹ್ಲಾದಕಾರಿಯೂ ಆದುದು. ಶೃಂಗಾರಪೂರ್ಣವಾದ ಕಾವ್ಯವನ್ನು ಆಶ್ರಯಿಸಿಕೊಂಡೇ 'ಮಾಧುರ್ಯ' ಗುಣವು ಪ್ರತಿಷ್ಠಿತವಾಗಿರುತ್ತದೆ.)

**ವೃತ್ತಿ** : ಮಿಕ್ಕ ಎಲ್ಲ ರಸಗಳಿಗಿಂತಲೂ ಶೃಂಗಾರವೇ ಮಧುರವಾದುದು ಮತ್ತು ಆಹ್ಲಾದಕ್ಕೆ ಕಾರಣವಾಗಿ ಪ್ರಕಾಶಿಸುವುದು. ಕಾವ್ಯದ ಶಬ್ದಾರ್ಥಗಳಲ್ಲಿ ಭಾಸವಾಗುವ ಈ ಗುಣವನ್ನೇ 'ಮಾಧುರ್ಯ'ವೆಂಬ ಹೆಸರಿನಿಂದ ಕರೆಯಬೇಕು : 'ಶ್ರವ್ಯತ್ವ' (=ಕಿವಿಗೆ

ಇಂಪಾಗಿರುವಿಕೆ)ವನ್ನಲ್ಲ; ಏಕೆಂದರೆ ಶ್ರವ್ಯತ್ವವು ಓಜಸ್ಸಿಗೂ ಸಮಾನವಾದ ಅಂಶ (ಮಾಧುರ್ಯದ ವೈಶಿಷ್ಟ್ಯವೇನೂ ಅಲ್ಲ).

ಸಂಸ್ಕೃತದ ಶಾಸ್ತ್ರಗ್ರಂಥವನ್ನು ಅನುವಾದಿಸಲು ಬೇಕಾದ ಸಂಸ್ಕೃತವಿದ್ವತ್ತು, ಕನ್ನಡ ಪಾಂಡಿತ್ಯ, ಸರಸಕವಿತ್ವಶಕ್ತಿ, ಉತ್ತಮವಾದ ಗದ್ಯಶೈಲಿಗಳನ್ನು ಕೃಷ್ಣಮೂರ್ತಿಗಳು ಸಂಪಾದಿಸಿಕೊಂಡಿರುವುದರಿಂದ ಇವರ ಅನುವಾದಗಳು ತೂಕವಾಗಿಯೂ ಉಪಯುಕ್ತ ವಾಗಿಯೂ ಇವೆ ಎನ್ನುವುದು ಸ್ಪಷ್ಟ.

ಎ. ಆರ್. ಕೃಷ್ಣಶಾಸ್ತ್ರಿಗಳು 'ಧ್ವನ್ಯಾಲೋಕ'ದ ಬಗ್ಗೆ ಹೇಳಿರುವ ಮಾತುಗಳನ್ನು ಇಲ್ಲಿ ಸ್ಮರಿಸಬಹುದು: "ಅವರು ಇಂಗ್ಲಿಷ್, ಸಂಸ್ಕೃತ, ಕನ್ನಡ ಮೂರರಲ್ಲೂ ಒಂದೇ ವಿಧವಾದ ಶ್ರೇಷ್ಠ ವಿದ್ವತ್ತನ್ನೂ ಪ್ರಶಸ್ತಿಯನ್ನೂ ಪಡೆದಿದ್ದಾರೆ. ಅಲಂಕಾರಶಾಸ್ತ್ರವನ್ನು ತಲಸ್ಪರ್ಶಿಯಾಗಿ ವ್ಯಾಸಂಗಮಾಡಿ ಬೊಂಬಾಯಿ ವಿಶ್ವವಿದ್ಯಾನಿಲಯಕ್ಕೆ 'ಧ್ವನಿ'ಯ ಮೇಲೆ ವಿದ್ವದುಪನ್ಯಾಸವನ್ನು ಬರೆದುಕೊಟ್ಟು ಪಿಎಚ್.ಡಿ., ಪ್ರಶಸ್ತಿಯನ್ನು ಪಡೆದಿದ್ದಾರೆ. ಅವರ ಕಾವ್ಯರಚನಾಶಕ್ತಿ ಆ ವಿದ್ವತ್ತಿಗೆ ಸರಿದೂಗುವಂತಿದೆ . . . ಒಟ್ಟಿನ ಮೇಲೆ ಭಾಷಾಂತರವು ಬಹು ತೃಪ್ತಿಕರವಾಗಿರುವುದರಿಂದ ಇದನ್ನು ಓದುವ ಕನ್ನಡಿಗರು ಸಂಸ್ಕೃತದ ಮೂಲವನ್ನು ತಾವು ಓದಲಿಲ್ಲವಲ್ಲಾ ಎಂದು ಚಿಂತಿಸಬೇಕಾದದ್ದಿಲ್ಲ. ಆದ್ದರಿಂದ ಆಧುನಿಕ ಕನ್ನಡ ಸಾಹಿತ್ಯಕ್ಕೆ ಡಾ. ಕೃಷ್ಣಮೂರ್ತಿಯವರಿಂದ ಆಗಿರುವ ಉಪಕಾರ ಬಹು ದೊಡ್ಡದು."

'ಧ್ವನ್ಯಾಲೋಕ'ದ ಅನುವಾದದ ಬಗ್ಗೆ ಹೇಳಿರುವ ಮಾತುಗಳೆಲ್ಲವೂ ಅವರ ಇತರ ಸಂಸ್ಕೃತದ ಅಲಂಕಾರಶಾಸ್ತ್ರ ಗ್ರಂಥಗಳ ಕನ್ನಡ ಅನುವಾದಗಳಿಗೆಲ್ಲ ಅನ್ವಯಿಸುತ್ತದೆ. ಆದುದರಿಂದ ಆ ಕನ್ನಡ ಅನುವಾದಗಳಿಂದ ಇಲ್ಲಿ ಉದಾಹರಣೆಗೆಂದು ಗದ್ಯವನ್ನಾಗಲಿ ಪದ್ಯವನ್ನಾಗಲಿ ಉದ್ಧರಿಸಿ ಕೊಟ್ಟಿಲ್ಲ.

ಭಾಮಹನ 'ಕಾವ್ಯಾಲಂಕಾರ' ಕನ್ನಡ ಅಭ್ಯಾಸಿಗಳಿಗೆ ತುಂಬ ಪ್ರಯೋಜನಕಾರಿ. ಏತಕ್ಕೆಂದರೆ ಕನ್ನಡ ಲಕ್ಷಣಗ್ರಂಥಗಳಲ್ಲಿ ಪ್ರಾಚೀನವೂ ಪ್ರಮುಖವೂ ಆದ 'ಕವಿರಾಜಮಾರ್ಗ', 'ಕಾವ್ಯಾವಲೋಕನ'ಗಳು ಬಹುಮಟ್ಟಿಗೆ ಭಾಮಹ ಮತ್ತು ದಂಡಿ ಇವರ ಕೃತಿಗಳನ್ನೇ ಅವಲಂಬಿಸಿವೆ. ಕ್ರಿ.ಶ. ೬ನೆಯ ಶತಮಾನದಿಂದ ೭ನೆಯ ಶತಮಾನಾಂತ್ಯದೊಳಗೆ ಸಂಸ್ಕೃತದಲ್ಲಿ ದೊರಕುವ ಪ್ರಾಚೀನತಮ ಲಕ್ಷಣ ಗ್ರಂಥಗಳು ಭಾಮಹನ 'ಕಾವ್ಯಾಲಂಕಾರ' ಮತ್ತು ದಂಡಿಯ 'ಕಾವ್ಯಾದರ್ಶ.' 'ಕನ್ನಡ ಕಾವ್ಯಾಲಂಕಾರ'ದ ಕೊನೆಯಲ್ಲಿ ಅನುಬಂಧವಾಗಿ ದಂಡಿಯ ಮೂಲಗ್ರಂಥದ ಅನುವಾದವನ್ನು ಕೊಡಲಾಗಿದೆ. ಭಾಮಹನು ಕಾವ್ಯ ಪ್ರಕಾರಗಳನ್ನೂ ದೋಷಗಳನ್ನೂ ವಿವರಿಸಿ ಅಲಂಕಾರಗಳ ಸ್ವಾರಸ್ಯವನ್ನು ಉದಾಹರಣೆಗಳೊಂದಿಗೆ ಸ್ಪಷ್ಟಪಡಿಸಿದ್ದಾನೆ. ತಾನು ಮೆಚ್ಚಿದ ಕಾವ್ಯಾಂಶಗಳನ್ನು ಬಿಡಿಸಿ ಹೇಳಿ, ಅವುಗಳ ಸ್ವಾರಸ್ಯವನ್ನು ಸಹೃದಯರು ಅರ್ಥಮಾಡಿಕೊಳ್ಳಲಿ ಎಂಬುದು ಭಾಮಹನ ಉದ್ದೇಶವೆಂದು ತೋರುತ್ತದೆ.

ಸಂಸ್ಕೃತ ಅಲಂಕಾರಶಾಸ್ತ್ರಗ್ರಂಥಗಳಲ್ಲಿ ಗಮನಾರ್ಹವಾದ ಇನ್ನೊಂದು ಗ್ರಂಥವೆಂದರೆ

ಮಮ್ಮಟನ 'ಕಾವ್ಯಪ್ರಕಾಶ.' "ಸಂಸ್ಕೃತದ ಅಲಂಕಾರಶಾಸ್ತ್ರದ ಇತಿಹಾಸದಲ್ಲಿ ಮಮ್ಮಟನ 'ಕಾವ್ಯಪ್ರಕಾಶ'ಕ್ಕೆ ಇರುವ ಪ್ರಾಶಸ್ತ್ಯ ಅದ್ವಿತೀಯವಾದುದು. ವೇದಾಂತದರ್ಶನದಲ್ಲಿ ಶಂಕರ ಭಗವತ್ಪಾದರ ಭಾಷ್ಯಗಳಿಗೆ ಯಾವ ಪರಮಮಹತ್ವವುಂಟೋ ಅದೇ ಮಹತ್ವವನ್ನು, ಅದೇ ಗೌರವವನ್ನು. ಆಸೇತುಹಿಮಾಚಲಪರ್ಯಂತ ಭಾರತವರ್ಷದ ವಿದ್ವಾಂಸರೆಲ್ಲ 'ಕಾವ್ಯಪ್ರಕಾಶ' ಹುಟ್ಟಿದಂದಿನಿಂದಲೂ ಅದಕ್ಕೆ ಸಲ್ಲಿಸುತ್ತ ಬಂದಿದ್ದಾರೆ. ಅಲಂಕಾರಶಾಸ್ತ್ರದ ಯಾವ ಚರ್ಚೆಗೇ ಆಗಲಿ ಮಮ್ಮಟನ ಮಾತೆಂದರೆ ಕಡೆಯ ಮಾತು . . . ಹಿಂದಿನವರ ಅಭಿಪ್ರಾಯಗಳೆಲ್ಲವನ್ನೂ ಒಂದೂ ಬಿಡದಂತೆ ಪ್ರತಿಪಾದಿಸಿ, ಕೂಲಂಕಷವಾಗಿ ಪರ್ಯಾಲೋಚಿಸಿ, ಸಂದೇಹಲೇಶಕ್ಕೂ ಅವಕಾಶವಿಲ್ಲದಂತೆ ಕೊನೆಯ ನಿರ್ಣಯವನ್ನು ಹೇಳುವ ಸಾಮರ್ಥ್ಯ ಮಮ್ಮಟನ ವೈಶಿಷ್ಟ್ಯ."—ಎಂದು ಪೀಠಿಕೆಯಲ್ಲಿ 'ಕಾವ್ಯಪ್ರಕಾಶ'ದ ಹಿರಿಮೆಯನ್ನೂ ಮಹತ್ವವನ್ನೂ ಲೇಖಕರು ಸ್ಪಷ್ಟಪಡಿಸಿದ್ದಾರೆ. ಮಮ್ಮಟನ ಪ್ರಮಾಣಗ್ರಂಥವಾದ 'ಕಾವ್ಯಪ್ರಕಾಶ'ದಲ್ಲಿ ಹಿಂದಿನವರ ವಿಚಾರಗಳೆಲ್ಲ ಯಥೋಚಿತವಾಗಿ ಐಕ್ಯಹೊಂದಿದೆ. ಮುಂದಿನವರಿಗೆಲ್ಲ 'ಕಾವ್ಯಪ್ರಕಾಶ'ವೇ ಮಾದರಿಯಾಗಿಬಿಟ್ಟಿದೆ ಎಂದು ಲೇಖಕರು ಈ ಗ್ರಂಥದ ಜನಪ್ರಿಯತೆಯನ್ನೂ ವೈಶಿಷ್ಟ್ಯವನ್ನೂ ಸ್ಪಷ್ಟಪಡಿಸಿದ್ದಾರೆ. ಇಂಥ ಪ್ರಮಾಣ ಗ್ರಂಥದ ಕನ್ನಡ ಅನುವಾದವು ಕನ್ನಡ ಅಭ್ಯಾಸಿಗಳಿಗೆ ಎಷ್ಟು ಮಟ್ಟಿಗೆ ಪ್ರಯೋಜನಕಾರಿ ಎಂಬುದನ್ನು ಹೇಳಬೇಕಾಗಿಲ್ಲ. ಮಮ್ಮಟನು ಪೌರಾಣಿಕ ಮಹಾಕಾವ್ಯ ನಾಟಕಾದಿಗಳಿಂದ ಪದ್ಯಗಳನ್ನು ಆರಿಸಿ ಲಕ್ಷ್ಯವಾಗಿ ಕೊಟ್ಟಿರುವುದು ಇದರ ಇನ್ನೊಂದು ವೈಶಿಷ್ಟ್ಯ.

'ಧ್ವನ್ಯಾಲೋಕ'ದ ಅನುವಾದದಂತೆಯೇ ಇಲ್ಲಿಯೂ ಸೂತ್ರವೃತ್ತಿ ಮೊದಲಾದುವುಗಳ ಕನ್ನಡ ಗದ್ಯಾನುವಾದವನ್ನು ಕೊಟ್ಟಿರುವುದಲ್ಲದೆ ಉದಾಹರಣ ಪದ್ಯಗಳ ಅನುವಾದವನ್ನೂ ಕೊಡಲಾಗಿದೆ. 'ಕನ್ನಡ ಕಾವ್ಯಾಲಂಕಾರ' ಮತ್ತು 'ಕನ್ನಡಕಾವ್ಯಪ್ರಕಾಶ'ದಲ್ಲಿ ಧಾರಾಳವಾಗಿ ಅಡಿಟಿಪ್ಪಣಿಗಳನ್ನು ಕೊಟ್ಟು ವಿವರಿಸಿರುವುದು ತುಂಬ ಪ್ರಯೋಜನಕಾರಿಯಾಗಿದೆ. 'ಕನ್ನಡ ಕಾವ್ಯಾಲಂಕಾರ'ದಲ್ಲಿ ನೃಪತುಂಗನ ಪದ್ಯಗಳನ್ನು 'ಕಾವ್ಯಾವಲೋಕನ'ದ ಪದ್ಯಗಳನ್ನು ಆವಶ್ಯಕವಾದೆಡೆ ಅಡಿಟಿಪ್ಪಣಿಗಳಲ್ಲಿ ಕೊಟ್ಟಿದ್ದಾರೆ. ಮಮ್ಮಟನ ಉಕ್ತಿಗಳ ವಿವರಣೆ ಮತ್ತು ವಿವೇಚನೆಗಳಿಗಾಗಿ ಅಡಿಟಿಪ್ಪಣಿಗಳನ್ನು ಕೊಡುವುದರ ಮೂಲಕ ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಿದ್ದಾರೆ.

'ಧ್ವನ್ಯಾಲೋಕ'ಕ್ಕೆ ಪೀಠಿಕಾರೂಪವಾದ 'ಆನಂದವರ್ಧನನ ಕಾವ್ಯಮೀಮಾಂಸೆ'ಯನ್ನು ಬರೆದಿರುವಂತೆಯೇ 'ಕಾವ್ಯಾಲಂಕಾರ', 'ಕಾವ್ಯಪ್ರಕಾಶ' ಮೊದಲಾದ ಗ್ರಂಥಗಳಿಗೂ ಸಮರ್ಥವಾದ, ವಿದ್ವತ್ಪೂರ್ಣವಾದ ಪೀಠಿಕೆಗಳನ್ನು ಕೊಟ್ಟಿದ್ದಾರೆ. ಈ ಪೀಠಿಕೆಗಳು ಆಯಾ ಗ್ರಂಥಗಳನ್ನು ಅರ್ಥಮಾಡಿಕೊಳ್ಳಲು ತುಂಬ ಸಹಕಾರಿಯಾಗಿವೆ. ಎಲ್ಲೂ ಸಂದಿಗ್ಧವಾದ ಮಾತುಗಳನ್ನು ಹೇಳದೆ, ನಿಷ್ಕೃಷ್ಟವಾಗಿ ಆಧಾರಸಹಿತವಾಗಿ ತಮ್ಮ ವಾದವನ್ನು ಮಂಡಿಸಿದ್ದಾರೆ.

ಭಾಷಾಂತರವು ಸುಲಭವಾದ ಕಲೆಯಲ್ಲ. ಶಾಸ್ತ್ರಗ್ರಂಥಗಳ ಅನುವಾದವು ಒಂದು

ರೀತಿಯದಾದರೆ, ಕಾವ್ಯ ನಾಟಕಗಳ ಅನುವಾದವು ಇನ್ನೊಂದು ರೀತಿಯದು. ಶಾಸ್ತ್ರ ಗ್ರಂಥಗಳಲ್ಲಿ ಸ್ಪಷ್ಟತೆಗೆ ಆದ್ಯತೆ. ಅಲ್ಲದೆ ಕ್ಲಿಷ್ಟವಲ್ಲದ ಗ್ರಾಹ್ಯವಾದ ಭಾಷೆ ಅಲ್ಲಿ ಅಗತ್ಯ. ಕಾವ್ಯ ಅಥವಾ ನಾಟಕಗಳ ಅನುವಾದದಲ್ಲಿ ಗದ್ಯ ಪದ್ಯಗಳೆರಡೂ ಇರುತ್ತವೆ. ಕಾವ್ಯದ ಅಥವಾ ನಾಟಕದ ಪದ್ಯಗಳ ಅನುವಾದದಲ್ಲಿ ಆಯಾ ರಸದ ಅಭಿವ್ಯಕ್ತಿಗೂ ನಾಟಕೀಯತೆಗೂ ಪ್ರಾಮುಖ್ಯ ಇರಬೇಕಾದುದು ಸಹಜ. 'ಕನ್ನಡ ಪ್ರತಿಮಾ ನಾಟಕ'ದ ಅರಿಕೆಯಲ್ಲಿ ಲೇಖಕರು ಅನುವಾದದ ಬಗ್ಗೆ ಸ್ಪಷ್ಟಪಡಿಸಿದ್ದಾರೆ : "ಸಂಸ್ಕೃತ ನಾಟಕಗಳು ಆದರ್ಶ ಜೀವನದ ಕನ್ನಡಿಗಳಾಗಿರುವುದಲ್ಲದೆ, ಗದ್ಯಪದ್ಯಮಯವಾಗಿಯೂ, ಪದ್ಯದಲ್ಲಿ ಒಂದು ಪ್ರಯತ್ನಸಾಧ್ಯವಾದ ಶೋಭಾತಿಶಯವನ್ನು ಪಡೆದೂ ಇರುತ್ತವೆ. ಇಂದಿನ ಭಾಷೆಗೆ ಆ ನಾಟಕಗಳನ್ನು ಭಾಷಾಂತರಿಸುವಾಗ ಪದ್ಯವನ್ನು ಆಡುಮಾತಿನ ಗದ್ಯದಲ್ಲಿ ಬರೆದರೆ ಮೂಲದ ಅರ್ಥ ಸೊಗಸಿಗೆ ಲೋಪ ಬರುವುದೆಂದು ನನ್ನ ಭಾವನೆ. ಇಂದಿನ ಪದ್ಯಗಳಲ್ಲೂ ಭಾಷೆಯ ಮರ್ಯಾದೆ ನೂತನವಾದಷ್ಟೂ ಈ ದೋಷ ಬರುವುದೆಂದೇ ನನ್ನ ಎಣಿಕೆ. ಆದರೆ ಹಿಂದಿನ ಕಂದವೃತ್ತಗಳಲ್ಲಿ ಪ್ರಾಸನಿಯಮಕ್ಕಾಗಿ ಮೂಲದಲ್ಲಿಲ್ಲದ್ದನ್ನು ಸೇರಿಸುವ, ಇದ್ದುದನ್ನು ಬಿಡುವ ಆವಶ್ಯಕತೆಯೂ ತಲೆದೋರುತ್ತದೆ. ಆದ್ದರಿಂದ ಆದಷ್ಟು ಮಟ್ಟಿಗೆ ಈ ಇಬ್ಬಗೆಯ ದೋಷಗಳೂ ಕಡಿಮೆಯಾಗಲೆನ್ನುವ ಉದ್ದೇಶದಿಂದ ದ್ವಿತೀಯಾಕ್ಷರ ಪ್ರಾಸ ನಿಯಮವನ್ನು ಪಾಲಿಸಲೇಬೇಕೆಂಬ ನಿಯಮವನ್ನು ಮೀರಿ, ಕಂದವೃತ್ತಗಳಲ್ಲಿ ನಾಟಕದ ಪದ್ಯಗಳನ್ನು ಭಾಷಾಂತರಿಸಿದ್ದೇನೆ." ಈ ಪ್ರಯತ್ನದಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆಂದೇ ಹೇಳಬೇಕು. ಸಂಭಾಷಣೆಗಳು ಇಂದಿನ ಕನ್ನಡದಲ್ಲಿವೆ ; ಎಂದರೆ ತೀರ ಆಡುಭಾಷೆಯಾಗದೆ, ನಾಟಕದ ಘನತೆಗೆ ಕುಂದುಬರದಂತೆ ನಾಟಕದ ಪ್ರಯೋಗಮಾಡಿದಾಗ ಪಾತ್ರಗಳು ಹೇಳಲು ಅನುಕೂಲವಾಗಿರುವಂತೆ ಭಾಷೆಯನ್ನು ಅಳವಡಿಸಿಕೊಂಡಿದ್ದಾರೆ. ಕೃಷ್ಣಮೂರ್ತಿಗಳು ಭಾಷಾಂತರಿಸಿದ ಈ ನಾಟಕಗಳೆಲ್ಲವೂ ಪದವಿತರಗತಿಗಳಿಗೆ ಪಠ್ಯಪುಸ್ತಕಗಳಾಗಿ ಆ ಒಂದು ಪರೀಕ್ಷೆಯಲ್ಲಿ ತೇರ್ಗಡೆಹೊಂದಿವೆ. ನಾನು ಈ ನಾಟಕಗಳನ್ನೆಲ್ಲ ತರಗತಿಗಳಲ್ಲಿ ಪಾಠಮಾಡಿದ ಅನುಭವದಿಂದ ಹೇಳಬಹುದು. ಈ ನಾಟಕಗಳನ್ನು ಪಾಠ ಮಾಡುವಾಗ ಕ್ಲಿಷ್ಟತೆಯಾಗಲಿ ಸಂದೇಹವಾಗಲಿ ಉಂಟಾಗಿಲ್ಲ. ಸಂಸ್ಕೃತ ನಾಟಕಗಳ ಅಥವ ಕಾವ್ಯಗಳ ಭಾಷಾಂತರವನ್ನು ಪಾಠಮಾಡುವಾಗ ಸಂದೇಹ ತಲೆದೋರಿದರೆ ಸಂಸ್ಕೃತಮೂಲವನ್ನು ಪರಿಶೀಲಿಸಬೇಕಾಗುತ್ತದೆ. ಕೃಷ್ಣಮೂರ್ತಿಗಳ ಅನುವಾದದ ಈ ನಾಟಕಗಳನ್ನು ಪಾಠ ಮಾಡುವಾಗ ಕುತೂಹಲದಿಂದ ಮೂಲದ ಸೊಗಸನ್ನು ನೋಡುವುದಕ್ಕಾಗಿ ಸಂಸ್ಕೃತದ ನಾಟಕಗಳನ್ನು ಪರಾಮರ್ಶಿಸಿರುವುದೇ ಹೊರತು, ಭಾಷಾಂತರ ಅರ್ಥವಾಗಲಿಲ್ಲ ಎಂದು ಮೂಲವನ್ನು ಪರಿಶೀಲಿಸಿಲ್ಲ. ಈ ಅಂಶವು ಈ ಅನುವಾದಗಳ ಮೌಲ್ಯವನ್ನು ಹೆಚ್ಚಿಸುತ್ತದೆ. ಭಾಷಾಂತರದ ರೀತಿಯನ್ನು ತಿಳಿಯಲು ಒಂದೆರಡು ಉದಾಹರಣೆಗಳನ್ನು ನಾವು ಇಲ್ಲಿ ಪರಿಶೀಲಿಸಬಹುದು.

ಇದು 'ಪ್ರತಿಮಾ ನಾಟಕ'ದ ಮೊದಲನೆಯ ಅಂಕದಲ್ಲಿ ಬರುವ ರಾಮ ಸೀತೆಯರ ನಡುವಿನ ಸಂವಾದ :

**ರಾಮ :** ಮೈಥಿಲಿ, ನೀನೇನು ಹೇಳುತ್ತಿರುವುದು ?

**ಸೀತೆ :** ಏನು ಇಲ್ಲ ; ಈ ಹುಡುಗಿ ಹೇಳುತ್ತಾಳೆ—'ಅಭಿಷೇಕ', 'ಅಭಿಷೇಕ' ಎಂದು.

**ರಾಮ :** ನಿನಗಿರುವ ಕುತೂಹಲ ನನಗೆ ತಿಳಿಯುತ್ತದೆ. ಅಭಿಷೇಕವುಂಟು. ಇಲ್ಲಿ ಕೇಳು—ಈ ದಿನ ಮಹಾರಾಜನು ಪುರೋಹಿತರು ಮಂತ್ರಿಗಳು ಪ್ರಜೆಗಳು ಎಲ್ಲರ ಸಮಕ್ಷದಲ್ಲಿ ಕೋಸಲ ರಾಜ್ಯವನ್ನೆಲ್ಲ ಒಂದುಗೂಡಿಸಿ, ಬಾಲ್ಯಪರಿಚಿತವಾದ ತೊಡೆಯ ಮೇಲೆ ನನ್ನನ್ನು ಕುಳ್ಳಿರಿಸಿ ಕೊಂಡು, ನನ್ನ ತಾಯ್ವೆಸರಿನ ಮೂಲಕ ಅಕ್ಕರೆಯಿಂದ ನುಡಿಸುತ್ತ, 'ಕಂದ, ರಾಮ, ರಾಜ್ಯವನ್ನು ಸ್ವೀಕರಿಸಪ್ಪಾ' ಎಂದನು.

**ಸೀತೆ :** ಆಗ ಆರ್ಯಪುತ್ರನು ಹೇಳಿದ್ದೇನು ?

**ರಾಮ :** ಮೈಥಿಲಿ, ನೀನೇ ಊಹಿಸು, ಏನು ಹೇಳಿರಬಹುದು ?

**ಸೀತೆ :** ನಾನು ಊಹಿಸುವುದಿಷ್ಟೆ—ಆರ್ಯಪುತ್ರನು ಏನನ್ನೂ ಹೇಳದೆಯೇ ನಿಟ್ಟುಸಿರುಬಿಡುತ್ತ ಮಹಾರಾಜನ ಅಡಿಯೆಡೆಯಲ್ಲಿ ಉರುಳಿರಬೇಕು.

**ರಾಮ :** ಸರಿಯಾಗಿ ಊಹಿಸಿದೆ. ಇಷ್ಟು ಸಮಾನಸ್ಕರಾದ ದಂಪತಿಗಳು ಹುಟ್ಟುವುದೇ ದುರ್ಲಭ. ನೀನೆಂದಂತೆ ನಾನು ತಂದೆಯ ಕಾಲೆಡೆಯಲ್ಲಿಯೇ ಕೆಡೆದೆ.

ಈ ಭಾಗವನ್ನು ಎರಡನೆಯ ಅಂಕದಲ್ಲಿ ಬರುವ ದಶರಥನ ವಿಲಾಪದ ಮಾತುಗಳೊಂದಿಗೆ ಹೋಲಿಸಿ ನೋಡಿದರೆ, ದಶರಥನ ಮಾತುಗಳಿಗೆ ತುಸು ಗಂಭೀರಭಾಷೆಯನ್ನು ಉಪ ಯೋಗಿಸಿದೆ ಎಂಬುದು ಕಂಡುಬರುವುದು.

**ದಶರಥರಾಜ :** ಪುತ್ರ ರಾಮಾ ! ವತ್ಸ ಲಕ್ಷ್ಮಣಾ ! ವಧು ವೈದೇಹೀ ! ನನಗೆ ಮರುಮಾತು ಕೊಡಿ ಮಕ್ಕಳಿರಾ ! ಓ ಎಲ್ಲವೂ ಶೂನ್ಯ ! ಯಾರೂ ನನಗೆ ಮರುಮಾತನ್ನು ಕೊಡು ವುದಿಲ್ಲ . . . ಕೌಸಲ್ಯಾತನಯ, ಎಲ್ಲಿರುವೆ ? . . . ಹಾ ! ಸರ್ವಜನರಿಗೂ ಹೃದಯ ನಯನಾಭಿರಾಮನಾದ ರಾಮನೆಲ್ಲಿ ? ನನ್ನಲ್ಲಿ ಗುರುವಿಧೇಯತೆಯ ಮೂರ್ತಿ ಯೆಲ್ಲಿ ? ಶೋಕಾರ್ತರ ವಿಷಯದಲ್ಲಿ ಅನುಕಂಪೆಯ ರಾಶಿಯೆಲ್ಲಿ ? ತೃಣದಂತೆ ರಾಜೈಶ್ವರ್ಯವನ್ನು ಕಡೆಗಣಿಸಿದಾತನೆಲ್ಲಿ ? ಪುತ್ರಾ ! ರಾಮಾ ! ನನ್ನನ್ನು, ಮುದುಕನಾದ ತಂದೆಯನ್ನು ಪರಿತ್ಯಾಗ ಮಾಡಿ ನೀನು ಆಚರಿಸಬೇಕಾಗಿರುವ ಅಸಂಬದ್ಧವಾದ ಧರ್ಮವಾವುದು ? ಅದಕ್ಕೆ ಧಿಕ್ಕಾರ! ಅಯ್ಯೋ. ಕಷ್ಟ—

ಭಾಷಾಂತರದಲ್ಲಿ ಪದ್ಯಗಳು ಎಷ್ಟು ಸುಂದರವಾಗಿ ಬಂದಿವೆಯೆಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು. 'ಪ್ರತಿಮಾನಾಟಕ'ದ ಮೊದಲನೆಯ ಅಂಕದಲ್ಲಿ ಬರುವ, ರಾಮನು ಸೀತೆಗೆ ಹೇಳುವ ಈ ಪದ್ಯವನ್ನು ನೋಡೋಣ :

ಪಿರಿದುಂ ಮುನಿವರೆ ಕೆಮ್ಮನೆ
ಪರಿಹಾಸಂಗೈಯಲೆಂದು ನಾಂ ನುಡಿದಾಗಳ್ ।
ನಿರುತಂ ಮುನ್ನಂ ನೀನು
ಟ್ಟಿರೆ ಮೇಣುಟ್ಟಂತೆಯಲ್ತೆ ಮದ್ವೇಹಾರ್ಥಂ ॥

ಗಂಭೀರವಾದ ಭಾವಕ್ಕೆ ರಾವಣನು ಸೀತೆಯನ್ನು ಕೊಂಡೊಯ್ಯುವಾಗ ನುಡಿಯುವ ಈ ವೃತ್ತವನ್ನು ಗಮನಿಸಬಹುದು :

ಆವಂ ಯುದ್ಧದೆ ದೇವದಾನವರನಾ ಶಕ್ರಾದ್ಯರಂ ಗೆಲ್ದನೋ
ಆತಂ ಶೂರ್ಪಣಖಾವಿರೂಪಕೃತಿಯಂ ಕಂಡುಂ ಹತರ್ ಸೋದರರ್ ।
ಎಂದೀಗಳ್ ಸಲೆ ಕೇಳಿ ದರ್ಪಬಲದಿಂ ಬೀಗಿರ್ಪನಂ ರಾಮನಂ
ಮಾತಿಂ ವಂಚಿಸಿ ನಿನ್ನನುಯ್ವೆನೆನುತುಂ ಬಂದಿರ್ಪೆನಾಂ ರಾವಣಂ ॥

'ಪ್ರತಿಮಾ ನಾಟಕ'ದ ಭಾಷಾಂತರದ ಬಗ್ಗೆ ನುಡಿದಿರುವ ಮಾತುಗಳನ್ನೆಲ್ಲ ಅವರ ಇತರ ಸಂಸ್ಕೃತ ನಾಟಕಗಳ ಭಾಷಾಂತರಗಳಾದ 'ಕನ್ನಡ ಉತ್ತರರಾಮಚರಿತೆ,' 'ಕನ್ನಡ ಮೃಚ್ಛಕಟಿಕ,' 'ಕನ್ನಡ ಯಜ್ಞಫಲ', 'ಕನ್ನಡ ಆಶ್ಚರ್ಯ ಚೂಡಾಮಣಿ' ಮೊದಲಾದ ನಾಟಕಗಳಿಗೂ ಅನ್ವಯಿಸಬಹುದು.

'ಕನ್ನಡ ಯಜ್ಞಫಲ' ನಾಟಕಕ್ಕೆ ಎ. ಆರ್. ಕೃಷ್ಣಶಾಸ್ತ್ರಿಗಳ 'ಯಜ್ಞಫಲ'ದ ವಿಮರ್ಶೆಯನ್ನು ಪೀಠಿಕೆಯಾಗಿ ಒದಗಿಸಿರುವುದನ್ನು ಬಿಟ್ಟರೆ ಉಳಿದ ನಾಟಕಗಳಿಗೆ ಆಯಾ ನಾಟಕಕಾರನ ಕಾಲ ದೇಶ ಮೊದಲಾದ ವಿಚಾರಗಳನ್ನೂ ನಾಟಕದ ವಿಮರ್ಶೆಯನ್ನೂ ಉಳ್ಳ ಉತ್ತಮವಾದ ಪೀಠಿಕೆಗಳನ್ನು ತಾವೇ ಒದಗಿಸಿದ್ದಾರೆ. ವಸ್ತು ಪಾತ್ರಗಳ ಸೊಗಸನ್ನು ಸುಂದರವಾದ ಭಾಷೆಯಲ್ಲಿ ನಿರೂಪಿಸಿದ್ದಾರೆ. ನಾಟಕಾಭ್ಯಾಸಿಗಳಿಗೆ ಈ ಪೀಠಿಕೆಗಳು ಪ್ರಯೋಜನಕಾರಿಯಾಗಿವೆ.

ಸಂಸ್ಕೃತದಲ್ಲಿ ಮಹಾಕಾವ್ಯವೆಂದೂ ಪಂಡಿತರ ಮಾನ್ಯತೆ ಪಡೆದ ಪ್ರಗಲ್ಭಕೃತಿಯೆಂದೂ ಪ್ರಸಿದ್ಧವಾದ ಭಾರವಿಯ 'ಕಿರಾತಾರ್ಜುನೀಯ'ವನ್ನು ಕನ್ನಡಿಸುವುದು ಕಷ್ಟಸಾಧ್ಯವಾದ ಕೆಲಸ. ಹೆಚ್ಚಿನ ಶಬ್ದಸಂಗ್ರಹ, ವೃತ್ತವೈವಿಧ್ಯ, ವ್ಯಾಕರಣಪ್ರಭುತ್ವ, ಶ್ಲೇಷ ಯಮಕಾದಿ ಕಷ್ಟಕರವಾದ ಅಲಂಕಾರಗಳನ್ನು ಉಪಯೋಗಿಸುವ ಪ್ರಗಲ್ಭತೆ, ಚಿತ್ರಬಂಧಗಳನ್ನೂ ಏಕಾಕ್ಷರಿ, ದ್ವ್ಯಕ್ಷರಿ, ಗತಪ್ರತ್ಯಾಗತ ಮುಂತಾದ ಕಸರತ್ತುಗಳನ್ನೂ ಮೆರೆಯುವಲ್ಲಿ ಭಾರವಿಯು ಅಗ್ರಗಣ್ಯನಾಗಿರುವನು. ಭಾರವಿಯನ್ನು 'ಪ್ರೌಢ ಮಹಾಕಾವ್ಯಗಳ ನೂತನ ಸಂಪ್ರದಾಯಕ್ಕೆ ಪ್ರವರ್ತಕ'ನೆನ್ನಲು ಅಡ್ಡಿಯಿಲ್ಲ. 'ಕಿರಾತಾರ್ಜುನೀಯ'ದ ಆರು ಸರ್ಗಗಳನ್ನು ಅನುವಾದ ಮಾಡುವಲ್ಲಿ ಕೃಷ್ಣಮೂರ್ತಿಗಳು ಮೂಲದ ಅರ್ಥಸ್ಪಷ್ಟತೆಗೂ ಸ್ವಾರಸ್ಯಕ್ಕೂ ಭಂಗಬಾರದ ರೀತಿಯಲ್ಲಿ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ. 'ಕಿರಾತಾರ್ಜುನೀಯ'ದ ಈ ಆರು ಸರ್ಗಗಳಲ್ಲಿ ಭೀಮಾರ್ಜುನದ್ರೌಪದಿಯಾದಿಯಾಗಿ, ಧರ್ಮರಾಯನೊಡನೆ ರಾಜ್ಯವನ್ನು ಹಿಂದಕ್ಕೆ ಪಡೆದುಕೊಳ್ಳುವ ಬಗ್ಗೆ ಆಡುವ ಪೌರುಷದ, ರಾಜನೀತಿಯ ಮಾತುಗಳೂ ಅದಕ್ಕೆ ಧರ್ಮರಾಯನು ಕೊಡುವ ನೀತಿಯುತವಾದ ಬೋಧೆಯೂ ವರ್ಣಿತವಾಗಿವೆ. ಅನಂತರ ವ್ಯಾಸರ ಉಪದೇಶದಂತೆ ಅರ್ಜುನನು ಪಾಶುಪತಾಸ್ತ್ರವನ್ನು ಪಡೆಯಲು ತಪಸ್ಸಿಗಾಗಿ ಇಂದ್ರಕೀಲಕ್ಕೆ ಹೋಗುವ ವರ್ಣನೆ ಬರುತ್ತದೆ. ಈ ಭಾಗವು ಅತ್ಯಂತ ಸ್ವಾರಸ್ಯವಾಗಿ ಹಲವು ರಾಜನೀತಿಯ ಸ್ವಾರಸ್ಯಗಳನ್ನು ಒಳಗೊಂಡು ರೋಚಕವಾಗಿದೆ. ಅನುವಾದವು ಸಫಲವಾಗಿದೆ. ಬೇರೆ ಬೇರೆ ಸರ್ಗಗಳಿಗೆ ಬೇರೆ ಬೇರೆ ಛಂದಸ್ಸನ್ನೇ ಉಪಯೋಗಿಸಿದ್ದಾರೆ. ಒಂದೆರಡು ಉದಾಹರಣೆಗಳನ್ನು ನೋಡಬಹುದು. ಧರ್ಮರಾಯನು ಭೀಮನಿಗೆ ನುಡಿಯುತ್ತಾನೆ :

ಆತುರಕ್ಕೆ ಕಾರ್ಯವೆಸಗಲಾಗದು, ಅವಿವೇಕವು
ಕಷ್ಟಮೂಲ ಪರಮವು ।
ಆ ವಿವೇಕಿಯನ್ನು ತಾವೆ ವರಿಪರಲ್ತೆ ಸಿರಿಗಳು
ಆಸೆಯಿಂದ ಗುಣದೊಳು ॥ (೨–೩೦)

ವ್ಯಾಸರ ವರ್ಣನೆಯಿದು :

ಶಾರದಚಂದ್ರನ ಕಿರಣಮನೋಹರ
ಕಾಂತಿಯಿನೆತ್ತರ ಕಾಣುತಿರೆ ।
ನೀಲಶರೀರನ ಕೆಂಜೆಡೆ ಹೊಳೆಯಲು
ಮಿಂಚನು ತಳೆದಾ ಮೋಡದೊಲು ॥

ಅರ್ಜುನನು ಇಂದ್ರಕೀಲಕ್ಕೆ ಹೋಗುವಾಗಿನ ಶರತ್ಕಾಲದ ಪ್ರಕೃತಿಯ ವರ್ಣನೆಯ ಒಂದು ಪದ್ಯ:

ನಭದೆ ಬೆಳ್ಳಕ್ಕಿಗಳು ಹಾರವು ಮಳೆಯ ಬಿಲ್ಲನು ಧರಿಸಿದ
ಸಾಲ್ಗಳಂತೆಯೆ ಮೋಡದ
ಆದೊಡತಿಶಯ ಚೆಲುವನಾಂತಿದೆ ಬಾನು, ಸಹಜದೆ ರಮ್ಯಕೆ
ಬೇರೆ ಸಿಂಗರವೇತಕೆ ॥ (೪–೨೩)

ಭಾರವಿಯ ಅರ್ಥಗೌರವದಿಂದ ಕೂಡಿದ ಪದ್ಯಗಳು ಸುಲಭವಾಗಿ ಅರ್ಥವಾಗುವಂತೆ ಸೊಗಸಾದ ಟಿಪ್ಪಣಿಯನ್ನು 'ಕನ್ನಡ ಕಿರಾತಾರ್ಜುನೀಯ'ದ ಕೊನೆಯಲ್ಲಿ ಕೊಟ್ಟು ಈ ಕಾವ್ಯದ ಉಪಯುಕ್ತತೆಯನ್ನು ಲೇಖಕರು ಹೆಚ್ಚಿಸಿದ್ದಾರೆ.

ಎ. ಆರ್. ಕೃಷ್ಣಶಾಸ್ತ್ರಿಗಳು 'ಸಂಸ್ಕೃತ ನಾಟಕ' ಗ್ರಂಥರಚನೆಯ ಮೂಲಕ ಸಂಸ್ಕೃತ ನಾಟಕ ಸಾಹಿತ್ಯದ ಪರಿಚಯವನ್ನು ಅತ್ಯಂತ ಮನೋಜ್ಞವಾಗಿಯೂ ಸಮರ್ಥವಾಗಿಯೂ ಮಾಡಿಕೊಟ್ಟಿದ್ದಾರೆ. ಅದಕ್ಕೆ ಸಂವಾದಿಯಾಗಿ ಸಂಸ್ಕೃತದಲ್ಲಿರುವ ಕಾವ್ಯಸಾಹಿತ್ಯದ ಬಗ್ಗೆ ಒಂದು ಸಮಗ್ರ ಪರಿಚಯಗ್ರಂಥದ ಕೊರತೆಯಿದ್ದಿತು. ಅದನ್ನು ಕೃಷ್ಣಮೂರ್ತಿಗಳು 'ಸಂಸ್ಕೃತ ಕಾವ್ಯ' ಎಂಬ ಕೃತಿಯ ಮೂಲಕ ಪೂರೈಸಿಕೊಟ್ಟರು. "ಈ ನೂರು ವರ್ಷಗಳಿಂದ ಬೆಳೆದಿರುವ ಸಂಸ್ಕೃತಕಾವ್ಯಗಳ ಬಗೆಗೆ ನಡೆದ ಸಂಶೋಧನೆಗಳ ಸಾರವನ್ನೂ, ಅದಕ್ಕಿಂತ ಮುಂಚೆ ಸಾವಿರಾರು ವರ್ಷಗಳಿಂದ ಬಂದಿರುವ ಭಾರತೀಯ ಸಾಂಪ್ರದಾಯಿಕ ವಿಚಾರವನ್ನೂ, ಎರಡನ್ನೂ ಹಿನ್ನೆಲೆಯಲ್ಲಿಟ್ಟುಕೊಂಡು, ಸಂಸ್ಕೃತ ಶ್ರವ್ಯಕಾವ್ಯದ ಪ್ರಧಾನ ಲೇಖಕರೆಲ್ಲರ ಕವಿಪರಿಚಯವನ್ನೂ ಕೃತಿವಿವೇಚನೆಯನ್ನೂ ಒಟ್ಟಿಗೆ ಮಾಡಿಕೊಡುವುದು ಈ ಗ್ರಂಥದ ಉದ್ದೇಶ" ಎಂಬ ಮಾತುಗಳಲ್ಲಿ ತಮ್ಮ ಮುಂದಿರುವ ಗುರಿಯನ್ನು ಲೇಖಕರು ಸ್ಪಷ್ಟಪಡಿಸಿದ್ದಾರೆ. ಶ್ರವ್ಯಕಾವ್ಯದ ವಿವಿಧಪ್ರಕಾರಗಳನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಕವಿಪರಿಚಯವನ್ನು ಎಷ್ಟು ಬೇಕೋ ಅಷ್ಟನ್ನು ಕೊಟ್ಟು, ಕಾವ್ಯ

ಪುರಾಣಕವಿಗಳಾದ ವಾಲ್ಮೀಕಿ ಋಷಿಗಳ ರಾಮಾಯಣ ೧೪೦ ಪುಟಗಳ ಈ ಗ್ರಂಥದಲ್ಲಿ ಮಹಾಭಾರತದ ವಿವೇಚನೆಗೆ ಸುಮಾರು ರಾಮಾಯಣದ ಹಾಗೂ ವ್ಯಾಸಮಹರ್ಷಿಗಳ ೧೩೦ ಪುಟಗಳನ್ನು ಮೀಸಲಾಗಿರಿಸಿದ್ದಾರೆ.

ರಾಮಾಯಣ ಮಹಾಭಾರತಗಳು ಭಾರತೀಯ ಸಾಹಿತ್ಯದಲ್ಲಿ ಅಂದಿನಿಂದ ಇಂದಿನ ವರೆಗೂ ನೂರಾರು ಕವಿಗಳ ಸ್ಫೂರ್ತಿಯ, ಕಾವ್ಯಾನಂದದ ಕಾವ್ಯಗಂಗೆಯಾಗಿ ಹರಿದಿವೆ. ಕೋಟ್ಯಂತರ ಜನರಿಗೆ ಆನಂದವನ್ನಿತ್ತು ಅವರ ಜೀವನಕ್ಕೆ ಬೆಳಕಾಗಿವೆ. ಆದುದರಿಂದ ಈ ಎರಡು ಕೃತಿಗಳಿಗೆ ಹೆಚ್ಚಿನ ಅವಕಾಶವನ್ನು ಕೊಟ್ಟಿರುವುದು ಸಕಾರಣವಾಗಿದೆ. ಈ ಮಹಾಕಾವ್ಯಗಳ ವಸ್ತುವಿನ ಘನತೆ, ವಿಸ್ತಾರ, ಆಳ ಮೊದಲಾದುವನ್ನು ವಿವರಿಸಿ ಪಾತ್ರಗಳ ಎತ್ತರವನ್ನೂ ವೈಶಿಷ್ಟ್ಯವನ್ನೂ ನಿರೂಪಿಸಿದ್ದಾರೆ. ಒಟ್ಟಿನಲ್ಲಿ ಈ ಕಾವ್ಯಗಳ ಕೇಂದ್ರ ವಸ್ತುವೇನು ಎಂಬುದನ್ನು ವಿವರಿಸಿದ್ದಾರೆ.

ಮುಂದೆ ಅಶ್ವಘೋಷ ಕಾಳಿದಾಸ ಕವಿಗಳ ಬಗೆಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದಾರೆ. ಮಹಾಕವಿಗಳಾದ ಭಾರವಿ, ಭಟ್ಟಿ, ಮಾಘ, ಶ್ರೀಹರ್ಷ ಮತ್ತು ಇವರ ಪೇಲ್ಬಂಕ್ತಿಯನ್ನನುಸರಿಸಿದ ಇತರ ಕವಿಗಳಿಗೆ ಒಂದು ಅಧ್ಯಾಯವನ್ನು ಒದಗಿಸಿದ್ದಾರೆ. ಲಘುಕಾವ್ಯಗಳಾಯಲ್ಲಿ ಪ್ರೇಮಗೀತೆ, ವಿಡಂಬನಕಾವ್ಯಗಳು, ಶತಕಗಳು ಮೊದಲಾದುವನ್ನು ವಿವರಿಸಿ, ಸ್ತೋತ್ರಕಾವ್ಯಗಳ ಬಗ್ಗೆ ಹೇಳಿದ್ದಾರೆ. ಮುಂದಿನ ಅಧ್ಯಾಯ ಗದ್ಯಕಾವ್ಯಗಳನ್ನು ಕುರಿತದ್ದಾಗಿದೆ. ಬಾಣನ 'ಕಾದಂಬರಿ' ಮತ್ತು 'ಹರ್ಷಚರಿತ'ಗಳಿಗೆ ಮೊದಲಿನ ಸ್ಥಾನವನ್ನು ಕೊಟ್ಟು, 'ಪಂಚತಂತ್ರ' ಮೊದಲಾದ ಕಥಾಸಾಹಿತ್ಯದ ಬಗ್ಗೆ ವಿವರಣೆಯನ್ನು ಕೊಟ್ಟಿದ್ದಾರೆ. ಅನಂತರ ಚಂಪೂಕಾವ್ಯಗಳ ಪರಿಚಯ ಮಾಡಿಕೊಟ್ಟಿದ್ದಾರೆ. ತಮ್ಮ ಈ ಗ್ರಂಥದಲ್ಲಿ ಧಾರಾಳವಾಗಿ ಪದ್ಯಗಳನ್ನು ಆಯಾ ಕವಿಗಳಿಂದ ಉದಾಹರಿಸಿರುವುದಲ್ಲದೆ ಅವುಗಳ ಪದ್ಯಾನುವಾದವನ್ನು ಕೊಟ್ಟಿದ್ದಾರೆ. ಎಲ್ಲೆಲ್ಲಿ ಪ್ರಚುರವಿರುವ ಕವಿಗಳ ಭಾಷಾಂತರಗಳು ದೊರೆಯುವುವೋ ಅಲ್ಲೆಲ್ಲ ಆ ಪದ್ಯಗಳನ್ನು ಉದಾಹರಿಸಿದ್ದಾರೆ. ತೀ.ನಂ.ಶ್ರೀ., ಎಸ್.ವಿ. ಪರಮೇಶ್ವರ ಭಟ್ಟ ಮೊದಲಾದವರ ಲಭ್ಯವಿರುವ ಭಾಷಾಂತರಗಳನ್ನು ಕೊಟ್ಟಿರುವುದು ಇದರ ವೈಶಿಷ್ಟ್ಯ.

ಒಟ್ಟಿನಲ್ಲಿ ಸಂಸ್ಕೃತ ಕಾವ್ಯಸಾಹಿತ್ಯದ ಪರಿಚಯ ಈ ಗ್ರಂಥದ ಮೂಲಕ ಆಗಿ, ಮುಂದೆ ಹೆಚ್ಚಾಗಿ ತಿಳಿಯಬೇಕೆಂಬ ಕುತೂಹಲವನ್ನುಂಟುಮಾಡುತ್ತದೆ. ವಿಮರ್ಶೆ ಎಲ್ಲಿಯೂ ಕಠಿಣವಾಗಿಲ್ಲ; ಹಾಳತವಾಗಿದೆ, ಹದವಾಗಿದೆ. ಅವರ ಇತರ ಗ್ರಂಥಗಳಾದ 'ಭಾರವಿ', 'ಕನ್ನಡದಲ್ಲಿ ಕಾವ್ಯತತ್ತ್ವ', 'ದಂಡಿಭಾಮಹರ ಕೃತಿಗಳು : ತುಲನಾತ್ಮಕ ಅಧ್ಯಯನ', 'ಸೃಜನಶೀಲತೆ ಮತ್ತು ಪಾಂಡಿತ್ಯ' ಮೊದಲಾದುವು ಕಿರಿಯ ಕೃತಿಗಳಾದರೂ, ಅವುಗಳಲ್ಲಿ ವಿಮರ್ಶೆಯ ಸಮತೋಲನ, ವಿದ್ವತ್ಪೂರ್ಣ ವಿವೇಚನೆ, ಸರಳವಾದ ನಿರೂಪಣೆ, ವಿಪುಲ ವಿಷಯಸಂಗ್ರಹ—ಮೊದಲಾದ ಗುಣಗಳನ್ನು ಅವರು ಮೆರೆದಿದ್ದಾರೆ. 'ಸೃಜನಶೀಲತೆ ಮತ್ತು ಪಾಂಡಿತ್ಯ', ಒಂದು ಸಣ್ಣ ಕೃತಿಯಾದರೂ ಅದರ ವಿಷಯನಿರೂಪಣೆ

ಯಲ್ಲಿ ನಾವೀನ್ಯವನ್ನೂ ಸ್ವಂತಿಕೆಯನ್ನೂ ಮೆರೆದಿದ್ದಾರೆ.''ಈ ಲೇಖಕನು ತನ್ನ ಅಧ್ಯಯನದ ಮಿತಿಯಲ್ಲಿ ಇವುಗಳ ಪೈಕಿ ಮುಖ್ಯವಾದ ಕೆಲವು ಮುಖಗಳನ್ನೂ ಸಾಮಾನ್ಯವಾಗಿ ಪರಿಚಿತವಲ್ಲದ ಕೆಲವು ಮುಖಗಳನ್ನೂ ಸಪ್ರಮಾಣವಾಗಿ ಪರಿಚಯಿಸಲು ಎಳಸಿರುವ ಒಂದು ದೀರ್ಘಪ್ರಬಂಧವೆಂದು ಇದನ್ನು ಎಣಿಸಬೇಕೇ ಹೊರತು. ಇದನ್ನೊಂದು ಪ್ರೌಢ ಗ್ರಂಥವೆಂದು ಭಾವಿಸಬಾರದು'' ಎಂದು ವಿನಯದಿಂದ ಹೇಳಿದ್ದಾಗ್ಗೂ ಇದರ ವಿಷಯವು ಪ್ರೌಢವೇ ಆಗಿದೆ. 'ಕವಿಯ ರಸದೃಷ್ಟಿ ವಿದ್ವಾಂಸರ ವೈಚಾರಿಕದೃಷ್ಟಿ ಇವನ್ನು ಪರಿಪೂರ್ಣ ಜೀವನಾನುಭವಕ್ಕೆ ಅಗತ್ಯವಾದ ಎರಡು ಕಣ್ಣುಗಳೆನ್ನುವಂತಾಯಿತು': ಇವೆರಡರ ಅನಂತಮುಖಗಳ ಸ್ಥೂಲಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ. ಪ್ರಾಚೀನ ಮತ್ತು ಆಧುನಿಕ ಕವಿಗಳಿಂದ ವಿಪುಲವಾಗಿ ದೃಷ್ಟಾಂತಗಳನ್ನು ಕೊಟ್ಟು ವಿಷಯದ ಜ್ಞಾನಕ್ಕೆ ಅನುವುಮಾಡಿಕೊಟ್ಟಿದ್ದಾರೆ.

ಕೃಷ್ಣಮೂರ್ತಿಗಳು ಸಂಪಾದಿಸಿರುವ ಕನ್ನಡಕೃತಿ 'ಕವಿರಾಜಮಾರ್ಗಂ' ವಿಶಿಷ್ಟವಾದುದಾಗಿದೆ. ಅಲಂಕಾರಶಾಸ್ತ್ರದ ಹಲವು ಶ್ರೇಷ್ಠಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಅವುಗಳಿಗೆ ವಿದ್ವತ್ಪೂರ್ಣವಾದ ಪೀಠಿಕೆ ಬರೆದಿದ್ದ ಅವರು, ಕನ್ನಡದ ಮೊದಲ ಲಕ್ಷಣ ಗ್ರಂಥವಾದ 'ಕವಿರಾಜಮಾರ್ಗ'ವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. 'ಕವಿರಾಜಮಾರ್ಗ' ಕೃತಿಗೆ ಕನ್ನಡ ಸಾಹಿತ್ಯದಲ್ಲಿ ಅತಿ ಮಹತ್ವದ ಸ್ಥಾನವಿದೆ. ಅದು ಒಂದು ಲಕ್ಷಣ ಗ್ರಂಥ ಎಂಬಷ್ಟೆ ಅದರ ಪ್ರಾಮುಖ್ಯಕ್ಕೆ ಕಾರಣವಲ್ಲ. ಅದು ಕನ್ನಡದಲ್ಲಿ ದೊರೆತಿರುವ ಮೊತ್ತ ಮೊದಲ ಕೃತಿ. 'ಕವಿರಾಜಮಾರ್ಗ'ವು ಕನ್ನಡ ನಾಡು, ಕನ್ನಡ ಸಾಹಿತ್ಯ ಚರಿತ್ರೆ, ವ್ಯಾಕರಣ ಹಾಗೂ ಕಾವ್ಯಲಕ್ಷಣ, ಛಂದಸ್ಸು, ಅಲಂಕಾರ—ಹೀಗೆ ಹಲವು ದೃಷ್ಟಿಗಳಿಂದ ಅಧ್ಯಯನ ಮಾಡುವವರಿಗೆ ಒಂದು ಖನಿಯಂತಿದೆ. 'ಕವಿರಾಜಮಾರ್ಗ'ದಲ್ಲಿ ಉದಾಹರಿಸಿರುವ ಲಕ್ಷ್ಯ ಪದ್ಯಗಳದೂ ಒಂದು ಮಹತ್ತ್ವವೇ. ಈ ಲಕ್ಷ್ಯಪದ್ಯಗಳು ಕಾವ್ಯಗುಣಗಳಿಂದ ರಸಿಕರ, ಸಹೃದಯರ ಮನಸ್ಸನ್ನು ಸೂರೆಗೊಳ್ಳುತ್ತವೆ. ಈವರೆಗೆ 'ಕವಿರಾಜಮಾರ್ಗ'ದ ಹಲವು ಆವೃತ್ತಿಗಳು ಪ್ರಕಟವಾಗಿವೆ. ಅನೇಕ ಅಭ್ಯಾಸಪೂರ್ಣ ಲೇಖನಗಳು ಬಂದಿವೆ; ಅನೇಕ ಚರ್ಚೆಗಳಾಗಿವೆ. ''ಇಷ್ಟೊಂದು ಪಂಡಿತರ ವಾದ ಪ್ರತಿವಾದಗಳು ನಡೆದಿದ್ದರೂ ಮೂಲ ಗ್ರಂಥದ ಅರ್ಥನಿರ್ಣಯದ ಪ್ರಯತ್ನ ಸಾಕಷ್ಟು ಸಮಗ್ರವಾಗಿ ನಡೆದಿಲ್ಲವೆಂಬುದನ್ನು ಮನಗಂಡು, ಆ ದಿಕ್ಕಿನಲ್ಲಿ ಮೊದಲ ಪ್ರಯತ್ನವಾಗಿ ಪ್ರತಿಪದ್ಯಕ್ಕೂ (ದುಷ್ಕರಬಂಧ ಪದ್ಯಗಳನ್ನು ಮಾತ್ರ ಅನುವಾದಿಸಿಲ್ಲ) ಅದರಡಿಯಲ್ಲೇ ಹೊಸಗನ್ನಡ ಅನುವಾದವನ್ನು ಇಲ್ಲಿ ಪ್ರಪ್ರಥಮವಾಗಿ ಕೊಡಲಾಗಿದೆ. ಅರ್ಥನಿರ್ಣಯಕ್ಕೆ ಅವಶ್ಯವಿದ್ದೆಡೆಯಲ್ಲೆಲ್ಲ ವಿವರಣಾತ್ಮಕ ಟಿಪ್ಪಣಿಯನ್ನೂ ವಿವೇಚನಾತ್ಮಕ ವಿಷಯಪರಿಶೀಲನೆಯನ್ನೂ ಅನುವಾದದ ಜತೆಜತೆಗೇ ಆವರಣಚಿಹ್ನೆಗಳಲ್ಲಿ ಅಭ್ಯಾಸಕ್ಕೆ ಅನುಕೂಲವಾಗುವಂತೆ ಒದಗಿಸಿದೆ'' ಎಂದು ಲೇಖಕರು ಈ ಕೃತಿಯ ರಚನೆಯ ಬಗ್ಗೆ ತಿಳಿಸಿದ್ದಾರೆ. ಗದ್ಯಾನುವಾದ ಮಾಡುವುದಕ್ಕೆ ಮೊದಲು ಅರ್ಥ ಸ್ಪಷ್ಟವಾಗಬೇಕು. ಅದಕ್ಕೆ ಸಾಧಕವಾದ ಗ್ರಂಥಪಾಠದ ನಿರ್ಣಯ ಅಗತ್ಯ. ಅರ್ಥಬಾಧೆಯ ಪ್ರಸಂಗದಲ್ಲಿ ಆದಷ್ಟು ಕಡಿಮೆ ವ್ಯತ್ಯಾಸವಿರುವಂತೆ ಮೂಲ

ಪಾಠವನ್ನು ತಿದ್ದಿ ಪರಿಷ್ಕರಿಸಿಕೊಂಡಿದ್ದಾರೆ, ಲೇಖಕರು. ಆಯಾ ಪುಟಗಳ ಅಡಿಯಲ್ಲಿಯೇ ಮಿಕ್ಕ ಪಾಠಾಂತರಗಳನ್ನು ಕೊಡಲಾಗಿದೆ. ಮುಂದಿನ ಸಂಶೋಧಕರಿಗೆ ಇದು ಸಹಾಯಕ ವಾಗುತ್ತದೆ.

'ಕವಿರಾಜಮಾರ್ಗ'ದ ಕರ್ತೃ, ಅವನ ಕಾಲ ಮೊದಲಾದ ವಿಷಯಗಳನ್ನು ಆಂತರಿಕ ಬಾಹ್ಯಪ್ರಮಾಣಗಳಿಂದಲೂ ಹೊಸ ವಿಷಯಗಳ ಸಂಗ್ರಹಣೆಯಿಂದಲೂ ಪೀಠಿಕೆಯಲ್ಲಿ ಚರ್ಚಿಸಲಾಗಿದೆ. 'ಶ್ರೀವಿಜಯನಿಂದ ರಚಿತವಾಗಿ ನೃಪತುಂಗನಿಗೆ ಆರೋಪಿತವಾದುದು' ಎಂದು 'ಕವಿರಾಜಮಾರ್ಗ'ದ ಕರ್ತೃತ್ವವನ್ನು ಒಪ್ಪಿಕೊಂಡು, "ಮುಂದೆ ಶ್ರೀವಿಜಯನೆಂಬ ಬಿರುದೋ ಅಂಕಿತವೋ ನೃಪತುಂಗನಿಗಿತ್ತೆಂದು ಸ್ಪಷ್ಟಪಡಿಸುವ ಹೊಸ ಆಧಾರಗಳು ದೊರೆತರೆ, ಈ ನಿರ್ಣಯ ಮತ್ತೆ ಬದಲಾಗುವ ಸನ್ನಿವೇಶವಿಲ್ಲದೆ ಇಲ್ಲ" ಎಂದು ಅಭಿಪ್ರಾಯಪಡಲಾಗಿದೆ. ಹಲವು ಆಧಾರಗಳ ಮೂಲಕ ನೃಪತುಂಗನು ಜೈನಧರ್ಮದಲ್ಲಿ ವಿಶೇಷ ಶ್ರದ್ಧಾವಂತನಾಗಿದ್ದನೆಂದು ನಿಸ್ಸಂಶಯವಾಗಿ ಹೇಳಬಹುದು ಎಂದೂ ಸ್ಪಷ್ಟಪಡಿಸಿದ್ದಾರೆ.

ಕೃಷ್ಣಮೂರ್ತಿಗಳು ಕನ್ನಡ ಸಂಸ್ಕೃತಗಳೆರಡರಲ್ಲೂ ವಿಶೇಷಪರಿಣತಿ ಪಡೆದ ವಿದ್ವಾಂಸರಾದುದರಿಂದಲೂ ಕನ್ನಡ ಭಾಷೆಯ ಮೇಲೆ ತಕ್ಕಮಟ್ಟಿನ ಪ್ರಭುತ್ವವನ್ನು ಸಂಪಾದಿಸಿಕೊಂಡಿರುವುದರಿಂದಲೂ 'ಕವಿರಾಜಮಾರ್ಗ'ದ ಗದ್ಯಾನುವಾದವನ್ನು ಪರಿಷ್ಕಾರವಾಗಿ ಮಾಡಿದ್ದಾರೆ ಎನ್ನುವುದರಲ್ಲಿ ಸಂದೇಹವಿಲ್ಲ. ಸಂಸ್ಕೃತದ ಅಲಂಕಾರಶಾಸ್ತ್ರ ಗ್ರಂಥಗಳ ಕಾರಿಕೆ ಮತ್ತು ವೃತ್ತಿಗಳಿಗೆ ಕನ್ನಡ ಅನುವಾದವನ್ನು ಮಾಡಿರುವುದರಿಂದ ಇಂಥ ಅನುವಾದಕಾರ್ಯದಲ್ಲಿ ಅವರು ಸಿದ್ಧಹಸ್ತರಾಗಿದ್ದಾರೆ.

ಅವರ ಅನುವಾದದ ಒಂದೆರಡು ಉದಾಹರಣೆಗಳನ್ನು ಮಾದರಿಗಾಗಿ ಉದಾಹರಿಸಬಹುದು :

ಕಾವೇರಿಯಿಂದಮಾ ಗೋ
ದಾವರಿವರಮಿರ್ದ ನಾಡದಾ ಕನ್ನಡದೊಳ್ ।
ಭಾವಿಸಿದಜನಪದಂ ವಸು
ಧಾವಲಯ-ವಿಲೀನ-ವಿಶದ-ವಿಷಯ-ವಿಶೇಷಂ ॥ (೧–೩೬)

ಅನುವಾದ : ಕನ್ನಡದಲ್ಲಿ ಖ್ಯಾತ ಹೆಸರನ್ನು ತಳೆದ ನಾಡು (=ಕನ್ನಡನಾಡು) ಭೂಮಂಡಲದ ಮೇಲಿನ ಪ್ರಸಿದ್ಧದೇಶಗಳಲ್ಲಿ ಒಂದೆನಿಸಿ, ಕಾವೇರಿಯಿಂದ ಗೋದಾವರಿಯವರೆಗೂ ಇರುವ ನಾಡು.

ಈ ಪದ್ಯವು ಕನ್ನಡಿಗರಿಗೆಲ್ಲ ಸುಪರಿಚಿತವಾದುದು. ಅತಿಶಯೋಕ್ತಿಯ ಒಂದು ಉದಾಹರಣೆಯನ್ನು ನೋಡೋಣ :

ಮೇರೆಗಳಿದಿರೆ ವಿಶೇಷ-ವಿ
ಚಾರಮನಧಿಕೋಕ್ತಿಯೊಳ್ ತಗುಳ್ಚುವುದಕ್ಕುಂ ।
ಸಾರತರಮತಿಶಯಾಲಂ
ಕಾರಂ ಮತ್ತದಱ ಲಕ್ಷ್ಯಮಿಾ ತೆಱನಕ್ಕುಂ ॥

ಅಭ್ಯಾಸ

ಗೈರಿಕ-ರಸಾದ್ರ್ರವರ್ಣಮಂ ಸಿಂ
ದೂರದೆ ತಲೆವಜ್ಜಿದುದಂ ಕರಂ ಕಂಡಾಂ ಸಂ- ।
ಧ್ಯಾರಾಗದೊಳಜ್ಜಿಯದೆ ಮದ-
ವಾರಣಮಂ ಸೋಂಕಿ ಕೆಲದೊಳೊಯ್ಯನೆ ಪೋದೆಂ ॥ (೩-೯೨, ೯೩)

(ಲೋಕವ್ಯವಹಾರದ) ಮೇರೆಯನ್ನು ತುಂಬಾ ಮೀರಿದ ವಿಶೇಷಾಂಶವೊಂದನ್ನು ವರ್ಣ್ಯಮಾನ ವಿಷಯದಲ್ಲಿ ತಂದು ಸೇರಿಸುವುದೇ 'ಅತಿಶಯೋಕ್ತಿ'. ಅದರ ಉದಾಹರಣೆ ಈ ರೀತಿಯಿರುತ್ತದೆ—[ಇದು ಸಂಧ್ಯಾರಾಗದ ವರ್ಣನಾಪದ್ಯ] 'ಗೈರಿಕ' ಎಂಬ ಕೆಂಪಾದ ಶಿಲಾಧಾತುವಿನಿಂದ ಮೈಯೆಲ್ಲ ತೊಯ್ದಿದ್ದ ತಲೆಯ ಮೇಲೆಲ್ಲ ಸಿಂದೂರದ ಕೆಂಪುಬಣ್ಣ ಬಳಿಯಲಾಗಿದ್ದ ಮದ್ದಾನೆಯನ್ನು ಸಂಧ್ಯಾರಾಗದ ಸಮಯದಲ್ಲಿ ನಾನು ಕಂಡರೂ, ಆನೆಯೆಂದರಿಯಲಾರದೆ, ಅದನ್ನು ಹಾಯ್ದುಕೊಂಡೇ ಪಕ್ಕದಲ್ಲಿ ಹೇಗೋ ಹೋದೆನು [ಇಲ್ಲಿ ಸಂಧ್ಯಾರಾಗವು ಎಷ್ಟೊಂದು ಕೆಂಪಾಗಿತ್ತೆಂಬುದರ ವಿಶೇಷನಿದರ್ಶನವಾಗಿ ಅದೇ ಬಣ್ಣ ಬಳಿದ ಆನೆ ಕೂಡ ಆನೆಯೆಂದು ತಿಳಿಯುತ್ತಿರಲಿಲ್ಲವೆಂದು ವರ್ಣಿಸಲಾಗಿರುವುದರಿಂದ ಅತಿಶಯೋಕ್ತಿ. ಎಷ್ಟೇ ಕೆಂಬಣ್ಣ ಬಳಿದರೂ ಆನೆಯನ್ನು ಸಂಜೆಗೆಂಪಿನ ಕಾರಣ ಆನೆಯೆಂದರಿಯದೆ ಹೋಗುವುದು ಲೋಕಾತಿಕ್ರಾಂತವಾದ ವಿಚಾರವಾದ್ದರಿಂದ ಇದಕ್ಕೆ ಅತಿಶಯೋಕ್ತಿಯೆಂಬ ಹೆಸರು ಅನ್ವರ್ಥಕವಾಗಿದೆ].

ಸೂತ್ರದ ಹಾಗೂ ಲಕ್ಷ್ಯಪದ್ಯದ ಅನುವಾದದ ಜತೆಗೆ ಲಕ್ಷ್ಯಪದ್ಯದಲ್ಲಿರುವ ಅಲಂಕಾರದ ಸೊಗಸನ್ನು ಬಿಡಿಸಿ ಹೇಳಿರುವುದು ಅತ್ಯಂತ ಪ್ರಯೋಜನಕಾರಿಯಾಗಿದೆ.

ಕೃಷ್ಣಮೂರ್ತಿಗಳು ಸಂಸ್ಕೃತದಿಂದ ಕನ್ನಡಕ್ಕೆ ಎಷ್ಟು ನಿಪುಣತೆಯಿಂದ ಸುಂದರವಾಗಿ ಅನುವಾದವನ್ನು ಮಾಡಬಲ್ಲರೋ ಕನ್ನಡದಿಂದ ಸಂಸ್ಕೃತಕ್ಕೂ ಅನುವಾದವನ್ನು ಅಷ್ಟೇ ಹೃದ್ಯವಾಗಿ ಸುಲಲಿತವಾಗಿ ಮಾಡಬಲ್ಲರು ಎಂಬುದಕ್ಕೆ ವಿ. ಕೃ. ಗೋಕಾಕರ 'ಭಾರತ-ಸಿಂಧುರಶ್ಮಿ' ಕಾವ್ಯದ 'ಅಮೃತಮುಹೂರ್ತಂ' ಎಂಬ ಭಾಗದ ಸಂಸ್ಕೃತಾನುವಾದವು ಒಂದು ಉದಾಹರಣೆಯಾಗಿದೆ. ಆ ಅನುವಾದದ ಒಂದು ತುಣುಕನ್ನು ಇಲ್ಲಿ ಕಾಣಬಹುದು :

ಇದ್ದುದೆಲ್ಲವು ಬಿದ್ದು ಬೂದಿಯಿರೆ, ಬೂದಿಯನು,
ಸತ್ತವರ ದೇಹವಿರೆ ಮೃತ್ತಿಕೆಯು, ಮೃತ್ತಿಕೆಯ
ಹೊತ್ತು ಸದ್ದಿಲ್ಲದಲೆ ಬಾಂಬಯಲೊಳಲೆಯುತಿಹ
ಭಸ್ಮಕುಂಭವು ನಾನು. ಪೃಥ್ವಿ ಎನ್ನುವರೆನ್ನ !
ಜೇನುಹುಟ್ಟಿರಲೇನು, ಜೇಡಿಮಣ್ಣಿರಲೇನು ;
ತಿರುಕನೇನರಸೇನು, ರಾಣಿ ಜಾಣೆಯರೇನು ?
ಮಣ್ಣಿನಲಿ ಮುಕ್ತಾಯ ; ಮಣ್ಣಿಗೆ ಮಡಿಕೆ ಮಡಿಲಲ್ಲಿ,
ನನ್ನ ಶ್ಯಾಮಲಗರ್ಭದಲ್ಲಿ, ನಿಶ್ರೇಯಸ್ಸು !
ನಿನ್ನಾರ್ಷಮೃತ್ತಿಕೆಯು ಹೊಳೆದಿಹುದು ಕೃತ್ತಿಕೆಯಾಗಿ ;
ಹೊಳೆಯುತಿಳಿಯುವದೆನ್ನ ಗರ್ಭತಲದೊಳಗೊಮ್ಮೆ !
... ಕುಂಭದೊಳಿಹುದು ಜೀವಜಾತವು ಹುದುಗಿ.

ಅನುವಾದ :

ನಿಖಿಲಂ ಭಸ್ಮಸಾದ್ಭೂತಂ ಜೀವಜಾತಂ ವಹಾಮ್ಯಹಂ ।
ನಿವೇಶ್ಯ ಭಸ್ಮರೂಪೇಣ ಸ್ವಾತ್ಮನ್ಯೇವ ನಿರಂತರಂ ॥ ೫ ॥
ನಿತ್ಯಭ್ರಮಣಶೀಲಾಯಾ ವ್ಯೋಮ್ನಿಮೇನಾಸ್ತಿ ವಿಶ್ರಮಃ ।
ಅಹಂ ಪೃಥ್ವೀತಿ ಸಂಪ್ರೋಕ್ತಾ ಸರ್ವೇಷಾಂ ಸಮದರ್ಶಿನೀ ॥ ೬ ॥
ಮಧುಮಕ್ಷಿಕನೀಡೋ ವಾ ಮೃದ್ವಾ ಮಾರ್ದವ ಸಂಯುತಾ ।
ಭೂಪತಿರ್ಭಿಕ್ಷುಕೋ ವಾಸ್ತು ಸಮ್ರಾಜ್ಞೀ ವಾ ಸುಭಾಷಿಣೀ ॥
ಸರ್ವೇ ಮೃದವಸಾನಾಸ್ತೆ ನೀಲಗರ್ಭಮಮಶ್ರಿತಾಃ ॥ ೭ ॥
ತವಾರ್ಷತನುಮ್ಯಚ್ಚಾಪಿ ಕೃತ್ತಿಕಾಸದೃಶಪ್ರಭಾ ।
ಕಾಲೇನ ಸಂವಿಶತ್ಯೇವ ಮಮಗರ್ಭತಲಂ ಸ್ವಯಂ ॥
ಜೀವಜಾತಸ್ಯ ಸರ್ವಸ್ಯ ಭಸ್ಮಕುಂಭೇಲಯಃ ಸ್ಥಿತಃ ॥ ೮ ॥

('ಸಂಸ್ಕೃತ ಪ್ರತಿಭಾ'–೧೯೮೫)

ಕೃಷ್ಣಮೂರ್ತಿಗಳ ಗದ್ಯಶೈಲಿಯ ಬಗ್ಗೆ ಒಂದು ಮಾತು. ಅವರ ಗದ್ಯ ನೇರ, ಸ್ಪಷ್ಟ ಹಾಗೂ ಸರಳ. ಶಾಸ್ತ್ರಸಾಹಿತ್ಯದ ಅನುವಾದದಲ್ಲಿ ಇದು ನೂರಕ್ಕೆ ನೂರು ಸತ್ಯ. ಅವರ ಗದ್ಯದ ಸೊಗಸನ್ನು ಕಾಣಬೇಕಾದರೆ ಅವರ ವಿಮರ್ಶೆಯ ಲೇಖನಗಳಿಗೆ ಕಣ್ಣು ಹಾಯಿಸಬೇಕು. ಒಂದೆರಡು ಉದಾಹರಣೆಗಳನ್ನು ಇಲ್ಲಿ ನೋಡಬಹುದು :

'ಆನಂದವರ್ಧನನ ಕಾವ್ಯಮೀಮಾಂಸೆ'ಯಿಂದ ಈ ವಾಕ್ಯಗಳನ್ನು ಉದ್ಧರಿಸಿದೆ : "ಭಾಮಹಾದಿ ಪ್ರಾಚೀನರೂ ಸಹ ಕಾವ್ಯವು ಶಾಸ್ತ್ರಭಿನ್ನವೆಂದು ತೋರಿಸುವ ಸಂದರ್ಭದಲ್ಲಿ ಶೋಭಾದಾಯಕಗಳಾದ ಗುಣಾಲಂಕಾರಸಂಸ್ಕೃತಶಬ್ದಾರ್ಥಗಳೇ ಕಾವ್ಯದ ವೈಶಿಷ್ಟ್ಯವೆಂದು ತೋರಿಸಿರುವರು. ಆದರೆ ಗುಣಾಲಂಕಾರಸಹಿತಶಬ್ದಾರ್ಥಗಳೇ ಕಾವ್ಯಶರೀರವೆಂದು ಹೇಳುವುದಕ್ಕೆ ಪ್ರತಿಯಾಗಿ ಕೇವಲ ಶಬ್ದಾರ್ಥಗಳೇ ಶರೀರವೆಂದೂ ಆಭರಣಗಳು ದೇಹಸೌಂದರ್ಯವನ್ನು ಹೆಚ್ಚಿಸುವಂತೆ ಅಲಂಕಾರಗಳು ಶಬ್ದಾರ್ಥಮಯವಾದ ಕಾವ್ಯಶರೀರದ ಚೆಲುವನ್ನು ಹೆಚ್ಚಿಸುತ್ತವೆ ಎಂದೂ ಅರ್ಥಮಾಡುವುದುಂಟು. ಮೇಲ್ನೋಟಕ್ಕೆ ಇದು ಸರಿಯೆನಿಸಿದರೂ ನಿಜವಾಗಿ ಪರೀಕ್ಷಿಸಿದರೆ ಇದು ಅಪದ್ಧವಲ್ಲದೆ ಬೇರೆಯಲ್ಲವೆಂದು ತಿಳಿಯುವುದು. ಸಿಕ್ಕಿದ ದೇಹಕ್ಕೆಲ್ಲ ಭೂಷಣಗಳನ್ನು ತೊಡಿಸಿದರೆ ಕಾಂತಿ ಹೆಚ್ಚುವುದೇ? ಅಥವಾ ನಿಜವಾದ ಸೌಂದರ್ಯವಿದ್ದಲ್ಲಿ ಮಾತ್ರ ಅದು ಹೆಚ್ಚು ಕಾಂತಿಪ್ರದವಾಗುವುದೋ? ಅಥವಾ 'ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ' ಎಂಬಂತೆ ಸಹಜ ಸೌಂದರ್ಯದ ಸಹಯೋಗವಿರುವುದಕ್ಕೆಲ್ಲ ಅಲಂಕಾರತ್ವ ಬರುವುದೋ ? . . . ಆದುದರಿಂದ ಶರೀರ ಆಭರಣ ಇವುಗಳ ಸಂಬಂಧವು ಕಾವ್ಯಶರೀರ ಕಾವ್ಯಾಲಂಕಾರಗಳಿಗೆ ಯಥಾವತ್ತಾಗಿ ಅನ್ವಯಿಸುವುದಿಲ್ಲ. ವಿಶೇಷವಿಮರ್ಶೆ ಮಾಡದೆ ಹೋದುದರ ಫಲವಾಗಿ ಈ ಆಲಂಕಾರಿಕರು ತಮ್ಮ ಅಲಂಕಾರಮಯವಾದ ಮಾತಿನ ವೈಖರಿಯಲ್ಲಿ ತಾವೇ ಮರುಳಾದರೆನ್ನಲಡ್ಡಿಯಿಲ್ಲ. ಆದುದರಿಂದ ಅಲಂಕಾರವಿಶಿಷ್ಟಶಬ್ದಾರ್ಥಗಳೇ ಕಾವ್ಯಶರೀರವೆನ್ನುವುದುಚಿತ."

ಇಲ್ಲಿ ಶಾಸ್ತ್ರದ ವಿವೇಚನೆಯಿರುವುದರಿಂದ ಸಂಸ್ಕೃತಶಬ್ದಗಳು ಹೆಚ್ಚಾಗಿದ್ದು ಶೈಲಿ ಗಂಭೀರವಾಗಿದೆ. ಅದೇ ಸಾಹಿತ್ಯಭಾಗದ ವಿಮರ್ಶೆಯಲ್ಲಿ ಗದ್ಯವು ಸುಂದರವೂ ಓಜಸ್ವಿ ರಸವತ್ತೂ ಆಗಿರುವುದನ್ನು ನೋಡುತ್ತೇವೆ. 'ಕನ್ನಡ ಕಿರಾತಾರ್ಜುನೀಯ'ದ ಪೀಠಿಕೆ ಯಲ್ಲಿ ವಾಲ್ಮೀಕಿ ಮಹರ್ಷಿಗಳ ಕಾವ್ಯದ ಮತ್ತು ಮಹಾಭಾರತದ ಬಗ್ಗೆ ಹೇಳುವ ಈ ಮಾತುಗಳನ್ನು ಗಮನಿಸಬಹುದು :

"ಅವರ ಭಾವ, ಭಾಷೆ, ಗ್ರಂಥದ ವ್ಯಾಪ್ತಿ, ವೈಶಾಲ್ಯ ಎಲ್ಲದರಲ್ಲಿಯೂ ಭವ್ಯತೆಯೇ ಮೈವೆತ್ತಂತೆ ಭಾಸವಾಗುತ್ತದೆ. ಹೀಗೆ ಒಂದು ಕಡೆ ಮಾನವನ ಸಾಂಸಾರಿಕ ಜೀವನದ, ಮಾನಸಿಕ ಜಗತ್ತಿನ ಪದರಪದರಗಳನ್ನೂ ಎಳೆಎಳೆಗಳನ್ನೂ, ನಿತ್ಯರಮಣೀಯವಾಗಿಯೂ ನಿಸರ್ಗಸುಂದರವಾಗಿಯೂ ವಾಲ್ಮೀಕಿಗಳು ಚಿತ್ರಿಸಿರುವಂತೆ, ಇನ್ನೊಂದು ಕಡೆ ವ್ಯಾಸರು ಮಾನವನ ರಾಜಕೀಯ ಜೀವನದ ನೆಲೆಸೆಲೆಗಳನ್ನೂ ಗೊತ್ತುಗುರಿಗಳನ್ನೂ, ನೀತಿ ರೀತಿ ಗಳ ವೈಚಿತ್ರ್ಯ ವೈವಿಧ್ಯಗಳನ್ನೂ ರಾಮಾಯಣಕ್ಕಿಂತ ಹೆಚ್ಚಿನ ಗಾತ್ರದ ಮಹಾಭಾರತದಲ್ಲಿ ಬಣ್ಣಿಸಿದ್ದಾರೆ. ಈ ಎರಡು ಗ್ರಂಥಗಳೂ ಎರಡು ಮಹಾಸಾಗರಗಳಂತೆ ಅನರ್ಘ್ಯ ಕಥಾರತ್ನ ಕೋಶಗಳು; ಧರ್ಮನಿರೂಪಣೆಗೆ ಎರಡೂ ಆಧಾರಗಳು ; ಆದರ್ಶಪಾತ್ರಗಳಿಗೆ ಎರಡೂ ಬಾಳ್ಮನೆಗಳು."

ಸಂಸ್ಕೃತ ಕಾವ್ಯದಲ್ಲಿ ವ್ಯಾಸರ ಶೈಲಿಯ ಬಗ್ಗೆ ಈ ಸುಂದರ ಮಾತುಗಳು : "ವ್ಯಾಸರ ವಾಕ್ಪ್ರವಾಹ ಒಂದು ತಿಳಿನೀರಿನ ಚಿಲುಮೆಯಂತೆ. ಅದರ ವೇಗ, ಗಾತ್ರ, ತಂಪು ಯಾವಾಗಲೂ ಒಂದೇ ಸಮ. ವಾಲ್ಮೀಕಿಗಳ ಶೈಲಿಯಂತೆ ಅದರಲ್ಲಿ ಏರಿಳಿತಗಳು ಸಿಕ್ಕುವುದಿಲ್ಲ. ಕಥೆಯ ವಿವರಗಳಿಗೆ, ಘಟನೆಗಳ ನಿರೂಪಣೆಗೆ, ಇಲ್ಲಿ ವರ್ಣನೆಗಿಂತ ಹೆಚ್ಚಿನ ಪ್ರಾಶಸ್ತ್ಯ ವುಂಟು. ಆದ್ದರಿಂದ ವ್ಯಾಸರ ಶೈಲಿ ವಾರ್ತಾವಾಹಕರ ಶೈಲಿ. ಅರ್ಥದ ಗೌರವವಷ್ಟೇ ಇಲ್ಲಿ ವಿವಕ್ಷಿತ ; ಶಬ್ದದ ಗೌರವವಲ್ಲ. ಎಷ್ಟೋ ವೇಳೆ ಅಪಾಣಿನೀಯ ಪ್ರಯೋಗಗಳೂ ಬರುತ್ತವೆ. ಭಾಷೆಯಲ್ಲಿ ಆಡುನುಡಿಯ ಸಹಜತೆ ಸಂಪೂರ್ಣವಾಗಿ ಮೈಗೂಡಿದೆ. ಅದರ ಲೋಪದೋಷಗಳೂ ಏರುಪೇರುಗಳೂ ಇದ್ದೇ ಇವೆ. ಅವುಗಳನ್ನೆಲ್ಲ ಉಜ್ಜಿ, ನಯ ಮಾಡಿ, ತಳತಳನೆ ಬೆಳಗಿಸುವ ಪ್ರಯತ್ನವೆಲ್ಲವೂ ಇಲ್ಲ. ಇದರ ಪದ್ಯಬಂಧವೆಂದರೆ ಅನುಷ್ಟುಭ್ ಮತ್ತು ತ್ರಿಷ್ಟುಭ್ ಛಂದಸ್ಸುಗಳಿಂದ ಪ್ರಚುರವಾದ ಆರ್ಷಛಂದಸ್ಸು. ಇಷ್ಟಾದರೂ ಪುರಾಣಗಳ ಶೈಲಿಯಂತೆ ಮಹಾಭಾರತದ ಶೈಲಿಯೆಲ್ಲವೂ ನೀರಸವೆನಿಸುವುದಿಲ್ಲ. ಅದಕ್ಕೆ ಕಾರಣ, ಅರ್ಥಗಾಂಭೀರ್ಯ ; ಮತ್ತು ಜೀವನದ ಸೂಕ್ಷ್ಮವಿಮರ್ಶೆ."

ಹೀಗೆ ಹಲವಾರು ಉದಾಹರಣೆಗಳನ್ನು ಕೊಡಬಹುದು. ವಸ್ತುವಿಗೆ ತಕ್ಕಂತೆ ಶೈಲಿ ಅಳವಟ್ಟಿರುವುದನ್ನು ಈ ಮೇಲಿನವುಗಳಿಂದ ಅರ್ಥಮಾಡಿಕೊಳ್ಳಬಹುದು. ವಸ್ತುವಿನ ಆಳ, ಅಗಲ, ಎತ್ತರಕ್ಕೆ ಹೊಂದಿಕೊಳ್ಳುವ ಶೈಲಿ ಇವರದು. ಈ ಸಂದರ್ಭದಲ್ಲಿ ದೇ. ಜವರೇಗೌಡ ಅವರು 'ಗದ್ಯಶೈಲಿ' ಗ್ರಂಥದಲ್ಲಿ ಕೃಷ್ಣಮೂರ್ತಿಗಳ ಗದ್ಯ ಶೈಲಿಯ ಬಗ್ಗೆ ಹೇಳಿರುವ ಮಾತುಗಳನ್ನು ಗಮನಿಸಬಹುದು :

"ಸಂಸ್ಕೃತಾಂಗ್ಲ ಕನ್ನಡ ಸಾಹಿತ್ಯ ಸಾಗರದಲ್ಲಿ ಸಲೀಲವಾಗಿ ಈಜಾಡಬಲ್ಲ

ಕೆ. ಕೃಷ್ಣಮೂರ್ತಿಯವರ ಪಾಂಡಿತ್ಯ ಹಾಗೂ ಲೇಖನಸಾಮರ್ಥ್ಯ ಅಸ್ವಾದ್ಯಶವಾದುವು. ಅವರ ಭಾಷೆಯಲ್ಲಿ ಕಂಡುಬರುವ ಸಂಸ್ಕೃತಪ್ರಾಚುರ್ಯದ ಹೆಚ್ಚಳ ಸಹಜ ಮಾತ್ರವಲ್ಲ, ಕಮನೀಯವಾದದ್ದು. ಕನ್ನಡಕ್ಕೆ ಹೊರೆಯಾಗದಂತೆ, ಪೆರವಾಗದಂತೆ, ಹೊಂದಿಕೊಳ್ಳುವಂತೆ, ಸಂಸ್ಕೃತ-ಪದಗಳನ್ನು ಬಳಸುವುದರಲ್ಲಿ ಅವರು ನಿಸ್ಸೀಮರು. ಸೂಕ್ಷ್ಮಾತಿಸೂಕ್ಷ್ಮ ಭಾವದಿಂದ ಹಿಡಿದು ಗಹನಸಂಗತಿಯವರೆಗೆ, ಅದೆಷ್ಟೇ ಕ್ಲಿಷ್ಟವಾಗಿರಲಿ ಸುಲಭಗ್ರಾಹ್ಯವಾಗುವಂತೆ ನಿರೂಪಿಸಬಲ್ಲ ಸಾಮರ್ಥ್ಯದಿಂದಾಗಿ ಅವರ ಶೈಲಿ ಸರಳತೆ ಪ್ರೌಢತೆಗಳೆರಡನ್ನೂ ಮೈಗೂಡಿಸಿಕೊಂಡಿದೆ. ಪದಸಂಘಟನೆ ವಾಕ್ಯರಚನೆಯಲ್ಲಿ ಸಿದ್ಧಿಶುದ್ಧಿಗಳೆರಡನ್ನೂ ದಕ್ಕಿಸಿಕೊಂಡು, ಸ್ಥಿತಿಸ್ಥಾಪಕ ಸಾಮರ್ಥ್ಯವನ್ನು ರೂಢಿಸಿಕೊಂಡಿರುವ ಅವರ ಶೈಲಿ ಅನುಸರಣೀಯ.''

ಸಂಸ್ಕೃತ ಕಾವ್ಯಮೀಮಾಂಸೆ ಮತ್ತು ಅಲಂಕಾರಶಾಸ್ತ್ರಕ್ಕೆ ಕೃಷ್ಣಮೂರ್ತಿಗಳ ಕೊಡುಗೆ ಅನನ್ಯವಾದುದು ಮತ್ತು ಅಮೋಘವಾದುದು. ಕನ್ನಡಕ್ಕೆ ಅವರ ಕಾಣಿಕೆ ಆದರಣೀಯವೂ ಅವಿಸ್ಮರಣೀಯವೂ ಆದುದು.

"ಬಾಗಿಲು ತೆಗೆ ಸೇಸಮ್ಮ" ಬರಿಯ ಕತೆಯಲ್ಲಿಯೇ ಆಗದೆ ನಿಜವಾದರೆ ಚೆನ್ನಲ್ಲವೆ? ಮಾತನಾಡಿದರೆ ತೆಗೆಯುವ ಬಾಗಿಲು ವಿಜ್ಞಾನಕ್ಕೆ ಸದ್ಯಕ್ಕೆ ಸವಾಲು ಎಂದೆನಿಸಿದರೂ, ಇದರ ಸಾಧ್ಯತೆ ಇಲ್ಲದಿಲ್ಲ. ಮಾತಿನಿಂದಲೇ ನಡೆಯುವಂತಹ ಯಂತ್ರಗಳು ವಿಜ್ಞಾನಿಗಳ ಕನಸೂ ಅವರಿಗೆ ಸವಾಲೂ ಆಗಿದೆ. ಈ ಸವಾಲಿಗೆ ಬೇಕಾದ ಮೊದಲ ಉತ್ತರವೆಂದರೆ ಮಾತಿನ ಅರ್ಥ ಹೇಗೆ ಆಗುತ್ತದೆ ಎನ್ನುವ ಪ್ರಶ್ನೆಗೆ ಹಾಗೂ ಮುಂದೆ ಅದನ್ನು ಯಂತ್ರಗಳಿಗೆ ಹೇಗೆ ತಿಳಿಸಿಕೊಡಬೇಕು ಎಂಬುದರಲ್ಲಿದೆ.

ಮಾತಿಗೂ ಮಾತಿನ ಅರ್ಥಕ್ಕೂ ವ್ಯತ್ಯಾಸ ಕಾಣುವದು ಜನಸಾಮಾನ್ಯರಿಗೆ ಕಷ್ಟಸಾಧ್ಯ. ಮಾತು–ಶಬ್ದಗಳ ಮಾಲೆ–ಅರ್ಥಕ್ಕೆ ವಾಹನ ಮಾತ್ರ. ಅರ್ಥ ಅಮೂರ್ತವಾದದ್ದು. ಮಾತಿಗಾಗಿ ಬಾಯಿಯ ಚಟುವಟಿಕೆ, ಅದರಿಂದಾಗುವ ಶಬ್ದತರಂಗಗಳು. ಶಬ್ದಗಳಿಂದ ಕಿವಿಯಲ್ಲಿ ಉಂಟಾಗುವ ಶಬ್ದಸ್ಪರ್ಶಭಾವನೆ, ಮುಂದೆ ನರಗಳಲ್ಲಿ ಆಗುವ ವಿದ್ಯುತ್ಪ್ರವಾಹ ಇವು ಮೂರ್ತವಾದವು. ನರಗಳಿಂದ ಮುಂದೆ ವಿದ್ಯುತ್ತು ಮಿದುಳಿಗೆ ರವಾನೆಯಾದ ಮೇಲೆ ಆಗುವ ಅರ್ಥ ಅಮೂರ್ತವಾದದ್ದು. ಮಾತಿಗೆ ಮೊದಲು ಮನಸ್ಸಿನಲ್ಲಿ ಮೂಡುವ ಭಾವನೆ (idea) ಕೂಡ ಅಮೂರ್ತವಾದದ್ದು. ಈ ಭಾವನೆಯನ್ನು ಮಾತಿನಲ್ಲಿ ಮೂರ್ತಿಸಿದರೆ ಮತ್ತೆ ಅದೇ (?) ಭಾವನೆ ಕೇಳುಗರಲ್ಲಿ ಮೂಡುವಂತೆ ಆಗುವದು ಮಾತಿನ ಅರ್ಥದಿಂದ. ಮಾತನ್ನು ಮನುಷ್ಯ ಅರ್ಥೈಸುವುದು ಹೇಗೆ?

ಮಾತನ್ನು ಹೇಗೆ ಅರ್ಥೈಸುತ್ತೇವೆನ್ನುವದು ಬಹಳ ದೊಡ್ಡ ಪ್ರಶ್ನೆ. ಪದಗಳ ಬಿಡಿ ಅರ್ಥಕ್ಕೂ ಒಟ್ಟು ವಾಕ್ಯದ ಅರ್ಥಕ್ಕೂ ಬಹಳ ವ್ಯತ್ಯಾಸವಿರುತ್ತದೆ. ಈ ಅರ್ಥವ್ಯತ್ಯಾಸ ಅಥವಾ ವ್ಯಾಪ್ತಿ ("ಮಾತು" ಅಲ್ಲದ, ಆದರೂ ಮಾತನ್ನೇ ಬಳಸಿಕೊಳ್ಳುವ) ಕಾವ್ಯದ ಸೀಮೆಯಲ್ಲಂತೂ ಬಹಳ ವಿಸ್ತಾರವಾದದ್ದು. ಅರ್ಥದ ಬಗ್ಗೆ ದೊಡ್ಡ ಪ್ರಶ್ನೆಗೆ ಮೊದಲು ನಾವು ಚಿಕ್ಕ ಪ್ರಶ್ನೆಗಳನ್ನು ಉತ್ತರಿಸಬೇಕಾಗುತ್ತದೆ. ಮಾತಿನ ಮೂರ್ತರೂಪವಾದ, ಗಾಳಿಯಲ್ಲಿ ಬರುವ, ತರಂಗಗಳನ್ನು—ಮಾತಿನ ಶಬ್ದಗಳನ್ನು—ಗುರುತಿಸುವುದು ಹೇಗೆ? ಆ ಶಬ್ದಗಳಲ್ಲಿಯ ವ್ಯತ್ಯಾಸಗಳನ್ನು ಹೇಗೆ ಮಿದುಳು ತಿಳಿಯುತ್ತದೆ?

ಗಾಳಿಯಲ್ಲಿ ಕಂಪನಗಳಾದ ಮಾತು ಕಿವಿಯ ತಮಟೆಗೆ ಬಡಿದು, ನಂತರ ಪುಟ್ಟ ಮೂಳೆ

ಗಳ ಮೂಲಕ ಹಾದು, ಕಿವಿಯ ಸೂಕ್ಷ್ಮಾಂಗವಾದ ಕಾಕ್ಲಿಯದಲ್ಲಿ ಮತ್ತೆ ತರಂಗಗಳು ಏಳುವಂತೆ ಮಾಡುತ್ತದೆ. ಕಾಕ್ಲಿಯವು ದ್ರವ ತುಂಬಿದ, ಶಂಖುವಿನಂತೆ ಸುತ್ತಿಕೊಂಡಿರುವ ಒಂದು ಅಂಗ. ಅದರ ಮಧ್ಯೆ ಉದ್ದಕ್ಕೂ ಹಾಸಿರುವ ಒಂದು ತೆಳು ಪರದೆಯ ಮೇಲೆ ಕಿವಿಯ ನರತಂತುಗಳು ಕಂಪನದ ಅನುಭವ ಹೊಂದುತ್ತವೆ. ಕಾಕ್ಲಿಯದಲ್ಲಿ, ಅಗ್ರದಲ್ಲಿ ಕಡಿಮೆ ಕಂಪನಗಳಿಂದ (೨೦Hz) ಹಿಡಿದು ಅದರ ಬುಡದಲ್ಲಿ ಹೆಚ್ಚಿನ (೨೦೦೦೦Hz) ಕಂಪನಗಳನ್ನೂ ಕೇಳುವ ವ್ಯವಸ್ಥೆ ಇರುತ್ತದೆ. ಎಂದರೆ ಹಾರ್ಮೋನಿಯಂನ ಎಡಗಡೆ ಅದುಮಿದರೆ ಅದು ಕಾಕ್ಲಿಯದ ಅಗ್ರದಲ್ಲೂ, ಬಲಗಡೆ ಕೊನೆಯಲ್ಲಿ ಅದುಮಿದರೆ ಕಾಕ್ಲಿಯದ ಬುಡದಲ್ಲೂ ಶಬ್ದದ ಅನುಭವಗಳನ್ನುಂಟುಮಾಡುತ್ತವೆ. ಕಿವಿಯ ಪಾತ್ರ ಇಷ್ಟು. ಕಿವಿಯ ನರಗಳೂ ಸುಮಾರು ಇದೇ ರೀತಿ ಬೇರೆಬೇರೆ ಕಂಪನಗಳನ್ನು (Frequency) ಮಿದುಳಿಗೆ ತಲುಪಿಸುತ್ತವೆ.

ಕಾಕ್ಲಿಯದ ಅಗ್ರದಿಂದ ಹೊರಟ ನರಗಳು ಹಾಗೂ ಬುಡದಿಂದ ಹೊರಟ ನರಗಳು ಕಡಿಮೆ ಮತ್ತು ಹೆಚ್ಚಿನ ಕಂಪನಗಳನ್ನು ಮಿದುಳಿನ ಎರಡೂ (ಎಡ ಮತ್ತು ಬಲ) ಭಾಗ ಗಳಲ್ಲಿ ಪ್ರತಿನಿಧಿಸುತ್ತವೆ, ಕಾಕ್ಲಿಯದಲ್ಲಿರುವಂತೆ. ಒಂದು ವ್ಯತ್ಯಾಸವೆಂದರೆ ಬಲಗಿವಿಯ ಕಾಕ್ಲಿಯದಿಂದ ಹೊರಟ ನರದ ಬಹುಭಾಗ ಎಡಮಿದುಳನ್ನು ತಲುಪಿದರೆ, ಎಡಗಿವಿಯ ನರದ ಬಹುಭಾಗ ಬಲಮಿದುಳನ್ನು ತಲುಪುತ್ತದೆ. ಎಡಭಾಗದ ಮಿದುಳಿಗೆ ಮಾತಿನ ಕೆಲಸದಲ್ಲಿ ಬಹಳ ಮುಖ್ಯಪಾತ್ರವಿರುವದರಿಂದ ಬಲ ಕಾಕ್ಲಿಯದಿಂದ ಹೊರಡುವ ನರಕ್ಕೆ ಮಾತನ್ನು ಕೊಂಡೊಯ್ಯುವ ಕೆಲಸ ಹೆಚ್ಚು. ಮಿದುಳಿನ ಈ ಮಟ್ಟದವರೆಗೂ ಆಗುತ್ತಿ ರುವ ಕೆಲಸ ಇಷ್ಟೆ: ಕಾಕ್ಲಿಯದ ಯಾವ ಕಡೆ ಶಬ್ದ ತಲುಪುತ್ತಿದೆ ಹಾಗೂ ಎಲ್ಲಿ ಮೊದಲು, ಎಲ್ಲಿ ನಂತರ ಎನ್ನುವದು. ಇಷ್ಟು ವಿವರಗಳಿಂದಲೇ ಮಿದುಳು ಶಬ್ದಗಳನ್ನು ಮಾತಿನ ಶಬ್ದಗಳೆಂದು ವಿಶ್ಲೇಷಿಸಿ ಗುರುತಿಸಬೇಕಾಗುತ್ತದೆ. ನಮ್ಮ ಭಾಷೆಯ ಎಲ್ಲ ಶಬ್ದಗಳೂ ನಮಗೆ ವಿವರವಾಗಿ ಕೇಳಿಬರುತ್ತವೆ. ಎಂದರೆ ಆ ಎಲ್ಲ ಶಬ್ದಗಳ ಕಂಪನಗಳು ಒಂದೊಂದೂ ಪ್ರತ್ಯೇಕವಾಗಿರಬೇಕಲ್ಲವೆ ? ಅತ್ತ ಗಮನ ಕೊಡೋಣ.

ಸ್ವರಗಳಾದ "ಅ ಇ ಉ ಎ" ಮುಂತಾದವು ಸರಳಶಬ್ದಗಳು. ಯಾವುದೋ ಶಬ್ದವನ್ನು ಅವುಗಳ ಕಂಪನ ಗುಣವಿಶೇಷಗಳಾಗಿ ಅವುಗಳನ್ನು ಸ್ಪೆಕ್ಟ್ರೋಗ್ರಾಫ್ (Spectrograph) ಎಂಬ ಯಂತ್ರ ಅಥವಾ ವಿಶೇಷ ಕಂಪ್ಯೂಟರ್‌ಗಳಿಂದ ಕಾಗದದ ಮೇಲೆ ಮುದ್ರಿಸಬಹುದು. ಹಾಗೆ ಮಾಡಿದಾಗ ಒಂದೊಂದು ಸ್ವರಕ್ಕೂ ಕೆಲವು ಅಡ್ಡ ಗೆರೆಗಳು ಮುದ್ರಿತವಾದುದನ್ನು ನಾವು ಗಮನಿಸಬಹುದು (ಚಿತ್ರ ೧ ನೋಡಿ). ಈ ಗೆರೆಯ ಆಕೃತಿಗಳನ್ನು (Formants) $F_1$, $F_2$ ಮುಂತಾಗಿ ಗುರುತಿಸುತ್ತಾರೆ. ಈ ಗೆರೆಗಳು ಯಾವ ಕಂಪನ (Frequency) ದವು ಎಂಬುದು ಅವುಗಳು ಯಾವ ಶಬ್ದಗಳನ್ನು ಪ್ರತಿ ನಿಧಿಸುತ್ತವೆಂಬುದನ್ನು ನಿರ್ಧರಿಸುತ್ತವೆ. ಈ ಅಡ್ಡಗೆರೆಯಾಕೃತಿಗಳು ಎರಡಕ್ಕಿಂತ ಹೆಚ್ಚಿದ್ದರೂ $F_1$, $F_2$ಗಳೇ ಹೆಚ್ಚು ಮುಖ್ಯ.




**ಚಿತ್ರ ೧. ಇ ಅ ಉ ಬಿಡಿ ಸ್ವರಗಳ ಸ್ಪೆಕ್ಟ್ರೋಗ್ರಾಫ್ ಚಿತ್ರ**

ಎರಡು ಸ್ಥಳಗಳಲ್ಲಿ ಧ್ವನಿತವಾಗುವ ಕಂಪನಗಳೇ $F_1$ ಹಾಗೂ $F_2$ ಅಡ್ಡಗೆರೆಗಳು. ಸ್ಪೆಕ್ಟ್ರೋಗ್ರಾಫ್‌ನ ವಿರುದ್ಧರೀತಿಯ ಕೆಲಸ ಮಾಡುವ ಅಂದರೆ $F_1$ $F_2$ಗಳ ರೀತಿ ಬಳಿದ ಮಸಿಯನ್ನು ಶಬ್ದವನ್ನಾಗಿ ಪರಿವರ್ತಿಸುವ **Pattern playback** ಎನ್ನುವ ಯಂತ್ರದ ಸಹಾಯದಿಂದ ಮಾತಿನ ಶಬ್ದಗಳ ಗ್ರಹಿಕೆಯನ್ನೂ ಸಾಕಷ್ಟು ಅಭ್ಯಸಿಸಿದ್ದಾರೆ. ಈ $F_1$, $F_2$ ಗೆರೆಗಳು ಇರುವ ಜಾಗ ಹಾಗೂ ಅವುಗಳ ದೂರ ಸ್ವರಾಕ್ಷರಗಳನ್ನು ಗ್ರಹಿಸುವದ ರಲ್ಲಿ ನಿರ್ಣಾಯಕವ್ಯತ್ಯಾಸವನ್ನು ತರುವುವೆನ್ನುವ ವಿಚಾರ ಈಗ ಖಾತರಿಯಾಗಿದೆ.

ಈ ಅಂಶಗಳನ್ನು ಕಂಡುಕೊಳ್ಳುವುದು ಮುಖ್ಯ. ಏಕೆಂದರೆ ಇವುಗಳನ್ನು ಉಪಯೋಗಿಸಿಯೇ ಯಂತ್ರಗಳು ಮಾತನ್ನು ಹೊರಡಿಸುವಂತೆಯೂ ನಂತರ ಮಾತನ್ನು ಗ್ರಹಿಸಲು ಮಾಡುವಂತೆಯೂ ಸಾಧ್ಯ. ಮಾತಿನ ವ್ಯಂಜನಶಬ್ದಗಳ ಅರಿಯುವಿಕೆಯಲ್ಲಿಯೂ ಮೇಲೆ ಹೇಳಿದಂಥ ಉಪಕರಣಗಳು ಉಪಯೋಗಿಸಲ್ಪಟ್ಟಿವೆ. ಈ ಅಡ್ಡಗೆರೆಯಾಕೃತಿಗಳಾದ $F_1$, $F_2$ಗಳು ಸ್ವರಶಬ್ದಗಳ ವೈಶಿಷ್ಟ್ಯ. ಆದರೆ ಬರಿಯ ಸ್ವರಗಳಿಗೆ ಮಾತಿನಲ್ಲಿ ಸ್ವಂತಸ್ಥಾನವಿಲ್ಲ. ಅವು ಯಾವಾಗಲೂ ಬೇರೆ ಶಬ್ದಗಳ ಜೊತೆಯೇ ಬರುತ್ತವೆ. ಮಾತು ಹರಿಯುವ ನೀರಿನಂತೆ; ಅಂದರೆ ಅದರ ಆಕೃತಿ ಬದಲಾಯಿಸುತ್ತಲೇ ಇರುತ್ತದೆ. ಇದರಿಂದ ಈ ಅಡ್ಡಗೆರೆಯಾಕೃತಿಗಳು ಮೇಲೆ ಕೆಳಗೆ ಬಳುಕುತ್ತಲೇ ಇರುತ್ತವೆ. ಇದಕ್ಕೆ **Formant Transition (FT)** ಎನ್ನುತ್ತಾರೆ. $F_1$, $F_2$ ಈ ವ್ಯಂಜನಶಬ್ದಗಳ ಗ್ರಹಿಕೆಯಲ್ಲಿ ಬಹಳ ಮುಖ್ಯಪಾತ್ರ ವಹಿಸುತ್ತವೆ (ಚಿತ್ರ ೨ ನೋಡಿ).

"ಯ್ ರ್ ಲ್ ವ್" ಪೂರ್ಣ ವ್ಯಂಜನಶಬ್ದಗಳಲ್ಲ. ಇವುಗಳ ಗ್ರಹಿಕೆಯಲ್ಲಿ ಈ ಅಡ್ಡಗೆರೆಗಳ **FT** ಸಮಯ ಮುಖ್ಯ. ಉದಾಹರಣೆಗೆ 'ಉ' ಸ್ವರದ **FT** ಸಮಯ




ಚಿತ್ರ ೨. ಅಡ್ಡಗೆರೆಯಾಕೃತಿಗಳ ಬಳುಕು (Formant Transition) ವ್ಯಂಜನ ಶಬ್ದಗಳ ಗ್ರಹಿಕೆಗೆ ಬಹಳ ಮುಖ್ಯ. (ಗೆರೆಗಳು ಕೃತಕವಾದವು)

ಕಡಿಮೆಯಾದರೆ, ಅದೇ 'ವ್' ಎಂದು ಕೇಳಿಬರುತ್ತದೆ. ಹಾಗೆಯೇ 'ಇ' ಸ್ವರದ FT ಸಮಯ ಕಡಿಮೆಯಾದರೆ, 'ಯ್' ಕೇಳಿಸುತ್ತದೆ (ಚಿತ್ರ ೩ ನೋಡಿ).




ಚಿತ್ರ ೩. $F_1$, $F_2$ಗಳ ಬಳುಕುವ ಸಮಯ ಸ್ವರಗಳ ಗ್ರಹಿಕೆಯಲ್ಲಿ ಬಹಳ ಮುಖ್ಯ. (ಗೆರೆಗಳ ಸ್ಥೂಲಚಿತ್ರ ಮಾತ್ರ ಕೊಡಲಾಗಿದೆ).

"ಬ್ ಡ್ ಗ್" ಶಬ್ದಗಳ ಗ್ರಹಿಕೆಗೆ FT ಎಲ್ಲಿಂದ ಶುರುವಾಗುತ್ತದೆ ಎನ್ನುವದು ಮುಖ್ಯ. $F_1$ ಈ ಎಲ್ಲ ಶಬ್ದಗಳಲ್ಲೂ ಒಂದೇ ರೀತಿ ಇದ್ದರೆ $F_2$ಗಳು ಬೇರೆ ಬೇರೆ ರೀತಿ

ಗುರುತಿಸಲು. ಕಣ್ಣಿನಲ್ಲಿ ವಿಶೇಷನರಗಳು ಪ್ರಾಣಿಗಳಲ್ಲಿ ಇವೆ ಎಂದು ಸಾಬೀತು ಪಡಿಸಲಾಗಿದೆ. ಇದೇ ರೀತಿ ಕಂಪನಗಳಲ್ಲಾಗುವ ಬದಲಾವಣೆಗಳನ್ನು **(FT)** ಗುರುತಿಸಲು ಮನುಷ್ಯರಲ್ಲಿವಿಶೇಷ ಅನುಕೂಲಗಳಿವೆಯೆ ಹೇಗೆಂದು ತಿಳಿದಿಲ್ಲ. ಯಾವುದೇ ಒಂದು ಶಬ್ದದ ರೂಪರೇಖೆಗಳು ನಿರಂತರವಾಗಿ ಸ್ವಲ್ಪವಾದರೂ ಬದಲಾವಣೆ ಹೊಂದುತ್ತಲೇ ಇರುತ್ತವೆ, ಮಾತಿನಲ್ಲಿ. ಹೀಗಾದಲ್ಲಿ ಒಂದು ಶಬ್ದದ ಬಗ್ಗೆ ಕಂಪ್ಯೂಟರಿಗೆ ನಾವು ಏನು ತಿಳಿಸೋಣ ! ಈ ವಿಷಯದಲ್ಲಿ ಮಿದುಳು ಬಹುಶಃ ಸುಲಭವಾಗಿ, ವೇಗವಾಗಿ ನಿರ್ವಹಿಸುವ ಕಾರ್ಯ ವನ್ನು ನಾವು ಅರ್ಥಮಾಡಿಕೊಳ್ಳಲು ಇನ್ನೂ ಬಹಳ ಸಮಯ ಬೇಕಾಗಬಹುದು. ಒಂದು ಶಬ್ದವನ್ನು ಗ್ರಹಿಸುವಲ್ಲಿ ಭಾಷೆ, ಕಲಿಕೆ ಹಾಗೂ ಇನ್ನೂ ಬಹಳ ಅಂಶಗಳು ಸಹಾಯ ಮಾಡುತ್ತವೆ. ಉದಾಹರಣೆಗೆ, ಕೊರಿಯನ್ನರು 'ಲ' ಮತ್ತು 'ರ' ಶಬ್ದಗಳ ವ್ಯತ್ಯಾಸ ವನ್ನು ಕಿವಿಯಿಂದ ಸುಲಭವಾಗಿ ಅರಿಯರು. ನಮಗಾದರೋ ಇವು ಬೇರೆ ಬೇರೆ ಶಬ್ದ ಗಳು, ಅರ್ಥಪೂರ್ಣವಾದವು.

ಶಬ್ದಗಳನ್ನು ಬಿಡಿಯಾಗಿ ಗುರುತಿಸಲು ಬೇಕಾದ ಚಿತ್ರ ಸಿಕ್ಕಿತು ಎಂದುಕೊಳ್ಳೋಣ. ಆದರೆ ಮಾತಿನಲ್ಲಿ ಶಬ್ದಗಳು ನಿಜವಾಗಿಯೂ ಬಿಡಿಬಿಡಿಯಾಗಿ ಇರುವುದಿಲ್ಲ. ಮಾತು ಒಂದು ಶಬ್ದಪ್ರವಾಹ. ಈ ಪ್ರವಾಹದಲ್ಲಿ ಶಬ್ದಗಳು ಹಿಂದುಮುಂದಿನ ಶಬ್ದಗಳಲ್ಲಿ ಬೆರೆತುಹೋಗಿರುತ್ತವೆ. ಆದರೂ ಮನುಷ್ಯನ ಗ್ರಹಿಕೆಯ ವಿಶೇಷತೆಯೆಂದರೆ, ನಿರಂತರ ವಾದ ಆ ಶಬ್ದಪ್ರವಾಹದಲ್ಲೂ ಪದಗಳನ್ನೂ, ಪದಗಳಲ್ಲಿನ ಶಬ್ದಗಳನ್ನೂ ಸುಮಾರು ನಿಖರವಾಗಿಯೇ ಗುರುತಿಸುವ ಶಕ್ತಿ. ಮಾತಿನ ಶಬ್ದಗಳ ಗ್ರಹಿಕೆಗೆ ಆಧಾರ ಗಾಳಿಯಲ್ಲಿ ಬರುವ ಕಂಪನಗಳಲ್ಲೇ ಇರಬೇಕು ಎನ್ನುವದು ತಾರ್ಕಿಕವಾದರೂ, ಅಷ್ಟೇ ಸಾಕೆ ಅಥವಾ ಸಾಲದೆ ಎನ್ನುವದು ಇನ್ನೂ ನಿರ್ಧಾರವಾಗಬೇಕಾಗಿರುವ ವಿಷಯ. ಕಿವಿಯು ಕಂಪನ ಗಳನ್ನು ವಿಶ್ಲೇಷಿಸಿದರೆ ಸಾಕೇ ಅಥವಾ ಅದಕ್ಕೆ ಇನ್ನು ಹೆಚ್ಚು ಪೂರಕವಾಗಿ ಮಿದುಳು ಎಂಥ ಕೆಲಸ ಮಾಡಬೇಕಾಗಬಹುದು ಎನ್ನುವದನ್ನೂ ತಿಳಿಯಬೇಕಾಗಿದೆ.

ಮಾತನ್ನು ಗ್ರಹಿಸುವ ಶಕ್ತಿ, ಮಾತನ್ನು ಆಡುವ ಶಕ್ತಿಯ ಮೇಲೆಯೇ ಅವಲಂಬಿಸಿದೆ ಎನ್ನುವದು ಒಂದು ಅಭಿಮತ. ಅಂದರೆ ಕನ್ನಡ ಮಾತಾಡುವವರು ಕನ್ನಡ ಪದಗಳನ್ನು, ಶಬ್ದಗಳನ್ನು ಮಾತ್ರ ಗ್ರಹಿಸುತ್ತಾರೆ. ಭಾಷೆಯಲ್ಲಿ ಇಲ್ಲದ ಪದಗಳನ್ನು, ಶಬ್ದಗಳನ್ನು, ಕಿವಿಯ ಮೇಲೆ ಬಿದ್ದರೂ ಗುರುತಿಸಲಾರರು. ಇದು ಮೇಲುನೋಟಕ್ಕೇ ಬಹಳಮಟ್ಟಿಗೆ ನಿಜವೆಂದು ಕಾಣುತ್ತದೆ. ಉದಾಹರಣೆಗೆ, ಕನ್ನಡಿಗನಿಗೆ ಚೀನಿ ಭಾಷೆಯ ಒಂದು ಉದ್ದನೆಯ ವಾಕ್ಯದಲ್ಲಿ ಎಷ್ಟು ಪದಗಳಿವೆ, ಎಷ್ಟು ಬೇರೆಬೇರೆ ರೀತಿಯ ಶಬ್ದಗಳಿವೆ ಎನ್ನುವದು ಬಗೆಹರಿಯದ ಸಮಸ್ಯೆ. ದ್ರಾವಿಡ ಭಾಷೆಯೇ ಆದ ತಮಿಳಿನ ಬಾಳೆಹಣ್ಣು 'ವಾಳೈಪಳಂ'ನ **ೞ** ನಮಗೆ **ಳ** ಎಂದೇ ಕೇಳಿಸುತ್ತದೆ, ಅಭ್ಯಾಸವಾಗುವವರೆಗೂ.

ಕಿವಿಯಿಂದ ಮಿದುಳಿಗೆ ತಲುಪುತ್ತಿರುವ ಶಬ್ದದ ಸಾರವು ಅದೇ ಶಬ್ದಗಳ ಆಡುವಿಕೆ ಯನ್ನು ಪ್ರೇರಿಸುತ್ತದೆ. ಈ ಸುಪ್ತವಾದ ನುಡಿ (ನಿಜವಾದದ್ದಲ್ಲ) ಹಾಗೂ ಶಬ್ದದ ಸಾರ ಇವೆರಡೂ ಒಂದೇ ಎಂದು ಕಂಡುಬಂದರೆ ಆಗ ಮಿದುಳು ಆ ಶಬ್ದವನ್ನು ನಿಖರ

ವಾಗಿ ಗ್ರಹಿಸುತ್ತದೆ. ಎಂದರೆ ಕೇಳುವ ಶಬ್ದವನ್ನು ಆಡುವ ಶಬ್ದಕ್ಕೆ ಹೊಂದಿಸಿ ನೋಡಿ, ಸರಿಕಂಡರೆ ಆಗ ಅದನ್ನು ಅರ್ಥಮಾಡಿಕೊಳ್ಳುತ್ತೇವೆ ಎನ್ನುವದು **Motor theory** ಎನ್ನುವುದರ ವಾದ. ಈ ವಾದ ಮನಸ್ಸಿಗೆ ಗ್ರಾಹ್ಯವಾದರೂ ಇದರ ಸಾಬೀತು ಸಾಧ್ಯವಾಗಿಲ್ಲ. ಮಾತು ಕೇಳಿಸಿಕೊಳ್ಳುವುದಕ್ಕೆ ಮಾತೇ ಆಧಾರವೆನ್ನುವದಕ್ಕೆ ಅಪವಾದಗಳಿವೆ. ಕೆಲವು ರೀತಿಯ ದೈಹಿಕ ತೊಂದರೆಯ ಸ್ಥಿತಿಗಳಲ್ಲಿ **(disorders)** ಮಾತನ್ನು ಆಡುವುದು ಅಸಾಧ್ಯವೇ ಆದರೂ, ಆ ಮಕ್ಕಳು ಮಾತನ್ನು ಅರ್ಥಮಾಡಿಕೊಳ್ಳಲು ಸಮರ್ಥವಾಗಿರುತ್ತವೆ.

ಏನೇ ಆಗಲಿ, ಮಾತನ್ನು ಆಡುವ ಚಟುವಟಿಕೆ ಮಾತಿನ ಗ್ರಹಿಕೆಗೆ ಅನುಕೂಲ ಎನ್ನುವದು ಈಗ ಇರುವ ದೃಷ್ಟಿ. ಅನುಮಾನಕ್ಕೆಡೆಯಿಲ್ಲದಂತೆ ಮಾತಿನ ಶಬ್ದಗಳನ್ನು ಗ್ರಹಿಸುವದು, ಪದಗಳನ್ನು ಗ್ರಹಿಸಲೂ ಅರ್ಥ ಗ್ರಹಿಸಲೂ ಮೂಲ. ಅರ್ಥ ಹೆಚ್ಚುಕಡಿಮೆ ಮೊದಲೇ ತಿಳಿದಿದ್ದರೆ? ಆಗ ಮಾತಿನ ಶಬ್ದಗ್ರಹಣ ಹೆಚ್ಚು ಸುಲಭವೇ ಹೌದು. ಆದರೆ ಪ್ರಸ್ತುತ ವಿಷಯಕ್ಕೆ ಅದು ಅಮುಖ್ಯ.

ಮಾತಿನ ಶಬ್ದಗಳು ವಿವಿಧ ಬಗೆಯವು ಎಂಬುದು ಹುಟ್ಟಿದ ಮಗುವಿಗೇ ಗುರುತಿಸಲು ಸಾಧ್ಯವೆಂದು ಕಂಡುಕೊಂಡಿದ್ದಾರೆ. ಅಂದರೆ ಶಬ್ದಗ್ರಹಣೆ ರಕ್ತಗತವಾಗಿ ಬಂದಂಥ ವರವೇ ನಿಜ. ಅದನ್ನು ಬೆಳೆಯುವ ಮಗು ಬಹುಶಃ ತನ್ನ ಭಾಷೆಗೆ ತಕ್ಕಂತೆ ರೂಢಿಸಿಕೊಳ್ಳುತ್ತದೆ. ಈ ಪಡೆದ ಹಾಗೂ ಕಲಿತ ಅಂಶಗಳನ್ನು ಪಟ್ಟಿಮಾಡಲು ವಿಜ್ಞಾನಿಗಳಿಗೆ ಸಾಧ್ಯವಾದ ಮೇಲೆ, ಬಹುಶಃ ಒಂದು ಕಂಪ್ಯೂಟರಿಗೆ ಅರ್ಥೈಸಲು, ಕಲಿಸಲು ಸಾಧ್ಯವಾಗುತ್ತದೆ. ಇದು ಸಾಧ್ಯವಾದಾಗ, ಉಪಯೋಗದ ಮಾತಿರಲಿ, ಎಷ್ಟು ರಂಜನೀಯ !

## ಆಧಾರ ಸಾಹಿತ್ಯ

1. Ainsworth W.A. 1976.
*Mechanisms of SpeechR ecognition*, Oxford Pergamon Press.
2. Lberman, A. M. Cooper, F. S., Katherine, S. Harris, Mac Neilage, P. F., and Studdert Kennedy, M. 1967.
Some observations On a model for speech perception. In Weiant Wather Qutten (ed) Models for the perception of Speech and Visual form, MIT press Massachussetts
3. Mackay, Ian K. A. 1981.
*Phonetics : The Science of Speech Production*
Boston, A College Hill publication, Little Brown and Company.

ಇತ್ತೀಚಿನ ದಿನಗಳಲ್ಲಿ ಜ್ಞಾನಶಾಖೆಗಳು ಸೂಕ್ಷ್ಮಗೊಳ್ಳುತ್ತಿರುವ ವಿಚಾರ ಸರ್ವವೇದ್ಯ. ಯಾವುದೇ ಶಿಸ್ತು ತನ್ನ ಸ್ವಾಯತ್ತತೆಯನ್ನೂ ಮೌಲಿಕತೆಯನ್ನೂ ಇತರ ಶಿಸ್ತುಗಳ ಸಹಾಯ ಸಹಕಾರಗಳಿಂದ ಹೆಚ್ಚು ಹೆಚ್ಚು ಆಳವಾಗಿ ಬೆಳೆಸಲು ಸಾಧ್ಯ. ಇಂದು ಹಲವಾರು ಜ್ಞಾನಶಾಖೆಗಳು ಅಂತರಶಿಸ್ತುಗಳ ಬಲದಿಂದ ಬೆಳೆದಿವೆ. ಆದ್ದರಿಂದಲೇ ಒಂದು ಜ್ಞಾನ ಶಾಖೆ ತನ್ನ ನಿರ್ದಿಷ್ಟತೆಯನ್ನೂ ಸಾರ್ವತ್ರಿಕತೆಯನ್ನೂ ಮತ್ತೊಂದು ಶಾಖೆಯ ಸಹಕಾರ ದಿಂದ ದೃಢಪಡಿಸಿಕೊಳ್ಳುವುದು. ಅಧ್ಯಯನದ ಆಳ ಅಗಲಗಳನ್ನು ರುಜುವಾತುಪಡಿಸು ವಲ್ಲಿ ಇದು ಅಗತ್ಯವಾಗಿದೆ.

ಭಾರತೀಯ ವ್ಯಾಕರಣಪದ್ಧತಿಯಲ್ಲಿ ಅಂತರ್ಗತ ಸೂತ್ರೀಕರಣವುಂಟು. ನಮ್ಮಲ್ಲಿ ವ್ಯಾಕರಣದ ಅಧ್ಯಯನ ಕಾಲದಿಂದ ಕಾಲಕ್ಕೆ ವ್ಯವಸ್ಥಿತವಾಗಿ, ಅರ್ಥಪೂರ್ಣವಾಗಿ ಸಾಗಿ ಬಂದಿದೆ. ಆಯಾ ಕಾಲದ ವ್ಯಾಕರಣಕಾರರ ದೃಷ್ಟಿ ವಿಶಿಷ್ಟವಾದುದು. ಅವರು ತಮ್ಮ ಅಧ್ಯಯನಕ್ಕೆ ರೂಢಿಸಿದ ವಿಶಿಷ್ಟ, ನಿರ್ದಿಷ್ಟ ರೂಪುರೇಖೆಗಳು ವಿಭಿನ್ನ ಭಾಷಾಪಂಥ ಗಳಿಗೆ ದಾರಿ ಮಾಡಿವೆ. ತಮ್ಮ ಭಾಷಿಕ ಅಧ್ಯಯನಕ್ಕೆ ಅಲ್ಲಿ ಕಂಡರಿಸಿದ ಸೂತ್ರಗಳು, ಮಾಹಿತಿ, ಹಿನ್ನೆಲೆ ಹಾಗೂ ವಿಧಿ-ವಿಧಾನಗಳು ಗಮನಿಸಬೇಕಾದ ಅಂಶಗಳು. ಒಂದು ಭಾಷೆಗೆ ರಚಿಸಿದ ಶಾಸ್ತ್ರಸಮ್ಮತ ವ್ಯಾಕರಣ ಆ ಭಾಷೆಯನ್ನು ಕುರಿತ 'ಸಿದ್ಧಾಂತ'; ಸರ್ವ ಭಾಷೆಗಳಿಗೂ ಸಂಬಂಧಿಸಿದ ಸಿದ್ಧಾಂತ 'ಭಾಷಾಸಿದ್ಧಾಂತ.' ಇದೇ ಶಾಸ್ತ್ರೀಯ ಭಾಷಾ ಅಧ್ಯಯನ, ಭಾಷಾಶಾಸ್ತ್ರ.

ಭಾಷೆ ಒಂದು ಸಂಕೀರ್ಣವ್ಯವಸ್ಥೆ. ಭಾಷಾವ್ಯವಹಾರದಲ್ಲಿ ಬಳಸುವ ಧ್ವನಿ, ವರ್ಣ, ಆಕೃತಿಮಾ, ಪದನಿರ್ಮಾಣ ಹಾಗೂ ವಾಕ್ಯರಚನೆಗಳಲ್ಲಿ ಒಂದು ವ್ಯವಸ್ಥೆಯುಂಟು. ಆ ವ್ಯವಸ್ಥೆಯನ್ನು ಮೀರಿದರೆ, ಅವು ಭಾಷಾಸಂವಹನದಲ್ಲಿ ಅಪಪ್ರಯೋಗಗಳಾಗುತ್ತವೆ. ಅವು ಭಾಷೆಯಲ್ಲಿ ಸ್ವೀಕೃತವಾಗಲಾರವು; ಉಳಿಯಲಾರವು. ಒಂದು ಸಮಾಜದ ವ್ಯಕ್ತಿ ಗಳು ಪರಸ್ಪರರ ಸಂವಹನಕ್ಕಾಗಿ ಬಳಸುವ ಯಾದೃಚ್ಛಿಕ ವಾಕ್‌ಧ್ವನಿಸಂಕೇತಗಳ ವ್ಯವಸ್ಥೆಯೇ 'ಭಾಷೆ.' ಸಾಮಾಜಿಕರ ಸಂಪರ್ಕಕ್ಕಾಗಿ ಬಳಸುವ ವಾಕ್‌ಧ್ವನಿಸಂಕೇತಗಳ

ಮಾಧ್ಯಮ ವ್ಯವಸ್ಥಿತವಾಗಿದೆ. ಆದ್ದರಿಂದಲೇ ಈ ಸಂಕೀರ್ಣಸಂವಹನದ ವ್ಯವಸ್ಥೆಯನ್ನು ವ್ಯಾಕರಣ ಎಂದಿರುವುದು. ಒಂದು ಭಾಷೆಯ ಧ್ವನಿ, ಧ್ವನಿಮಾ, ಆಕೃತಿಮಾ, ಪದನಿರ್ಮಾಣ, ಪದಪುಂಜ ಹಾಗೂ ವಾಕ್ಯರಚನೆಯನ್ನು ನಿಖರವಾಗಿ, ವ್ಯವಸ್ಥಿತವಾಗಿ ನಿರೂಪಿಸಿರುತ್ತದೆ, ಇಲ್ಲಿ.

ಭಾಷೆಯ ರಚನೆಗೆ ಅನುಗುಣವಾಗಿ ಭಾಷಿಕರೂಪ ಸಿದ್ಧಿಯಾಗುತ್ತದೆ. ಭಾಷಿಕ ರೂಪಸಿದ್ಧಿ ನಿಯಮಕ್ಕೆ ಬಂಧಿತವಾಗಿರುತ್ತದೆ. ಭಾಷೆಯನ್ನು ಬಳಸುವ ಭಾಷಿಕನಿಗೆ ಅಂಥ ನಿಯಮಗಳ ಅರಿವು ಇರುತ್ತದೆ ; ಎಂದರೆ ಆತ ಸುಲಭವಾಗಿ ತಾನು ಬಳಸುವ ಭಾಷಿಕರೂಪವನ್ನು ಅರ್ಥಮಾಡಿಕೊಳ್ಳುತ್ತಾನೆ ; ಅರ್ಥಮಾಡಿಸುತ್ತಾನೆ. ಇದಕ್ಕೆ ಪರಿಶ್ರಮ ಇಲ್ಲವೆ ಪ್ರಯತ್ನಪೂರ್ವಕವಾದ ಅಧ್ಯಯನದ ಅಗತ್ಯವಿಲ್ಲ. ಸಾಮಾನ್ಯವಾಗಿ ಆತ ತನ್ನದೇ ಆದ ಭಾಷಿಕ ಪರಂಪರೆ ಹೊಂದಿರುತ್ತಾನೆ. ಇದೇ ನಿಯಮಾವಳಿಗಳ ನಿರೂಪಣೆಗೆ ಮೂಲಾಧಾರ. ಇಂಥ ನಿಯಮಗಳ ಸಮುದಾಯವೇ, ಮಾತಿನ ಅಂಗಗಳನ್ನು ನಿಯಮಾನುಸಾರ ವೈಜ್ಞಾನಿಕವಾಗಿ ವಿವರಿಸಿ ವಿಶ್ಲೇಷಿಸುವುದೇ 'ವ್ಯಾಕರಣ.' ಮೇರಿಯೋ ಎ. ಪೈ ಮತ್ತು ಫ್ರಾಂಕ್ ಗೈನರ್ ಅವರ "The Science of the structure of a language and the rules and principles of its generally accepted use" ಎಂಬ ವ್ಯಾಕರಣವ್ಯಾಖ್ಯೆ ಅರ್ಥಪೂರ್ಣವಾಗಿದೆ.

ಭಾಷಿಕ ಅಧ್ಯಯನ ಆಯಾ ಭಾಷೆಯ ಕನಿಷ್ಠತಮ ಉಚ್ಚಾರಣಾಘಟಕ (Speech sounds/phones) ಗಳಿಂದ ಕೂಡಿ ಬೃಹತ್ ರಚನೆಯ ವಾಕ್ಯಘಟಕ (sentence)ದ ವರೆಗೂ ವಿಸ್ತೃತವಾಗಿದೆ. ಮೊದಮೊದಲು ವ್ಯಾಕರಣಶಾಸ್ತ್ರಜ್ಞರು ಭಾಷೆಯ ಕನಿಷ್ಠತಮ ಉಚ್ಚಾರಣಾಘಟಕವನ್ನು 'ವರ್ಣ' (unit of speech sound), 'ಅಕ್ಷರ' (syllable), 'ಶಬ್ದ' (speech sound) ಹಾಗೂ 'ಧ್ವನಿ' (phone) ಎಂಬ ಭಿನ್ನ ಅಂಕಿತಗಳಿಂದ ಗುರುತಿಸಿಕೊಂಡರು. ಅವರ ದೃಷ್ಟಿಯಲ್ಲಿ ಇವೆಲ್ಲವೂ ಉಚ್ಚಾರಣೆಯ ಕನಿಷ್ಠತಮ ಘಟಕಗಳೇನೋ ಸರಿ. ಆದರೆ ನಿರೂಪಣೆಯ ರೀತಿ ಹಾಗೂ ನಿರ್ವಚನದಲ್ಲಿ ವ್ಯತ್ಯಾಸವುಂಟು. ಸಾಮಾನ್ಯವಾಗಿ ವರ್ಣವನ್ನು ಅಕ್ಷರ (=ಅಕ್ಕರ) ಎಂದು ಸೂಚಿಸಿದ್ದಾರೆ. ವರ್ಣ ಎನ್ನುವುದು ಉಚ್ಚರಿತ ಧ್ವನಿಘಟಕ ಎಂಬುದು ಸಮ್ಮತ. 'ಅಕ್ಷರ'ಕ್ಕೆ ಬಹು ಅರ್ಥಗಳುಂಟು. ಇದಕ್ಕಿರುವ ಸಾಧಾರಣಾರ್ಥ ಲಿಪಿಸಂಬಂಧವಾದುದು. ಲಿಪಿ ಸಂಕೇತಗಳು ಯಾವ ಧ್ವನಿಯನ್ನು ಸಂಕೇತಿಸುತ್ತವೆಯೋ (ಸ್ವರ-ವ್ಯಂಜನಗಳು) ಅದು 'ಅಕ್ಷರ.' ಆಧುನಿಕ ಭಾಷಾವಿಜ್ಞಾನದಲ್ಲಿ ವರ್ಣವನ್ನು 'ಧ್ವನಿಮಾ' (Phoneme) ಎಂದೂ ಅಕ್ಷರವನ್ನು Syllable ಎಂದೂ ಪರಿಗಣಿಸಿದೆ. ವರ್ಣ ಹಾಗೂ ಅಕ್ಷರಕ್ಕೆ ಕೊಟ್ಟಿರುವ ಪ್ರಾಚೀನರ ನಿದರ್ಶನಗಳು ಆಧುನಿಕರ ಅಭಿಪ್ರಾಯಕ್ಕೆ ಪೂರಕವಾಗಿವೆ (ಉದಾ : ಅ ಆ ಕ್ ಗ್ ಇತ್ಯಾದಿ ಸ್ವರ ವ್ಯಂಜನಗಳು ವರ್ಣಗಳು ; ಕ (ಕ್+ಅ), ಬಾ (ಬ್+ಆ) ಇತ್ಯಾದಿ ಸ್ವತಂತ್ರವಾಗಿ ಉಚ್ಚರಿತವಾಗುವ ಚಿಕ್ಕ ಘಟಕಗಳು ಅಕ್ಷರಗಳು). ಅಕ್ಷರಗಳು ಎರಡು ರೂಪಗಳಿಂದ ವರ್ತಿಸುತ್ತವೆ : ಮೊದಲನೆಯದು ಉಚ್ಚಾ

ರಣೆಯ ಮೂಲಕ ಕಿವಿಗೆ ವಿಷಯವಾದ, ಒಂದೇ ಆಕಾರವುಳ್ಳ ಅಕ್ಷರಗಳು ಶ್ರಾವಣ; ಎರಡನೆಯದು ಲಿಪಿಭೇದದಿಂದ ವಿವಿಧ ಆಕಾರಗಳನ್ನುಳ್ಳ ಕಣ್ಣಿಗೆ ವಿಷಯವಾದ ಅಕ್ಷರಗಳು ಚಾಕ್ಷುಷ.

ಶಬ್ದ ಎಂದರೆ ಸದ್ದು/ಸಪ್ಪಳ/ ಧ್ವನಿ; ಸಾಮಾನ್ಯವಾಗಿ ಯಾವ ಸದ್ದಾದರೂ ಆಗಬಹುದು. ಮೃದಂಗದ ಸದ್ದು, ಗುಡುಗಿನ ಸಪ್ಪಳ ಭಾಷೆಯಲ್ಲಿ ಕಂಡುಬರುವ ಈ ಧ್ವನಿ ಹೀಗೆ ಯಾವುದೇ ಕಿವಿಗೆ ವಿಷಯವಾದರೆ ಅದು ಶಬ್ದ. ಆದರೆ ವ್ಯಾಕರಣದಲ್ಲಿ 'ಶಬ್ದ' ಕನಿಷ್ಠತಮ ಉಚ್ಚಾರಣಾಘಟಕ; ಭೇದಸೂಚಕ ಧ್ವನ್ಯಂಶದ ಅತಿ ಚಿಕ್ಕ ಘಟಕ; ಅರ್ಥವತ್ತಾದ ಧ್ವನಿ ಅಥವಾ ಧ್ವನಿಸಮುದಾಯ. ಅರ್ಥವತ್ತಾದ ಕನಿಷ್ಠತಮ ಭಾಷಿಕ ಘಟಕ ಆಕೃತಿಮಾ **(Morpheme)** ಎನಿಸಿಕೊಳ್ಳುವುದರಿಂದ, 'ಶಬ್ದ'ದ ಅರ್ಥ ಇಲ್ಲಿ ಸಮ್ಮತವಲ್ಲ. ಕೆಲವು ಸಲ ಅಕ್ಷರಕ್ಕೆ ಪರ್ಯಾಯವಾಗಿ 'ಶಬ್ದ' ಬಳಕೆಗೊಂಡಿದೆ. ಉದಾಹರಣೆಗೆ, 'ಗು' ಶಬ್ದ ಎಂದರೆ ಗ್ ಮತ್ತು ಉ ಎಂಬ ಎರಡು ಧ್ವನಿ ಆ ಆನುಪೂರ್ವಿಯಲ್ಲಿ ಬಂದರೆ ಉಂಟಾಗುವ ಸದ್ದು ಎಂದರ್ಥ.

'ಧ್ವನಿ' ಎಂದರೆ ವಾಕ್-ಉಚ್ಚಾರಣಾ ಸಂಕೇತ. ಧ್ವನ್ಯಂಗದಲ್ಲಿ ಉಚ್ಚರಿತವಾಗುವ ನಿರ್ದಿಷ್ಟವಾದ ಸಂಕೇತವಿದು. ಭಿನ್ನವಾದ ವಿಷಯಗಳನ್ನು ಅಭಿವ್ಯಕ್ತಗೊಳಿಸುವ ಶಕ್ತಿ ಭಾಷೆಯಲ್ಲಿರುವ ಉಚ್ಚಾರಣಾ ಸಂಕೇತಗಳಿಗಿರುವುದರಿಂದಲೇ ಅವನ್ನು ಭಾಷಿಕಧ್ವನಿ **(Phone)**, ಉಚ್ಚರಿತ ಧ್ವನಿ **(Speech sound)** ಎಂದಿರುವುದು. ಶ್ವಾಸಕೋಶದಿಂದ ಬರುವ ಉಸಿರಿನಿಂದ ಉಚ್ಚರಿತವಾಗುವ ಕನಿಷ್ಠತಮ ಘಟಕವನ್ನು ಭಾಷೆಯಲ್ಲಿ 'ಧ್ವನಿ' ಎಂದು ನಿರ್ಧರಿಸಿದೆ. ಇದು ಉಚ್ಚರಿತ ಅತಿಚಿಕ್ಕಸಂಕೇತವೇ ಹೊರತು, ಅರ್ಥವತ್ತಾದ ಧ್ವನಿಘಟಕವಲ್ಲ.

'ಧ್ವನಿ'ಯ ಅವಿಭಾಜ್ಯ ಅಂಗ 'ಶಬ್ದ' ಎಂದು ಅಭಿಪ್ರಾಯಪಟ್ಟ ಪ್ರಾಚೀನರು, ಮಾತು, ನುಡಿ, ವಚನ, ಭಾಷೆ—ಇತ್ಯಾದಿ ಅರ್ಥಗಳಲ್ಲಿ ಶಬ್ದವನ್ನು ಬಳಸಿಕೊಂಡಿದ್ದಾರೆ. ಅಂತಹ ಎಡೆಗಳಲ್ಲಿ 'ಶಬ್ದ' ಅರ್ಥಪೂರ್ಣ ಭಾಷಿಕ ಘಟಕ. ಅದು ವಾಕ್-ಉಚ್ಚರಿತ ಅತಿ ಚಿಕ್ಕ ಸಂಕೇತಕ್ಕಿಂತ ಭಿನ್ನ. ಆಧುನಿಕ ಭಾಷಾವಿಜ್ಞಾನಿಯ ತೀರ್ಮಾನ ಈ ದೃಷ್ಟಿಯಿಂದ ಒಪ್ಪಿತವಾಗಿದೆ. ಆತನು ಕಂಡುಕೊಂಡ ಕನಿಷ್ಠತಮ ಭಾಷಿಕಘಟಕ ಮನುಷ್ಯನ ಅನುಭವವನ್ನು ಮೂರ್ತ ಹಾಗೂ ಅಮೂರ್ತವಾಗಿ ಪ್ರತಿನಿಧಿಸುವುದಕ್ಕೆ ಸಾಧ್ಯತೆಯಿದ್ದು ವ್ಯವಸ್ಥಿತವಾಗಿದೆ. ಅದು ವ್ಯವಸ್ಥಿತವಾಗಿಲ್ಲದಿದ್ದರೆ ಸಂವಹನಕ್ಕೆ ಅವಕಾಶವಿರಲಿಲ್ಲ. ಆತನ ಬೌದ್ಧಿಕತೆಗೆ ಮೌಲ್ಯ ಸಿದ್ಧಿಸುತ್ತಿರಲಿಲ್ಲ. ಸಂವಹನದಲ್ಲಿ ಧ್ವನಿಸಂಕೇತ ತನ್ನ ನಿಖರತೆಯನ್ನು ಉಳಿಸಿಕೊಂಡಿದೆ. ಭಾಷೆಯ ಮೂಲಗುಣಕ್ಕೆ ಧ್ವನಿ ಆಧಾರವಾಗಿದ್ದು ಅದು ಸಹಜತೆಯನ್ನು ಕಾಯ್ದುಕೊಂಡಿದೆ.

ಭೌತವಿಜ್ಞಾನಿಯ ಪರಿಕಲ್ಪನೆಯೇ ಬೇರೆ. ಸದ್ದುಗಳು ಅಥವಾ ಶಬ್ದಗಳು ಭಾಷಿಕವಾದುವಲ್ಲ. ಮಾನವನ ಧ್ವನ್ಯಂಗಗಳಿಂದ ಮೂಡಿ ಬಂದವುಗಳಲ್ಲ. ಉಚ್ಚಾರಣಾಲಕ್ಷಣ ಇವಕ್ಕಿಲ್ಲ. ಬಾಹ್ಯಜಗತ್ತಿನ ವಸ್ತುಗಳ ಘರ್ಷಣೆಯಿಂದ, ವಸ್ತುಗಳ ಚಲನೆಯಿಂದ

ಉಂಟಾದುವು. ಇವು ಜಡತ್ವಗುಣದಿಂದ ಕೂಡಿದುವು. ನಮ್ಮ ಕಿವಿಯಲ್ಲಿ ಉಂಟಾಗುವ ಒಂದು ತೆರನಾದ ಅನುಭವಕ್ಕೆ ಶಬ್ದ ಎಂದು ಹೆಸರು. ಅಲ್ಲದೆ ಆ ಅನುಭವವನ್ನು ಉಂಟು ಮಾಡುವ ಭೌತಿಕಕಾರಣವಿಶೇಷಕ್ಕೂ 'ಶಬ್ದ' ಎಂದೇ ಹೆಸರು. ಶಬ್ದಕ್ಕೆ ಇಂತಹದೇ ಎಂದು ಕಾರಣವನ್ನೂ ಪರಿಸರವನ್ನೂ ಕಲ್ಪಿಸುವುದು ಕಷ್ಟ. **Sound is an ordered disturbance travelling in mechanical medium produced by the vibration of the body** ಎಂಬ ಮಾತು ಭೌತವಿಜ್ಞಾನಿಯ ಶಬ್ದಪರಿಕಲ್ಪನೆಯನ್ನು ವೈಜ್ಞಾನಿಕವಾಗಿ ನಿಖರಗೊಳಿಸಿದೆ.

ಭಾಷೆಯ ವೈಜ್ಞಾನಿಕ ಅಧ್ಯಯನದಲ್ಲಿ ಧ್ವನಿವಿಜ್ಞಾನ (**phonetics**) ಮುಖ್ಯವಾದುದು. ಇದು ಆಧುನಿಕ ಶುದ್ಧವಿಜ್ಞಾನದ ಉಪಶಾಖೆ. ಇದು ಭಾಷೆಗೆ ಸಂಬಂಧಿಸಿದ ಎಲ್ಲಾ ಉಚ್ಚರಿತ ಧ್ವನಿಗಳನ್ನೂ ಪ್ರಾಯೋಗಿಕವಾಗಿ ವಿವರಿಸಿ, ವಿಶ್ಲೇಷಿಸುತ್ತದೆ. ಭಾಷೆಯ ಸಹಜಧ್ವನಿಗಳ ವೈಜ್ಞಾನಿಕ ಅಧ್ಯಯನವೇ ಧ್ವನಿವಿಜ್ಞಾನದ ಮುಖ್ಯಗುರಿ. ಭಾಷೆಯಲ್ಲಿ ಬಳಕೆಯಾಗುವ ಉಚ್ಚರಿತ ಧ್ವನಿಗಳ ನಿಖರವಿಶ್ಲೇಷಣೆಯಲ್ಲಿ ಮಾನವನ ಮುಖವಿವರದಿಂದ ಹೊರಡುವ ಧ್ವನಿಗಳನ್ನು ಮಾತ್ರ ಇದು ಒಳಗೊಂಡಿರುತ್ತದೆ. ಇಂಥ ಧ್ವನಿಗಳು ಮಾತ್ರ ಧ್ವನಿವಿಜ್ಞಾನಕ್ಕೆ ದತ್ತವೇ ಹೊರತು, ಧ್ವನ್ಯಂಗ (ಮುಖವಿವರ)ದಿಂದಲೇ ಉತ್ಪಾದನೆಯಾಗುವ ಕೆಮ್ಮು ಸೀನು ಇತ್ಯಾದಿಗಳ ವಿಶ್ಲೇಷಣೆ ಧ್ವನಿವಿಜ್ಞಾನದಲ್ಲಿ ಬರುವುದಿಲ್ಲ. ಭಾಷೆಯಲ್ಲಿ ಬಳಕೆಯಾಗುವ ಕನಿಷ್ಠತಮ ಧ್ವನಿಘಟಕಗಳು ಹುಟ್ಟುವ ಬಗೆ, ಗಾಳಿಯ ಮೂಲಕ ಧ್ವನಿ ಪ್ರಸಾರವಾಗುವ ರೀತಿ, ಕೇಳುಗ ಧ್ವನಿಗಳನ್ನು ಅರ್ಥಮಾಡಿಕೊಳ್ಳುವ ವಿಧಾನ, ಅಲ್ಲದೆ ಧ್ವನಿಯ ಸಹಜ ಲಕ್ಷಣಗಳು ಮತ್ತು ಅವುಗಳ ವೈಜ್ಞಾನಿಕ ವರ್ಗೀಕರಣ ಇವನ್ನು ಧ್ವನಿವಿಜ್ಞಾನ ಒಳಗೊಂಡಿದೆ. ಭಾಷೆಯ ಧ್ವನಿಮಾಗುಚ್ಛವನ್ನು ಧ್ವನಿತರಂಗವಾಗಿ ಮಾತನಾಡುವವನ ಉಚ್ಚಾರಣೆಗೆ ತಕ್ಕಂತೆ ಬದಲಾಯಿಸುವ ಮತ್ತು ಕೇಳಿದ ಧ್ವನಿತರಂಗಗಳನ್ನು ಧ್ವನಿಗಳಾಗಿ ಪರಿವರ್ತಿಸುವ ಕ್ರಿಯೆಯಲ್ಲಿ ಭೌತಶಾಸ್ತ್ರಜ್ಞನ ಪರಿಶ್ರಮವನ್ನು ಬಳಸಿಕೊಳ್ಳುವ ಸಾಧ್ಯತೆಯುಂಟು. ಧ್ವನಿವಿಜ್ಞಾನದ ಜೊತೆಗೆ ಭೌತವಿಜ್ಞಾನದ ತತ್ತ್ವಗಳನ್ನು ಮುಖ್ಯವಾಗಿ ಅನ್ವಯಿಸಿಯೇ ಉಚ್ಚರಿತ ಭಾಷಿಕಧ್ವನಿಗಳನ್ನು ವಿವೇಚಿಸುವುದು ಕೂಡ. ಒಟ್ಟಿನಲ್ಲಿ **the science of speech sounds** ಎನ್ನುವ ಮಾತು ಅರ್ಥವತ್ತಾಗಿದೆ.

ಭಾಷೆಯಲ್ಲಿ ಬಳಕೆಯಾಗುವ ಉಚ್ಚರಿತಧ್ವನಿಗಳ ಉತ್ಪಾದನೆ, ಪ್ರಸಾರವಾಗುವಿಕೆ, ಗ್ರಹಿಕೆ ಹಾಗೂ ಧ್ವನಿಯ ಲಕ್ಷಣವನ್ನು ಅನ್ವಯಿಸಿ ಧ್ವನಿವಿಜ್ಞಾನವನ್ನು ವೈಜ್ಞಾನಿಕವಾಗಿ ನಾಲ್ಕು ಪ್ರಮುಖ ಶಾಖೆಗಳಾಗಿ ವರ್ಗೀಕರಿಸಿದೆ. ಅವು ಇಂತಿವೆ :

(ಅ) ಉಚ್ಚಾರಣಾತ್ಮಕ (ಧ್ವನ್ಯುತ್ಪಾದನಾ) ಧ್ವನಿವಿಜ್ಞಾನ (**Articulatory phonetics**)

(ಆ) ತರಂಗಾತ್ಮಕ (ಭೌತ) ಧ್ವನಿವಿಜ್ಞಾನ (**Acoustic phonetics**)

(ಇ) ಶ್ರವಣಾತ್ಮಕ (ಧ್ವನಿಗ್ರಹಣ) ಧ್ವನಿವಿಜ್ಞಾನ (**Auditory phonetics**)

(ಈ) ಪ್ರಾಯೋಗಿಕ ಧ್ವನಿವಿಜ್ಞಾನ **(Experimental phonetics)**

ಈ ನಾಲ್ಕು ಧ್ವನಿವಿಜ್ಞಾನದ ಶಾಖೆಗಳೂ ಭಾಷೆಯಲ್ಲಿರುವ ಧ್ವನಿಗಳನ್ನು ನಿಖರವಾಗಿ ವಿವರಿಸುತ್ತವೆ. ಅಲ್ಲದೆ ಧ್ವನಿಯ ಭೌತಿಕಲಕ್ಷಣವನ್ನೂ ಜೈವಿಕತೆಯನ್ನೂ ಸಮರ್ಪಕವಾಗಿ ನಿರೂಪಿಸುವಲ್ಲಿ ಭಾಷಾವಿಜ್ಞಾನಿಗೆ ಅನುವಾಗಿವೆ.

(ಅ) **ಉಚ್ಚಾರಣಾತ್ಮಕ ಧ್ವನಿವಿಜ್ಞಾನ :** ಭಾಷೆಯಲ್ಲಿ ಬಳಕೆಯಾಗುವ ಧ್ವನಿಗಳ ಉತ್ಪಾದನೆಯಲ್ಲಿ ಮನುಷ್ಯನ ದೇಹದಲ್ಲಿರುವ ಅಂಗಗಳು ಕಾರ್ಯನಿರ್ವಹಿಸುವ ಶಾಸ್ತ್ರೀಯತೆಯನ್ನು ಕುರಿತು ವಿವೇಚಿಸುವ ಶಾಖೆಯಿದು. ಧ್ವನಿಯ ಉತ್ಪಾದನೆಯಲ್ಲಿ ಧ್ವನ್ಯಂಗಗಳು ಮತ್ತು ಅವುಗಳ ಪ್ರಕ್ರಿಯೆಗಳು ಬಹುಮುಖ್ಯ. ಧ್ವನಿಯ ಉತ್ಪತ್ತಿಯ ಸ್ಥಾನ, ರೀತಿ, ಕರಣ ಮುಂತಾದುವುಗಳನ್ನು ಸೂಕ್ಷ್ಮವಾಗಿ ಗಮನಿಸಿ ಧ್ವನಿಯ ಉತ್ಪಾದನೆಯನ್ನು ಖಚಿತಪಡಿಸಲಾಗುವುದು. ಅಲ್ಲದೆ ಉಚ್ಚರಿತ ಧ್ವನಿಗಳ ವ್ಯವಸ್ಥಿತ ವರ್ಗೀಕರಣವನ್ನೂ ಇಲ್ಲೇ ವಿವರಿಸಿದೆ. ಧ್ವನಿಗಳ ಉತ್ಪತ್ತಿಗೆ ನೆರವಾಗುವ ಅಂಗಗಳನ್ನೇ ಧ್ವನ್ಯಂಗಗಳು ಎನ್ನುವುದು. ಧ್ವನಿಯನ್ನು ಉಚ್ಚರಿಸಲು ಸಹಾಯಕವಾಗುವ ಮುಖ್ಯ ಅಂಗಗಳೆಂದರೆ, ತುಟಿಗಳು, ಹಲ್ಲು, ನಾಲಗೆ, ಸ್ವರಯಂತ್ರ ಮತ್ತು ಸ್ವರತಂತುಗಳು. ಈ ವಿವಿಧ ಅಂಗಗಳ ಜೊತೆಗೆ ಶ್ವಾಸಕೋಶದಿಂದ ಬರುವ ಉಸಿರು ಮುಖ್ಯಪಾತ್ರ ವಹಿಸುತ್ತದೆ. ಧ್ವನಿ ಉತ್ಪಾದನಾ ರೀತಿಯನ್ನು ಆಧರಿಸಿ, ಧ್ವನಿಗಳ ಸ್ಥಾನ ಮತ್ತು ಕರಣವನ್ನು ಪರಿಶೀಲಿಸಲಾಗುವುದು. ಹೀಗೆ ಧ್ವನಿ ಉಚ್ಚಾರಣಾಕಲೆಯನ್ನು ಪ್ರಧಾನವಾಗಿ ನಿರೂಪಿಸುವುದರಿಂದಲೇ, ಈ ಬಗೆಯ ವೈಜ್ಞಾನಿಕ ಅಧ್ಯಯನವನ್ನು ಉಚ್ಚಾರಣಾತ್ಮಕ ಧ್ವನಿವಿಜ್ಞಾನ ಎಂದಿರುವುದು. ಧ್ವನಿ ಉತ್ಪಾದನಾ ವಿಶ್ಲೇಷಣೆಗೆ ಉಚ್ಚಾರಣಾತ್ಮಕ ಧ್ವನಿವಿಜ್ಞಾನದ ಜೊತೆಗೆ ಶಾರೀರಕ ಧ್ವನಿವಿಜ್ಞಾನದ ಸಹಾಯವೂ ಅಗತ್ಯ. ಕಾರಣ, ಜೈವಿಕ ಧ್ವನಿವಿಜ್ಞಾನ **(physiological phonetics)** ಮಾನವನ ಶರೀರದಲ್ಲಿರುವ ಅಂಗಗಳು ಧ್ವನಿ ಉತ್ಪಾದನೆಯಲ್ಲಿ ಪಾಲ್ಗೊಳ್ಳುವಿಕೆ, ಅವುಗಳ ರಚನಾವಿಧಾನಗಳು ಹಾಗೂ ಕ್ರಿಯಾ ವಿಶೇಷಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ವಿವರಿಸುತ್ತದೆ. ಅಷ್ಟೇ ಅಲ್ಲದೆ ಧ್ವನಿಪ್ರಸರಣ ಹಾಗೂ ಧ್ವನಿಗ್ರಹಣವನ್ನೂ ಸ್ಥೂಲವಾಗಿ ವಿವೇಚಿಸುವುದು. ಜೀವಶಾಸ್ತ್ರಕ್ಕೆ ಸಂಬಂಧಿಯಾಗಿರುವುದರಿಂದಲೇ ಇದನ್ನು ಜೈವಿಕ/ಶಾರೀರಕ ಧ್ವನಿವಿಜ್ಞಾನ ಎಂದು ಪರಿಗಣಿಸಿರುವುದು.

(ಆ) **ತರಂಗಾತ್ಮಕ ಧ್ವನಿವಿಜ್ಞಾನ :** ತರಂಗಾತ್ಮಕ (ಭೌತ) ಧ್ವನಿವಿಜ್ಞಾನ ಭೌತಶಾಸ್ತ್ರದ ಒಂದು ವಿಭಾಗ. ಭೌತವಿಜ್ಞಾನಕ್ಕೆ ಹೆಚ್ಚು ಸಂಬಂಧಪಡುವ ಈ ಶಾಖೆಯನ್ನು ವಿಜ್ಞಾನಿಗಳು ಭೌತವಿಜ್ಞಾನದ ಅವಿಭಾಜ್ಯ ಅಂಗ ಎಂದು ಪರಿಗಣಿಸಿದ್ದಾರೆ. ಭೌತವಿಜ್ಞಾನಿ ಯಾವುದೇ ಸದ್ದು/ಸಪ್ಪಳದ ಗುಣಗಳ ಭೌತಿಕತೆಯನ್ನು ಅಧ್ಯಯನ ಮಾಡಿದರೆ, ಧ್ವನಿವಿಜ್ಞಾನಿ ಭಾಷೆಯ ಉಚ್ಚರಿತ ಧ್ವನಿಗಳ ಭೌತಿಕ ಸ್ವರೂಪದ ಅಧ್ಯಯನವನ್ನು ಮಾಡುತ್ತಾನೆ. ಸಾಮಾನ್ಯವಾಗಿ ಮಾನವನ ಧ್ವನ್ಯಂಗಗಳಿಂದ ಉತ್ಪತ್ತಿಯಾದ 'ಧ್ವನಿ' ಕೇಳುಗನನ್ನು ಮುಟ್ಟುವವರೆಗೆ ಹಲವು ಸ್ಥಿತ್ಯಂತರಗಳನ್ನು ಪಡೆಯುತ್ತದೆ.

ಉಚ್ಚಾರಣೆಗೊಂಡ ಧ್ವನಿ, ತರಂಗರೂಪವನ್ನು ಪಡೆದು, ಅನೇಕ ಭೌತಿಕಗುಣಗಳನ್ನು ಪಡೆದು, ಕೇಳುಗನ ಕಿವಿಯನ್ನು ಮುಟ್ಟುತ್ತದೆ. ಧ್ವನಿತರಂಗಗಳು ಹಾಗೂ ಅವುಗಳ ಪ್ರಸಾರವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವುದೇ ತರಂಗಾತ್ಮಕ ಧ್ವನಿವಿಜ್ಞಾನದ ಮುಖ್ಯ ಗುರಿ. ಉಚ್ಚರಿತ ಧ್ವನಿತರಂಗಗಳನ್ನು ಭೌತವಿಜ್ಞಾನದಲ್ಲಿ ಪೂರ್ಣವಾಗಿ ಅಧ್ಯಯನ ಮಾಡಲಾಗದು. ಉಚ್ಚರಿತಧ್ವನಿಗಳು ಧ್ವನಿತರಂಗಗಳಾಗಿ ಪರಿವರ್ತನೆಗೊಳ್ಳುವ ಬಗೆ, ಅವು ಪ್ರಸಾರಗೊಳ್ಳುವ ರೀತಿ ಇತ್ಯಾದಿಯನ್ನು ಭೌತಿಕವಾಗಿ ಪರಿಕಲ್ಪಿಸುವುದರ ಮೂಲಕ ಅವುಗಳ ಸಹಜತ್ವವನ್ನು ಧ್ವನಿವಿಜ್ಞಾನಿ ದೃಢಪಡಿಸುತ್ತಾನೆ. ಇದಕ್ಕೆ ಭೌತವಿಜ್ಞಾನದ ಅನೇಕ ಪ್ರಾಯೋಗಿಕ ಉಪಕರಣಗಳನ್ನು ಬಳಸಿಕೊಳ್ಳುವ ಸಾಧ್ಯತೆಯುಂಟು. ಉಚ್ಚರಿತ ಧ್ವನಿಯ ಭೌತಿಕಸ್ವರೂಪವನ್ನು ವಿವರಿಸುವುದರ ಜೊತೆಗೆ ಧ್ವನಿಯ ತೀವ್ರತೆ, ತಾನ, ಉಚ್ಚತೆ ಈ ಅಂಶಗಳನ್ನೂ ಗಮನಿಸಲಾಗುತ್ತದೆ. ಧ್ವನಿಯ ಕಂಪನಾಂಕ, ಕಂಪನವಿಸ್ತಾರ, ಆವರ್ತನಕಾಲ ಇತ್ಯಾದಿಗಳನ್ನು ಭೌತಧ್ವನಿವಿಜ್ಞಾನದಲ್ಲಿ ವಿಸ್ತಾರವಾಗಿ ವಿವರಿಸಲಾಗುವುದು. ಭೌತಧ್ವನಿವಿಜ್ಞಾನಿಗೆ ಭೌತವಿಜ್ಞಾನದ ಜೊತೆಗೆ ಗಣಿತ ಹಾಗೂ ಗಣಕ ವಿಜ್ಞಾನದ ಪರಿಶ್ರಮವೂ ಅಗತ್ಯ.

(ಇ) **ಶ್ರವಣಾತ್ಮಕ ಧ್ವನಿವಿಜ್ಞಾನ :** ಮಾನವನ ಧ್ವನ್ಯಂಗದ ಉಚ್ಚರಿತಧ್ವನಿ ಕೇಳುಗನ ಕರ್ಣವನ್ನು ತಲುಪಿದನಂತರ ಅವನ್ನು ಅವನು ಗ್ರಹಿಸುವವರೆಗೆ ಹೊಂದುವ ಧ್ವನಿಸ್ಥಿತ್ಯಂತರಗಳ ವಿಶ್ಲೇಷಣೆಯೇ ಶ್ರವಣಾತ್ಮಕ ಧ್ವನಿವಿಜ್ಞಾನದ ವಸ್ತು. ಅಲ್ಲದೆ ಶ್ರವಣೇಂದ್ರಿಯವಾದ ಕಿವಿಯ ರಚನೆ, ಅಲ್ಲಿ ಧ್ವನಿ ಪ್ರಸರಣವಾಗುವ ರೀತಿ, ಕೇಳಿದ ಧ್ವನಿಯನ್ನು ಅರ್ಥೈಸಿಕೊಳ್ಳುವ ಪರಿ ಇವನ್ನು ಧ್ವನಿವಿಜ್ಞಾನಿ ಸೂಕ್ಷ್ಮವಾಗಿ ಗಮನಿಸಿ ವಿವರಿಸುತ್ತಾನೆ. ಉಚ್ಚರಿತ ಧ್ವನಿಯ ಕೇಳುವಿಕೆಯನ್ನು ಆಧರಿಸಿ, ಧ್ವನಿಗಳನ್ನು ಮೃದು ಧ್ವನಿ, ಕಠಿಣ ಧ್ವನಿ, ಸಹಜ ಹಾಗೂ ವಿಕೃತಧ್ವನಿ ಎಂದು ಪತ್ತೆಹಚ್ಚಿ ವಿವರಿಸಬಹುದು. ಹೊರಕಿವಿಯೊಳಗೆ ನುಗ್ಗಿ ನಡುಕಿವಿಯ ಮೂಲಕ ಒಳಕಿವಿಗೆ ತಲುಪುವ ಧ್ವನಿತರಂಗಗಳು ಕರ್ಣಪಟಲವನ್ನು ಬಡಿದು ಜ್ಞಾನೇಂದ್ರಿಯ ನರಗಳ ಸಹಾಯದಿಂದ ಕೇಳುವವನ ಮಿದುಳನ್ನು ತಲುಪಿದ ತಕ್ಷಣವೇ ಉಂಟಾಗುವ ವಿವಿಧ ಪ್ರತಿಕ್ರಿಯೆಗಳನ್ನು ಮುಖ್ಯವಾಗಿ ಇಲ್ಲಿ ಗಮನಿಸಲಾಗುವುದು. ಸಾಮಾನ್ಯವಾಗಿ ಮಿದುಳಿನ ಕ್ರಿಯೆ, ಸ್ಮರಣಶಕ್ತಿ, ಆಲೋಚನಾಶಕ್ತಿ ಮುಂತಾದವು ಶ್ರವಣಶಕ್ತಿಯನ್ನು ಆಧರಿಸಿರುತ್ತವೆ. ಧ್ವನಿವಿಶ್ಲೇಷಣೆಯಲ್ಲಿ ಶ್ರವಣಾತ್ಮಕತೆ ಬಹು ಮುಖ್ಯ. ಕಾರಣ ಧ್ವನಿಯ ಉಚ್ಚಾರಣಾರೀತಿಗಿಂತಲೂ, ಧ್ವನಿಯ ಗ್ರಹಣರೀತಿ ಧ್ವನಿವರ್ಗೀಕರಣಕ್ಕೆ ಬಹು ಯುಕ್ತವಾದುದು. ಇದರಿಂದ ಧ್ವನಿಯ ಸಹಜಗುಣಧರ್ಮ ತಿಳಿಯುತ್ತದೆ.

(ಈ) **ಪ್ರಾಯೋಗಿಕ ಧ್ವನಿವಿಜ್ಞಾನ :** ಧ್ವನಿವಿಜ್ಞಾನದ ಆಧುನಿಕಶಾಖೆಯಿದು. ಧ್ವನಿಸಂಬಂಧಿ ಗುಣಲಕ್ಷಣಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ವಿಭಾಗವಿದು. ಉಚ್ಚರಿತ ಭಾಷಿಕಧ್ವನಿಗಳನ್ನು ವಿಶ್ಲೇಷಿಸಲು, ಅರ್ಥಮಾಡಿಕೊಳ್ಳಲು ಹಾಗೂ ವಿವರಿ ... ಸಾಮಾನ್ಯರೀತಿಯಲ್ಲಿ

ವಿವರಣಾತ್ಮಕವಾಗಿ ಧ್ವನಿಗಳನ್ನು ವಿವೇಚಿಸುವುದರ ಜೊತೆಗೆ, ವೈಜ್ಞಾನಿಕ ಪ್ರಯೋಗದ ರೀತ್ಯಾ ಧ್ವನಿಯ ವಿಶೇಷತೆಯನ್ನೂ ಪರಿಶೀಲಿಸಲಾಗುವುದು. ಉಚ್ಚಾರಣಾತ್ಮಕ, ತರಂಗಾತ್ಮಕ ಹಾಗೂ ಶ್ರವಣಾತ್ಮಕ ಧ್ವನಿವಿಜ್ಞಾನಿಗಳು ಸಾಧಿಸಲಾಗದೇ ಉಳಿದ ವಿಷ್ಮೋಚ್ಚರಿತ ಧ್ವನಿವಿಚಾರಗಳನ್ನು ಯಂತ್ರದ ಮೂಲಕ ಗುರುತಿಸಲು ಸಾಧ್ಯ. ಆದ್ದರಿಂದಲೇ ಇದನ್ನು 'ಯಾಂತ್ರಿಕ ಧ್ವನಿವಿಜ್ಞಾನ' **(Instrumental phonetics)** ಎಂದೂ ಕರೆದಿದೆ. ವೈಜ್ಞಾನಿಕ ಯಂತ್ರೋಪಕರಣಗಳೇ ಇಲ್ಲಿನ ಜೀವಾಳ. ಅಲ್ಲದೆ ಪ್ರಯೋಗಶಾಲೆಯಲ್ಲಿಯೇ ಧ್ವನಿಗಳ ವಿವೇಚನೆ, ವಿಶ್ಲೇಷಣೆ ನಡೆಯುವುದರಿಂದ ಇದನ್ನು 'ಪ್ರಯೋಗಶಾಲಾಧ್ವನಿವಿಜ್ಞಾನ' **(Laboratory phonetics)** ಎಂದೂ ಕೆಲವು ಧ್ವನಿವಿಜ್ಞಾನಿಗಳು ಕರೆದಿದ್ದಾರೆ. ಅಷ್ಟೇ ಅಲ್ಲದೆ ಭಾಷಿಕಧ್ವನಿವಿಶ್ಲೇಷಣೆಗೆ ವಿಶೇಷವಾಗಿ ಭೌತವಿಜ್ಞಾನ, ಜೈವಿಕವಿಜ್ಞಾನ, ಮನೋವಿಜ್ಞಾನ, ಗಣಿತವಿಜ್ಞಾನ ಹಾಗೂ ಗಣಕವಿಜ್ಞಾನದ ನೆರವನ್ನು ನೇರವಾಗಿ ಪಡೆಯುವ ಸಾಧ್ಯತೆ ಇರುವುದರಿಂದ, ಪ್ರಾಯೋಗಿಕ ಧ್ವನಿವಿಜ್ಞಾನವನ್ನು 'ಅನ್ವಯಿಕ ಧ್ವನಿವಿಜ್ಞಾನ' **(Applied phonetics)** ಎಂದು ಸಹ ಪರಿಗಣಿಸಿದೆ.

ಭೌತವಿಜ್ಞಾನ ಒಂದು ಪ್ರಮುಖ, ಪ್ರಾಯೋಗಿಕ ಶುದ್ಧವಿಜ್ಞಾನ. ಇಲ್ಲಿ ಭೌತವಸ್ತುಗಳ ಗುಣಧರ್ಮ, ಶಕ್ತಿ ಹಾಗೂ ಅವುಗಳ ಪರಸ್ಪರ ಸಂಬಂಧವನ್ನು ವೈಜ್ಞಾನಿಕಪ್ರಯೋಗಗಳ ಮುಖೇನ ಶ್ರುತಪಡಿಸಲಾಗುವುದು. ವೈಜ್ಞಾನಿಕ ಭಾಷಾ ಅಧ್ಯಯನಕ್ಕೆ ಈ ಭೌತ ವಿಜ್ಞಾನದ ಪರಿಜ್ಞಾನ ಅಗತ್ಯ. ಇದಕ್ಕೆ ಸಾಕ್ಷಿ, ಭೌತವಿಜ್ಞಾನಿ ವೈಜ್ಞಾನಿಕವಾಗಿ ವಿವೇಚಿಸಿರುವ ಶಬ್ದದ ಪರಿಕಲ್ಪನೆಯೇ ಸಾಕು. 'ಶಬ್ದ'ವನ್ನು ಕುರಿತು ನಡೆಸಿರುವ ವೈಜ್ಞಾನಿಕ ಪ್ರಯೋಗಗಳು ಹಾಗೂ ಸಿದ್ಧಾಂತಗಳು ಧ್ವನಿವಿಜ್ಞಾನಿಯ ಭಾಷಿಕಧ್ವನಿವಿಶ್ಲೇಷಣೆಗೆ ನೆರವಾಗುತ್ತವೆ.

'ಸದ್ದು'/'ಶಬ್ದ' **(sound)** ನಮ್ಮ ಕಿವಿಗಳಲ್ಲಿ ಉಂಟಾಗುವ ಒಂದು ಅನುಭವ; ಭೌತಿಕ ಕಾರಣದಿಂದ ನಮಗೆ ಆಗುವ ಅನುಭವ. ಶಬ್ದ ಎಂಬ ಅನುಭವವನ್ನು ನಮಗೆ ಉಂಟು ಮಾಡಬಲ್ಲ ಕಾರಣವಿಶೇಷವನ್ನೇ ಭೌತವಿಜ್ಞಾನದಲ್ಲಿ ವಿವರಿಸಲು ಪ್ರಯತ್ನಿಸುತ್ತಿರುವುದು. ವಸ್ತುಗಳ ಸ್ಪಂದನ ಅಥವಾ ಅದುರುವಿಕೆಯೇ ಶಬ್ದದ ಉತ್ಪತ್ತಿಗೆ ಮುಖ್ಯ ಕಾರಣ. ಪದಾರ್ಥಗಳು ಅದುರುವಾಗ ಗಾಳಿಯಲ್ಲಿ ಅಲೆಗಳು ಹುಟ್ಟುವುದರಿಂದ 'ಶಬ್ದ' ಉಂಟಾಗುತ್ತದೆ. ಅದುರುವುದೇ 'ಸ್ಪಂದನ'. ಇದನ್ನು ಅನುಭವದಿಂದ ತಿಳಿಯಬಹುದು. ಉದಾ : ಜಾಗಟೆ ಬಾರಿಸುವುದು, ಗಂಟೆ ಹೊಡೆಯುವುದು ಇತ್ಯಾದಿ. ಜಾಗಟೆಯನ್ನು ಬಾರಿಸಿ,ಅದರ ಮೇಲೆ ಬೆರಳನ್ನಿಟ್ಟರೆ, ಅದು ಅದುರುವುದು ಹಾಗೂ ಶಬ್ದ ಕೇಳುವುದು ತಿಳಿಯುತ್ತದೆ. ಮನುಷ್ಯರ ವಾಣಿಗೂ ಸ್ಪಂದನವೇ ಕಾರಣ. ವಾಕ್‌ಪಟಲಗಳ ಮಧ್ಯೆ ಶ್ವಾಸಕೋಶಗಳಿಂದ ಉಸಿರು ಬರುತ್ತಿರುವುದರಿಂದ ವಾಣಿ/ಭಾಷಿಕಧ್ವನಿ **(speech sound)** ಹುಟ್ಟುವುದು. ವಾಕ್‌ಪಟಲಗಳ **(vocal chords)** ಅದುರುವಿಕೆಯೇ ಭಾಷಿಕಧ್ವನಿಯಉತ್ಪತ್ತಿಗೆಕಾರಣ ಹಾಗೂ ಆಧಾರ. ಈ ಸ್ಪಂದನಗಳು ನಮ್ಮ ಕಿವಿಯಲ್ಲಿ ಶಬ್ದದ ಅನುಭವವನ್ನು ಉಂಟು

ಮಾಡಬೇಕಾದರೆ ಮಧ್ಯವರ್ತಿಯಾದ ವಾಯುಮಂಡಲದಲ್ಲಿ ಅದೇ ರೀತಿಯ ಸ್ಪಂದನಗಳುಂಟಾಗಿ ನಮ್ಮ ಕಿವಿಯೊಳಗಿರುವ ಗಾಳಿಯಲ್ಲಿಯೂ ಹಾಗೆಯೇ ಸ್ಪಂದನಗಳು ನಡೆಯಬೇಕು ; ಇಲ್ಲವೆ ಅದುರುತ್ತಿರುವ ಪದಾರ್ಥಕ್ಕೂ ನಮ್ಮ ಕಿವಿಗಳ ಮೂಳೆಗಳಿಗೂ ಯಾವುದಾದರೂ ಸ್ಪಂದಿಸಬಲ್ಲ ಪದಾರ್ಥದ ಅವಿಚ್ಛಿನ್ನವಾದ ಸಂಪರ್ಕವೇರ್ಪಡಬೇಕು. ಶಬ್ದ ಕಿವಿಗೆ ಕೇಳಬೇಕಾದರೆ, ಎಲ್ಲಾದರೂ ಒಂದು ಕಡೆ ಉಂಟಾಗುವ ಸ್ಪಂದನಗಳನ್ನು ಕಿವಿಯ ಬಳಿಗೆ ತಲುಪಿಸಬಲ್ಲ ಮಧ್ಯವರ್ತಿ ಆವಶ್ಯಕ. ಗಾಳಿಯೇ ಆ ಮಧ್ಯವರ್ತಿ. ಮಧ್ಯವರ್ತಿಯ ಸ್ಥಿತಿಸ್ಥಾಪಕತ್ವಗುಣದ ಆಧಾರದ ಮೇಲೆ ಶಬ್ದಪ್ರಸಾರ ನಿಂತಿದೆ. ಶಬ್ದ ಮಧ್ಯವರ್ತಿಯೊಳಗೆ ಪಸರಿಸುವಾಗ ಏರ್ಪಡುವ ಸ್ಥಿತಿವಿಶೇಷವೇ ಅಲೆ. ನೀರಿನ ಮೇಲೆ ಉಂಟಾಗುವ ಅಲೆಗಳಿಗೂ ಈ ಸ್ಥಿತಿವಿಶೇಷಕ್ಕೂ ವಿಶೇಷ ಹೋಲಿಕೆಯುಂಟು. ಆದ್ದರಿಂದಲೇ ಇಂತಹ ಸ್ಥಿತಿವಿಶೇಷಗಳನ್ನು ಅಲೆ ಎಂದಿರುವುದು. ಶಬ್ದಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು. ವಸ್ತುಗಳ ಸಂತತ ನಿಯಮಿತ ಸ್ಪಂದನದಿಂದ ಉತ್ಪತ್ತಿಯಾಗುವ ಶಬ್ದಗಳು ಇಂಪಾದ ಶಬ್ದಗಳು (ಉದಾ : ವೀಣೆಯ ನಾದ). ಸ್ಪಂದನವಾಗಿ ತಟ್ಟನೆ ನಿಂತುಹೋದರೆ, ಅವು ಕಠೋರ ಶಬ್ದಗಳು. ಇವು ನಿಯಮರಹಿತ ಸ್ಪಂದನದಿಂದ ಉಂಟಾಗುವುವು.

ಭೌತವಿಜ್ಞಾನಿ ವಿಶ್ಲೇಷಿಸಿರುವ ಶಬ್ದವ್ಯಾಪಾರ ಭೌತಿಕವಸ್ತುಗಳ ಘರ್ಷಣೆಯಿಂದ ಮಾತ್ರ ಉತ್ಪತ್ತಿಯಾದವು. ಹೀಗೆ ವಸ್ತುಗಳ ಸ್ಪಂದನದಿಂದ ಉತ್ಪತ್ತಿಯಾದ ಶಬ್ದ ನಿರೂಪಣೆಗೆ ರೂಢಿಸಿಕೊಂಡ ಸಿದ್ಧಾಂತಗಳೂ ಪ್ರಯೋಗಗಳೂ ವೈಜ್ಞಾನಿಕವಾದುವೇ. ಆದರೆ ಧ್ವನಿವಿಜ್ಞಾನಿ ಮಾನವನ ಧ್ವನ್ಯಂಗದಲ್ಲಿ ಉಂಟಾದ ಉಸಿರಿನ ಘರ್ಷಣೆಯ ಸ್ಪಂದನದ ಅನುಭವವನ್ನು ಭಾಷಿಕ ಧ್ವನಿಯಾಗಿ ಕಂಡುಕೊಂಡಿದ್ದಾನೆ. ಭಾಷಿಕಧ್ವನಿಯ ವಿಶ್ಲೇಷಣೆಗೆ ಭೌತವಿಜ್ಞಾನಿಯ ದಾರ್ಶನಿಕ ಹಾಗೂ ವೈಜ್ಞಾನಿಕ ಜ್ಞಾನವೇ ಆಧಾರ. ಭೌತವಿಜ್ಞಾನಿ ಭೌತಿಕತೆಗೆ ಹೆಚ್ಚು ಆದ್ಯತೆಯನ್ನು ನೀಡಿದರೆ, ಧ್ವನಿವಿಜ್ಞಾನಿ ಭೌತಿಕತೆಯನ್ನು ಜೈವಿಕತೆ ಹಾಗೂ ಮನೋವೈಜ್ಞಾನಿಕತೆಯೊಂದಿಗೆ ಮೇಳೈಸಿಕೊಂಡಿದ್ದಾನೆ.

ವೈಜ್ಞಾನಿಕ ಭಾಷಾ ಅಧ್ಯಯನವನ್ನು ಸೂಕ್ಷ್ಮವಾಗಿ ಗಮನಿಸಿದ್ದೇ ಆದರೆ, ಪ್ರತಿಯೊಂದು ಭಾಷೆಯೂ ಉಚ್ಚರಿತ ಧ್ವನಿಘಟಕಗಳ ಮೊತ್ತ. ಭಾಷೆಯ ವಿವಿಧ ರಚನಾಸ್ತರಗಳ ಆವಿಷ್ಕಾರಕ್ಕೆ ಮೂಲ, ಮಾನವನ ಉಚ್ಚರಿತ ಧ್ವನಿಘಟಕ. ಉಚ್ಚರಿತ ಧ್ವನಿಘಟಕಗಳ ವ್ಯವಸ್ಥೆಯೇ 'ಭಾಷೆ'. ವ್ಯವಸ್ಥೆ ಸಂದರ್ಭಕ್ಕೆ ತಕ್ಕಂತೆ ವಿಸ್ತೃತಗೊಳ್ಳುವುದರಿಂದ ಭಾಷೆಯಲ್ಲಿ ಧ್ವನಿ, ಧ್ವನಿಮಾ, ಆಕೃತಿಮಾ, ಪದ, ಪದಗುಚ್ಛ, ವಾಕ್ಯಖಂಡ, ವಾಕ್ಯ-ಇತ್ಯಾದಿ ಅರ್ಥವತ್ತಾದ ರಚನಾಸ್ತರಗಳನ್ನು ಕಾಣುವುದು. ಹಾಕೆಟ್ ವೈಜ್ಞಾನಿಕ ಭಾಷಾ ಅಧ್ಯಯನವನ್ನು ಐದು ಪ್ರಮುಖ ಭಾಷಾಸೂತ್ರಗಳ ಹಿನ್ನೆಲೆಯಲ್ಲಿ ನಿರೂಪಿಸಿದ್ದಾನೆ. ಆತನ ಪ್ರಕಾರ ಭಾಷೆ ಒಂದು ಸಂಕೀರ್ಣ ವರ್ತನಾವ್ಯವಸ್ಥೆ. ಈ ಸಂಕೀರ್ಣ ವರ್ತನಾ ವ್ಯವಸ್ಥೆಯನ್ನು ಅವುಗಳ ಗುಣ ಕಾರ್ಯಗಳ ಆಧಾರದಿಂದ ಐದು ಪ್ರಮುಖ ಉಪ ವಿಭಾಗಗಳು, ಎರಡು ಪ್ರಮುಖ ವಿಭಾಗಗಳಾಗಿ ವರ್ಗೀಕರಿಸಿದ್ದಾನೆ.

ಅಂತರಿಕಸ್ವರೂಪದ ರಚನಾವಿನ್ಯಾಸವೇ ಭಾಷೆಯ ಕೇಂದ್ರ. ಭಾಷೆಯ ಭೌತಿಕ

ರಚನಾಸ್ವರೂಪದನ್ವಯ ಭಾಷೆಯು ಕೇಂದ್ರವನ್ನು ನಿರ್ಧರಿಸಲಾಗುವುದು. ಭಾಷಾ ಅಧ್ಯಯನದಲ್ಲಿ ಭಾಷೆಯು ಆಂತರಿಕ ರಚನಾವೈಶಿಷ್ಟ್ಯವೇ ಬಹುಮುಖ್ಯ. ಆ ಕಾರಣ ದಿಂದಲೇ ಭೌತಿಕ ಘಟಕಗಳ ರಚನಾವ್ಯವಸ್ಥೆಯೇ ಭಾಷೆಯು ಕೇಂದ್ರ. ಅಲ್ಲಿ ಅದರ ಆಂತರಿಕ ರಚನಾಶೈಲಿ, ಅಭಿವ್ಯಕ್ತಿಲಕ್ಷಣ ಹಾಗೂ ಭಾಷಾರಚನೆಯು ಆಧಾರದಿಂದ ಮೂರು ಪ್ರಧಾನವಿಭಾಗಗಳನ್ನು ಗುರ್ತಿಸಿದೆ. ಧ್ವನಿಮಾಗಳ ವ್ಯವಸ್ಥೆ ಹಾಗೂ ಹಂಚಿಕೆ ಯನ್ನು ವಿವರಿಸುವ ವಿಭಾಗವೇ 'ಧ್ವನಿಮಾ ಉಪವಿಭಾಗ'. ಭಾಷೆಯು ಆಕೃತಿಮಾಗಳ ಹಂಚಿಕೆ ಮತ್ತು ವಿಶ್ಲೇಷಣೆಯನ್ನು ವ್ಯವಸ್ಥಿತರೀತಿಯಲ್ಲಿ ವಿವರಿಸುವ ವ್ಯಾಕರಣಾತ್ಮಕ ವಿಭಾಗವೇ 'ವ್ಯಾಕರಣ ಉಪವಿಭಾಗ'. ಆಕೃತಿಮಾ-ಧ್ವನಿಮಾ ಉಪ-ವಿಭಾಗಗಳಲ್ಲಿ ವ್ಯಾಕರಣಾತ್ಮಕ ಹಾಗೂ ಧ್ವನ್ಯಾತ್ಮಕ ನಿಯಮಗಳ ವಿಶ್ಲೇಷಣೆಯಿರುತ್ತದೆ.

ಭಾಷಾವಿಜ್ಞಾನದ ತಿಳಿವಳಿಕೆ ಕೇಂದ್ರವಿಭಾಗಕ್ಕೆ ಮಾತ್ರ ಸೀಮಿತವಾದರೆ, ಉಪಶಾಖೆ ಗಳಾದ ಅರ್ಥವಿಜ್ಞಾನ ಹಾಗೂ ಧ್ವನಿವಿಜ್ಞಾನಗಳನ್ನು ಮನೋವಿಜ್ಞಾನ ಮತ್ತು ಭೌತ ವಿಜ್ಞಾನಗಳ ತಿಳಿವಳಿಕೆಯಿಂದ ಮಾತ್ರ ಖಚಿತವಾಗಿ ವಿವರಿಸಲು ಸಾಧ್ಯ. ಈ ಕಾರಣ ದಿಂದಲೇ ಧ್ವನಿವಿಜ್ಞಾನವನ್ನು ಬಾಹ್ಯವಿಭಾಗದ ಉಪವಿಭಾಗವಾಗಿ ಪರಿಗಣಿಸಿರುವುದು. ಅಲ್ಲದೆ ಭಾಷೆಯು ಧ್ವನಿರಚನಾಸ್ತರದ ವಿವರಣೆ ಭೌತವಿಜ್ಞಾನದ ಉದ್ದೇಶಕ್ಕೆ ಪೂರಕ ರೀತಿಯಲ್ಲಿರುವುದರಿಂದ ಇವೆರಡನ್ನೂ ಆಂತರಿಕ ಶಿಸ್ತುಗಳಾಗಿ ಪರಿಗಣಿಸಲು ಸಾಧ್ಯ. ಹಾಗೆ ಪರಿಗಣಿಸುವುದೂ ಸಮಂಜಸ.

'ಧ್ವನಿವಿಜ್ಞಾನ' ಭಾಷಾವಿಜ್ಞಾನದ ಒಂದು ಪ್ರಮುಖ ವಿಭಾಗ. ಧ್ವನಿವಿಜ್ಞಾನವನ್ನು ಅರಿಯದ ವ್ಯಕ್ತಿ ಭಾಷಾವಿಜ್ಞಾನವನ್ನು ಅರಿಯುವುದು ಕಷ್ಟ. ಭಾಷೆಗೆ ಸಾರವೇ 'ಧ್ವನಿ'. ಧ್ವನಿಯ ವೈಜ್ಞಾನಿಕವಿಶ್ಲೇಷಣೆ, ಭಾಷೆಯು ವೈಜ್ಞಾನಿಕ ಅಧ್ಯಯನಕ್ಕೆ ನಾಂದಿ. ಆದ್ದರಿಂದಲೇ ವಾನ್‌ರೈಪರ್ ಅವರು ''ಭಾಷಾವಿಜ್ಞಾನಿಗೆ ಧ್ವನಿವಿಜ್ಞಾನದ ಪರಿಚಯು ಇಲ್ಲದೆ ಹೋದರೆ ವೈಜ್ಞಾನಿಕ ಭಾಷಾ ಅಧ್ಯಯನದಲ್ಲಿ ಅವನು ಅನಕ್ಷರಸ್ಥನಂತೆ'' ಎಂದಿರು ವುದು. ಈ ಮಾತು ವೈಜ್ಞಾನಿಕ ಭಾಷಾ ಅಧ್ಯಯನಕ್ಕೆ ಧ್ವನಿವಿಜ್ಞಾನ ಎಷ್ಟರಮಟ್ಟಿಗೆ ಅಗತ್ಯ ಹಾಗೂ ಸಾಧು ಎನ್ನುವುದನ್ನು ಖಚಿತಪಡಿಸಿದೆ. ಅಂತೆಯೇ ವೈಜ್ಞಾನಿಕ ಭಾಷಾ ಅಧ್ಯಯನದಲ್ಲಿ ಭೌತಶಾಸ್ತ್ರದ ಪಾತ್ರವೂ ಮಹತ್ವಪೂರ್ಣವಾದುದು. ಹೀಗೆ ಧ್ವನಿವಿಜ್ಞಾನ ಭಾಷಾ ಅಧ್ಯಯನ ಕ್ಷೇತ್ರದಲ್ಲಿ ಮಹತ್ವವನ್ನು ಪಡೆದುಕೊಂಡಿದೆಯಾದರೂ, ಉಳಿದ ಸಂಬಂಧಿತಕ್ಷೇತ್ರಗಳೊಡನೆ ಅದರ ಸಂಬಂಧವನ್ನು ಅಲ್ಲಗಳೆಯುವಂತಿಲ್ಲ.

ಎರಡನೆಯ ನಾಗವರ್ಮನ 'ಶಬ್ದಸ್ಮೃತಿ'ಯನ್ನು ಅನುಸರಿಸಿ ಕೇಶಿರಾಜನು 'ಶಬ್ದಮಣಿದರ್ಪಣ'ವನ್ನು ರಚಿಸಿದನು. ನಾಗವರ್ಮನು ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆದಂತೆ, ಭಟ್ಟಾಕಳಂಕನು ಕನ್ನಡ ವ್ಯಾಕರಣವನ್ನು ತಾನೂ ಸಂಸ್ಕೃತದಲ್ಲಿ ಬರೆದನು. ಭಟ್ಟಾಕಳಂಕನ 'ಕರ್ಣಾಟಕ ಶಬ್ದಾನುಶಾಸನ', ನಾಗವರ್ಮನ 'ಕರ್ಣಾಟಕ ಭಾಷಾಭೂಷಣ' ಗ್ರಂಥಗಳಲ್ಲಿ ಸಂಸ್ಕೃತವ್ಯಾಕರಣಗಳ ಸೂತ್ರ ಮತ್ತು ವೃತ್ತಿಗಳಂತೆ ಸೂತ್ರ ಮತ್ತು ವೃತ್ತಿಗಳಿವೆ. ನಾಗವರ್ಮ ಸಂಸ್ಕೃತದಲ್ಲಿ ಕನ್ನಡ ವ್ಯಾಕರಣವನ್ನು ಬರೆಯಲು ಕಾರಣವೇನು ಎಂಬುದರ ಬಗೆಗೆ ತಾನು ಎಲ್ಲಿಯೂ ಹೇಳಿಲ್ಲ ; ಆದರೆ ಭಟ್ಟಾಕಳಂಕನು ತನ್ನ 'ಶಬ್ದಾನುಶಾಸನ'ದಲ್ಲಿ ಕನ್ನಡ ಭಾಷೆಯ ಮಹತ್ವವನ್ನು ಇತರರಿಗೆ ಪರಿಚಯಮಾಡಿಕೊಡುವ ಉದ್ದೇಶದಿಂದ ಬರೆದೆನೆಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಸಂಸ್ಕೃತವನ್ನು ಯಾವ ಕಾರಣಕ್ಕಾಗಿ ಅಭ್ಯಾಸಮಾಡಬೇಕಾಗಿದೆಯೋ, ಅದೇ ಕಾರಣಕ್ಕಾಗಿ ಕನ್ನಡವನ್ನು ಸಹ ಅಭ್ಯಾಸಮಾಡಬೇಕು ಎಂಬುದು ಇವರ ಅಭಿಮತ : ಏಕೆಂದರೆ ಕನ್ನಡದಲ್ಲಿ ಅಸಂಖ್ಯಾತ ಸಾಹಿತ್ಯಗ್ರಂಥಗಳು, ಶಾಸ್ತ್ರಗ್ರಂಥಗಳು ದೊರೆಯುತ್ತವೆ. ಪಾಣಿನಿಯ 'ಅಷ್ಟಾಧ್ಯಾಯಿ'ಗೆ ಸಂಸ್ಕೃತದಲ್ಲಿ ಯಾವ ಸ್ಥಾನ ದೊರಕಿದೆಯೋ, ಅದೇ ಸ್ಥಾನ ಕನ್ನಡದಲ್ಲಿ ಭಟ್ಟಾಕಳಂಕನ 'ಶಬ್ದಾನುಶಾಸನ'ಕ್ಕೆ ದೊರೆತಿದೆ. ೧೭ನೇ ಶತಮಾನ ಭಾರತದಲ್ಲಿ ಒಂದು ಬಗೆಯಲ್ಲಿ ಕಗ್ಗತ್ತಲೆಯ ಯುಗ. ಇಂತಹ ಪರಿಸ್ಥಿತಿಯಲ್ಲಿ ಭಟ್ಟಾಕಳಂಕನು ತನ್ನ ವ್ಯಾಕರಣವನ್ನು ರಚಿಸಿದನು. ಈತನು ತನ್ನ ವ್ಯಾಕರಣವಿಚಾರಗಳನ್ನು ನಾಲ್ಕು ಪಾದಗಳಲ್ಲಿ ವಿವರಿಸಿದ್ದಾನೆ. ಹದಿನಾಲ್ಕು ಪ್ರಕರಣಗಳಿವೆ. ಈ ವ್ಯಾಕರಣವ್ಯವಸ್ಥೆ ಪಾಣಿನಿಯ 'ಅಷ್ಟಾಧ್ಯಾಯಿ'ಯಂತೆಯೇ ಇದೆ. ತನಗಿಂತ ಹಿಂದಿನ ಕನ್ನಡ ವೈಯಾಕರಣರಾದ ಕೇಶಿರಾಜ ಮತ್ತು ನಾಗವರ್ಮರ ಅಭಿಪ್ರಾಯವನ್ನು ಅನುಮೋದಿಸುತ್ತಾ, ತನ್ನ ಸ್ವಂತ ಅಭಿಪ್ರಾಯಗಳನ್ನು ವಿವರಿಸಲು ಪ್ರಯತ್ನಮಾಡಿದ್ದಾನೆ. 'ಶಬ್ದಾನುಶಾಸನ' ಪ್ರೌಢ ಹಾಗೂ ಪಾಂಡಿತ್ಯಪೂರ್ಣವಾದ ವ್ಯಾಕರಣಗ್ರಂಥವಾಗಿ ಕಾಣಿಸಿಕೊಳ್ಳಲು, ಅವನು ಅನುಸರಿಸಿದ ಸಂಸ್ಕೃತ ವ್ಯಾಕರಣಗಳು ಕಾರಣವಾಗಿವೆ ಎಂದರೆ ತಪ್ಪಾಗಲಾರದು.

ಪ್ರಾಚೀನ ಕನ್ನಡ ವ್ಯಾಕರಣಗಳು ಬಹುಮಟ್ಟಿಗೆ ಸಂಸ್ಕೃತವ್ಯಾಕರಣಗಳ ಮಾದರಿಯಲ್ಲಿಯೇ ರಚಿತವಾಗಿವೆ ಎಂಬುದರ ಬಗೆಗೆ ಅನುಮಾನವೇನಿಲ್ಲ. ಈ ಕಾರಣದಿಂದ ಕನ್ನಡ

ಗಳ ಸಂಪ್ರದಾಯಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ... ಅತ್ಯಗತ್ಯ. ಭಾರತದ ವ್ಯಾಕರಣಶಾಸ್ತ್ರದ ಚರಿತ್ರೆಯಲ್ಲಿ ಸಂಸ್ಕೃತವ್ಯಾಕರಣಗಳ ಸ್ಥಾನ ಹಿರಿಯದು. ಸಂಸ್ಕೃತ ವ್ಯಾಕರಣಗಳು ಮತ್ತು ವೈಯಾಕರಣರ ಹೆಸರುಗಳ ಪಟ್ಟಿ ಎಂತಹ ವರನ್ನೂ ಬೆರಗುಗೊಳಿಸುತ್ತದೆ. ಸಂಸ್ಕೃತ ವ್ಯಾಕರಣಗಳು ಗುಣಮಟ್ಟದ ದೃಷ್ಟಿಯಿಂದ ಇಂದು ಭಾರತೀಯ ಹಾಗೂ ಪಾಶ್ಚಾತ್ಯ ವಿದ್ವಾಂಸರ ಪ್ರಶಂಸೆಗೆ ವಿಶೇಷವಾಗಿ ಪಾತ್ರವಾಗಿವೆ ಎಂದು ಹೇಳಬಹುದು.

ಕನ್ನಡದ ಪ್ರಾಚೀನ ಕವಿಗಳು ಮತ್ತು ವೈಯಾಕರಣರು ಸಂಸ್ಕೃತವ್ಯಾಕರಣಗಳಲ್ಲಿ ಅಸಾಧಾರಣಪಾಂಡಿತ್ಯ ಹೊಂದಿದವರಾಗಿದ್ದರು. ಕನ್ನಡದ ಕವಿಗಳಲ್ಲಿ ಹೆಚ್ಚಿನವರು ಉಭಯ ಭಾಷೆಯ ಕವಿಗಳಾಗಿದ್ದರು. ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲಿಯೂ ವ್ಯಾಕರಣರಚನೆ ಮಾಡಬಲ್ಲವರಾಗಿದ್ದರು. ಪ್ರಾಚೀನಕರ್ಣಾಟಕದಲ್ಲಿ ಸಂಸ್ಕೃತವ್ಯಾಕರಣ ಸಂಪ್ರದಾಯಗಳು ಪ್ರಚಾರದಲ್ಲಿದ್ದವು ಎಂಬುದು ಮುಳುಗುಂದ ಶಿಲಾಶಾಸನದಿಂದ (ಕ್ರಿ.ಶ. ೧೦೫೩) ತಿಳಿದುಬರುತ್ತದೆ.

ಸಂಸ್ಕೃತ ವ್ಯಾಕರಣದ ಉಗಮ ವೇದಸಾಹಿತ್ಯದಷ್ಟೇ ಪ್ರಾಚೀನ. ನಿರುಕ್ತ ಮತ್ತು ಶಿಕ್ಷಾ ಎಂಬ ವೇದಾಂಗಗಳಿಂದ ಪ್ರಭಾವಿತವಾಗಿ ವ್ಯಾಕರಣ ಬೆಳೆಯಿತು. ವ್ಯಾಕರಣಕ್ಕೆ ಸಂಬಂಧಿಸಿದ ವಿಚಾರಮಂಥನ ಬ್ರಾಹ್ಮಣಗಳ, ಪ್ರಾತಿಶಾಖ್ಯಗಳ ಕಾಲದಿಂದಲೂ ಪ್ರಚಾರದಲ್ಲಿದ್ದಿತು. ಸಂಸ್ಕೃತ ವ್ಯಾಕರಣಗಳ ಚರಿತ್ರೆ ಯಾಸ್ಕಮಹಾಮುನಿಯಿಂದ ಆರಂಭವಾಗುತ್ತದೆ. ಯಾಸ್ಕ ಭಾಷಾತತ್ವಜ್ಞನೇ ವಿನಾ ವೈಯಾಕರಣನಲ್ಲ. ಪುರಾತನ ಪ್ರಾತಿಶಾಖ್ಯ ಶಬ್ದತತ್ವಾನ್ವೇಷಣಕಾರ್ಯಕ್ಕೂ ಪಾಣಿನಿಯ ವಿಚಾರಮಾರ್ಗಕ್ಕೂ ಯಾಸ್ಕ ನಡುವೆ ನಿಂತಿದ್ದಾನೆ. ಯಾಸ್ಕನ ಕಾಲ ನಿಶ್ಚಿತವಾಗಿಲ್ಲ. ಈತನು ಪಾಣಿನಿಗಿಂತ ಹಿಂದಿನವನೇ ಇರಬೇಕು. ಈತನ ಕಾಲವನ್ನು ಸುಮಾರು ಕ್ರಿ.ಪೂ. ೭೦೦ ಎಂದು ಊಹಿಸಲಾಗಿದೆ. ಯಾಸ್ಕನ ನಿಘಂಟಿನಲ್ಲಿ ಐದು ಅಧ್ಯಾಯಗಳಿವೆ. ವೇದಗಳಿಂದ ಆಯ್ದ ಕ್ಲಿಷ್ಟಶಬ್ದಗಳನ್ನು ಬಳಸಿಕೊಂಡು ತನ್ನ ನಿಘಂಟನ್ನು ರಚಿಸಿದ್ದಾನೆ. ಇದು ವ್ಯಾಕರಣವಲ್ಲದಿದ್ದರೂ, ಇದರಲ್ಲಿ ವ್ಯಾಕರಣಕ್ಕೆ ಸಂಬಂಧಿಸಿದ ಅನೇಕ ವಿಚಾರಗಳಿವೆ.

ಪಾಣಿನಿಗಿಂತ ಹಿಂದೆ ರಚಿತವಾದ ಯಾವ ವ್ಯಾಕರಣಗಳೂ ದೊರೆಯುವುದಿಲ್ಲ. ಆದರೆ ಈತನಿಗಿಂತ ಹಿಂದೆ ವ್ಯಾಕರಣಗಳ ರಚನೆಯಾಗಿರಬೇಕು. ವ್ಯವಸ್ಥಿತವಾದ ವ್ಯಾಕರಣದ ಮಾದರಿ ಇಲ್ಲದೆ, ಪಾಣಿನಿ ತನ್ನ ವ್ಯಾಕರಣವನ್ನು ರಚಿಸಲು ಸಾಧ್ಯವಾಗುತ್ತಿರಲಿಲ್ಲ. ಆಪಿಸಲಿ, ಕಾಶಕೃತ್ಸ್ನರು ಪಾಣಿನಿಗೆ ಪೂರ್ವದ ವೈಯಾಕರಣರು ಎಂಬುದು ಪಾಣಿನಿಯ ವ್ಯಾಕರಣದಿಂದಲೇ ತಿಳಿದುಬರುತ್ತದೆ. ಪಾಣಿನಿಗೆ ಹಿಂದಿನ ವ್ಯಾಕರಣ ಸಂಪ್ರದಾಯಗಳಲ್ಲಿ ಬಂಧ್ಯವ್ಯಾಕರಣ ಸಂಪ್ರದಾಯ ...

ಕಾತ್ಯಾಯನನ ಪಾಳಿವ್ಯಾಕರಣ, ಐಂದ್ರವ್ಯಾಕರಣ ಸಂಪ್ರದಾಯಕ್ಕೆ ಸಂಬಂಧಿಸಿದವುಗಳಾಗಿವೆ. ಸಂಸ್ಕೃತ ವ್ಯಾಕರಣ ಸಂಪ್ರದಾಯಗಳಲ್ಲಿ ಐಂದ್ರವ್ಯಾಕರಣ ಸಂಪ್ರದಾಯವೇ ಹೆಚ್ಚು ಪ್ರಾಚೀನವಾದದ್ದು. ಪಾಣಿನಿಯಲ್ಲಿ ಈ ಸಂಪ್ರದಾಯದ ಉಲ್ಲೇಖವಿದೆ.

ಪಾಣಿನಿಯ 'ಅಷ್ಟಾಧ್ಯಾಯಿ'ಯಲ್ಲಿ ಮುಖ್ಯವಾಗಿ ಎಂಟು ಅಧ್ಯಾಯಗಳಿವೆ. ಈ ಕಾರಣದಿಂದಲೇ ಈ ಗ್ರಂಥಕ್ಕೆ 'ಅಷ್ಟಾಧ್ಯಾಯಿ' ಎಂಬ ಹೆಸರು ಬಂದಿದೆ. ಇದರ ಪ್ರತಿ ಅಧ್ಯಾಯದಲ್ಲಿಯೂ ನಾಲ್ಕು ಪಾದಗಳಿವೆ. ಈತನ ವ್ಯಾಕರಣನಿರೂಪಣಾಪದ್ಧತಿ ತುಂಬ ಕ್ಲಿಷ್ಟವಾದದ್ದು, ಸಂಕೀರ್ಣವಾದದ್ದು. ಇವನ ಸೂತ್ರಗಳ ರಚನೆ ಅನಂತರದ ವೈಯಾಕರಣರಿಗೆ ಮಾದರಿಯಾದವು. ಪಾಣಿನಿಗಿಂತ ಹಿಂದೆ ಇದ್ದವರು ವ್ಯಾಕರಣಕ್ಷೇತ್ರದಲ್ಲಿ ಮಾಡಿರುವ ಕೆಲಸಕಾರ್ಯಗಳು ಅಸ್ಪಷ್ಟವಾಗಿದ್ದವು. ಇವೆಲ್ಲವನ್ನೂ ಪಾಣಿನಿಯ 'ಅಷ್ಟಾಧ್ಯಾಯಿ' ಸ್ಪಷ್ಟಗೊಳಿಸಿತು. ಪಾಣಿನಿಯ ವ್ಯಾಕರಣದ ಮೇಲೆ ಅನೇಕ ವ್ಯಾಖ್ಯಾನಗಳು ಹೊರಬಂದವು. ಆದರೆ ಪಾಣಿನಿಯ ವ್ಯಾಕರಣವನ್ನು ಹಿಂದಕ್ಕೆ ಹಾಕುವುದಾಗಲಿ, ಅದರ ಸ್ಥಾನವನ್ನು ಆಕ್ರಮಿಸುವುದಾಗಲಿ ಬೇರೆಯವಕ್ಕೆ ಸಾಧ್ಯವಾಗಲಿಲ್ಲ. ಪಾಣಿನಿಯ ಕಾಲ ನಿಶ್ಚಿತವಾಗಿಲ್ಲ. ಈ ದಿಸೆಯಲ್ಲಿ ವಿದ್ವಾಂಸರಲ್ಲಿ ಅಭಿಪ್ರಾಯಭೇದಗಳಿವೆ. ಸುಮಾರು ಕ್ರಿ.ಪೂ. ೭೦೦–೬೦೦ ಎಂದು ಸ್ಥೂಲವಾಗಿ ತಿಳಿಯಲಾಗಿದೆ. ಪಾಣಿನಿ ತನ್ನ ಪದ್ಧತಿಗೆ ಬೇರೆಯವರಾದ ವೈಯಾಕರಣರ ವಿಷಯವನ್ನೂ ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ನಾಗವರ್ಮ ಕೇಶಿರಾಜರು ತಾವು ಕೆಲಮಟ್ಟಿಗೆ ಅನುಸರಿಸಿರುವ ಕಾತಂತ್ರಕಾರ ಮುಂತಾದ ವ್ಯಾಕರಣಕಾರರನ್ನು ಸ್ಮರಿಸಿಲ್ಲ; ಭಟ್ಟಾಕಳಂಕನಂತೂ ಪಾಣಿನಿಯನ್ನು ಗಮನಾರ್ಹವಾಗಿ ಅನುಸರಿಸಿದ್ದಾನೆ.

ಕನ್ನಡ ವ್ಯಾಕರಣಗಳಾದ 'ಭಾಷಾಭೂಷಣ' ಮತ್ತು 'ಶಬ್ದಾನುಶಾಸನ' ಪಾಣಿನಿಯ ಸೂತ್ರಗಳ ಮಾದರಿಯಲ್ಲಿ ರಚಿತವಾದರೆ, 'ಶಬ್ದಸ್ಮೃತಿ' ಮತ್ತು 'ಶಬ್ದಮಣಿದರ್ಪಣ' ಕಂದಪದ್ಯದಲ್ಲಿ ರಚಿತವಾಗಿವೆ. ಇವನ್ನೂ ಒಂದು ರೀತಿಯಲ್ಲಿ ಸೂತ್ರಗಳು ಎಂದೇ ಕರೆಯಬಹುದು. ಆದರೆ, ಸಂಸ್ಕೃತದಲ್ಲಿರುವ 'ಭಾಷಾಭೂಷಣ' ಮತ್ತು 'ಶಬ್ದಾನುಶಾಸನ'ಗಳನ್ನು ಅರಿಯಲು, ಪಾಣಿನಿಯ ಸೂತ್ರಗಳ ವಿಧಾನದ ಪರಿಚಯ ಅತ್ಯಗತ್ಯವಾಗಿದೆ.

ಕಾತ್ಯಾಯನ ಪಾಣಿನಿಯ ಕಾಲದ ಈಚೆಗೆ, ಎಂದರೆ ಸುಮಾರು ಕ್ರಿ.ಪೂ. ೫೦೦–೪೦೦ರಲ್ಲಿದ್ದವನು. ಇವನು ಪಾಣಿನಿಯ 'ಅಷ್ಟಾಧ್ಯಾಯಿ'ಯ ಮೇಲೆ ವಾರ್ತಿಕೆಗಳನ್ನು ರಚಿಸಿದ್ದಾನೆ. ಇದರಲ್ಲಿ ಪಾಣಿನಿಯ ಸೂತ್ರಗಳಲ್ಲಿ ಕಂಡುಬರುವ ಲೋಪದೋಷಗಳ ವಿಮರ್ಶೆ ಇದೆ. ಕಾತ್ಯಾಯನನ ವಾರ್ತಿಕೆಗಳಲ್ಲಿ ಕೆಲವು ಗದ್ಯದಲ್ಲಿವೆ; ಮತ್ತೆ ಕೆಲವು ಪದ್ಯದಲ್ಲಿ. ಈತನು ಐಂದ್ರಸಂಪ್ರದಾಯಕ್ಕೆ ಸೇರಿದವನು. ಒಟ್ಟಿನಲ್ಲಿ ಕಾತ್ಯಾಯನ ಪಾಣಿನಿಗಿಂತ ಭಿನ್ನಸಂಪ್ರದಾಯಕ್ಕೆ ಸೇರಿದವನು. ಕಾತ್ಯಾಯನ ಶಾಕಟಾಯನ ಮತ್ತು ಶಾಕಲ್ಯರ ಹೆಸರನ್ನು ಹೆಸರಿಸಿದ್ದಾನೆ.

ಪತಂಜಲಿ ಕ್ರಿಸ್ತನ ಸಮಕಾಲೀನನೆಂದು ಕೆಲವರ ಊಹೆ. ಸುಮಾರು ಕ್ರಿ.ಪೂ ೧೫೦ ಈತನ ಕಾಲ. ಪತಂಜಲಿ 'ಮಹಾಭಾಷ್ಯ' ಎಂಬ ಗ್ರಂಥವನ್ನು ಬರೆದಿದ್ದಾನೆ. ಈತನ ಈ

ಗ್ರಂಥಕ್ಕೆ ಚಾರಿತ್ರಿಕಮಹತ್ವವಿದೆ. ಇದರಲ್ಲಿ ಸಮಕಾಲೀನ ಧಾರ್ಮಿಕ, ಭೌಗೋಳಿಕ, ಸಾಮಾಜಿಕ, ಸಾಹಿತ್ಯಿಕ ಸಂಗತಿಗಳು ತಿಳಿದುಬರುತ್ತವೆ. ಕಾತ್ಯಾಯನ ಪಾಣಿನಿಯ ಯಾವ ಯಾವ ಸೂತ್ರಗಳ ಮೇಲೆ ವಾರ್ತಿಕೆಗಳನ್ನು ರಚಿಸಿಲ್ಲವೋ ಅಂತಹ ಸೂತ್ರಗಳ ಬಗ್ಗೆ ಈತನು ಇಷ್ಟಿಗಳನ್ನು ಬರೆದನು. ಇದರ ಜೊತೆಗೆ ಪಾಣಿನಿಯ ಸೂತ್ರಗಳ ಬಗ್ಗೆ ಕಾತ್ಯಾಯನ ಮಾಡಿದ ಟೀಕೆಗಳನ್ನು ಖಂಡಿಸಿ, ಆ ಸೂತ್ರಗಳನ್ನು ಸಮರ್ಥಿಸಿದ್ದಾನೆ. ಮಹಾಭಾಷ್ಯದಲ್ಲಿಯೂ ಪಾಣಿನಿಯ 'ಅಷ್ಟಾಧ್ಯಾಯಿ'ಯಂತೆ ಎಂಟು ಅಧ್ಯಾಯಗಳಿವೆ. ಪ್ರತಿ ಅಧ್ಯಾಯದಲ್ಲಿಯೂ ನಾಲ್ಕು ಪಾದಗಳಿವೆ. ಪಾಣಿನಿ ಮತ್ತು ಪತಂಜಲಿಯರ ನಡುವೆ ಎಷ್ಟೋ ವೈಯಾಕರಣರಿದ್ದಿರಬಹುದೆಂದು ಕೆಲವರ ಊಹೆ. ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿಯರನ್ನು ಮುನಿತ್ರಯರೆಂದು ಹೆಸರಿಸಿದೆ. ಇವರು ವ್ಯಾಕರಣಶಾಸ್ತ್ರದ ಚೌಕಟ್ಟನ್ನು ನಿರ್ಮಿಸಿದರು. ಪತಂಜಲಿಯ ಅನಂತರ ಚಂದ್ರಗೋಮಿ ಬಹುಮುಖ್ಯ ವೈಯಾಕರಣ. ಈತ ಚಾಂದ್ರಸಂಪ್ರದಾಯಕ್ಕೆ ಸೇರಿದವನು. ಈತನು ಪಾಣಿನಿ, ಕಾತ್ಯಾಯನ, ಪತಂಜಲಿಯರ ಕೃತಿಗಳನ್ನು ಆಳವಾಗಿ ಅಧ್ಯಯನಮಾಡಿ, ಸಂಸ್ಕೃತದಲ್ಲಿ ಉಂಟಾದ ವ್ಯತ್ಯಾಸಗಳನ್ನು ಗಮನಿಸಿ ಸೂತ್ರಗಳು, ವಾರ್ತಿಕೆಗಳು, ಇಷ್ಟಿಗಳು ಮುಂತಾದುವುಗಳಲ್ಲಿ ಕೆಲವು ಮಾರ್ಪಾಡು ಮಾಡಲು ಪ್ರಯತ್ನನಡೆಸಿದನು. ಈತ ಬೌದ್ಧ ಸಂಪ್ರದಾಯಕ್ಕೆ ಸೇರಿದವನು. ಸಾಂಪ್ರದಾಯಿಕ ವ್ಯಾಕರಣಗಳಲ್ಲಿ ಸೇರಿಹೋಗಿದ್ದ ವೈದಿಕಾಂಶಗಳನ್ನು ಬಿಟ್ಟು ನೂತನವ್ಯಾಕರಣವನ್ನು ರಚಿಸಿದನು. ಸಂಪ್ರದಾಯನಿಷ್ಠರು ಈತನ ಮಾರ್ಪಾಡುಗಳನ್ನು ಒಪ್ಪಿಕೊಳ್ಳಲಿಲ್ಲ.

ಜಯಾದಿತ್ಯ ವಾಮನರಿಬ್ಬರೂ ಸೇರಿ 'ಅಷ್ಟಾಧ್ಯಾಯಿ'ಗೆ 'ಕಾಶಿಕೆ'ಯನ್ನು ಬರೆದರೆಂದು ಅಭಿಪ್ರಾಯವಿದೆ. ಜಯಾದಿತ್ಯನು ಮೊದಲ ಐದು ಪ್ರಕರಣಗಳನ್ನೂ ವಾಮನನು ಉಳಿದ ಮೂರು ಪ್ರಕರಣಗಳನ್ನೂ ಬರೆದರೆಂದು ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಜಯಾದಿತ್ಯನ ಕಾಲ ಸುಮಾರು ೬೫೦. ಈತನು ಕಾಶ್ಮೀರದವನು. ಭರ್ತೃಹರಿಯ ಸಮಕಾಲೀನನು. ಇವರಿಬ್ಬರೂ ಸಂಪ್ರದಾಯಕ್ಕೆ ವಿರುದ್ಧವಾದ ವ್ಯತ್ಯಾಸವನ್ನು ಮಾಡಿದರು. ಇಬ್ಬರೂ ಬೌದ್ಧರು. ಕಾಶಿಕೆ 'ಅಷ್ಟಾಧ್ಯಾಯಿ'ಯ ಮೇಲಿನ ವೃತ್ತಿ. ಚಂದ್ರಗೋಮಿ ಸೂಚಿಸಿದ್ದ ಎಲ್ಲಾ ಮಾರ್ಪಾಡುಗಳನ್ನೂ ಈ ಕಾಶಿಕೆ ಒಳಗೊಂಡಿದೆ. ಈ ಕಾಶಿಕಾವೃತ್ತಿ ಇಂದಿಗೂ ಹೆಚ್ಚು ಪ್ರಚಾರದಲ್ಲಿದೆ.

ಜಿನೇಂದ್ರಬುದ್ಧಿ ಕಾಶಿಕೆಯ ಮೇಲೆ ಉತ್ತಮವಾದ ವ್ಯಾಖ್ಯಾನ ಬರೆದಿದ್ದಾನೆ. ಇದರ ಹೆಸರು ಕಾಶಿಕಾವಿವರಣಪಂಚಿಕಾ ಅಥವಾ ಕಾಶಿಕಾನ್ಯಾಸ ; ಭಾಮಹನು ಇವನ ನ್ಯಾಸವನ್ನು ಒಂದು ಕಡೆ ಸೂಚಿಸಿದ್ದಾನೆ. ಆದ್ದರಿಂದ ಅವನ ಕಾಲ ಸುಮಾರು ೭೫೦ ಎಂದು ಊಹಿಸಬಹುದು.

ಹರದತ್ತನ 'ಪದಮಂಜರಿ' ಕಾಶಿಕಾದ ಮೇಲಿನ ಇನ್ನೊಂದು ವ್ಯಾಖ್ಯಾನಗ್ರಂಥ. ಇದು ಕಯ್ಯಟನ 'ಮಹಾಭಾಷ್ಯಪ್ರದೀಪ'ವನ್ನು ಅನುಸರಿಸಿದೆ. ಇದನ್ನು ಬರೆದವನು ತಮಿಳು

... ಈತನ ಕಾಲ ಸುಮಾರು ೧೧೦೦.

ಭರ್ತೃಹರಿ ಜಯಾದಿತ್ಯನ ಸಮಕಾಲೀನನು. ಈತನ ಕಾಲ ಸುಮಾರು ೬೫೦. ಭರ್ತೃಹರಿ 'ವಾಕ್ಯಪದೀಯ'ವನ್ನು ಬರೆದಿದ್ದಾನೆ. 'ವಾಕ್ಯಪದೀಯ'ದಲ್ಲಿ ವ್ಯಾಕರಣತತ್ತ್ವಗಳನ್ನು ವಿವರಿಸುವ ಮೂರು ಅಧ್ಯಾಯಗಳಿವೆ. ಕಯ್ಯಟ ಕಾಶ್ಮೀರದವನು. ಇವನು ಜಯಾದಿತ್ಯನ ಮಗ; ಮಮ್ಮಟನ ತಮ್ಮ. ಇವನ ಕಾಲ ಸುಮಾರು ೧೩೦೦. ಕಯ್ಯಟ 'ಪ್ರದೀಪ'ವನ್ನು ಬರೆದಿದ್ದಾನೆ. ಕಯ್ಯಟನು ಮಹಾಭಾಷ್ಯವನ್ನು ವಿವರಿಸುವಲ್ಲಿ ಯಶಸ್ವಿಯಾಗಿದ್ದಾನೆ. ಕಯ್ಯಟನ ಪ್ರದೀಪದ ಬಗ್ಗೆ ಮೂರು ವ್ಯಾಖ್ಯಾನಗಳು ಹುಟ್ಟಿಕೊಂಡಿವೆ.

ಕಯ್ಯಟನ ಹೊತ್ತಿಗೆ ಪಾಣಿನಿಸಂಪ್ರದಾಯದ ಎರಡನೆಯ ಘಟ್ಟ ಮುಗಿಯುತ್ತದೆ. ಭರ್ತೃಹರಿ ಮತ್ತು ಕಯ್ಯಟರ ನಡುವಿನ ಕಾಲದಲ್ಲಿ ವ್ಯಾಕರಣಚಟುವಟಿಕೆಗಳು ಅಷ್ಟಾಗಿರಲಿಲ್ಲ. ನಡೆದ ಕೆಲಸಕಾರ್ಯಗಳೆಲ್ಲವು ಬೇರೆ ಸಂಪ್ರದಾಯಕ್ಕೆ ಸಂಬಂಧಿಸಿದುವು. ಮಹಮ್ಮದೀಯರ ದಾಳಿಯಿಂದಾಗಿ ಸಾಹಿತ್ಯ ಚಟುವಟಿಕೆಗಳಿಗೆ ಅನುಕೂಲವಾದ ವಾತಾವರಣವಿರಲಿಲ್ಲ. ಉದಾರಿ ಮಹಮ್ಮದೀಯರು ಕಾಣಿಸಿಕೊಂಡಾಗ ಸಾರಸ್ವತಸಂಪ್ರದಾಯದಂತಹ ವ್ಯಾಕರಣಸಂಪ್ರದಾಯಗಳು ತಲೆ ಎತ್ತಿದವು. ಪಾಣಿನಿಯ 'ಅಷ್ಟಾಧ್ಯಾಯಿ'ಯ ಪುನರಾವೃತ್ತಿಗಳು ನಿರ್ಮಾಣವಾದವು. ಅವುಗಳಲ್ಲಿ ವಿಮಲಸರಸ್ವತಿಯ 'ರೂಪಮಾಲಾ' ಬಹಳ ಮುಖ್ಯವಾದದ್ದು. ಇದರ ಕಾಲ ಸುಮಾರು ೧೩೦೦. ಈ ಕೃತಿ ಕೌಮುದಿಗಳ ಮಾದರಿಯಲ್ಲಿದೆ. ಮುಂದೆ ಹೊರಬಂದ ಕೌಮುದಿಗಳು ಕೆಲವು ಮಾರ್ಪಾಡುಗಳೊಡನೆ 'ರೂಪಮಾಲಾ'ದ ಮಾದರಿಯಲ್ಲಿ ರಚಿತವಾದವು.

ರಾಮಚಂದ್ರನ 'ಪ್ರಕ್ರಿಯಾ ಕೌಮುದಿ' 'ಅಷ್ಟಾಧ್ಯಾಯಿ'ಯ ಮೇಲಿನ ವ್ಯಾಖ್ಯಾನಕ್ಕೆ ಸಂಬಂಧಿಸಿದ್ದು. ರಾಮಚಂದ್ರನ ಕಾಲ ಸುಮಾರು ೧೫ನೆಯ ಶತಮಾನದ ಪೂರ್ವಾರ್ಧ. ಇವನು ದಕ್ಷಿಣ ದೇಶದ ಬ್ರಾಹ್ಮಣ. ಇವನು ವ್ಯಾಕರಣ ವೇದಾಂತ ಮುಂತಾದುವುಗಳಲ್ಲಿ ಪರಿಣತ. ಭಟ್ಟೋಜಿ ದೀಕ್ಷಿತನ 'ಸಿದ್ಧಾಂತ ಕೌಮುದಿ'ಗೆ ರಾಮಚಂದ್ರನ 'ಪ್ರಕ್ರಿಯಾ ಕೌಮುದಿ' ಮೂಲಮಾದರಿ. ಈತನ ಕೃತಿಯ ಮೇಲೆ ಅನೇಕ ವ್ಯಾಖ್ಯಾನಗಳು ಹುಟ್ಟಿಕೊಂಡವು.

ಭಟ್ಟೋಜಿದೀಕ್ಷಿತನ 'ಸಿದ್ಧಾಂತ ಕೌಮುದಿ' ಪಾಣಿನಿಯ ವ್ಯಾಕರಣವನ್ನು ತಿಳಿಯ ಹೇಳುವ ಅತ್ಯುತ್ತಮವಾದ ವ್ಯಾಕರಣಗ್ರಂಥ. ಇದರ ಮೇಲೆ ಅನೇಕ ವ್ಯಾಖ್ಯಾನಗಳು ಹುಟ್ಟಿಕೊಂಡಿವೆ. ಇದು 'ಅಷ್ಟಾಧ್ಯಾಯಿ'ಯನ್ನೇ ಹಿಂದಕ್ಕೆ ಹಾಕಿಬಿಟ್ಟಿದೆ. ಕರ್ತೃ ತನ್ನ ಕೌಮುದಿಯ ರಚನೆಗೆ ಅನೇಕ ಗ್ರಂಥಗಳ ಪ್ರಯೋಜನವನ್ನು ಪಡೆದಿದ್ದಾನೆ. ಈತನು ಕೆಲವು ವಿಚಾರಗಳಲ್ಲಿ ಹೇಮಚಂದ್ರನನ್ನು ಅನುಸರಿಸಿದ್ದಾನೆ. ಇವನ ಕಾಲ ೧೬೩೦. ತಾನೇ ವೃತ್ತಿಯನ್ನೂ ಬರೆದಿದ್ದಾನೆ. ಭಟ್ಟೋಜಿಯ ಇತರ ಕೃತಿಗಳು ಪಾಣಿನಿಯ 'ಅಷ್ಟಾಧ್ಯಾಯಿ'ಯ ಮೇಲಿನ ವಿಸ್ತಾರವಾದ ವ್ಯಾಖ್ಯಾನಗಳಾಗಿವೆ. ಭಟ್ಟೋಜಿಯ 'ಸಿದ್ಧಾಂತ ಕೌಮುದಿ'...

'ತತ್ತ್ವಬೋಧಿನಿ', ಜಯಕೃಷ್ಣನ ವ್ಯಾಖ್ಯಾನ ಮುಖ್ಯವಾಗಿವೆ. ಇವರು ೧೮ನೆಯ ಶತಮಾನಕ್ಕೆ ಸೇರಿದವರು. ಭಟ್ಟೋಜಿಯ ವಂಶಸ್ಥರಲ್ಲಿ ಕೆಲವರು ಶ್ರೇಷ್ಠ ವೈಯಾಕರಣರು ಮತ್ತು ಲೇಖಕರು. ಈ ಕಾಲದಲ್ಲಿ 'ಸಿದ್ಧಾಂತ ಕೌಮುದಿ'ಯ ಅನೇಕ ಸಂಗ್ರಹಗಳು ರಚನೆಯಾದವು. ಇವುಗಳಲ್ಲಿ 'ಲಘುಕೌಮುದಿ' ಬಹಳ ಜನಪ್ರಿಯವಾದದ್ದು.

ಪಾಣಿನಿಯ ವ್ಯಾಕರಣಕ್ಕೆ ಸಂಬಂಧಿಸಿದ ಬೇರೆ ಬೇರೆ ಕಾಲಗಳಲ್ಲಿ ರಚಿತವಾದ ಇತರ ಗ್ರಂಥಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಅವೆಲ್ಲವೂ ವ್ಯಾಕರಣತತ್ತ್ವಗಳನ್ನು ಕುರಿತ ಗ್ರಂಥಗಳಾಗಿವೆ. ಅವುಗಳಲ್ಲಿ ಧ್ವನಿಸ್ವರೂಪ, ಶಬ್ದಾರ್ಥಸಂಬಂಧ, ಪದ ಮತ್ತು ವಾಕ್ಯಗಳಿಗೆ ಇರುವ ಸಂಬಂಧ ಇತ್ಯಾದಿ ವಿಚಾರಗಳನ್ನು ಪ್ರತಿಪಾದಿಸಿದೆ.

ಚಂದ್ರಗೋಮಿ ಅಥವಾ ಚಂದ್ರಾಚಾರ್ಯ ಚಾಂದ್ರ ವ್ಯಾಕರಣಸಂಪ್ರದಾಯದ ಮೂಲ ಪ್ರವರ್ತಕ. ಭರ್ತೃಹರಿಯ 'ವಾಕ್ಯಪದೀಯ'ದಲ್ಲಿ ಇವನ ಬಗ್ಗೆ ಉಲ್ಲೇಖವಿದೆ. ಇವನು ಬೌದ್ಧ. ಈತನು ಪಾಣಿನಿ, ಪತಂಜಲಿ ಮತ್ತು ಕಾತ್ಯಾಯನರ ವ್ಯಾಕರಣಗಳನ್ನು ಆಳವಾಗಿ ಪರಿಶೀಲಿಸಿ ಅವುಗಳನ್ನು ಸಾಕಷ್ಟು ಮಾರ್ಪಾಡುಮಾಡಿದನು. ವೈದಿಕಭಾಗವನ್ನು ಕೈಬಿಟ್ಟಿದ್ದು ಸಂಪ್ರದಾಯವಾದಿಗಳಿಗೆ ಹಿಡಿಸಲಿಲ್ಲ. ಮುಳಗುಂದ ಶಾಸನದ ಆಧಾರದ ಮೇಲೆ ಹೇಳುವುದಾದರೆ ಹನ್ನೊಂದನೆಯ ಶತಮಾನದವರೆಗೂ ಕನ್ನಡನಾಡಿನಲ್ಲಿ ಈ ಸಂಪ್ರದಾಯ ಪ್ರಚಾರದಲ್ಲಿದ್ದಿತು. ಟಿಬೆಟ್, ಸಿಂಹಳಗಳಲ್ಲಿ ಈ ಸಂಪ್ರದಾಯ ಈಗಲೂ ಬಳಕೆಯಲ್ಲಿದೆ ಎಂದು ಕೆಲವರ ಹೇಳಿಕೆ.

'ಜೈನೇಂದ್ರವ್ಯಾಕರಣ'ದ ಕರ್ತೃ ದೇವನಂದಿ. ಈತ ಜೈನ ದಿಗಂಬರ. ಕೆಲವರು ಇದನ್ನು ಬರೆದವನು ಪೂಜ್ಯಪಾದ ಎಂದು ಹೇಳುವರು. ಪೂಜ್ಯಪಾದನೇ ಜೈನೇಂದ್ರ ವ್ಯಾಕರಣದ ಕರ್ತೃ ಎಂದು ಕನ್ನಡದ ಕವಿಗಳು ಸಮರ್ಥಿಸಿದ್ದಾರೆ. ಪೂಜ್ಯಪಾದನೇ ದೇವನಂದಿ ಎನ್ನುವವರೂ ಇದ್ದಾರೆ. ಶ್ರವಣಬೆಳಗೊಳದ ಶಾಸನದಲ್ಲಿ ಪೂಜ್ಯಪಾದನೇ ದೇವನಂದಿ ಎಂದು ಹೇಳಲಾಗಿದೆ. ಪೂಜ್ಯಪಾದನ ಕಾಲ ಸುಮಾರು ೬೦೦. ಈ ಶಾಸನ ಮತ್ತು ಕನ್ನಡ ಕವಿಗಳ ಪ್ರಶಂಸೆಯನ್ನು ಗಮನಿಸಿದರೆ ಪೂಜ್ಯಪಾದ ಕನ್ನಡದವನೆಂದು ತೋರುತ್ತದೆ. ಜೈನೇಂದ್ರವ್ಯಾಕರಣ ಕರ್ನಾಟಕದ ಜೈನವಿದ್ವಾಂಸರಲ್ಲಿ ಹೆಚ್ಚು ಪ್ರಚಾರದಲ್ಲಿದ್ದಿತು. ಭಟ್ಟಾಕಳಂಕನು ಜೈನೇಂದ್ರದ ಕೆಲವು ಸೂತ್ರಗಳನ್ನು ಉದಾಹರಿಸಿದ್ದಾನೆ. ಜೈನೇಂದ್ರ ವ್ಯಾಕರಣದಲ್ಲಿ ಹ್ರಸ್ವಪಾಠ, ದೀರ್ಘಪಾಠ ಎಂಬ ಎರಡು ಪಾಠಗಳಿವೆ. ೧೩ನೆಯ ಶತಮಾನದಿಂದ ಈಚೆಗೆ ಈ ವ್ಯಾಕರಣದ ಬಗೆಗೆ ಯಾವ ವಿಚಾರವೂ ತಿಳಿದುಬರುತ್ತಿಲ್ಲ.

ಶಾಕಟಾಯನನ ವ್ಯಾಕರಣ ಪದ್ಧತಿ 'ಜೈನೇಂದ್ರವ್ಯಾಕರಣ' ಪದ್ಧತಿಯಂತೆಯೇ ವಿಶಿಷ್ಟವಾದದ್ದು. ಎರಡು ಶತಮಾನಗಳ ಅನಂತರ ಶಾಕಟಾಯನನ ವ್ಯಾಕರಣ ರಚಿತವಾಯಿತು. ಶಾಕಟಾಯನ ರಚಿಸಿದ ವ್ಯಾಕರಣ 'ಶಬ್ದಾನುಶಾಸನ' ಎಂಬ ಹೆಸರಿನಿಂದ ಹೆಚ್ಚು ಪ್ರಸಿದ್ಧವಾಗಿದೆ. ಶಾಕಟಾಯನ ಎಂಬ ಹೆಸರಿನವರು ಇಬ್ಬರಿದ್ದಾರೆ. ಯಾಸ್ಕನ ನಿರುಕ್ತದಲ್ಲಿ ಮತ್ತು ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಉಲ್ಲೇಖವಾಗಿರುವ ಒಬ್ಬ ಶಾಕಟಾಯನನು. ಇವನು ತುಂಬ ಪ್ರಾಚೀನನು. ಇವನ ಕೃತಿ ದೊರಕಿಲ್ಲ. ಇನ್ನೊಬ್ಬ ಶಾಕಟಾಯನ

ಈಚಿನವನು. ಬೋಪದೇವ ಹೇಮಚಂದ್ರ ಮುಂತಾದವರು ಈತನ ಕೃತಿಯನ್ನು ಹೆಸರಿಸಿದ್ದಾರೆ. ಭಟ್ಟಾಕಳಂಕನು ಇವನಿಂದ ತುಂಬ ಪ್ರಭಾವಿತನಾಗಿದ್ದಾನೆ. ಇವನ ಕೆಲವು ಸೂತ್ರಗಳನ್ನು ತನ್ನ ಗ್ರಂಥದಲ್ಲಿ ಉದಾಹರಿಸಿದ್ದಾನೆ. ಶಾಕಟಾಯನ ತನ್ನ 'ಶಬ್ದಾನುಶಾಸನ'ದಲ್ಲಿ ತನ್ನ ಹಿಂದಿನವರಾದ ಪಾಣಿನಿ, ಪತಂಜಲಿ, ಕಾತ್ಯಾಯನ, ಚಂದ್ರಗೋಮಿ, ಪೂಜ್ಯಪಾದ ಇವರೆಲ್ಲರ ಕೃತಿಗಳನ್ನೂ ಬಳಸಿಕೊಂಡಿದ್ದಾನೆ. ಶಾಕಟಾಯನನ 'ಶಬ್ದಾನುಶಾಸನ'ದಲ್ಲಿ ನಾಲ್ಕು ಅಧ್ಯಾಯಗಳಿವೆ. 'ಶಬ್ದಾನುಶಾಸನ'ದ ಅನೇಕ ಸೂತ್ರಗಳು ಪಾಣಿನಿಯ ಸೂತ್ರಗಳಂತೆಯೇ ಇವೆ. ಕೆಲವು ಕಡೆ ಅವುಗಳನ್ನು ಮಾರ್ಪಾಡುಮಾಡಿಕೊಳ್ಳಲಾಗಿದೆ. ವೈದಿಕ ವ್ಯಾಕರಣಭಾಗವನ್ನು ಕೈಬಿಟ್ಟು ಜೈನೇಂದ್ರ ವ್ಯಾಕರಣಸಂಪ್ರದಾಯವನ್ನು ಅನುಸರಿಸಿದೆ.

ಶಾಕಟಾಯನನ ಪಂಥಕ್ಕೆ ಸೇರಿದ ಅನೇಕ ವಿದ್ವಾಂಸರಿಂದ ಅನೇಕ ಕೃತಿಗಳು ರಚಿತವಾಗಿವೆ. ಅವುಗಳಲ್ಲಿ ಹೇಮಚಂದ್ರನ 'ಶಬ್ದಾನುಶಾಸನ' ಮುಖ್ಯವಾದದ್ದು. ಇದು ಶಾಕಟಾಯನ ಸಂಪ್ರದಾಯದ 'ಶಬ್ದಾನುಶಾಸನ'ವನ್ನು ಅನುಸರಿಸಿದ್ದು. ಶಾಕಟಾಯನನ ವ್ಯಾಕರಣದ ಮೇಲೆ ಅನೇಕ ವ್ಯಾಖ್ಯಾನಗಳು, ಸಂಗ್ರಹಗಳು, ಕೈಪಿಡಿಗಳು ಹುಟ್ಟಿಕೊಂಡವು. ಹೇಮಚಂದ್ರವೃತ್ತಿ ಆ ಕಾಲದಲ್ಲಿ ಶಾಕಟಾಯನನ ಕೃತಿಯನ್ನು ಹಿಂದಕ್ಕೆ ಹಾಕಿತು. ಭಟ್ಟಾಕಳಂಕನು ತನ್ನ 'ಶಬ್ದಾನುಶಾಸನ'ದಲ್ಲಿ ಶಾಕಟಾಯನನ ಸೂತ್ರಗಳನ್ನು ಉದಾಹರಿಸಿದ್ದಾನೆ. ಶಾಕಟಾಯನನ ಸಂಪ್ರದಾಯ ಕರ್ನಾಟಕದಲ್ಲಿಯೂ ಪ್ರಚಾರದಲ್ಲಿದ್ದಿತು. ನಾಗವರ್ಮ ಕೇಶಿರಾಜರು ಶಾಕಟಾಯನನಿಂದ ಪ್ರಭಾವಿತರಾಗಿರುವಂತೆ ಕಂಡುಬರುವುದಿಲ್ಲ.

ಹೇಮಚಂದ್ರನ ವ್ಯಾಕರಣಸಂಪ್ರದಾಯ ವ್ಯಾಕರಣಸಂಪ್ರದಾಯಗಳಲ್ಲೆಲ್ಲಾ ಬಹಳ ಮುಖ್ಯವಾದದ್ದು. ಹೇಮಚಂದ್ರನಿಗೆ ಆಶ್ರಯದಾತನಾಗಿದ್ದ ಕುಮಾರಪಾಲ ದೊರೆಗೆ ಸಂಬಂಧಿಸಿದ ಸಂಸ್ಕೃತ ಕಾವ್ಯಗಳಲ್ಲಿ ಹೇಮಚಂದ್ರನ ವೃತ್ತಾಂತ ದೊರೆಯುತ್ತದೆ. ಈತನ ಕಾಲ ೧೧೦೮. ಜೈನದೀಕ್ಷೆ ಪಡೆದ ಮೇಲೆ ಹೇಮಚಂದ್ರನು ಹೇಮಚಂದ್ರಸೂರಿ ಎಂಬ ಹೆಸರನ್ನು ಪಡೆದನು.

ಹೇಮಚಂದ್ರನ 'ಶಬ್ದಾನುಶಾಸನ'ದಲ್ಲಿ ಪಾಣಿನಿಯ 'ಅಷ್ಟಾಧ್ಯಾಯಿ'ಯಂತೆ ಎಂಟು ಅಧ್ಯಾಯಗಳಿವೆ. ಪ್ರತಿ ಅಧ್ಯಾಯದಲ್ಲಿಯೂ ನಾಲ್ಕು ಪಾದಗಳಿವೆ. ಇದರ ಕಡೆಯ ಅಧ್ಯಾಯ ಪ್ರಾಕೃತಭಾಷೆಗೆ ಸಂಬಂಧಿಸಿದ್ದು. ಉಳಿದ ಅಧ್ಯಾಯಗಳು ಕೌಮುದಿಗಳ ಮಾದರಿಯಲ್ಲಿವೆ. ಹಿಂದಿನ ವೈಯಾಕರಣರು ಹೇಳಿದ ವಿಚಾರಗಳನ್ನೆಲ್ಲಾ ಸಂಗ್ರಹವಾಗಿ ಹೇಳುವುದರ ಜೊತೆಗೆ ವ್ಯಾಕರಣವಿಚಾರವಾಗಿ ಹೇಳಬಹುದಾದುದೆಲ್ಲವನ್ನೂ ಹೇಳಿದ್ದಾನೆ. ಇದಕ್ಕೆ ಹಿಂದಿನವರ ವ್ಯಾಕರಣಗಳಲ್ಲಿ ಕೆಲವನ್ನು ಬಳಸಿಕೊಂಡಿದ್ದಾನೆ. ಈತನು ಶಾಕಟಾಯನನ 'ಶಬ್ದಾನುಶಾಸನ' ಹಾಗೂ 'ಅಮೋಘವೃತ್ತಿ'ಗಳಿಗೆ ವಿಶೇಷವಾಗಿ ಋಣಿಯಾಗಿದ್ದಾನೆ. ಹೇಮಚಂದ್ರನು ತನ್ನ ಸೂತ್ರಗಳ ಬಗೆಗೆ ತಾನೇ ಬೃಹತ್‌ವೃತ್ತಿಯನ್ನು ಬರೆದಿದ್ದಾನೆ. ಇದು ಹೆಚ್ಚು ವಿದ್ವತ್ಪೂರ್ಣವಾದದ್ದು.

'ಶಬ್ದಾನುಶಾಸನ'ದ ಮೇಲೆ ಇತರ ಸಂಪ್ರದಾಯದ ವ್ಯಾಕರಣಗಳಂತೆ ಅನೇಕ ವೃತ್ತಿಗಳೂ ವ್ಯಾಖ್ಯಾನಗಳೂ ಹೊರಬಂದಿವೆ. ಹೇಮಚಂದ್ರನು ಬಹುಗ್ರಂಥಕರ್ತನಾದರೂ ಹೆಸರಾಂತ ವೈಯಾಕರಣಿ. ಆದರೆ ಈತನ ವ್ಯಾಕರಣಸಂಪ್ರದಾಯ ಊರ್ಜಿತವಾಗಲಿಲ್ಲ.

ಕಾತಂತ್ರವ್ಯಾಕರಣವನ್ನು ರಚಿಸಿದವನು ಶರ್ವವರ್ಮ. ಕನ್ನಡ ವ್ಯಾಕರಣಕಾರರು ಅನೇಕ ವಿಷಯಗಳಲ್ಲಿ ಕಾತಂತ್ರಕ್ಕೆ ಹೆಚ್ಚು ಋಣಿಯಾಗಿದ್ದಾರೆ. ಶರ್ವವರ್ಮ 'ಕಾತಂತ್ರ ವ್ಯಾಕರಣ' ಸಂಪ್ರದಾಯದ ಮೂಲಪ್ರವರ್ತಕ. ಈ ಕಾತಂತ್ರವ್ಯಾಕರಣಕ್ಕೆ 'ಕುಮಾರ ವ್ಯಾಕರಣ' ಮತ್ತು 'ಕಲಾಪವ್ಯಾಕರಣ' ಎಂಬ ಹೆಸರುಗಳು ಪ್ರಸಿದ್ಧವಾಗಿವೆ. ಶರ್ವವರ್ಮನು ಕಡಿಮೆ ಸಂಖ್ಯೆಯ ಸರಳವಾದ ಸೂತ್ರಗಳಲ್ಲಿ ವ್ಯಾಕರಣವನ್ನು ರಚಿಸಿದ ಕಾರಣ, ಈ ವ್ಯಾಕರಣಕ್ಕೆ 'ಕಾತಂತ್ರವ್ಯಾಕರಣ' ಎಂಬ ಹೆಸರು ಬಂದಿದೆ ಎಂದು ಕೆಲವರ ಅಭಿಪ್ರಾಯ. ಈ ವ್ಯಾಕರಣ ತುಂಬ ಸರಳ ಹಾಗೂ ಸುಲಭವಾದದ್ದು. 'ಕಲಾಪಚಂದ್ರ' ಎಂಬ ಸಂಸ್ಕೃತ ಗ್ರಂಥದಲ್ಲಿ ಈ ವ್ಯಾಕರಣದ ಉತ್ಪತ್ತಿಯ ಬಗೆಗೆ ಒಂದು ಕಥೆ ಇದೆ.

'ಕಾತಂತ್ರವ್ಯಾಕರಣ'ದ ಮೇಲೆ ಮೊತ್ತಮೊದಲು ದುರ್ಗಸಿಂಹ ಎಂಬುವವನು ವ್ಯಾಖ್ಯಾನ ಬರೆದನು. ಈತನ ಕಾಲ ಸುಮಾರು ೮೦೦. ಇವನಿಗಿಂತ ಮುಂಚೆಯೂ ಇದರ ವ್ಯಾಖ್ಯಾನಗಳು ಹೊರಬಂದಿರಬೇಕು. ಶರ್ವವರ್ಮನು ವೈದಿಕ ಅನುಯಾಯಿ. ಕೆಲವರು ಶರ್ವವರ್ಮನನ್ನು ಜೈನವ್ಯಾಕರಣಕಾರರ ಗುಂಪಿಗೆ ಸೇರಿಸಿದ್ದಾರೆ. ನಾಗವರ್ಮನು ಅಭಿನವ ಶರ್ವವರ್ಮ ಎಂಬ ಬಿರುದನ್ನು ಪಡೆದಿದ್ದನು. ಕನ್ನಡ ವ್ಯಾಕರಣಗಳ ಮೇಲೆ ಕಾತಂತ್ರವ್ಯಾಕರಣದ ಪ್ರಭಾವ ಗಾಢವಾಗಿ ಉಂಟಾಗಿದ್ದಿತು. ಕನ್ನಡ ವ್ಯಾಕರಣಕಾರರು ವಿಚಾರ ವಿಮರ್ಶೆಯಲ್ಲಿ ಪಾಣಿನಿ ಮತ್ತು ಶಾಕಟಾಯನರ ವ್ಯಾಕರಣಪದ್ಧತಿಗಳನ್ನೂ ಅನುಸರಿಸಿರುವುದು ಕಂಡುಬರುತ್ತದೆ.

ಕಾತಂತ್ರ ವ್ಯಾಕರಣ ಪಂಡಿತರಿಗಾಗಿ ಬರೆದುದಲ್ಲ. ಸಂಸ್ಕೃತವು ಭಾರತದ ವ್ಯಾವಹಾರಿಕ ಹಾಗೂ ಸಂಪರ್ಕಭಾಷೆಯಾಗಿದ್ದ ಕಾಲದಲ್ಲಿ ಪಾಣಿನಿಯ ವ್ಯಾಕರಣವನ್ನು ಪ್ರಾಥಮಿಕ ವಿದ್ಯಾರ್ಥಿಗಳಿಗಾಗಿ ಹಾಗೂ ಸಾಮಾನ್ಯ ಜನರಿಗಾಗಿ ಸರಳಗೊಳಿಸಲು ಬರೆದದ್ದು. ಈ ಕೃತಿ ತುಂಬ ಉಪಯುಕ್ತವಾದುದಾಗಿದೆ. ಇದು ರಚಿತವಾದ ಒಂದು ಶತಮಾನದ ಅನಂತರ ಟಿಬೆಟ್, ಕಾಶ್ಮೀರ, ಬಂಗಾಳಗಳಲ್ಲಿ ಹೆಚ್ಚು ಜನಪ್ರಿಯವಾಗಿದ್ದಿತು. ಇದು ಇದರ ಉಪಯುಕ್ತತೆಯನ್ನು ಸೂಚಿಸುತ್ತದೆ.

ಶರ್ವವರ್ಮನು ಪಾಣಿನಿಯ ವ್ಯಾಕರಣದ ಕೆಲವು ವಿಚಾರಗಳನ್ನು ಮಾರ್ಪಾಡು ಮಾಡಿದನು. ಅಲ್ಲದೆ ಪಾಣಿನಿಯ ಕೆಲವು ಕೃತಕ ವ್ಯವಸ್ಥೆಯನ್ನು ಕೈಬಿಟ್ಟು ಪ್ರಾತಿಶಾಖ್ಯ ಪದ್ಧತಿಯನ್ನು ಉಳಿಸಿಕೊಂಡನು. ವ್ಯಾಕರಣದ ಅಭ್ಯಾಸ ಮೊದಲುಮಾಡುವವರಿಗೆ ಅನುಕೂಲವಾಗುವಂತೆ ಪಾಣಿನಿಯ ವೈದಿಕಪ್ರಕ್ರಿಯೆಗಳನ್ನೂ ಕ್ಲಿಷ್ಟವಾದ ನಿಯಮಗಳನ್ನೂ ಕೈಬಿಟ್ಟು ಸುಲಭವಾದ ವ್ಯಾಕರಣ ರಚಿಸಿದನು. ಆ ಕಾಲದಲ್ಲಿ ಇಂತಹ ಸುಲಭವಾದ ವ್ಯಾಕರಣವೊಂದರ ಅಗತ್ಯವಿದ್ದಿತೆಂದು ತೋರುತ್ತದೆ. ಹಿಂದಿನ ವ್ಯಾಕರಣಗಳು ಜನಸಾಮಾನ್ಯರಿಗೆ ಹೆಚ್ಚು ಉಪಯುಕ್ತವಾಗಿರಲಿಲ್ಲ. ಅವು ಕೇವಲ ಪಂಡಿತವರ್ಗಕ್ಕೆ

ದುರ್ಗಸಿಂಹನ ವೃತ್ತಿಯ ಮೇಲೆ ಅನೇಕ ವ್ಯಾಖ್ಯಾನಗಳು ಹುಟ್ಟಿಕೊಂಡವು. ೧೫–೧೬ನೆಯ ಶತಮಾನಗಳಿಂದ ಕಾತಂತ್ರ ಹೆಚ್ಚು ಪ್ರಚಾರಕ್ಕೆ ಬಂದಂತೆ ಕಾಣುತ್ತದೆ. ಇದರ ಮೇಲೆ ಬಂಗಾಳಿ ವಿದ್ವಾಂಸರು ಬರೆದ ವ್ಯಾಖ್ಯಾನಗಳು ಬಹುಸಂಖ್ಯೆಯಲ್ಲಿವೆ. ಬಂಗಾಳ, ಕಾಶ್ಮೀರ ಮುಂತಾದ ಕಡೆಗಳಲ್ಲಿ ಕಾತಂತ್ರ ಹೆಚ್ಚು ಪ್ರಚಾರದಲ್ಲಿದ್ದಿತು.

ಸಾರಸ್ವತ ಸಂಪ್ರದಾಯದ ಕಾಲ ಸುಮಾರು ೧೬–೧೭ನೆಯ ಶತಮಾನ. ಉತ್ತರ ಭಾರತದ ಗುಜರಾತ್, ನಾಗಪುರ, ಉದಯಪುರ, ದೆಹಲಿ, ಬಂಗಾಳ ಮುಂತಾದ ಪ್ರಾಂತ್ಯಗಳಲ್ಲಿ ಹೆಚ್ಚು ಪ್ರಚಾರದಲ್ಲಿದ್ದಿತು. ಸಾರಸ್ವತವ್ಯಾಕರಣಸಂಪ್ರದಾಯ ಕಾತಂತ್ರದಂತೆ ಒಂದು ನಿರ್ದಿಷ್ಟ ಅಪೇಕ್ಷೆಯ ಮೇಲೆ ಹುಟ್ಟಿಕೊಂಡಿದ್ದು. ಸಾರಸ್ವತವ್ಯಾಕರಣಗಳು ರಚನೆಯಾಗಲು ಮಹಮ್ಮದೀಯರ ಉದಾರ ಮನೋಭಾವ ಮುಖ್ಯಕಾರಣ. ಈ ಸಂಪ್ರದಾಯದ ಮುಖ್ಯಲಕ್ಷಣ ಸಂಗ್ರಹಗುಣ. ಜೈನೇಂದ್ರ, ಕಾತಂತ್ರ ಮುಂತಾದವುಗಳ ಮುಖ್ಯ ಉದ್ದೇಶ ಪಾಣಿನಿಯನ್ನು ಹ್ರಸ್ವಗೊಳಿಸುವುದೇ ಆಗಿದ್ದರೂ ಸೂತ್ರಗಳ ಸಂಖ್ಯೆ ಕಡಿಮೆಯಾಗಲಿಲ್ಲ. ಸಮಸ್ತ ವಿಷಯಗಳನ್ನೂ ೭೦೦ ಸೂತ್ರಗಳಲ್ಲಿ ಅಡಕ ಮಾಡಿದ್ದು ಈ ಸಾರಸ್ವತಸಂಪ್ರದಾಯದ ಬಹುದೊಡ್ಡ ಸಾಧನೆ. ಇದರಲ್ಲಿ ಸರಳತೆ ಹೆಚ್ಚು. ಸುಪರಿಚಿತವಾದ ಪರಿಭಾಷೆಯನ್ನು ವಿವರಿಸುವ ಗೋಜಿಗೆ ಹೋಗುವುದಿಲ್ಲ. ಭಾಷೆ ಸರಳವಾಗಿದ್ದು ಸಂಕ್ಷಿಪ್ತತೆ ಸಿದ್ಧಿಸಿದೆ. ವೈದಿಕಪದ್ಧತಿಯನ್ನು ಇದರಲ್ಲಿ ಪೂರ್ಣವಾಗಿ ಕೈಬಿಡಲಾಗಿದೆ. ಅನುಭೂತಿಸ್ವರೂಪಾಚಾರ್ಯ ಈ ಸಂಪ್ರದಾಯದ ಮೂಲ ಪ್ರವರ್ತಕ. ಈ ಸಂಪ್ರದಾಯದ ವ್ಯಾಕರಣಗಳ ಮೇಲೆ ಅನೇಕ ವ್ಯಾಖ್ಯಾನಗಳು ಹುಟ್ಟಿಕೊಂಡಿವೆ. ವ್ಯಾಖ್ಯಾನಕಾರರಲ್ಲಿ ಇಬ್ಬರು ಅಥವಾ ಮೂವರು ಜೈನರಿದ್ದಾರೆ. ಬ್ರಿಟಿಷರು ಸಂಸ್ಕೃತ ಭಾಷಾಸಾಹಿತ್ಯವನ್ನು ಪರಿಚಯಮಾಡಿಕೊಡಲು ಸಂಸ್ಕೃತದ ವ್ಯಾಕರಣಗಳನ್ನು ರಚಿಸತೊಡಗಿದರು. ಕಿಟ್ಟೆಲ್, ವಿಲ್‌ಕಿನ್ಸ್, ಪೋಪ್ ಮುಂತಾದವರ ವ್ಯಾಕರಣಗಳಿಗೆ ಸಾರಸ್ವತ ವ್ಯಾಕರಣಗಳೇ ಮೂಲ ಆಧಾರ. ಈಗ ಸಾರಸ್ವತವ್ಯಾಕರಣ ಬಿಹಾರ ಮತ್ತು ವಾರಣಾಸಿಗಳಲ್ಲಿ ಪ್ರಚಾರದಲ್ಲಿದೆ.

ಬೋಪದೇವ 'ಮುಗ್ಧಬೋಧೆ'ಯನ್ನು ರಚಿಸಿದನು. ಇವನು ಮಹಾರಾಷ್ಟ್ರದವನು. ಬೋಪದೇವನು ಈ ಸಂಪ್ರದಾಯದ ಮೂಲಪ್ರವರ್ತಕ. ಬೋಪದೇವ 'ಮುಗ್ಧಬೋಧೆ'ಯಲ್ಲದೆ ಇನ್ನೂ ಬೇರೆಬೇರೆ ವಿಷಯಗಳ ಮೇಲೆ ಗ್ರಂಥಗಳನ್ನು ಬರೆದಿದ್ದಾನೆ. ಈ 'ಮುಗ್ಧಬೋಧೆ'ಯ ಮುಖ್ಯ ಉದ್ದೇಶ ಪಾಣಿನಿಯ ವ್ಯಾಕರಣವನ್ನು ಸರಳಗೊಳಿಸುವುದು. ಇದರಲ್ಲಿ ವೈದಿಕಪ್ರಕ್ರಿಯೆಗಳನ್ನು ಕೈಬಿಟ್ಟಿದ್ದರೂ ಧಾರ್ಮಿಕಾಂಶಗಳು ಪ್ರವೇಶ ಮಾಡಿವೆ. ಧಾರ್ಮಿಕಾಂಶಗಳನ್ನು ಹೀಗೆ ಸೇರಿಸಿದವರಲ್ಲಿ ಬೋಪದೇವನೇ ಮೊತ್ತ

ಕಾಣುತ್ತದೆ. ೧೭ನೆಯ ಶತಮಾನದ ವೇಳೆಗೆ ಪಾಣಿನೀತರ ಸಂಪ್ರದಾಯಗಳಂತೆ ಬೋಪ ದೇವನ ವ್ಯಾಕರಣಸಂಪ್ರದಾಯ ದೂರದ ಬಂಗಾಳ ಪ್ರಾಂತ್ಯದಲ್ಲಿ ಉಳಿಯಿತು. 'ಮುಗ್ಧ ಬೋಧ' ಪ್ರಭಾವಶಾಲಿಯಾಗಿದ್ದಷ್ಟು ಕಾಲ ಬೆರಗುಗೊಳಿಸುವಷ್ಟು ಸಂಖ್ಯೆಯ ಸಂಗ್ರಹ ಗಳು, ವೃತ್ತಿಗಳು, ವ್ಯಾಖ್ಯಾನಗಳ ರಚನೆಗೆ ಸಹಾಯಕವಾಯಿತು.

ಕುಮಾರನಂದಿ ಈ ಕೌಮಾರ ಸಂಪ್ರದಾಯದ ಮೂಲಪ್ರವರ್ತಕ. ಆದ್ದರಿಂದಲೇ ಈ ಸಂಪ್ರದಾಯಕ್ಕೆ ಕೌಮಾರ ಸಂಪ್ರದಾಯ ಎಂಬ ಹೆಸರು ಬಂದಿದೆ. ಕ್ರಮದೀಶ್ವರ 'ಸಂಕ್ಷಿಪ್ತ ಸಾರ' ಎಂಬ ಕೃತಿಯನ್ನು ರಚಿಸಿದನು. ಇದು ಪಾಣಿನಿಯ ವ್ಯಾಕರಣ ಸಂಗ್ರಹ. ಈ ಸಂಪ್ರದಾಯದ ನಿಜವಾದಮೂಲಪ್ರವರ್ತಕ 'ಕ್ರಮದೀಶ್ವರ'ನೇ.'ಸಂಕ್ಷಿಪ್ತಸಾರ'ಕೌಮಾರ ನಂದಿಯ ಕೈಯಲ್ಲಿ ಸಾಕಷ್ಟು ಪರಿಷ್ಕಾರಹೊಂದಿತು. ಕಾತಂತ್ರವನ್ನು ಬಿಟ್ಟರೆ ಬಂಗಾಳದ ಪಶ್ಚಿಮ ಭಾಗದಲ್ಲಿ ಇದು ಈಗಲೂ ಪ್ರಚಾರದಲ್ಲಿದೆ. ಈ ಸಂಪ್ರದಾಯಕ್ಕೆ ಸಂಬಂಧಿಸಿದ ಚಟುವಟಿಕೆಗಳು ಆಧುನಿಕ ಕಾಲದಲ್ಲಿಯೂ ನಡೆಯುತ್ತ ಬಂದಿವೆ.

ಪದ್ಮನಾಭಭಟ್ಟ ಸೌಪದ್ಮಸಂಪ್ರದಾಯದ ಮೂಲಪ್ರವರ್ತಕ. ಈತನು ಮೈಥಿಲಿ ಬ್ರಾಹ್ಮಣ. ಈ ಸಂಪ್ರದಾಯದ ವ್ಯಾಕರಣ ಬಹುಮಟ್ಟಿಗೆ ಪಾಣಿನಿಯನ್ನು ಅವಲಂಬಿಸಿದೆ. ಇದರಲ್ಲಿ ಐದು ಅಧ್ಯಾಯಗಳಿವೆ. ತನ್ನ ವ್ಯಾಕರಣದ ಮೇಲೆ ತಾನೇ 'ಸುಪದ್ಮಪಂಚಿಕಾ' ಎಂಬ ವೃತ್ತಿಯನ್ನು ಬರೆದಿದ್ದಾನೆ. ಇದರ ಮೇಲೆ ಅನೇಕ ವೃತ್ತಿಗಳು ಹುಟ್ಟಿಕೊಂಡಿವೆ. ಇದು ಬಂಗಾಳ, ಮಧ್ಯಪ್ರದೇಶಗಳಲ್ಲಿ ಹೆಚ್ಚು ಪ್ರಚಾರದಲ್ಲಿದೆ.

ಮತಪಂಥದ ಸಂಪ್ರದಾಯ ಬೋಪದೇವನಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ. ಇವರು ವ್ಯಾಕರಣಶಾಸ್ತ್ರವನ್ನು ಮತಪ್ರಚಾರಕ್ಕೆ ಮಾಧ್ಯಮವನ್ನಾಗಿ ಬಳಸಿಕೊಂಡರು. ಈ ಪಂಥಕ್ಕೆ ಸೇರಿದ ವ್ಯಾಕರಣಗಳಲ್ಲಿ 'ಹರಿನಾಮಾಮೃತ' ಎಂಬ ವೈಷ್ಣವವ್ಯಾಕರಣ, ರೂಪಗೋಸ್ವಾಮಿಯ ವ್ಯಾಕರಣ, ಜೀವಗೋಸ್ವಾಮಿಯ ವ್ಯಾಕರಣ, 'ಚೈತನ್ಯಾಮೃತ' ಎಂಬ ವೈಷ್ಣವ ವ್ಯಾಕರಣ ಮುಖ್ಯವಾಗಿವೆ. ಇವುಗಳ ಬಗ್ಗೆ ಬೇರೆ ಬೇರೆ ವೃತ್ತಿಗಳೂ, ವ್ಯಾಖ್ಯಾನಗಳೂ ಹುಟ್ಟಿಕೊಳ್ಳಲಿಲ್ಲ. ಈ ವ್ಯಾಕರಣಗಳು ಬಂಗಾಳದ ವೈಷ್ಣವರಲ್ಲಿ ಪ್ರಚಾರದಲ್ಲಿವೆ. ಇದೇ ರೀತಿ ಶೈವಶಾಕ್ತಮತೀಯ ವ್ಯಾಕರಣಗಳೂ ಹೊರಬಂದುವು. ಇವುಗಳಲ್ಲಿ ಪ್ರಬೋಧ ಪ್ರಕಾಶನವನ್ನು ಹೆಸರಿಸಬಹುದು. ಈ ರೀತಿಯ ಮತನಿಷ್ಠ ವ್ಯಾಕರಣಗಳನ್ನು ಶೈವರು ಮತ್ತು ವೈಷ್ಣವರು ಪ್ರಚಾರಕ್ಕೆ ತಂದರು. ಇವು ವ್ಯಾಕರಣ ಸಂಪ್ರದಾಯಗಳಲ್ಲಿ ಅಷ್ಟು ಮುಖ್ಯವಲ್ಲ.

ಇಲ್ಲಿಯವರೆಗೆ ಪರಿಚಯವಾದ ವ್ಯಾಕರಣ ಸಂಪ್ರದಾಯಗಳಲ್ಲಿ ಕಾಲಕ್ರಮೇಣ ಸತ್ವ ಹೀನತೆ ಕಾಣಿಸಿಕೊಂಡಿತು. ಬಳಿಕ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಬರೆದ ಸರಳ ವ್ಯಾಕರಣಗಳು ಯಾವ ಸಂಪ್ರದಾಯಕ್ಕೂ ಸೇರದ ಕೈಪಿಡಿಗಳೂ ಕಾಣಿಸಿಕೊಂಡವು. ೧೭ನೆಯ ಶತಮಾನದ ಅನಂತರ ಹಳಗನ್ನಡ ಮತ್ತು ನಡುಗನ್ನಡಗಳಲ್ಲಿ ಸಹ ಯಾವ ಪ್ರೌಢ ವ್ಯಾಕರಣಗಳೂ ರಚನೆಯಾದಂತೆ ಕಂಡುಬರುವುದಿಲ್ಲ. ಹಳಗನ್ನಡ ವ್ಯಾಕರಣಗಳಿಗೆ ಸಂಸ್ಕೃತ ವ್ಯಾಕರಣಗಳ ಪ್ರಭಾವವೂ ಹೊಸಗನ್ನಡ ವ್ಯಾಕರಣಗಳಿಗೆ ಪಾಶ್ಚಾತ್ಯ ವ್ಯಾಕರಣ ಗಳ ಪ್ರಭಾವವೂ ಕಾರಣವಾಗಿವೆ.

ಒಂದು ವಾಕ್ಯವನ್ನು ಗಮನಿಸೋಣ :

“ಅವನು ಇಲ್ಲಿಗೆ ಬಂದರೆ, ಈ ಚಿತ್ರವನ್ನು ನೋಡುತ್ತಾನೆ.” ಈ ವಾಕ್ಯವನ್ನು ಸಂಸ್ಕೃತದಲ್ಲಿ ಹೇಗೆ ಹೇಳಬೇಕು ? “ಸಃ ಯದಿ ಅತ್ರಾಗಚ್ಛೇತ್, ಏತತ್ ಚಿತ್ರಂ ಪಶ್ಯೇತ್!” ಈ ವಾಕ್ಯದಲ್ಲಿ ಎರಡು ಘಟಕಗಳಿವೆ. ಮೊದಲನೆಯ ಘಟಕದಲ್ಲಿ ಕ್ರಿಯೆಯ ಪ್ರಾರಂಭದ ಬಗೆಗೆ ಊಹೆ ಇದೆ. ಆದರೆ, ಖಚಿತತೆ ಇಲ್ಲವಾಗಿ ವಾಕ್ಯ ಸಮಾಪ್ತಿಯಾಗಿಲ್ಲ. ಎರಡನೆಯ ಘಟಕದಲ್ಲೂ ಇರುವುದು ಊಹೆಯೇ ಆದರೂ ಅದರಲ್ಲಿ ಖಚಿತವಾದ ನಿರ್ಣಯವಿದ್ದು, ವಿರಾಮವಿದೆ. ಈ ವಾಕ್ಯದಲ್ಲಿ ಕ್ರಿಯಾಪದದ ಬಳಕೆಯಿದ್ದೂ ಅದು ಬಂದಿರುವುದು, ಕ್ರಿಯೆಯ ಉತ್ಪತ್ತಿಯಾಗಿಲ್ಲ ಎನ್ನುವ ಅರ್ಥದಲ್ಲಿ. ಸಂಸ್ಕೃತದಲ್ಲಿ ಇಂತಹ ಪ್ರಯೋಗಗಳಲ್ಲಿಯ ಅರ್ಥಸ್ವರೂಪಕ್ಕೆ ‘ಕ್ರಿಯಾತಿಪತ್ತಿ’ ಎಂದು ಕರೆಯುತ್ತಾರೆ. ಇಂಗ್ಲಿಷಿನಲ್ಲಿ **Conditional** ಎಂದು ಕರೆಯಲಾಗುವ ಪ್ರಯೋಗಕ್ಕೆ ಸಂವಾದಿಯಾದ ಪ್ರಯೋಗವಿದು.

ಮೇಲೆ ಉದಾಹರಿಸಿದ ವಾಕ್ಯದಲ್ಲಿಯ ಎರಡು ಘಟಕಗಳಿಗೆ ಇಂಗ್ಲಿಷ್‌ನಲ್ಲಿ ಕ್ರಮವಾಗಿ **Protasis** ಹಾಗೂ **Apodosis** ಎಂದು ಹೆಸರು. ಸಂಸ್ಕೃತದಲ್ಲಿ ‘ಉಪಕ್ರಮ’ ಹಾಗೂ ‘ನಿಗಮನ’ ಎಂಬ ಹೆಸರಿನಿಂದ ಇವನ್ನು ಕರೆಯಲಾಗದು. ಏಕೆಂದರೆ ಕ್ರಿಯೋತ್ಪತ್ತಿಯ ಪ್ರಾರಂಭ ಹಾಗೂ ಕ್ರಿಯಾಂತ ಇವೆರಡು ಈ ಘಟಕಗಳಲ್ಲಿ ಸೂಚಿತವಾಗಿಲ್ಲ. ಇವುಗಳಿಗೆ ಸರಿಯಾದ ಸಂಸ್ಕೃತ ಶಬ್ದಗಳೆಂದರೆ ಆಪಾದಕ ಹಾಗೂ ಆಪತ್ತಿ. ಈ ಶಬ್ದಗಳನ್ನು ಜಗದೀಶನು ತನ್ನ “ಶಬ್ದಶಕ್ತಿಪ್ರಕಾಶಿಕಾ”ದಲ್ಲಿ ಪ್ರಯೋಗಿಸಿರುತ್ತಾನೆ. ಅಲ್ಲಿಯ ಪಂಕ್ತಿಗಳು ಹೀಗಿವೆ :

“ಹ್ರದೋ ಯದಿ ಧೂಮವಾನ್‌ಸ್ಯಾತ್, ವಹ್ನಿಮಾನ್ ಸ್ಯಾತ್” ಇತ್ಯಾದೌ ತು ಪ್ರಥಮಸ್ಯ ಸ್ಯಾಚ್ಛಬ್ದಸ್ಯ ಆಪಾದಕತ್ವಂ, ದ್ವಿತೀಯಸ್ಯ ಚಾಪತ್ತಿರರ್ಥಃ । ತೇನ “ಧೂಮವತ್ತ್ವಾಪಾದಕತಾಕ-ವಹ್ನಿಮತ್ತ್ವಾಪತ್ತಿವಿಶೇಷ್ಯೋ ಹ್ರದಃ” ಇತ್ಯಾಕಾರಕಸ್ತತ್ರ ಶಾಬ್ದಬೋಧಃ । ಯದಿಶಬ್ದಸ್ತು ತಾದೃಶಾರ್ಥತಾತ್ಪರ್ಯಗ್ರಾಹಕಃ । ‘ಯದ್ಯಯಂ ಧೂಮವಾನ್, ವಹ್ನಿಮಾನಪಿ ಸ್ಯಾತ್’ ಇತ್ಯಾದೌ ತು ಯದಿ ಶಬ್ದಸ್ಯೈವ ಆಪಾದಕತ್ವಮರ್ಥಃ” (ಪುಟ ೧೭೭).

ಈ ವಾಕ್ಯವೃಂದದ ಪ್ರಾರಂಭದಲ್ಲಿ “ಪರೇ ತು” (ಈ ವಿಷಯದಲ್ಲಿ ಬೇರೆಯವರು ಹೀಗೆನ್ನುತ್ತಾರೆ) ಎಂದು ಜಗದೀಶ ಹೇಳಿದ್ದಾಗ್ಯೂ, ಈ ಅಭಿಪ್ರಾಯದ ಬಗೆಗೆ ಯಾವ

ಟೀಕೆಯನ್ನೂ ಆತ ಮಾಡಿಲ್ಲವಾಗಿ ಈ ಅಭಿಪ್ರಾಯವನ್ನು ಆತನೂ ಒಪ್ಪಿದ್ದಾನೆಂದು ಭಾಸವಾಗುತ್ತದೆ. ಅಂದರೆ, ಒಟ್ಟಿನಲ್ಲಿ ಕ್ರಿಯಾತಿಪತ್ತಿಯನ್ನು ತಿಳಿಸುವ ವಾಕ್ಯದಲ್ಲಿನ ಎರಡು ಘಟಕಗಳಲ್ಲಿ ಮೊದಲನೆಯದಕ್ಕೆ ಆಪಾದಕಘಟಕ ಎಂದೂ ಎರಡನೆಯದಕ್ಕೆ ಆಪತ್ತಿಘಟಕ ಎಂದೂ ಹೆಸರು. ಆಪಾದಕವೆಂದರೆ ಸಾಧಕ ; ಆಪತ್ತಿ ಎಂದರೆ ಸಿದ್ಧಿ.

ಇದೆಲ್ಲ ಸರಿ. ಆದರೆ ಕ್ರಿಯಾತಿಪತ್ತಿ ಎಂದರೆ ಏನು ? ಇಲ್ಲಿನ ಅತಿಪತ್ತಿ ಎಂಬ ಶಬ್ದಕ್ಕೆ ಅಭಿವ್ಯಕ್ತವಾಗದೆ ಇರುವುದು ಎಂದು ಅರ್ಥ. ಇದು ವೈಯಾಕರಣರಿಗೆ ಸಮ್ಮತವಾದ ಅರ್ಥ. ಆದ್ದರಿಂದ ಕಾಶಿಕಾಕಾರ "ಕುತಶ್ಚಿದ್ ವೈಗುಣ್ಯಾದನಭಿವ್ಯಕ್ತಿಃ ಕ್ರಿಯಾಯಾಃ ಕ್ರಿಯಾತಿಪತ್ತಿಃ" (೩-೩-೯೧ರ ಅಷ್ಟಾಧ್ಯಾಯಿಯ ಮೇಲಿನ ಕಾಶಿಕಾ ನೋಡಿ.) ಎಂದು ಹೇಳುತ್ತಾನೆ. "ಯಾವುದಾದರೂ ವೈಗುಣ್ಯದಿಂದಾಗಿ ಕ್ರಿಯೆ ಉತ್ಪತ್ತಿಯಾಗದಿರುವುದು ಕ್ರಿಯಾತಿಪತ್ತಿ ಎಂಬ ಶಬ್ದದಿಂದ ಕರೆಯಲ್ಪಡುತ್ತದೆ" ಎಂಬುದು ಆ ವಾಕ್ಯಕ್ಕೆ ಅರ್ಥ. ವೈಗುಣ್ಯ ಎಂದರೇನು ? ೨-೧-೫೮ರ ನ್ಯಾಯಸೂತ್ರದಲ್ಲಿ "ನ-ಕರ್ಮಕರ್ತೃಸಾಧನ ವೈಗುಣ್ಯಾತ್" ಎಂಬ ಸೂತ್ರದಲ್ಲಿ ಬರುವ ವೈಗುಣ್ಯ ಶಬ್ದಕ್ಕೆ ಭಾಷ್ಯಕಾರರು ಹೇಳುವ "ಕರ್ಮವೈಗುಣ್ಯಂ=ಮಿಥ್ಯಾಸಂಪ್ರಯೋಗಃ" ಎನ್ನುವ ಅರ್ಥವನ್ನು ಗಮನಿಸಿದರೆ ಯಾವ ರೀತಿ ಕೆಲಸವಾದರೆ ಫಲ ಸಿಗುವುದೋ ಅಂಥ ಕೆಲಸ ಮಾಡದೇ ಬೇರೆ ರೀತಿ ಕೆಲಸ ಮಾಡುವುದು ಎಂಬ ಅಭಿಪ್ರಾಯ ಅವರಿಗಿದ್ದಂತೆ ಕಾಣುತ್ತದೆ. ಸುದರ್ಶನಾಚಾರ್ಯರು ತಮ್ಮ 'ಪ್ರಸನ್ನಪದಾ' ವ್ಯಾಖ್ಯಾನದಲ್ಲಿ ವೈಗುಣ್ಯಶಬ್ದಕ್ಕೆ ವೈಕಲ್ಯ, ಅಪಚಾರ—ಎಂಬ ಎರಡು ಅರ್ಥಗಳನ್ನು ಕೊಟ್ಟಿದ್ದಾರೆ (ಪುಟ ೧೫೩). ಈ ಅರ್ಥಗಳಾವುವೂ ಇಲ್ಲಿ ಹೊಂದುವುದಿಲ್ಲವೆಂದು ಸ್ಪಷ್ಟವಾಗಿದೆ. ಕ್ರಿಯೋತ್ಪತ್ತಿಗೆ ಬೇಕಾದ ಕಾರಣವಿಲ್ಲದಿರುವುದು, ಅರ್ಥಾತ್ ಯಾವುದಾದರೊಂದು ನಿಮಿತ್ತದಿಂದಾಗಿ ಕ್ರಿಯೋತ್ಪತ್ತಿಗೆ ಅಗತ್ಯವಾದ ಉಪಕ್ರಮ ಸಾಮಗ್ರಿ ಇಲ್ಲದಿರುವುದು ಎಂಬುದೇ ನಿಜವಾಗಿ ಇಲ್ಲಿ ವೈಗುಣ್ಯ ಶಬ್ದದ ಅರ್ಥ.

ಶಬ್ದಶಕ್ತಿಪ್ರಕಾಶಿಕಾದ ೧೮೫ನೇ ಪುಟದಲ್ಲಿ "ಕ್ರಿಯಾವಿರಹಪ್ರಯುಕ್ತಸ್ಯ ಕ್ರಿಯಾಂ—ತರವಿರಹಸ್ಯೈವ ಕ್ರಿಯಾತಿಪಾತತ್ವಾತ್"—ಎಂಬುದೊಂದು ವಾಕ್ಯ ಕಾಣಿಸುತ್ತದೆ. ಒಂದು ಕ್ರಿಯೆಯ ಅಭಾವವು ಮತ್ತೊಂದು ಕ್ರಿಯೆಯ ಅಭಾವದಿಂದ ಸೂಚಿತವಾದರೆ ಅಂಥ ಸೂಚನೆಯೇ ಕ್ರಿಯಾತಿಪತ್ತಿ ಎಂಬುದು ಆ ವಾಕ್ಯಕ್ಕೆ ಅರ್ಥವೆಂದು ತೋರುತ್ತದೆ. ಆದರೆ, ಈ ವಿವರಣೆ ಭೂತಕಾಲಕ್ಕೆ ಸರಿಹೊಂದುತ್ತದೆ. "ಸಃ ಯದಿ ಆಗಚ್ಛತಿ, ಏತಚ್ಚಿತ್ರಂ ಪಶ್ಯತಿ"—ಎಂಬ ವಾಕ್ಯದ ಶಾಬ್ದಬೋಧಕ್ಕೆ ಈ ವಿವರಣೆ ಹೊಂದಿಸುವುದು ಕಷ್ಟ. ಏಕೆಂದರೆ ಇಲ್ಲಿ (ಅದೂರ) ಭವಿಷ್ಯತ್‌ಕಾಲಿಕವಾದ ಕ್ರಿಯೋತ್ಪತ್ತಿವಿಷಯಕವಾದ ಅಭ್ಯೂಹ ಮಾತ್ರವಿದೆ. ಕ್ರಿಯೆ ಉಂಟಾಗಿಯೇ ಇಲ್ಲ ಎನ್ನುವ ಅರ್ಥದಲ್ಲಿ ಈ ವಾಕ್ಯದ ಅರ್ಥವನ್ನು ಜಗ್ಗಲು ಸಾಧ್ಯವಿಲ್ಲ. ಆದ್ದರಿಂದ ಕ್ರಿಯಾತಿಪತ್ತಿ ಶಬ್ದಕ್ಕೆ ಭೂತಕಾಲದಲ್ಲಿ "ಕ್ರಿಯಾ-ಅನುತ್ಪತ್ತಿ"; ಭವಿಷ್ಯತ್‌ಕಾಲದಲ್ಲಿ "ಕ್ರಿಯೋತ್ಪತ್ತಿವಿಷಯಕ ಅಭ್ಯೂಹ" ಹೀಗೆ ಎರಡು ಅರ್ಥಗಳನ್ನು ಸ್ವೀಕರಿಸುವುದು ಅನಿವಾರ್ಯವಾಗುತ್ತದೆ.

ಕ್ರಿಯಾತಿಪತ್ತಿಗೆ ಮಾತ್ರ ಮೀಸಲಾದ ಲಕಾರವೆಂದರೆ, ಲೃಙ್ ಲಕಾರ. ಈ ಮಾತಿಗೆ, ''ಲೃಙ್ ಲಕಾರಕ್ಕೆ ಕ್ರಿಯಾತಿಪತ್ತಿಯೊಂದೇ ಅರ್ಥ'' ಎಂದು ತಾತ್ಪರ್ಯವೇ ಹೊರತು, ''ಕ್ರಿಯಾತಿಪತ್ತಿಯನ್ನು ಲೃಙ್ ಲಕಾರವೊಂದೇ ತೋರಿಸುತ್ತದೆ''—ಎಂದಲ್ಲ. ಹಾಗೆ ನೋಡಹೋದರೆ ಲಟ್, ವಿಧಿಲಿಙ್, ಲೃಟ್, ಲೃಙ್ ಹಾಗೂ ಲೋಟ್ ಈ ಐದು ಲಕಾರಗಳ ಮೂಲಕ ಕ್ರಿಯಾತಿಪತ್ತಿ ಸಂಸ್ಕೃತದಲ್ಲಿ ಕಾಣಿಸಿಕೊಳ್ಳುತ್ತದೆ. ಪ್ರಾಚೀನ ವಾಙ್ಮಯದಲ್ಲಿ ಕ್ರಿಯಾತಿಪತ್ತಿಗೆ ವಿರಳವಾಗಿ ಲುಙ್ ಲಕಾರವೂ ಬರುತ್ತದಂತೆ!

ಪ್ರಾಸಂಗಿಕವಾಗಿ ಒಂದು ಮಾತು : ಲೃಙ್ ಲಕಾರಕ್ಕೆ ಕ್ರಿಯಾತಿಪತ್ತಿ ಒಂದೇ ಅರ್ಥವಾದರೂ ಭಟ್ಟಿ ಕಾವ್ಯದಲ್ಲಿ ''ಕಾಕುತ್ಸ್ಥ! ದಯಿತಾಂ ಸಾಧ್ವೀಂ ತ್ವಮಾಕಂಕ್ಷ್ಯಥಾಃ ಕಥಮ್?'' (೨೧.೧) ಎಂಬ ಪದ್ಯಕ್ಕೆ ಕ್ರಿಯಾತಿಪತ್ತಿಗೆ ಅನುಗುಣವಾದ ಅರ್ಥ ಮಾಡಲು ಸ್ವಲ್ಪ ತಿಣುಕಬೇಕಾಗುತ್ತದೆ. ''ಆಶಂಕಾ'' ಅರ್ಥ ತೆಗೆದುಕೊಂಡರೆ ಸ್ವರಸವಾಗಿ ತಾತ್ಪರ್ಯ ಹೊರಡಿಸಬಹುದು. ಕ್ರಿಯೋತ್ಪತ್ತಿಯಾಗುವ ಹಿಂದಿನ ಕಾಲದ ಸ್ಥಿತಿಯನ್ನು ಆಶಂಕಾ ಎನ್ನುತ್ತಾರೆ. ''He was about to go'' (=ಅವನು ಇನ್ನೇನು ಹೊರಟಿದ್ದ) ''ಸೇತುಃ ಪಿಪತಿಷತಿ'' (=ಸೇತುವೆ ಇನ್ನೇನು ಬೀಳುವುದರಲ್ಲಿದೆ) ಮುಂತಾದ ವಾಕ್ಯಗಳಲ್ಲಿ ಈ ''ಆಶಂಕೆ''ಯನ್ನು ಗುರುತಿಸಬಹುದು. 'ಸನ್' ಪ್ರತ್ಯಯವು ಇಚ್ಛಾರ್ಥಕದಲ್ಲಿ ಬಂದರೂ (ಚಿಕೀರ್ಷತಿ, ಜಿಹೀರ್ಷತಿ ಮುಂತಾದುವುಗಳಲ್ಲಿ) ಕೆಲವೊಮ್ಮೆ ಆಶಂಕಾ ಎನ್ನುವ ಅರ್ಥದಲ್ಲೂ ಬರುತ್ತದೆ ಎಂದು ವೈಯಾಕರಣರು ಹೇಳುತ್ತಾರೆ. ಈ ದೃಷ್ಟಿಯಿಂದ ನೋಡುವುದಾದರೆ ಮೇಲೆ ಉದಾಹರಿಸಿದ ಭಟ್ಟಿಯ ವಾಕ್ಯಕ್ಕೆ ''ರಾಮ! ಸಾಧ್ವಿಯಾದ ಸೀತೆಯನ್ನೇ ಸಂಶಯದಿಂದ ನೋಡಲು ನೀನು ಹೊರಟಿದ್ದೆಯಲ್ಲ!'' —ಎಂಬ ತಾತ್ಪರ್ಯ ಬರುತ್ತದೆ. ಯಾವ ವ್ಯಾಖ್ಯಾಕಾರರೂ ಈ ರೀತಿ ಅರ್ಥವನ್ನು ಈ ಪದ್ಯಕ್ಕೆ ಹೇಳುವುದಿಲ್ಲವಾದರೂ, ಕ್ರಿಯಾತಿಪತ್ತಿಯ ಮಾಮೂಲಿನ ಎರಡು ಅರ್ಥಗಳಲ್ಲಿ ಅರ್ಥಾತ್ ಕ್ರಿಯಾ-ಅನುತ್ಪತ್ತಿ, ಕ್ರಿಯೋತ್ಪತ್ತಿವಿಷಯಕ ಅಭ್ಯೂಹ ಇವೆರಡರಲ್ಲಿ ಯಾವುದೂ ಇಲ್ಲಿ ಸರಿಬರುವುದಿಲ್ಲವೆಂಬುದನ್ನು ಗಮನಿಸಬೇಕು.

ಆಪಾದಕಘಟಕದ ಪ್ರಾರಂಭದಲ್ಲಿ ಯದಿ, ಅಥವಾ ಕೊನೆಯಲ್ಲಿ ಚೇತ್ ಎಂದು ಇರುವುದು ಸಾಮಾನ್ಯ. ಆಪತ್ತಿಘಟಕದಲ್ಲಿ ತದಾ, ತತ್ ಇತ್ಯಾದಿ 'ತದ್' ಶಬ್ದದ ಜನ್ಯ ರೂಪಗಳ ಬಳಕೆ ಇರುತ್ತದೆ. ವಿರಳವಾಗಿ 'ತರ್ಹಿ'ಯೂ ಕಾಣಿಸಿಕೊಳ್ಳುತ್ತದೆ. 'ತರ್ಹಿ'ಯು ಆಪತ್ತಿಘಟಕದಲ್ಲಿ ಬಂದೇ ಬರಬೇಕೆಂಬ ನಿಯಮವನ್ನು ಕೆಲವರು ಇತ್ತೀಚೆಗೆ ಸಂಸ್ಕೃತ ಪಠ್ಯಪುಸ್ತಕಗಳಲ್ಲಿ ಬರೆಯುತ್ತಿದ್ದಾರೆ ಮಾತ್ರವಲ್ಲ, ಹಲವರು ಸಂಸ್ಕೃತ ವಿದ್ವಾಂಸರು ಹಾಗೆಂದು ಪ್ರಾಮಾಣಿಕವಾಗಿ ನಂಬಿಯೂ ಇದ್ದಾರೆ! ನಿಜವೇನೆಂದರೆ ಪ್ರಾಚೀನ ಪ್ರಯೋಗಗಳಲ್ಲಿ 'ತರ್ಹಿ' ಕಾಣಿಸುವುದೇ ಇಲ್ಲ. ಒಂದು ವೇಳೆ ಬಂದರೂ, ಲೃಙ್ ಲಕಾರದಲ್ಲಂತೂ ಎಂದೆಂದಿಗೂ ಬರುವುದಿಲ್ಲ.

ದಿ|| ಚಾರುದೇವ ಶಾಸ್ತ್ರಿಗಳು ತಮ್ಮ ''ಶಬ್ದಾಪಶಬ್ದವಿವೇಕ''ದ ಮೊದಲನೆಯ ಸಂಸ್ಕರಣದಲ್ಲಿ, ''ಆಪಾದಕ ಘಟಕದ ಅಂತ್ಯಭಾಗದಲ್ಲಿ 'ಚೇತ್' ಪ್ರಯೋಗಿಸಲ್ಪಟ್ಟರೆ,

ಆಪತ್ತಿ ಘಟಕದಲ್ಲಿ 'ತರ್ಹಿ' ಬರಲೇಕೂಡದು'' ಎಂದು ಬರೆದಿದ್ದಾರೆ (ಪುಟ ೩೧೮). 'ಯದಿ'ಯ ಪ್ರಯೋಗದ ಬಗ್ಗೆ ಅವರು ಉಲ್ಲೇಖ ಮಾಡಿದಂತೆ ಕಾಣಲಿಲ್ಲ. ಆದರೆ ಅವರದ್ದೇ ಆದ ಮತ್ತೊಂದು ಗ್ರಂಥ ''ಪ್ರಸ್ತಾವ ತರಂಗಿಣಿ''ಯಲ್ಲಿ ಪುಟ ೨೩೬ರಲ್ಲಿ ''ಯದ್ಯತ್ರ ಸರ್ವಂ ಮತದ್ವೈಧಂ ಸಹ್ಯಂ, ತರ್ಹಿ ಕಶ್ಚಿದತ್ರ ವ್ಯವಸಿತಃ ಕೃತಾಂತಃ ।'' ಎಂಬುದೊಂದು ವಾಕ್ಯದಲ್ಲಿ ತರ್ಹಿ ಕಾಣಿಸಿಕೊಂಡಿದೆ. 'ಯದಿ' ಬಂದೆಡೆಯೆಲ್ಲ 'ತರ್ಹಿ' ಬರಲೇಬೇಕೆಂದು ಅವರ ಅಭಿಪ್ರಾಯವಿತ್ತೋ, ಬಂದರೆ ತಪ್ಪಿಲ್ಲ ಎಂಬುದು ಮಾತ್ರವೇ ಅವರ ಹೃದಯವೋ ಗೊತ್ತಾಗುವಂತಿಲ್ಲ.

ಆಪ್ಟೆಯವರ ಸಂಸ್ಕೃತಕೋಶದಲ್ಲಿ ಮೂರನೇ ಸಂಪುಟದ ೧೩೦೩ನೇ ಪುಟದಲ್ಲಿ 'ಯದಿ' ಪದದ ಬಗ್ಗೆ ಇರುವ ವಿವರಣೆಯಲ್ಲಿ **It is usually followed by TARHI and sometimes by TATAH, TADĀ, TAT or ATRA** ಎಂದಿದೆ. ಆದರೆ ಅಲ್ಲೇ ಉದಾಹರಿಸಲಾಗಿರುವ ಯಾವುದೇ ಪ್ರಯೋಗದಲ್ಲೂ 'ತರ್ಹಿ' ಬಂದೇ ಇಲ್ಲ. 'ಯತ್ನೇ ಕೃತೇ ಯದಿ ನ ಸಿಧ್ಯತಿ ಕೋऽತ್ರ ದೋಷಃ ?' ಎಂದು ಅಲ್ಲಿ ಕೊಟ್ಟಿರುವ ಭರ್ತೃಹರಿ ಪ್ರಯೋಗದಲ್ಲೂ 'ತರ್ಹಿ' ಇಲ್ಲ. ಆದರೆ 'ಅತ್ರ' ಎಂಬ ಪದಕ್ಕೆ ತರ್ಹಿ ಎಂದು ಅರ್ಥವೆಂದು ಆವರಣಚಿಹ್ನೆಯಲ್ಲಿ ಕೊಟ್ಟಿದೆ. ನೇರವಾಗಿಯಂತೂ 'ತರ್ಹಿ' ಕಾಣಿಸುತ್ತಿಲ್ಲ. ಅಷ್ಟೇಕೆ, ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯರ ''ಸಂಸ್ಕೃತ ಶಬ್ದಕೋಶ''ದಲ್ಲೂ ಮೂರನೇ ಸಂಪುಟದ ಪುಟ ೧೦೭೭ರಲ್ಲಿ ''ಯದಿ ಪದದ ಪ್ರಯೋಗವಿದ್ದಲ್ಲಿ ಅರ್ಥವು ಸಾಮಾನ್ಯವಾಗಿ ತರ್ಹಿ ಪದದಿಂದ ಪೂರ್ಣವಾಗುವುದು''—ಎಂದು ಬರೆದಿದೆ. ಅಲ್ಲಿ ಸಹ ಇದೇ ಕಥೆ! ತತ್, ತದಾ, ತತಃ ಈ ಮೂರು ಅವ್ಯಯಗಳು ಆಪತ್ತಿ ಘಟಕದಲ್ಲಿ ಬಂದಿರುವ ಉದಾಹರಣೆಗಳು ಅಲ್ಲಿ ಉದಾಹೃತವಾಗಿವೆಯೇ ಹೊರತು 'ತರ್ಹಿ' ಬಂದಿರುವ ಯಾವ ಶ್ಲೋಕವೂ ಅಲ್ಲಿ ಕಣ್ಣಿಗೆ ಬೀಳುವುದಿಲ್ಲ.

೩-೩-೧೩೯ರ 'ಅಷ್ಟಾಧ್ಯಾಯಿ'ಯ ಮೇಲಿನ ಕಾಶಿಕಾದಲ್ಲಿ 'ಯದಿ ಕಮಲಕಮಾಯಾಸ್ಯತ್, ನ ಶಕಟಂ ಪರ್ಯಾಭವಿಷ್ಯತ್' ಎಂದಿದೆ. ಅಲ್ಲೂ 'ತರ್ಹಿ' ಇಲ್ಲ. ೫-೩-೨೧ರ ಅಷ್ಟಾಧ್ಯಾಯಿಯ ಸೂತ್ರ 'ಅನದ್ಯತನೇ ರ್ಹಿಲ್ ಅನ್ಯತರಸ್ಯಾಂ' ಎಂದಿದೆ. ಅಲ್ಲಿ 'ಯರ್ಹಿ', 'ತರ್ಹಿ' ಎಂಬ ಪದಗಳನ್ನು ಉದಾಹರಣೆಯಾಗಿ ಕಾಶಿಕಾಕಾರ ಕೊಡುತ್ತಾನೆ. ಆದರೆ ಅವು ಪ್ರಯೋಗವಾಗಿರುವ ಯಾವ ವಾಕ್ಯದ ಉದಾಹರಣೆಯನ್ನೂ ಕೊಟ್ಟಿಲ್ಲ. ಆಕ್ಷೇಪ ವಾಕ್ಯಗಳಲ್ಲಾಗಲೀ, ಪೂರ್ವಪಕ್ಷ ವಾಕ್ಯಗಳಲ್ಲೇ ಆಗಲಿ (ಶಾಸ್ತ್ರಗ್ರಂಥಗಳಲ್ಲಿ) 'ಕಥಂ ತರ್ಹಿ' ಎಂಬುದೇನೋ ಕಾಣಿಸುತ್ತದೆ.

ಇಷ್ಟೆಲ್ಲಾ ಹೇಳಿದ್ದರ ತಾತ್ಪರ್ಯವೇನೂ, 'ಯದಿ' ಬಂದಾಗ 'ತರ್ಹಿ' ಬರಲೇ ಕೂಡದೆಂದಲ್ಲ. ಏಕೆಂದರೆ ಮೀಮಾಂಸಾಭಾಷ್ಯದ ಜಿಜ್ಞಾಸಾಧಿಕರಣದಲ್ಲಿ ''ಯದ್ಯೇವಂ ನ ತರ್ಹಿ ವೇದಾಧ್ಯಯನಂ ಪೂರ್ವಂ ಗಮ್ಯತೇ ಧರ್ಮಜಿಜ್ಞಾಸಾಯಾಃ ।'' ಎಂದಿದೆ. ಯದಿ ಎನ್ನುವ ಅರ್ಥದಲ್ಲಿ ಏವಂ ಬಂದಿರುವುದೂ ಒಮ್ಮೊಮ್ಮೆ ಗೋಚರವಾಗುತ್ತದೆ. ''ಏವಂ ತರ್ಹಿ ಶ್ರೇಯಸ್ಕರೋ ಜಿಜ್ಞಾಸಿತವ್ಯಃ ಕಿಂ ಧರ್ಮಜಿಜ್ಞಾಸಯಾ ?'' ಎಂದು

ಮತ್ತೊಂದೆಡೆ ಪ್ರಯೋಗ ಕಾಣಿಸುತ್ತದೆ.

ಒಟ್ಟು ಮಥಿತಾರ್ಥವೇನೆಂದರೆ, ಗದ್ಯದಲ್ಲಿ ಒಮ್ಮೊಮ್ಮೆ 'ತರ್ಹಿ' ಬರುವುದುಂಟು. ಪದ್ಯದಲ್ಲಿ ಇಲ್ಲವೇ ಇಲ್ಲವೆನ್ನುವಷ್ಟು ವಿರಳ. 'ಯದಿ' ಬಂದಾಗಲೆಲ್ಲ 'ತರ್ಹಿ' ಬರಲೇ ಬೇಕೆಂದು ಆಧುನಿಕರು ಹೇಳುವ ಮಾತಿಗೆ ಸಾಹಿತ್ಯಾಧಾರವೂ ಇಲ್ಲ, ಶಾಸ್ತ್ರಾಧಾರವೂ ಇಲ್ಲ. ಭಾಗವತದಲ್ಲಿ ೧೦-೩೫-೭ ಹಾಗೂ ೧೧-೩೬-೧ ಈ ಎರಡು ಕಡೆ "ತರ್ಹಿ"— ಎನ್ನುವುದು ಕೇವಲ 'ತದಾ' 'ತದನಂತರಂ' ಎನ್ನುವ ಅರ್ಥದಲ್ಲಿ ಬಂದಿದೆಯೇ ಹೊರತು ಕ್ರಿಯಾತಿಪತ್ತಿಯ ಅರ್ಥದಲ್ಲಿ ಬಂದೇ ಇಲ್ಲ. ಜೊತೆಗೆ ಈ ಎರಡು ಪದ್ಯಗಳಲ್ಲೂ 'ಯದಿ' ಇಲ್ಲ, ಅದರ ಅಪೇಕ್ಷೆಯೂ ಇಲ್ಲ.

'ರಸಗಂಗಾಧರ'ದಲ್ಲೀನೋ (ನಿರ್ಣಯಸಾಗರ ಸಂಸ್ಕರಣ, ಪುಟ ೭೯) 'ಯದಿ'ಯೂ ಬಂದು, 'ತರ್ಹಿ'ಯೂ ಬಂದಿರುವ ಒಂದು ಉದಾಹರಣೆ ನೋಡಸಿಗುತ್ತದೆ :

> ನಿರ್ಮಾಣೇ ಯದಿ ಮಾರ್ಮಿಕೋಽಸಿ ನಿತರಾಮತ್ಯಂತಪಾಕದ್ರವನ್-
> ಮೃದ್ವೀಕಾಮಧುಮಾಧುರೀಮದಪರೀಹಾರೋದ್ಧುರಾಣಾಂ ಗಿರಾಮ್ ।
> ಕಾವ್ಯಂ ತರ್ಹಿ ಸಖೇ ! ಸುಖೇನ ಕಥಯ ತ್ವಂ ಸಂಮುಖೇ ಮಾದೃಶಾಂ
> ನೋ ಚೇದ್ ದುಷ್ಕೃತಮಾತ್ಮನಾ ಕೃತಮಿವ ಸ್ವಾಂತಾದ್ ಬಹಿರ್ಮಾ ಕೃಥಾಃ ॥

ಈ ಪ್ರಯೋಗ ತೀರಾ ಇತ್ತೀಚಿನ ಕವಿಯದಾದ್ದರಿಂದ ಸಂಸ್ಕೃತದ ಪರಂಪರಾನುಗತ ಭಾಷಾಸ್ವರೂಪವನ್ನು ಎಷ್ಟರ ಮಟ್ಟಿಗೆ ಇದು ಪ್ರತಿನಿಧಿಸುತ್ತದೆಯೋ ಹೇಳುವುದು ಕಷ್ಟ.

ಯದಿ ಎನ್ನುವುದು ವೇದದಲ್ಲಿ ಹಲವಾರು ಸಲ ಬರುವುದನ್ನು ಗಮನಿಸಬಹುದು. ಅಲ್ಲೂ 'ತರ್ಹಿ' ಇಲ್ಲ. ಉದಾಹರಣೆಗೆ ಕಾಣ್ವಸಂಹಿತೆಯ ಈ ಮಂತ್ರಗಳನ್ನು ನೋಡಿ :

> ಯದಿ ದಿವಾ ಯದಿ ನಕ್ತಮೇನಾಂಸಿ ಚಕೃಮಾ ವಯಮ್ (೨೨.೨)
> ಯದಿ ಜಾಗ್ರದ್ ಯದಿ ಸ್ವಪ್ನ ಏನಾಂಸಿ ಚಕೃಮಾ ವಯಮ್ (೨೨.೩)

ಋಗ್ವೇದದಿಂದ ಎರಡು ಉದಾಹರಣೆಗಳು :

> ಯದಿ ಸ್ತೋಮಂ ಮಮ ಶ್ರವದ್ ಅಸ್ಮಾಕಂ ಇಂದ್ರಂ ಇಂದವೋ ಮದಂತು (೮-೧-೧೫)
> ಯಜಾಮ ದೇವಾನ್ ಯದಿ ಶಕ್ನವಾಮ (೧-೨೭-೧೩)

'ತರ್ಹಿ' ಎಂಬುದಕ್ಕೆ ನೇರವಾದ ನಿತ್ಯಸಂಬಂಧಿ ಶಬ್ದ 'ಯದಿ' ಅಲ್ಲವೇ ಅಲ್ಲ. ನಿಜವಾಗಿ ಅದು 'ಯರ್ಹಿ'. ತೈತ್ತಿರೀಯ ಸಂಹಿತೆಯಲ್ಲಿನ ಕೆಳಕಂಡ ವಾಕ್ಯವನ್ನು ಮ್ಯಾಕ್ಡೋನಾಲ್ ವಿದ್ಯಾರ್ಥಿಗಳಿಗಾಗಿ ಬರೆದ ತನ್ನ ವೈದಿಕ ವ್ಯಾಕರಣದಲ್ಲಿ ಉದಾಹರಿಸಿದ್ದಾನೆ. (ಪುಟ ೩೬೬) : "ಯರ್ಹಿ ಪ್ರಜಾಃ ಕ್ಷುಧಂ ನಿಗಚ್ಛೇಯುಃ ತರ್ಹಿ ನವರಾತ್ರೇಣಯಜೇತ"

ಕೆಲವು ವೈದಿಕಭಾಷಾರೂಪಗಳನ್ನು ಬಳಸುವ ಭಾಗವತದಲ್ಲಿ 'ಯರ್ಹಿ' ಕಾಣಸಿಗುತ್ತದೆ (ಉದಾಹರಣೆಗಾಗಿ ೧೦-೩೫-೪, ೧೦, ೧೨, ಈ ಮೂರು ಪದ್ಯಗಳನ್ನು ನೋಡಬಹುದು). ಮೊದಲನೆಯದರಲ್ಲಿ ಬರುವ 'ಯರ್ಹಿ'ಗೆ 'ಯದಿ' ಎಂದು ವೀರರಾಘವ ವ್ಯಾಖ್ಯಾನ. ಎರಡನೆಯದಕ್ಕೆ 'ಯತ್ರ' ಎಂಬ ಅರ್ಥ ಹೇಳಬೇಕಾಗುತ್ತದೆ. ಏಕೆಂದರೆ

ಹಿಂದಿನ ಪದ್ಯಗಳ ಪ್ರಕರಣಸ್ವಾರಸ್ಯಾಪೇಕ್ಷೆಯಿಂದ ವೀರರಾಘವವ್ಯಾಖ್ಯಾನದಲ್ಲಿ 'ಅಥರೇ' ಎಂಬ ಅರ್ಥವನ್ನು ಅದಕ್ಕೆ ಕೊಟ್ಟಿದೆ.

'ಯದಿ' ಎನ್ನುವುದಕ್ಕೆ "ಒಂದು ವೇಳೆ, ಇಂಥ ಪರಿಸ್ಥಿತಿಯಿದ್ದಾಗ, ಹೀಗಾದರೆ, ಇಂಥ ಪರಿಸ್ಥಿತಿಯಿದ್ದರೆ" ಇತ್ಯಾದಿ ಅರ್ಥಗಳಿವೆ. ಕೆಲವೊಮ್ಮೆ ಯದಾ, ಯದಿ ಇವೆರಡನ್ನು ಪರಸ್ಪರ ಬದಲಾಯಿಸಿದರೆ ಯಾವ ರೀತಿಯಲ್ಲೂ ತಪ್ಪಾಗುವುದಿಲ್ಲ.

ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ।
ತದಾ ದೇವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥

—ಎಂಬ ಶ್ವೇತಾಶ್ವತರೋಪನಿಷತ್ತಿನ ಮಂತ್ರದಲ್ಲಿ (೬-೨೦) 'ಯದಾ' ಎನ್ನುವುದಕ್ಕೆ ಬದಲಾಗಿ 'ಯದಿ' ಹಾಕಿದಲ್ಲಿ ಅರ್ಥದಲ್ಲೇನೂ ವ್ಯತ್ಯಾಸವಾಗುವುದಿಲ್ಲ.

'ಕೇವಲ', 'ಮಾತ್ರ' (=ಏವ) ಎನ್ನುವ ಅರ್ಥದಲ್ಲಿ 'ಯದಿ' ಬರಲು ಸಾಧ್ಯವಿದೆಯೆಂದು ಊಹಿಸುವುದೂ ಕಷ್ಟವಾದರೂ, ಆ ಅರ್ಥದಲ್ಲಿ ಎರಡು ಪದ್ಯಗಳು 'ಯದಿ' ಯನ್ನು ಉಪಯೋಗಿಸಿರುವುದು ನನ್ನ ಗಮನಕ್ಕೆ ಬಂದಿರುತ್ತದೆ. ಮೊದಲನೇ ಪದ್ಯ ಕುಮಾರದಾಸನ ಪ್ರಶಂಸಾಪರವಾದುದು :

ಜಾನಕೀಹರಣಂ ಕರ್ತುಂ ರಘುವಂಶೇ ಸ್ಥಿತೇ ಸತಿ ।
ಕವಿಃ ಕುಮಾರದಾಸಶ್ಚ ರಾವಣಶ್ಚ ಯದಿ ಕ್ಷಮಃ ॥

ಈ ಪದ್ಯ ಎಲ್ಲಿಯದೆಂದು ನನಗೀಗ ಸರಿಯಾಗಿ ನೆನಪಿಗೆ ಬರುತ್ತಿಲ್ಲ. ಮತ್ತೊಂದು ಪದ್ಯ ಕಾವ್ಯಪ್ರಕಾಶ ಟೀಕೆ 'ಸಂಕೇತ'ದಲ್ಲಿ ಇದೆ. (ಪ್ರಾ.ವಿ.ಸಂ. ಆವೃತ್ತಿಸಂ. ೨, ಪುಟ ೨೦೫)

ವಾಣೀ ಕಾವ್ಯಪ್ರಕಾಶಸ್ಯ ಗುಣತತ್ತ್ವವಿವೇಚನೀ ।
ಸಂಕೇತೇನೈವ ಘಟತೇ ಯದಿ ಕಸ್ಯಾಪಿ ಧೀಮತಃ ॥

ಸಂಸ್ಕೃತ ಆಡುಭಾಷೆಗಳ ಪೈಕಿ ಒಂದು ಆಗಿರುವುದರಿಂದ, ಇದು ಹಬ್ಬಿದ ವಿಸ್ತಾರವಾದ ಪ್ರಪಂಚದಲ್ಲಿ ಅವ್ಯಯಗಳಿಗೆ ಪ್ರಯೋಗವಶಾತ್ ವಿವಿಧಾರ್ಥಗಳು ಬಂದರೆ ಆಶ್ಚರ್ಯವೇನೂ ಇಲ್ಲ.

ಆಪಾದಕ ಘಟಕದಲ್ಲಿ 'ಯದಿ' ಎನ್ನುವುದು ಆರಂಭದಲ್ಲೋ ಮಧ್ಯದಲ್ಲೋ ಅಂತ್ಯದಲ್ಲೋ ಬರಬಹುದು. ಸಾಧಾರಣವಾಗಿ ಆರಂಭದಲ್ಲಿ ಬರುವ ಉದಾಹರಣೆಗಳೇ ಹೆಚ್ಚು. 'ಚೇತ್' ಮಾತ್ರ ಆರಂಭದಲ್ಲಿ ಬರುವುದಿಲ್ಲ. ಹರಿಪ್ರಸಾದ ವೈದಿಕ ಮುನಿಗಳು ತಮ್ಮ 'ನ್ಯಾಯಸೂತ್ರ ವೈದಿಕ ವೃತ್ತಿ'ಯಲ್ಲಿ ಕೆಲವೊಮ್ಮೆ 'ಚೇತ್'ಅನ್ನು ವಾಕ್ಯಪ್ರಾರಂಭದಲ್ಲಿಯೇ ಪ್ರಯೋಗಿಸಿರುವುದು ಗೋಚರಿಸುತ್ತದೆ. ಸಂಸ್ಕೃತದಲ್ಲೆಲ್ಲೂ ಬೇರೆ ಕಡೆ ಇದು ಕಣ್ಣಿಗೆ ಬೀಳುವುದಿಲ್ಲವಾದ್ದರಿಂದ, ಹರಿಪ್ರಸಾದರ ಪ್ರಯೋಗ ಚಿಂತ್ಯ.

'ಯದಿ' ಅಥವಾ 'ಚೇತ್' ಇವೆರಡರಲ್ಲಿ ಒಂದನ್ನು ಆಪಾದಕಘಟಕ ಒಳಗೊಳ್ಳಬೇಕೇ ಹೊರತು ಎರಡನ್ನೂ ಅಲ್ಲ. ಏಕೆಂದರೆ ಹಾಗೆ ಎರಡನ್ನೂ ಪ್ರಯೋಗಿಸುವುದು ಕೇವಲ

ಅನವಶ್ಯಕವಾದ ಪುನರುಕ್ತಿ ಮಾತ್ರ. ಶಬ್ದಕಲ್ಪದ್ರುಮದ ಎರಡನೇ ಸಂಪುಟದ ೪೫೫ನೇ ಪುಟದಲ್ಲಿ "ಶಬ್ದಾರ್ಥಚಿಂತಾಮಣಿ ಗ್ರಂಥದಲ್ಲಿ ಉದ್ಧರಿಸಲ್ಪಟ್ಟ ಪದ್ಯ" ಎಂಬ ಸಂಪಾದಕೀಯ ಟಿಪ್ಪಣಿಯೊಡನೆ ಕೆಳಕಂಡ ಪದ್ಯ ಕೊಡಲಾಗಿದೆ :

ಸತ್ಯಂ ಚೇದ್ ಗುರುವಾಕ್ಯಮೇವ ಪಿತರೋ ದೇವಾಶ್ಚ ಚೇದ್ ಯೋಗಿನೀ
ಪ್ರೀತಾ ಚೇತ್ ಪರದೇವತಾ ಚ ಯದಿ ಚೇದ್ ವೇದಾಃ ಪ್ರಮಾಣಂ ಹಿ ಚೇತ್ ।
ಶಾಕ್ತೀಯಂ ಯದಿ ದರ್ಶನಂ ಭವತಿ ಚೇದಾಜ್ಞಾಽಪ್ಯಮೋಘಾಽಸ್ತಿ ಚೇತ್
ಸ್ವಾತಂತ್ರ್ಯ ಯದಿ ಕೌಲಿಕಾಶ್ಚ **ಯದಿ ಚೇತ್** ಸ್ಯಾನ್ಮೇ ಜಯಃ ಸರ್ವದಾ ॥

ಈ ಪದ್ಯದ ಚತುರ್ಥಪಾದದಲ್ಲಿ 'ಯದಿ' ಹಾಗೂ 'ಚೇತ್' ಎರಡನ್ನೂ ಪ್ರಯೋಗಿಸಿರುವುದು ಸಂಸ್ಕೃತಭಾಷಾಮರ್ಯಾದೆಗೆ ವಿರುದ್ಧವಾದದ್ದೆಂದು ಹೇಳದೇ ವಿಧಿಯಿಲ್ಲ. ಈ ಪದ್ಯಕರ್ತೃವಿನ ಅಶಕ್ತಿಯನ್ನು ಇದು ತೋರಿಸುತ್ತದೆಯಲ್ಲದೆ, ಮತ್ತೇನನ್ನೂ ಅಲ್ಲ.

'ಯದಿ' ಎನ್ನುವುದಕ್ಕೆ 'ಚೇತ್' ಎಂಬುದಲ್ಲದೇ 'ಯದ್ಯುವಾ' ಎಂಬ ಮತ್ತೊಂದು ಪರ್ಯಾಯಪದ ಬೇರೆ ಇದೆಯಂತೆ. ಶಬ್ದಕಲ್ಪದ್ರುಮದ ೫ನೇ ಸಂಪುಟದಲ್ಲಿ ಈ ಮಾತಿಗೆ ಪ್ರಮಾಣವಾಗಿ "ಯದ್ಯುವಾ ಅಲ್ಪತರಸಂಭಾರಃ ಸ್ಯಾದಪಿ ಪಶುನೈವ ಕುರ್ಯಾದಿತಿ; ಯದ್ಯುವೇತಿ ನಿಪಾತಸಮುದಾಯೋ ಯದ್ಯರ್ಥೇ—" ಎಂಬ 'ತಿಥ್ಯಾದಿತತ್ತ್ವಂ' ಎಂಬ ಗ್ರಂಥದ ವಾಕ್ಯವನ್ನು ಉದ್ಧರಿಸಲಾಗಿದೆ.

'ಚೇತ್' ಎನ್ನುವುದು ಸಂದೇಹವಿಲ್ಲದಿದ್ದಾಗ್ಯೂ ಸಂದೇಹವಿರುವಂತೆ ತೋರ್ಪಡಿಸಿಕೊಳ್ಳುವ ಅರ್ಥದಲ್ಲಿಯೂ ಪ್ರಯೋಗಿಸಲ್ಪಡುವುದುಂಟು. ಮೇಲಿನ ಶಾರ್ದೂಲವಿಕ್ರೀಡಿತದ ಪದ್ಯ ಇದಕ್ಕೆ ಉದಾಹರಣೆ. ಮತ್ತೊಂದು ಉದಾಹರಣೆಯನ್ನು ಭೋಜನ 'ಚಂಪೂರಾಮಾಯಣ'ದಲ್ಲಿ (೧–೨) ನೋಡಬಹುದು :

ಉಚ್ಚೈರ್ಗತಿರ್ಜಗತಿ ಸಿದ್ಧ್ಯತಿ ಧರ್ಮತಶ್ಚೇತ್
ತಸ್ಯ ಪ್ರಮಾ ಚ ವಚನೈಃ ಕೃತಕೇತರೈಶ್ಚೇತ್ ।
ತೇಷಾಂ ಪ್ರಕಾಶನದಶಾ ಚ ಮಹೀಸುರೈಶ್ಚೇತ್
ತಾನಂತರೇಣ ನಿಪತೇತ್ ಕ್ವ ನು ಮತ್ಪ್ರಣಾಮಃ ॥

ಇತ್ತೀಚೆಗೆ ಬಳಕೆಗೆ ಬರುತ್ತಿರುವ ಎರಡು ವಾಕ್ಯಮಾದರಿಗಳ ಬಗ್ಗೆ ಇಲ್ಲಿ ಸ್ವಲ್ಪ ವಿಮರ್ಶೆ ಮಾಡುವುದು ಅಗತ್ಯವೆನ್ನಿಸುತ್ತದೆ.

**ಮೊದಲನೇ ವಾಕ್ಯ :** ಸಃ ಪಂಡಿತಶ್ಚೇದಪಿ ನ ಸಜ್ಜನಃ ॥

ಈ ವಾಕ್ಯ ಸಂಸ್ಕೃತದ ಭಾಷಾಸ್ವರೂಪಕ್ಕೆ ಅಸಂಗತವಾದದ್ದು. ನಿಜವಾಗಿ ಈ ವಾಕ್ಯ "ಯದ್ಯಪಿ ಸಃ ಪಂಡಿತಃ ತಥಾಽಪಿ ನ ಸಜ್ಜನಃ" ಎಂದೋ, "ಸಃ ಪಂಡಿತೋಽಪಿ ನ ಸಜ್ಜನಃ" ಎಂದೋ, "ಸಃ ಪಂಡಿತಃ ಸನ್ನಪಿ ನ ಸಜ್ಜನಃ" ಎಂದೋ ಇರಬೇಕು. 'ಚೇದಪಿ' ಎನ್ನುವ ಪ್ರಯೋಗ 'ಯದ್ಯಪಿ' ಎನ್ನುವುದಕ್ಕೆ ಪರ್ಯಾಯವಾಗಿ ಎಲ್ಲೂ ಪ್ರಯೋಗವಾಗಿಲ್ಲ ಮಾತ್ರವಲ್ಲ, ಅರ್ಥದ ದೃಷ್ಟಿಯಿಂದಲೂ ಸ್ಪಷ್ಟವಾಗಿ ಅನ್ವಯ

ವನ್ನು ಉಂಟುಮಾಡುವುದಿಲ್ಲ. ಮತ್ತೊಂದು ಅಭಿಪ್ರಾಯವನ್ನು ಅಪೇಕ್ಷಿಸುವ ಅರ್ಥಾಂಗೀಕಾರ ಎಂಬುದು 'ಯದ್ಯಪಿ'ಯ ಅರ್ಥ. 'ಚೇದಪಿ' ಎಂಬುದಕ್ಕೆ ಏನರ್ಥ ವೆಂದು ಅದನ್ನು ಹಾಗೆ ಪ್ರಯೋಗಿಸುವ ಮಹಾಶಯರೇ ಹೇಳಬೇಕು.

**ಎರಡನೇ ವಾಕ್ಯ** : ಯದಿ ದೇವದತ್ತಃ ಆಗಚ್ಛತಿ ಸ್ಮ, ತರ್ಹಿ ಏತಚ್ಚಿತ್ರಂ ಪಶ್ಯತಿ ಸ್ಮ॥

ಈ ವಾಕ್ಯವಂತೂ ಅಭಿನವ ವಿಶ್ವಾಮಿತ್ರಸೃಷ್ಟಿ! 'ಸ್ಮ' ಎನ್ನುವ ನಿಪಾತವನ್ನು ಕ್ರಿಯಾತಿಪತ್ತಿಯ ಅರ್ಥದಲ್ಲಿ ಪ್ರಯೋಗಿಸಿ, ಸ್ವಯಂ ಪಾಣಿನಿಗೇ ಸವಾಲೆಸೆಯುವ ಧೈರ್ಯ ಇಲ್ಲಿ ಗೋಚರವಾಗುತ್ತದೆ.

ಹೀಗೆ ಪ್ರಯೋಗಿಸಲು ಕಾರಣವಿಷ್ಟೆ : "ನಾನು ಅಲ್ಲಿಗೆ ಹೋದಾಗ ಅವನು ಚಿತ್ರ ವನ್ನು ನೋಡುತ್ತಿದ್ದ." "ಅವನು ಇಲ್ಲಿಗೆ ಬಂದಿದ್ದರೆ ಚಿತ್ರವನ್ನು ನೋಡುತ್ತಿದ್ದ." ಈ ಎರಡು ವಾಕ್ಯಗಳಲ್ಲೂ 'ಇದ್ದ' ಎಂಬ ಪ್ರತ್ಯಯದ ಬಳಕೆಯಾಗಿದೆ. ಮೊದಲನೆಯ 'ಇದ್ದ' ಪ್ರತ್ಯಯವು ಅಸಂಪೂರ್ಣ ಭೂತಕಾಲದಲ್ಲೂ ಎರಡನೆಯ 'ಇದ್ದ' ಪ್ರತ್ಯಯವು ಕ್ರಿಯಾತಿಪತ್ತಿಯ ಅರ್ಥದಲ್ಲೂ ಪ್ರಯೋಗಗೊಂಡಿದೆ. ಈ ಎರಡೂ ಅರ್ಥಗಳನ್ನು ಹೊರಡಿಸುವ ಸಾಮರ್ಥ್ಯ ಅದಕ್ಕಿರುವುದರಿಂದ ಅಂಥ ಎರಡು ಪ್ರಯೋಗಗಳು ಸಾಧ್ಯ ವಾಗಿವೆ.

ಆದರೆ, ಯಾವ ಭಾಷೆಯಲ್ಲಿ ? ಕನ್ನಡದಲ್ಲಿ, ಸಂಸ್ಕೃತದಲ್ಲಲ್ಲ ! ಸಂಸ್ಕೃತದ 'ಸ್ಮ' ನಿಪಾ ತಕ್ಕೆ ಕ್ರಿಯಾತಿಪತ್ತಿಯ ಅರ್ಥ ಬರಲು ಸಾಧ್ಯವೇ ಇಲ್ಲ. ಅದಕ್ಕೆ ಅಸಂಪೂರ್ಣ ಭೂತ ಕಾಲದ ಅರ್ಥವೇನೋ ಬರುತ್ತದೆ. ಆದ್ದರಿಂದ ಮೇಲ್ಕಾಣಿಸಿದ ಎರಡು ವಾಕ್ಯಗಳಲ್ಲಿ ಮೊದಲಿನ ವಾಕ್ಯದ ಸಂಸ್ಕೃತಾನುವಾದ "ಮಯಿ ತತ್ರ ಗತೇ ಸಃ ಚಿತ್ರಂ ಪಶ್ಯತಿ ಸ್ಮ।" ಎಂಬುದು ಸರಿಯಾಗುತ್ತದೆ. ಆದರೆ ಎರಡನೇ ವಾಕ್ಯಕ್ಕೆ ಲೃಙ್ ಪ್ರಯೋಗಿಸದೇ ನಿರ್ವಾ ಹವೇ ಇಲ್ಲ. ಹೀಗಾಗಿ, "ಯದಿ ಸಃ ಆಗಮಿಷ್ಯತ್, ಚಿತ್ರಂ ಅದ್ರಕ್ಷ್ಯತ್" ಎಂಬುದೇ ಸರಿಯಾದ ಸಂಸ್ಕೃತಾನುವಾದ.

'ಯದಿ' ಎನ್ನುವುದು ಬಂದಾಗಲೆಲ್ಲ 'ತರ್ಹಿ' ಬರಲೇಬೇಕೆಂಬ ನಿಯಮವಿಲ್ಲವೆಂದು ಹಿಂದೆಯೇ ತಿಳಿಸಿದೆಯಷ್ಟೆ. 'ಏವಂ ತರ್ಹಿ' ಎಂಬ ಮೀಮಾಂಸಾಭಾಷ್ಯವನ್ನೂ ಉದಾ ಹರಿಸಲಾಯಿತು. ಆಪಾದಕ ಘಟಕದ ವಾಕ್ಯಖಂಡಕ್ಕೆ ಬದಲಾಗಿ ಕೇವಲ 'ಯದಿ' ಅಷ್ಟೇ ಇದ್ದಲ್ಲಿ 'ಯದಿ'ಯ ಮುಂದುಗಡೆಯೇ 'ತರ್ಹಿ' ಬರುವುದೂ ಶಾಸ್ತ್ರಗಳಲ್ಲಿ ಒಮ್ಮೊಮ್ಮೆ ಕಂಡುಬರುವುದುಂಟು. ಮಹಾಭಾಷ್ಯದಲ್ಲಿ 'ಯದಿ ತರ್ಹಿ ನ ವ್ಯೇತೀತ್ಯವ್ಯಯಮ್' ಎಂದು ಬರುವ ಒಂದು ವಾಕ್ಯ (೩–೨–೮೪) ಕಾಣಿಸುತ್ತದೆ (ನಿರ್ಣಯಸಾಗರ ಮುದ್ರಣ, ಪು. ೧೬೫). 'ಇದಂ ತರ್ಹಿ,' 'ಏವಂ ತರ್ಹಿ' ಈ ರೀತಿಯ ಪ್ರಯೋಗಗಳು ಮಹಾಭಾಷ್ಯದಲ್ಲಿ ಸಾಮಾನ್ಯ. ಇದರ ಜೊತೆಗೆ 'ತತ್ ತರ್ಹಿ'ಯೂ ಗೋಚರವಾಗುತ್ತದೆ. 'ಯದ್ಯೇವಂ' ಕೂಡಾ ಅಲ್ಲಲ್ಲಿ ಕಣ್ಣಿಗೆ ಬೀಳುತ್ತದೆ. ಲೃಙ್ ಲಕಾರದ ಬಗೆಗೆ "ಕ್ರಿಯೆ ಉಂಟಾಗುವ ಸಂಭವದಲ್ಲಿಯೂ ಸಹ ಆ ಕ್ರಿಯೆಯ ಸಾಧನ ಇಲ್ಲದಿದ್ದರೆ ಲೃಙ್ ಲಕಾರ ಬರುವುದಿಲ್ಲ"

ಎಂದು ವಾರ್ತಿಕದಲ್ಲಿದೆ (ಪು. ೨೩೮). "ಅಭೋಕ್ಷ್ಯತ ಭವಾನ್ ಮಾಂಸೇನ ಯದಿ ಮತ್‌ಸಮೀಪ ಆಸಿಷ್ಯತ" (=ನನ್ನ ಹತ್ತಿರ ಕುಳಿತುಕೊಂಡಿದ್ದರೆ ಮಾಂಸವನ್ನು ನೀನು ತಿನ್ನಬಹುದಿತ್ತು) ಎಂಬ ವಾಕ್ಯದಲ್ಲಿ 'ಮಾಂಸಭಕ್ಷಣ' ಸಾಧನ ಎಂದೂ (ಹತ್ತಿರ ಕುಳಿತು ಕೊಳ್ಳುವಿಕೆ) ಸಾಧ್ಯ ಎಂದೂ ಅಲ್ಲಿಯ ದೃಷ್ಟಿಕೋನವಿರಬಹುದು. ಆದರೆ ಪತಂಜಲಿಗೆ ಇದು ಒಪ್ಪಿಗೆಯಿಲ್ಲ. "ಸಾಧನ ಇಲ್ಲದಿದ್ದಲ್ಲಿ ಕ್ರಿಯೆಯೂ ಇಲ್ಲ. ಆದ್ದರಿಂದ "ಲಿಙ್ ನಿಮಿತ್ತೇ ಲೃಙ್ ಕ್ರಿಯಾತಿಪತ್ತೌ" ೩-೩-೧೩೯ರಎಂಬ ಸೂತ್ರದಲ್ಲಿ "ಸಾಧನಾಪತ್ತೌ" ಎಂಬ ಮಾತು ಸೇರಿಸುವ ಅಗತ್ಯವೇನೂ ಇಲ್ಲ: ಇದು ಪತಂಜಲಿಮಹರ್ಷಿಯ ನಿಲವು.

ತಾರ್ಕಿಕರು "ಯತ್ರ ಧೂಮಸ್ತತ್ರ ವಹ್ನಿಃ" ಎಂದು ಹೇಳಬಹುದಾದರೂ "ಯತ್ರ ವಹ್ನಿಸ್ತತ್ರ ಧೂಮಃ" ಎಂದು ಹೇಳಲಾಗುವುದಿಲ್ಲವೆನ್ನುತ್ತಾರೆ. ಕ್ರಿಯಾತಿಪತ್ತಿ ಹಾಗೂ 'ಯದಿ/ಚೇತ್'ಗಳ ಸಂಬಂಧವೂ ಹೀಗೆಯೇ. ಕ್ರಿಯಾತಿಪತ್ತಿ ಬಂದಾಗ 'ಯದಿ/ಚೇತ್' ಗಳು ಬರುವುವಾದರೂ. 'ಯದಿ/ಚೇತ್'ಗಳು ಬಂದಾಗಲೆಲ್ಲ ಕ್ರಿಯಾತಿಪತ್ತಿಯ ಅರ್ಥವೇ ಬರುತ್ತದೆಂದು ಹೇಳಲಾಗದು. ಕ್ಷಿಪ್ರಾರ್ಥಕದ್ಯೋತಕವಾಗಿಯೂ 'ಚೇತ್' ಬರುತ್ತದೆ; ('ಉಪಾಧ್ಯಾಯಃ ಚೇತ್ ಆಗತಃ, ಕ್ಷಿಪ್ರಮಧ್ಯೇಷ್ಯಾಮಹೇ') (ಮಹಾಭಾಷ್ಯ ೩-೩-೧೩೩) ಎನ್ನುವ ಕಡೆ ಹೇಗೋ ಹಾಗೆ. "ಉಪಾಧ್ಯಾಯಶ್ಚೇದಾಗತಃ ಆಶಂಸೇ ಯುಕ್ತೋऽಧೀಯ" (ಅಲ್ಲೇ) ಎನ್ನುವಾಗ 'ಹಾರೈಕೆ' ಎನ್ನುವ ಅರ್ಥದ ಪುಷ್ಟಿ ಇದಕ್ಕಿದೆ. ನಿರ್ಣಯರೂಪವಾದ ಅಭಿಪ್ರಾಯ ಇರುವಾಗ, ಭವಿಷ್ಯತ್‌ಕಾಲದ ಅರ್ಥದಲ್ಲಿಯೇ ಭೂತಕಾಲಿಕ ಕೃದಂತದ್ದೇ ಪ್ರಯೋಗ ಮಾಡುವಾಗ ಸಹ 'ಚೇತ್' ಬರುತ್ತದೆ: "ದೇವ ಶ್ಚೇದ್ ದೃಷ್ಟಃ ಸಂಪನ್ನಾಃ ಶಾಲಯಃ" (ಅಲ್ಲೇ) (=ಮಳೆ ಬಂತೋ, ಭತ್ತ ತೆನೆ ಬಿಟ್ಟಿತು ಎಂದೇ ಲೆಕ್ಕ).

ಕ್ರಿಯಾತಿಪತ್ತಿಯು ಭವಿಷ್ಯದರ್ಥ ಹಾಗೂ ಭೂತಾರ್ಥ ಎಂದು ಎರಡು ಬಗೆಯಾಗಿ ರುವುದೆಂದು ಪಾಣಿನಿ ಹೇಳಿದರೂ (೩-೩-೧೩೯, ೧೪೦) ಲೃಙ್ ಲಕಾರವು ಕೇವಲ ಭೂತಾರ್ಥಕ್ರಿಯಾತಿಪತ್ತಿಯನ್ನು ಮಾತ್ರ ಹೇಳುವುದೆಂದು ಜಗದೀಶನ ಸ್ಪಷ್ಟ ನಿಲವು. ಈ ವಿಚಾರದಲ್ಲಿ ಆತನ ಮಾತು ಹೀಗಿದೆ:

> ಕ್ರಿಯಾತಿಪಾತೇ ಕಾಲಸ್ಯ ಭಾವಿನಃ ಪ್ರಾಕ್ತನಸ್ಯ ಚ।
> ವೈಶಿಷ್ಟ್ಯಬೋಧಿಕಾ ಯಾ ತಿಙ್ ಲೃಟ್ ಚ ಲೃಙ್ ಚ ಕ್ರಮಾದಿಮೇ॥ (ಪುಟ ೧೮೪)

ಈಗ 'ಯದಿ' ಹಾಗೂ 'ಚೇತ್' ಬರುವ ಕೆಲವು ಪ್ರಾಚೀನ ಪದ್ಯಗಳನ್ನು ಮಾದರಿ ಗಾಗಿ ನೋಡಬಹುದು.

**'ರಾಮಾಯಣ'ದಿಂದ**

> ಅಹಂ ಹಿ ವಿಷಮದ್ಯೈವ ಪೀತ್ವಾ ಬಹು ತವಾಗ್ರತಃ।
> ಪಶ್ಯತಸ್ತೇ ಮರಿಷ್ಯಾಮಿ ರಾಮೋ ಯದ್ಯಭಿಷಿಚ್ಯತೇ (ಅ. ೧೨-೪೭)

ಏಕಾಹಮಪಿ ಪಶ್ಯೇಯಂ ಯದ್ಯಹಂ ರಾಮಮಾತರಮ್।
ಅಂಜಲಿಂ ಪ್ರತಿಗೃಹ್ಣನ್ತೀಂ ಶ್ರೇಯೋ ನನು ಮೃತಿರ್ಮಮ ॥ (ಅ. ೧೨–೪೮)

ಯದಿ ವಾಚಂ ಪ್ರದಾಸ್ಯಾಮಿ ದ್ವಿಜಾತಿರಿವ ಸಂಸ್ಕೃತಾಮ್ ।
ರಾವಣಂ ಮನ್ಯಮಾನಾ ಮಾಂ ಸೀತಾ ಭೀತಾ ಭವಿಷ್ಯತಿ ॥ (ಸುಂ. ೩೦-೧೮)

'ಭಗವದ್ಗೀತೆ'ಯಿಂದ

ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।
ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ (೨–೩೩)

ಯದಿ ಮಾಮಪ್ರತೀಕಾರಂ ಅಶಸ್ತ್ರಂ ಶಸ್ತ್ರಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ (೧–೪೬)

ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ (೩–೨೩)

ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್।
ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ॥ (೩–೨೪)

'ನೈಷಧೀಯ ಚರಿತ'ದಿಂದ

ಯದಿ ತ್ರಿಲೋಕೀ ಗಣನಾಪರಾ ಸ್ಯಾತ್ ತಸ್ಯಾಃ ಸಮಾಪ್ತಿರ್ಯದಿ ನಾಯುಷಃ ಸ್ಯಾತ್ ।
ಪಾರೇ ಪರಾರ್ಧಂ ಗಣಿತಂ ಯದಿ ಸ್ಯಾತ್ ಗಣೇಯನಿಶ್ಶೇಷಗುಣೋऽಪಿ ಸ ಸ್ಯಾತ್ ॥
(೩_೪೦)

ಯದಿ ಪ್ರಸಾದೀಕುರುತೇ ಸುಧಾಂಶೋರೇಷಾ ಸಹಸ್ರಾಂಶಮಪಿ ಸ್ಮಿತಸ್ಯ।
ತತ್ ಕೌಮುದೀನಾಂ ಕುರುತೇ ತಮೇವ ನಿಮಿತ್ಯ ದೇವಃ ಸಫಲಂ ಚ ಜನ್ಮ ॥ (೭–೪೩)

'ಕಿರಾತಾರ್ಜುನೀಯ'ದಿಂದ

ಯದಿ ಪ್ರಮಾಣೀಕೃತಮಾರ್ಯಚೇಷ್ಟಿತಂ ಕಿಮಿತ್ಯದೋಷೇಣಪಿ ತಿರಸ್ಕೃತಾ ವಯಂ ?
ಅಯಾತಪೂರ್ವಾ ಪರಿವಾದಗೋಚರಂ ಸತಾಂ ಹಿ ವಾಣೀ ಗುರುಮೇವ ಭಾಷತೇ ॥ (೧೪–೧೧)

'ಅಮರುಶತಕ'ದಿಂದ

ಯದಿ ವಿನಿಹಿತಾ ಶೂನ್ಯಾ ದೃಷ್ಟಿಃ ಕಿಮು ಸ್ಥಿರಕೌತುಕಾ ?
ಯದಿ ವಿರಚಿತೋ ಮೌನೇ ಯತ್ನಃ ಕಿಮು ಸ್ಫುರಿತೋऽಧರಃ ?
ಯದಿ ನಿಯಮಿತಂ ಧ್ಯಾನೇ ಚೇತಃ ಕಥಂ ಪುಲಕೋದ್ಗಮಃ
ಕೃತಮಭಿನಯೈರ್ದೃಷ್ಟೋ ಮೌನಃ ಪ್ರಸೀದ, ವಿಮುಚ್ಯತಾಮ್ ॥ (೧೪ನೇ ಪದ್ಯ)

'ವೇಣೀಸಂಹಾರ'ದಿಂದ

ಯದಿ ಸಮರಮಪಾಸ್ಯ ನಾಸ್ತಿ ಮೃತ್ಯೋರ್
ಭಯಮಿತಿ ಯುಕ್ತಮಿತೋऽನ್ಯತಃ ಪ್ರಯಾತುಮ್ ।
ಅಥ ಮರಣಮವಶ್ಯಮೇವ ಜಂತೋಃ
ಕಿಮಿತಿ ಮುಧಾ ಮಲಿನಂ ಯಶಃ ಕುರುಧ್ವೇ ॥ (೩. ೬)

ಕೆಲವೊಮ್ಮೆ 'ಚೇತ್' ಅಥವಾ 'ಯದಿ' ಎರಡರಲ್ಲಿ ಒಂದು ಸಹ ಇಲ್ಲದಿದ್ದಾಗ್ಯೂ ಪ್ರಕರಣವಶಾತ್ ಕ್ರಿಯಾತಿಪತ್ತಿಯ ಅರ್ಥ ಬರುವುದುಂಟು. ಅದಕ್ಕೆ ಉದಾಹರಣೆಗಳು ಹೇರಳವಾಗಿ ಲಭ್ಯವಾಗುತ್ತವೆ. ಭಗವದ್ಗೀತೆಯಲ್ಲೇ ಬರುವ ಕೆಳಕಂಡ ಎರಡು ಪದ್ಯಗಳನ್ನು ಈ ಮಾತಿಗೆ ಉದಾಹರಣೆಯಾಗಿ ನೀಡಬಹುದು:

ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ (೧೨-೯)
ಅಭ್ಯಾಸೇಽಪ್ಯಸಮರ್ಥೋಽಸಿ, ಮತ್‌ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ (೧೨-೧೦)

ಕ್ರಿಯಾತಿಪತ್ತಿಗೂ ಸತಿಸಪ್ತಮೀಪ್ರಯೋಗಕ್ಕೂ ಇರುವ ಸಂಬಂಧದ ಬಗೆಯೂ ವಿಚಾರ ಮಾಡುವ ಅಗತ್ಯವಿದೆ.

ಈಗ ತಿಳಿದಂತೆ ಕನ್ನಡ ಭಾಷೆಯು ಚರಿತ್ರೆಯ ಉತ್ತರಬಿಂದು ಕ್ರಿಸ್ತಶಕ ೫ನೆಯ ಶತಮಾನದ ಮಧ್ಯಭಾಗ. ಕ್ರಿಸ್ತಶಕ ಸುಮಾರು ೪೫೦ರ ಹಲ್ಮಿಡಿಶಾಸನ ಕನ್ನಡಲಿಪಿಯಲ್ಲಿ ಹಾಗೂ ಕನ್ನಡಭಾಷೆಯಲ್ಲಿ ದೊರೆತ ಮೊತ್ತಮೊದಲಿನ ಮಾದರಿ ತುಣುಕು. ಇಲ್ಲಿಂದಲೇ ಕನ್ನಡ ಭಾಷೆಯ ಚರಿತ್ರೆಯನ್ನು ಆರಂಭಿಸುವುದೆಂದರೆ, ಅಂದಿನಿಂದಲೇ ಕನ್ನಡ ಭಾಷೆ ಆರಂಭಿಸಿತೆಂದು ಅರ್ಥವಲ್ಲ ; ಕಾರಣ, ಆ ಬಿಂದುವಿನಲ್ಲಿ ಕನ್ನಡದ ಆ ಬರಹ ಸ್ವಯಂಭೂ ಲಿಂಗದಂತೆ ಇದ್ದಕ್ಕಿದ್ದಂತೆ ತಲೆದೋರಿದ್ದಲ್ಲ. ಒಂದು ಭಾಷೆಗೆ ವಿಶಿಷ್ಟರೂಪ ಬರ ಬೇಕಿದ್ದರೆ, ಆದಿಮಾನವಸ್ಥಿತಿಯಿಂದ ಆರಂಭಿಸಿ, ಎಷ್ಟೋ ಘಟ್ಟಗಳನ್ನು ದಾಟಿ ಬರ ಬೇಕಾಗುತ್ತದೆ. ದ್ರಾವಿಡಭಾಷಾವರ್ಗದಲ್ಲಿ ಉತ್ತರ, ಮಧ್ಯ ಮತ್ತು ದಕ್ಷಿಣದ್ರಾವಿಡ ಗಳೆಂಬ ಮೂರು ಕವಲುಗಳಾಗಿ ಒಡೆಯಲು ಬಹಳಷ್ಟು ಕಾಲ ಸಾಗಿರಬೇಕು. ದಕ್ಷಿಣ ದ್ರಾವಿಡದಲ್ಲಿ ಗುಂಪಾಗಿದ್ದ ಭಾಷಾರೂಪಗಳಲ್ಲಿ ಒಂದೊಂದೇ ತಮ್ಮ ವಿಶಿಷ್ಟರೂಪಗಳನ್ನು ಪಡೆದುಕೊಳ್ಳಲು ಮತ್ತಷ್ಟು ಕಾಲಾವಧಿ ಸಂದಿತು. ಹೀಗೆ ಈ ಗುಂಪಿನಲ್ಲಿ ಕನ್ನಡ ತನ್ನ ತನವನ್ನು ಪಡೆದುಕೊಳ್ಳಲು ಮತ್ತಷ್ಟು ಕಾಲಾವಧಿ ಸಂದಿತು. ಆಮೇಲೆ ಅದರ ವಾಗ್ವ್ಯವಹಾರದ ಸೀಮಿತಮಿತಿಯನ್ನು ವಿಸ್ತರಿಸಿ, ಅದನ್ನು ಲಿಖಿತರೂಪಕ್ಕಿಳಿಸಲು ಸಾಧ್ಯ ವಾಗುವಂತೆ ಅದಕ್ಕೆ ಅದರದೇ ಆದ ಲಿಪಿಸಂಸ್ಕಾರವನ್ನೊದಗಿಸಲು ಮತ್ತಷ್ಟು ಕಾಲ ಬೇಕಾಯಿತೆಂಬುದು ಸ್ಪಷ್ಟ. ಕಾರಣ, ಲಿಪಿಯಿರದ ತುಳು, ಕೊಡಗು ಮುಂತಾದ ಭಾಷೆ ಗಳಿಗೆ ಲಿಪಿಯನ್ನೊದಗಿಸಲು ಇಂದಿಗೂ ಕಷ್ಟವಾಗಿದೆಯೆಂದಾಗ, ನಮಗಿದರ ಮನವರಿಕೆ ಯಾದೀತು. ಹೀಗಾಗಿರುವುದರಿಂದ, ಭಾಷೆಯ ಚರಿತ್ರೆಯನ್ನು ಆರಂಭಿಸುವಾಗ, ನಮ್ಮ ನಮ್ಮ ಭಾಷೆಗಳು ಅತ್ಯಂತ ಪ್ರಾಚೀನವಾದುವೆಂದು ನಮ್ಮನಮ್ಮ ಅಭಿಮಾನಕ್ಕನುಸರಿಸಿ, ಹೇಳಿಕೊಳ್ಳುವುದು, ಹೆಮ್ಮೆಪಡುವುದು, ಕೆಲವರಿಗೆ ಬಂದ ಸಹಜಗುಣ. ಆದರೆ ಕೇವಲ ಅಭಿಮಾನದಿಂದ ಭಾವೋದ್ವೇಗಕ್ಕೆ ದಾರಿಯಾಗುತ್ತದೆಯೇ ಹೊರತು, ಸತ್ಯಸ್ಥಿತಿಗೆ ಅಲ್ಲ. ಶಾಸ್ತ್ರೀಯದೃಷ್ಟಿ ಯಾವಾಗಲೂ ಆಧಾರವನ್ನು ಅವಲಂಬಿಸುತ್ತದೆ. ಆಧಾರವಿಲ್ಲದ ಊಹನೆಗಳನ್ನು ಹಿಂದೆ ಬಿಟ್ಟು, ಆಧಾರವಿರುವ ಮೂಲಗಳನ್ನು ಹಿಡಿದು, ಭಾಷಾಚರಿತ್ರೆ ಯನ್ನು ನಿರ್ದೇಶಿಸಬೇಕಾದುದು ಶಾಸ್ತ್ರೀಯದೃಷ್ಟಿಯಿಂದ ಅಗತ್ಯ. ಕನ್ನಡದ ವಿದ್ವಾಂಸರು

ತಮಗೆ ದೊರಕುವ ಆಧಾರಗಳ ಮೂಲಕ ಕನ್ನಡಭಾಷೆಯ ಅಸ್ತಿತ್ವವನ್ನು ಪ್ರತಿಪಾದಿಸಿದ್ದಾರೆ.

ಸುಮಾರು ಕ್ರಿಸ್ತಶಕದ ಆದಿಗೆ ಕನ್ನಡಭಾಷೆ ಅಸ್ತಿತ್ವದಲ್ಲಿತ್ತೆಂದು, ಸಾಧಾರಣವಾಗಿ ತಿಳಿಯಲು ದೊರೆತ ಅಂತಹ ಕೆಲವು ಆಧಾರಗಳು ಹೀಗಿವೆ :

(೧) 'ಮಹಾಭಾರತ'ದ ಭೀಷ್ಮಪರ್ವದಲ್ಲಿ (ಕ್ರಿಸ್ತಪೂರ್ವ ೩ರಿಂದ ಕ್ರಿಸ್ತಶಕ ೩ನೇ ಶತಮಾನ) ; (೨) 'ಮಾರ್ಕಂಡೇಯ ಪುರಾಣ'ದಲ್ಲಿ (ಕ್ರಿಸ್ತಪೂರ್ವ ೧ನೇ ಶತಮಾನ); (೩) 'ಮೃಚ್ಛಕಟಿಕ ನಾಟಕ'ದಲ್ಲಿ (ಕ್ರಿಸ್ತಪೂರ್ವ ೧ರಿಂದ ಕ್ರಿಸ್ತಶಕ ೩ನೇ ಶತಮಾನ); (೪) ತಮಿಳಿನ ಸಂಗಂ ಸಾಹಿತ್ಯದಲ್ಲಿ (ಕ್ರಿಸ್ತಪೂರ್ವ ೧ರಿಂದ ಕ್ರಿಸ್ತಶಕ ೨ನೇ ಶತಮಾನ); (೫) ಆಕ್ಸಿರಿಂಕಸ್ ಪ್ಯಾಪಿರಸ್‌ನಲ್ಲಿ ದೊರೆತ ಗ್ರೀಕ್ ನಾಟಕದಲ್ಲಿ (ಕ್ರಿಸ್ತಶಕ ೨ನೇ ಶತಮಾನ) ; (೬) ಛಾಂದೋಗ್ಯೋಪನಿಷತ್ತಿನಲ್ಲಿ ಮಟಚಿ (<ಮಿಡಿತೆ) ಎಂಬ ಪದ ಪ್ರಯೋಗವಾಗಿರುವುದರಲ್ಲಿ : (೭) ಸಿಂಧೂಕಣಿವೆಯ ಸಂಸ್ಕೃತಿಯಲ್ಲಿ ಕನ್ನಡಕ್ಕೆ ಇರುವ ಸಂಬಂಧದ ಸಾಧ್ಯತೆಗಳಲ್ಲಿ.

ಗ್ರೀಕ್‌ನಾಟಕದ ಬಗ್ಗೆ ಮಂಜೇಶ್ವರ ಗೋವಿಂದ ಪೈಯವರು ಮೂಲವನ್ನೇ ಓದಿ, ಅದರಲ್ಲಿ ಬರುವ ಪದಗಳಿಗೂ ಕನ್ನಡ ಪದಗಳಿಗೂ ನೇರ ಸಂಬಂಧ ಕಲ್ಪಿಸಲು ಪ್ರಯತ್ನಿಸಿದ್ದಾರೆ (ಅಧ್ಯಕ್ಷರ ಭಾಷಣಗಳು, ಭಾಗ ೨, ಕನ್ನಡ ಸಾಹಿತ್ಯ ಪರಿಷತ್ತು) ; ಆದರೆ, ಅವರು ಹೋಲಿಸಿದ ಕೆಲವು ಕನ್ನಡ ಪದಗಳು ಆಗಿನ ಕಾಲದಲ್ಲಿ ಇದ್ದಿರಲಾರದ ಹೊಸ ಸ್ವರೂಪವನ್ನು ತೋರಿಸುವವುಗಳಾಗಿವೆ. ಹೀಗಾಗಿ ಈ ತೌಲನಿಕ ಅಧ್ಯಯನದಿಂದ ನಮಗೆ ವಿಶೇಷ ಪ್ರಯೋಜನವಾಗುವಂತಿಲ್ಲ. ಆದರೂ ಈ ನಾಟಕಕ್ಕೂ ಕರ್ನಾಟಕಕ್ಕೂ ಸಂಬಂಧವಿದೆ ಕಾರಣ, ಇದರ ಕಥಾವಸ್ತು ದಕ್ಷಿಣ ಕನ್ನಡದ ಮಲ್ಪೆ ಬಂದರಿಗೆ ಅನ್ವಯಿಸಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಬರುವ 'ಮಟಚಿ' ಎಂಬ ಪದದ ಬಗ್ಗೆ ಭಂಡಾರ್‌ಕರ್ ಅವರು ಇದು ಕನ್ನಡ ಪದವಾದ ಮಿಡಿಚಿ (<ಮಿಡಿತೆ) ಎಂಬುದರ ಸಂಸ್ಕೃತೀಕರಣಗೊಂಡ ರೂಪ ಎಂದು ಹೇಳಿರುವುದನ್ನು ರಾ.ಯ. ಧಾರವಾಡಕರ್ ಅವರು ತಮ್ಮ 'ಕನ್ನಡ ಭಾಷಾಶಾಸ್ತ್ರ' ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಒಂದು ಭಾಷೆ ಅಸ್ತಿತ್ವದಲ್ಲಿದ್ದು, ತಕ್ಕಷ್ಟು ಪ್ರಭಾವಶಾಲಿಯಾಗಿಲ್ಲದಿದ್ದರೆ, ಅದರಿಂದ ಅನ್ಯಭಾಷೆಗೆ ಒಂದು ಪದ ಹೋಗಲು ಸಾಧ್ಯವಿಲ್ಲ. ಆದುದರಿಂದ ಈ ಉಪನಿಷತ್ತಿನ ಕಾಲದಲ್ಲಿ ಕನ್ನಡದ ನೆಲೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಎಂದರೆ ಕ್ರಿಸ್ತಪೂರ್ವ ಹಲವು ಶತಮಾನಗಳ ಹಿಂದಕ್ಕೆ ಕನ್ನಡದ ಅಸ್ತಿತ್ವವನ್ನು ಕೊಂಡೊಯ್ಯಬಹುದು—ಎಂದಾಯಿತು.

ಫಾದರ್ ಹೀರಾಸ್ ಸಿಂಧೂಕಣಿವೆಯ ಮೊಹೆಂಜೋದಾರೋ ಹರಪ್ಪಗಳ ಸಂಸ್ಕೃತಿಗೂ ಕನ್ನಡಕ್ಕೂ ನಿಕಟಸಂಬಂಧವಿದೆಯೆಂದು ತೋರಿಸಲು ಪ್ರಯತ್ನಪಟ್ಟಿದ್ದಾರೆ ಎಂಬುದನ್ನು ಪ್ರ.ಗೋ. ಕುಲಕರಣಿಯವರು (ಕನ್ನಡಭಾಷೆಯ ಚರಿತ್ರೆ ೧೯೭೫ : ಪುಟ ೭೮–೭೯) ಉಲ್ಲೇಖಿಸಿದ್ದಾರೆ. ಎಸ್. ಆರ್. ರಾವ್ ಅವರು ಹರಪ್ಪ ಚಿತ್ರಲಿಪಿಗಳನ್ನು ಅಧ್ಯಯನ ಮಾಡಿ, ಇದು ಇಂಡೋ–ಆರ್ಯನ್ ಸಂಸ್ಕೃತಿಯೆಂದು ಹೇಳಿದ್ದಾರೆ. ಅದೇ

...ಪ್ರಾಯಪಡುತ್ತಾರೆ. ಹೀಗೆ ಇದರ ಬಗ್ಗೆ ... ದ್ರಾವಿಡ ಸಂಸ್ಕೃತಿಗೆ ಮುದುಮರಿದಿದೆ. ಆದರೂ ಈ ಪ್ರದೇಶಕ್ಕೆ ಸಮೀಪವಾಗಿ, ಬ್ರಾಹೂಇ ಎಂಬ ದ್ರಾವಿಡ ಭಾಷೆ ಇಂದಿಗೂ ಉಳಿದಿರುವುದರಿಂದಲೂ ಉತ್ತರದ್ರಾವಿಡವರ್ಗಕ್ಕೆ ಸೇರಿದ ಇದರೊಡನೆ ಕನ್ನಡ ಕೆಲವು ಅಂಶಗಳಲ್ಲಿ ಹೋಲಿಕೆಗೊಳ್ಳುವುದರಿಂದಲೂ ಸಿಂಧೂಸಂಸ್ಕೃತಿಯೊಡನೆ ಕನ್ನಡದ ಸಂಬಂಧಕಲ್ಪನೆ ತೀರ ಅಸಾಧ್ಯ ಎನ್ನುವಂತಿಲ್ಲ.

ಕನ್ನಡಭಾಷೆಗೆ ಇವಿಷ್ಟು ಈಗ ಒದಗುವ ಬಾಹ್ಯ ಆಕರಗಳು. ಆಂತರಿಕವಾಗಿ ದೊರೆಯುವ ಸಾಮಗ್ರಿಗಳು ಇನ್ನಷ್ಟು ನಿರ್ದಿಷ್ಟ ಚೌಕಟ್ಟಿನಲ್ಲಿ ಮುನ್ನಡೆಯುತ್ತವೆ. ಹಿಂದೆ ಹೇಳಿದಂತೆ ಕ್ರಿಸ್ತಶಕ ಸು. ೪೫೦ರಲ್ಲಿ ರಚಿತವಾದ ಹಲ್ಮಿಡಿಶಾಸನವೇ ನಮಗೆ ದೊರೆತಿರುವ ಮೊದಲ ಗಟ್ಟಿಯಾದ ಆಧಾರ. ಆದರೆ, ಈ ಶಾಸನದಲ್ಲಿ ನಿರ್ದಿಷ್ಟ ಕಾಲಮಾನದ ಉಲ್ಲೇಖವಾಗಿಲ್ಲ. ಲಿಪಿಯ ಹಾಗೂ ಇತರ ಆಧಾರಗಳಿಂದ ಇದರ ಕಾಲಮಾನವನ್ನು ಮೇಲಿನಂತೆ ವಿದ್ವಾಂಸರು ನಿರ್ಧರಿಸಿದ್ದಾರೆ. ಈ ಬಿಂದುವಿನಿಂದ ಮುಂದೆ ಕನ್ನಡಭಾಷೆಯ ಇತಿಹಾಸವನ್ನು, ಅದರ ಸ್ವರೂಪವನ್ನು ಸರಿಯಾಗಿ ಗುರುತಿಸಲು ಅನುಕೂಲವಾಗುವಂತೆ, ಮುಂದೆ ಶಾಸನಗಳು ಸಮೃದ್ಧಿಯಾಗಿ ೧೯ನೆಯ ಶತಮಾನದವರೆಗೂ ಭಾಷಾಪ್ರವಾಹಿನಿಯ ಒಂದು ಕವಲಾಗಿ ದೊರೆತರೆ, ಕ್ರಿಸ್ತಶಕ ೯ನೇ ಶತಮಾನದಿಂದ ಅವಿರತವಾಗಿ ಸಾಹಿತ್ಯ ಮತ್ತು ಶಾಸ್ತ್ರಕೃತಿಗಳು ರಚನೆಯಾಗಿರುವುದು ಇನ್ನೊಂದು ಕವಲಾಗಿ ದೊರೆಯುತ್ತದೆ. ಕನ್ನಡಕ್ಕೆ ಕನ್ನಡದ್ದೇ ಆದ ಲಿಪಿ ಹಲ್ಮಿಡಿಶಾಸನದ ಕಾಲಕ್ಕಾಗಲೇ ಸಿದ್ಧವಾಗಿದೆಯೆಂಬುದರಿಂದ, ಕನ್ನಡದ ಹಳಮೆಯು ಅರಿವಾಗುತ್ತದೆಂದು ಹಿಂದೆ ಹೇಳಿಯಾಗಿದೆ. ಈ ಶಾಸನದ ಭಾಷೆಯನ್ನು ಅವಲೋಕಿಸಿದರೆ, ಅದು ಸಂಸ್ಕೃತಮಿಶ್ರಿತವಾದ, ಪ್ರೌಢಸಾಹಿತ್ಯಭಾಷೆಯಾಗಿ ಕಂಗೊಳಿಸುತ್ತದೆ. ಕೇವಲ ೧೬ ಗೆರೆಗಳಷ್ಟೇ ಉದ್ದವುಳ್ಳ ಈ ಚಿಕ್ಕ ಶಾಸನದಲ್ಲಿ ಅಲ್ಲಲ್ಲಿ ಸಾಹಿತ್ಯರೇಖೆಗಳು ಮಿನುಗುತ್ತವೆ. "ಮೃಗೇಶನಾಗೇಂದ್ರಾಭೀಳಭಟಹರಪ್ಪೋರ್ ಶ್ರೀ ಮೃಗೇಶನಾಗಾಹ್ವಯರಿರ್ವರ್" ಎಂಬಲ್ಲಿ, ಮೃಗೇಶ ಮತ್ತು ನಾಗ ಕುಲದವರಿಬ್ಬರು ಮೃಗರಾಜ ಮತ್ತು ಮದ್ದಾನೆಗಳಂತೆ ಭಯಂಕರರು ಎಂದಿರುವ ಶಬ್ದಶ್ಲೇಷೆಯ ಚಮತ್ಕಾರವಿದೆ; ಸಮರ್ಥ ಉಪಮಾಲಂಕಾರವಿದೆ ; ಆ ಮೂಲಕ ಇಬ್ಬರ ವೀರರ ಚಿತ್ರಣ ಮನಮುಟ್ಟುವಂತಿದೆ. "ಬಟರಿಕುಲಾಮಲವ್ಯೋಮತಾರಾಧಿನಾಥನ್" ಎಂಬುದು ಅದೇ ರೀತಿ ಸುಂದರ ರೂಪಕಾಲಂಕಾರವಾಗಿ, ಅಳಪಗಣಕ್ಕೆ ಪಶುಪತಿಯಾದವನನ್ನು ಸುಂದರವಾಗಿ ವರ್ಣಿಸುತ್ತದೆ. ಈ ಶಾಸನದ ಕರ್ತೃ ಪಶುಪತಿನಾಮಧೇಯನು ನಡೆಸುವ ಯುದ್ಧವನ್ನು, ಎಂದರೆ ಶತ್ರುನಾಶವನ್ನು, ಯಜ್ಞದಲ್ಲಿ ಪಶುವನ್ನು ಬಲಿಕೊಡುವ ಉದ್ಯಮಕ್ಕೆ ಹೋಲಿಸಿದೆ. ಮೊದಲೇ 'ಬಹುಶತಹವನ', ಎಂದರೆ 'ಅನೇಕ ಯಜ್ಞಗಳನ್ನು ಮಾಡಿದವನು' ಎಂಬ ಮಾತೂ ಬಂದು, ರಮ್ಯವಾದ ಧ್ವನಿ ಅಡಗಿರುವಂತೆ ಕವಿ ಮಾಡಿದ್ದಾನೆ. "ಪೊಗಳೆಪ್ಪೊಟ್ಟಣ" (=ಹೊಗಳಿಕೆಗೆ ಪಾತ್ರನಾದ) ಎಂಬ ಕರ್ಮಣಿ ...

ಸಂಸ್ಕೃತ ಪದಗಳ ಸಮಾಸರೂಪ ವಿಶಿಷ್ಟವಾಗಿವೆ. ವಿಭಕ್ತಿಪ್ರತ್ಯಯಗಳು, ಸರ್ವನಾಮ ಪ್ರತ್ಯಯಗಳು, ಪೂರ್ವದ ಹಳಗನ್ನಡಕ್ಕೆ ಉದಾಹರಣೆಯಾಗಿವೆ. ಇದರ ಸ್ವಲ್ಪ ಅನಂತರದ ಕಾಲಕ್ಕೆ ಸೇರಿದ ಕೆಲವು ಶಾಸನಗಳು ಇದರಷ್ಟು ಪ್ರಬುದ್ಧತೆಯನ್ನು ತೋರುವುದಿಲ್ಲ; ಮಾತ್ರವಲ್ಲ, ಭಾಷೆ ಅಸ್ಪಷ್ಟವಾಗಿದೆ.

## ಸಾಹಿತ್ಯ— ಶಾಸ್ತ್ರ ಕೃತಿಗಳು

ನಮಗೀಗ ದೊರೆತಿರುವ ಮೊದಲ ಸಾಹಿತ್ಯದಾಖಲೆ ಶಾಸ್ತ್ರಕೃತಿ 'ಕವಿರಾಜಮಾರ್ಗ.' ಇದು ಕ್ರಿಸ್ತಶಕ ೮೧೪–೮೮೦ರ ವರೆಗೆ ಆಳಿದ ರಾಷ್ಟ್ರಕೂಟ ಸಾಮ್ರಾಟ ನೃಪತುಂಗನ ಆಸ್ಥಾನದಲ್ಲಿ ರಚಿತವಾಗಿದೆ. ಆತನ ಸಭಾಸದ ಇದನ್ನು ರಚಿಸಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ಈ ಕರ್ತೃ ಕನ್ನಡ ನಾಡನ್ನು, ಭಾಷೆಯನ್ನು, ಹಾಗೂ ಜನರ ಮೇಲ್ಮಟ್ಟದ ಮಾನಸಿಕ ಬೌದ್ಧಿಕ ಔನ್ನತ್ಯವನ್ನು, ತುಂಬುಹೃದಯದಿಂದ ಅಭಿಮಾನದಿಂದ ವರ್ಣಿಸುತ್ತಾನೆ.

ಕಾವೇರಿಯಿಂದಮಾ ಗೋ।
ದಾವರಿವರಮಿರ್ದ ನಾಡದಾ ಕನ್ನಡದೊಳ್ ॥
ಭಾವಿಸಿದ ಜನಪದಂ ವಸು।
ಧಾವಲಯವಿಲೀನವಿಶದವಿಷಯವಿಶೇಷಂ ॥

ಅದಱೊಳಗಂ ಕಿಸುವೊಳಲಾ।
ವಿದಿತ ಮಹಾಕೊಪಣನಗರದಾ ಪುಲಿಗೆಱೆಯಾ ॥
ಸದಭಿಸ್ತುತಮಪ್ಪೊಂಕುಂ।
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥

ಪದನಱಿದು ನುಡಿಯಲುಂ ನುಡಿ।
ದುದನಱಿದಾರಯಲುಮಾರ್ಪರಾ ನಾಡವರ್ಗಳ್ ॥
ಚದುರರ್ ನಿಜದಿಂ ಕುಱಿತೋ।
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ ॥ (ಕವಿರಾ. ೧–೩೬ ~ ೩೮)

ಕನ್ನಡದ ಗದ್ಯಪದ್ಯ ಕಾವ್ಯಭೇದಗಳನ್ನು, ಚತ್ತಾಣ ಬೆದಂಡೆ ಎಂಬ ಕಾವ್ಯಪ್ರಭೇದಗಳನ್ನು, ಉತ್ತರಮಾರ್ಗ ದಕ್ಷಿಣಮಾರ್ಗ ಎಂಬ ಭಾಷಾಪ್ರಯೋಗದ ಪ್ರಭೇದಗಳನ್ನು ಗ್ರಂಥಕರ್ತ ವಿವರಿಸುತ್ತಾನೆ. ತಿರುಳ್ಗನ್ನಡದ ಸ್ವರೂಪ, ಕವಿಗಳು ಭಾಷಾಶುದ್ಧಿಯ ಕಡೆಗೆ ಕೊಡಬೇಕಾದ ಗಮನ, ಕಾವ್ಯದ ಗುಣದೋಷಗಳು, ಅಲಂಕಾರಗಳು ಎಂಬುವನ್ನೆಲ್ಲ ವಿವರಿಸಿ, ನಿಜವಾಗಿ ಕವಿಗಳಾಗುವವರು ಮುನ್ನಡಿಯಿಡಲು ರಾಜಮಾರ್ಗವನ್ನು ಕರ್ತೃ ನಿರ್ಮಿಸಿಕೊಟ್ಟಿದ್ದಾನೆ. ಇಂತಹ ಪ್ರೌಢಶಾಸ್ತ್ರಗ್ರಂಥವೊಂದರ ರಚನೆ ಕನ್ನಡಕ್ಕೆ ಆಗ ಅಗತ್ಯವೆನಿಸಿತ್ತು. ಎಂದರೆ, ಕನ್ನಡದಲ್ಲಿ ಸಾಹಿತ್ಯ ಚಟುವಟಿಕೆಗಳು ಅದಕ್ಕಿಂತಲೂ ಎಷ್ಟೋ

ಹಿಂದಿನಿಂದ ಆರಂಭಿಸಿದ್ದುವೆಂಬುದರಲ್ಲಿ ಸಂಶಯವಿಲ್ಲ. ೯ನೇ ಶತಮಾನದ ಈ ಗ್ರಂಥದ ಕರ್ತೃ ತತ್ಕಾಲದಲ್ಲಿ ಕವಿಗಳು ಹಳಗನ್ನಡವನ್ನು ಉಪಯೋಗಿಸಿ ಬರೆಯಬಾರದು ಎಂದು ಹೇಳುವುದರಿಂದಲೂ ಈ ಕೃತಿರಚನೆಗಿಂತ ಹಿಂದೆಯೇ ಸಾಹಿತ್ಯಪ್ರಯೋಗಗಳು ಆಗುತ್ತಿದ್ದುವೆಂಬುದು ಖಚಿತ. ಅಲ್ಲದೆ, ಕನ್ನಡ ಭಾಷಾಸ್ವರೂಪದಲ್ಲಿ ಅವನ ಕಾಲಕ್ಕಿಂತ ಹಿಂದೆಯೇ ಒಂದು ಹಳಗನ್ನಡವಿದ್ದುದು. ಅವನ ಕಾಲಕ್ಕೆ ಹೊಸಗನ್ನಡ (ನಾವೀಗ ಗುರುತಿಸುವ ಹಳಗನ್ನಡ)ವಾಗಿ ಪರಿವರ್ತಿತವಾಗಿತ್ತು. ಅದೂ ಅಲ್ಲದೆ, ಈ ಗ್ರಂಥಕರ್ತನ ಕಾಲದಲ್ಲಿ ಈಗಿರುವಂತೆಯೇ ಕನ್ನಡದಲ್ಲಿ ಹಲವು ಪ್ರಭೇದಗಳಿದ್ದುವು. ಅವುಗಳಲ್ಲಿ ಕೆಲವು ಪರಸ್ಪರ ಅರ್ಥವಾಗದಂತಿದ್ದುವು. ಹೀಗಿರುತ್ತಾ, ಕವಿಯಾದವನು ತನ್ನ ಕಾಲಕ್ಕಿಂತ ಹಳೆಯದಾದ ಭಾಷಾಸ್ವರೂಪವನ್ನು ಉಪಯೋಗಿಸಬಾರದು. ಅಲ್ಲದೆ ಎಲ್ಲರಿಗೂ ಅರ್ಥವಾಗುವಂತಹ ತಿರುಳ್ಗನ್ನಡದಲ್ಲಿ ಕಾವ್ಯವನ್ನು ಬರೆಯಬೇಕು. ಕಾವ್ಯ ನಿರ್ದುಷ್ಟವಾಗಿರಬೇಕು—ಎಂದೆಲ್ಲ ಸ್ಪಷ್ಟಪಡಿಸುತ್ತಾನೆ.

'ವಡ್ಡಾರಾಧನೆ'ಯೆಂಬ ೧೯ ಜೈನಕಥೆಗಳ ಸಂಕಲನವಾದ ಗದ್ಯಗ್ರಂಥ, ಪಂಪನ 'ವಿಕ್ರಮಾರ್ಜುನವಿಜಯ' ಮತ್ತು 'ಆದಿಪುರಾಣ', ರನ್ನನ 'ಸಾಹಸಭೀಮವಿಜಯ' ಮತ್ತು 'ಅಜಿತತೀರ್ಥಕರಪುರಾಣತಿಲಕ.' ಪೊನ್ನನ 'ಶಾಂತಿಪುರಾಣ' ಮುಂತಾದ ಜೈನ ಕವಿಗಳ ಕೃತಿಗಳು ಕನ್ನಡದ ಸಾಹಿತ್ಯಭಾಷೆಯನ್ನು ಚಂಪೂರೀತಿಯ, ಸಂಸ್ಕೃತಭೂಯಿಷ್ಠವಾದ, ಪ್ರೌಢಿಮೆಗೇರಿಸಿದುವು. ಬರಬರುತ್ತ ವಾಗಾಡಂಬರದ ಪಾಂಡಿತ್ಯಪ್ರದರ್ಶನಕ್ಕೆ ಇದು ದಾರಿಮಾಡಿಕೊಟ್ಟಿತು. ಸಾಹಿತ್ಯರಚನೆ ಜನದೂರವಾದ ಚಟುವಟಿಕೆಯಾಗಿ ಪರಿವರ್ತಿಸಿತು. ೧೨ನೆಯ ಶತಮಾನದಲ್ಲಿ ವೀರಶೈವಕ್ರಾಂತಿಯ ಮೂಲಕ ಜನಜಾಗೃತಿ ನಡೆದು ಸಾಹಿತ್ಯ ಮತ್ತು ಜನಭಾಷೆಗಳೊಳಗೆ ಹೊಂದಾಣಿಕೆಯೇರ್ಪಟ್ಟಿತು. ದೇಸೀ ಛಂದಸ್ಸಿನ ಕಾವ್ಯಗಳು ರಚನೆಗೊಂಡು, ದೇಸೀಯತೆ ಮುನ್ನೆಲೆಗೆ ಬಂತು.

ಸಂಸ್ಕೃತವನ್ನು ಬೆರಸದೆ ಕನ್ನಡದಲ್ಲಿ ಕಾವ್ಯ ಬರೆಯಲು ಸಾಧ್ಯವೇ ಇಲ್ಲವೆಂಬ ಪಂಡಿತ ಪಕ್ಷವೊಂದಾದರೆ, ಅದು ಸಾಧ್ಯವೆಂಬ ಜನಪಕ್ಷವನ್ನು ಪ್ರತಿನಿಧಿಸುವ ಆಂಡಯ್ಯನಂತಹ ಕವಿಗಳು ಇನ್ನೊಂದು ಪಕ್ಷವಾಗಿ ಅದನ್ನು ಪ್ರಯೋಗದ ಮೂಲಕ ತೋರಿಸಿದರು. ಮುತ್ತನ್ನೂ ಮೆಣಸನ್ನೂ ಕೋದಂತೆ, ತುಪ್ಪವನ್ನೂ ಎಣ್ಣೆಯನ್ನು ಬೆರಸಿದಂತೆ, ಸಂಸ್ಕೃತವನ್ನು ಕನ್ನಡದಲ್ಲಿ ಬೆರಸಬಾರದು ಎಂದು ನಯಸೇನನಂತಹ ಕವಿಗಳು ಕಠೋರ ವಾಕ್ಯಗಳನ್ನಾಡಲಾರಂಭಿಸಿದರು. ಮಹಲಿಂಗರಂಗನಂಥವರು "ಸುಲಿದ ಬಾಳೆಯ ಹಣ್ಣಿನಂತೆ", "ಕಳಿದ ಸಿಗುರಿನ ಕಬ್ಬಿನಂತೆ", "ಅಳಿದ ಉಷ್ಣದ ಹಾಲಿನಂತೆ" ಇರುವ ಲಲಿತವಾದ ಕನ್ನಡನುಡಿಯಲ್ಲಿ ತನ್ನ ಮೋಕ್ಷವನ್ನು ಗಳಿಸಿಕೊಂಡರೆ ಸಾಲದೇ ? ಸಂಸ್ಕೃತದಲ್ಲಿ ಇನ್ನೇನು ಎಂಬ ಸವಾಲೆಸೆಯುವ ಧೈರ್ಯ ತೋರಿದರು. ಕನ್ನಡದೊಡನೆ ಬೆರೆಯುವ ಅಪಭ್ರಂಶಪದಗಳನ್ನು ಸ್ವೀಕರಿಸಿ, ಅಚ್ಚಗನ್ನಡವೆಂದು ಕರೆದ ಆಂಡಯ್ಯನ ಮಾತಿಗೆ ವೈಯಾಕರಣ ಕೇಶಿರಾಜನೂ ಮನ್ನಣೆಯಿತ್ತನು. ಕನ್ನಡ ಮತ್ತು ಸಂಸ್ಕೃತಪದಗಳ ಸಮಾಸ ಮಾಡದೆ ಹಿತಮಿತವಾದ ಸಂಸ್ಕೃತಪದಗಳನ್ನು ಸಂದರ್ಭಾನುಸಾರ ಬೆರಸಿದ ಕಾವ್ಯಭಾಷಾ

ಪ್ರಭೇದ ಕವಿರಾಜಮಾರ್ಗಕಾರನ ಕಾಲಕ್ಕೆ ಮತ್ತು ಅವನನ್ನು ಅನುಸರಿಸಿದ ಪ್ರೌಢಕವಿಗಳಿಗೆ 'ತಿರುಳ್ಗನ್ನಡ'ವೆಂದಾದರೆ, ಆಂಡಯ್ಯನ ಕಾಲದ ವೇಳೆಗೆ ಅಚ್ಚಕನ್ನಡವೆಂದಾಯಿತು. ಮುಂದೆ ಮುದ್ದಣನ ಕಾಲಕ್ಕೆ "ಕರ್ಮಣಿಸರದೊಳ್ ಚೆಂಬವಳಮಂ ಕೋದಂತೆ" ಸಂಸ್ಕೃತದ ನಲ್ನುಡಿ ಬೆರೆತ ಕನ್ನಡ ಪುನಃ 'ತಿರುಳ್ಗನ್ನಡ'ವೇ ಆಯ್ತು. ೧೨ನೇ ಶತಮಾನದಿಂದ ಕನ್ನಡಕ್ಕೆ ಅರೇಬಿಕ್, ಪರ್ಶಿಯನ್, ಉರ್ದು, ಇಂಗ್ಲಿಷ್, ಪೋರ್ಚುಗೀಸ್ ಪದಗಳೂ ಸಾಂಸ್ಕೃತಿಕ ರಾಜಕೀಯ ಕಾರಣಗಳಿಂದ ಸೇರ್ಪಡೆಯಾದುವು.

## ವ್ಯಾಕರಣ ಕೃತಿಗಳು

ಕನ್ನಡದ ಪ್ರೌಢಸಾಹಿತ್ಯಭಾಷೆಯನ್ನು ವಿವರಿಸುವ ವ್ಯಾಕರಣಗ್ರಂಥಗಳನ್ನು ಪ್ರೌಢ ವಿದ್ವಾಂಸರು ಹಳಗನ್ನಡ ಕಾಲದಲ್ಲಿ ರಚಿಸಿದ್ದಾರೆ. ಎರಡನೆಯ ನಾಗವರ್ಮನ (೧೦೪೨) 'ಕರ್ಣಾಟಕ ಭಾಷಾಭೂಷಣ' (ಸಂಸ್ಕೃತದಲ್ಲಿ) ಮತ್ತು 'ಕಾವ್ಯಾವಲೋಕನ'ದ 'ಶಬ್ದಸ್ಮೃತಿ' (ಕನ್ನಡದಲ್ಲಿ), ಕೇಶಿರಾಜನ (ಸು ೧೨೬೦) 'ಶಬ್ದಮಣಿದರ್ಪಣ' (ಕನ್ನಡದಲ್ಲಿ) ಮತ್ತು ಭಟ್ಟಾಕಳಂಕನ (೧೬೦೪) 'ಕರ್ಣಾಟಕ ಶಬ್ದಾನುಶಾಸನ' (ಸಂಸ್ಕೃತದಲ್ಲಿ) ನಮಗೆ ದೊರೆಯುವ ವ್ಯಾಕರಣಗ್ರಂಥಗಳು. ಮೊದಲನೆಯ ಗ್ರಂಥವಾದ 'ಕವಿರಾಜಮಾರ್ಗ'ದಲ್ಲೇ ಆಂಶಿಕವಾಗಿ ಕನ್ನಡ ವ್ಯಾಕರಣಾಂಶಗಳು ಬರುತ್ತವೆಂಬುದನ್ನು ಗಮನಿಸಬೇಕು. ಹೀಗೆಯೇ ಭಾಷಾ ಅಧ್ಯಯನಕ್ಕೆ ಸಂಬಂಧಪಟ್ಟ ಅಲಂಕಾರ, ರಸಗಳನ್ನು ಕುರಿತಾದ ಅಧ್ಯಯನಗಳೂ ಹಳಗನ್ನಡದಲ್ಲಿ ತಕ್ಕಷ್ಟು ಸಂಖ್ಯೆಯಿಂದ ದೊರೆಯುತ್ತವೆ. ಆಧುನಿಕ ಕಾಲದಲ್ಲಿ ಪಾಶ್ಚಾತ್ಯವಿದ್ವಾಂಸರು ಕನ್ನಡಭಾಷೆಯ ವ್ಯಾಕರಣಗಳನ್ನು ಬರೆದಿದ್ದಾರೆ. ಇವರಲ್ಲಿ ಮುಖ್ಯವಾಗಿ ಹೆಸರಿಸಬೇಕಾದುದು ಎಫ್. ಕಿಟ್ಟೆಲ್ ಎಂಬ ಜರ್ಮನ್ ವಿದ್ವಾಂಸರು ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡಗಳನ್ನು ಗಣನೆಗೆ ತೆಗೆದುಕೊಂಡು ಇಂಗ್ಲಿಷಿನಲ್ಲಿ ಬರೆದಿರುವ ವ್ಯಾಕರಣ ***A Grammar of the Kannada Language*** ಎಂಬುದನ್ನು (೧೯೦೩). ೨೦ ವರ್ಷಗಳಷ್ಟು ದೀರ್ಘಕಾಲ ಕೆಲಸ ಮಾಡಿ ರಚಿಸಿರುವ ಈತನ ಕನ್ನಡ ಅರ್ಥಕೋಶ ಕನ್ನಡಕ್ಕೆ ಮಹೋನ್ನತ ಕೊಡುಗೆ. ೧೯ನೆಯ ಶತಮಾನದ ಮೊದಲ ಭಾಗದಲ್ಲಿ ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯರು 'ಹೊಸಗನ್ನಡ ನುಡಿಗನ್ನಡಿ' ಎಂಬ ವ್ಯಾಕರಣವನ್ನು (೧೮೩೮) ರಚಿಸಿದ್ದಾರೆ.

ಈ ಶತಮಾನದ ೩೦ರ ದಶಕದಿಂದ ಅನೇಕ ಆನ್ವಯಿಕ ರೀತಿಯ ವ್ಯಾಕರಣಗಳ ರಚನೆಯಾಗಿದೆ. ಎ. ಎನ್. ನರಸಿಂಹಯ್ಯನವರು ಕನ್ನಡದ ಪ್ರಾಚೀನ ಶಾಸನಗಳ ಭಾಷೆಯ ವಿಶ್ಲೇಷಣೆ ಮಾಡಿ. ***A Grammar of the Oldest Kanarese Inscriptions*** ಎಂಬ ಪ್ರಬಂಧವನ್ನು ಪಿಎಚ್.ಡಿ. ಪದವಿಗೋಸ್ಕರ ಲಂಡನ್ ವಿಶ್ವವಿದ್ಯಾಲಯಕ್ಕೆ ಸಮರ್ಪಿಸಿದರು (೧೯೩೩). ಇದು ಮೈಸೂರು ವಿಶ್ವವಿದ್ಯಾನಿಲಯದಿಂದ ೧೯೪೧ರಲ್ಲಿ ಪ್ರಕಟವಾಗಿದೆ. ೬ ಮತ್ತು ೭ನೆಯ ಶತಮಾನಗಳಲ್ಲಿ ದೊರೆಯುವ ಶಾಸನಗಳ ಭಾಷಾಸ್ವರೂಪವನ್ನು ಇದು ವಿವರಿಸುತ್ತದೆ. ಮುಂದೆ ೮, ೯ ಮತ್ತು ೧೦ನೆಯ ಶತಮಾನಗಳಲ್ಲಿ ದೊರೆಯುವ ಶಾಸನ

ಗಳ ಭಾಷಿಕ ವಿಶ್ಲೇಷಣೆಯನ್ನು ಮಾಡಿ ಜಿ. ಎಸ್. ಗಾಯಿಯವರು ***Historical Grammar of Old Kannada*** ಎಂಬ ಗ್ರಂಥವನ್ನು ಪುಣೆಯ ಡೆಕ್ಕನ್ ಕಾಲೇಜಿನಿಂದ ೧೯೪೬ರಲ್ಲಿ ಪ್ರಕಟಿಸಿದರು. ಇದಾಗಿ ೩೦ ವರ್ಷಗಳನಂತರ ಕೆ. ಕುಶಾಲಪ್ಪಗೌಡ ಅವರು ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ೧೦೦೦ದಿಂದ ೧೪೦೦ರ ವರೆಗೆ ದೊರೆಯುವ ಶಾಸನಗಳನ್ನು ವಿಶ್ಲೇಷಿಸಿ, ***A Grammar of Kannada based on Inscriptions of Coorg, South and North Kanara Dts.*** ಎಂಬುದಾಗಿ ೧೯೭೨ರಲ್ಲಿ ಅಣ್ಣಾಮಲೈ ವಿ.ವಿ.ದಿಂದ ಪ್ರಕಟಿಸಿದರು. ಇವರ ನಿರ್ದೇಶನದಲ್ಲಿ ಕರ್ನಾಟಕದ ಉತ್ತರ ಭಾಗದ ಶಾಸನಗಳ ಭಾಷಿಕ ಅಧ್ಯಯನವನ್ನು ಸಿ. ರಾಮಸ್ವಾಮಿಯವರು ಮಾಡಿದುದು ಇನ್ನೂ ಪ್ರಕಟವಾಗಿಲ್ಲ. ಉಳಿದ ಶಾಸನಗಳ ಭಾಷಿಕ ಅಧ್ಯಯನವನ್ನು ಮುಂದುವರಿಸಬೇಕೆಂಬ ಇಚ್ಛೆಯಿಂದ ಮದ್ರಾಸು ವಿಶ್ವವಿದ್ಯಾಲಯದಲ್ಲಿ ಯು.ಜಿ.ಸಿ.ಯ ನೆರವಿನಿಂದ ಯೋಜನೆಯೊಂದನ್ನು ಹಾಕಿಕೊಂಡರೂ ಸೀಮಿತ ಕಾಲಾವಧಿಯ ಆರ್ಥಿಕ ನೆರವುಳ್ಳ ಕಾರಣ ಅದು ಮುಂದುವರಿಯಲು ಅವಕಾಶವಾಗಲಿಲ್ಲ. ಇತ್ತೀಚೆಗೆ ಎಂ. ಬಿ. ನೇಗಿನಹಾಳ ಅವರು ೧೦ನೇ ಶತಮಾನದ ವರೆಗೆ ದೊರೆಯುವ ಎಲ್ಲ ಶಾಸನಗಳ ಭಾಷಿಕ ಅಧ್ಯಯನ ಮಾಡಿ 'ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ' ಎಂಬ ಪುಸ್ತಕ ರೂಪದಲ್ಲಿ (೧೯೮೨) ಪ್ರಕಟಿಸಿದ್ದಾರೆ. ಇದು ಹೊರತು, ಉಳಿದೆಲ್ಲ ಪ್ರಕಟನೆಗಳೂ ಇಂಗ್ಲಿಷಿನಲ್ಲಿವೆ.

ಶಾಸನಗಳು ಮಾತ್ರವಲ್ಲದೆ, ಸಾಹಿತ್ಯ ಕೃತಿಗಳನ್ನೂ ಭಾಷಿಕ ಅಧ್ಯಯನಕ್ಕೊಳಪಡಿಸಲಾಗಿದೆ. ಅವುಗಳಲ್ಲಿ ಕೆಲವೇ ಕೆಲವು ಪ್ರಕಟಗೊಂಡಿವೆ :

(೧) ವಡ್ಡಾರಾಧನೆಯ ವಿವರಣಾತ್ಮಕ ವ್ಯಾಕರಣ (ಇಂಗ್ಲಿಷಿನಲ್ಲಿ)—ಕೆ. ಕುಶಾಲಪ್ಪಗೌಡ (ಅಣ್ಣಾಮಲೈ ವಿ.ವಿ. ಎಂ.ಲಿಟ್. ಥೀಸಿಸ್, ೧೯೬೨, ಅಪ್ರಕಟಿತ) ; (೨) ಪಂಪಭಾರತದ ವಿವರಣಾತ್ಮಕ ವ್ಯಾಕರಣ (ಇಂಗ್ಲಿಷಿನಲ್ಲಿ)—ಬಿ. ರಾಮಚಂದ್ರರಾವ್ (ಪಿಎಚ್.ಡಿ. ಥೀಸಿಸ್, ಉಸ್ಮಾನಿಯ ವಿ.ವಿ., ಮೈಸೂರು ವಿ.ವಿ. ಪ್ರಕಟಣೆ, ೧೯೭೨) ; (೩) ಕುಮಾರವ್ಯಾಸ ಭಾರತದ ವ್ಯಾಕರಣ—ಓಂಕಾರಪ್ಪ (ಪಿಎಚ್.ಡಿ. ಥೀಸಿಸ್, ಪೂನಾ ; ಅಪ್ರಕಟಿತ) ; (೪) ಹರಿಹರನ ರಗಳೆಗಳ ವಿವರಣಾತ್ಮಕ ವ್ಯಾಕರಣ—ಸಂಗಮೇಶ ಸವದತ್ತಿಮಠ (ಕರ್ನಾಟಕ ವಿ.ವಿ. ಪಿಎಚ್.ಡಿ. ಥೀಸಿಸ್, ಪ್ರಕಟಿತ) ; (೫) ವಚನಗಳ ಭಾಷಿಕ ಅಧ್ಯಯನ—ಬಿ. ಬಿ. ರಾಜಪುರೋಹಿತ (ಕರ್ನಾಟಕ ವಿ.ವಿ. ಪಿಎಚ್.ಡಿ ಥೀಸಿಸ್ ; ಅಪ್ರಕಟಿತ).

ಆಧುನಿಕ ಭಾಷಾವಿಜ್ಞಾನ ಭಾರತದಲ್ಲಿ ಸ್ಥಿರವಾಗಿ ನೆಲೆಯೂರಿದ ಮೇಲೆ, ಉಪಭಾಷೆಗಳ ಅಧ್ಯಯನವೂ ಶಾಸ್ತ್ರೀಯವಾಗಿ ನಡೆದು ಕೆಲವು ಗ್ರಂಥಗಳು ಪ್ರಕಟಗೊಂಡಿವೆ. ಹಳೆಮೈಸೂರಿನ ಕನ್ನಡವನ್ನು ವಿಶ್ಲೇಷಿಸಿ, ವಿಲಿಯಂ ಬ್ರೈಟ್ ಅವರು ***An Outline of Colloquial Kannada*** ಪುಸ್ತಕವನ್ನು ಡೆಕ್ಕನ್ ಕಾಲೇಜ್, ಪೂನಾದಿಂದ ೧೯೫೮ರಲ್ಲಿ ಪ್ರಕಟಿಸಿದರು. ಧಾರವಾಡ ಪ್ರಾಂತದ ಕನ್ನಡವನ್ನು ವಿಶ್ಲೇಷಿಸಿ, ಡಾ. ಆರ್. ಸಿ. ಹಿರೇಮಠ

ಅವರು *The Structure of Kannada* ಪುಸ್ತಕವನ್ನು ಕರ್ನಾಟಕ ವಿ.ವಿ.ದಿಂದ ೧೯೬೧ ರಲ್ಲಿ ಪ್ರಕಟಿಸಿದರು. ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ಗೌಡರು ಮಾತಾಡುವ ಕನ್ನಡದ ಪ್ರಭೇದವನ್ನು 'ಗೌಡ ಕನ್ನಡ' ಎಂಬ ಹೆಸರಿನಿಂದ ಪುಸ್ತಕರೂಪದಲ್ಲಿ ಅಣ್ಣಾಮಲೈ ವಿಶ್ವವಿದ್ಯಾನಿಲಯದಿಂದ ೧೯೭೦ರಲ್ಲಿ ಕೆ. ಕುಶಾಲಪ್ಪ ಗೌಡ ಅವರು ಪ್ರಕಟಿಸಿದರು. ಅಲ್ಲದೆ ಇನ್ನೂ ಅನೇಕ ಸಾಮಾಜಿಕ, ಪ್ರಾದೇಶಿಕ ಕನ್ನಡಗಳನ್ನು ಡಾ. ಡಿ. ಎನ್. ಶಂಕರ ಭಟ್ಟರ ನೇತೃತ್ವದಲ್ಲಿ ಬೇರೆ ಬೇರೆ ವಿದ್ವಾಂಸರು ಅಧ್ಯಯನಮಾಡಿ, ಡೆಕ್ಕನ್ ಕಾಲೇಜ್ ಪೂನಾದಿಂದ ಪ್ರಕಟಿಸಿದ್ದಾರೆ. ಈ ಸಂಬಂಧದಲ್ಲಿ ಆಚಾರ್ಯ ಎ. ಎಸ್. ಅವರ **Halakki Kannada (1967), Barkur Kannada (1971), Tiptur Kannada (1971)**; ಶಂಕರಭಟ್ ಡಿ. ಎನ್. ಅವರ **Havyaka Kannada (1971)**; ಮಹದೇವನ್ ಆರ್. ಅವರ **Gulbarga Kannada (1968)**; ಉಪಾಧ್ಯಾಯ ಯು. ಪಿ. ಅವರ **Nanjangud Kannada (1968)** ಮತ್ತು **Coorg Kannada (1971)** ಮೊದಲಾದ ಹೆಸರಿನಲ್ಲಿ ಪ್ರಕಟವಾದ ಇಂಗ್ಲಿಷ್ ಗ್ರಂಥಗಳನ್ನು ಗಮನಿಸಬಹುದು.

ಹೀಗೆ ಕನ್ನಡಭಾಷೆಯ ಸಮಗ್ರ ಭಾಷಿಕ ಅಧ್ಯಯನದ ಕಡೆಗೆ ಇಷ್ಟರವರೆಗೆ ಮಾಡಿದ ಕೆಲಸದಿಂದ ದಿಟ್ಟ ಹೆಜ್ಜೆಯಿಡಲು ಸಾಧ್ಯವಾಗಿದೆ. ಮತ್ತು ಈ ನಿಟ್ಟಿನಲ್ಲಿ ಕನ್ನಡ ತನ್ನ ಇತರ ಸಹೋದರಿ ಭಾಷೆಗಳಿಗಿಂತ ಮುಂಚೂಣಿಯಲ್ಲಿದೆ ಎಂದರೆ ಪೊಳ್ಳು ಅಭಿಮಾನದ ಮಾತಾಗದು! ಆದರೆ, ಮುಂದೆ ವಿದ್ವಾಂಸರು ಇದನ್ನು ಎಷ್ಟರ ಮಟ್ಟಿಗೆ ಕೊಂಡೊಯ್ಯುತ್ತಾರೆಂಬುದರ ಮೇಲೆ ಪ್ರಗತಿಯೆಂಬುದು ನಿಂತಿದೆಯೆಂಬುದನ್ನು ಮರೆಯಬಾರದು.

ಹಳಗನ್ನಡದ ವ್ಯಾಕರಣಗಳ ಮೇಲೆ ಸಂಸ್ಕೃತದ ಪ್ರಭಾವ ಅಧಿಕವಾಗಿದೆ: ಮುಖ್ಯವಾಗಿ ಧ್ವನಿವಿಶ್ಲೇಷಣೆಯಲ್ಲಿ ಸಂಸ್ಕೃತದ ದಟ್ಟವಾದ ಪ್ರಭಾವವನ್ನು ಗುರುತಿಸಬಹುದು. ಆ ವಿವರ ವ್ಯಾಕರಣ ವಿವೇಚನೆಯಲ್ಲಿ ಬರಲಿರುವುದರಿಂದ ಇಲ್ಲಿ ವಿವರಿಸುವುದಿಲ್ಲ.

ಕಾಲಕಾಲಕ್ಕೆ ಒಂದು ಭಾಷೆಯಲ್ಲಿ ಹಲವು ಬದಲಾವಣೆಗಳು ಗೋಚರಿಸುತ್ತವೆ. ಕಾರಣ, ಆ ಭಾಷೆಯನ್ನಾಡುವ ಜನಾಂಗದಲ್ಲಿ ಸಾಂಸ್ಕೃತಿಕ ಬದಲಾವಣೆಗಳಾಗುತ್ತವೆ. ಜೀವನಸೌಲಭ್ಯಗಳನ್ನು ಹೆಚ್ಚಿಸುವ ಸಾಧನೆಗಳ ಸಂಶೋಧನೆಯಾಗುತ್ತದೆ: ಬೇರೆಯವರೊಡನೆ ಸಂಪರ್ಕವೇರ್ಪಡುತ್ತದೆ. "ಭಾಷೆ ನಿಂತ ನೀರಲ್ಲ; ಹರಿಯುವ ನದಿಯಂತೆ" ಎಂದು ಆಲಂಕಾರಿಕವಾಗಿ ಹೇಳುವುದುಂಟು. ಕಾಲಕಾಲಕ್ಕೆ ಭಾಷೆಯ ಸ್ವರೂಪ ಹೇಗಿತ್ತೆಂದು ತಿಳಿಯಲು ಅದರಲ್ಲಿ ದೊರೆಯುವ ಲಿಖಿತಸಾಧನಗಳು, ಅದರ ಬಗ್ಗೆ ಹಿಂದಿನವರು ಬರೆದ ಶಾಸ್ತ್ರಗ್ರಂಥಗಳು ಮಾತ್ರ ಆಧಾರಗಳಾಗುತ್ತವೆ. ಆದರೆ ಅದು ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದ ರೀತಿ ಈಗ ನಮಗೆ ತಿಳಿಯುವಂತಿಲ್ಲ. ಪಂಪನ ಕಾವ್ಯದಲ್ಲಿರುವಂತಹ ಕನ್ನಡವನ್ನೇ ಜನ ಆಗ ಮಾತಿನಲ್ಲೂ ಬಳಸುತ್ತಿದ್ದರು ಎನ್ನುವಂತಿಲ್ಲ. "ಎಂಬುದುಂ ಕರ್ಣಂ ತನಗೊಡಂಬಡದುದಂ ನಿರ್ಣಯಮಾಗಱಿದು ಮಗುೞ್ವೆಟ್ಟು ನಾರಾಯಣಂ ಪೋದನಿತ್ತಲಂಗರಾಜನುಮಾತ್ಮಾಲಯಕ್ಕೆ ವಂದು ಚಿಂತಾಕ್ರಾಂತನಾಗಿ"—ಎಂಬುದು

ಪಂಪನ ಕಾವ್ಯಭಾಷೆಯ ಮಾದರಿ. ಈ ಶತಮಾನದ ಕನ್ನಡದಲ್ಲಿ ಕಾವ್ಯಪ್ರಭೇದ ಬೇರೆಯಾಗಿದೆ. ಉದಾಹರಣೆಗೆ. 'ಶ್ರೀ ರಾಮಾಯಣ ದರ್ಶನ'ದಲ್ಲಿಯ ಕಾವ್ಯಭಾಷೆಯ ಮಾದರಿ :

> "ಅದೊ ನವಿಲ್ :
> ಹೊಳೆಯ ನೀರಿಗೆ ಬಾಗಿದೊಂದು ಕೊಂಬೆಯ ಮೇಲೆ
> ಕುಳಿತೀಂಟುತಿಹುದೆಂತು"

ಆದರೆ ಈಗಿನ ಸಭ್ಯ ಕನ್ನಡಿಗರು ಈ ರೀತಿ ಮಾತಾಡುವುದಿಲ್ಲವೆಂಬುದು ಖಂಡಿತ. ಆದರೂ, ಆಧುನಿಕ ಕಾಲದಲ್ಲಿ ಆಡುಮಾತಿನ ರೂಪವನ್ನೇ ಕಾವ್ಯದಲ್ಲಿ ಬಳಸುವುದು ಅನೇಕ ಕಡೆ ಕಂಡುಬರುತ್ತದೆ. ಇದಕ್ಕೆ ಉತ್ತಮ ಉದಾಹರಣೆ, ಜಿ. ಪಿ. ರಾಜರತ್ನಂ ಅವರ 'ರತ್ನನ ಪದಗಳು'. ಹಿಂದಿನ ಕಾಲದಲ್ಲಿ ಹೀಗಿರಲಿಲ್ಲ. ಆದುದರಿಂದಲೇ ಸಾಹಿತ್ಯಭಾಷೆಯ ಮಾದರಿಯಿಂದ ಆ ಕಾಲದ ಆಡುಮಾತಿನ ಸ್ವರೂಪವನ್ನು ತಿಳಿಯಲು ಸಾಧ್ಯವಾಗದು ಎಂದುದು. ಶಾಸನಗಳು ಬಹುಮಟ್ಟಿಗೆ ಕನ್ನಡದ ಆಡುಮಾತಿನ ಸ್ವಭಾವವನ್ನು ಬಿಂಬಿಸುತ್ತವೆ ಎನ್ನಬಹುದಾದರೂ, ಅನೇಕ ವೇಳೆ ಶಾಸನಕರ್ತೃಗಳು ರಾಜಾಸ್ಥಾನದ ಕವಿಗಳಾಗಿದ್ದು (ಉದಾ : ರನ್ನ, ಜನ್ನನಂಥವರು) ಅವರು ಬರೆದ ಶಾಸನಗಳು ಒಂದು ರೀತಿಯಲ್ಲಿ ಮುಂದಿನ ತಮ್ಮ ಮಾರ್ಗಕಾವ್ಯಗಳಿಗೆ ಅವರು ನಡೆಸುವ 'ತಾಲೀಮು'ಗಳಂತಿರುವ ಖಂಡಕಾವ್ಯಗಳಾಗಿವೆ. ಹೀಗಿರುವುದರಿಂದ, ಕನ್ನಡ ಭಾಷೆಯ ಲಿಖಿತ ಆಧಾರಗಳ ಮೂಲಕ ಕನ್ನಡಭಾಷಾಸ್ವರೂಪವನ್ನು ವಿವರಿಸುವುದೆಂಬುದು ಕೇವಲ ತಾತ್ಪೂರ್ತಿಕವಾದುದು ಎನ್ನಬೇಕಷ್ಟೆ. ಬೇರೇನೂ ಸಾಧನ ತಮ್ಮ ಕೈಯೊಳಗಿಲ್ಲದಿರುವುದರಿಂದ, ಇದ್ದುದರಲ್ಲಿ ತೃಪ್ತಿಯನ್ನು ಹೊಂದಬೇಕಾಗಿದೆ. ಅಗುಳನ್ನು ಹಿಚುಕಿ ಅನ್ನ ಬೆಂದ ಹದವನ್ನು ತಿಳಿಯಬೇಕು.

ಸುಮಾರು ಒಂದೂವರೆ ಸಾವಿರ ವರ್ಷಗಳಿಂದ ಸತತವಾಗಿ ಹರಿದುಬಂದ ಕನ್ನಡ ಭಾಷೆಯಲ್ಲಿ ನಾಲ್ಕು ಕಾಲಘಟ್ಟಗಳನ್ನು ಗುರುತಿಸುವುದು ವಾಡಿಕೆ : (೧) ಪೂರ್ವದ ಹಳಗನ್ನಡ, (೨) ಹಳಗನ್ನಡ, (೩) ನಡುಗನ್ನಡ ಮತ್ತು (೪) ಹೊಸಗನ್ನಡ—ಎಂದು. ಈ ಅಭಿಪ್ರಾಯದ ಬಗ್ಗೆ ಮತಭೇದವಿದೆ. ಬಿ. ಎಲ್. ರೈಸರು ಪೂರ್ವದ ಹಳಗನ್ನಡ (೭ನೆಯ ಶತಮಾನದ ಅಂತ್ಯದ ವರೆಗೆ), ಹಳಗನ್ನಡ (೧೪ನೆಯ ಶತಮಾನದ ವರೆಗೆ), ಹೊಸಗನ್ನಡ ಅಲ್ಲಿಂದೀಚೆಗೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರೆ, ಎಫ್. ಕಿಟ್ಟೆಲ್ ಅವರು ಹಳಗನ್ನಡ (೭ನೆಯ ಶತಮಾನದಿಂದ ೧೨೫೦ ರ ವರೆಗೆ), ಮಧ್ಯಕಾಲದ ಕನ್ನಡ (೧೨೫೦ರಿಂದ ೧೫೦೦ರ ವರೆಗೆ), ಹೊಸಗನ್ನಡ (ಅಲ್ಲಿಂದೀಚೆಗೆ) ಎಂದೂ ಅಭಿಪ್ರಾಯಪಟ್ಟಿದ್ದಾರೆ. ಅಂದರೆ ರೈಸ್ ಅವರು ನಡುಗನ್ನಡವನ್ನೂ ಕಿಟ್ಟೆಲ್ ಅವರು ಪೂರ್ವದ ಹಳಗನ್ನಡವನ್ನೂ ಗುರುತಿಸುವುದಿಲ್ಲ (ಕನ್ನಡ ಕೈಪಿಡಿ, ಪು. ೩೧೨). ಆರ್. ನರಸಿಂಹಾಚಾರ್ಯರು ಮುಂತಾದ ದೇಶೀಯ ವಿದ್ವಾಂಸರು ಕನ್ನಡ ಭಾಷೆಯಲ್ಲಿ ಈ ನಾಲ್ಕು ಅವಸ್ಥೆಗಳನ್ನೂ ಗುರುತಿಸುತ್ತಾರೆ. ಆದರೆ ಮಾಸ್ತಿ ವೆಂಕಟೇಶ ಅಯ್ಯಂಗಾರರು ಈ

ಅವಸ್ಥಾಭೇದಗಳನ್ನು ಕನ್ನಡದಲ್ಲಿ ಮಾಡಬೇಕಾಗಿಲ್ಲ ಎನ್ನುತ್ತಾರೆ. ಬದಲಾವಣೆ ಏನೇ ಇದ್ದರೂ ಅದು ಭಾಷೆಯ ಹೊರಮೈಯಲ್ಲಿ ಮಾತ್ರ. ಇಂಗ್ಲಿಷಿನಂತಹ ಭಾಷೆಗಳಲ್ಲಿ ಹಳೆಯ ಮತ್ತು ಹೊಸ ರೂಪಗಳಿಗೆ ನೇರ ಸಂಬಂಧವೇ ಇಲ್ಲ. ಒಂದು ಸಾವಿರ ವರ್ಷಗಳ ಹಿಂದಿನ ಮತ್ತು ೨೦ನೆಯ ಶತಮಾನದ ಇಂದಿನ ಇಂಗ್ಲಿಷ್ ಮಾತಾಡುವವರಿಬ್ಬರು ಈಗ ಮುಖಾಮುಖಿಯಾದರೆ, ಒಬ್ಬನ ಮಾತು ಇನ್ನೊಬ್ಬನಿಗೆ ಅರ್ಥವೇ ಆಗದು. ಅಲ್ಲೊಂದು ಇಲ್ಲೊಂದು ಶಬ್ದ ಸಹ ತಿಳಿಯದಂತಾದೀತು. ಆದುದರಿಂದ ಅವುಗಳು ಬೇರೆಯೇ ಭಾಷೆಗಳು ಎಂಬಂತೆ ಭಾಸವಾದೀತು. ಇಷ್ಟರಮಟ್ಟಿನ ಭೇದ ಕನ್ನಡದ ಹಳೆ ಹೊಸ ರೂಪಗಳೊಳಗಿಲ್ಲವೆಂಬುದು ನಿಜ. ಸು. ೯೪೦ರಲ್ಲಿದ್ದ ಪಂಪ ಬಂದು ಕರ್ಣಾಟಕದ ಯಾರಾದರೊಬ್ಬರೊಡನೆ—ಈಗ ೧೯೯೩ರಲ್ಲಿ—“ನೀಂ ಬಾ ಪೋಪಂ” ಎಂದು ಹೇಳಿದರೆ, ಅವನಿಗೆ ಸರಿಯಾದ ಪ್ರತಿಕ್ರಿಯೆ ದೊರಕಬಹುದು ಎಂಬುದರಲ್ಲಿ ಸಂದೇಹವಿರದು. ಈ ದೃಷ್ಟಿಯಿಂದ ಮಾಸ್ತಿ ವೆಂಕಟೇಶ ಅಯ್ಯಂಗಾರರ ಮಾತು ಅರ್ಥವತ್ತಾಗಿದೆ. ಆದರೆ, ಭಾಷೆಯ ಹೊರಮೈಯಲ್ಲೇ ಆದರೂ ಭೇದಗಳು ತಲೆದೋರಿವೆ. ಅವುಗಳ ಆಧಾರದಿಂದ ಕನ್ನಡದ ಕಾಲಘಟ್ಟಕ್ಕನುಸರಿಸಿದ ಸ್ಥೂಲರೂಪವನ್ನು ಗುರುತಿಸಬೇಕಾಗುತ್ತದೆ ಎಂಬುದರಿಂದ, ವಿದ್ವಾಂಸರು ಕನ್ನಡಕ್ಕೆ ನಾಲ್ಕು ಕಾಲಘಟ್ಟಗಳೆಂದು ತಿಳಿದಿದ್ದಾರೆ. ೮ನೆಯ ಶತಮಾನದ ಕನ್ನಡದ ಶಾಸನಗಳ ಭಾಷೆಯಲ್ಲಿ ಪ್ರಾಚೀನ ರೂಪಗಳು ಅಧಿಕಸಂಖ್ಯೆಯಲ್ಲಿ ದೊರೆಯುತ್ತವೆ; ೯ನೆಯ ಶತಮಾನದಲ್ಲಿ ಪೂರ್ವದ ಹಳಗನ್ನಡವೆನ್ನಬಹುದಾದಂಥ ಈ ರೂಪಗಳೊಡನೆ ಈಗ ಹಳಗನ್ನಡವೆಂದು ಗುರುತಿಸುವ ರೂಪಗಳು ಬೆರೆತ ಸಂಕ್ರಮಣಾವಸ್ಥೆ ತೋರುತ್ತದೆ; ೧೧ನೇ ಶತಮಾನ ಸಂಪೂರ್ಣವಾಗಿ ಹಳಗನ್ನಡರೂಪವನ್ನು ಪಡೆದಿರುವುದು ತಿಳಿಯುತ್ತದೆ (**Gai G.S., 1946 : p. 109**). ಕನ್ನಡ ಸಾಹಿತ್ಯಚರಿತ್ರೆಯ ವಿಭಾಗದಲ್ಲಿ ಪ್ರಮುಖ ಕವಿಗಳನ್ನು ಆಧರಿಸಿ ವಿಂಗಡಣೆ ಮಾಡಿದಂತೆ (ರಂ. ಶ್ರೀ. ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ), ಭಾಷೆಯ ಚರಿತ್ರೆಯನ್ನೂ ವಿಂಗಡಿಸುವ ಪ್ರಯತ್ನ ಮಾಡಲಾಗಿದೆ (**Kushalappa Gowda, K., 1986**). ಕೆಳಗೆ ಕನ್ನಡದ ವಿವಿಧ ಸ್ವರೂಪದ ಈ ರೀತಿಯ ಕಾಲಮಾನಕ್ಕನುಸರಿಸಿದ ವಿಂಗಡಣೆಯನ್ನು ಕೊಡಲಾಗಿದೆ:

## ೧. ನೃಪತುಂಗ ಪೂರ್ವಯುಗ (೫ರಿಂದ ೯ನೇ ಶತಮಾನ)

**ಧ್ವನಿವ್ಯವಸ್ಥೆ**

(೧) ಪ್ರಾಗ್ದ್ರಾವಿಡದಲ್ಲಿ ಕ, ಚ, ಟ, ತ, ಪ ಗಳೆಂಬ ಕಠಿಣವರ್ಣಗಳಿಗೆ ಪ್ರತಿಯಾಗಿ ಗ, ಜ, ಡ, ದ, ಬ ಗಳೆಂಬ ಮೃದುವರ್ಣಗಳಿರಲಿಲ್ಲ. ಆದರೆ ಕನ್ನಡದಲ್ಲಿ ಎರಡೂ ಸಾಲಿನ ವ್ಯಂಜನಗಳು ದೊರೆಯುತ್ತವೆ.

(೨) ಱ—ರ, ೞ—ళ ಗಳ ವ್ಯತ್ಯಯ, ವಿನಿಮಯ ೮ನೇ ಶತಮಾನದಿಂದಲೇ ಆರಂಭವಾದರೂ, ಅಂತಹ ಸಂದರ್ಭಗಳು ತೀರ ವಿರಳ (**Gai G.S., 1946 : ೧೬ ಮತ್ತು ೧೭**).

(೩) ವರ್ಗವ್ಯಂಜನಗಳ ಮತ್ತು ವರ್ಗಾನುನಾಸಿಕಗಳ ಸಂಯುಕ್ತತೆಯ ಕೆಲವು ಸಂದರ್ಭಗಳಲ್ಲಿ ವರ್ಗಾನುನಾಸಿಕದ ಸ್ಥಾನವನ್ನು ಅನುಸ್ವಾರ ಆಕ್ರಮಿಸಿದೆ. ಉದಾ : ಒಂದು. ಬಂದು. ತಿಂಗಳ್—ಎಂಬಂತೆ. ಸಂಸ್ಕೃತ ಪದಗಳಿಗೆ ಚತುರ್ಥೀವಿಭಕ್ತಿಪ್ರತ್ಯಯ ಸೇರುವಾಗಲೂ ಅನುಸ್ವಾರವನ್ನು ಬರೆಯುವುದು ಕಂಡುಬರುತ್ತದೆ. ಆದರೆ ಈ ಅನುಸ್ವಾರವೆಂಬುದು ಕೇವಲ ಬರಹಕ್ಕೆ ಸಂಬಂಧಪಟ್ಟುದೇ ಹೊರತು. ಅದು ಧ್ವನ್ಯಾತ್ಮಕವಾಗಿ ಏನೂ ಪರಿಣಾಮ ಹೊಂದುವುದಿಲ್ಲ. ಇನ್ನು ಅನುಸ್ವಾರಸಂಜ್ಞೆಯಿದ್ದರೂ, ಆಯಾ ವರ್ಗಾಕ್ಷರಗಳ ಎದುರಿಗೆ ವರ್ಗಾನುನಾಸಿಕದ ಉಚ್ಚಾರಣೆಯೇ ಅದಕ್ಕಿರುವುದು.

**ರೂಪಾತ್ಮಕವಾಗಿ**

(೧) ದೀರ್ಘಸ್ವರಗಳಿಂದ ಕೂಡಿದ ಸರ್ವನಾಮಪ್ರತ್ಯಯಗಳು ಕಂಡುಬರುತ್ತವೆ. (ಆದರೆ ಓ ಮತ್ತು ಒ ವ್ಯತ್ಯಯ ನಡೆಯುತ್ತದೆ).

—ಆನ್, —ಆಳ್, —ಆರ್, —ಓನ್, —ಓರ್

| | | |
|---|---|---|
| ಉದಾ : ಸೌಖ್ಯಸ್ಥನಾಯ್ದಾನ್ | EC II | ೧೪–೪ |
| ಇಳ್ದಾಳ್ | ,, | ೧೧೩–೪ |
| ಸ್ವರ್ಗ್ಗಾಲಯಕ್ಕೇಱಿದಾರ್ | ,, | ೮೬–೪ |
| ಪಾವು ಮುಟ್ಟಿದೋನ್ | ,, | ೨೪–೧ |
| ಬಾಳ್ದೋರ್ | HGOK | ೪೦ |
| ಆಟಿದೋರ್ | ,, | ೪೦ |

(೨) ದ್ವಿತೀಯಾವಿಭಕ್ತಿಯ ಪ್ರತ್ಯಯ ದೀರ್ಘಸ್ವರದಿಂದ ಕೂಡಿದೆ :

| | | |
|---|---|---|
| ಉದಾ : ಸ್ವರ್ಗ್ಗಾಗ್ರಮಾನ್ | EC II | ೩೫–೪ |
| ನೋನ್ತೆಯಿದಾರ್ ಸಿದ್ಧಿಯಾನ್ | ,, | ೨೫–೪ |

(೩) ಷಷ್ಠೀವಿಭಕ್ತಿಯಲ್ಲಿ ದೀರ್ಘಸ್ವರ ಕಂಡುಬರುತ್ತದೆ :

| | | |
|---|---|---|
| ಉದಾ : ಕಟ್ವಿಪ್ಪಿನಾ ವೆಟ್ಟದುಳ್ | EC II | ೩೦–೧ |
| ದಕ್ಷಿಣಭಾಗದಾ ಮದುರೆ | ,, | ೨೪–೧ |
| ಧರ್ಮಸೇನಗುರುಗಳಾ ಶಿಷ್ಯರ್ | ,, | ೨೭–೧ |

(೪) ಸಪ್ತಮಿಯ ಪ್ರತ್ಯಯ—ಉಳ್, —ಉಳ್ಳೆ ಎಂದಿದೆ :

| | | |
|---|---|---|
| ಉದಾ : ಕಟ್ವಿಪ್ಪಿನಾ ವೆಟ್ಟದುಳ್ | EC II | ೩೦–೧ |
| ಕಟ್ವಿಪ್ಪಿನಾ ವೆಟ್ಟದುಳ್ಳೆ | ,, | ೯೪–೧–೩ |

(೫) ಲಿಂಗ ವಚನ ಕಾಲ ಭೇದವನ್ನು ತೋರದ—ಕುಂ ಪ್ರತ್ಯಯವುಳ್ಳ ಕ್ರಿಯಾ ಪದಗಳು ಅಧಿಕ ಸಂಖ್ಯೆಯಲ್ಲಿ ದೊರೆಯುತ್ತವೆ :

ಉದಾ : ಇರ್ಕುಂ, ಬರ್ಕುಂ ಇತ್ಯಾದಿ.

(೬) ಅಭಿವ್ಯಾಪಕ ಮತ್ತು ವ್ಯಾವರ್ತಕ ವ್ಯತ್ಯಾಸ ಉತ್ತಮಪುರುಷ ಬಹುವಚನದಲ್ಲಿ ಕಂಡುಬರುತ್ತದೆ. ಮುಂದೆ ಈ ವ್ಯತ್ಯಯ ಇಲ್ಲವಾಗಿದೆ :

ಉದಾ : ಎಮಗೆ (ವ್ಯಾ) ನಮಗೆ (ಅಭಿವ್ಯಾ)

(೭) ಪದಾದಿಯಲ್ಲಿ ವಕಾರವಿರುವ ಉದಾಹರಣೆಗಳು ಕಂಡುಬರುತ್ತವೆ :

| | | |
|---|---|---|
| ಉದಾ : | ವೆಟ್ಟದುಳ್ | EC II ೩೦–೧ |
| | ವೆಳ್ಮಾಡದಾ | ,, ೨೬–೧ |
| | ವಂದು | ,, ೮೬–೨ |
| | ವಾಳ್ವುದು | ,, ೧೦೮–೨ |

## ೨. ಪಂಪ ಮತ್ತು ಪಂಪೋತ್ತರ ಯುಗ (೧೦-೧೨ನೇ ಶತಮಾನ)

(೧) ೞ ಮತ್ತು ಳ ಗಳ ನಡುವಣ ಪ್ರತ್ಯೇಕತೆಯಲ್ಲಿ ಅಸ್ಥಿರತೆಯುಂಟಾಗಿದೆ.

(೨) ದೀರ್ಘಸ್ವರಗಳ ನಂತರ ಬರುತ್ತಿದ್ದ ಅನುಸ್ವಾರ (ಅನುನಾಸಿಕ) ಲೋಪ ಗೊಳ್ಳುತ್ತದೆ :

ಉದಾ : ಊರಿಂಗೆ > ಊರಿಗೆ ; ಪೇರಿಂಗೆ > ಪೇರಿಗೆ

(೩) ಪದಾದಿಯ ವ ಕಾರದ ಬದಲು ಬ ಕಾರ ಬರುತ್ತದೆ :

ಉದಾ : ವರ್ > ಬರ್ : ವಾಳ್ > ಬಾಳ್

(೪) ಪದಮಧ್ಯದ 'ಪ್ಪ' ಹ ಕಾರವಾಗಿ ಮಾರ್ಪಡುತ್ತದೆ :

ಉದಾ : ಅಂತಪ್ಪ > ಅಂತಹ ; ಅಪ್ಪ > ಅಹ

(೫) ಪದಾಂತ್ಯದಲ್ಲಿದ್ದ ಮ ಕಾರಕ್ಕೆ—ಉ ಕಾರ ಸೇರಿದ ಕಾರಣದಿಂದ ಅದು ವ ಕಾರವಾಗಿ ಪರಿವರ್ತನೆಗೊಂಡಿದೆ :

ಉದಾ : ನಾಂ ನಾಂ + ಉ + ನಾವು ; ಬಂದೆಂ ಬಂದೆಂ + ಉ + ಬಂದೆವು

(೬) ರ ಕಾರದ ನಂತರ ಬರುವ ದ್ವಿತ್ವವ್ಯಂಜನಗಳನ್ನು ಸರಳವ್ಯಂಜನಗಳನ್ನಾಗಿ ಬರೆಯುವ ಕ್ರಮ ಕಂಡು ಬರುತ್ತದೆ :

ಉದಾ : ತೇರ್ಗ್ಗೆ > ತೇರ್ಗೆ : ಕೂರ್ತ್ತು > ಕೂರ್ತು

**ರೂಪಾತ್ಮಕವಾಗಿ**

(೧) ಸರ್ವನಾಮಗಳ ದೀರ್ಘಸ್ವರದ ಬದಲು ಹ್ರಸ್ವಸ್ವರ ಕಂಡುಬರುತ್ತದೆ :

ಉದಾ : ಕೆಯ್ದನ್, ಕೊಟ್ಟನ್, ಗೆಲ್ದನ್ (೧೦ನೇ ಶತಮಾನ)
ಇಟ್ಟೊಂ, ಗೆಯ್ದೊಂ, ಆದೊಂ (HGOK ೧೫೩, ೯೪–೯೬)

(೨) ದ್ವಿತೀಯಾವಿಭಕ್ತಿಪ್ರತ್ಯಯ—ಅಮ್ ಎಂಬುದು—ಅನ್ ಎಂದು ಹ್ರಸ್ವಸ್ವರಯುಕ್ತವಾಗಿದೆ :

ಉದಾ : ಕಲ್ಲನ್, ಪಿಡಿಯನ್ (**Ramachandra Rao,** ೧೯೭೨, ೫೨)

(೩) ಷಷ್ಠೀವಿಭಕ್ತಿರೂಪದಲ್ಲಿ ಹ್ರಸ್ವ ಮತ್ತು ದೀರ್ಘ ಎರಡೂ ರೂಪಗಳು ದೊರೆಯುತ್ತವೆ. (ದೀರ್ಘರೂಪ ಬರುವುದು ಹೆಚ್ಚಾಗಿ ಛಂದಸ್ಸಿನ ಕಾರಣದಿಂದಾಗಿ) :

ಉದಾ : ಅ. ಕೆಯ್ಯ. ಪಲ್ಲ ; —ಆ ಇಂದುವಾ, ರಾಮನಾ (ಅದೇ ೬೪, ೬೫)

(೪) ಸಪ್ತಮೀವಿಭಕ್ತಿಯ ರೂಪ—ಒಳ್ ಎಂದಾಗಿದೆ :

ಉದಾ : ಆತನೊಳ್, ಇದಿರೊಳ್, ನನ್ನಿಯೊಳ್ (ಅದೇ ೬೭)

(೫) ಗೌರವ ಏಕವಚನ ಸರ್ವನಾಮರೂಪಗಳು ಕಂಡುಬರುತ್ತವೆ (ಶಾಸನಗಳಲ್ಲಿ ಇವು ೧೧ನೇ ಶತಮಾನದಿಂದೀಚೆಗೆ ಕಂಡುಬರುತ್ತವೆ ; ಕಾವ್ಯಭಾಷೆಯಲ್ಲಿ 'ಕವಿರಾಜಮಾರ್ಗ'ದ ಕಾಲದಿಂದಲೂ ಇವೆ).

ಉದಾ : ಆತನ್, ಈತನ್ ; ಆಕೆ, ಈಕೆ

(೬) ಪ್ರೇರಣಾರ್ಥಕ ಪ್ರತ್ಯಯ—ಇಪ್—ಎಂದಿದ್ದುದು—ಇಸ್—ಎಂದು ಕಂಡುಬರುತ್ತದೆ :

ಉದಾ : —ಇಪ್—ಕಿಡಿಪರ್, ಪಿಡಿಯಿಪ್ಪೆನ್ ; —ಇಸ್—ಕಿಡಿಸಲ್, ಪಿಡಿಯಿಸಿ

### ೩. ಬಸವೇಶ್ವರಾನಂತರದ ಯುಗ (೧೩-೧೫ನೇ ಶತಮಾನ)

೧೨ನೇ ಶತಮಾನದ ಉತ್ತರಾರ್ಧದಿಂದಲೇ ಮಧ್ಯಕಾಲೀನ ಕನ್ನಡದ ಸ್ವರೂಪ ತೋರಿ ಬರಲಾರಂಭಿಸಿತು ಎನ್ನಬಹುದು. ಸಂಸ್ಕೃತಭೂಯಿಷ್ಠವಾದ ಚಂಪೂಶೈಲಿ ಹಿನ್ನೆಲೆಗೆ ಸರಿದು, ದೇಸೀಯವಾದ ವಚನರೂಪಗಳೂ ದೇಶೀಛಂದಸ್ಸಿನ ರೂಪಗಳೂ ಮೇಲ್ನೆಲೆಗೆ ಬಂದ ಕಾಲ ಇದು. ಈ ಕಾಲದ ಭಾಷೆ ತೋರುವ ಕೆಲವು ವೈಶಿಷ್ಟ್ಯಗಳನ್ನು ಹೀಗೆ ಪಟ್ಟಿ ಮಾಡಬಹುದು :

(೧) ಇದಕ್ಕಿಂತ ಹಿಂದಣ ಯುಗದಲ್ಲಿ ತಲೆದೋರಿದ್ದ ಬದಲಾವಣೆಗಳು ಇದರಲ್ಲಿ ಗಟ್ಟಿಯಾಗಿ ನೆಲೆಗೊಳ್ಳುತ್ತವೆ.

(೨) ವ್ಯಂಜನಾಂತ ಪದಗಳು ಸ್ವರಾಂತಗಳಾಗಿ ಮಾರ್ಪಟ್ಟಿವೆ :

ಉದಾ : ಕಾಲ್ > ಕಾಲು, ಪಾಲ್ > ಪಾಲು, ಊರ್ > ಊರು ಇತ್ಯಾದಿ.

(೩) ಏಕವರ್ಣ (**Mono syllabic**) ಪದಗಳಲ್ಲಿ ಹ್ರಸ್ವಪದದಲ್ಲಿರುವ ಏಕವ್ಯಂಜನಕ್ಕೆ ಸ್ವರ ಪರವಾದರೆ ಆ ವ್ಯಂಜನ ದ್ವಿತ್ವವಾಗುತ್ತದೆ ; ಆದರೆ ಈ ಕಾಲದ ಕನ್ನಡದಲ್ಲಿ ಹಾಗೆ ದ್ವಿತ್ವವಾಗದೆ ಉಳಿಯುತ್ತದೆ.

ಉದಾ : ಕಲ್ + ಉ > ಕಲ್ಲು > ಕಲು ; ಪಲ್ + ಉ > ಪಲ್ಲು > ಪಲು

(೪) ಪದಗಳ ವರ್ಣಸ್ವರೂಪದಲ್ಲಿ ವ್ಯತ್ಯಾಸಗಳಾಗುತ್ತವೆ. ದೀರ್ಘಸ್ವರಗಳ ಅನಂತರ

ಬರುವ ಸಂಯುಕ್ತವ್ಯಂಜನಗಳು ವಿರಳವ್ಯಂಜನಗಳಾಗುತ್ತವೆ :

ಉದಾ : ಯಾರ್ಗೆ > ಯಾರಿಗೆ, ತೇರ್ಗೆ > ತೇರಿಗೆ, ಕೇಳ್ದು > ಕೇಳಿದು

(೫) ಪೂರ್ಣಕ್ರಿಯಾರೂಪದಲ್ಲಿ ಬರುವ ಪ್ರಥಮಪುರುಷ ಪುಲ್ಲಿಂಗ ಸರ್ವನಾಮ ಪ್ರತ್ಯಯ—ನು ಎಂಬುದು ಲೋಪಗೊಳ್ಳುತ್ತದೆ.

ಉದಾ : ಬಂದನು > ಬಂದ ; ತಂದನು > ತಂದ.

ನಾಮಪದಗಳಲ್ಲೂ ಇದು ಕಂಡುಬರುತ್ತದೆ :

ಉದಾ : ಮಗನು > ಮಗ ; ಅವನು > ಅವ.

(೬) ದೀರ್ಘಸಂಸ್ಕೃತಸಮಾಸಗಳನ್ನು ದೂರಮಾಡಿದೆ, ಅಲ್ಲದೆ ಹದಗೆಟ್ಟ ಸಂಸ್ಕೃತದ ಬೆರಕೆಯನ್ನು ವಿರೋಧಿಸಿ, ಅಪಭ್ರಂಶದೊಡನೆ ಬೆರೆತ ಅಚ್ಚಗನ್ನಡರೂಪ ತಲೆದೋರಿದೆ.

## ೪. ಪುರಂದರದಾಸ ಮತ್ತು ಪುರಂದರದಾಸರ ಅನಂತರದ ಯುಗ (೧೬-೧೮ನೇ ಶತಮಾನ)

ಧ್ವನ್ಯಾತ್ಮಕವಾಗಿ ಎಲ್ಲ ಬದಲಾವಣೆಗಳೂ ಹಿಂದೆಯೇ ನಡೆದು, ಆ ಬದಲಾದ ರೂಪವೇ ಸ್ಥಿರಗೊಂಡಿದೆ. ಸಾಹಿತ್ಯಕೃತಿಗಳಿಗೆ ಜನರ ಆಡುನುಡಿಯ ಪ್ರವೇಶವಾಗಿದೆ. ಈ ಕಾಲದಲ್ಲಿ ವರ್ತಮಾನ ಪೂರ್ಣಕ್ರಿಯಾಪದದ ನ್ಯೂನರೂಪಕ್ಕೆ ಇರ್—ಧಾತುವಿನ ಭವಿಷ್ಯತ್ ಪೂರ್ಣರೂಪವನ್ನು ಸೇರಿಸಿ ರಚಿಸಿಕೊಂಡಿದೆ. ನೋಡುತ್ತ + ಇಹೆಂ (< ಇರ್ಪೆಂ) ಎಂಬುದರಲ್ಲಿಯ ಉತ್ತರಾರ್ಧದ ಕ್ರಿಯಾಪದ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಒಂದು ಪ್ರತ್ಯಯರೂಪ ತಾಳಿ, ಸಮಾವೇಶಗೊಂಡಿದೆ : ಉದಾ : ನೋಡುತ್ತೇನೆ. ಹೀಗಾಗಿ ವರ್ತಮಾನ ಕ್ರಿಯಾರೂಪಕ್ಕೆ ಭೂತ ಮತ್ತು ಭವಿಷ್ಯದ್ರೂಪಕ್ಕಿಂತ ಭಿನ್ನವಾದ ಸರ್ವನಾಮಪ್ರತ್ಯಯಗಳ ರಚನೆಯಾಗಿದೆ.

| | | |
|---|---|---|
| ಉದಾ : ಉತ್ತಮಪುರುಷ | —ಏನೆ (ಏಕವಚನ) | —ಏವೆ (ಬಹುವಚನ) |
| ಮಧ್ಯಮಪುರುಷ | —ಈ, ಈಯ ; ಈಯೆ | —ಈರಿ |
| ಪ್ರಥಮಪುರುಷ | | |
| ಪುಲ್ಲಿಂಗ | —ಆನೆ | —ಆರೆ |
| ಸ್ತ್ರೀಲಿಂಗ | —ಆಳೆ | —ಆರೆ |
| ನಪುಂಸಕಲಿಂಗ | —ಅದೆ | —ಅವೆ |
| | —ಇದೆ | —ಇವೆ |

ಇದೇ ರೀತಿ ಅನಿಶ್ಚಿತ ಭವಿಷ್ಯದ್ರೂಪ ಪೂರ್ಣ ಕ್ರಿಯಾಪದವನ್ನು ಭೂತಕಾಲದ ಸರ್ವನಾಮ ಪ್ರತ್ಯಯದ ಮೊದಲಸ್ವರವನ್ನು ದೀರ್ಘಗೊಳಿಸುವುದರಿಂದ ರಚಿಸಿಕೊಳ್ಳುವುದೂ ಕಂಡುಬರುತ್ತದೆ :

| ಉದಾ : ಭೂತಕಾಲ | ಅನಿಶ್ಚಿತ ಭವಿಷ್ಯತ್ಕಾಲ |
|---|---|
| ಬಂದೆನು | ಬಂದೇನು |
| ಬಂದೆವು | ಬಂದೇವು |
| ಬಂದಿ | ಬಂದೀ |
| ಬಂದಿರಿ | ಬಂದೀರಿ |
| ಬಂದನು | ಬಂದಾನು |
| ಬಂದಳು | ಬಂದಾಳು |
| ಬಂದರು | ಬಂದಾರು |
| ಬಂದಿತು | ಬಂದೀತು |
| ಬಂದವು | ಬಂದಾವು |

(ಬಂದುದು. ಬಂದುವು ಎಂಬುವುಗಳನ್ನು ಈ ರೀತಿ ಪರಿವರ್ತನೆ ಮಾಡಿ ಬಳಸಲು ಸಾಧ್ಯವಿಲ್ಲ; ಕೆಲವು ಉಪಭಾಷೆಗಳಲ್ಲಿ ಬಂದಾತು ಎಂಬ ರೂಪವೂ ಇದೆ). ಇದೇ ಕಾಲದಲ್ಲಿ ಅರೇಬಿಕ್ ಮತ್ತು ಪರ್ಶಿಯನ್ ಪದಗಳು ಹೇರಳವಾಗಿ ಕನ್ನಡಕ್ಕೆ ಪ್ರವೇಶಿಸಿವೆಯೆಂದು ಹಿಂದೆಯೇ ನೋಡಲಾಗಿದೆ.

### ೫. ಆಧುನಿಕ ಕನ್ನಡ (೧೯ನೇ ಶತಮಾನದಿಂದ)

ಶಿಷ್ಟರೂಪದ ಕನ್ನಡ ಇದರ ಹಿಂದಿನ ಸ್ವರೂಪದ ಮುಂದುವರಿಕೆಯೇ ಎಂಬಂತೆ ಕಂಡುಬರುತ್ತದೆ. ಸಾಮಾಜಿಕ ಮತ್ತು ಪ್ರಾದೇಶಿಕ ಪ್ರಭೇದಗಳು ಹೆಚ್ಚು ಸ್ಫುಟಗೊಂಡಿವೆ. ಒಟ್ಟಾರೆಯಾಗಿ ನೋಡುವುದಾದರೆ ಕೆಲವು ಹೆಚ್ಚಿನ ಸ್ವರಗಳೂ ವ್ಯಂಜನಗಳೂ ಕೆಲವು ಪ್ರಭೇದಗಳಲ್ಲಾದರೂ ಧ್ವನಿಮಾಗಳೆಂದು ಪರಿಗಣಿತವಾಗುತ್ತವೆ. ಉದಾ : [i], [ə], [ɛ], [x] (ಸ್ವರಗಳು), [f], [z] (ವ್ಯಂಜನಗಳು). ಕನ್ನಡಕ್ಕೆ ಅಳವಟ್ಟ ಮುದ್ರಣದಲ್ಲಿ ಇವುಗಳಿಗೆ ಸಂಜ್ಞೆಗಳಿಲ್ಲದ ಕಾರಣ ತೋರಿಸಲು ಸಾಧ್ಯವಿಲ್ಲ. ಇವುಗಳ ಹಿಂದಣ ಐತಿಹಾಸಿಕ ಅಸ್ತಿತ್ವವನ್ನು ಈ ಕಾರಣದಿಂದ ತಿಳಿಯಲು ಸಾಧ್ಯವಾಗುವಂತಿಲ್ಲ. ಸಂಸ್ಕೃತದ ಲಿಪಿಯ ಮಾದರಿಯನ್ನು ಕನ್ನಡದಲ್ಲಿ ಬಳಸುವಲ್ಲಿ 'ಹ'ಕಾರಕ್ಕೆ ಲಿಪಿಸಂಜ್ಞೆಯಿದ್ದುದರಿಂದ ಅದು ಬರಹ ರೂಪದಲ್ಲೂ ತೋರಿ ಅದರ ಚರಿತ್ರೆಯನ್ನು ತಿಳಿಯಲು ಸಾಧ್ಯವಾಗಿದೆ. ಆದರೆ ಈ ಹೊಸಸ್ವರಗಳ ಇತಿಹಾಸಗಳನ್ನು ತಿಳಿಯಲು ಸಾಧ್ಯವಿಲ್ಲ. ಹೀಗಿದ್ದರೂ [ɛ] ಎಂಬುದನ್ನು ಪುನಾರಚಿಸಲು ಸಾಧ್ಯವಾಗುವಂತೆ ಕಂಡುಬರುತ್ತದೆ. ೧೩ನೇ ಶತಮಾನದ ದಕ್ಷಿಣ ಕನ್ನಡದ ಶಾಸನಗಳಲ್ಲಿ ಅ—ವನ್ನು ಯ—ಎಂದು ಬರೆಯಲಾಗಿದೆ. ಉತ್ತರ ಕನ್ನಡದಲ್ಲಿ ೧೪ನೇ ಶತಮಾನದಲ್ಲಿ ಇದು ಕಂಡುಬರುತ್ತದೆ. ಇದೇ ರೀತಿ ಎ—ಎಂಬುದನ್ನು ಕೊಡಗಿನ (೧೩ನೇ ಶತಮಾನ) ಶಾಸನಗಳಲ್ಲಿ ಯ—ಎಂದು ಬರೆದಿರುವುದು ಕಾಣುತ್ತದೆ. ಹೀಗಾಗಲು ಕಾರಣ ಅ ಮತ್ತು ಎ ಗಳಿಗೆ ಮಧ್ಯವರ್ತಿಯಾದ ಸ್ವರ [ɛ] ಜನರ ಉಚ್ಚಾರಣೆಯಲ್ಲಿದ್ದಿರಬೇಕು. ಕೇವಲ ಅ, ಎ ಗಳಾದರೆ ಅವುಗಳನ್ನು ಹಾಗೆಯೇ ತೋರಿಸಲು ಸಾಧ್ಯವಿತ್ತು (**Kushalappa Gowda, 1972, xxii**).

## ಆಕರಗಳು

1. Gai, G. S., 1946 : Historical Grammar of Old Kannada, Deccan College, Poona.
2. Kushalappa Gowda K., 1972 : A Grammar of Kannada Based on the Inscriptions of Coorg, South and North Kanara Districts. 1000 to 1400 A.D., Annamalai University, Annamalainagar.
3. Kushalappa Gowda, K., 1986 : The Kannada Language—A Historical Perspective Annals of Oriental Research, XXXI-I, University of Madras.
4. Ramachandra Rao, B., 1972 : Descriptive Grammar of *Pampa Bharata*, Mysore University.

# ಕನ್ನಡದ ಉಪಭಾಷೆಗಳು: ಒಂದು ಸಮೀಕ್ಷೆ

**ಸೋಮಶೇಖರಗೌಡ**

**ಕನ್ನಡ ಭಾಷೆ**

ದ್ರಾವಿಡ ಭಾಷೆಗಳಲ್ಲಿ ಕನ್ನಡ ತನ್ನ ಐತಿಹಾಸಿಕ ಹಿನ್ನೆಲೆಯಿಂದ, ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಪನ್ನತೆಯಿಂದ ಹೆಸರಾಂತ ಭಾಷೆ. ಇದು ಕರ್ನಾಟಕ ರಾಜ್ಯದ ಆಡಳಿತ ಭಾಷೆ. ಭಾರತ ರಾಜ್ಯಾಂಗದ ಎಂಟನೆಯ ನಿಬಂಧನೆಯಲ್ಲಿ ನಮೂದಿಸಿರುವ ೧೮ ರಾಷ್ಟ್ರ ಭಾಷೆಗಳಲ್ಲಿ ಕನ್ನಡವೂ ಒಂದು. ೧೯೭೩ರ ನವಂಬರ್ ಒಂದರಿಂದ ಅಧಿಕೃತವಾಗಿ ಕರ್ನಾಟಕ ಎಂದು ನಾಮಾಂಕಿತಗೊಂಡ ಕನ್ನಡನಾಡು, ಪೂರ್ವ ಪಶ್ಚಿಮವಾಗಿ ಸುಮಾರು ೪೦೦ ಕಿ.ಮಿ. ಮತ್ತು ಉತ್ತರ ದಕ್ಷಿಣವಾಗಿ ಸುಮಾರು ೭೭೦ ಕಿ.ಮಿ. ಉದ್ದವಾಗಿ ಹಬ್ಬಿದೆ. ಇದರ ಒಟ್ಟು ವಿಸ್ತೀರ್ಣ ೧,೯೧,೭೦೩ ಚದರ ಕಿ.ಮಿ.ಗಳು.

೧೯೯೧ರ ಜನಗಣತಿಯ ಮಾಹಿತಿಯಂತೆ ಕರ್ನಾಟಕದ ಜನಸಂಖ್ಯೆ ೪,೪೮,೧೭,೩೯೮. ಕ್ರಿ.ಶ. ಸುಮಾರು ೪೫೦ರ ಹಲ್ಮಿಡಿ ಶಾಸನವೇ ಕನ್ನಡದ ಪ್ರಾಚೀನ ಬರಹದ ದಾಖಲೆ : ಕ್ರಿ.ಶ. ಸುಮಾರು ೮೫೦ರ ಕವಿರಾಜಮಾರ್ಗವೇ ಕನ್ನಡದ ಉಪಲಬ್ಧವಿರುವ ಮೊದಲನೆಯ ಗ್ರಂಥ. ಹೀಗೆ ಸುಮಾರು ಎರಡು ಸಾವಿರ ವರ್ಷಗಳ ಪ್ರಾಚೀನ ಇತಿಹಾಸವನ್ನು ಹೊಂದಿರುವ, ವಿಸ್ತಾರವಾದ ಪ್ರದೇಶದಲ್ಲಿ ಅಪಾರ ಜನರಿಂದ ಮಾತಾಡಲ್ಪಡುತ್ತಿರುವ ಕನ್ನಡ ಭಾಷೆ ಉಜ್ವಲವಾದ ಸಾಹಿತ್ಯ, ಸಂಸ್ಕೃತಿಗಳ ಪರಂಪರೆಯನ್ನು ಒಳಗೊಂಡಿರುವುದಷ್ಟೇ ಅಲ್ಲ : ಅನೇಕ ಉಪಭಾಷೆಗಳನ್ನೂ ಹೊಂದಿತ್ತು ಎಂಬುದು ವಾಸ್ತವದ ಸಂಗತಿ.

> ದೋಷಮಿನಿತೆಂದು ಬಗೆದು । ದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ ।
> ವಾಸುಗಿಯುಮಱಿಯಲಾಱದೆ । ಬೇಸಱುಗುಂ ದೇಸಿ ಬೇಱೆವೇಱಪ್ಪುದಱಿಂ ॥

ವಾಸುಗಿಯೋ ಅರಿಯಲಾರದೆ ಬೇಸರಿಸುವಷ್ಟರಮಟ್ಟಿಗೆ ಬೇರೆ ಬೇರೆ 'ದೇಶಿ' ಪ್ರಭೇದಗಳು ಇದ್ದುವು ಎಂಬುದು ಕವಿರಾಜಮಾರ್ಗಕಾರನ ಮಾತು (೧–೪೬). ಈಗ ಇರುವಂತೆಯೇ ಹಿಂದೆಯೂ ಕನ್ನಡದಲ್ಲಿ ಪ್ರಾಂತಭೇದಗಳಿದ್ದಿರಬೇಕು. ದಕ್ಷಿಣೋತ್ತರ ಮಾರ್ಗಗಳ ಪ್ರಸ್ತಾವ ಕವಿರಾಜಮಾರ್ಗದಲ್ಲಿದೆ.

ಕುತೂಹಲಕ್ಕಾಗಿ ಉಪಭಾಷೆಗಳ (ಕನ್ನಡೇತರ) ಅಸ್ತಿತ್ವವನ್ನು ಕೆದಕುತ್ತಾ ಹೊರಟರೆ, ಬಹಳ ಹಿಂದೆಯೇ ಅರಿಸ್ಟೋಫೆನಿಸ್ ಎಂಬ ಗ್ರೀಕ್ ನಾಟಕಕಾರ ತನ್ನ ನಾಟಕಗಳಲ್ಲಿ

ಹಾಸ್ಯವನ್ನು ತರಲು, ಗ್ರಾಮ್ಯ ಪಾತ್ರಗಳನ್ನು ಚಿತ್ರಿಸಲು, ಉಪಭಾಷೆಗಳನ್ನು ಬಳಸಿರುವುದು ತಿಳಿದುಬರುತ್ತದೆ. ಭರತನ ನಾಟ್ಯಶಾಸ್ತ್ರದಲ್ಲಿ ಉಪಭಾಷೆಗಳ ಬಗೆಗೆ ಸ್ಪಷ್ಟ ಮಾಹಿತಿ ಇದೆ. ಆದರೆ ಈ ಉಪಭಾಷೆಗಳ ಅಧ್ಯಯನಕ್ಕೆ ಮಹತ್ತ್ವ ಬಂದದ್ದು, ಚಾಲನೆ ದೊರೆತದ್ದು ೧೯ನೇ ಶತಮಾನದ ಕೊನೆಕೊನೆಗೆ ; ನವವೈಯಾಕರಣರಿಂದ. ಅನಂತರದಲ್ಲಿ ಇವುಗಳ ಅಧ್ಯಯನ ವೈಜ್ಞಾನಿಕರೂಪ ಪಡೆದದ್ದು ಗಿಲಿಯರೋನ್, ಹಾನ್ಸ್ ಕುರಾತ್ ಮೊದಲಾದವರಿಂದ. ಹತ್ತೊಂಬತ್ತನೇ ಶತಮಾನದಲ್ಲಿ ಪ್ರಪಂಚದ ಎಲ್ಲ ಭಾಷೆಗಳು ಒಂದೇ ಮೂಲದಿಂದ ಬಂದವುಎಂಬುದನ್ನು ಸಾಬೀತುಗೊಳಿಸಲು ಹೊರಟ ವಿದ್ವಾಂಸರು ಭಾಷೆಗಳ ನಡುವಣ ಸಂಬಂಧವನ್ನು ಪ್ರತಿಷ್ಠಾಪಿಸುತ್ತಾ ಭಾಷಿಕ ಪುನಾರಚನೆಗೆ ತೊಡಗಿದಾಗ, ಉಪಭಾಷಾ ಭೂಗೋಳ ಕೂಡ ಪುನಾರಚನೆಯ ಪೂರಕತಂತ್ರವಾಗಿ ಬೆಳೆದುಬಂತು. ಬರಹದ ಭಾಷೆಗಳಿಗಷ್ಟೇ ಪ್ರಾಮುಖ್ಯ ಕೊಡುತ್ತಿದ್ದ ವ್ಯಾಕರಣಕಾರರ ದೃಷ್ಟಿಯನ್ನು ಉಪಭಾಷಾ ವಿಜ್ಞಾನಿಗಳು ಆಡುಮಾತಿನ ಕಡೆಗೆ ಸೆಳೆದರು. ಇಲ್ಲಿಂದ ಮುಂದೆ ಆಡುನುಡಿಯ ಅಧ್ಯಯನವೇ ಭಾಷಾವಿಜ್ಞಾನದ ಪ್ರಮುಖ ಲಕ್ಷ್ಯವಾಯಿತು. ಉಪಭಾಷೆಗಳ ದತ್ತ ಸಂಗ್ರಹಣೆ ಹಾಗೂ ವಿಶ್ಲೇಷಣೆಗಳೇ ಅದರ ಕಾರ್ಯವಾಯಿತು. ಹೀಗಾಗಿ ಉಪಭಾಷಾ ವಿಜ್ಞಾನ ಎಂಬ ಪ್ರತ್ಯೇಕ ಶಾಖೆಯೇ ಭಾಷಾವಿಜ್ಞಾನದಲ್ಲಿ ಕುಡಿಯೊಡೆಯಿತು.

## ಉಪಭಾಷೆಗಳನ್ನು ಗುರುತಿಸುವ ಬಗೆ

ಒಂದೇ ಭಾಷೆಯಲ್ಲಿ ವ್ಯಕ್ತಿಭಾಷೆ, ಪ್ರಭೇದ ಮತ್ತು ಉಪಭಾಷೆ ಮುಂತಾದ ವೈವಿಧ್ಯಗಳಿರುವುದು ಆ ಭಾಷೆಯ ಭಿನ್ನತೆಗಳನ್ನು ಅವಲೋಕಿಸಿದಾಗ ಮನವರಿಕೆಯಾಗುತ್ತದೆ. ಒಬ್ಬ ವ್ಯಕ್ತಿ ಒಂದು ಗೊತ್ತಾದ ಕಾಲದಲ್ಲಿ, ನಿರ್ದಿಷ್ಟ ಪರಿಸರದಲ್ಲಿ ಬಳಸುವ ಮಾತು ವ್ಯಕ್ತಿಭಾಷೆ ; ಇದೇ ಭಾಷೆಯ ಪ್ರಾರಂಭಿಕ ಅವಸ್ಥೆ. ಇಂಥ ಅನೇಕ ವ್ಯಕ್ತಿಭಾಷೆಗಳು ಒಟ್ಟಾಗಿ ಒಂದು ಪ್ರಭೇದ ಜನ್ಮತಳೆಯುತ್ತದೆ. ಪರಸ್ಪರ ಅರ್ಥವಾಗುವಂತೆ ಮಾತನಾಡುವಂಥ ಜನರ ಸಣ್ಣ ಗುಂಪು ಇದು. ಪ್ರಭೇದ ಸಾಮಾನ್ಯವಾಗಿ ಒಂದು ಹಳ್ಳಿ, ತಾಲ್ಲೋಕು. ಹೆಚ್ಚೆಂದರೆ ಒಂದು ಜಿಲ್ಲೆಯ ಕೆಲವು ಭಾಗಗಳನ್ನು ತನ್ನ ಎಲ್ಲೆಯಾಗಿಸಿಕೊಳ್ಳಬಹುದು. ಆದರೆ ಭಾಷೆಯ ಪ್ರದೇಶವು ವಿಸ್ತಾರವಾದಂತೆ ಭಿನ್ನತೆಯೂ ಹೆಚ್ಚುತ್ತಾ ಹೋಗಿ, ಪರಸ್ಪರ ಅರಿವು ಕುಂಠಿತವಾಗಿ, ಉಪಭಾಷಾವಲಯಗಳು ನಿರ್ಮಾಣವಾಗುತ್ತವೆ. ಎಂದರೆ ಅನೇಕ ಪ್ರಭೇದಗಳ ಮೊತ್ತವಾಗಿ ಉಪಭಾಷೆ ರೂಪುಗೊಳ್ಳುತ್ತದೆ. ಸಹಜವಾಗಿಯೇ ಉಪಭಾಷಾಕ್ಷೇತ್ರ ಪ್ರಭೇದದ ಕ್ಷೇತ್ರಕ್ಕಿಂತ ವಿಸ್ತಾರವಾದುದಾಗಿರುತ್ತದೆ. ಇಂಥ ಅನೇಕ ಉಪಭಾಷೆಗಳು ಕೂಡಿ ಒಂದು ಭಾಷೆ ಚಾಲನೆಯಲ್ಲಿರುತ್ತದೆ.

ಒಂದು ಉಪಭಾಷೆಯನ್ನು ಇನ್ನೊಂದು ಉಪಭಾಷೆಯಿಂದ ಪ್ರತ್ಯೇಕಿಸಲು ಅಥವಾ ಒಂದು ಭಾಷೆಯ ಅನೇಕ ಉಪಭಾಷೆಗಳನ್ನು ಗುರುತಿಸಲು ಈ ಕೆಲವು ಭಾಷಿಕ ಅಂಶಗಳನ್ನು ಪರಸ್ಪರ ಹೋಲಿಸಬೇಕಾಗುತ್ತದೆ : (೧) ಉಚ್ಚಾರಣೆ (೨) ವ್ಯಾಕರಣಾತ್ಮಕ ಅಂಶಗಳು (೩) ಪದಪ್ರಯೋಗ.

ಈ ಅಂಶಗಳನ್ನು ಕನ್ನಡದ ಧಾರವಾಡ ಮತ್ತು ಮೈಸೂರು ಉಪಭಾಷೆಗಳಿಗೆ ಸಂಬಂಧಿಸಿದಂತೆ ಹೋಲಿಸಿದರೆ ಅವೆರಡರ ನಡುವಣ ಭಿನ್ನತೆಯ ಸ್ವರೂಪ ಸ್ಪಷ್ಟವಾಗುತ್ತದೆ.

೧. ಮೈಸೂರು ಪ್ರಾಂತ್ಯದಲ್ಲಿ ಎಕಾರಾಂತವಾಗಿ ಉಚ್ಚರಿಸಲ್ಪಡುವ ಶಬ್ದಗಳು ಧಾರವಾಡ ಪ್ರಾಂತ್ಯದ ಉಚ್ಚಾರಣೆಯಲ್ಲಿ ಇಕಾರಾಂತವಾಗುತ್ತವೆ :

| | | |
|---|---|---|
| ಉದಾ : | ಕುದುರೆ | ಕುದುರಿ |
| | ಒಂಟೆ | ಒಂಟಿ |
| | ಆನೆ | ಆನಿ |
| | ಮನೆ | ಮನಿ |

೨. ಮೈಸೂರು ಕನ್ನಡದಲ್ಲಿ ವ್ಯಂಜನಾಂತ ಶಬ್ದಗಳಿಗೆ 'ಉ' ಸ್ವರ ಸೇರಿದರೆ ಧಾರವಾಡ ಕನ್ನಡದಲ್ಲಿ ಅದು 'ಅ' ಆಗಿದೆ

| | | |
|---|---|---|
| ಉದಾ : | ಬಟ್ಟಲು | ಬಟ್ಟಲ |
| | ಸ್ಕೂಲು | ಸ್ಕೂಲ |
| | ಇಂಗ್ಲೆಂಡು | ಇಂಗ್ಲೆಂಡ |

೩. ಮೈಸೂರು ಕನ್ನಡ ಉಪಭಾಷೆಯಲ್ಲಿ 'ಇದೆ', 'ಇವೆ' ಎಂಬ ಕ್ರಿಯಾಪದಗಳು ರೂಢಿಯಲ್ಲಿವೆ ; ಧಾರವಾಡ ಪ್ರಾಂತ್ಯದಲ್ಲಿ 'ಅದೆ', 'ಅವೆ' ಎಂಬುವು ಬಳಕೆಯಲ್ಲಿವೆ :

ಉದಾ : ಮನೆಯಲ್ಲಿ ಏನಿದೆ ?
ಮನಿಯಾಗ ಏನದ ?

೪. ಕೆಲವು ಶಬ್ದಗಳನ್ನು ಒಂದೊಂದು ಪ್ರಾಂತ್ಯದವರು ಒಂದೊಂದು ಅರ್ಥದಲ್ಲಿ ಬಳಸುತ್ತಾರೆ.

ಉದಾ : ತಿಂಡಿ —ಉಪಾಹಾರ (ಮೈ), ತೀಟೆ (ಧಾ)
ಕಷ್ಟ —ತೊಂದರೆ (ಮೈ), ಕ್ಷೌರ (ಧಾ)
ಅಮ್ಮ —ತಾಯಿ (ಮೈ), ವಿಧವೆ (ಧಾ)

೫. ಅನ್ಯಭಾಷಾ ಶಬ್ದಗಳು ಒಂದೊಂದು ಪ್ರಾಂತ್ಯದಲ್ಲಿ ಒಂದೊಂದು ವಿಧವಾಗಿ ರೂಢಿಯಲ್ಲಿವೆ.

| | | |
|---|---|---|
| ಉದಾ : | ಹರಾಜು | ಲಿಲಾವು |
| | ಆಮಂತ್ರಣ | ನಿಮಂತ್ರಣ |
| | ಪ್ರಯಾಣ | ಪ್ರವಾಸ |

Scanned by CamScanner

೬. ವಾಕ್ಯಗಳಲ್ಲಿ ಪ್ರಾಂತಭೇದ ಢಾಳಾಗಿ ಗೋಚರಿಸುತ್ತದೆ.

ಉದಾ : ಅವನು ಮರ ಹತ್ತಿದ್ದಾನೆ (ಮೈ)

ಅವಾ ಮರ ಹತ್ಯಾನ (ಧಾ)

ಇವನು ಬಸ್ಸು ಇಳಿಯುತ್ತಿದ್ದಾನೆ (ಮೈ)

ಇವ ಬಸ್ ಇಳಿಲಿಕ್ಹತ್ಯಾನ (ಧಾ)

ನೀನು ಈ ಕೆಲಸವನ್ನು ಮಾಡಲೇಬೇಕು (ಮೈ)

ನೀ ಈ ಕೆಲಸ ಮಾಡಲಿಕ್ಕೇಬೇಕು (ಧಾ)

## ಉಪಭಾಷೆಗಳು ಉಂಟಾಗಲು ಕಾರಣಗಳು

ದೇಶಭೇದದಿಂದಲೂ ಕಾಲಭೇದದಿಂದಲೂ ಭಾಷೆಯಲ್ಲಿ ಪರಿವರ್ತನೆಯುಂಟಾಗಿ ಪ್ರಭೇದಗಳು ಹೆಚ್ಚುತ್ತವೆ ಎಂದೂ ಜೊತೆಗೆ ಹೀಗೆ ಭಾಷೆ ವ್ಯತ್ಯಯಗೊಳ್ಳುವುದಕ್ಕೆ ಇರುವ ಮುಖ್ಯವಾದ ಕಾರಣಗಳನ್ನು ಅಂತರಿಕ ಮತ್ತು ಬಾಹ್ಯ ಎಂದು ಎರಡು ಬಗೆಯಲ್ಲಿ ವಿಂಗಡಿಸಿಕೊಳ್ಳಬಹುದೆಂದೂ ಬಿ.ಎಂ.ಶ್ರೀ ಅವರು ಹೇಳಿದ್ದಾರೆ. ವರ್ಣೋತ್ಪತ್ತಿಸ್ಥಾನ ಭೇದ ಮತ್ತು ಸೌಲಭ್ಯಾಕಾಂಕ್ಷೆಯನ್ನು ಭಾಷೆಯ ಆಂತರಿಕ ಅಥವಾ ನೈಸರ್ಗಿಕ ಕಾರಣಗಳೆಂದೂ ಅನ್ಯಭಾಷಾಸಂಸರ್ಗವನ್ನು ಬಾಹ್ಯಕಾರಣವೆಂದೂ ಅವರು ಪಟ್ಟಿಮಾಡಿದ್ದಾರೆ.

ಬಿ.ಎಂ.ಶ್ರೀ ಅವರು ಕೊಟ್ಟ ಕಾರಣಗಳನ್ನೇ ಮುಂದು ಮಾಡಿಕೊಂಡು ಆರ್.ಸಿ. ಹಿರೇಮಠ ಅವರು ಭಾಷಿಕ ಭಿನ್ನತೆಗಳಲ್ಲಿ ಪ್ರಧಾನವಾಗಿ ಕಾಲಾನುಗತ ಭಿನ್ನತೆ ಮತ್ತು ಪ್ರದೇಶಾನುಗತ ಭಿನ್ನತೆ ಎಂದು ಎರಡು ಪ್ರಮುಖ ವಿಧಗಳನ್ನು ಗುರುತಿಸಬಹುದೆಂದು ಹೇಳಿದ್ದಾರೆ. ಅವರ ಪ್ರಕಾರ : ''ಕಾಲಾನುಕ್ರಮದಲ್ಲಿ ಉಂಟಾದ ಭಿನ್ನತೆ ಕಾಲಾನುಗತ ಭಿನ್ನತೆ. ಒಂದು ಭಾಷೆಯನ್ನು ಅದರ ಹಿಂದಿನ ಘಟ್ಟದಿಂದ ಅವಲೋಕಿಸುತ್ತ ಬಂದಾಗ ಅಲ್ಲಿಯ ರೂಪಗಳು ಕಾಲಕಾಲಕ್ಕೆ ಬದಲಾಗಿದ್ದುದು ಕಂಡುಬರುತ್ತದೆ. ನಿರಂತರವೂ ನಡೆಯುತ್ತಲೇ ಇರುವ ಈ ಭಿನ್ನತೆ ಕಾಲಾನುಗತಭಿನ್ನತೆ. ಭಿನ್ನಭಿನ್ನ ಪ್ರದೇಶಕ್ಕನುಸರಿಸಿ ಭಿನ್ನವಾಗುವುದು ಪ್ರದೇಶಾನುಗತಭಿನ್ನತೆ. ಒಂದು ಪ್ರದೇಶದಲ್ಲಿ ಒಂದು ರೂಪ ಕಂಡುಬಂದರೆ, ಇನ್ನೊಂದು ಪ್ರದೇಶದಲ್ಲಿ ಇನ್ನೊಂದು ರೂಪ ಕಂಡುಬರುತ್ತದೆ. ಇಂಥ ರೂಪಗಳೇ ಆಯಾ ಪ್ರಾದೇಶಿಕ ವೈಶಿಷ್ಟ್ಯಗಳು.'' ಹೀಗೆ ಭಾಷೆಯ ಬದಲಾವಣೆಗೆ ಕಾಲ ಮೂಲಕಾರಣ ; ಕಾಲದಷ್ಟೇ ಮಹತ್ತ್ವದ ಇನ್ನೊಂದು ಕಾರಣ ಪ್ರದೇಶ, ಇವುಗಳ ಜೊತೆಗೆ ಸೇರಬೇಕಾದ ಮತ್ತೊಂದು ಪ್ರಮುಖ ಅಂಶ ಎಂದರೆ ಭಾಷಿಕಪರಿಸರ. ಈ ಪರಿಸರ ಅನೇಕ ಬಗೆಯದಾಗಿರಬಹುದು. ನದಿ, ಪರ್ವತ, ಅರಣ್ಯ ಮುಂತಾದ ನೈಸರ್ಗಿಕ ಪರಿಸರವಾಗಿರಬಹುದು ; ಇಲ್ಲವೆ ಅನ್ಯಭಾಷೆಯ ಪರಿಸರವಾಗಿರಬಹುದು.

ನೈಸರ್ಗಿಕ ಅಡಚಣೆಯ ಮೂಲಕ ಒಂದೇ ಭಾಷೆಯನ್ನು ಮಾತನಾಡುವ ಎರಡು ಗುಂಪುಗಳ ನಡುವೆ ಸಂಪರ್ಕ ತಪ್ಪಿ ಕ್ರಮೇಣ ಈ ಗುಂಪುಗಳು ತಮ್ಮವೇ ಆದ ವೈಶಿಷ್ಟ್ಯ

... ಹರಿಯುವ ಕೃಷ್ಣ, ತುಂಗಭದ್ರಾ, ಕಾವೇರಿ, ಹೇಮಾವತಿ, ನೇತ್ರಾವತಿ, ಘಟಪ್ರಭಾ, ಮಲಪ್ರಭಾ, ಭೀಮಾ, ವರದಾ ಮುಂತಾದ ನದಿಗಳ ಎರಡೂ ಬದಿಗೆ ಈ ಬಗೆಯ ಭಾಷಿಕಭಿನ್ನತೆಯನ್ನು ಗುರುತಿಸಬಹುದು. ಉದಾ : ತುಂಗಭದ್ರೆಯ ಒಂದು ಮಗ್ಗಲಿನ ಬಳ್ಳಾರಿ ಕನ್ನಡಕ್ಕೂ ಇನ್ನೊಂದು ಮಗ್ಗಲಿನ ರಾಯಚೂರು ಕನ್ನಡಕ್ಕೂ ಇವೆರಡಕ್ಕಿಂತ ಭಿನ್ನವಾದ ಮತ್ತೊಂದು ಕಡೆಯ ಧಾರವಾಡ ಕನ್ನಡಕ್ಕೂ ಹೇರಳ ವ್ಯತ್ಯಾಸಗಳನ್ನು ಎತ್ತಿ ತೋರಿಸಬಹುದು.

ನದಿಗಳಂತೆಯೇ ಗುಡ್ಡ ಬೆಟ್ಟ ಅರಣ್ಯಗಳೂ ಭಾಷಿಕವ್ಯತ್ಯಾಸಕ್ಕೆ, ಉಪಭಾಷಾ ಬೆಳವಣಿಗೆಗೆ ಕಾರಣವಾಗಿವೆ. ಅನೇಕ ಗುಡ್ಡ ಬೆಟ್ಟಗಳಿರುವ ಕನ್ನಡದ ಪ್ರದೇಶದಲ್ಲಿ ಕರಾವಳಿ ಕನ್ನಡ, ಮಲೆನಾಡು ಕನ್ನಡ ವಿಶಿಷ್ಟ ಬಗೆಯವು.

ಅನ್ಯಭಾಷೆಯ ಪರಿಸರವೂ ಹೀಗೆಯೇ ಭಾಷೆಯ ಭಿನ್ನತೆಗೆ, ವೈವಿಧ್ಯಕ್ಕೆ ಕಾರಣವಾಗಿದೆ. ಬಹುವಿಸ್ತಾರವಾದ ಪ್ರದೇಶವನ್ನೊಳಗೊಂಡಿರುವ ಕನ್ನಡಭಾಷೆ ತನ್ನ ಗಡಿಗಳಲ್ಲಿ ತಮಿಳು, ತೆಲುಗು, ಮಲಯಾಳಂ, ತುಳು, ಉರ್ದು, ಕೊಂಕಣಿ, ಹಿಂದಿ, ಮರಾಠಿ ಮುಂತಾದ ಭಾಷೆಗಳ ಸಂಪರ್ಕವನ್ನು ಹೊಂದಿದೆ. ಇದರಿಂದಾಗಿ ಕನ್ನಡದ ಪ್ರಾದೇಶಿಕ ಪ್ರಭೇದಗಳು ಹೆಚ್ಚಲು ಕಾರಣವಾಗಿದೆ. ಉದಾಹರಣೆಗೆ ಮೈಸೂರು ಜಿಲ್ಲೆಯಲ್ಲಿ ತಮಿಳಿನ ಪ್ರಭಾವಕ್ಕೊಳಗಾಗಿರುವ ಕನ್ನಡ ಪ್ರಭೇದ ದೊರೆತರೆ, ರಾಯಚೂರು, ಬಳ್ಳಾರಿ ಚಿತ್ರದುರ್ಗ ಹಾಗೂ ಕೋಲಾರ ಜಿಲ್ಲೆಗಳಲ್ಲಿ ತೆಲುಗು ಪ್ರಭಾವದ ಕನ್ನಡ ಪ್ರಭೇದವನ್ನು, ಉತ್ತರಕನ್ನಡ, ದಕ್ಷಿಣಕನ್ನಡ ಹಾಗೂ ಕೊಡಗು ಜಿಲ್ಲೆಗಳಲ್ಲಿ ಮಲೆಯಾಳಂ ಪ್ರಭಾವಿತವಾದ ಕನ್ನಡಪ್ರಭೇದವನ್ನು, ಬೀದರ್, ಗುಲ್ಬರ್ಗ, ರಾಯಚೂರು ಜಿಲ್ಲೆಗಳಲ್ಲಿ ಉರ್ದು ಪ್ರಭಾವದ ಕನ್ನಡಪ್ರಭೇದವನ್ನು ಕಾಣಬಹುದಾಗಿದೆ. ಹಾಗೆಯೇ, ಬೀದರ್, ಬೆಳಗಾವಿ, ಬಿಜಾಪುರ, ಕಾರವಾರ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಮರಾಠಿ ಪ್ರಭಾವದ ಕನ್ನಡವನ್ನು ಕಾಣಬಹುದಾಗಿದೆ.

ಮನುಷ್ಯರ ನಡುವೆ ಸಂಸರ್ಗ ಕಡಿಮೆಯಾಗಲು ಪ್ರಕೃತಿನಿರ್ಮಿತ ಪ್ರತಿಬಂಧಕಗಳಿಗಿಂತ ಮನುಷ್ಯನಿರ್ಮಿತ ರಾಜಕೀಯವಿಭಾಗಗಳು ಪ್ರಬಲವಾದ ಕಾರಣಗಳಾಗಿ ಕೆಲಸಮಾಡಿವೆ. ಉದಾಹರಣೆಗೆ ಬೊಂಬಾಯಿ ಅಧಿಪತ್ಯದ ಕನ್ನಡಿಗರು, ನೈಜಾಮ್ ಇಲಾಖೆಯ ಕನ್ನಡಿಗರು, ಮದ್ರಾಸ್ ಅಧಿಪತ್ಯದ ಕನ್ನಡಿಗರು, ಮೈಸೂರಿನ ಕನ್ನಡಿಗರು ಇವರ ನಡುವೆ ಪರಸ್ಪರ ಭಾಷಿಕ ಅರಿವು ಹೆಚ್ಚಾಗಿ ಉಂಟಾಗದಿರುವುದಕ್ಕೆ ಈ ಬಗೆಯ ರಾಜಕೀಯ ವಿಭಾಗಗಳೇ ಬಲುಮಟ್ಟಿಗೆ ಕಾರಣ.

## ಪ್ರಾದೇಶಿಕ ಹಾಗೂ ಸಾಮಾಜಿಕ ಉಪಭಾಷೆಗಳು

ಸಾಮಾಜಿಕ ಭಾಷಾವಿಜ್ಞಾನಿಗಳು ಉಪಭಾಷೆಗಳುಂಟಾಗಲು ಹೆಸರಿಸಿರುವ ಕಾರಣ

ಒಂದು ಭಾಷೆಯನ್ನಾಡುವ ಜನರಲ್ಲಿ ಎಷ್ಟೆಷ್ಟು ಸಂಸರ್ಗವು ಹೆಚ್ಚಾಗಿರುವುದೋ, ಅವರು ಆಡುವ ಮಾತಿನಲ್ಲಿ ಅಷ್ಟಷ್ಟು ಏಕರೂಪತೆ ಇರುವುದು ಸ್ವಾಭಾವಿಕ. ಹಾಗಿಲ್ಲದೆ ಪ್ರಾದೇಶಿಕದೂರದಿಂದಾಗಿ ಪರಸ್ಪರಸಂಸರ್ಗವು ಕಡಿಮೆಯಾದಷ್ಟೂ ಪ್ರಾದೇಶಿಕಪ್ರಭೇದಗಳು ಹೆಚ್ಚುತ್ತವೆ. ಹಾಗೆಯೇ ಈ ಹಿಂದೆ ಪ್ರಸ್ತಾವಿಸಿರುವಂತೆ ನದಿ ಗುಡ್ಡ ಕಾಡು ಇತ್ಯಾದಿ ಪ್ರತಿಬಂಧಕಗಳಿಂದಲೂ ಪ್ರಾದೇಶಿಕ ಪ್ರಭೇದಗಳು ಉಂಟಾಗುತ್ತವೆ. ಹೀಗೆ ಪ್ರಾದೇಶಿಕದೂರ ಹಾಗೂ ಪ್ರತಿಬಂಧಕಗಳು ಕಾರಣವಾಗಿ ರೂಪತಳೆಯುವ ಭಾಷಿಕ ಪ್ರಭೇದಗಳನ್ನು ಪ್ರಾದೇಶಿಕ ಉಪಭಾಷೆಗಳು ಎಂದು ಕರೆಯಲಾಗಿದೆ. ಉದಾ : ಕನ್ನಡದಲ್ಲಿ ಮೈಸೂರು ಕನ್ನಡ, ಧಾರವಾಡ ಕನ್ನಡ, ಗುಲ್ಬರ್ಗ ಕನ್ನಡ ಮತ್ತು ಮಂಗಳೂರು (ಅಥವಾ ಕರಾವಳಿ) ಕನ್ನಡ ಎಂಬ ಈ ನಾಲ್ಕನ್ನು ವೈಶಿಷ್ಟ್ಯಪೂರ್ಣ ಪ್ರಾದೇಶಿಕ ಉಪಭಾಷೆಗಳೆಂದು ಗುರುತಿಸಿ ಅಧ್ಯಯನಮಾಡಲಾಗಿದೆ.

ಪ್ರಾದೇಶಿಕ ದೂರ ಹಾಗೂ ಪ್ರಾದೇಶಿಕ ಪ್ರತಿಬಂಧಕಗಳು ಪ್ರಾದೇಶಿಕ ಉಪಭಾಷೆಗಳಿಗೆ ಕಾರಣವಾಗುವಂತೆ, ಸಾಮಾಜಿಕದೂರ ಹಾಗೂ ಸಾಮಾಜಿಕಪ್ರತಿಬಂಧಕಗಳು ಸಾಮಾಜಿಕ ಉಪಭಾಷೆಗಳ ನಿರ್ಮಾಣಕ್ಕೆ ಕಾರಣವಾಗುತ್ತವೆ. ಒಂದು ಕಾಲಕ್ಕೆ ಸಾಮಾಜಿಕ ಉಪಭಾಷೆಗಳ ಅಸ್ತಿತ್ವವನ್ನೇ ಅಲ್ಲಗಳೆದದ್ದುಂಟು. ಆದರೆ ಇಂದು ಇವು ಪಾಶ್ಚಾತ್ಯರ ವರ್ಗಭೇದ ಮತ್ತು ಭಾರತೀಯರ ಜಾತಿಭೇದಗಳಿಂದಾಗಿ ಪ್ರಾದೇಶಿಕ ಉಪಭಾಷೆಗಳಿಗಿಂತ ಹೆಚ್ಚು ಅಧ್ಯಯನವ್ಯಾಪ್ತಿಯನ್ನು ಉಪಭಾಷಾವಿಜ್ಞಾನದಲ್ಲಿ, ಅದರಲ್ಲೂ ಸಾಮಾಜಿಕ ಭಾಷಾವಿಜ್ಞಾನದಲ್ಲಿ. ಪಡೆದುಕೊಂಡಿವೆ.

ವಿಲಿಯಂ ಬ್ರೈಟ್ ಪ್ರಾದೇಶಿಕದೂರಕ್ಕಿಂತಲೂ ಸಾಮಾಜಿಕದೂರ ಉಪಭಾಷೆಯ ನಿರ್ಮಾಣದಲ್ಲಿ ಹೇಗೆ ಮಹತ್ವದ ಪಾತ್ರವಹಿಸುತ್ತದೆ ಎಂಬುದನ್ನು ಪ್ರಮಾಣೀಕರಿಸಿ ತೋರಿಸಿಕೊಟ್ಟಿದ್ದಾರೆ. ಹೀಗಾಗಿ ಇಂದು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶದ ನಡುವೆ ಇರುವ ದೂರಕ್ಕಿಂತ. ಒಂದು ಜಾತಿಯಿಂದ ಇನ್ನೊಂದು ಜಾತಿಯ ನಡುವೆ ಇರುವ ದೂರ ಭಾಷೆಯ ದೃಷ್ಟಿಯಿಂದ ಸಾಮಾಜಿಕಭಾಷಾವಿಜ್ಞಾನಿಗಳಲ್ಲಿ ಪ್ರಭೇದ ಕಲ್ಪನೆಗೆ ಹೆಚ್ಚಿನ ಪುಷ್ಟಿ ನೀಡಿದೆ. ಇನ್ನು ಸಾಮಾಜಿಕಪ್ರತಿಬಂಧಕಗಳ ರೂಪದಲ್ಲಿ ಜಾತಿ ಮತ್ತು ವರ್ಗಗಳ ಜೊತೆಗೆ ವಿದ್ಯೆ, ವಯಸ್ಸು, ಲಿಂಗ, ಪರಿಸರ ಇತ್ಯಾದಿಗಳು ಕೂಡ ಸಾಮಾಜಿಕ ಉಪಭಾಷೆಗಳು ಉಂಟಾಗುವಲ್ಲಿ ಗಣನೀಯ ಅಂಶಗಳೆನಿಸಿವೆ. ಕನ್ನಡದಲ್ಲಿ ಹವ್ಯಕಕನ್ನಡ, ಗೌಡಕನ್ನಡ, ಹಾಲಕ್ಕಿಕನ್ನಡ ಮೊದಲಾದ ಸಾಮಾಜಿಕ ಉಪಭಾಷೆಗಳ ಬಗೆಗೆ ಮಾಹಿತಿ ಲಭ್ಯವಿದೆ. ಆದರೂ ಪ್ರಾದೇಶಿಕ ಉಪಭಾಷೆಗಳಿಗೆ ಹೋಲಿಸಿದರೆ, ಸಾಮಾಜಿಕ ಉಪಭಾಷೆಗಳ ಬಗೆಗೆ ನಡೆದಿರುವ ಅಧ್ಯಯನ ತೀರ ಅಲ್ಪ ಎನ್ನಿಸುವರದು.

**ಕನ್ನಡದ ಉಪಭಾಷೆಗಳು**

ಈವರೆಗೆ ಪರಿಶೀಲಿಸಲಾದ ಕಾರಣಗಳಿಂದಾಗಿ ಕನ್ನಡದಲ್ಲಿ ಇಂತಿಷ್ಟೇ ಉಪಭಾಷೆಗಳಿವೆ ಎಂದು ಖಚಿತವಾಗಿ ಹೇಳಲು ಬರುವುದಿಲ್ಲ. ಏಕೆಂದರೆ ಪ್ರಾದೇಶಿಕವಾಗಿ ನೋಡಿದಾಗ

ಜಿಲ್ಲೆಯಿಂದ ಜಿಲ್ಲೆಗೆ, ಅಷ್ಟೇಕೆ ತಾಲ್ಲೋಕಿನಿಂದ ತಾಲ್ಲೋಕಿಗೆ, ಕನ್ನಡಭಾಷೆ ವ್ಯತ್ಯಯಗೊಂಡಿರುವುದನ್ನು ಮನಗಾಣಬಹುದು. ಹಾಗೆಯೇ ಸಾಮಾಜಿಕಹಿನ್ನೆಲೆಯಲ್ಲಿ ನೋಡುವಾಗ ಜಾತಿ, ಅಂತಸ್ತು, ವಿದ್ಯೆ, ವಯಸ್ಸು, ಉದ್ಯೋಗ ಇತ್ಯಾದಿಗಳಿಂದ ವ್ಯಕ್ತಿವ್ಯಕ್ತಿಗಳ ನಡುವೆಯೇ ಅಗಾಧವಾದ ಭಾಷಿಕಭಿನ್ನತೆಗಳು ಗೋಚರಿಸುತ್ತವೆ. ಹೀಗಾಗಿ ಕನ್ನಡ ಭಾಷೆಯನ್ನು ಅಧ್ಯಯನಕ್ಕೆ ಹೆಚ್ಚು ಒಳಗುಮಾಡಿದಂತೆಲ್ಲ, ಪರಿವೀಕ್ಷಣೆ ನಡೆಸಿದಂತೆಲ್ಲ, ಪ್ರಭೇದಗಳ ಸಂಖ್ಯೆ ಏರುತ್ತಾ ಹೋಗುವುದನ್ನು ಕಾಣಬಹುದಾಗಿದೆ.

ಈವರೆಗೆ ನಡೆದಿರುವ ಅಧ್ಯಯನದ ಆಧಾರದ ಮೇಲೆ ಕನ್ನಡದ ಪ್ರಾದೇಶಿಕ ಉಪಭಾಷೆಗಳಾಗಿ ಮೈಸೂರು ಕನ್ನಡ, ಧಾರವಾಡ ಕನ್ನಡ, ಗುಲ್ಬರ್ಗ ಕನ್ನಡ ಮತ್ತು ಮಂಗಳೂರು ಕನ್ನಡಗಳನ್ನೂ ಸಾಮಾಜಿಕಉಪಭಾಷೆಗಳಾಗಿ ಹವ್ಯಕ ಕನ್ನಡ, ಹಾಲಕ್ಕಿ ಕನ್ನಡ ಮತ್ತು ಗೌಡಕನ್ನಡಗಳನ್ನು ಗುರುತಿಸಿ, ಪ್ರಮುಖವಾಗಿ ಹೆಸರಿಸಲಾಗಿದೆ.

## ಮೈಸೂರು ಕನ್ನಡ

ಕರ್ನಾಟಕದ ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರ, ತುಮಕೂರು, ಚಿತ್ರದುರ್ಗ, ಹಾಸನ, ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಪ್ರಚಲಿತವಾಗಿರುವ ಕನ್ನಡಭಾಷಾಪ್ರಭೇದವನ್ನು 'ಮೈಸೂರು ಕನ್ನಡ' ಎಂದು ಕರೆಯಲಾಗಿದೆ. ಇದನ್ನು ಕರ್ನಾಟಕದಲ್ಲಿ ಆಡಳಿತ, ಕಾನೂನು, ಶಿಕ್ಷಣ, ಪ್ರಸಾರಮಾಧ್ಯಮ ಇತ್ಯಾದಿಗಳಿಗೆ ಬಳಸಲ್ಪಡುವ ಶಿಷ್ಟಕನ್ನಡಕ್ಕೆ ತೀರ ಸಮೀಪವಾದದ್ದು ಎಂದು ಪರಿಗಣಿಸಲಾಗಿದೆ. ಹೀಗಿದ್ದೂ ಪ್ರಮಾಣಭಾಷೆಯಿಂದ ಭಿನ್ನವಾದ ವೈಶಿಷ್ಟ್ಯಗಳನ್ನು ಮೈಸೂರುಕನ್ನಡದಲ್ಲಿ ಗುರುತಿಸುವುದು ಅಸಾಧ್ಯವಾದ ಮಾತೇನಲ್ಲ. ಈ ಪ್ರಭೇದದ ವರ್ಣಾತ್ಮಕವಿಶ್ಲೇಷಣ ಕಾರ್ಯವು ಯಥೇಚ್ಛವಾಗಿ ಜರುಗಿದ್ದು, ಎಲ್ಲ ಸ್ತರದ ವಿವರಗಳೂ ಈಗ ಲಭ್ಯವಿವೆ. ಉದಾಹರಣೆಗೆ, ಮೈಸೂರುಕನ್ನಡದಲ್ಲಿ ಮಹಾಪ್ರಾಣಾಕ್ಷರಗಳು ವಿದ್ಯಾವಂತರ ಹಾಗೂ ಉಚ್ಚವರ್ಗದವರ ಭಾಷೆಯಲ್ಲಷ್ಟೇ ಬಳಕೆಯಾಗುತ್ತವೆ; 'ಹ'ಕಾರ ಅನಕ್ಷರಸ್ಥ ಬ್ರಾಹ್ಮಣೇತರರಲ್ಲಿ ಸಾಮಾನ್ಯವಾಗಿ ಲೋಪವಾಗುತ್ತದೆ; 'ಙ' ಮತ್ತು 'ಞ'ಗಳು 'ನ' ಧ್ವನಿಮಾದ ಉಪಧ್ವನಿಗಳಾಗಿವೆ; ಊಷ್ಮಧ್ವನಿಗಳಾದ ಶ, ಷ, ಸಗಳು ವಿದ್ಯಾವಂತರ ಭಾಷೆಯಲ್ಲಿ ಮಾತ್ರ ಸ್ಪಷ್ಟವಾಗಿದ್ದು, ಆಡುಭಾಷೆಯಲ್ಲಿ ಕೇವಲ 'ಸ' ಚಾಲನೆಯಲ್ಲಿದೆ. F, Zಗಳು ವಿದ್ಯಾವಂತರ ಉಚ್ಚಾರಣೆಯಲ್ಲಿ ಮಾತ್ರ ಇದ್ದು, ಅವಿದ್ಯಾವಂತರಲ್ಲಿ ಇವುಗಳ ಸ್ಥಾನವನ್ನು 'ಪ' ಮತ್ತು 'ಜ'ಗಳೇ ಆಕ್ರಮಿಸಿವೆ. ಶಿಷ್ಟಭಾಷೆಯ ಪದದ ಆದಿಯ 'ಎ' ಮತ್ತು 'ಒ' ಸ್ವರಗಳು ಆಡುನುಡಿಯಲ್ಲಿ ವ್ಯಂಜನಘಟಿತವಾಗಿ 'ಯೆ' ಮತ್ತು 'ವೊ'ಆಗಿ ಮಾರ್ಪಟ್ಟಿವೆ. ವ್ಯಾಕರಣದೃಷ್ಟಿಯಿಂದಲೂ ಶಿಷ್ಟಭಾಷೆಯ ಸರ್ವನಾಮ 'ಅವನು' ಆಡುಮಾತಿನಲ್ಲಿ 'ಅವ್ನು', 'ಅಂವ', 'ಅವ' ಎಂಬ ರೂಪಗಳನ್ನು ಹೊಂದಿದೆ. ವರ್ತಮಾನಕಾಲದ ಸ್ತ್ರೀವಾಚಕ ಸರ್ವನಾಮ 'ಅವಳು' ಆಡುಮಾತಿನಲ್ಲಿ 'ಅವ್ಳು' ಎಂದಾಗಿದೆ. ಹಾಗೆಯೇ ವರ್ತಮಾನ ಕ್ರಿಯಾಪದ ರೂಪಗಳಾದ ಮಾಡುತ್ತೇನೆ,

ಮಾಡುತ್ತಾನೆ, ಮಾಡುತ್ತಾಳೆ, ಮಾಡುತ್ತಾರೆ ಎಂಬುವು ಕ್ರಮವಾಗಿ ಮಾಡ್ತಾನೆ, ಮಾಡ್ತಾಳೆ, ಮಾಡ್ತಾರೆ ಎಂದಾಗುತ್ತವೆ. ಇಂಥ ಅನೇಕ ವೈಶಿಷ್ಟ್ಯಗಳನ್ನು ಮೈಸೂರು ಕನ್ನಡದಲ್ಲಿ ಶಿಷ್ಟಭಾಷೆಗಿಂತ ಭಿನ್ನವಾಗಿ ಪಟ್ಟಿಮಾಡಬಹುದು.

## ಮಂಗಳೂರು ಕನ್ನಡ

ಮಂಗಳೂರಿನ ಕರಾವಳಿಪ್ರದೇಶ ಅನೇಕ ಭಾಷೆ ಉಪಭಾಷೆಗಳ ನೆಲೆವೀಡು. ಇಲ್ಲಿನ ಕನ್ನಡಪ್ರಭೇದಗಳಂತೂ ಲೆಕ್ಕವಿಲ್ಲದಷ್ಟು. ಸಾಮಾಜಿಕವಾಗಿ ಇಲ್ಲಿನ ಒಂದೊಂದು ವಿಶಿಷ್ಟ ಜನಾಂಗದವರಿಗೂ ಒಂದೊಂದು ಪ್ರಭೇದ ಅಥವಾ ಉಪಭಾಷೆ ಇದೆ. "ಅಂತೂ ಭಾಷೆಯ ಮಟ್ಟಿಗೆ ದಕ್ಷಿಣ ಕನ್ನಡ ಒಂದು ವಿವಿಧ ವಸ್ತುಪ್ರದರ್ಶನಶಾಲೆಯಂತಿದೆ" ಎಂಬ ಎಂ. ಮರಿಯಪ್ಪ ಭಟ್ಟರ ಮಾತಿನಲ್ಲಿ ಸತ್ಯವಿದೆ. ಈ ಪ್ರದೇಶದಲ್ಲಿ ಕೊಂಕಣಿ, ಮರಾಠಿ, ತುಳು, ಮಲೆಯಾಳಂ ಹಾಗೂ ತಮಿಳು ಭಾಷೆಗಳ ಉಪಭಾಷೆಗಳನ್ನಾಡುವ ಜನರಿದ್ದಾರೆ. ಇವರ ಜೊತೆಗೆ ಕನ್ನಡವನ್ನೇ ಮಾತೃಭಾಷೆಯಾಗಿ ಉಳ್ಳ ಸುಮಾರು ಮೂರು ಲಕ್ಷಕ್ಕೂ ಹೆಚ್ಚು ಜನ ಇಲ್ಲಿದ್ದಾರೆ. ಹವ್ಯಕ, ಹಾಲಕ್ಕಿ, ಗೌಡ, ಕೋಟ ಇವರೊಟ್ಟಿಗೆ ಸೇರ್ಪಡೆಯಾಗುತ್ತಾರೆ. ಅದೂ ಅಲ್ಲದೆ ಶಿಷ್ಟ ಗ್ರಾಂಥಿಕ ಭಾಷೆಗೆ ಸಮೀಪವಾದ ಒಂದು ಕನ್ನಡ ಪ್ರಭೇದವು ಬಹುತೇಕ ದಕ್ಷಿಣಕರಾವಳಿಯಲ್ಲಿ ಬಳಕೆಯಲ್ಲಿದೆ.

## ಹವ್ಯಕರ ಕನ್ನಡ

ಕರಾವಳಿಯ ಉಪಭಾಷೆಗಳಲ್ಲಿ ಬಹಳ ಪ್ರಮುಖವಾದದ್ದು. ಇದು ದಕ್ಷಿಣಕನ್ನಡ ಹಾಗೂ ಉತ್ತರಕನ್ನಡ ಜಿಲ್ಲೆಗಳಲ್ಲಿ ನೆಲೆಸಿರುವ ಹವ್ಯಕ ಬ್ರಾಹ್ಮಣರ ಭಾಷೆ. ಉತ್ತರ ಕನ್ನಡ ಮತ್ತು ದಕ್ಷಿಣಕನ್ನಡ ಹವ್ಯಕರ ಮಾತಿನ ನಡುವೆಯೇ ಸಾಕಷ್ಟು ಅಂತರವಿದೆ. ಮಂಗಳೂರು, ಸುಳ್ಯ, ಉಡುಪಿ, ಪುತ್ತೂರು. ಬೆಳ್ತಂಗಡಿ ಈ ಪ್ರದೇಶಗಳಲ್ಲಿ ಮಾತಾಡುವಂಥದು ದಕ್ಷಿಣ ಹವ್ಯಕರ ಕನ್ನಡ. ಹೊನ್ನಾವರ, ಕುಮಟಾ, ಸಿರಸಿ, ಸಿದ್ದಾಪುರ, ಯಲ್ಲಾಪುರ, ಸೂಪಾ ತಾಲ್ಲೋಕುಗಳಲ್ಲಿ ಮಾತಾಡುವಂಥದು ಉತ್ತರ ಹವ್ಯಕರ ಕನ್ನಡ. ದಕ್ಷಿಣ ಹವ್ಯಕದಲ್ಲಿ ಇ, ಎ, ಉ, ಒ, ಮತ್ತು ಅ ಇವು ಸ್ವರಧ್ವನಿಮಾಗಳು. ಆದರೆ ಉತ್ತರ ಹವ್ಯಕದಲ್ಲಿ ಇ: ; ಎ: ; ಉ: ; ಒ: ; ಮತ್ತು ಅ: ಇವು ಹೆಚ್ಚಿನ ಸ್ವರಧ್ವನಿಮಾಗಳಾಗಿ ಸೇರ್ಪಡೆಯಾಗಿವೆ. ಮೈಸೂರು ಕನ್ನಡದಂತೆ ಹವ್ಯಕದಲ್ಲಿಯೂ ಊಷ್ಮಧ್ವನಿಗಳಾದ ಶ, ಷ, ಸ ಇವು 'ಸ' ಧ್ವನಿಮಾದ ಉಪಧ್ವನಿಗಳಾಗಿವೆ. ದಕ್ಷಿಣಕನ್ನಡದ ಹವ್ಯಕದಲ್ಲಿ ಪ್ರಥಮಪುರುಷ ಸ್ತ್ರೀವಾಚಕಸರ್ವನಾಮ ಇಲ್ಲದಿರುವುದೊಂದು ವ್ಯಾಕರಣವಿಶೇಷ. ಶಿಷ್ಟ ಕನ್ನಡದಲ್ಲಿ ಕಂಡುಬರುವ ವರ್ತಮಾನಕಾಲ, ಭೂತಕಾಲ ಮತ್ತು ಭವಿಷ್ಯತ್ ಕಾಲದ ಕ್ರಿಯಾಪದರೂಪಗಳ ವಿಭಜನೆ ಉತ್ತರಕನ್ನಡದ ಹವ್ಯಕದಲ್ಲಿ ಕಂಡುಬರುವುದಿಲ್ಲ. ಕೇವಲ ಭೂತ ಮತ್ತು ಅಭೂತ ಎಂಬ ವಿಭಜನೆ ಇಲ್ಲಿ ಬಳಕೆಯಲ್ಲಿದೆ. ಉಂಟು, ಆಯಿತು. ಭಯಂಕರ. ಮಾರಾಯ್ರೆ ಇತ್ಯಾದಿ ಇಲ್ಲಿ ಹೆಚ್ಚು ಬಳಕೆಯಲ್ಲಿರುವ ವಿಶಿಷ್ಟಪದಗಳು.

## ಗೌಡ ಮತ್ತು ಹಾಲಕ್ಕಿ ಕನ್ನಡ

ಕರಾವಳಿಯಲ್ಲಿ ಹವ್ಯಕವನ್ನು ಬಿಟ್ಟರೆ ಇನ್ನಿತರ ಕನ್ನಡ ಉಪಭಾಷೆಗಳಲ್ಲಿ ಗೌಡ ಮತ್ತು ಹಾಲಕ್ಕಿ ಕನ್ನಡ ಮುಖ್ಯವಾದವು. ಉತ್ತರ ಕನ್ನಡದ ಕುಮಟಾ, ಹೊನ್ನಾವರ, ಭಟ್ಕಳ, ಕಾರವಾರ ಮತ್ತು ಅಂಕೋಲಾ ತಾಲ್ಲೋಕುಗಳಲ್ಲಿ ಸುಮಾರು ನಲವತ್ತು ಸಾವಿರಕ್ಕೂ ಹೆಚ್ಚಿನ ಜನಸಂಖ್ಯೆಯಲ್ಲಿರುವ ಹಾಲಕ್ಕಿ ಒಕ್ಕಲಿಗರು ಮಾತನಾಡುವ ಭಾಷೆ, ಹಾಲಕ್ಕಿ ಕನ್ನಡ. ಹಾಲಕ್ಕಿ ಉಪಭಾಷೆಯಲ್ಲಿ ೧೫ ಸ್ವರ ಮತ್ತು ೧೯ ವ್ಯಂಜನ ಧ್ವನಿಮಾಗಳಿವೆ. ಜೊತೆಗೆ ಅನುನಾಸಿಕವೂ ಒಂದು ಧ್ವನಿಮಾ ಆಗಿದೆ. ಮೈಸೂರು ಕನ್ನಡದಲ್ಲಿ ಸ್ವತಂತ್ರ ಧ್ವನಿಮಾ ಆಗಿರುವ 'ಣ' ಹಾಲಕ್ಕಿ ಕನ್ನಡದಲ್ಲಿ 'ನ' ಧ್ವನಿಮಾದ ಉಪಧ್ವನಿಯಾಗಿದೆ. 'ಲ' ಮತ್ತು 'ಳ' ಒಂದೇ ಧ್ವನಿಮಾದ ಉಪಧ್ವನಿಗಳಾಗಿವೆ. ಇವುಗಳ ನಡುವೆ ವೈದೃಶ್ಯ ಪ್ರಸಾರ ಸಾಧಿತವಾಗಿಲ್ಲವಾದ್ದರಿಂದ ಇವಕ್ಕೆ ಧ್ವನಿಮಾಸಾಧ್ಯತೆ ಇಲ್ಲವಾಗಿದೆ. ಇನ್ನೊಂದು ಗಮನಾರ್ಹ ವೈಶಿಷ್ಟ್ಯವೆಂದರೆ ಹಾಲಕ್ಕಿ ಕನ್ನಡದ 'ಷ' ಮತ್ತು 'ಸ' ಧ್ವನಿಗಳು 'ಚ' ಧ್ವನಿಮಾದ ಉಪಧ್ವನಿಗಳಾಗಿರುವಂಥದು.

## ಬರ್ಕೂರು ಕನ್ನಡ

ಬರ್ಕ್ಕೂರು ಕನ್ನಡ ಎಂಬ ಒಂದು ಪ್ರಭೇದವನ್ನು ವಿವರಣಾತ್ಮಕವಾಗಿ ವಿಶ್ಲೇಷಿಸಿರುವ ಎ.ಎಸ್. ಆಚಾರ್ಯ ಅವರು ಇದನ್ನೂ ಕನ್ನಡದ ಒಂದು ಉಪಭಾಷೆ ಎಂದಿದ್ದಾರೆ. ದಕ್ಷಿಣಕನ್ನಡ ಜಿಲ್ಲೆಯ ಮಂಗಳೂರಿನಿಂದ ಉತ್ತರಕ್ಕೆ ಸುಮಾರು ೬೦ ಕಿ.ಮೀ. ದೂರದಲ್ಲಿ ಬರ್ಕ್ಕೂರು ಪ್ರದೇಶವಿದೆ. ಗೌಡಕನ್ನಡ, ಹವ್ಯಕಕನ್ನಡ, ಕೊರಗಕನ್ನಡ, ಹಾಲಕ್ಕಿಕನ್ನಡ ಇತ್ಯಾದಿ ಸಾಮಾಜಿಕ ಉಪಭಾಷೆಗಳ ಕಣಜವಾಗಿರುವ ಕರಾವಳಿ ಪ್ರದೇಶದಲ್ಲಿ ಬರ್ಕ್ಕೂರು ಕನ್ನಡ ಪ್ರಾದೇಶಿಕ ಉಪಭಾಷೆಯಾಗಿ ಗುರುತಿಸಲ್ಪಟ್ಟಿದೆ. ಇದರ ಕುತೂಹಲಕರ ವೈಶಿಷ್ಟ್ಯ ವೇನೆಂದರೆ F ಹಾಗೂ Zಗಳನ್ನು ಸ್ವತಂತ್ರವಾಗಿ ಧ್ವನಿಮಾಗಳ ರೂಪದಲ್ಲಿ ಹೊಂದಿರುವುದು.

## ಕೊರಗ ಕನ್ನಡ

ಕೊರಗ ಭಾಷೆಯನ್ನು ಕೆಲವರು ಸ್ವತಂತ್ರಭಾಷೆ ಎಂದು ಕರೆದರೆ, ಮತ್ತೆ ಕೆಲವರು ತುಳು ಇಲ್ಲವೆ ಕನ್ನಡದ ಉಪಭಾಷೆಯಾಗಿ ನಿರ್ಧರಿಸಲು ಪ್ರಯತ್ನಪಟ್ಟಿದ್ದಾರೆ. ದಕ್ಷಿಣ ಕನ್ನಡಜಿಲ್ಲೆಯ ಸುಮಾರು ಸಾವಿರಕ್ಕೂ ಮಿಕ್ಕು ಕೊರಗರು ಆಡುವ ಕೊರಗಭಾಷೆ ಅನೇಕ ವಿಶಿಷ್ಟತೆಗಳನ್ನು ಒಳಗೊಂಡಿದೆ. ಇದರ ಧ್ವನಿವ್ಯವಸ್ಥೆಯಲ್ಲಿ ಅಂಥ ಭಿನ್ನತೆ ಏನೂ ಕಂಡುಬರದಿದ್ದರೂ ವ್ಯಾಕರಣವ್ಯವಸ್ಥೆ ತುಂಬ ಕುತೂಹಲಕಾರಿಯಾಗಿದೆ. ಏಕೆಂದರೆ ವ್ಯಾಕರಣವ್ಯವಸ್ಥೆಯಲ್ಲಿ ಕೊರಗ ಉತ್ತರದ್ರಾವಿಡ ಭಾಷೆಗಳನ್ನು (ಉದಾ : ಕುರುಖ್, ಮಲ್ತೋ, ಬ್ರಾಹ್ವಿ) ಹೆಚ್ಚು ಹೋಲುತ್ತದೆ. ಮುಖ್ಯವಾಗಿ ಕುರುಖ್ ಭಾಷೆಯ ಲಿಂಗ ವಚನ ಭೇದವೇ ಈ ಭಾಷೆಯಲ್ಲೂ ನಿಚ್ಚಳವಾಗಿ ಕಂಡುಬರುತ್ತದೆ.

## ಧಾರವಾಡ ಕನ್ನಡ

ಕನ್ನಡದ ಪ್ರಾದೇಶಿಕಪ್ರಭೇದಗಳಲ್ಲಿ ವೈಶಿಷ್ಟ್ಯಪೂರ್ಣವಾದ ಉಪಭಾಷೆ ಧಾರವಾಡ ಕನ್ನಡ. ಕರ್ನಾಟಕ ಏಕೀಕರಣಕ್ಕಿಂತ ಹಿಂದೆ ಈ ಪ್ರದೇಶ ಮುಂಬಯಿ ಪ್ರಾಂತದಲ್ಲಿ ಸೇರಿದ್ದುದರಿಂದ ಈ ಭಾಗದಲ್ಲಿ ಆಡುವ ಕನ್ನಡಕ್ಕೆ ಮುಂಬಯಿ-ಕರ್ನಾಟಕ ಕನ್ನಡ ಎಂಬ ಹೆಸರೂ ಇದೆ. ಈ ಪ್ರದೇಶ ಶಾತವಾಹನ, ಕದಂಬ, ಚಾಳುಕ್ಯ, ಯಾದವ, ಬಹಮನಿ, ಪೇಶ್ವೆ ಮುಂತಾದ ಅನೇಕ ಮನೆತನಗಳ ಆಳ್ವಿಕೆಗೆ ಒಳಗಾಗಿ ಇತಿಹಾಸಪ್ರಸಿದ್ಧವಾಗಿದೆ. ಇ, ಉ ಎ, ಒ, ಅ ಸ್ವರ ಧ್ವನಿಮಾಗಳ ಜೊತೆಗೆ ಆ್ಯ, ಅ:, ಒ: ಮುಂತಾದ ದೀರ್ಘಸ್ವರಧ್ವನಿಮಾಗಳೂ ಧಾರವಾಡ ಕನ್ನಡದಲ್ಲಿ ಪ್ರಚಲಿತವಾಗಿವೆ. ವ್ಯಂಜನಧ್ವನಿಮಾಗಳಲ್ಲಿ ಅಂಥ ಪರಿಗಣನಾರ್ಹ ವ್ಯತ್ಯಾಸಗಳೇನೂ ಇರದಿದ್ದರೂ ಮಹಾಪ್ರಾಣಗಳ ಬಳಕೆಯನ್ನು ವಿದ್ವಾಂತರಲ್ಲಿ ಮಾತ್ರ ಗುರುತಿಸಬಹುದಾಗಿದೆ. 'ಹ'ಕಾರ ಸಾಮಾನ್ಯವಾಗಿ ಪದದ ಆದಿಯಲ್ಲಿ ಬರುವುದು. ಎಕಾರಾಂತವಾದ ಶಿಷ್ಟಭಾಷೆಯ ಕನ್ನಡಶಬ್ದಗಳು 'ಇ' ಕಾರಾಂತವಾಗುವುದು ಮತ್ತು '$\chi$' ದಿಂದ ಕೊನೆಗೊಳ್ಳುವ ಪದಗಳಿರುವುದು ಈ ಉಪಭಾಷೆಯ ಪ್ರಮುಖ ಲಕ್ಷಣಗಳು. ಈ ಲಕ್ಷಣ ಮೈಸೂರು ಅಥವಾ ಮಂಗಳೂರು ಉಪಭಾಷೆಗಳಲ್ಲಿ ಕಾಣಸಿಗುವುದು ದುರ್ಲಭ. ಹಾಗೆಯೇ ಶಿಷ್ಟಭಾಷೆಯ ಉಕಾರಂತ ಶಬ್ದಗಳು ಅಕಾರಾಂತವಾಗಿಯೂ ಇಲ್ಲಿ ಬಳಕೆಯಲ್ಲಿವೆ. ಇಂಥ ಕೆಲವು ಪ್ರಯೋಗಗಳನ್ನು ಈ ಹಿಂದೆ ಪ್ರಸ್ತಾವಿಸಲಾಗಿದೆ. ವ್ಯಾಕರಣದ ದೃಷ್ಟಿಯಿಂದ ನೋಡಿದಾಗ ಈ ಉಪಭಾಷೆಯಲ್ಲಿ ಕೆಲವು ಬದಲಾವಣೆಗಳನ್ನು ವಿಭಕ್ತಿಪ್ರತ್ಯಯಗಳಲ್ಲಿ, ಸರ್ವನಾಮಗಳಲ್ಲಿ, ಕಾಲಸೂಚಕಪ್ರತ್ಯಯಗಳಲ್ಲಿ ಗಮನಿಸಬಹುದು. ಧಾರವಾಡ ಕನ್ನಡದ ಬ್ರಾಹ್ಮಣ, ಲಿಂಗಾಯತ, ಹರಿಜನ ಸಾಮಾಜಿಕ ಉಪಭಾಷೆಗಳನ್ನು ವಿಲಿಯಂ ಮೆಕ್‌ಕೊರ್‌ಮಾರ್ಕ್ ಅವರು ಗುರುತಿಸಿ ಅಧ್ಯಯನಮಾಡಿದ್ದಾರೆ.

## ಬಿಜಾಪುರ ಕನ್ನಡ

ಇದು ಧಾರವಾಡ ಉಪಭಾಷೆಗಿಂತ ಭಿನ್ನವಾದುದು. ಇದರ ವೈಶಿಷ್ಟ್ಯವೆಂದರೆ ಅವನು, ಅವಳು ಪುರುಷಾರ್ಥಕ ಸರ್ವನಾಮಗಳಿಗೆ ಕ್ರಮವಾಗಿ ಕವನು/ಕವ ಮತ್ತು ಕವಳು/ಕವ ಹಾಗೂ ಇವನು, ಇವಳು, ಇವರುಗಳಿಗೆ ಸಮಾನಾರ್ಥಕವಾಗಿ ಕಿವನು, ಕಿವಳು, ಕಿವರು ಎಂಬುವು ರೂಢಿಯಲ್ಲಿವೆ. ಈ ಬಗೆಯ ಪ್ರಯೋಗಗಳನ್ನು ಸ್ಥಳವಾಚಕ ಹಾಗೂ ಪರಿಮಾಣವಾಚಕಗಳಲ್ಲಿಯೂ ಕಾಣಬಹುದಾಗಿದೆ. ಬಿಜಾಪುರ ಕನ್ನಡದಲ್ಲಿ ಗಮನಿಸಬೇಕಾದ ಮತ್ತೊಂದು ಅಂಶ ಎಂದರೆ, 'ಇರು' ಧಾತುವಿನ ರೂಪಗಳು. ಇದು ಉತ್ತಮ ಪುರುಷದಲ್ಲಿ ಹೀನಿ, ಹೀವಿ ಎಂದೂ ಮಧ್ಯಮಪುರುಷದಲ್ಲಿ 'ಹೀವಿ', 'ಹೀರಿ' ಎಂದೂ ಪ್ರಥಮಪುರುಷದಲ್ಲಿ ಹಾನ, ಹಾಳ, ಹಾರ ಎಂದೂ ಬಳಕೆಯಲ್ಲಿವೆ. ಹಾಂಗ (ಹಾಗೆ), ಹತ್ಯಾರ (ಹತ್ತಿದ್ದಾರೆ), ಹತ್ಯಾಳ (ಹತ್ತಿದ್ದಾಳೆ). ತಿನ್ನಾಕೇಸಿ (ತಿನ್ನುವುದಕ್ಕೋಸ್ಕರ). ಹೋಗಾಮು (ಹೋಗೋಣ) ಎಂಬ ಪ್ರಯೋಗಗಳು ಹೇರಳವಾಗಿ ಬಿಜಾಪುರ ಕನ್ನಡದಲ್ಲಿ ಕಂಡುಬರುತ್ತವೆ.

ಬಿಜಾಪುರ ಕನ್ನಡ... ಅನೇಕ ವೈಶಿಷ್ಟ್ಯಗಳು ಗುಲ್ಬರ್ಗ ಕನ್ನಡದಲ್ಲಿಯೂ ಕಾಣಸಿಗುತ್ತವೆ. 'ಇರು' ಧಾತುವಿನ 'ಹಾನ', 'ಹಾಳ', 'ಹಾರ' ರೂಪಗಳು ಈ ಉಪಭಾಷೆಯಲ್ಲೂ ಬಳಕೆಯಲ್ಲಿವೆ. 'ರಿ' ಪ್ರತ್ಯಯ ಅತ್ಯಧಿಕವಾಗಿ ಬಳಸಲ್ಪಡುತ್ತದೆ. ಉರ್ದು ಭಾಷೆಯ ಪ್ರಭಾವದಿಂದಾಗಿಯೋ ಏನೋ, ಕನ್ನಡ ಶಿಷ್ಟಭಾಷೆಯ ದ್ವಿತೀಯಾವಿಭಕ್ತಿಯ ಸ್ಥಾನದಲ್ಲಿ ಗುಲ್ಬರ್ಗ ಕನ್ನಡ ಚತುರ್ಥೀವಿಭಕ್ತಿಪ್ರತ್ಯಯವನ್ನು ಹೊಂದಿದೆ. ಮಹಾಪ್ರಾಣಗಳು ವಿದ್ಯಾವಂತರ ಮತ್ತು ಮೇಲ್ವರ್ಗದವರ ಉಚ್ಚಾರಣೆಯಲ್ಲಿ ಕಾಣುತ್ತವೆ. ಕೆಲವು ವ್ಯಂಜನಗಳನ್ನು ವೃಥಾ ಮಹಾಪ್ರಾಣ ಮಾಡುವ ಪ್ರವೃತ್ತಿ ಈ ಉಪಭಾಷೆಯಲ್ಲಿ ಎದ್ದು ಕಾಣುತ್ತದೆ. ಘೋಡಿ, ಭಂಡಿ, ಖಿಣಿ ಇತ್ಯಾದಿಗಳನ್ನು ಈ ನಿಟ್ಟಿನಲ್ಲಿ ಹೆಸರಿಸಬಹುದು. ಹ ಕಾರ ಲೋಪ ಅವಿದ್ಯಾವಂತರಲ್ಲಿ, ನಿಮ್ನವರ್ಗದವರಲ್ಲಿ, ಸರ್ವಸಾಮಾನ್ಯ. ಗುಲ್ಬರ್ಗಕನ್ನಡ ಉರ್ದು ಮಾತ್ರವಲ್ಲ, ಮರಾಠಿ ಹಾಗೂ ಸಂಸ್ಕೃತ ಭಾಷೆಗಳಿಂದಲೂ ಅಧಿಕವಾಗಿ ಪ್ರಭಾವಿತವಾಗಿದೆ. ಒಂದು ಕಾಲಕ್ಕೆ ಇದು ಹೈದರಾಬಾದಿನ ನಿಜಾಮನ ಆಳ್ವಿಕೆಗೆ ಸೇರಿದ ಭಾಗವಾಗಿದ್ದರಿಂದ, 'ಹೈದರಾಬಾದ್-ಕರ್ನಾಟಕ ಕನ್ನಡ' ಎಂದೂ ಇದಕ್ಕೆ ಹೆಸರಿದೆ. ಬಿಜಾಪುರ, ಗುಲ್ಬರ್ಗ ಕನ್ನಡಗಳ ಗುಂಪಿಗೇ ಸೇರುವ ಇನ್ನೊಂದು ಪ್ರಭೇದ ರಾಯಚೂರು ಕನ್ನಡ. ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಬಿಟ್ಟರೆ, ಇದು ಗುಲ್ಬರ್ಗ ಕನ್ನಡವನ್ನು ಹೆಚ್ಚು ಹೋಲುತ್ತದೆ. ಕೃಷ್ಣಾನದಿ ರಾಯಚೂರು ಮತ್ತು ಗುಲ್ಬರ್ಗ ಉಪಭಾಷೆಗಳನ್ನು ಬೇರ್ಪಡಿಸಿರುವ ಪ್ರಮುಖ ಪ್ರತಿಬಂಧಕವಾಗಿದೆ.

### ಉಪಭಾಷೆಗಳ ಬಗೆಗೆ ಅಧ್ಯಯನ ಸಾಮಗ್ರಿ

ಕನ್ನಡ ಉಪಭಾಷೆಗಳನ್ನು ಕುರಿತಂತೆ ಈಗ ವಿಪುಲಸಾಮಗ್ರಿ ಲಭ್ಯವಿದೆ. ಹಲವಾರು ಪರಿವೀಕ್ಷಣಕಾರ್ಯಗಳು ವ್ಯಕ್ತಿಗತವಾಗಿ ನಡೆದು ಸಂಶೋಧನಪ್ರಬಂಧಗಳ ರೂಪದಲ್ಲಿ ಹೊರಬಂದಿವೆ. ಇತ್ತೀಚಿನ ಸಾಹಿತ್ಯ ಚರಿತ್ರೆಯ ಸಂಪುಟಗಳು ಉಪಭಾಷೆಗಳ ವಿಷಯವನ್ನು ಚರ್ಚಿಸಿವೆ. ಪೂನಾದ ಡೆಕ್ಕನ್ ಕಾಲೇಜು ಹೊರತಂದಿರುವ ಉಪಭಾಷಾಸಾಮಗ್ರಿ, ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣಮಹೋತ್ಸವದ ಅಂಗವಾಗಿ ಹೊರಬಂದಿರುವ 'ಸುವರ್ಣ ಸಂಚಯ' ಹಾಗೂ ಕರ್ನಾಟಕ ವಿಶ್ವವಿದ್ಯಾಲಯ ತನ್ನ ರಜತಮಹೋತ್ಸವದ ಹೊತ್ತಿಲಲ್ಲಿ ಹೊರತಂದ 'ಕರ್ನಾಟಕ ಭಾರತಿ' ಇತ್ಯಾದಿಗಳು ಉಪಭಾಷಾ ಅಧ್ಯಯನಕ್ಕೆ ಕನ್ನಡದಲ್ಲಿ ಪರಾಮರ್ಶನದ ಆಕರಗಳಾಗಿವೆ.

ಉಪಭಾಷೆಗಳನ್ನು ಕುರಿತು ಹೆಸರಾಂತ ಭಾಷಾವಿಜ್ಞಾನಿಗಳು ಕನ್ನಡದಲ್ಲಿ ಕೆಲಸಮಾಡಿದ್ದಾರೆ. ಪ್ರಾಸ್ತಾವಿಕವಾಗಿ ಕೆಲವರ ಹೆಸರುಗಳನ್ನಿಲ್ಲಿ ಸ್ಮರಿಸಬಹುದು. ಅವರೆಂದರೆ, ಆರ್. ಸಿ. ಹಿರೇಮಠ, ರಾ. ಯ. ಧಾರವಾಡಕರ, ಎಂ. ಮರಿಯಪ್ಪಭಟ್ಟ, ಎಚ್. ಎಸ್. ಬಿಳಿಗಿರಿ, ಹಾ. ಮಾ. ನಾಯಕ, ದೇಜಗೌ, ಯು. ಪಿ. ಉಪಾಧ್ಯಾಯ, ಎ. ಎಸ್. ಆಚಾರ್ಯ, ಡಿ. ಎನ್. ಶಂಕರಭಟ್ಟ, ಕೆ. ಜಿ. ಶಾಸ್ತ್ರಿ, ಕೆ. ಕುಶಾಲಪ್ಪಗೌಡ, ಕೆ. ಕೆಂಪೇಗೌಡ, ಕೆ. ಎಂ.

## ಗುಲ್ಬರ್ಗ ಕನ್ನಡ

ಬಿಜಾಪುರ ಕನ್ನಡಕ್ಕೆ ಸಂಬಂಧಿಸಿದಂತೆ ಪ್ರಸ್ತಾವಿಸಲಾಗಿರುವ ಅನೇಕ ವೈಶಿಷ್ಟ್ಯಗಳು ಗುಲ್ಬರ್ಗ ಕನ್ನಡದಲ್ಲಿಯೂ ಕಾಣಿಸಿಗುತ್ತವೆ. 'ಇರು' ಧಾತುವಿನ 'ಹಾನ', 'ಹಾಳ', 'ಹಾರ' ರೂಪಗಳು ಈ ಉಪಭಾಷೆಯಲ್ಲೂ ಬಳಕೆಯಲ್ಲಿವೆ. 'ರಿ' ಪ್ರತ್ಯಯ ಅತ್ಯಧಿಕವಾಗಿ ಬಳಸಲ್ಪಡುತ್ತದೆ. ಉರ್ದು ಭಾಷೆಯ ಪ್ರಭಾವದಿಂದಾಗಿಯೇನೋ, ಕನ್ನಡ ಶಿಷ್ಟಭಾಷೆಯ ದ್ವಿತೀಯಾವಿಭಕ್ತಿಯ ಸ್ಥಾನದಲ್ಲಿ ಗುಲ್ಬರ್ಗ ಕನ್ನಡ ಚತುರ್ಥೀವಿಭಕ್ತೀಪ್ರತ್ಯಯವನ್ನು ಹೊಂದಿದೆ. ಮಹಾಪ್ರಾಣಗಳು ವಿದ್ಯಾವಂತರ ಮತ್ತು ಮೇಲ್ವರ್ಗದವರ ಉಚ್ಚಾರಣೆಯಲ್ಲಿ ಕಾಣುತ್ತವೆ. ಕೆಲವು ವ್ಯಂಜನಗಳನ್ನು ವೃಥಾ ಮಹಾಪ್ರಾಣ ಮಾಡುವ ಪ್ರವೃತ್ತಿ ಈ ಉಪಭಾಷೆಯಲ್ಲಿ ಎದ್ದು ಕಾಣುತ್ತದೆ. ಖೋಡಿ, ಭಂಡಿ, ಖಣ ಇತ್ಯಾದಿಗಳನ್ನು ಈ ನಿಟ್ಟಿನಲ್ಲಿ ಹೆಸರಿಸಬಹುದು. ಹ ಕಾರ ಲೋಪ ಅವಿದ್ಯಾವಂತರಲ್ಲಿ, ನಿಮ್ನವರ್ಗದವರಲ್ಲಿ, ಸರ್ವೇಸಾಮಾನ್ಯ. ಗುಲ್ಬರ್ಗಕನ್ನಡ ಉರ್ದು ಮಾತ್ರವಲ್ಲ, ಮರಾಠಿ ಹಾಗೂ ಸಂಸ್ಕೃತ ಭಾಷೆಗಳಿಂದಲೂ ಅಧಿಕವಾಗಿ ಪ್ರಭಾವಿತವಾಗಿದೆ. ಒಂದು ಕಾಲಕ್ಕೆ ಇದು ಹೈದರಾಬಾದಿನ ನಿಜಾಮನ ಆಳ್ವಿಕೆಗೆ ಸೇರಿದ ಭಾಗವಾಗಿದ್ದರಿಂದ, 'ಹೈದರಾಬಾದ್-ಕರ್ನಾಟಕ ಕನ್ನಡ' ಎಂದೂ ಇದಕ್ಕೆ ಹೆಸರಿದೆ. ಬಿಜಾಪುರ, ಗುಲ್ಬರ್ಗ ಕನ್ನಡಗಳ ಗುಂಪಿಗೇ ಸೇರುವ ಇನ್ನೊಂದು ಪ್ರಭೇದ ರಾಯಚೂರು ಕನ್ನಡ. ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಬಿಟ್ಟರೆ, ಇದು ಗುಲ್ಬರ್ಗ ಕನ್ನಡವನ್ನು ಹೆಚ್ಚು ಹೋಲುತ್ತದೆ. ಕೃಷ್ಣಾನದಿ ರಾಯಚೂರು ಮತ್ತು ಗುಲ್ಬರ್ಗ ಉಪಭಾಷೆಗಳನ್ನು ಬೇರ್ಪಡಿಸಿರುವ ಪ್ರಮುಖ ಪ್ರತಿಬಂಧಕವಾಗಿದೆ.

## ಉಪಭಾಷೆಗಳ ಬಗೆಗೆ ಅಧ್ಯಯನ ಸಾಮಗ್ರಿ

ಕನ್ನಡ ಉಪಭಾಷೆಗಳನ್ನು ಕುರಿತಂತೆ ಈಗ ವಿಪುಲಸಾಮಗ್ರಿ ಲಭ್ಯವಿದೆ. ಹಲವಾರು ಪರಿವೀಕ್ಷಣಕಾರ್ಯಗಳು ವ್ಯಕ್ತಿಗತವಾಗಿ ನಡೆದು ಸಂಶೋಧನಪ್ರಬಂಧಗಳ ರೂಪದಲ್ಲಿ ಹೊರಬಂದಿವೆ. ಇತ್ತೀಚಿನ ಸಾಹಿತ್ಯ ಚರಿತ್ರೆಯ ಸಂಪುಟಗಳು ಉಪಭಾಷೆಗಳ ವಿಷಯವನ್ನು ಚರ್ಚಿಸಿವೆ. ಪೂನಾದ ಡೆಕ್ಕನ್ ಕಾಲೇಜು ಹೊರತಂದಿರುವ ಉಪಭಾಷಾಸಾಮಗ್ರಿ, ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣಮಹೋತ್ಸವದ ಅಂಗವಾಗಿ ಹೊರಬಂದಿರುವ 'ಸುವರ್ಣ ಸಂಚಯ' ಹಾಗೂ ಕರ್ನಾಟಕ ವಿಶ್ವವಿದ್ಯಾಲಯ ತನ್ನ ರಜತಮಹೋತ್ಸವದ ಹೊಸ್ತಿಲಲ್ಲಿ ಹೊರತಂದ 'ಕರ್ನಾಟಕ ಭಾರತಿ' ಇತ್ಯಾದಿಗಳು ಉಪಭಾಷಾ ಅಧ್ಯಯನಕ್ಕೆ ಕನ್ನಡದಲ್ಲಿ ಪರಾಮರ್ಶನದ ಆಕರಗಳಾಗಿವೆ.

ಉಪಭಾಷೆಗಳನ್ನು ಕುರಿತು ಹೆಸರಾಂತ ಭಾಷಾವಿಜ್ಞಾನಿಗಳು ಕನ್ನಡದಲ್ಲಿ ಕೆಲಸಮಾಡಿದ್ದಾರೆ. ಪ್ರಾಸ್ತಾವಿಕವಾಗಿ ಕೆಲವರ ಹೆಸರುಗಳನ್ನಿಲ್ಲಿ ಸ್ಮರಿಸಬಹುದು. ಅವರೆಂದರೆ, ಆರ್. ಸಿ. ಹಿರೇಮಠ, ರಾ. ಯ. ಧಾರವಾಡಕರ, ಎಂ. ಮರಿಯಪ್ಪಭಟ್ಟ, ಎಚ್. ಎಸ್. ಬಿಳಿಗಿರಿ, ಹಾ. ಮಾ. ನಾಯಕ, ದೇಜಗೌ, ಯು. ಪಿ. ಉಪಾಧ್ಯಾಯ, ಎ. ಎಸ್. ಆಚಾರ್ಯ, ಡಿ. ಎನ್. ಶಂಕರಭಟ್ಟ, ಕೆ. ಜಿ. ಶಾಸ್ತ್ರಿ, ಕೆ. ಕುಶಾಲಪ್ಪಗೌಡ, ಕೆ. ಕೆಂಪೇಗೌಡ, ಕೆ. ಎಂ.

ಕೃಷ್ಣರಾವ್, ಎಂ. ಚಿದಾನಂದಮೂರ್ತಿ, ಜೆ. ಎಸ್. ಕುಳ್ಳಿ, ವಿಲಿಯಂ ಮಾಡ್ತ ಮುಂತಾದವರು. ಈ ತಜ್ಞರ ಪ್ರಚೋದನೆ, ಪ್ರೇರಣೆಯಿಂದ ಯುವಕ ಯುವತಿಯರು ಉಪಭಾಷೆಗಳ ಬಗೆಗೆ ಒಲವು ತಳೆದು, ವೈಜ್ಞಾನಿಕವಿಶ್ಲೇಷಣೆಗಾಗಿ ಉಪಭಾಷಾದತ್ತಸಂಗ್ರಹಣೆ ಮಾಡುತ್ತ ಬಂದಿದ್ದಾರೆ ; ಕೆಲವರು ವಿಶ್ಲೇಷಣೆ ಮಾಡಿಯೂ ಹೆಸರಾಗಿದ್ದಾರೆ. ಹೀಗಾಗಿ ಒಳ್ಳೆಯ ಫಸಲು ಇದರಿಂದ ಪ್ರಾಪ್ತವಾಗಿದೆ. ಇನ್ನೂ ಹುಲುಸಾದ ಬೆಳಸನ್ನು ನಿರೀಕ್ಷಿಸಬಹುದಾಗಿದೆ.

## ಉಪಭಾಷಾ ಅಧ್ಯಯನದ ಪ್ರಯೋಜನ

ಉಪಭಾಷೆಗಳು ಸಾಮಾಜಿಕ ಹಾಗೂ ಪ್ರಾದೇಶಿಕ ಜನಜೀವನ ಸಂಸ್ಕೃತಿಗಳನ್ನು ಪ್ರತಿಬಿಂಬಿಸುತ್ತವೆ. ಶಿಷ್ಟಭಾಷೆಗಿಂತ ಇಂಥ ಸಂದರ್ಭದಲ್ಲಿ ಉಪಭಾಷೆಗಳು ಹೆಚ್ಚು ಆತ್ಮೀಯವಾಗಿರುತ್ತವೆ. ಬುಡಕಟ್ಟಿನ, ನಿಮ್ನವರ್ಗದ, ಹಳ್ಳಿಗಾಡಿನ ಜನರ ನಾಡಿಮಿಡಿತ ಇರುವುದೇ ಇಂಥ ಉಪಭಾಷೆಗಳಲ್ಲಿ. ಇವುಗಳ ಪರಿವೀಕ್ಷಣೆಯಿಂದ ಭಾಷಿಕ ಅಕ್ಷಯನಿಧಿ ಪ್ರಾಪ್ತವಾಗುತ್ತದೆ. ಶಿಕ್ಷಣಕ್ಕೂ ಉಪಭಾಷೆಗೂ ನೇರ ಸಂಬಂಧವಿದೆ. ಶಿಷ್ಟಭಾಷೆಯನ್ನು ಕರಗತಮಾಡಿಕೊಳ್ಳುವ ಮೊದಲೇ ತನ್ನ ಉಪಭಾಷೆಯಲ್ಲಿ ಯಾವುದೇ ವ್ಯಕ್ತಿಗೆ ಪ್ರಭುತ್ವವಿರುತ್ತದೆ. ಆದುದರಿಂದ ಶಿಕ್ಷಣದ ಪ್ರಾರಂಭಿಕ ಹಂತದಲ್ಲಿ ಪ್ರಮಾಣಭಾಷೆಯ ಮುಖಾಂತರ ಕಲಿಸುವುದಕ್ಕಿಂತ ಸಂಬಂಧಿತ ಉಪಭಾಷೆಯಲ್ಲಿ ಕಲಿಸುವುದು ಯಶಸ್ಸಿನ ದಾರಿ. ಹೀಗೆ ಮಾಡುವುದರಿಂದ ಅಧ್ಯಾಪಕ-ವಿದ್ಯಾರ್ಥಿಗಳ ನಡುವಣ ಕಂದರ ಸಂಕುಚಿತಗೊಂಡು, ಅಭ್ಯಾಸದಲ್ಲಿ ಆತ್ಮೀಯತೆ, ಅಕ್ಕರೆ, ಆಸ್ಥೆ ಮನೆಮಾಡುತ್ತವೆ. ಕ್ರಮೇಣ ಉಪಭಾಷಾರೂಪಗಳಿಗೆ ಬದಲಾಗಿ ಹಂತಹಂತವಾಗಿ ಶಿಷ್ಟಭಾಷೆಯನ್ನು ಪ್ರಯೋಗಿಸುವ ವಿಧಾನವನ್ನು ಕರಗತಮಾಡಿಕೊಳ್ಳುವುದು ಅನಿವಾರ್ಯ. ಇಲ್ಲವಾದಲ್ಲಿ ಶಿಕ್ಷಣ ತನ್ನ ಅರ್ಥವನ್ನೇ ಕಳೆದುಕೊಳ್ಳಬೇಕಾಗುತ್ತದೆ. ಅನ್ಯಭಾಷಾಬೋಧನೆಯ ಸಂದರ್ಭದಲ್ಲಂತೂ ಗ್ರಾಂಥಿಕರೂಪದ ಜೊತೆಗೆ ಪ್ರಭೇದಗಳ ಪರಿಚಯ ಮಾಡಿಕೊಡುವುದನ್ನು ಭಾಷಾವಿಜ್ಞಾನಿಗಳು ಶಿಫಾರಸುಮಾಡಿದ್ದಾರೆ.

ಉಪಭಾಷೆಗಳಿಂದ ಒಂದು ಜನಾಂಗದ ಸಾಮಾಜಿಕ, ಐತಿಹಾಸಿಕ, ಧಾರ್ಮಿಕ ಹಾಗೂ ರಾಜಕೀಯ ಅಂಶಗಳನ್ನು ತಿಳಿದುಕೊಳ್ಳಲು ಸಾಧ್ಯವಿದೆ. ಉಪಭಾಷಿಕ ಅಂಶಗಳು ಪ್ರಾಚೀನಸಾಹಿತ್ಯಕ್ಕೆ ಸಂಬಂಧಿಸಿದ ಪುರಾವೆಗಳನ್ನು ಒದಗಿಸಿ ಕಾಲ, ದೇಶ, ಪರಿಸರಗಳ ಬಗೆಗಿನ ಗೊಂದಲ ನೀಗುವುದರಲ್ಲಿಯೂ ನೆರವಾಗುತ್ತವೆ. ಸಂಗ್ರಹಿತ ಉಪಭಾಷಾಸಾಮಗ್ರಿ ಜಾನಪದ, ಪುರಾತತ್ತ್ವ, ಮಾನವಶಾಸ್ತ್ರ ಇತ್ಯಾದಿ ವಿಷಯಗಳಿಗೂ ಅನ್ವಯವಾಗುವುದುಂಟು. ಉದ್ದೇಶಿತ ಪ್ರಭಾವವನ್ನು ಜನರ ಮೇಲೆ ಬೀರಲು ಆಗಾಗ ಪ್ರಸಾರಮಾಧ್ಯಮಗಳಾದ ದಿನಪತ್ರಿಕೆ, ಆಕಾಶವಾಣಿ, ಚಲನಚಿತ್ರ, ದೂರದರ್ಶನ ಇತ್ಯಾದಿಗಳೂ ಆಡುಮಾತಿಗೆ ಮೊರೆಹೊಗುವುದನ್ನು ಕಾಣಬಹುದು. ಇವೆಲ್ಲಕ್ಕಿಂತ ಮಿಗಿಲಾಗಿ ಒಂದು ಭಾಷೆಯ ಜೀವಂತಿಕೆ, ತಾಜಾತನ, ವೈಶಿಷ್ಟ್ಯ, ಹರಹು, ವೈವಿಧ್ಯಗಳು ಅಭಿವ್ಯಕ್ತಗೊಳ್ಳು

ವುದು ಅದರ ಉಪಭಾಷೆಗಳಲ್ಲಿ. ಆದುದರಿಂದ ಒಂದು ಭಾಷೆ ಉಳಿಯಬೇಕಾದರೆ, ಬೆಳೆಯಬೇಕಾದರೆ, ಅದರ ವಿರಾಟ್‌ಸ್ವರೂಪವನ್ನೂ ಸಾಮರ್ಥ್ಯವನ್ನೂ ದರ್ಶಿಸಬೇಕಾದರೆ, ಅದರ ಉಪಭಾಷೆಗಳ ಸಮಗ್ರ ಅಧ್ಯಯನ ನಿರಂತರವಾಗಿ ನಡೆಯುವುದು ಅನಿವಾರ್ಯ ಹಾಗೂ ಅಪೇಕ್ಷಣೀಯ.

# ಸೋಲಿಗಕನ್ನಡದಲ್ಲಿ ಕಂಡುಬರುವ ಕೆಲವು ವೈಶಿಷ್ಟ್ಯಗಳು

**ಕೆ. ಎಸ್. ಗುರುಬಸವೇಗೌಡ**

ಈ ಲೇಖನದಲ್ಲಿ ಸೋಲಿಗ ಕನ್ನಡದ ಪದಗಳು ಶಿಷ್ಟಕನ್ನಡ ಪದಗಳಿಂದ ಯಾವ ರೀತಿ ಭಿನ್ನವೆಂಬುದನ್ನು ತೋರಿಸಲು ಸ್ವಲ್ಪಮಟ್ಟಿಗೆ ಪ್ರಯತ್ನಿಸಲಾಗಿದೆ. ಇಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲದೆ ಇತರ ಹೆಚ್ಚಿನ ವಿವರಗಳನ್ನು ನೋಡಬಯಸುವವರು ಪೂಣೆಯ ಡೆಕ್ಕನ್ ಕಾಲೇಜಿನಲ್ಲಿ ಸಂಗ್ರಹಿಸಿಡಲಾಗಿರುವ ಧ್ವನಿಮುದ್ರಣವನ್ನು ನೋಡಬಹುದು.

ಈ ಲೇಖನದಲ್ಲಿ ಧ್ವನಿಮಾ ಹಾಗೂ ಆಕೃತಿಮಾಗಳಲ್ಲಿ ಕಂಡುಬರುವ ಕೆಲವು ವೈಶಿಷ್ಟ್ಯಗಳನ್ನು ಮಾತ್ರವೇ ಕೊಡಲಾಗಿದೆ.

೧. ವರ್ಣದಲ್ಲಿ ಮುಖ್ಯವಾಗಿ ಹೇಳಬೇಕಾದ್ದು ಶಕಟರೇಫ (ಱ). ಈ ವರ್ಣವು ಸದ್ಯಕ್ಕೆ ಅಧ್ಯಯನ ನಡೆಸಿರುವ ಕನ್ನಡದ ಯಾವ ಉಪಭಾಷೆಗಳಲ್ಲೂ ಕಂಡುಬರುತ್ತಿಲ್ಲ. ಱಕಾರ ಬರುವ ಕನ್ನಡ ಪದಗಳನ್ನು ಡಿ. ಎಲ್. ನರಸಿಂಹಾಚಾರ್ಯರ ಮೂಲಕ ಈ ಲೇಖಕನು ಸಂಗ್ರಹಿಸಿದ್ದು, ಅವನ್ನು ಧ್ವನಿಮುದ್ರಿಸಿಕೊಂಡು ಡೆಕ್ಕನ್‌ಕಾಲೇಜಿನಲ್ಲಿ ಇಡಲಾಗಿದೆ. ಸೋಲಿಗರ ಕನ್ನಡದ ಬಗ್ಗೆ ಹೆಚ್ಚು ಅಧ್ಯಯನ ನಡೆಸುವವರು ಬಯಸಿದಲ್ಲಿ ಪೂಣೆಗೆ ಹೋಗಿ ಆ ಸಂಗ್ರಹವನ್ನು ನೋಡಬಹುದು. ಈ ವರ್ಣದ ಉಚ್ಚಾರಣೆಯನ್ನು ಇಂದಿಗೂ ಸೋಲಿಗರಲ್ಲಿ ಕಾಣಬಹುದು. ಆದರೆ ಇದರ ಉಚ್ಚಾರಣೆ ಈಗ ಸ್ವಲ್ಪ ಸಡಿಲವಾಗಿದೆ. ಕೆಳಗೆ ಕೊಟ್ಟಿರುವ ಕೆಲವು ಉದಾಹರಣೆಗಳು ಈ ವರ್ಣದ ಪ್ರತ್ಯೇಕತೆಯನ್ನು ತೋರಿಸುತ್ತವೆ.

ಗುಱಿ (ಗುರಿ), ಗಱಿ (ಗರಿ), ತೂಱು (ತೂರು), ತೋಱು (ತೋರು), ಮೂಱು (ಮೂರು), ನೂಱು (ನೂರು), ಮಾಱು (ಮಾರು), ಕೆಱೆ (ಕೆರೆ), ಕೊಱೆ (ಕೊರೆ), ಕುಱಿ (ಕುರಿ), ಹಾಱು (ಹಾರು), ಆಱು (ಆರು), ಅಱೆ (ಅರೆ), ಇಱು (ಇರು), ಮುಱಿ (ಮುರಿ), ಏಱು (ಏರು) ಮುಂತಾದವು.

೨. ೞಕಾರ: ಈ ವರ್ಣವು ಹಳಗನ್ನಡದ ಯಾವ ಪದಗಳಲ್ಲಿ ಎಲ್ಲಿ ಕಾಣಿಸಿಕೊಳ್ಳುತ್ತಿದ್ದಿತೋ ಆ ಪದಗಳಲ್ಲಿ ಅಲ್ಲಿಯೇ ಸ್ವಚ್ಛಂದವಾಗಿ ಉಚ್ಚಾರಣೆಯಲ್ಲಿರುವುದನ್ನು ಕಾಣಬಹುದು. ಸೋಲಿಗರಲ್ಲಿ ವಯಸ್ಸಾದವರು ಉಚ್ಚಾರಣೆಮಾಡುವಾಗ ಇದು ಸ್ವತಂತ್ರ

ವರ್ಣವಾಗಿದ್ದರೂ, ಇದನ್ನು ಸ್ವತಂತ್ರವರ್ಣವೆಂದು ಪರಿಗಣಿಸದೇ ಇರಲು ಕಾರಣ, ಯುವಕರಲ್ಲಿ ಇದು ಸ್ವಚ್ಛಂದವಾಗಿ ಉಚ್ಚಾರಣೆಯಲ್ಲಿ ಉಳಿದುಕೊಂಡಿದ್ದುದು. ಈ ಉದಾಹರಣೆಗಳನ್ನು ನೋಡಬಹುದು : ಉಟು ~ ಉಳು. ಕೋಟ್ ~ ಕೋಳಿ, ಮಟ್ ~ ಮಳೆ ಮುಂತಾದುವು.

೩. ಅನುನಾಸಿಕವು ಪ್ರತ್ಯೇಕವರ್ಣವಾಗಿ ಶಿಷ್ಟಕನ್ನಡದಲ್ಲಿ ಕಂಡುಬರುವುದಿಲ್ಲ. ಆದರೆ ಇದು ಒಂದು ಸ್ವತಂತ್ರವರ್ಣವಾಗಿ ಸೋಲಿಗಕನ್ನಡದಲ್ಲಿ ಕಂಡುಬರುತ್ತದೆ. ಈ ವರ್ಣ ಬೆಟ್ಟದ ಸುತ್ತಮುತ್ತ ಮಾತನಾಡುವ ಕನ್ನಡದಲ್ಲೂ ಕಂಡುಬರುತ್ತದೆ. ಆದರೆ ಇಲ್ಲಿ ಸೋಲಿಗರ ಕನ್ನಡದಲ್ಲಿಯ ಕೆಲವು ಉದಾಹರಣೆಗಳನ್ನು ಮಾತ್ರ ಕೊಡಲಾಗಿದೆ.

೪. ಸೋಲಿಗರ ಕನ್ನಡದಲ್ಲಿ 'ಮಗ' ಎಂದರೆ 'ಮಗಳು' ಎಂದರ್ಥ. 'ಮಗ̃' ಅಂದರೆ 'ಮಗನು' ಎಂದರ್ಥ : 'ಅವ' ಎಂದರೆ 'ಅವಳು' ಎಂದೂ 'ಅವ̃' ಎಂದರೆ 'ಅವನು' ಎಂದರ್ಥ.

೫. ಶಕಾರ ಹಾಗೂ ಚಕಾರದ ಬಳಕೆ ನಿರ್ದಿಷ್ಟ ಪರಿಸರದಲ್ಲಿ ಮಾತ್ರ ಪ್ರಯೋಗದಲ್ಲಿದೆ. ಚ ಕಾರವು ಪದಮಧ್ಯದಲ್ಲಿ ದ್ವಿತ್ವವ್ಯಂಜನವಿರುವೆಡೆ ಮಾತ್ರ ಬರುತ್ತದೆ. ಬೇರೆಡೆ ಶ ಕಾರ ಮಾತ್ರ ಪ್ರಯೋಗದಲ್ಲಿದೆ. ಹೊರಗಿನ ಕೆಲವರು ಮಾತ್ರ ಸ ಕಾರದ ಪ್ರಯೋಗವನ್ನು ಮಾಡಬಹುದು. ಸೋಲಿಗರ ಕನ್ನಡದಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೇನೆಂದರೆ, ಹ ಕಾರ ಸ್ವತಂತ್ರ ವರ್ಣವಾಗಿ ಉಚ್ಚಾರಣೆಯಲ್ಲಿ ಇರುವುದು.

ಇಲ್ಲಿಗೆ ವರ್ಣದಲ್ಲಿಯ ಕೆಲವು ವೈಶಿಷ್ಟ್ಯಗಳನ್ನು ಮುಗಿಸಿ. ಮುಂದೆ ಆಕೃತಿಮಾದಲ್ಲಿ ಕಂಡುಬರುವ ಕೆಲವು ವೈಶಿಷ್ಟ್ಯಗಳನ್ನು ನೋಡೋಣ :

೬. ೧. ಬಹುವಚನ ಪ್ರಯೋಗದಲ್ಲಿ ಸೋಲಿಗ ಕನ್ನಡದಲ್ಲಿ ಹಾಗೂ ಶಿಷ್ಟಕನ್ನಡದಲ್ಲಿ ಇರುವ ಭಿನ್ನತೆಯನ್ನು ಕ್ರಮವಾಗಿ ತೋರಿಸಲಾಗಿದೆ :

**ಸೋಲಿಗ**—ಮರಗ, ಆನೆಗ, ಎತ್ತುಗ, ಕುರಿಗ, **ಶಿಷ್ಟ**—ಮರಗಳು, ಆನೆಗಳು, ಎತ್ತುಗಳು, ಕುರಿಗಳು.

೬. ೨. ನಾಮಪದದ ಅಂತ್ಯದಲ್ಲಿ ಅನುನಾಸಿಕದಿಂದ ಕೂಡಿದ ಅ ಕಾರವು ಬಂದರೆ (ಶೊ̃ಲೆಗ ಹಾಗೂ ಹುಡು̃ಗ ಪದಗಳನ್ನು ಬಿಟ್ಟು) –ದಿರು ಎಂಬ ಬಹುವಚನ ಪ್ರತ್ಯಯ ಬರುತ್ತದೆ. ಶಿಷ್ಟಕನ್ನಡದಲ್ಲಿ ಈ ಪ್ರತ್ಯಯವು ಕೇವಲ ಸಂಬಂಧಸೂಚಕ ನಾಮಪದಗಳಲ್ಲಿ ಮಾತ್ರ ಬರುತ್ತಿತ್ತು.

**ಸೋಲಿಗ**—ಅಕ್ಕ̃—ಅಕ್ಕದಿರು, ಮೋಟಿ̃—ಮೋಟಿದಿರು, ನೋಣ̃—ನೋಣದಿರು, **ಶಿಷ್ಟ**—ಅಕ್ಕಂದಿರು, ಗಿಳಿಗಳು, ನೊಣಗಳು.

೬.೩. ನಪುಂಸಕವಲ್ಲದ ಎಲ್ಲಾ ನಾಮಪದಗಳಲ್ಲೂ —ರು ಎಂಬ ಬಹುವಚನಪ್ರತ್ಯಯ

ವನ್ನು ಉಪಯೋಗಿಸುತ್ತಾರೆ. ಇಲ್ಲಿ —ಅ ದಿಂದ ಅಂತ್ಯವಾಗುವ ಪದಗಳು ಮಾತ್ರ ಮೇಲಿನ ಹೇಳಿಕೆಗೆ ಹೊರತಾಗಿವೆ.

**ಸೋಲಿಗ**—ತಂಗೆ–ತಂಗೆರು, ಅವ್ವೆ–ಅವ್ವೆರು, ***ಚೊಚೆ–ಚೊಚೆರು**, **ಶಿಷ್ಟ**—ತಂಗೇರು, ಅವ್ವಂದಿರು, ಸೊಸೆಯರು.

೭. ಚತುರ್ಥೀ ವಿಭಕ್ತಿಯಲ್ಲಿ ಕಂಡುಬರುವ ಪ್ರಭೇದವನ್ನು ಇಲ್ಲಿ ಕೊಡಲಾಗಿದೆ.

**ಸೋಲಿಗ**—ಕಾಡಿಗ, ಹುಲ್ಲಿಗ, ಬಿದರಿಗ, ನನಗ, ಹುಲಿಕ, ಒಳಕ, ಮರಕ, ಕೈಗಕ, ಅದಕ; **ಶಿಷ್ಟ**—ಕಾಡಿಗೆ, ಹುಲ್ಲಿಗೆ, ಬಿದರಿಗೆ, ನನಗೆ, ಹುಲಿಗೆ, ಒಳಗೆ, ಮರಕ್ಕೆ, ಕೈಗೆ, ಅದಕ್ಕೆ.

೮. ಇಲ್ಲಿ ಗಮನಿಸಬೇಕಾದ ಇನ್ನೊಂದು ಪ್ರಮುಖವಾದ ವಿಶೇಷವೇನೆಂದರೆ ಭೂತ ಕಾಲದ ಧಾತುವಿನ ಉತ್ತಮ ಪುರುಷ ಏಕವಚನ ಹಾಗೂ ಬಹುವಚನಗಳಲ್ಲಿ ಹಾಗೂ ಪ್ರಥಮ ಪುರುಷ ಪುಲ್ಲಿಂಗ ಏಕವಚನದಲ್ಲಿ ಅನುನಾಸಿಕವು ಅಂತ್ಯಸ್ವರದ ಮೇಲೆ ಬರುವು ದನ್ನು ಕಾಣಬಹುದು. ಉದಾಹರಣೆಗಳನ್ನು ನೋಡಿ :

**ಸೋಲಿಗ**—ಮಾಡಿನೆ, ಮಾಡಿನ. ಕುಡಿನೆ, ಕುಡಿನ. ಕರೆನೆ, ಕರೆನ.

ಬನ್ನೆ, ಬನ್ನ, ಮಾಡಿನೊ, ಕುಡಿನೊ, ಕರೆನೊ, **ಶಿಷ್ಟ**—ಮಾಡಿದೆನು, ಮಾಡಿದನು; ಕುಡಿದೆನು, ಕುಡಿದನು ; ಕರೆದೆನು, ಕರೆದನು ; ಬಂದೆನು, ಬಂದನು ; ಮಾಡಿದೆವು, ಕುಡಿ ದೆವು, ಕರೆದೆವು.

ಇಲ್ಲಿ ಉದಾಹರಣೆಗಾಗಿ ಕೊಟ್ಟಿರುವ ಪದಗಳ ಉಚ್ಚಾರಣೆಯನ್ನು ಈಗಲೂ ಬಿಳಿ ಗಿರಿರಂಗನ ಬೆಟ್ಟದ ಸೋಲಿಗರ ಕನ್ನಡದಲ್ಲಿ ಕಾಣಬಹುದು.

---

* ಇಲ್ಲಿ ಪದದಾದಿಯಲ್ಲಿ ಚ ಕಾರವನ್ನು ಕೊಟ್ಟಿರುವುದು ಧ್ವನಿಪ್ರಭೇದದ ಪರಿಗಣನೆಯನ್ನು ಗಮನಿಸಿದ ಮೇಲೆ.

ಟಿ. ವಿ. ವೆಂಕಟಾಚಲ ಶಾಸ್ತ್ರೀ

## ಭೂಮಿಕೆ

ಕನ್ನಡ ಭಾಷೆಯನ್ನು ನಾವು ಪರಸ್ಪರರ ವ್ಯವಹಾರಕ್ಕೆ ಬಳಸುವಾಗ, ಬಳಕೆಗೆ ಎರಡು ದಾರಿಗಳಿವೆ : ಒಂದು, ಆಡುಮಾತು ; ಇನ್ನೊಂದು, ಬರೆವಣಿಗೆ. ಆಡುಮಾತಿಗೆ ಸಾಮಾನ್ಯ ಕೌಟುಂಬಿಕಸಂದರ್ಭದಿಂದ ಹಿಡಿದು ಗಂಭೀರಸ್ವರೂಪದ ಉಪನ್ಯಾಸದವರೆಗೆ ವ್ಯಾಪ್ತಿ ; ಹಾಗೆಯೇ ಬರೆವಣಿಗೆಗೆ ಖಾಸಗಿಯಾದ ಪತ್ರಲೇಖನದಿಂದ/ಗುರುತಿನ ಚೀಟಿಯಿಂದ ಹಿಡಿದು ಉತ್ಕೃಷ್ಟ ಸಾಹಿತ್ಯರಚನೆಯವರೆಗೆ ವ್ಯಾಪ್ತಿ. ಇವುಗಳಲ್ಲಿ ಮೊದಲನೆಯದರ ವಿಚಾರದಲ್ಲಿ ಗೊತ್ತಾದ ವ್ಯಾಕರಣಸೂತ್ರಗಳ ವಿಧಿ ನಿಷೇಧಗಳ ತೊಡಕುಗಳು ಅಷ್ಟು ನಿಶ್ಚಿತವಾಗಿ, ಪ್ರಬಲವಾಗಿ ಪ್ರವೃತ್ತವಾಗುವುದಿಲ್ಲ. ಇಲ್ಲಿ ಶಬ್ದಗಳ ಸಂಯೋಜನೆಯಲ್ಲಿ ಕೆಲಮಟ್ಟಿಗೆ ಶಿಥಿಲತೆ ಕಂಡುಬಂದರೂ, ಪರಸ್ಪರವಾಗಿ ಆಶಯವೋ ಸಂಗತಿಯೋ ಮನವರಿಕೆಯಾದರೆ ಸಾಕಾಗುತ್ತದೆ. ಕಾಲ ದೇಶ ಪಾತ್ರಗಳನ್ನು ಹೊಂದಿಕೊಂಡು ಆಡುಮಾತು ಸರಳ ಸಹಜವೂ ಸ್ನಿಗ್ಧವೂ ಆದ ರೀತಿಯಲ್ಲಿ ಅರಳುತ್ತ, ಉರುಳುತ್ತ, ಹೊರಳುತ್ತ, ತನ್ನ ಕಾರ್ಯವನ್ನು ಕೈಗೂಡಿಸುತ್ತ ಇರುತ್ತದೆ. ಇಲ್ಲಿ ಗ್ರಾಮ್ಯ, ಶಿಷ್ಟ ಎಂಬುದಾಗಿ ಭೇದಗಳನ್ನು ಮಾಡುವುದುಂಟು. ಗ್ರಾಮ್ಯದ ವ್ಯಾಪ್ತಿ ಕಾಲ ದೇಶ ಪಾತ್ರಗಳ ದೃಷ್ಟಿಯಿಂದ ಹೆಚ್ಚಾಗಿ ಸೀಮೆ ಸಂಕೋಚಗಳನ್ನು ಉಳ್ಳದು. ಶಿಷ್ಟವಾದರೋ ಹೆಚ್ಚು ಸಾರ್ವತ್ರಿಕವಾದುದು ; ಪರಿಷ್ಕೃತವಾದುದು. ಎರಡಕ್ಕೂ ಅವುಗಳದೇ ನೆಲೆಬೆಲೆಗಳೂ ವ್ಯಾಕರಣಗಳೂ ಉಂಟು.

ಶಿಷ್ಟಭಾಷೆ ಪರಸ್ಪರರ ನಡುವೆ ಸಾಮಾಜಿಕ ಸಾಂಸ್ಕೃತಿಕ ವ್ಯವಹಾರಗಳಿಗೆ ಪ್ರಬಲವಾದ, ವ್ಯಾಪಕವಾದ ಸಾಧನ ; ಅಷ್ಟು ಮಾತ್ರವಲ್ಲ, ಒಂದು ಗೊತ್ತಾದ ಪರಿಸರದಲ್ಲಿ, ಕಾಲ ದೇಶಗಳ ಎಲ್ಲೆಕಟ್ಟುಗಳನ್ನು ಮೀರಿ ಜನರನ್ನೂ ಅವರ ಮನೋವ್ಯಾಪಾರಗಳನ್ನೂ ಹತ್ತಿರಕ್ಕೆ ತರುವ ಒಂದು ಭಾಷೈಕ್ಯಶಕ್ತಿಯೂ ಹೌದು. ಅದು ಗ್ರಾಮ್ಯದ ಹಾಗೆ ಸರಳವೂ ಸಹಜವೂ ಆಗದಿರಬಹುದು ; ಕೆಲಮಟ್ಟಿಗೆ ಕೃತಕವೂ ಅಲಂಕೃತವೂ ಇರಬಹುದು. ಆದರೆ ಅದು ವ್ಯಕ್ತಿ-ವ್ಯಕ್ತಿಗಳ ನಡುವೆ

ಸಂಬಂಧಗಳನ್ನು ಸಾಧಿಸುವುದರಲ್ಲಿ ಯಶಸ್ವಿಯಾಗಬಲ್ಲುದು. ಅದು ಓರೆಕೋರೆಗಳನ್ನು ತಿದ್ದಿ ನಯಗೊಳಿಸಿದ ಹರಳಿನ ಹಾಗೆ; ಮಿಂದು ಮಡಿಯುಟ್ಟು ಸಿಂಗರಗೊಂಡ ಸುಂದರಿಯ ಹಾಗೆ. ಆದುದರಿಂದಲೇ ಅದರ ಪ್ರಕಾಶದಲ್ಲಿ ಒಂದು ಕೌಶಲವಿರುತ್ತದೆ, ಸಂಸ್ಕೃತಿಯ ಗಾಂಭೀರ್ಯವಿರುತ್ತದೆ.

ಈ ಶತಮಾನದ ಆದಿಭಾಗದಲ್ಲಿ ಕನ್ನಡ ಭಾಷೆಯಲ್ಲಿದ್ದ, ಎಂದರೆ ಅಂದು ರೂಢಿಯಲ್ಲಿದ್ದ ಶಿಷ್ಟಭಾಷೆ, ಆ ಕಾಲದ ಕನ್ನಡಭಾಷಾಪ್ರೇಮಿಗಳಾದ ವಿದ್ವಾಂಸರ ಪರಿಶ್ರಮದ ಫಲವಾಗಿ ರೂಪಗೊಂಡದ್ದು. ಗ್ರಾಮ್ಯ ಮತ್ತು ಶಿಷ್ಟ ಭಾಷೆಗಳ ಸಂಕ್ರಮಣ ಕಾಲ ಅದು. ಹೊಸಗನ್ನಡ ಭಾಷಾರೂಪಗಳ ಅವ್ಯವಸ್ಥೆಯನ್ನು ಕಟ್ಟುಪಾಡುಗಳ ಮೂಲಕ ವ್ಯವಸ್ಥೆಗೆ ತರಲು ಅಂದಿನ ಭಾಷಾಪ್ರೇಮಿಗಳು, ಎಚ್. ವಿ. ನಂಜುಂಡಯ್ಯ, ಎಂ. ಶಾಮರಾವ್, ಎಂ. ಎಸ್. ಪುಟ್ಟಣ್ಣ, ಎಸ್. ಜಿ. ನರಸಿಂಹಾಚಾರ್, ಡೆಪ್ಯುಟಿ ಚೆನ್ನಬಸಪ್ಪ, ಬಿ. ಎಂ. ಶ್ರೀಕಂಠಯ್ಯ, ತೋಗೆರೆ ನಂಜುಂಡಶಾಸ್ತ್ರೀ—ಈ ಕೆಲವರು, ಬಹುವಾಗಿ ಶ್ರಮಿಸಿದರು. ಅಲ್ಲಿಂದೀಚೆಗೆ ಸ್ವಲ್ಪಕಾಲ, ಶಿಷ್ಟಭಾಷೆ ಪರಿಷ್ಕರಣದ ಹಲವು ಮಜಲುಗಳನ್ನು ದಾಟಿ, ಚೆನ್ನಾಗಿ ಭಾವವಾಹಕ ಮಾಧ್ಯಮವಾಗಿ ಬೆಳೆಯಿತು. ಭಾಷೆಯ ಬಳಕೆದಾರರು ಈ ವಿಷಯದಲ್ಲಿ ತುಂಬ ಎಚ್ಚರ ಚೆಚ್ಚರಗಳನ್ನು ತೋರಿದರು.

ಈಗ ನಾವು ೨೦ನೆಯ ಶತಮಾನದ ಅಂತ್ಯಭಾಗದಲ್ಲಿದ್ದೇವೆ. ಕನ್ನಡಶಿಷ್ಟಭಾಷೆಯ ಬಳಕೆ ನಾನಾ ಕಾರಣಗಳಿಂದ ಹೆಚ್ಚಿದೆ. ಆ ಮಾಧ್ಯಮದ ಬರೆವಣಿಗೆ ವಿಪುಲವಾಗಿ ಸೃಷ್ಟಿಯಾಗುತ್ತಿದೆ. ಖಾಸಗಿ ವ್ಯವಹಾರದ ಬರೆಹಗಳು, ಪತ್ರಿಕೆಗಳು, ಪುಸ್ತಕಗಳು, ಆಡಳಿತದ ಶಾಸನಗಳು, ವೇದಿಕೆಯ ಉಪನ್ಯಾಸಗಳು, ಶಾಲೆ ಕಾಲೇಜುಗಳ ಪಾಠಪ್ರವಚನಗಳು, ದೂರದರ್ಶನ ಆಕಾಶವಾಣಿ ಮೊದಲಾದ ಸಮೂಹಮಾಧ್ಯಮಗಳು, ನಾಟಕ ಚಲನಚಿತ್ರಗಳಂತಹ ಕಲಾಪ್ರಕಾರಗಳು—ಹೀಗೆ ಹಲವು ಸಂದರ್ಭಗಳಿಗೆ ಶಿಷ್ಟಭಾಷೆಯ ಬಳಕೆ ಕಂಡುಬರುತ್ತಿದೆ. ಬಳಕೆ ಹೆಚ್ಚಿದ ಹಾಗೆ ಭಾಷೆ ಸವೆಯುತ್ತದೆ; ಅಂದಗೆಡುತ್ತದೆ, ಶಕ್ತಿಗುಂದುತ್ತದೆ. ಏಕೆಂದರೆ ಬಳಕೆದಾರರೆಲ್ಲ ಒಂದೇ ಮಟ್ಟದಲ್ಲಿ ವಿದ್ಯಾವಂತರೂ ಸುಶಿಕ್ಷಿತರೂ ಆಗಿ ಇರುವುದಿಲ್ಲ. ಅವರು ತಮ್ಮ ಕೈಬಾಯಿಗಳಿಗೆ ಸಿಕ್ಕ ಈ ಭಾಷೆಯೆಂಬ ವಸ್ತುವನ್ನು ತೋರಿದಂತೆ ಎಳೆದಾಡುತ್ತಾರೆ, ಎಸೆದಾಡುತ್ತಾರೆ. ಈ ಮೇಲೆ ಹೇಳಿದ ಹಲವು ಸಂದರ್ಭಗಳಲ್ಲಿ ಇಂದು ಬಳಕೆಯಲ್ಲಿರುವ ಕನ್ನಡದ ಶಿಷ್ಟಭಾಷೆಯನ್ನು ಲಕ್ಷಿಸಿದರೆ, ಆ ಎಳೆದಾಟ, ಆ ಎಸೆದಾಟ ಯಾವ ರೀತಿಯದು ಎಂದು ತಿಳಿಯುತ್ತದೆ.

ಈ ಸ್ಥಿತಿಗೆ ಕಾರಣಗಳೇನು ? : ೧. ಕನ್ನಡ ಭಾಷೆಯ ಇಂದಿನ ಶಿಕ್ಷಣದಲ್ಲಿ ಕ್ರಮಬದ್ಧವಾದ ವ್ಯಾಕರಣಪಾಠ ಅಲಕ್ಷಿತವಾಗಿದೆ. ೨. ಸಂಸ್ಕೃತ ಭಾಷೆ ಸಾಹಿತ್ಯಗಳ ಅಧ್ಯಯನ ಅವಗಣನೆಗೆ ಗುರಿಯಾಗಿದೆ. ೩. ಭಾಷೆ ಸಾಹಿತ್ಯಗಳ ಶಿಕ್ಷಕರ ಭಾಷಾಜ್ಞಾನ ತೀರ ಕೆಳಮಟ್ಟದಲ್ಲಿದೆ. ೪. ಅಭ್ಯಾಸಿಗಳಿಗೂ ವಿದ್ಯಾರ್ಥಿಗಳಿಗೂ ಅನುಸರಣಯೋಗ್ಯವಾದ ಒಳ್ಳೆಯ ಮಾದರಿಗಳು ದೊರೆಯುತ್ತಿಲ್ಲ. ೫. ಕಲಿಯುವವರೂ ಕಲಿಸುವವರೂ ಸಮಾನವಾಗಿಯೇ ಶಿಷ್ಟಭಾಷೆಯ

ವೈದ್ಯಕೀಯ ಮತ್ತು ವೈಜ್ಞಾನಿಕ ಶಿಕ್ಷಣಕ್ಕೆ ಬಹುವಾಗಿ ಪ್ರಾಶಸ್ತ್ಯ ದೊರೆಯುತ್ತಿದ್ದು, ಭಾಷೆ ಸಾಹಿತ್ಯಗಳ ಅಧ್ಯಯನದಲ್ಲಿ ಉತ್ಸಾಹವೂ ಶ್ರದ್ಧೆಯೂ ಸಾಧನೆ ಪರಿಶ್ರಮಗಳೂ ಉದಾಸೀನಕ್ಕೆ ಗುರಿಯಾಗಿವೆ. ೭. ಸೃಜನಾತ್ಮಕ ಸಾಹಿತ್ಯಪ್ರಕಾರಗಳಲ್ಲಿ ಪ್ರಾದೇಶಿಕವೂ ಸಾಮಾಜಿಕವೂ ಆದ ಉಪಭಾಷೆಗಳನ್ನೂ ಗ್ರಾಮ್ಯವನ್ನೂ ಹೆಚ್ಚುಹೆಚ್ಚಾಗಿ ಬಳಸುವ ರೂಢಿ ಬೆಳೆಯುತ್ತಿರುವುದರಿಂದ ಶಿಷ್ಟಭಾಷೆಯ ತಿಳಿವಳಿಕೆಗೆ ಬೇಕಾದ ಶಿಕ್ಷಣವೂ ಸಂಸ್ಕಾರವೂ ಈಗ ಅನಾವಶ್ಯಕವೆಂದು ತೋರುತ್ತಿದೆ. ೮. ತಪ್ಪುಗಳನ್ನು ತಪ್ಪೆಂದು ತಿಳಿಯದಿರುವುದೂ ಹಾಗೆ ತಿಳಿದರೂ ತಿದ್ದಿಕೊಳ್ಳದಿರುವುದೂ ಪ್ರವೃತ್ತಿಯಾಗಿದೆ. ೯. ಸರ್ಕಾರ ಮತ್ತು ಸಾಮಾಜಿಕ ಸಂಸ್ಥೆಗಳು ಭಾಷಾಶುದ್ಧತೆಯ ಕಡೆಗೆ ನಿರ್ಲಕ್ಷ್ಯದಿಂದಿವೆ.

ಈ ಸ್ಥಿತಿಯ ನಿವಾರಣೆಗೆ ಭಾಷಾಪ್ರೇಮಿಗಳಾದ ವಿದ್ವಾಂಸರೂ ಇತರ ಸುಶಿಕ್ಷಿತರೂ ಯುದ್ಧದ ಸಿದ್ಧತೆಯೆನ್ನುವಂತೆ ಜಾಗೃತರಾಗಿ ಪ್ರಯತ್ನಶೀಲರಾಗಬೇಕಾಗಿದೆ. ಅಂತಹ ಪ್ರಯತ್ನಗಳು ಸ್ವಲ್ಪಮಟ್ಟಿಗೆ ನಡೆಯುತ್ತಿವೆಯಾದರೂ, ಅವು ಏನೇನೂ ಸಾಲವು. ಈ ಸಂದರ್ಭದಲ್ಲಿ ವಿದ್ವಾಂಸರಾದ ಟಿ. ಕೇಶವಭಟ್ಟರ ಕೆಲವು ಲೇಖನಗಳ ಕಡೆಗೆ, ಎಂ. ರಾಜಗೋಪಾಲಾಚಾರ್ಯರ ಇತ್ತೀಚೆಯ ಪುಸ್ತಕವೊಂದರ ಕಡೆಗೆ ('ಶುದ್ಧಾಶುದ್ಧ ಕನ್ನಡ') ತಮ್ಮ ಗಮನವನ್ನು ನಾನು ಸೆಳೆಯಬಯಸುತ್ತೇನೆ. ಈ ಹಿಂದೆ ಎ. ಕೆ. ಪುಟ್ಟರಾಮು, ಕ. ವೆಂ. ರಾಘವಾಚಾರ್, ಓಡ್ಲಮನೆ ಆತ್ಮಾರಾಮಶಾಸ್ತ್ರಿ ಮೊದಲಾದವರು ಈ ಬಗೆಯ ಪ್ರಯತ್ನಗಳನ್ನು ನಡಸಿದ್ದರೆಂಬುದನ್ನೂ ಇಲ್ಲಿ ಸ್ಮರಿಸಬಹುದಾಗಿದೆ. ಈಚೆಗೆ ಪಿ. ವೆಂಕಟರಮಣಾಚಾರ್ಯ, ಜಿ. ವೆಂಕಟಸುಬ್ಬಯ್ಯ, ಹಂಪ. ನಾಗರಾಜಯ್ಯ ಮೊದಲಾದವರೂ ಈ ದಿಕ್ಕಿನಲ್ಲಿ ಶ್ರಮಿಸಿದ್ದಾರೆ, ಶ್ರಮಿಸುತ್ತಿದ್ದಾರೆ.

ಮೊದಲು ಭಾಷೆಯ ಬಳಕೆದಾರರೂ ಸುಧಾರಣೆಯ ವಾದಿಗಳೂ ತಿಳಿದಿರಬೇಕಾದ ಒಂದು ವಾಕ್ಯಪುಂಜವನ್ನು ಆರ್. ನರಸಿಂಹಾಚಾರ್ಯರ ಒಂದು ಲೇಖನದಿಂದ ತೆಗೆದು ಇಲ್ಲಿ ಉದ್ಧರಿಸುತ್ತೇನೆ. ಈ ವಾಕ್ಯಪುಂಜವನ್ನು ಅವರು **Round Table** ಎಂಬ ನ್ಯೂಯಾರ್ಕ್ ಪತ್ರಿಕೆಯೊಂದರಿಂದ ಎತ್ತಿಕೊಟ್ಟಿದ್ದಾರೆಂದು ತಿಳಿಯುವುದು :

"The corrupter of a language stabs straight at the heart of his country. He commits a crime against every individual of the nation, for he throws a poison into a stream from which all must drink. He wrongs himself first, and afterwards every man and woman whose native speech he mars. It is the duty of every educated man to guard jeolously the purity of his native tongue. He who hunts down and pillories a slang phrase, a vulgarism, a corruption of any kind, is a public benefactor. In the fulfilment of the sacred test which rests on him as an educated man, he adds a stone to the bulwark of his nation's safety and greatness." (ಉದ್ಧೃತ : ಕನ್ನಡಕ್ಕೆ ಪ್ರೋತ್ಸಾಹ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೧೯-೧, ಏಪ್ರಿಲ್ ೧೯೩೪)

## ೧. ಅಲ್ಪಪ್ರಾಣ-ಮಹಾಪ್ರಾಣಗಳು

(೧) ಮಹಾಪ್ರಾಣಘಟಿತ ಸಂಸ್ಕೃತಶಬ್ದಗಳನ್ನು ಕನ್ನಡ ಸ್ವೀಕರಿಸುವಾಗ, ವೈಯಾಕರಣ ಮಾನ್ಯವಾಗಿ ಪಾರಂಪರಿಕವಾಗಿ ಬಂದ ತದ್ಭವಗಳನ್ನು ಬಳಸುವ ವಿಷಯದಲ್ಲಿ ಆಕ್ಷೇಪ ವಿರುವುದಿಲ್ಲ; ಆದರೆ ಹೊಸದಾಗಿ ಸ್ವೀಕರಿಸುವಾಗ, ಅದನ್ನು ಅಲ್ಪಪ್ರಾಣಘಟಿತವಾಗಿ ಮಾಡಬಾರದು. ಹಾಗೆ ಮಾಡಿದರೆ ಅಂತಹ ಸಂಸ್ಕೃತ ಶಬ್ದಗಳು ಅಂದಗೆಟ್ಟು ಅಪ ಪ್ರಯೋಗಗಳೆನ್ನಿಸುತ್ತವೆ.

ಕ್ರಮವಾಗಿ ಅಪಪ್ರಯೋಗಗಳು ಮತ್ತು ಶುದ್ಧ ಪ್ರಯೋಗಗಳು: ಕಡ್ಗ–ಖಡ್ಗ, ಮುಕರ–ಮುಖರ, ಸುಕ–ಸುಖ, ಚಾಯೆ–ಛಾಯೆ, ಅಚ್ಚೋದ–ಅಚ್ಛೋದ, ಸ್ವಚ್ಚ–ಸ್ವಚ್ಛ, ಟಕಾರ–ಠಕಾರ, ಕುಟಾರ–ಕುಠಾರ, ಮಟ–ಮಠ, ಡಕಾರ–ಢಕಾರ, ದೃಡ–ದೃಢ, ಓಡ್ರ–ಓಢ್ರ, ತೂತ್ಕಾರ–ಥೂತ್ಕಾರ, ಪ್ರತಮ–ಪ್ರಥಮ, ವ್ಯತೆ–ವ್ಯಥೆ, ದಾರಾವಾಹಿ–ಧಾರಾವಾಹಿ, ಮದುರ–ಮಧುರ, ಸುದೆ–ಸುಧೆ, ಪಲ–ಫಲ, ವಿಪಲ–ವಿಫಲ, ಕಪ–ಕಫ, ಬಕ್ತಿ–ಭಕ್ತಿ, ಸುಬದ್ರೆ–ಸುಭದ್ರೆ, ಸಬೆ–ಸಭೆ.

ಅಲ್ಲದೆ ಕನಿಷ್ಠ, ಗರಿಷ್ಠ, ಸ್ವಾದಿಷ್ಠ, ಆಸ್ಥಿ ಇಂತಹ ಮಹಾಪ್ರಾಣ ಸಂಯುಕ್ತಗಳು ಕನಿಷ್ಟ, ಗರಿಷ್ಟ, ಸ್ವಾದಿಷ್ಟ, ಅಸ್ತಿ ಎಂದು ಉಚ್ಚಾರಗೊಳ್ಳುತ್ತವೆ. ಇದು ತಪ್ಪು.

(೨) ಮಹಾಪ್ರಾಣಘಟಿತ ಸಂಸ್ಕೃತ ಶಬ್ದಗಳನ್ನು ಉಚ್ಚರಿಸುವಾಗ, ತ್ವರೆ ಆತಂಕ ಮೊದಲಾದ ಕಾರಣಗಳಿಂದ, ಸಮೀಪದ ಅಲ್ಪಪ್ರಾಣಘಟಿತ ಅಕ್ಷರಗಳು ಹೆಚ್ಚೋ ಕಡಿಮೆಯೋ ಮಹಾಪ್ರಾಣಘಟಿತಗಳಾಗಿ ಉಚ್ಚಾರವಾಗುವುದುಂಟು. ಆ ಕಾರಣದಿಂದಲೇ ಉಚಿತಸ್ಥಾನದ ಮಹಾಪ್ರಾಣಗಳು ಅಲ್ಪಪ್ರಾಣಗಳಾಗಿ ತೇಲಿ ಉಚ್ಚಾರವಾಗುವುದೂ ಶಕ್ಯ.

ಕ್ರಮವಾಗಿ ತಪ್ಪು ಮತ್ತು ಸರಿ ರೂಪಗಳು: ವಿಧ್ಯಾರ್ಥಿ/ವಿಧ್ಯಾರ್ತಿ–ವಿದ್ಯಾರ್ಥಿ, ಭಾಧೆ/ಬಾದೆ–ಬಾಧೆ, ಪ್ರಭಂಧ/ಪ್ರಭಂದ–ಪ್ರಬಂಧ, ಭೇಧ/ಬೇಧ–ಭೇದ, ಸಂಭಂಧ/ಸಂಭಂದ–ಸಂಬಂಧ, ಧೃಢ/ಧೃಡ–ದೃಢ, ವಿಧ್ಯುಚ್ಛಕ್ತಿ/ವಿಧ್ಯುಚ್ಚಕ್ತಿ/ವಿಧ್ಯುಶ್ಚಕ್ತಿ–ವಿದ್ಯುಚ್ಛಕ್ತಿ, ಅಧ್ಭುತ–ಅದ್ಭುತ.

(೩) ಅಲ್ಪಪ್ರಾಣಘಟಿತ ಶಬ್ದಗಳನ್ನು ಮಹಾಪ್ರಾಣಘಟಿತಗಳೆಂದು ಭ್ರಮಿಸಿ ಉಚ್ಚರಿಸುವುದೂ ಬರೆಯುವುದೂ ಉಂಟು.

ಕ್ರಮವಾಗಿ ತಪ್ಪು ಮತ್ತು ಸರಿರೂಪಗಳು: ಉಚ್ಛ–ಉಚ್ಚ, ಉಚ್ಛಾರಣೆ–ಉಚ್ಚಾರಣೆ, ನಿರ್ಧೇಶಕ–ನಿರ್ದೇಶಕ, ದಿಗ್ಧರ್ಶಕ–ದಿಗ್ದರ್ಶಕ, ಶಬ್ಧ–ಶಬ್ದ ಭಕ್ತಾಧಿಗಳು–ಭಕ್ತಾದಿಗಳು, ಭೀಭತ್ಸ–ಬೀಭತ್ಸ, ಹಾರ್ಧಿಕ–ಹಾರ್ದಿಕ, ಧೀರ್ಘ–ದೀರ್ಘ, ವಿಧ್ಯಾಸಂಸ್ಥೆ–ವಿದ್ಯಾಸಂಸ್ಥೆ, ವಿವಾಧಗ್ರಸ್ಥ–ವಿವಾದಗ್ರಸ್ತ.

(೪) ಎಚ್ಚರಿಕೆಯಿಂದ ಗಮನಿಸಬೇಕಾದ ಕೆಲವು ಅಲ್ಪಪ್ರಾಣಘಟಿತ ಶಬ್ದಗಳಿವೆ. ಇವನ್ನು ಮಹಾಪ್ರಾಣಘಟಿತಗಳನ್ನಾಗಿ ಭ್ರಮಿಸಿದೆ. ರೂಢಿಯಲ್ಲಿ ಆಳವಾಗಿ ಬೇರು ಬಿಟ್ಟಿರುವ ಈ ಶಬ್ದಗಳ ವಿಚಾರದಲ್ಲಿ ಎಚ್ಚರಿಕೆಯಿರಬೇಕು.

ಕ್ರಮವಾಗಿ ತಪ್ಪು ಮತ್ತು ಸರಿ ರೂಪಗಳು : ಕ್ರೋಧೀಕರಣ–ಕ್ರೋಡೀಕರಣ, ಗೋಮೇಧಿಕ–ಗೋಮೇದಿಕ, ವೈಢೂರ್ಯ–ವೈಡೂರ್ಯ, ಪಿತ್ಥ–ಪಿತ್ತ, ಪುತ್ಥಳಿ–ಪುತ್ತಳಿ, ಪ್ರಸಾದನ–ಪ್ರಸಾಧನ (=ಅಲಂಕಾರ, ಶೃಂಗಾರ), ಸಧ್ಯ–ಸದ್ಯ, ಷಷ್ಠ್ಯಬ್ಧ–ಷಷ್ಟ್ಯಬ್ದ,

ಅನ್ಯದೇಶ್ಯ ಮತ್ತು ದೇಶ್ಯ ಶಬ್ದಗಳಲ್ಲಿಯೂ ಈ ಭ್ರಮೆ ತಲೆದೋರಿರುವುದುಂಟು ಎನ್ನುವುದನ್ನು ಈ ತಪ್ಪು–ಸರಿ ರೂಪಗಳಿಂದ ತಿಳಿಯಬಹುದು. ನಿಖರ–ನಿಕರ (ಮರಾ < ನಿಕರ್/ನಿಕರೂ), ಅಘವಡು–ಅಗವಡು, ಅಂಘವಣೆ–ಅಂಗವಣೆ, ಭಡ್ತಿ–ಬಢತಿ/ಬಡ್ತಿ(ಢ್ತಿ).

೫. ಸಂಸ್ಕೃತ ಪ್ರಾಕೃತ ಭಾಷೆಗಳ ಪ್ರಬಲವಾದ ಪ್ರಭಾವ ಕಾರಣವಾಗಿ, ದೇಶ್ಯಶಬ್ದಗಳ ಅಲ್ಪಪ್ರಾಣಗಳನ್ನು ಮಹಾಪ್ರಾಣಗಳನ್ನಾಗಿ ಭ್ರಮಿಸಿ ಆಡುಮಾತು ಬರಹಗಳಲ್ಲಿ ಬಳಸುವುದಿದೆ.

ಕ್ರಮವಾಗಿ ತಪ್ಪು ಮತ್ತು ಸರಿರೂಪಗಳು : ಅಧಟು–ಅದಟು, ಘಟ್ಟಿ–ಗಟ್ಟಿ, ಭಳಿ–ಬಳಿ, ಗೋಧಿ–ಗೋದಿ, ಧಾಳಿ–ದಾಳಿ, ಧೊರೆ–ದೊರೆ, ಭಾವಿ–ಬಾವಿ ಎಂಭತ್ತು–ಎಂಬತ್ತು, ಒಂಭತ್ತು–ಒಂಬತ್ತು, ತೊಂಭತ್ತು–ತೊಂಬತ್ತು.

(೬) ಅನುಕರಣ ವಾಚಕಗಳು ಮೂಲ ಶಬ್ದಗಳಲ್ಲ, ಗೌಣಶಬ್ದಗಳು ; ಇವುಗಳಲ್ಲಿ ಭಾವವ್ಯಂಜನೆಗಾಗಿ ಮಹಾಪ್ರಾಣತೆಯನ್ನು ತರುವುದುಂಟು. ಇವನ್ನು ಅಲ್ಪಪ್ರಾಣ ಘಟಿತಗಳನ್ನಾಗಿಯೇ ಉಚ್ಚರಿಸುವುದು ಅಸಹಜವೇನಲ್ಲ. ಅರ್ಥಪ್ರತೀತಿಗೆ ಅಡ್ಡಿಯೇನೂ ಬರುವುದಿಲ್ಲ. ಇಲ್ಲಿಯೂ ಸಂಸ್ಕೃತ ಪ್ರಾಕೃತಗಳ ಪ್ರಭಾವವುಂಟು.

ವಿಕಲ್ಪರೂಪಗಳು : ಖಣಿಖಟಿಲು–ಕಣಿಕಟಿಲು, ಘುಮಘುಮ–ಗಮಗಮ, ಛಟಛಟ–ಚಟಚಟ, ಝಗ್ಗಂದು–ಜಗ್ಗಂದು, ಠಣ್ಣನೆ–ಟಣ್ಣನೆ, ಢಮಾರ್–ಡಮಾರ್, ದಢಾರೆಂದು–ದಡಾರೆಂದು, ಥಟ್ಟನೆ–ತಟ್ಟನೆ, ಧಗಧಗನೆ–ದಗದಗನೆ, ಫಳಫಳ–ಪಳಪಳ, ಭಗ್ಗೆಂದು–ಬಗ್ಗಂದು.

(೭) ಸಮುದ್ರವಾಚಕವಾದ ಎರಡು ಮಹಾಪ್ರಾಣಘಟಿತ ಸಂಸ್ಕೃತ ಶಬ್ದಗಳ ಬರವಣಿಗೆಯಲ್ಲಿ ಗೊಂದಲವೇಳುವುದು ಸಾಮಾನ್ಯ.

ಕ್ರಮವಾಗಿ ತಪ್ಪು–ಸರಿ ರೂಪಗಳು : ಅಂಭುದಿ/ಅಂಭುಧಿ–ಅಂಬುಧಿ (ಅಂಬು + ಧಿ): ಅಂಭೋದಿ/ಅಂಬೋಧಿ–ಅಂಭೋಧಿ (ಅಂಭಸ್ + ಧಿ).

(೮) ದೇಶ್ಯಗಳಾದ ಪ್ರಕಾರ ವಾಚಕಗಳಲ್ಲಿ ಅಂಥ, ಇಂಥ, ಎಂಥ ಮಹಾಪ್ರಾಣ ಘಟಿತವಾದವು. ಇಲ್ಲಿಯು ಮಹಾಪ್ರಾಣಗಳಿಗೆ ಸಮರ್ಥನೆ ಹೇಗೆ ?

ಈ ಶಬ್ದಗಳು ಅಂತಪ್ಪ > ಅಂತಹ > ಅಂಥ, ಇಂತಪ್ಪ > ಇಂತಹ > ಇಂಥ, ಎಂತಪ್ಪ > ಎಂತಹ > ಎಂಥ ಹೀಗೆ ಸಿದ್ಧವಾಗಿವೆ. ಮಧ್ಯಸ್ವರ ಲೋಪಗೊಳ್ಳುವ ಕಾರಣದಿಂದಾಗಿ, ಹಕಾರವೂ ಸಂಸ್ಕೃತದಲ್ಲಿ ಮಹಾಪ್ರಾಣವಾಗಿ ತಿಳಿಯಲ್ಪಡುವುದರಿಂದಾಗಿ ಥ ಕಾಣುಕೊಂಡಿದೆ. ಇದು ವಿಶೇಷ ಸಂದರ್ಭ.

ಇಲ್ಲಿ ಕ್ರಮವಾಗಿ ತಪ್ಪು–ಸರಿ ರೂಪಗಳು : ಅಂತ/ಅಂಥಹ/ಅಂತಾ/ಅಂಥಾ/ಅಂತಃ–

ಅಂತಹ/ಅಂಥ; ಇಂತ/ಇಂಥಹ/ಇಂತಾ/ಇಂಥಾ/ಇಂತಃ–ಇಂತಹ/ಇಂಥ ; ಎಂತ/ಎಂಥಹ/ಎಂತಾ/ಎಂಥಾ/ಎಂತಃ–ಎಂತಹ/ಎಂಥ.

(೯) ಎಫ್ (F) ಧ್ವನಿಯನ್ನುಳ್ಳ ಇಂಗ್ಲಿಷ್ ಭಾಷೆಯ ಶಬ್ದಗಳನ್ನು ಕನ್ನಡದಲ್ಲಿ ಬರೆಯುವಾಗ ಫ ಎಂಬ ಮಹಾಪ್ರಾಣಾಕ್ಷರವನ್ನು ಆ ಧ್ವನಿಯ ಸ್ಥಾನದಲ್ಲಿ ಬರೆಯುವುದು ರೂಢಿ. ವಿರಳವಾಗಿ ಫ ಎಂದು ಬರೆಯುವುದಿದೆ. ಫ ಕಾರದ ಉಚ್ಚಾರಣೆ ಈ ಸಂದರ್ಭಗಳಲ್ಲಿ ಎಫ್ (F) ಎಂಬುದಾಗಿರುತ್ತದೆಯಲ್ಲದೆ. ಮಹಾಪ್ರಾಣವಾಗಿ ಅಲ್ಲ ; ಅಲ್ಪಪ್ರಾಣವಾಗಿಯೂ ಅಲ್ಲ.

ಉದಾ. ಗೆ : ಕಾಫಿ, ಸೋಫಾ, ಅರ್ಜಿಫಾರಂ, ಫಸ್ಟ್‌ಕ್ಲಾಸ್, ಫಾರೆಸ್ಟ್, ಫ್ಯಾಕ್ಟ್ ಗೊಬ್ಬರ.

## ೨. ಸಂಸ್ಕೃತ ಶಬ್ದಗಳು

ಕನ್ನಡ ಸಂಸ್ಕೃತಭಾಷೆಯಿಂದ ನಾಮವಾಚಕಗಳನ್ನೂ ಸಂಖ್ಯಾವಾಚಕ ಗುಣವಾಚಕಗಳನ್ನೂ ಸ್ವೀಕರಿಸಿದೆ. ಬಿಡಿಯಾಗಿ ಶಬ್ದಗಳು ಬಂದಿವೆ, ಪ್ರತ್ಯಯಾಂತಗಳಾಗಿ ಬಂದಿವೆ, ಹಾಗೂ ಸಮಾಸಘಟಿತಗಳಾಗಿ ಬಂದಿವೆ. ಹೀಗೆ ಬಂದಿರುವ ವಿವಿಧಪ್ರಕಾರದ ಶಬ್ದಗಳು ಆ ಭಾಷೆಯ ವ್ಯಾಕರಣಮರ್ಯಾದೆಯನ್ನು ಅನುಸರಿಸಿಯೆ ಬಂದಿರುತ್ತವೆ; ಶಬ್ದಗಳ ಅಂತ್ಯಭಾಗದಲ್ಲಿ ಅತ್ಯಲ್ಪವಾದ ಮಾರ್ಪಾಡುಗಳನ್ನು ಪಡೆದು ಕನ್ನಡದಲ್ಲಿ ಪ್ರಾತಿಪದಿಕಗಳಾಗಿ ನಿಲ್ಲುತ್ತವೆ. ಆದರೆ ಇಂಥ ಸ್ವೀಕೃತ ಶಬ್ದಗಳು ಸಂಸ್ಕೃತಭಾಷೆ ವ್ಯಾಕರಣಗಳ ಪರಿಚಯವಿಲ್ಲದೆ ಇದ್ದಾಗ, ಮಾದರಿ ಬರೆವಣಿಗೆಗಳ ಅವಲೋಕನವಿಲ್ಲದೆ ಇದ್ದಾಗ, ಬಲ್ಲವರೊಂದಿಗೆ ಒಡನಾಟವಿಲ್ಲದೆ ಇದ್ದಾಗ, ಹಾಗೂ ಗತಾನುಗತಿಕವಾಗಿ ಶಬ್ದಪ್ರಯೋಗ ಮಾಡುವ ಅಭ್ಯಾಸವಿದ್ದಾಗ, ತಪ್ಪಾಗಿ ಆಡುಮಾತು ಬರವಣಿಗೆಗಳಲ್ಲಿ ಕಾಣಿಸಿಕೊಳ್ಳುತ್ತವೆ.

(೧) ಕ್ರಮವಾಗಿ ತಪ್ಪು–ಸರಿ ರೂಪಗಳು : ಅಂಗಾಂಗ–ಅಂಗೋಪಾಂಗ, ಅತಿಶಯತೆ–ಅತಿಶಯ, ಅಥವ/ಅಥ್ವಾ–ಅಥವಾ, ಅಧ್ಯಕ್ಷಿಣಿ–ಅಧ್ಯಕ್ಷೆ, ಅಧ್ಯಾಪಕಿ–ಅಧ್ಯಾಪಿಕೆ, ಉಪದ್ರ–ಉಪದ್ರವ, ಕವಿಯಿತ್ರಿ–ಕವಯಿತ್ರಿ, ಕೂಲಂಕುಷ–ಕೂಲಂಕಷ, ಕೌಶಲ್ಯ–ಕೌಶಲ, ಚಾತುರ್ಯ–ಚಾತುರಿ/ಚತುರತೆ, ಜಿಗುಪ್ಸೆ–ಜುಗುಪ್ಸೆ, ದೇವಾದಿದೇವತೆ/ದೇವಾನುದೇವತೆ–ದೇವಾಧಿದೇವತೆ, ನಮಸ್ತೆ–ನಮಸ್ತೇ, ನಮೋನ್ನಮಃ–ನಮೋನಮಃ, ನಾಯಕಿ–ನಾಯಿಕೆ, ಪಾಶ್ಚಿಮಾತ್ಯ–ಪಾಶ್ಚಾತ್ಯ (< ಪಶ್ಚಾತ್), ಪೌರ್ವಾತ್ಯ–ಪೌರಸ್ತ್ಯ (< ಪುರಾ), ಪ್ರಸ್ತಾಪ–ಪ್ರಸ್ತಾವ, ಪ್ರೇರೇಪಣ/ಪ್ರೇರೇಪಿಸು–ಪ್ರೇರಣ/ಪ್ರೇರಿಸು, ಪೌರ್ಣಿಮೆ–ಪೂರ್ಣಿಮ, ಭಾರತೇಯ–ಭಾರತೀಯ, ಮನರಂಜನೆ–ಮನೋರಂಜನೆ, ಮನಮಂಥನ–ಮನೋಮಂಥನ, ಮಹದೇಶ್ವರ–ಮಹದೀಶ್ವರ, ಮಹತ್ಕಾರ್ಯ–ಮಹಾಕಾರ್ಯ, ಮಾತೋಶ್ರೀ–ಮಾತೃಶ್ರೀ, ಯೌವ್ವನ–ಯೌವನ, ರೂಪರೇಷೆ–ರೂಪರೇಖೆ, ರೂಪಸಿ–ರೂಪಿಣಿ/ರೂಪವತಿ, ಲೇಖಕಿ–ಲೇಖಿಕೆ, ವಿದ್ವತ್ತು/ವಿದ್ವತ್ಪೂರ್ಣ–ವಿದ್ವತ್ತೆ/ವಿದ್ವತ್ತ್ವ, ವಿದ್ವತ್ಪೂರ್ಣ, ಶೋಭಾಯಮಾನ–ಶೋಭಮಾನ, ಶ್ರಮ–

ಕ್ರಮ. ಶಿಕ್ಷಣೆ–ಶಿಕ್ಷಣ, ಸಂಗೀತವಿದೂಷಿ–ಸಂಗೀತವಿದುಷಿ, ನೈಯ್ಯಾಯಿಕ–ನೈಯಾಯಿಕ, ವೈಯ್ಯಾಕರಣ/ವೈಯಾಕರಣೆ–ವೈಯಾಕರಣ. ವಿನಹ/ವಿನಃ/ವಿನ–ವಿನಾ,ವ್ರಯ–ವ್ಯಯ, ಸಮುಕ್ಷಮ–ಸಮಕ್ಷ, ಸಮಾಜಸೇವಕಿ–ಸಮಾಜಸೇವಿಕೆ, ದಾಯಾದ್ಯ/ದಾಯಾದಿ–ದಾಯಾದಿ/ದಾಯಾದ, ಪರಾಂಬರಿಸು–ಪರಾಮರ್ಶಿಸು.

(೨) ಸ್ವೀಕೃತ ಶಬ್ದಗಳು ಬೇರೆಯಾದ ಅರ್ಥಗಳನ್ನು ಕೊಡುತ್ತಿವೆಯಾದರೂ, ಶಿಷ್ಟ ಪ್ರಯೋಗದಲ್ಲಿ ಅವನ್ನು ಅಂಗೀಕರಿಸಿರುತ್ತವೆಯಾದ್ದರಿಂದ ಪ್ರಮಾದಗಳೆಂದು ನಾವು ತಿಳಿಯಬೇಕಾಗಿಲ್ಲ.

ಕ್ರಮವಾಗಿ ಸಂಸ್ಕೃತ ಹಾಗೂ ಕನ್ನಡ ಅರ್ಥಗಳು : ಆತುರ: ರೋಗಿ/ಪೀಡಿತ, ತ್ವರೆ ; ಅಪರೂಪ : ರೂಪವಳಿಯುವುದು, ಅಪೂರ್ವ ; ಖಂಡಿತ : ಕತ್ತರಿಸಿದ, ನಿಷ್ಕೃಷ್ಟ ; ವಿಜೃಂಭಣೆ : ಆಕಳಿಕೆ, ವೈಭವ ; ನಿದಾನ : ಮೂಲಕಾರಣ, ಮೆಲ್ಲನೆ ; ಶಿಕ್ಷೆ : ಅಭ್ಯಾಸ, ದಂಡನೆ ; ವಿಪರೀತ : ವ್ಯತ್ಯಾಸ, ಹೆಚ್ಚಳ.

(೩) ಸಂಸ್ಕೃತ ಸಂಖ್ಯೆ ಮತ್ತು ಗುಣವಾಚಕಗಳನ್ನು ನಾಮವಾಚಕಗಳನ್ನಾಗಿ ಮಾಡಿಕೊಳ್ಳುವಾಗ, ಶಬ್ದರೂಪಗಳಲ್ಲಿ ತಪ್ಪಾಗುವುದುಂಟು. ಅಂತಹ ಸಂಖ್ಯೆ ಮತ್ತು ಗುಣವಾಚಕಗಳ ಪ್ರಕೃತಿಗಳಿಗೆ ತಾ (>ತೆ) ಸೇರಿಸುವುದು ಒಂದು ರೂಢಿಯಾದರೆ, ಆದ್ಯಕ್ಷರದ ವ್ಯಂಜನಕ್ಕೆ ಸ್ವರ ಐತ್ವವನ್ನು ಸೇರಿಸಿ ಪದಾಂತರಾಳದಲ್ಲಿಯೂ ಯಥೋಚಿತ ವ್ಯತ್ಯಾಸ ತರುವುದು ಇನ್ನೊಂದು ರೂಢಿ. ಆದರೆ ರೂಢಿಯ ಕನ್ನಡದಲ್ಲಿ, ಎರಡನೆಯ ರೂಢಿಯ ನಾಮವಾಚಕಗಳನ್ನು ಸಾಧಿಸಿದ ಮೇಲೆ ಸಹ ಮೊದಲನೆಯ ರೂಢಿಯನ್ನು ಅನುಕರಿಸಿ ಇನ್ನೊಮ್ಮೆ ತೆ ಸೇರಿಸಿ ಬಳಸುವುದುಂಟು. ಇದು ಸರಿಯಾದ ಕ್ರಮವಲ್ಲ.

ಕ್ರಮವಾಗಿ ತಪ್ಪು–ಸರಿ ರೂಪಗಳು : ಐಕ್ಯತೆ–ಏಕತೆ/ಐಕ್ಯ, ನೈಪುಣ್ಯತೆ–ನಿಪುಣತೆ/ನೈಪುಣ್ಯ, ದೈನ್ಯತೆ-ದೀನತೆ/ದೈನ್ಯ, ಔದಾಸೀನ್ಯತೆ-ಉದಾಸೀನತೆ/ಔದಾಸೀನ್ಯ, ವೈಶಿಷ್ಟ್ಯತೆ–ವಿಶಿಷ್ಟತೆ/ವೈಶಿಷ್ಟ್ಯ, ಗಾಂಭೀರ್ಯತೆ—ಗಂಭೀರತೆ/ಗಾಂಭೀರ್ಯ, ವೈವಿಧ್ಯತೆ–ವಿವಿಧತೆ/ವೈವಿಧ್ಯ, ಪ್ರಾಮುಖ್ಯತೆ-ಪ್ರಮುಖತೆ/ಪ್ರಾಮುಖ್ಯ, ಪ್ರಾಚುರ್ಯತೆ-ಪ್ರಚುರತೆ/ಪ್ರಾಚುರ್ಯ, ಪ್ರಾಧಾನ್ಯತೆ–ಪ್ರಧಾನತೆ/ಪ್ರಾಧಾನ್ಯ, ಔದಾರ್ಯತೆ–ಉದಾರತೆ/ಔದಾರ್ಯ, ಸಾದೃಶ್ಯತೆ–ಸದೃಶತೆ/ಸಾದೃಶ್ಯ, ಸ್ವಾತಂತ್ರ್ಯತೆ–ಸ್ವತಂತ್ರತೆ/ಸ್ವಾತಂತ್ರ್ಯ, ಮಾಲಿನ್ಯತೆ–ಮಲಿನತೆ/ಮಾಲಿನ್ಯ, ಸಾಫಲ್ಯತೆ–ಸಫಲತೆ/ಸಾಫಲ್ಯ, ಸೌಜನ್ಯತೆ–ಸುಜನತೆ/ಸೌಜನ್ಯ.

ತಪ್ಪುರೂಪಗಳಿಗೆ ಮುಖ್ಯ ಕಾರಣವೆಂದರೆ, ತೆ ಸೇರಿದರೆ ಮಾತ್ರ ನಾಮವಾಚಕಗಳು ಸಾಧಿತವಾಗುತ್ತವೆ ಎಂಬ ಭ್ರಾಂತಿ ಮತ್ತು ಅಂತಹ ರೂಪಗಳ ಪ್ರಾಚುರ್ಯ.

(೪) ಮಾತುಗಾರಿಕೆಯಲ್ಲಿ ಸಮತೋಲನದ ಸಾಧನೆಗಾಗಿ ಒಂದು ರೂಪದ ಸ್ಥಾನದಲ್ಲಿ ಇನ್ನೊಂದು ರೂಪವನ್ನು ಕಲ್ಪಿಸುವುದು.

ಸಾದೃಶ್ಯ–ವೈದೃಶ್ಯ ಎಂಬಲ್ಲಿ ವೈದೃಶ್ಯ ಅಂತಹ ಕಲ್ಪನೆ. ಇಲ್ಲಿ ಸದೃಶತೆ/ಸಾದೃಶ್ಯ–ವಿಸದೃಶತೆ/ವೈಸಾದೃಶ್ಯ ಎಂಬವು ಸರಿಯಾದ ರೂಪಗಳು.

(೫) ಪೂರ್ವಸಿದ್ಧ ಶಬ್ದರೂಪಗಳನ್ನು ಮತ್ತೆ ತಪ್ಪಾಗಿ ವ್ಯತ್ಯಾಸಗೊಳಿಸುವುದು; ಇಲ್ಲಿಯೂ ಸಾದೃಶ್ಯರೂಪ ಸೃಷ್ಟಿಯ ಪ್ರಭಾವವುಂಟು.

ವಿಜ್ಞಾನ–ವೈಜ್ಞಾನಿಕ ಎಂಬಂತೆ ನಿಸರ್ಗ–ನೈಸರ್ಗಿಕ ಎಂದು ಸರಿರೂಪವಿದ್ದರೂ ನೈಸರ್ಗ ಎಂಬ ತಪ್ಪಾದ ರೂಪವನ್ನು ಕಲ್ಪಿಸುವುದು (ಉದಾ: "ನೈಸರ್ಗಕ್ಕೆ ಜೀವಕಳೆ ತುಂಬಿರಿ").

(೬) ಉಚ್ಚಾರಣೆಯಲ್ಲಿ ದ್ವಿತ್ವ ಸ್ಪಷ್ಟವಾಗದೆ, ಶಬ್ದರೂಪಗಳನ್ನು ತಪ್ಪಾಗಿ ಬರೆಯುವುದು ಹಾಗೂ ಉಚ್ಚರಿಸುವುದು; ಎರಡು ದ್ವಿತ್ವಗಳಲ್ಲಿ ಒಂದನ್ನಷ್ಟೇ ಬಳಸುವುದು.

ಕ್ರಮವಾಗಿ ತಪ್ಪು ಮತ್ತು ಸರಿರೂಪಗಳು: ಉಛ್ರಾಯತೆ/ಉಚ್ರಾಯತೆ–ಉಚ್ಛ್ರಾಯತೆ. ಔಜ್ವಲ್ಯ–ಔಜ್ಜ್ವಲ್ಯ (<ಉಜ್ಜ್ವಲ), ತತ್ವ–ತತ್ತ್ವ (<ತತ್ + ತ್ವ) ಬೃಹತ್ವ–ಬೃಹತ್ತ್ವ (<ಬೃಹತ್ + ತ್ವ), ಮಹತ್ವ–ಮಹತ್ತ್ವ (>ಮಹತ್ + ತ್ವ), ಸತ್ವ–ಸತ್ತ್ವ (<ಸತ್ + ತ್ವ)

(೭) ಕೆಲವು ಸಲ ಸಾದೃಶ್ಯದಿಂದಾಗಿ ಇಲ್ಲದ ಕಡೆಗಳಲ್ಲಿಯೂ ತಕಾರ ದ್ವಿತ್ವಗಳನ್ನು ತಪ್ಪಾಗಿ ತರುವುದು.

ಬಹುತ್ತ್ವ–ಬಹುತ್ವ, ಮಾನವತ್ತ್ವ–ಮಾನವತ್ವ. ವಿಶುದ್ಧತ್ತ್ವ–ವಿಶುದ್ಧತ್ವ.

(೮) ರೇಫಘಟಿತ ದ್ವಿತ್ವಗಳನ್ನು ಋಕಾರಘಟಿತಗಳೆಂಬಂತೆ ಹಾಗೂ ಋಕಾರಘಟಿತ ವ್ಯಂಜನಗಳನ್ನು ರೇಫಘಟಿತಗಳೆಂಬಂತೆ ಉಚ್ಚರಿಸುವುದು. ಬರೆಯುವುದು.

ಕ್ರಮವಾಗಿ ಸರಿ–ತಪ್ಪು ರೂಪಗಳು: (೧) ಧ್ರುವ–ಧೃವ, ಶ್ರುತಿ–ಶೃತಿ, ಸ್ರಕ್–ಸೃಕ್; (೨) ಕ್ರಿಷ್ಣ–ಕೃಷ್ಣ, ಕ್ರುಶ–ಕೃಶ, ಕ್ರಿಪೆ–ಕೃಪೆ, ಜಾಗ್ರತಿ–ಜಾಗೃತಿ. ತ್ರುಪ್ತಿ–ತೃಪ್ತಿ, ಪ್ರಕ್ರುತಿ–ಪ್ರಕೃತಿ ಉತ್ಕ್ರುಷ್ಟ–ಉತ್ಕೃಷ್ಟ.

(೯) ಎರಡು ಅಥವಾ ಎರಡಕ್ಕಿಂತ ಹೆಚ್ಚಿನ ವಿಜಾತೀಯ ವ್ಯಂಜನಗಳು ಒಟ್ಟಾಗಿ ಉಚ್ಚಾರವಾಗಬೇಕಾದಾಗ ಯಾವುದಾದರೊಂದು ವ್ಯಂಜನ ಲೋಪವಾಗುವುದು.

ಕ್ರಮವಾಗಿ ತಪ್ಪು–ಸರಿ ರೂಪಗಳು: ಭಕ್ಷ–ಭಕ್ಷ್ಯ, ಲಕ್ಷ–ಲಕ್ಷ್ಯ, ಉಜ್ವಲ–ಉಜ್ಜ್ವಲ, ತತ್ವ–ತತ್ತ್ವ, ಕಾಕುಸ್ಥ–ಕಾಕುತ್ಸ್ಥ, ನಿಸ್ವಾರ್ಥ–ನಿಃಸ್ವಾರ್ಥ, ದುಸ್ವಪ್ನ–ದುಃಸ್ವಪ್ನ, ತಕ್ಷಣ–ತತ್ಕ್ಷಣ.

(೧೦) ಹಕಾರಯುಕ್ತ ವಿಜಾತೀಯ ದ್ವಿತ್ವಗಳ ಉಚ್ಚಾರಣೆ ಮತ್ತು ಬರವಣಿಗೆಗಳಲ್ಲಿ ವ್ಯಂಜನಗಳ ಆನುಪೂರ್ವಿಯನ್ನು ವ್ಯತ್ಯಾಸಗೊಳಿಸುವುದು.

ಕ್ರಮವಾಗಿ ತಪ್ಪು–ಸರಿ ರೂಪಗಳು: ಅಪರಾಣ್ಹ–ಅಪರಾಹ್ಣ, ಆವ್ಹಾನ–ಆಹ್ವಾನ, ಆಲ್ಹಾದ–ಆಹ್ಲಾದ, ಕಹ್ಲಾರ–ಕಲ್ಹಾರ, ಚಿನ್ಹ–ಚಿಹ್ನ, ಜಾನ್ಹವಿ–ಜಾಹ್ನವಿ, ಪೂರ್ವಾನ್ಹ–ಪೂರ್ವಾಹ್ನ, ವನ್ಹಿ–ವಹ್ನಿ, ಪ್ರಲ್ಹಾದ–ಪ್ರಹ್ಲಾದ, ಮಧ್ಯಾನ್ಹ–ಮಧ್ಯಾಹ್ನ.

(೧೧) ಅನಾವಶ್ಯಕವಾಗಿ ಸ್ವರಗಳ ಹ್ರಸ್ವತೆಯನ್ನು ದೀರ್ಘವಾಗಿಯೂ ದೀರ್ಘತೆಯನ್ನು ಹ್ರಸ್ವವಾಗಿಯೂ ಮಾಡಿ ಉಚ್ಚರಿಸುವುದು ಹಾಗೂ ಬರೆಯುವುದು.

ಕ್ರಮವಾಗಿ ತಪ್ಪು–ಸರಿ ರೂಪಗಳು: ನಾಗರೀಕ–ನಾಗರಿಕ, ಆಗಮೀಕ–ಆಗಮಿಕ,

ಸ್ಥಾನೀಕ–ಸ್ಥಾನಿಕ, ಅನಾನುಕೂಲ–ಅನನುಕೂಲ, ದುರಾದೃಷ್ಟ–ದುರದೃಷ್ಟ; ನಿರೋಗಿ–ನೀರೋಗಿ, ಅನವಶ್ಯಕ–ಅನಾವಶ್ಯಕ.

(೧೨) ಸದೃಶರೂಪಗಳನ್ನು ಲಕ್ಷಿಸಿ, ತಪ್ಪು ರೂಪಗಳನ್ನು ರಚಿಸುವುದು : ಮಾತು ಬರಹಗಳಲ್ಲಿ ಪ್ರಯೋಗಿಸುವುದು.

ಅವಶ್ಯ ಎಂಬುದರ ಸಾದೃಶ್ಯದಿಂದ ಉದ್ದೇಶ ಶಬ್ದ ಉದ್ದಿಶ್ಯ ಎಂದಾಗುವುದು: ಅನಾಯಾಸ ಎಂಬುದರ ಸಾದೃಶ್ಯದಿಂದ ನಿರಾಯಾಸ ಶಬ್ದ ಸುನಾಯಾಸ ಎಂದಾಗುವುದು.

(೧೩) ಶಬ್ದಗಳ ಸಂಧಿ ಕಾರ್ಯದಲ್ಲಿ ತಪ್ಪುಗಳನ್ನು ಮಾಡಿ ಬರೆಯುವುದು ಹಾಗೂ ಮಾತನಾಡುವುದು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಕಾರ‍್ಯಗಾರ–ಕಾರ‍್ಯಾಗಾರ ; ಕಾರ‍್ಯಲಯ–ಕಾರ‍್ಯಾಲಯ, ಚತುರೋಪಾಯ–ಚತುರುಪಾಯ, ಮಹದೋಪಕಾರ–ಮಹದುಪಕಾರ, ಸ್ತುತ್ಯಾರ್ಹ–ಸ್ತುತ್ಯರ್ಹ, ಜಾತ್ಯಾತೀತ–ಜಾತ್ಯತೀತ, ಕೋಟ್ಯಾನುಕೋಟಿ–ಕೋಟ್ಯನುಕೋಟಿ, ಕೋಟ್ಯಾಧೀಶ–ಕೋಟ್ಯಧೀಶ, ಜಯಂತೋತ್ಸವ–ಜಯಂತ್ಯುತ್ಸವ, ಉಪಹಾರ ಉಪಾಹಾರ, ಫಲಹಾರ–ಫಲಾಹಾರ, ಸಸ್ಯಹಾರ–ಸಸ್ಯಾಹಾರ, ಸಸ್ಯಹಾರಿ–ಸಸ್ಯಾಹಾರಿ, ಮಾಂಸಹಾರ–ಮಾಂಸಾಹಾರ, ಮಾಂಸಹಾರಿ–ಮಾಂಸಾಹಾರಿ, ಸಸ್ಯಹಾರಿ ಫಲಹಾರ ಮಂದಿರ–ಸಸ್ಯಾಹಾರಿ/ಫಲಾಹಾರ ಮಂದಿರ, ಅಂತರ‍್ರಾಷ್ಟ್ರೀಯ–ಅಂತಾರಾಷ್ಟ್ರೀಯ, ಪುನರ‍್ರಚನೆ–ಪುನಾರಚನೆ, ಹಿಂದಿಯೇತರ–ಹಿಂದೀತರ, ಮುಸ್ಲಿಂಯೇತರ–ಮುಸ್ಲಿಮೇತರ, ಪದವಿಯೇತರ–ಪದವೀತರ, ಜೈರಾಮ–ಜಯರಾಮ, ಸಂಜೈಗಾಂಧಿ–ಸಂಜಯಗಾಂಧಿ, ಬುಧುವಾರ–ಬುಧವಾರ, ಶಕ್ತ್ಯಾನುಸಾರ–ಶಕ್ತ್ಯನುಸಾರ, ಮಧ್ಯಂತರ–ಮಧ್ಯಾಂತರ, ಅರ್ಧರ್ಧ–ಅರ್ಧಾರ್ಧ, ಅರ್ಧಮರ್ಧ / ಅರ್ಧಂಬರ್ಧ–ಅರ್ಧಾರ್ಧ, ಒಳಾರ್ಥ–ಒಳ ಅರ್ಥ, ಒಳಾಂತರ–ಒಳ ಅಂತರ (ಹೀಗೆಯೇ ಒಳ ಅಂಗಣ, ಹೊರ ಅಂಗಣ ಎಂಬವು ಸರಿರೂಪಗಳು). ಗೂಢಚಾರ / ಗೂಢಾಚಾರ – ಗೂಢಚರ, ಕೆಂಪಾಂಬುಧಿ–ಕೆಂಪಂಬುಧಿ, ಜಗದೋದ್ಧಾರ–ಜಗದುದ್ಧಾರ.

ರೈಲು ನಿಲ್ದಾಣಗಳ ಪ್ಲಾಟ್‌ಫಾರಮ್ಮುಗಳಲ್ಲಿ ಶಾಖಾಹಾರಿ ಫಲಹಾರ ಮಂದಿರ ಎಂಬುದಾಗಿ ಸೂಚನಾಫಲಕಗಳಿರುತ್ತವೆಯಷ್ಟೆ. ಇಲ್ಲಿ ಶಾಕಾಹಾರ ಮಂದಿರ ಇಲ್ಲವೆ ಫಲಾಹಾರ ಮಂದಿರ ಎಂದಿದ್ದರೆ ಸಾಕಾಗುತ್ತದೆ. ಶಾಕಾಹಾರ [ಶಾಕ + ಆಹಾರ]ಎಂದರೆ ಕಾಯಿಪಲ್ಯಗಳ ಆಹಾರ ಎಂದರ್ಥ. ಶಾಖಾಹಾರ ಎಂಬ ಮಾತು ಪ್ರಸಂಗೋಚಿತವಾದ ಅರ್ಥವನ್ನು ಕೊಡುವುದಿಲ್ಲ.

(೧೪) ಕನ್ನಡ ಪದಗಳಿಗೆ ಸಂಸ್ಕೃತ ಉಪಸರ್ಗಗಳನ್ನು ಸೇರಿಸುವುದು ಈಚೆಗೆ ರೂಢಿಯಾಗಿದ್ದು, ಇದು ಒಳ್ಳೆಯ ಪದ್ಧತಿಯೆಂದು ಹೇಳಲಾಗದು. ಜನ ಒಪ್ಪಿದರೆ ಸರಿ; ಇಲ್ಲವೆ ಇಂಥವುಗಳ ರಚನೆಯನ್ನು ಪ್ರೋತ್ಸಾಹಿಸಬಾರದು. ತಕ್ಕ ಕನ್ನಡ ವಿಶೇಷಣಗಳನ್ನು ಅವುಗಳ ಸ್ಥಾನದಲ್ಲಿ ಬಳಸಬಹುದಾಗಿದೆ.

ತಪ್ಪು ರಚನೆಗಳು : ಅಪನಂಬಿಕೆ, ದುರಾಡಳಿತ, ದುರ್ಬಳಕೆ, ದುರ್ನಡತೆ, ದುರ್ನಾತ, ದುಶ್ಚಟ, ನಿರುಮ್ಮಳ.

(೧೫) ಆವಶ್ಯಕವಲ್ಲದಿದ್ದರೂ ಉಪಸರ್ಗಗಳನ್ನು ಪುನರುಕ್ತಗೊಳಿಸುವುದು ಮಾತಿನಲ್ಲಿಯೂ ಬರೆವಣಿಗೆಯಲ್ಲಿಯೂ ಕಂಡುಬರುತ್ತದೆ.

ಕ್ರಮವಾಗಿ ತಪ್ಪು–ಸರಿಗಳು : ಸಕುಟುಂಬ ಸಮೇತವಾಗಿ–ಕುಟುಂಬಸಮೇತವಾಗಿ/ಸಕುಟುಂಬವಾಗಿ. ಸಾದರದ ಸ್ವಾಗತ–ಆದರದ ಸ್ವಾಗತ, ಸುಸ್ವಾಗತ–ಸ್ವಾಗತ, ಸಾದರಪೂರ್ವಕ–ಆದರಪೂರ್ವಕ, ಆಸೇತುಹಿಮಾಚಲಪರ್ಯಂತ – ಆಸೇತುಹಿಮಾಚಲ/ಸೇತುಹಿಮಾಚಲಪರ್ಯಂತ, ಆಬಾಲಗೋಪಾಲರಾದಿಯಾಗಿ–ಆಬಾಲಗೋಪಾಲರಾಗಿ.

(೧೬) ಗುಣವಾಚಕಗಳಿಂದ ನಾಮವಾಚಕಗಳನ್ನು ಮಾಡಿಕೊಳ್ಳುವುದರಲ್ಲಿ ತಪ್ಪುಗಳಾಗಬಹುದು.

ಪುಷ್ಟಿದಾಯಕ, ಶಕ್ತಿದಾಯಕ ಇವುಗಳ ಸಾದೃಶ್ಯದಿಂದ ಸ್ವಾದಿಷ್ಟದಾಯಕ ಎಂದು ಕಲ್ಪಿಸಿದೆ ; ಇಲ್ಲಿ ಸ್ವಾದಿಷ್ಟ ಸಾಕಾಗಿದ್ದಿತು.

(೧೭) ಪ್ರಕಾರವಾಚಕಗಳಲ್ಲಿ ಗತಾನುಗತಿಕತೆ ಕಾರಣವಾಗಿ ತಪ್ಪುಪ್ರಯೋಗಗಳಾಗಬಹುದು.

ಪತ್ರಗಳ ಒಕ್ಕಣೆಯಲ್ಲಿ ಇಂತೀ/ಇಂತಿ ನಮಸ್ಕಾರಗಳು ಎಂದು ಬರೆಯುವುದು ರೂಢಿ. ಆದರೆ ಇಂತು ನಮಸ್ಕಾರಗಳು ಎಂದರೆ ಸಾಕಾಗುತ್ತದೆ. ಇದರಂತೆ ಇತಿ ಆಶಿಷಃ ಎಂಬುದರ ಅನುಕರಣೆಯಾಗಿ ಇಂತೀ/ಇಂತಿ ಆಶೀರ್ವಾದಗಳು ಎಂದು ಸಹ ಬಳಸುವುದಿದೆ. ಇಲ್ಲಿಯೂ ಇಂತು ಆಶೀರ್ವಾದಗಳು ಎಂದರೆ ಸಾಕಾಗುತ್ತದೆ.

(೧೮) ನಾಂತ ಣಾಂತಗಳಾದ ಆ ಶಬ್ದಗಳು ಅಂತ್ಯದಲ್ಲಿ ಹ್ರಸ್ವವಾಗಿರಬೇಕೇ ದೀರ್ಘವಾಗಿರಬೇಕೇ ಎಂಬ ಪ್ರಶ್ನೆಯಿದೆ. ದೀರ್ಘವೂ ಹ್ರಸ್ವವೂ ಎರಡೂ ವೈಯಾಕರಣ ಮಾನ್ಯವಾದವೇ.

ಉದಾಹರಣೆಗೆ : ಉತ್ಪಾದನಾಕೇಂದ್ರ, ನಿಧಿಸಂಗ್ರಹಣಾಕಾರ್ಯ, ನಿರೀಕ್ಷಣಾಸ್ಥಳ, ಮನೋರಂಜನಾ ಕಾರ್ಯಕ್ರಮ, ಸಂಭಾವನಾಗ್ರಂಥ, ಪರಿಶೀಲನಾ ಸಮಿತಿ, ಯೋಜನಾ ಆಯೋಗ–ಉತ್ಪಾದನಕೇಂದ್ರ, ನಿಧಿಸಂಗ್ರಹಣಕಾರ್ಯ, ನಿರೀಕ್ಷಣಸ್ಥಳ, ಮನೋರಂಜನ ಕಾರ್ಯಕ್ರಮ, ಸಂಭಾವನಗ್ರಂಥ, ಪರಿಶೀಲನಸಮಿತಿ, ಯೋಜನಆಯೋಗ.

(೧೯) ಉತ್ತರಪದ ಕರಣ ಎಂಬುದಾಗಿ ಅಂತ್ಯವಾಗುವ ಶಬ್ದಗಳು : ಸಂಸ್ಕೃತದಲ್ಲಿ ವಿಶೇಷಣಗಳಿಗೆ ಕರಣ ಎಂಬುದು ಸೇರಿ, ಇಂಥದನ್ನು ಮಾಡುವುದು ಎಂಬ ಅರ್ಥದ ಪದಗಳು ಸಿದ್ಧವಾಗುತ್ತವೆ. (ಉದಾ. ನಿರ್ಮಲೀಕರಣ, ವಿಶದೀಕರಣ — ನಿರ್ಮಲವಾಗಿ ಮಾಡುವುದು ; ವಿಶದವಾಗಿ ಮಾಡುವುದು) ; ಇದರ ಅನುಕರಣೆಯಿಂದ ನಾಮಪದಗಳಿಗೇ ಕರಣ ಸೇರಿಸುವುದು ಕನ್ನಡದಲ್ಲಿ ವಾಡಿಕೆಯಾಗಿದೆ. (ಔದ್ಯೋಗೀಕರಣ, ರಾಷ್ಟ್ರೀಕರಣ, ವಿದ್ಯುದೀಕರಣ ಇ.) ಇದು ಸರಿಯಲ್ಲ. ಆದರೆ ರೂಢಿ ಇಂಥವನ್ನು ಒಪ್ಪಿದೆ.

(೨೦) ಕೆಲವು ಸಂಸ್ಕೃತ ಶಬ್ದಗಳಿಗೆ ಆ ಭಾಷೆಯಲ್ಲಿಯೇ ಎರಡು ರೂಪಗಳಿರುತ್ತಿದ್ದು,

ಎರಡೂ ಶುದ್ಧರೂಪಗಳೆಂದೇ ಅಂಗೀಕೃತವಾಗಿರುತ್ತವೆ. ಅವುಗಳಲ್ಲಿ ಒಂದು ಮಾತ್ರವೇ ಶುದ್ಧವೆಂದು ಸಾಧಿಸಬೇಕಾಗಿಲ್ಲ. ಇವನ್ನು ವಿಕಲ್ಪರೂಪಗಳೆಂದು ತಿಳಿಯಬಹುದು.

ಕೋಶ–ಕೋಷ. ಕಹ್ಲಾರ–ಕಲ್ಹಾರ. ಕಲ್ಮಷ–ಕಶ್ಮಲ. ರಾಷ್ಟ್ರೀಯ–ರಾಷ್ಟ್ರಿಯ. ನಾರಿಕೇಲ–ನಾರಿಕೇರ.

## ೩. ಅಂಕಿತನಾಮಗಳು

ಕೆಲವು ಸಂಸ್ಕೃತ ಅಂಕಿತನಾಮಗಳನ್ನು ತಪ್ಪಾಗಿ ಬರೆಯುವುದೂ ಉಚ್ಚರಿಸುವುದೂ ಇದೆ. ಮಕ್ಕಳಿಗೆ ಅವು ಹುಟ್ಟಿದಾಗ ನಾಮಕರಣ ಮಾಡುವಾಗಲೇ ತಪ್ಪಾಗಿ ಹೆಸರಿಡುವುದು. ಶಾಲೆಗೆ ಸೇರಿಸುವಾಗ ದಾಖಲೆ ಪುಸ್ತಕಗಳಲ್ಲಿ ತಪ್ಪಾಗಿ ಹೆಸರು ಬರೆಸುವುದು ಇಲ್ಲವೇ ಬರೆಯುವುದು ಇಂತಹ ಕಾರಣಗಳಿಂದ ಹೀಗೆ ಆಗುತ್ತದೆ. ಇದು ಅಸಡ್ಡೆ, ಅಶಿಕ್ಷೆಯ ಪರಿಣಾಮ. ಹೆಚ್ಚಿನ ಹೆಸರುಗಳು ಸದೃಶರೂಪಗಳ ಅಂಧಾನುಕರಣೆಯ ಫಲ; ಉಚ್ಚಾರಣೆಯ ವಿಕೃತಿಯ ಫಲ. ಕೆಲವು ಸಲ ಇಂಗ್ಲಿಷ್ ಭಾಷೆಯ ಅಕ್ಷರ ಸಂಯೋಜನಗಳೂ ರೂಢಿಗತ ಲೇಖನದ ಕೆಲವು ವೈಲಕ್ಷಣ್ಯಗಳೂ ತಮ್ಮ ಕೈವಾಡವನ್ನು ತೋರಿಸುತ್ತವೆ.

(೧) ಒಂದು ಅಂಕಿತನಾಮದ ರೂಪವನ್ನು ಕಂಡು ಇನ್ನೊಂದು ಅಂಕಿತನಾಮವೂ ಹಾಗೆಯೇ ಇರುತ್ತದೆ ಎಂದು ತಿಳಿಯುವುದರಿಂದ ತಪ್ಪಾಗಬಹುದು.

ಕ್ರಮವಾಗಿ ತಪ್ಪು ಮತ್ತು ಸರಿ ರೂಪಗಳು: ಕಾತ್ಯಾಯಿನಿ (ಮೋಹಿನಿ)–ಕಾತ್ಯಾಯನಿ. ಗಾಯಿತ್ರಿ (ಸಾವಿತ್ರಿ)–ಗಾಯತ್ರಿ. ಚಾಮುಂಡಿ (ಲಕ್ಷ್ಮಿ/ಸರಸ್ವತಿ)–ಚಾಮುಂಡಾ. ಜಗದಾಂಬಾ (ಬಾಲಾಂಬ)–ಜಗದಂಬಾ. ಜನಾರ್ಧನ (ಗೋವರ್ಧನ)–ಜನಾರ್ದನ. ದುರ್ಗಿ (ಲಕ್ಷ್ಮಿ/ಸರಸ್ವತಿ)–ದುರ್ಗಾ. ಪಾಲಾಕ್ಷ (ವಿಶಾಲಾಕ್ಷಿ)–ಫಾಲಾಕ್ಷ. ಪುರಂಧರ (ಯುಗಂಧರ/ಧುರಂಧರ)–ಪುರಂದರ. ಮಧುಸೂಧನ (ದುರ್ಯೋಧನ)–ಮಧುಸೂದನ. ರಘೋತ್ತಮ (ಪುರುಷೋತ್ತಮ)–ರಘೂತ್ತಮ. ಷಡಾಕ್ಷರಸ್ವಾಮಿ (ಪಂಚಾಕ್ಷರಿ)–ಷಡಕ್ಷರಸ್ವಾಮಿ.

ಮಧುಸೂದನ ಶಬ್ದದಲ್ಲಿ ಮಧುವಿನ ಮಹಾಪ್ರಾಣ, ಸೂದನವನ್ನು ಸೂಧನ ಎಂದು ತನ್ನಂತೆ ಮಹಾಪ್ರಾಣಗೊಳಿಸಲು ಪ್ರೇರಿಸಿರಬಹುದು.

(೨) ಬೇರೆ ಬೇರೆ ಇಲ್ಲವೆ ಸಮಾನ ಅರ್ಥಗಳ ಎರಡು ಶಬ್ದಗಳು ಅಂಕಿತನಾಮಗಳಾದಾಗ, ಅವುಗಳಲ್ಲಿ ಒಂದು ಸರಿ, ಒಂದು ತಪ್ಪು ಎಂದು ಭ್ರಮೆಯಾಗುವುದು ಸಾಧ್ಯ. ಆದರೆ ಎರಡೂ ಗ್ರಾಹ್ಯಗಳೇ.

ಅನುರಾಧಾ–ಅನೂರಾಧಾ ಇವುಗಳು ಸಾಮಾನ್ಯವಾಗಿ ನಕ್ಷತ್ರವಾಚಕಗಳಾಗಿ ಪ್ರಸಿದ್ಧವಾದವು.

(೩) ವಿಜಾತೀಯ ವ್ಯಂಜನಗುಚ್ಛಗಳ ಉಚ್ಚಾರಣೆಯಲ್ಲಿ ಉಂಟಾಗುವ ಕಷ್ಟದಿಂದ ಕೆಲವು ತಪ್ಪುಗಳಾಗುತ್ತವೆ.

ಕ್ರಮವಾಗಿ ತಪ್ಪು–ಸರಿ ರೂಪಗಳು : ಸುಬ್ರಮಣ್ಯ/ಸುಬ್ರಂಮಣ್ಯ/ಸುಬ್ರಮ್ಮಣ್ಯ/ಸುಭ್ರಮಣ್ಯ–ಸುಬ್ರಹ್ಮಣ್ಯ, ಅಶ್ವಥ್‌ನಾರಾಯಣ / ಅಶ್ವತ್‌ನಾರಾಯಣ / ಅಶ್ವಥ್ಥ ನಾರಾಯಣ–ಅಶ್ವತ್ಥನಾರಾಯಣ.

ಈ ಶಬ್ದಗಳ ತಪ್ಪು ಉಚ್ಚಾರಣೆಯು ಕಷ್ಟ, ತ್ವರೆ, ಇಂಗ್ಲಿಷ್ ಅಕ್ಷರಸಂಯೋಜನೆಯ ಗೊಂದಲ ಇವುಗಳಿಂದುಂಟಾದುದು ಎಂದು ತೋರುತ್ತದೆ.

(೪) ಮಹಾಪ್ರಾಣಗಳ ಉಚ್ಚಾರಣೆಯಲ್ಲಿ ಅಸಡ್ಡೆ ಮತ್ತು ತಕ್ಕ ಶಿಕ್ಷಣವಿಲ್ಲದ ಕಾರಣ ತಪ್ಪುಗಳಾಗುತ್ತವೆ.

ಕ್ರಮವಾಗಿ ತಪ್ಪು–ಸರಿ ರೂಪಗಳು : ಬಾಗೀರತಿ–ಭಾಗೀರಥಿ, ವಸುದಾ–ವಸುಧಾ, ವಸುಂದರಾ–ವಸುಂಧರಾ. ಸುದಾ–ಸುಧಾ. ಸುಬದ್ರ–ಸುಭದ್ರ, ದುರ್ಯೋದನ–ದುರ್ಯೋಧನ.

(೫) ಅಲ್ಪಪ್ರಾಣಘಟಿತವಾದ ಅಂಕಿತನಾಮಗಳನ್ನು ಉಚ್ಚರಿಸುವಾಗ, ಬರೆಯುವಾಗ ಅತ್ಯುತ್ಸಾಹದಿಂದ ಮಹಾಪ್ರಾಣಗಳನ್ನು ಬಳಸಿ ತಪ್ಪಾಗುವುದು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಜಗಧೀಶ–ಜಗದೀಶ, ಭ್ರಮರಾಂಭ–ಭ್ರಮರಾಂಬಾ, ಮಾರಿಕಾಂಭ–ಮಾರಿಕಾಂಬಾ, ಶಾರದಾಂಭ–ಶಾರದಾಂಬಾ, ಜನಾರ್ಧನ–ಜನಾರ್ದನ, ಪುರಂಧರ–ಪುರಂದರ (ಅನ್ಯತ್ರ ಸಹ : ಪ್ರಶಸ್ತಿಪ್ರಧಾನ–ಪ್ರಶಸ್ತಿಪ್ರದಾನ).

(೬) ದ್ರಾವಿಡ ಭಾಷೆಯ ಧ್ವನಿಯಲ್ಲದ ಸ್ವರ ಋಕಾರಘಟಿತ ವ್ಯಂಜನವನ್ನು ಉಚ್ಚರಿಸುವಾಗ ಋಕಾರವನ್ನು ರೇಫವಾಗಿ ತಿಳಿದು ಉಚ್ಚರಿಸುವುದು, ಬರೆಯುವುದು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಕ್ರಿಷ್ಣ–ಕೃಷ್ಣ, ದ್ರುತರಾಷ್ಟ್ರ–ಧೃತರಾಷ್ಟ್ರ, ಕ್ರಿಪ/ಕ್ರುಪ–ಕೃಪ, ಕ್ರತವರ್ಮ/ಕ್ರುತವರ್ಮ_ಕೃತವರ್ಮ, ಪ್ರಕ್ರುತಿ–ಪ್ರಕೃತಿ (ಅನ್ಯತ್ರ ಸಹ : ಜಾಗ್ರತಿ–ಜಾಗೃತಿ)

(೭) ರೇಫಸಹಿತವಾದ ಅಂಕಿತನಾಮಗಳು ಭ್ರಮೆಯಿಂದ ಋಕಾರಘಟಿತವೆಂದು ತಿಳಿದು ಆಗುವ ತಪ್ಪುಗಳುಂಟು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಧೃವ–ಧ್ರುವ, ಶೃತಿ–ಶ್ರುತಿ.

(೮) ಸಂಸ್ಕೃತ ಶಬ್ದಗಳು ದೇಶ್ಯ ಅಥವಾ ತದ್ಭವ ಶಬ್ದಗಳೊಂದಿಗೆ ಸೇರಿ ಅರಿಸಮಾಸಗಳಂತಹ ಅಂಕಿತನಾಮಗಳು ಏರ್ಪಡುತ್ತವೆ. ಇವನ್ನು ತೀವ್ರವಾಗಿ ಆಕ್ಷೇಪಿಸುವ ದೋಷಗಳೆಂದೇನೂ ತಿಳಿಯಬೇಕಾಗಿಲ್ಲ.

ಉದಾ. ಗೆ ಕೃಷ್ಣಪ್ಪ, ಲಕ್ಷ್ಮಮ್ಮ, ಶ್ರೀಕಂಠಯ್ಯ, ಸಿದ್ಧರಾಮಯ್ಯ, ಸೋಮಣ್ಣ. ಸಮಂಜಸವಾದ ಸಮಾಸಸಂಘಟನೆಯನ್ನು ಅಪೇಕ್ಷಿಸುವಾಗ ಕಿಟ್ಟಪ್ಪ, ಲಕ್ಕಮ್ಮ, ಸಿದ್ದಯ್ಯ, ಬೈರಪ್ಪ ಇಂತಹ ರೂಪಗಳನ್ನು ಒಪ್ಪುವುದರಲ್ಲಿ ತಪ್ಪೇನಿಲ್ಲ. ಆದರೆ ಸಿದ್ದೇಶ್ವರ–ಸಿದ್ಧೇಶ್ವರ, ಸಿರಿಕಂಟೇಶ್ವರ–ಶ್ರೀಕಂಠೇಶ್ವರ ಇಂಥವುಗಳಲ್ಲಿ ಮೊದಲನೆಯ ರೂಪವನ್ನು ಒಪ್ಪಲಾಗದು.

(೯) ಸಂಸ್ಕೃತಶಬ್ದಗಳು ದೇಶ್ಯ ಅಥವಾ ತದ್ಭವ ಶಬ್ದಗಳೊಂದಿಗೆ ಸೇರಿ ಸಮಾಸ

ವಾದ ಕೆಲವು ಅಂಕಿತನಾಮಗಳ ಬರವಣಿಗೆಯಲ್ಲಿ ತಪ್ಪಾಗಬಹುದು.

ಕ್ರಮವಾಗಿ ತಪ್ಪು–ಸರಿ ರೂಪಗಳು: ರಾಮಾನುಜೈಯ್ಯಂಗಾರ್–ರಾಮಾನುಜಯ್ಯಂಗಾರ್/ರಾಮಾನುಜ ಅಯ್ಯಂಗಾರ್, ಕೃಷ್ಣೈಯ್ಯ–ಕೃಷ್ಣಯ್ಯ, ರುದ್ರೈಯ್ಯ–ರುದ್ರಯ್ಯ, ಸೀತಾಪತೈಯ್ಯ–ಸೀತಾಪತಯ್ಯ (ಸೀತಾಪತಿ + ಅಯ್ಯ).

## ೪. ಸಂಖ್ಯೆ ಮತ್ತು ಪರಿಮಾಣವಾಚಕಗಳು

ಸಂಖ್ಯಾವಾಚಕಗಳು ಮತ್ತು ಪರಿಮಾಣವಾಚಕಗಳ ಪ್ರಯೋಗಗಳಲ್ಲಿ ಹಲವು ಬಗೆಯ ತಪ್ಪುಗಳಾಗುವ ಸಾಧ್ಯತೆಯಿರುತ್ತದೆ.

(೧) ವಿಶೇಷಣಗಳ ರಚನೆಯಲ್ಲಿ 'ಅನೆಯ' ಎಂಬ ವಿಶಿಷ್ಟಪ್ರತ್ಯಯವನ್ನು ಸೇರಿಸುವುದು ವೈಯಾಕರಣಮಾನ್ಯವಾದುದು. ಆದರೆ ರೂಢಿಯಾಗಿ ಈ ಪ್ರತ್ಯಯದ ಸಂಕ್ಷಿಪ್ತ ರೂಪಗಳನ್ನು ಬಳಸುವುದಿದೆ. ಇವನ್ನು ತಪ್ಪೆಂದು ತಿಳಿಯದೆ ವಿಕಲ್ಪರೂಪಗಳೆಂದು ತಿಳಿಯಬಹುದು.

ಒಂದನೇ / ಒಂದನೆ–ಒಂದನೆಯ, ನೂರ ಹನ್ನೆರಡನೇ / ನೂರ ಹನ್ನೆರಡನೆ–ನೂರ ಹನ್ನೆರಡನೆಯ; ಎಷ್ಟನೇ/ಎಷ್ಟನೆ–ಎಷ್ಟನೆಯ, ಇಷ್ಟನೇ/ಇಷ್ಟನೆ–ಇಷ್ಟನೆಯ.

(೨) ಸಂಖ್ಯಾ ಪ್ರಕೃತಿಗಳಿಂದಾದ ಸಮಾಸಗಳಲ್ಲಿ ಅನಾವಶ್ಯಕವಾಗಿ ಮಹಾಪ್ರಾಣಗಳನ್ನು ಬಳಸುವುದಿದೆ. ಇದಕ್ಕೆ (ಪ > ಭ) ಕೊಂಚಮಟ್ಟಿಗೆ ಸಮರ್ಥನೆಯನ್ನೂ ಕೊಡಬಹುದು. ಆದರೆ ದ್ರಾವಿಡಭಾಷೆಗಳ ಜಾಯಮಾನಕ್ಕೆ ತಕ್ಕಂತೆ ಅಲ್ಪಪ್ರಾಣಗಳನ್ನು ಬಳಸುವುದು ಸೂಕ್ತ.

ಕ್ರಮವಾಗಿ ತಪ್ಪು ಮತ್ತು ಸರಿ ರೂಪಗಳು: ಎಂಭತ್ತು–ಎಂಬತ್ತು, ತೊಂಭತ್ತು–ತೊಂಬತ್ತು, ಒಂದೂ ಮುಕ್ಕಾಲು–ಒಂದೂ ಮುಕ್ಕಾಲು, ಎರಡೂ ಮುಕ್ಕಾಲು–ಎರಡೂ ಮುಕ್ಕಾಲು. ಇಲ್ಲಿ ಎಣ್ + ಪತ್ತು, ತೊಣ್ ( < ಳ್) + ಪತ್ತು, ಮೂರು + ಕಾಲು ಎಂಬಂತೆ ಪೂರ್ವಾಪರಶಬ್ದಗಳು ವಿಭಜನೆಗೊಳ್ಳುತ್ತವೆ. ಮುಕ್ಕಾಲು > ಮುಕ್ಕಾಲು ಆಗಿ ಕೇಳುವುದು ಆಡುಮಾತಿನಲ್ಲಿ ಹೆಚ್ಚು.

(೩) ಭಾಗಾರ್ಥದ ಸಂಖ್ಯಾವಾಚಕಗಳಲ್ಲಿ ಸಮುಚ್ಚಯದ ದೀರ್ಘರೂಪಗಳನ್ನು ಹ್ರಸ್ವಗೊಳಿಸುವ ವಾಡಿಕೆಯಿದೆ. ಇದು ಸರಿಯಲ್ಲ. ಹ. ಗ. ದ ಉಂ > ಹೊ. ಗ. ದಲ್ಲಿ ಊ ಎಂದಾಗಿದೆ ಎಂದು ತಿಳಿದಿರಬೇಕು.

ಕ್ರಮವಾಗಿ ತಪ್ಪು–ಸರಿ ರೂಪಗಳು: ಒಂದು ಮುಕ್ಕಾಲು–ಒಂದೂ ಮುಕ್ಕಾಲು, ಹನ್ನೆರಡು ಮುಕ್ಕಾಲು–ಹನ್ನೆರಡೂ ಮುಕ್ಕಾಲು ಇ.; ನಾಲ್ಕುಕಾಲು–ನಾಲ್ಕೂಕಾಲು, ಎಂಟುಕಾಲು–ಎಂಟೂಕಾಲು; ಎರಡುವರೆ–ಎರಡೂವರೆ, ನಾಲ್ಕುವರೆ–ನಾಲ್ಕೂವರೆ ಇ.

(೪) ಒಂದು, ಎರಡು ಎಂಬ ಸಂಖ್ಯಾವಾಚಕಗಳ ಪ್ರಕೃತಿಗಳ ಆದಿಸ್ವರಗಳನ್ನು ದೀರ್ಘಗೊಳಿಸಿ ಪುಂ., ಸ್ತ್ರೀ. ರೂಪಗಳನ್ನು ತಕ್ಕ ಪ್ರತ್ಯಯಗಳ ಸೇರ್ಪಡೆಯಿಂದ ರಚಿಸುವ ರೂಢಿಯಿದೆ. ಇದು ಸರಿಯಲ್ಲ.

ಕ್ರಮವಾಗಿ ತಪ್ಪು–ಸರಿ ರೂಪಗಳು : ಓರ್ವ–ಒರ್ವ, ಓರ್ವನು–ಒರ್ವನು, ಓರ್ವಳು–ಒರ್ವಳು ; ಈರ್ವರು–ಇರ್ವರು.

ಹೊ.ಗ.ದಲ್ಲಿ, ಆಡುಮಾತಿರಲಿ ಬರವಣಿಗೆಯಿರಲಿ, ಈ ಪ್ರಯೋಗಗಳೇ ಅಸಹಜವಾದವು : ಒಬ್ಬ, ಒಬ್ಬನು, ಒಬ್ಬಳು, ಇಬ್ಬರು ಎಂದು ಬಳಸುವುದೇ ವಿಹಿತವಾದುದು. ಮೂರು, ನಾಲ್ಕು ಮತ್ತು ಐದು ಎಂಬವುಗಳಲ್ಲಿ ಸಹಜವಾಗಿ ಆದಿಸ್ವರ ದೀರ್ಘವಾಗಿದ್ದು, ಅವುಗಳ ಸಾದೃಶ್ಯದಿಂದ ಈ ರೂಢಿ ಬಂದಿರಬಹುದು. ಅಲ್ಲದೆ ವಕ್ತೃವಿನ/ಲೇಖಕನ ಹಳೆಯ ರೂಪಗಳ ವ್ಯಾಮೋಹದಿಂದಲೂ ಹೀಗೆ ಆಗಿರಬಹುದು.

(೫) ಕೆಲವು ಸಂಖ್ಯಾಪ್ರಕೃತಿಗಳ ನಿಷ್ಪನ್ನರೂಪಗಳನ್ನು ಬಳಸುವಾಗ ಅವುಗಳ ವಿಕೃತರೂಪಗಳನ್ನು ಬಳಸುವುದು ಕಾಣುತ್ತದೆ. ಇದನ್ನು ನಿವಾರಿಸಬೇಕು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಮುವ್ವರು–ಮೂವರು, ನಲವತ್ತು/ನಲವತ್ತೊಂದು ಇ. –ನಾಲ್ವತ್ತು/ನಾಲ್ವತ್ತೊಂದು ಇ., ಅಯಿವತ್ತು–ಐವತ್ತು, ಅರವತ್ತು–ಅರುವತ್ತು/ಅರುವತ್ತೊಂದು ಇ., ಎಂಬತ್ತರೊಂಬತ್ತು–ಎಂಬತ್ತೊಂಬತ್ತು, ತೊಂಬತ್ತರೊಂಬತ್ತು–ತೊಂಬತ್ತೊಂಬತ್ತು.

ಇಲ್ಲಿ ಎರಡನೆಯದು ರೂಢಿಯಲ್ಲಿ ಒಗ್ಗಿದೆ ; ನಾಲ್ಕನೆಯದೂ ಬಲುಮಟ್ಟಿಗೆ ಒಗ್ಗಿದೆ ; ಐದು–ಆರನೆಯವು ಪ್ರಾದೇಶಿಕ ಭೇದವಾಗಿ ತಾನೂ ಒಗ್ಗಿಹೋಗಿದೆ.

**೫. ಕಾಲವಾಚಕಗಳು**

ಕಾಲವನ್ನು ಸೂಚಿಸುವ ಶಬ್ದಗಳು ಬಹುಪರಿಚಿತವಾದವು. ಇವುಗಳಲ್ಲಿ ವೈಯಾಕರಣ ಮಾನ್ಯವಲ್ಲದ ರೂಪಗಳು ಲೋಕರೂಢಿಯಲ್ಲಿ ಒಗ್ಗಿಹೋಗಿವೆ. ಆದರೆ ಶುದ್ಧರೂಪಗಳನ್ನು ಬಳಸುವುದು ಅಪೇಕ್ಷಣೀಯ.

(೧) ಆಹೊತ್ತು/ಆವೊತ್ತು, ಈಹೊತ್ತು/ಈವೊತ್ತು ಎಂಬ ರೂಪಗಳೇ ಗ್ರಾಹ್ಯ; ಅವತ್ತು, ಇವತ್ತು ಎಂಬ ರೂಪಗಳಲ್ಲ.

(೨) ಈಗ, ಆಗ ಎಂಬುದನ್ನು ಈವಾಗ, ಆವಾಗ ಎಂಬುದಾಗಿ ಬಳಸುವುದು ಸರಿಯಲ್ಲ ; ಬಹುಶಃ ಯಾವಾಗ ಎಂಬುದರ ಸದೃಶರೂಪಗಳಾಗಿ ಇವು ಕಾಣಿಸಿಕೊಂಡಿವೆ.

(೩) ನಿನ್ನೆ, ನೆನ್ನೆಗಳಲ್ಲಿ ಮೊದಲನೆಯದು ವೈಯಾಕರಣ ಮಾನ್ಯವಾದುದು; ನಾಳಿದು/ನಾಡಿದು/ನಾಡದು ಹಳೆಯ ರೂಪಗಳು ; ನಾಳಿದ್ದು, ನಾಡಿದ್ದು ಈಗ ಬಳಸುವ ರೂಪಗಳು. ಇವುಗಳಲ್ಲಿ ಯಾವುವನ್ನಾದರೂ ವೈಕಲ್ಪಿಕವಾಗಿ ಬಳಸಬಹುದು.

(೪) ಘಂಟೆ ಸಮಸಂಸ್ಕೃತ ರೂಪ (< ಸಂ. ಘಂಟಾ) ; ಗಂಟೆ ತದ್ಭವರೂಪ. ಭಾಷೆಯ ಜಾಯಮಾನದ ದೃಷ್ಟಿಯಿಂದ ತದ್ಭವರೂಪವನ್ನು ಬಳಸುವುದು ಉತ್ತಮ.

**೬. ವೀಪ್ಸಾರೂಪಗಳು**

ಇತರ ವೀಪ್ಸಾರೂಪಗಳ ಸಾದೃಶ್ಯದಿಂದಾಗಿ ತಪ್ಪಾಗಿ ಕಲ್ಪಿತವಾಗಿರುವ ಕೆಲವು ವೀಪ್ಸಾರೂಪಗಳಿವೆ. ಇವನ್ನು ನಿವಾರಿಸುವುದು ಮೇಲು.

ಕ್ರಮವಾಗಿ ತಪ್ಪು–ಸರಿ ರೂಪಗಳು : ತುಟ್ಟತುದಿ–ತುತ್ತತುದಿ, ಮೊಟ್ಟಮೊದಲು–ಮೊತ್ತಮೊದಲು.

ಕಟ್ಟಕಡೆ, ನಟ್ಟನಡು ಇವುಗಳ ಸಾದೃಶ್ಯದಿಂದ ಮೇಲಿನ ತಪ್ಪುರೂಪಗಳು ಹುಟ್ಟಿರಬಹುದು.

## ೭. ದ್ವಿರುಕ್ತಿ

ಪದಗಳು ಎರಡು ಸಲ ಆವೃತ್ತಿಗೊಳ್ಳುವುದು ತ್ವರೆ, ಹೆಚ್ಚಳವನ್ನು ಹೇಳುವುದು ಮೊದಲಾದ ಕಾರಣಗಳಿಗಾಗಿ ಘಟಿಸುತ್ತವೆ. ಇಲ್ಲಿಯೂ ತಪ್ಪುರೂಪಗಳಾಗಬಹುದು.

ಕ್ರಮವಾಗಿ ತಪ್ಪು–ಸರಿಗಳು : ಹಂತಾನುಹಂತವಾಗಿ–ಹಂತಹಂತವಾಗಿ : ಇದು ಬಹುಶಃ ಪುಂಖಾನುಪುಂಖವಾಗಿ ಎಂಬುದರ ಸಾದೃಶ್ಯದಿಂದ ಆಗಿರಬಹುದು. ಹೀಗೆಯೇ ಕಾಲಾನುಕಾಲಕ್ಕೆ–ಕಾಲಕಾಲಕ್ಕೆ : ವರ್ಷಾನುವರ್ಷ–ವರ್ಷವರ್ಷ : ತಿಂಗಳಾತಿಂಗಳು–ತಿಂಗಳುತಿಂಗಳು.

## ೮. ದೇಶ್ಯಶಬ್ದಗಳು ಮತ್ತು ತದ್ಭವಶಬ್ದಗಳು

ಈ ಗುಂಪಿನ ಶಬ್ದಗಳ ಪ್ರಯೋಗದಲ್ಲಿ ಭಾಷಾಶಾಸ್ತ್ರೀಯವಾಗಿ ತಪ್ಪುಗಳು ವಿವಿಧವಾಗಿ ಘಟಿಸುತ್ತವೆ. ಇವುಗಳಲ್ಲಿ ವ್ಯಾಕರಣಸಂಬಂಧವಾದವು, ಕಾಗುಣಿತಸಂಬಂಧವಾದವು ಎಂದು ಎರಡು ಬಗೆಯಾಗಿ ಇರಬಹುದು.

ಕಾಗುಣಿತ ಸಂಬಂಧವಾದುದು ಗ್ರಾಮ್ಯಪರಿಸರಕ್ಕೆ, ಪ್ರದೇಶಭೇದಗಳಿಗೆ ಅನುಸಾರವಾಗಿ ವಿವಿಧವಾಗಿರುತ್ತವೆ. ಇವುಗಳಿಗೆ ಸಂಬಂಧಿಸಿದ ಕೆಲವಂಶಗಳನ್ನು ಮೊದಲು ಗಮನಿಸಲಾಗುವುದು.

ಪ್ರಾದೇಶಿಕವಾಗಿ, ವಿಶೇಷವಾಗಿ ದಕ್ಷಿಣಕನ್ನಡ ಜಿಲ್ಲೆಯ ಭಾಗಗಳಲ್ಲಿ ಪತ್ರಿಕೆಗಳು ಹಾಗೂ ಪುಸ್ತಕಗಳಲ್ಲಿ, ಖಾಸಗಿ ವ್ಯವಹಾರಗಳಲ್ಲಿ, ವ್ಯಂಜನ + ಐತ್ವ ರಚನೆಯ ಹಾಗೆಯೇ ಸ್ವರ + ಐತ್ವ ರಚನೆಯ ವಿಲಕ್ಷಣ ಲೇಖನಪದ್ಧತಿಯಿದೆ. ಇದು ಸಮರ್ಥನೀಯವಲ್ಲ. ಗುಣಿತಾಕ್ಷರಗಳ ರಚನೆಯಲ್ಲಿ ನಿರ್ದಿಷ್ಟವಾದ ಒಂದು ವ್ಯಂಜನದೊಂದಿಗೆ ನಿರ್ದಿಷ್ಟವಾದ ಒಂದು ಸ್ವರ ಸೇರುತ್ತದೆಯಲ್ಲದೆ (ಸ್ + ಇ : ಸಿ, ತ್ + ಉ : ತು. ಪ್ + ಅ : ಪ, ಕ + ಆ : ಕಾ, ಸ್ + ಈ : ಸೀ, ತ್ + ಊ : ತೂ. ಕ್ + ಋ : ಕೃ, ನ್ + ಎ : ನೆ, ಕ್ + ಏ : ಕೇ, ಮ್ + ಐ : ಮೈ, ಜ್ + ಒ : ಜೊ, ಗ್ + ಓ : ಗೋ, ನ್ + ಔ : ನೌ), ಬಿಡಿಯಾದ ಸ್ವರವೊಂದಕ್ಕೆ ಇನ್ನೊಂದು ಸ್ವರ ಸೇರುವುದಾಗಲಿ, ಗುಣಿತಾಕ್ಷರದ (ವ್ಯಂಜನ + ಸ್ವರ) ಸ್ವರದ ಮೇಲೆ ಇನ್ನೊಂದು ಸ್ವರ ಮತ್ತೆ ಸೇರುವುದಾಗಲಿ ಸರಿಯಲ್ಲ.

ಕ್ರಮವಾಗಿ ತಪ್ಪು–ಸರಿ ರೂಪಗಳು : (೧) ಅೈತಾಳ–ಐತಾಳ, ಅೈವತ್ತು–ಐವತ್ತು : (೨) ತೆಂಗಿನ ಕ್ಯಾ–ತೆಂಗಿನಕಾಯ್ / ತೆಂಗಿನ ಕಾಯಿ. ಹೊೖಗೆ–ಹೊಯ್ಗೆ / ಹೊಯಿಗೆ. (೩) ಮೊೖಲಿ–ಮೊಯಿಲಿ/ಮೊಯ್ಲಿ.

ಕೈ, ಮೈ ಶಬ್ದಗಳಲ್ಲಿ ತಲೆಕಟ್ಟಿನ ಭಾಗದಲ್ಲಿರುವ ಐತ್ವ ಚಿಹ್ನೆ ಹಾಗೂ ಅಡಿಯ

ಮಗ್ಗುಲಿಗೆ ಬರುವ ಐತ್ವ ಚಿಹ್ನೆ ಒಂದೇ ಕಾಗುಣಿತದ ಚಿಹ್ನೆಯಾಗಿ ತಿಳಿಯಬೇಕು. ಲಿಪಿ ಲೇಖನದ ಒಂದು ಅನಿವಾರ್ಯವೈಲಕ್ಷಣ್ಯವಾಗಿ ಇಲ್ಲಿ ಹೀಗಾಗಿದೆಯಲ್ಲದೆ, ಇತರತ್ರ ಹೀಗೆ ಮಾಡಬಾರದು.

(೧) ಗ್ರಾಮ್ಯ ಪರಿಸರದ ಕೆಳ ಸಾಮಾಜಿಕವರ್ಗದ ಜನರಲ್ಲಿ ಹಕಾರದ ಉಚ್ಚಾರಣೆ ತೇಲಿಹೋಗುತ್ತದೆ. ಹಕಾರ ದ್ರಾವಿಡವರ್ಣವಲ್ಲವಾದ ಕಾರಣ, ಇದು ಸಹಜ. ಆದರೆ ಹಕಾರಯುಕ್ತ ಶಬ್ದಗಳನ್ನು ಯಥಾರೀತಿ ಉಚ್ಚರಿಸುವುದಕ್ಕೆ ಶ್ರದ್ಧಾಪೂರ್ವಕ ಪ್ರಯತ್ನ ಬೇಕು.

(i) ಪದದ ಮೊದಲಲ್ಲಿದ್ದಾಗ ಹ ಲೋಪವಾಗುವುದು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಅಕ್ಕಿ–ಹಕ್ಕಿ, ಆಲು–ಹಾಲು, ಇಂಡು–ಹಿಂಡು, ಈರೆ–ಹೀರೆ, ಉಣಿಸೆ–ಹುಣಿಸೆ, ಊಸು–ಹೂಸು, ಎಗ್ಗಣ–ಹೆಗ್ಗಣ, ಏಳು–ಹೇಳು, ಐಕಳು–ಹೈಕಳು, ಒಸ–ಹೊಸ, ಓರಾಟ–ಹೋರಾಟ, ಔದು–ಹೌದು, ಅಂಬು–ಹಂಬು.

(ii) ಪದದ ನಡುವೆ ಇಲ್ಲವೆ ಕೊನೆಯಲ್ಲಿ ಇದ್ದಾಗ ಹ > ಯ/ವ ಆಗುವುದು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಮಯೇಂದ್ರ–ಮಹೇಂದ್ರ, ಬವುಮಾನ–ಬಹುಮಾನ, ರಾವು–ರಾಹು.

(iii) ಪದದ ನಡುವೆ ಸ್ವರವಾಗಿ ನುಡಿಯುವುದು (ಹ > ಅ/ಆ).

ಕ್ರಮವಾಗಿ ತಪ್ಪು–ಸರಿ ರೂಪಗಳು : ಸಅನೆ–ಸಹನೆ, ಕೋಲಾಅಲ–ಕೋಲಾಹಲ, ಮಆಪುರುಷ–ಮಹಾಪುರುಷ.

(iv) ಸರಿಯಾದ ಉಚ್ಚಾರದ ತವಕ, ಉತ್ಸಾಹ, ಮೆಚ್ಚುಗೆಯ ಗಳಿಕೆಗೆ ಅಪೇಕ್ಷೆ ಇ. ಕಾರಣವಾಗಿ ಶಬ್ದಗಳಲ್ಲಿ ಅ > ಹ ಆಗಿ ಉಚ್ಚಾರವಾಗುವುದುಂಟು. ಇದನ್ನು ಸಂಯಮದಿಂದ ತಡೆಗಟ್ಟಬೇಕು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಹಕ್ಕಿ–ಅಕ್ಕಿ, ಹರಿಸಿನ–ಅರಿಸಿನ, ಹಣ್ಣ–ಅಣ್ಣ, ಹೆಚ್ಚರಿಕೆ–ಎಚ್ಚರಿಕೆ, ಹುಣ್ಣೆ–ಉಣ್ಣೆ, ಹುಡಿದಾರ–ಉಡಿದಾರ.

(v) ಕೆಲವು ಶಬ್ದಗಳಲ್ಲಿ ಕೊಂಚ ಸಂದಿಗ್ಧತೆಯುಂಟು. ಇಂತಹ ಸಂದರ್ಭಗಳಲ್ಲಿ ಹೆಚ್ಚಿನ ಎಚ್ಚರಿಕೆ ಬೇಕು.

ಓಂಗು/ಇಂಗು = ನೀರಿನ ಸ್ರೋತ ಬತ್ತುವುದು (ಕ. ಪಿಂಗು > ಹಿಂಗು > ಇಂಗು); ಆದ್ದರಿಂದ ಹಿಂಗು, ಇಂಗು ಎರಡೂ ಸಾಧುರೂಪಗಳು. ಹಿಂಗು/ಇಂಗು = ಅಡಿಗೆಯ ರುಚಿಗೆ ಬಳಸುವ ಪದಾರ್ಥ (ಸಂ. ಹಿಂಗು > ದ್ಭ. ಇಂಗು). ಆದ್ದರಿಂದ ಅಲ್ಲಿಯೂ ಹಿಂಗು, ಇಂಗು ಎರಡೂ ಸಾಧುರೂಪಗಳು. ಜಲಸಂಬಂಧಿಯಾದ್ದು ಮೂಲತಃ ಕನ್ನಡ ಶಬ್ದ, ಪಾಕಸಂಬಂಧಿಯಾದ್ದು ಸಂಸ್ಕೃತಮೂಲದ ಶಬ್ದ ಮತ್ತು ಅದರ ತದ್ಭವ ಎಂದು ತಿಳಿದಿರಬೇಕು.

ಅರಳು = ಲಾಜ, ಹರಳು = ಎಣ್ಣೆಯ ಬೀಜ ಎಂಬ ಅರ್ಥ ಸ್ಪಷ್ಟವಾದರೆ, ಎಣ್ಣೆಯ

ಬೀಜದ ಶಬ್ದವನ್ನು ಅರಳು ಎನ್ನುವುದು ಹ>ಅ ಎಂಬ ಸ್ಖಲಿತ ಉಚ್ಚಾರದ ಫಲವಾಗಿ ಎನ್ನುವುದು ಸ್ಪಷ್ಟವಾಗುತ್ತದೆ.

(೨) ದ್ರಾವಿಡ ಭಾಷೆಗಳಲ್ಲಿ ಎರಡು ವ್ಯಂಜನಗಳ ನಡುವಣ ಸ್ವರ ಉಚ್ಚಾರಣೆಯಲ್ಲಿ ಅದೃಢವಾದುದು. ಆದಕಾರಣ, ಆ ಸ್ವರದ ಸ್ವರೂಪದಲ್ಲಿ ಒಂದಕ್ಕಿಂತ ಹೆಚ್ಚಿನ ವ್ಯತ್ಯಾಸಗಳು ಗೋಚರಿಸುತ್ತವೆ. ಶಬ್ದದ ಸ್ವರೂಪ, ವ್ಯಾಕರಣದ ಕಟ್ಟುಪಾಡು, ಶಿಷ್ಟಪ್ರಯೋಗ ಇವುಗಳಿಗೆ ಗಮನವಿತ್ತು ಅಂತಹ ಶಬ್ದಗಳನ್ನು ಸರಿಯಾಗಿ ಬಳಸಬೇಕು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಗಂಡಸು–ಗಂಡುಸು (ಗಂಡು + ಕೂಸು), ಹೆಂಗಸು–ಹೆಂಗುಸು (ಹೆಣ್ಣು + ಕೂಸು), ನಾಲಿಗೆ–ನಾಲಗೆ (ತ.ಮ. ನಾಕ್ಕು, ತೆ.ನಾಲುಕ/ನಾಲ್ಕ, ತು. ನಾಲಯಿ/ನಾಲಗೆ, ನಾಯ್ಕಿ, ನಾಲ್ಕ; "ನಾಲಗೆ ರಸನೆ ರಸಜ್ಞೆ ಜಿಹ್ವೆ" (ವಸ್ತುಕೋ ೬೯–೧೫). ಕಡಿಮೆ–ಕಡಮೆ (ತೆ. ಕಡಮ ; "ಆ ಶೃಂಗಾರಂ ಕಲಿನೀತಿಗಳ್ ಕಡಮೆಯೋ ಸತ್ಕಾವ್ಯದೊಳ್": ರತ್ನಾಶ.), ಬೆಳಿಗ್ಗೆ–ಬೆಳಗ್ಗೆ (ಬೆಳಗು + ಗೆ), ಬೇಸಿಗೆ–ಬೇಸಗೆ (<ಸಂ. ವೈಶಾಖ), ಬಾಗಲು–ಬಾಗಿಲು (ತ. ವಾಯಿಲ್, ತೆ. ವಾಕಿಲಿ; ಮನೆಯ ಬಾಯಿ), ತೊಟ್ಟಲು–ತೊಟ್ಟಿಲು, ಮೆಟ್ಟಲು–ಮೆಟ್ಟಿಲು.

(೩) ಕೆಲವು ಕೃನ್ನಾಮ ಮತ್ತು ತದ್ಧಿತನಾಮಗಳಲ್ಲಿ ನಡುವಣ ಸ್ವರ ತೀರ ಅಸ್ಥಿರವಾಗಿ ವರ್ತಿಸುವುದನ್ನು ಗಮನಿಸಬಹುದು. ಇವನ್ನು ತಪ್ಪು–ಸರಿಗಳ ದೃಷ್ಟಿಯಿಂದ ಲಕ್ಷಿಸದೆ ವಿಕಲ್ಪರೂಪಗಳೆಂದು ಒಪ್ಪಬೇಕಾಗುತ್ತದೆ.

(i) ರೂಢಿಯ ವಿಕಲ್ಪರೂಪಗಳಲ್ಲಿ ಮೊದಲನೆಯದು ಶಿಥಿಲ ರೂಪವೆಂದೂ ಎರಡನೆಯದು ಸಾಧುರೂಪವೆಂದೂ ತಿಳಿಯಬೇಕಾಗಿದೆ : ಉಡಿಗೆ–ಉಡುಗೆ, ಅಡಿಗೆ–ಅಡುಗೆ, ಕೊಡಿಗೆ–ಕೊಡುಗೆ, ನಡಿಗೆ–ನಡಗೆ, ಬರವಣಿಗೆ–ಬರೆವಣಿಗೆ, ಮೆರವಣಿಗೆ–ಮೆರೆವಣಿಗೆ, ಬೆಳವಣಿಗೆ–ಬೆಳೆವಣಿಗೆ. ತಿಳುವಳಿಕೆ/ತಿಳವಳಿಕೆ–ತಿಳಿವಳಿಕೆ.

(ii) ಧಾತುಗಳಿಂದ ಪುಂ ಸ್ತ್ರೀ ರೂಪಗಳನ್ನು ಕಲ್ಪಿಸಲು ಬಳಸುವ ಕೆಲವು ವಿಶಿಷ್ಟ ಪ್ರತ್ಯಯಗಳು ಸೇರುವಾಗಲೂ ಹೀಗೆಯೇ ವ್ಯತ್ಯಾಸಗಳಾಗುತ್ತವೆ : ಕುಡಕ/ಕುಡುಕ–ಕುಡಿಕ, ಸಿಡಕ/ಸಿಡುಕ–ಸಿಡಿಕ, ತಿರಕ/ತಿರುಕ–ತಿರಿಕ (ಕ್ರಮವಾಗಿ ಧಾ. ಕುಡಿ, ಸಿಡಿ, ತಿರಿ); ಸ್ತ್ರೀಲಿಂಗದಲ್ಲಿ ಹೀಗೆಯೇ ಕುಡಿಕಿ, ಸಿಡಿಕಿ, ತಿರಿಕಿ ಎಂದಾಗುತ್ತವೆ.

(iii) ನಪುಂಸಕಲಿಂಗದ ಕೃದಂತ ಭಾವನಾಮಗಳಲ್ಲಿ ಸ್ವರಸಾಮ್ಯವಿಧಿಯಿಂದಾಗಿ ನಡುವಣ ಸ್ವರದಲ್ಲಿ ವ್ಯತ್ಯಾಸಗಳಾಗಬಹುದು.

ಕ್ರಮವಾಗಿ ತಪ್ಪು–ಸರಿ ರೂಪಗಳು : ನಿಲುವು–ನಿಲವು (ಧಾ. ನಿಲ್), ಚೆದುರು–ಚೆದರು, ಕೆದುರು–ಕೆದರು, ಬೆದುರು–ಬೆದರು. ಸಲುವು–ಸಲವು (ಧಾ. ಸಲ್).

(iv) ಪದದ ಆದಿಯ ಸ್ವರ ಒ/ಓ ವ್ಯಂಜನ ವ/ವಾ ಆಗಿ ಮಾರ್ಪಟ್ಟು, ತಪ್ಪು ರೂಪಗಳು ನಿರ್ಮಾಣವಾಗುವುವು.

ಕ್ರಮವಾಗಿ ತಪ್ಪು–ಸರಿ ರೂಪಗಳು : ವಡೆಯ–ಒಡೆಯ, ವರಳು–ಒರಳು, ವೈಯಾರ-

ಒಯ್ಯಾರ, ವಡವೆ–ಒಡವೆ, ವಡ್ಡ–ಒಡ್ಡ, ವನಕೆ–ಒನಕೆ, ವಪ್ಪಿಸು–ಒಪ್ಪಿಸು, ವಾಲು–ಓಲು, ವಾಲೆ–ಓಲೆ, ವಾಲಗ–ಓಲಗ, ವಾಜ–ಓಜ, ವಗ್ಗರಣೆ–ಒಗ್ಗರಣೆ.

(v) ದೇಶ್ಯಶಬ್ದಗಳಿಗೆ ಸಂಸ್ಕೃತಪ್ರತ್ಯಯಗಳನ್ನು ಹಚ್ಚುವುದು ಹಳೆಯ ರೂಢಿ. ಆದರೆ ಇದನ್ನು ಸಾಧ್ಯವಾದ ಮಟ್ಟಿಗೆ ನಿವಾರಿಸುವುದು ಮೇಲು.

ಕ್ರಮವಾಗಿ ನಂಬಿಕಸ್ಥ, ತಿಳಿವಳಿಕಸ್ಥ ಇಂಥವು ನಂಬಿಕಸ್ತ, ತಿಳಿವಳಿಕಸ್ತ ಎಂದು ಪರ್ಯಾಯರೂಪಗಳಲ್ಲಿ ಗೋಚರಿಸುತ್ತವೆ. ಇವು ಅಕ್ಷರಸ್ಥ, ಮಧ್ಯಸ್ಥ, ಬಲಸ್ಥ ಇಂಥ ಶಬ್ದಗಳ ಸಾದೃಶ್ಯದಿಂದ ಕಲ್ಪಿತವಾಗಿರುವುದು ಸಾಧ್ಯ. ಘನತೆ, ಜಡತೆ ಮುಂತಾದವುಗಳ ಸಾದೃಶ್ಯದಿಂದ ದೊಡ್ಡ ವಿಶೇಷಣವನ್ನು ತೆ ಸೇರಿಸಿ ದೊಡ್ಡಿತೆ ಮಾಡಿರುವಂತಿದೆ ; ಅಲ್ಲದೆ ಗಂಡುಸುತನ, ಹೆಂಗುಸುತನ ಇವುಗಳ ಸಾದೃಶ್ಯದಿಂದ ದೊಡ್ಡದರೊಂದಿಗೆ ತನ ಸೇರಿ ದೊಡ್ಡಿಸುತನ/ದೊಡ್ಡಿಸ್ತನ ಆಗಿರುವಂತಿದೆ, ನಂಟು/ನಂಟತನ, ನಂಟಸುತನ/ನಂಟಸ್ತನ ಎಂದು ಆಗಿರುವುದು ಸಹ ಬಹುಶಃ ಹೀಗೆಯೇ.

## ೯. ನಾಮವಾಚಕಗಳಲ್ಲಿ ವಿಭಕ್ತಿಸಂಘಟನೆ

(೧) ಪ್ರಥಮಾವಿಭಕ್ತಿಯ ಬಗೆಗೆ ವಿಚಾರ ಮಾಡಬೇಕಾದುದು ಅತ್ಯವಶ್ಯ. ಈ ವಿಭಕ್ತಿಯ ಸ್ವರೂಪ ಮತ್ತು ಪ್ರಯೋಗಗಳಲ್ಲಿ ಭ್ರಮೆ ಮತ್ತು ತಪ್ಪುರೂಪಗಳಿಗೆ ಅವಕಾಶವಾಗಿದೆ.

(i) ಪ್ರಕೃತಿಗಳಿಗೆ, ಹೆಚ್ಚಾಗಿ ಅಕಾರಾಂತವಾದವುಗಳಿಗೆ, ಪ್ರ.ವಿ.ಯ ಪ್ರತ್ಯಯವೆಂದು ಉ ಸೇರಿಸುವ ರೂಢಿಯಿದೆ (ಮುದುಕನು, ಅಕ್ಕನು, ಪುಸ್ತಕವು). ಇದು ಹಳೆಯ ವ್ಯಂಜನಾಂತ ರೂಪಗಳು ಉಚ್ಚಾರಸೌಕರ್ಯದ ಸಲುವಾಗಿ ಕಾಲಕ್ರಮದಲ್ಲಿ ಸ್ವರಾಂತಗಳಾಗಿ ಪರಿಣಮಿಸಿದುದರ ಫಲವೆಂದು ತೋರುತ್ತದೆ. (ನ್ > ನು : ವ್ > ವು)' ಇ। ಎ। ಉ ಕಾರಾಂತ ಪ್ರಕೃತಿಗಳಲ್ಲಿ ಸಹ ಈ ರೂಢಿ ಕೆಲಮಟ್ಟಿಗೆ ಉಂಟು (ಇಲಿಯು' ಎಲೆಯು, ಚೆಲುವೆಯು, ಗುರುವು). ಇದಕ್ಕೆ ಕಾರಣ, ಉಕಾರವನ್ನು ಪ್ರ. ವಿ. ಯ ಪ್ರತ್ಯಯವೆಂದು ಭ್ರಮಿಸಿದ ಮೇಲೆ, ಅದನ್ನು ಎಲ್ಲ ಪ್ರಕೃತಿಗಳಿಗೂ ಹತ್ತಿಸಬೇಕೆಂಬ ಪಂಡಿತಪ್ರಚುರವಾದ ವ್ಯಾಕರಣದೃಷ್ಟಿ ಹಾಗೂ ಸಾದೃಶ್ಯರೂಪಸೃಷ್ಟಿ. ಆದರೆ ಇಂಥ ಪ್ರಯೋಗಗಳು ಹೆಚ್ಚಾಗಿ ಬರೆವಣಿಗೆಯಲ್ಲಿ ಮಾತ್ರವೇ ; ಆಡುಮಾತಿನಲ್ಲಿ ಅಲ್ಲ. ಪ್ರಕೃತಿ ಅಥವಾ ಪ್ರಾತಿಪದಿಕವೇ ಪ್ರ.ವಿ.ಯ ಅರ್ಥವನ್ನು ಕೊಡುತ್ತದೆ ; ಹೀಗೆ ಪ್ರ.ವಿ.ಯ ಕಾರ್ಯವಿದ್ದರೂ ಅದರ ನಿರ್ವಹಣೆಗೆ ಪ್ರತ್ಯೇಕಪ್ರತ್ಯಯದ ಅಗತ್ಯವಿಲ್ಲ.

ಕ್ರಮವಾಗಿ ಭ್ರಮೆಯ ಮತ್ತು ಸಹಜವಾದ ರೂಪಗಳು : ಮುದುಕನು–ಮುದುಕ, ಅಕ್ಕನು–ಅಕ್ಕ, ಪುಸ್ತಕವು–ಪುಸ್ತಕ, ಗಿಳಿಯು–ಗಿಳಿ, ಎಲೆಯು–ಎಲೆ, ಚೆಲುವೆಯು–ಚೆಲುವೆ, ಗುರುವು–ಗುರು.

(ii) ಪ್ರ.ವಿ.ಯಲ್ಲಿ ಅಕಾರಾಂತ ಸ್ತ್ರೀಲಿಂಗರೂಪಗಳು ಹೇಗಿರುತ್ತವೆ ? ಪ್ರಕೃತಿಗೆ ಅಳು/ಅವಳು ಸಾಮಾನ್ಯವಾಗಿ ಸೇರುತ್ತದೆ. ಆದರೆ 'ಅಕ್ಕ' ಶಬ್ದದ ಹಾಗೆ ಕೆಲವು ಸಹಜ

ಸ್ತ್ರೀಲಿಂಗಶಬ್ದಗಳು ಅನು ಸೇರಿ ದ್ವಿತೀಯಾದಿ ವಿಭಕ್ತಿಗಳಲ್ಲಿ ನಡೆಯುತ್ತವೆ. ಕೆಲವರು ಮಾತು ಬರೆಹಗಳಲ್ಲಿ ಅಳು ಸೇರಿಸುತ್ತಾರೆ. ಇದು ಅಷ್ಟೇನೂ ಸರಿಯಲ್ಲ.

ಕ್ರಮವಾಗಿ ತಪ್ಪು–ಸರಿ ರೂಪಗಳು : ಗೀತಾ/ಗೀತ/ಗೀತಳು. ಗೀತಳನ್ನು. ಗೀತಳಿಂದ ಇ.–ಗೀತಾ/ಗೀತ. ಗೀತನನ್ನು. ಗೀತನಿಂದ ಇ.

(iii) ಪ್ರ.ವಿ.ಯಲ್ಲಿ ಗೌರವಾರ್ಥ ಬ.ವ. ಪ್ರತ್ಯಯದೊಂದಿಗೆ ಪುಂ. ಸ್ತ್ರೀ ಅಂಕಿತ ನಾಮ ಪ್ರಕೃತಿಗಳನ್ನು ರಚಿಸುವುದು ಹೇಗೆ ? ಅಕಾರಾಂತಗಳಾದರೆ. –ರು/–ನವರು ಸೇರುತ್ತದೆ; ಇ/ಉ/ಎ ಕಾರಾಂತಗಳಾದರೆ ಸ್ವತಂತ್ರವಾಗಿ ಇಲ್ಲವೆ ಯಕಾರಾಗಮಸಹಿತ ವಾಗಿ –ಅವರು ಸೇರುತ್ತದೆ; ವ್ಯಂಜನಾಂತಗಳಾದರೆ –ಅವರು. ಇಕಾರಾಂತಗಳಿಗೆ ವಿಕಲ್ಪ ವಾಗಿ –ಗಳು ಸೇರುವುದೂ ಇದೆ. ಆದರೆ ಕೆಲವರು ಈ ಎಲ್ಲ ಸಂದರ್ಭಗಳಿಗೂ –ರವರು ಸೇರಿಸುತ್ತಾರೆ. ಇದು ಸರಿಯಲ್ಲ. ಏಕೆಂದರೆ ರು + ಅವರು = ರವರು ಅರ್ಥಪೂರ್ಣ ಘಟಕವಲ್ಲ.

ಕ್ರಮವಾಗಿ ತಪ್ಪು–ಸರಿ ರೂಪಗಳು : ಶ್ರೀನಿವಾಸಾಚಾರ್ಯರವರು –ಶ್ರೀನಿವಾಸಾ ಚಾರ್ಯರು. ಸೀತಾಪತಿರವರು_ಸೀತಾಪತಿಯವರು. ಕುವೆಂಪುರವರು–ಕುವೆಂಪು ಅವರು. ನೆಹರೂರವರು–ನೆಹರೂ ಅವರು. ಗೋಡಬೋಲೆರವರು–ಗೋಡಬೋಲೆಯವರು. ಅಣ್ಣಾಮಲೈರವರು–ಅಣ್ಣಾಮಲೈ ಅವರು. ವಿಜಯಲಕ್ಷ್ಮೀಪಂಡಿತ್‌ರವರು–ವಿಜಯ ಲಕ್ಷ್ಮೀಪಂಡಿತ್ ಅವರು. ರಾಮಸ್ವಾಮಿರವರು–ರಾಮಸ್ವಾಮಿ ಅವರು/ರಾಮಸ್ವಾಮಿ ಯವರು/ರಾಮಸ್ವಾಮಿಗಳು.

ವ್ಯಂಜನಾಂತಶಬ್ದಗಳನ್ನು ಹಾಗೆಯೇ ಇಡಬಹುದು : ಇಲ್ಲವೆ ಅಕಾರಾಂತಗೊಳಿಸಿ –ರು ಸೇರಿಸಬಹುದು :

ಉದಾ. ಲಾರ್ಡ್ ರೀಡಿಂಗ್. ಖಾನ್ ಅಬ್ದುಲ್ ಗಫಾರ್ ಖಾನ್ : ಜವಹರಲಾಲರು.

ಇಕಾರಾಂತ ಶಬ್ದಗಳಿಗೆ –ಗಳು ಸೇರುವುದೇ ಸ್ವಾಭಾವಿಕ ಎಂಬುದು ಬರೆವಣಿಗೆಗಿಂತ ಆಡುಮಾತಿನ ರೀತಿಯಿಂದ ವಿದಿತವಾಗುತ್ತದೆ.

ಉದಾ. ಮಹೇಶ್ವರ ನಿಯೋಗಿಗಳು. ಮೈಸೂರು ಸೀತಾರಾಮಶಾಸ್ತ್ರಿಗಳು

(iv) ವ್ಯಂಜನಾಂತಶಬ್ದಗಳು ಏ.ವ. ದಲ್ಲಿ ವಿಭಕ್ತಿಪ್ರತ್ಯಯಗಳೊಂದಿಗೆ ಹೇಗೆ ನಡೆಯುತ್ತವೆ? ಅಂತ್ಯವ್ಯಂಜನವನ್ನು ಹಾಗೆಯೇ ಉಳಿಸಿ ಪ್ರತ್ಯಯಗಳನ್ನು ಬಿಡಿಸಿ ಸೇರಿಸುವುದೋ ಇಲ್ಲವೆ ಆಡುಮಾತಿನಲ್ಲಿ ಸಾಮಾನ್ಯವಾಗಿ ಕೇಳಿಬರುವಂತೆ ಸ್ವರಾಂತ ಗೊಳಿಸಿ, ಸ್ವರಾಂತಪ್ರಕೃತಿಗಳನ್ನು ನಡೆಸುವಂತೆಯೇ ನಡಸಬೇಕೇ ? ಮೊದಲನೆಯದು ಕನ್ನಡಭಾಷೆಯ ಮರ್ಯಾದೆಗೆ ಅನುಸಾರವಾದುದಲ್ಲ; ಎರಡನೆಯದು ಉತ್ತಮಪಕ್ಷ. ಆದರೆ ವ್ಯಂಜನಾಂತ ಪ್ರಕೃತಿಗಳು ಔಪವಿಭಕ್ತಿಗಳೇನೂ ಇಲ್ಲದೆ ಚತುರ್ಥಿ ಹೊರತಾದ ಅನ್ಯಸ್ವರಾದಿ ವಿಭಕ್ತಿಗಳೊಂದಿಗೆ ಅವ್ಯವಹಿತವಾಗಿ ಕೂಡಿಕೊಂಡು ಅರ್ಥಪ್ರತೀತಿ ಕೆಡ ದಂತೆ ನಡೆಯಬಲ್ಲವಾಗಿವೆ ಎಂಬುದನ್ನೂ ತಿಳಿದಿರಬೇಕು. ಹೀಗೆ ಮಾಡುವಾಗ ರಾಮನ್ ನನ್ನು, ರಾಮನ್‌ನಿಂದ, ಪೆಷಾವರ್‌ನಲ್ಲಿ, ರೈಲ್‌ನಲ್ಲಿ, ಸ್ಟೇಷನ್‌ನಿಂದ ಇಂಥ ರೂಪಗಳು

(–ನನ್ನು, –ನಿಂದ, –ನಲ್ಲಿ) ಹಿತವಲ್ಲವಾದ್ದರಿಂದ ಇವನ್ನು ರಾಮನ್ನನ್ನು, ರಾಮನ್ನಿಂದ, ಪೆಷಾವರಲ್ಲಿ, ರೈಲಲ್ಲಿ, ಸ್ಟೇಷನ್ನಿಂದ ಎಂಬುದಾಗಿಯೇ ಹೇಳುವುದೂ ಬರೆಯುವುದೂ ಸೂಕ್ತ. ಚತುರ್ಥಿಯಲ್ಲಿ ರಾಮನ್‌ಗೆ/ರಾಮನ್ನಿಗೆ. ಪೆಷಾವರ್‌ಗೆ/ಪೆಷಾವರಿಗೆ, ರೈಲ್‌ಗೆ/ರೈಲಿಗೆ, ಸ್ಟೇಷನ್‌ಗೆ/ಸ್ಟೇಷನ್ನಿಗೆ ಎಂಬ ಹಾಗೆ ಇರಬಹುದು.

(೨) ಅಯ್/ಎಯ್ ಅಂತ್ಯವಾದ ಕೆಲವು ನಾಮವಾಚಕಗಳ ಬರೆವಣಿಗೆಯಲ್ಲಿ ತುಂಬ ಗೊಂದಲವಿರುವುದು ಕಾಣುತ್ತದೆ. ಅಯ್/ಎಯ್ > ಐ ಆಗಿ ವರ್ತಿಸಿದ ಮೇಲೆ ವಿಭಕ್ತಿ ಪ್ರತ್ಯಯಗಳು ಸೇರುವಾಗ ವಿಭಕ್ತಿ ಸ್ವರ ಅ/ಇ > ಯ ಆಗಿ ಸಂಧಿಕಾರ್ಯ ನಡೆಯುವುದಲ್ಲದೆ ಯಕಾರ ದ್ವಿತ್ವ ಬರುವುದು ಸಾಧ್ಯವಿಲ್ಲ. ಆದರೆ ಅಯ್/ಎಯ್ ಅಂತ್ಯವಾಗಿಯೇ ನಾಮವಾಚಕಗಳನ್ನಿಟ್ಟುಕೊಂಡರೆ ಅ/ಎ ಹಿಂದಿನ ವ್ಯಂಜನದಲ್ಲಿ ಸೇರಿಹೋಗುವುದರಿಂದ ಮುಂದಿನ ವ್ಯಂಜನವಾದ ಯಕಾರ ದ್ವಿತ್ವಗೊಳ್ಳಲೇಬೇಕಾಗುತ್ತದೆ.

(೩) ಯಕಾರ ತಪ್ಪಾಗಿ ದ್ವಿತ್ವಗೊಳ್ಳುವ ಐಕಾರಪೂರ್ವದ ನಾಮವಾಚಕಗಳು–ಯಕಾರಾಗಮದ ಸರಿಯಾದ ರೂಪಗಳು: (೧) ಕೈಯ್ಯನ್ನು–ಕೈಯನ್ನು/ಕಯ್ಯನ್ನು, ಕೈಯ್ಯಿಂದ–ಕೈಯಿಂದ/ಕಯ್ಯಿಂದ, ಕೈಯ್ಯಿಗೆ–ಕೈಗೆ/ಕಯ್ಯಿಗೆ, ಕೈಯ್ಯಲ್ಲಿ–ಕೈಲಿ/ಕಯ್ಯಲ್ಲಿ. (೨) ಮೈಯ್ಯನ್ನು–ಮೈಯನ್ನು/ಮಯ್ಯನ್ನು, ಮೈಯ್ಯಿಂದ–ಮೈಯಿಂದ/ಮಯ್ಯಿಂದ, ಮೈಯಿಗೆ–ಮೈಗೆ/ಮಯ್ಯಿಗೆ, ಮೈಯಲ್ಲಿ–ಮೈಲಿ/ಮಯ್ಯಲ್ಲಿ.

(೪) ಪ್ರಾಸಂಗಿಕವಾಗಿ ಕೆಲವು ಯಕಾರಾಂತ ಧಾತುಗಳ ವಿಚಾರವಾಗಿಯೂ ಇಲ್ಲಿಯೇ ಒಂದೆರಡು ಮಾತುಗಳನ್ನು ಹೇಳಬಹುದು: ಈ ಧಾತುಗಳಿಗೆ ಕಾಲಸೂಚಕ ಪ್ರತ್ಯಯಗಳೂ ಸರ್ವನಾಮಪ್ರತ್ಯಯಗಳೂ ಹತ್ತಿ ಕ್ರಿಯಾಪದಗಳಾಗುವಾಗ ಬರಹದಲ್ಲಿ ತಪ್ಪುಗಳಾಗುವುದುಂಟು.

ಬಯ್/ಬೈ: ಬೈಯ್ಯುತ್ತಾನೆ–ಬೈಯುತ್ತಾನೆ/ಬಯ್ಯುತ್ತಾನೆ ಇ.: ಗೆಯ್/ಗೈ: ಗೈಯ್ಯುತ್ತಾನೆ–ಗೈಯುತ್ತಾನೆ/ಗೆಯ್ಯುತ್ತಾನೆ/ಗೇಯುತ್ತಾನೆ; ನೊಯ್/ನೋ/ನೋಯು: ನೋಯ್ಯುತ್ತಾನೆ–ನೊಯ್ಯುತ್ತಾನೆ/ನೋಯುತ್ತಾನೆ.

(೫) ದಿನಪತ್ರಿಕೆಗಳಲ್ಲಿ ಸ್ಥಳ ಉಳಿಸಲು ಅ/ಇ/ಎ/ಉ ಕಾರಾಂತಗಳಾದ ಅಂಕಿತನಾಮಗಳ ಚ. ವಿ ಯ ರೂಪಗಳನ್ನು ಸುಮ್ಮನೆ ಗೆ ಸೇರಿಸಿ ಬರೆಯುವುದುಂಟು. (ಉದಾ. ವೀರೇಂದ್ರಗೆ ಮಂತ್ರಿಪದವಿ: ಬಂಗಾರಪ್ಪಗೆ ಸೂಚನೆ). ಇದರಿಂದ ಶಬ್ದರಚನೆ ಕೆಡುವುದಲ್ಲದೆ, ಏ. ವ. ದ ವಿವಕ್ಷೆಯೂ ಉಂಟಾಗುವುದರಿಂದ ಈ ಬಗೆಯ ಬರೆವಣಿಗೆ ಸರಿಯಲ್ಲ.

(೬) ಏನು ಎಂಬ ನಪ್ ಸರ್ವನಾಮದ ಚ. ವಿ. ಯ ರೂಪ ಏತಕ್ಕೆ/ಏಕೆ. ರೂಢಿಯಲ್ಲಿ ಯಾಕೆ ಎಂದು ಬಳಸಲಾಗುವುದು. ಯಾರು, ಯಾವಾಗ ಎಂಬುದನ್ನು ಸಮರ್ಥಿಸುವಂತೆಯೇ ಈ ರೂಪವನ್ನೂ ಸಮರ್ಥಿಸಬಹುದು. ಆದರೆ ಈಚೆಗೆ ಆಡುಮಾತಿನಲ್ಲಿ ಕೇಳಿ ಬರುವ ಏನಕ್ಕೆ ಎಂಬುದು ಸಮರ್ಥನೀಯವಲ್ಲ. ಹಾಗೆಯೇ ಏತರಲ್ಲಿ/ಯಾತರಲ್ಲಿ ಸರಿ; ಏನ್ದರಲ್ಲಿ ಸರಿಯಲ್ಲ.

ಗಳು ವಿಭಕ್ತಿಸ್ವೀಕಾರ ಮಾಡುವಾಗ ಬರುತ್ತದೆ. ಆದರೆ ವಿರಳವಾಗಿ ಷಷ್ಠಿಯಲ್ಲಿ ಎಕಾರಾಂತ ಕಾಲವಾಚಕಗಳಲ್ಲಿಯೂ ಉಂಟು (ನಿನ್ನಿನ, ನಾಳಿನ, ಮೊನ್ನಿನ). ಹೊ. ಗ. ದಲ್ಲಿ ಯಕಾರಾಗಮ ರೂಪಗಳೇ ಸಾಮಾನ್ಯ (ನಿನ್ನೆಯ, ನಾಳೆಯ, ಮೊನ್ನೆಯ). ಇಕಾರಾಂತ ಸ್ಥಳವಾಚಕಗಳಿಗೆ, ಹಾಗೆಯೇ ಎಕಾರಾಂತ ಸ್ಥಳವಾಚಕಗಳಿಗೆ ಸಹ ಇನಾಗಮ ವನ್ನು ಬಳಸುವುದು ಕಾಣುತ್ತದೆ. ಇದು ಸರಿಯಲ್ಲ. ಆದರೆ ಆಗ, ಈಗ, ಯಾವಾಗ ಎಂಬ ಕಾಲವಾಚಕಗಳಲ್ಲಿ ಇನಾಗಮವನ್ನು ರೂಢಿ ಒಗ್ಗಿಸಿಕೊಂಡಿದೆ.

ಕ್ರಮವಾಗಿ ತಪ್ಪು—ಸರಿ ರೂಪಗಳು : ಇಲ್ಲಿನ, ಅಲ್ಲಿನ, ಎಲ್ಲಿನ—ಇಲ್ಲಿಯ, ಅಲ್ಲಿಯ, ಎಲ್ಲಿಯ; ಈಚಿನ, ಇತ್ತೀಚಿನ, ಈಚೀಚಿನ—ಈಚೆಯ, ಇತ್ತೀಚೆಯ, ಈಚೀಚೆಯ.

## ೧೦. ಅರಿಸಮಾಸ

ಸಂಸ್ಕೃತಶಬ್ದಗಳೊಂದಿಗೆ ದೇಶ್ಯಶಬ್ದಗಳಾಗಲಿ ತದ್ಭವಶಬ್ದಗಳಾಗಲಿ ಸೇರಿ ಸಮಾಸ ವಾಗುವುದು ವಿಹಿತವಲ್ಲ ಎನ್ನುವುದು ರೂಢಿಯ ವ್ಯಾಕರಣಗಳಲ್ಲಿ ಉಕ್ತವಾಗಿರುವ ವಿಷಯ. ಹೀಗೆ ಸಮಾಸವಾದರೆ ಪದಮೈತ್ರಿ ಇರುವುದಿಲ್ಲ, ಕಿವಿಗೆ ಹಿತವಾಗಿರುವುದಿಲ್ಲ ಎನ್ನುವುದು ಅದಕ್ಕೆ ಕಾರಣವಿರಬಹುದು. ಇಂತಹವನ್ನು ಅರಿಸಮಾಸ ಎನ್ನಲಾಗುತ್ತದೆ. ಆದರೆ ಸಂಸ್ಕೃತ + ಸಂಸ್ಕೃತ, ದೇಶ್ಯ + ದೇಶ್ಯ, ತದ್ಭವ + ತದ್ಭವ, ದೇಶ್ಯ + ತದ್ಭವ, ತದ್ಭವ + ದೇಶ್ಯ ಹೀಗೆ ಸೇರುವುದರಲ್ಲಿ ವಿಹಿತತ್ವವುಂಟು.

ಪದಮೈತ್ರಿಯಿಲ್ಲದ ಸಮಾಸಗಳು ಸುಲಭವಾಗಿ ಗುರುತಿಸುವಂತಿರುತ್ತವೆ. ರಾಜಮಗ, ಕಮಲಗಣ್ಣು, ಮನೆಕಾರ್ಯ, ಪತ್ರಹಸಿರು, ಪುಸ್ತಕಾಸೆ, ಸಿರಿನಿಧಿ, ಒಳ್ಳೆವೃತ್ತಿ, ಬೆಳ್ಕೀರ್ತಿ, ಇವುಗಳನ್ನು ಕ್ರಮವಾಗಿ ರಾಜಪುತ್ರ, ಕಮಲನಯನ, ಮನೆಗೆಲಸ, ಎಲೆಹಸಿರು, ಪುಸ್ತಕ ಪ್ರೀತಿ, ಶ್ರೀನಿಧಿ, ಸತ್ಪ್ರವೃತ್ತಿ, ಧವಳಕೀರ್ತಿ ಎಂಬ ಶುದ್ಧಸಮಾಸಗಳೊಂದಿಗೆ ಹೋಲಿಸಿ ದಾಗ ತಿಳಿಯುತ್ತದೆ.

ಪೂರ್ವಪ್ರಸಿದ್ಧ ಕವಿಗಳು ಬಳಸಿ ರೂಢಿಯಾಗಿರುವುದು, ಜನರ ಬಳಕೆಯಲ್ಲಿ ಚೆನ್ನಾಗಿ ಒಗ್ಗಿರುವುದು, ಬಿರುದುಗಳಲ್ಲಿ ತತ್ಸಮಶಬ್ದಗಳಲ್ಲಿ ರೂಢಿಗೆ ಬಂದಿರುವುದು—ಇಂತಹ ಕಡೆ ಅರಿಸಮಾಸ ದೋಷವಿಲ್ಲವೆಂದಿದೆ. ಕೆಲವು ಸಂಸ್ಕೃತಶಬ್ದಗಳು ತದ್ಭವಗೊಳ್ಳದೆ, ತಮ್ಮ ಯಥಾರೂಪದಲ್ಲಿ ದೇಶ್ಯ/ತದ್ಭವಗಳೊಂದಿಗೆ ಹೊಂದಿಕೊಳ್ಳವು ಎನ್ನುವುದು ಪ್ರಯೋಗಸಿದ್ಧವಾದುದು. ಅಂಥವನ್ನು ನಾವು ನಿರಾಕರಿಸಬೇಕು. ತದ್ಭವಗೊಳ್ಳಲು ಸಾಧ್ಯವಿಲ್ಲದ ಸರಳ ಸಂಸ್ಕೃತಶಬ್ದಗಳು ದೇಶ್ಯ/ತದ್ಭವಗಳೊಂದಿಗೆ ಹೊಂದಿಕೊಳ್ಳುವುದು ಸಾಧ್ಯವಿರುವುದನ್ನು ನಾವು ಗಮನಿಸಬೇಕು. ಅಂಥವು ಉಪಾದೇಯಗಳಾದ ಸಮಾಸಗಳೇ ಆಗಿವೆ. ಆದರೆ ಇಲ್ಲಿಯೂ ಒಂದು ಮಿತಿಯುಂಟು (ಕೊರಸಿ, ತುರಗದಳ, ಜನಜಂಗುಳಿ, ಜನಜಾತ್ರೆ, ಮಂಗಳಮೂರುತಿ ಇ.). ಶ್ರುತಿಹಿತವೂ ಜನಸಮ್ಮತವೂ ಆಗಲಾರದವನ್ನು ನಾವು ಸ್ವೇಚ್ಛೆಯಿಂದ ಕಲ್ಪಿಸುತ್ತ ಹೋಗಬಾರದು (ಪ್ರೇಮಸೆಳೆ, ಹೆಗ್ಗುಣ, ಅಕ್ಷರಕಲಿಕಾ ಕೇಂದ್ರ, ಕುರಿಸಾಕಾಣಿಕಾಕೇಂದ್ರ, ಸಾಲನೀಡಿಕಾಕೇಂದ್ರ, ಕುರಿಸಂವರ್ಧನಾಕೇಂದ್ರ,

ಚರ್ಚಾಪಟ್ಟಿ). ಅನ್ಯಭಾಷೆಗಳ ಶಬ್ದಗಳೊಂದಿಗೆ ಕನ್ನಡಶಬ್ದಗಳು ಸೇರಿದ ಸಮಾಸಗಳು ಸಹ ಹೀಗೆಯೇ ಕೆಲವು ಒಗ್ಗುತ್ತವೆ: ಕೆಲವು ಇಲ್ಲ. ಶಬ್ದಮೈತ್ರಿ, ಶ್ರುತಿಹಿತತ್ವ ಇವು ಲಕ್ಷ್ಯದಲ್ಲಿರುವುದು ಅವಶ್ಯ.

## ೧೧. ವಿಕಲ್ಪ ಹಾಗೂ ಅಶುದ್ಧ ಕ್ರಿಯಾಪದಗಳು

ಆಡುಮಾತು, ಸಡಿಲವಾದ ಬರೆವಣಿಗೆಗಳಲ್ಲಿ ನಾವು ಇವನ್ನು ಸಾಮಾನ್ಯವಾಗಿ ಕಾಣುತ್ತೇವೆ. ವಿಕಲ್ಪವಾದವು ಮನ್ನಣೆಗೆ ಪಾತ್ರವಾಗಬಹುದು ; ಆದರೆ ಅಶುದ್ಧವಾದವನ್ನು ನಿವಾರಿಸಬೇಕು.

(೧) ಎಕಾರಾಂತ ಧಾತುಗಳನ್ನು ಇಕಾರಾಂತಗಳಾಗಿ ಆಡುಮಾತಿನಲ್ಲಿ ಬಳಸುವುದು ಸಾಮಾನ್ಯ ; ಬರೆವಣಿಗೆಯಲ್ಲಿ ಎಕಾರಾಂತಗಳಲ್ಲಿ ಬಳಸುವುದು ಸೂಕ್ತ.

ಕ್ರಮವಾಗಿ ತಪ್ಪು/ವಿಕಲ್ಪ–ಸರಿ ರೂಪಗಳು : ಅಲಿ–ಅಲೆ, ಕರಿ–ಕರೆ, ತೊಳಿ–ತೊಳೆ, ನೆಗಿ–ನೆಗೆ, ಬರಿ–ಬರೆ, ಹೊಡಿ–ಹೊಡೆ, ಸೆಣಿ–ಸೆಣೆ.

(೨) ಎಕಾರಾಂತ ಧಾತುಗಳಿಗೆ ಇಸು ಹತ್ತಿಸಿ ಸಾಧಿತ ಧಾತುಗಳನ್ನು ಮಾಡುವಾಗ ಎ>ಅ ಸಾಮಾನ್ಯ; ಆದರೆ ಹಾಗೆ ಮಾರ್ಪಡದೆ, ಸು ಹತ್ತುವುದು ಈಗಿನ ರೂಢಿ. ಇವು ವಿಕಲ್ಪರೂಪಗಳು.

ಕ್ರಮವಾಗಿ ವಿಕಲ್ಪ–ಸರಿ ರೂಪಗಳು : ಒಗೆಸು–ಒಗೆಯಿಸು/ಒಗಸು, ನಡೆಸು–ನಡೆಯಿಸು/ನಡಸು, ಬರೆಸು–ಬರೆಯಿಸು/ಬರಸು, ತೊಳೆಸು–ತೊಳೆಯಿಸು/ತೊಳಸು, ಬೆಳೆಸು–ಬೆಳೆಯಿಸು/ಬೆಳಸು.

ಹೀಗೆ ಮಾಡುವಾಗ ನಾಮರೂಢಿ ಕೆಡುವ ಹಾಗೆ ಆ ಸುಕಾರಾಂತ ಧಾತುಗಳಿಂದ ನಾಮರೂಪಗಳನ್ನು ಕಲ್ಪಿಸಬಾರದು : ಆರಿಸುವಿಕೆ, ಅಲಿಸುವಿಕೆಗಳಿಗೆ ಆರಿಕೆ, ಆಲಿಕೆ ಎಂದು ಮಾಡಬಾರದು (ಉದಾ. ಟೆಲಿಫೋನ್ ಕದ್ದಾಲಿಕೆ); ತಪ್ಪುಸರಿಪಡಿಕೆ (<ಸರಿಪಡಿಸುವಿಕೆ) ಸರಿಯಲ್ಲ.

(೩) ಕೆಲವು ಧಾತುಗಳ ಭೂತನ್ಯೂನ ರೂಪಗಳನ್ನೇ ಸ್ವತಂತ್ರಧಾತುಗಳೆಂದು ಭ್ರಮಿಸಿ, ಅವುಗಳಿಂದ ಕ್ರಿಯಾಪದಗಳನ್ನು ಕಲ್ಪಿಸುವುದುಂಟು. ಇದು ಸರಿಯಲ್ಲ.

ಕ್ರಮವಾಗಿ ತಪ್ಪು–ಸರಿ ರೂಪಗಳು : ಕಿತ್ತು (ಧಾ.) > ಕಿತ್ತಿದನು/ಕಿತ್ತಿದ, ಕಿತ್ತೋಣ ಇ.,–ಕೀಳು(ಧಾ.) > ಕಿತ್ತನು/ಕಿತ್ತ, ಕೀಳೋಣ ; ನಕ್ಕು (ಧಾ.) > ನಕ್ಕಿದನು/ನಕ್ಕಿದ–ನಗು(ಧಾ.) > ನಕ್ಕನು/ನಕ್ಕ ; ತೆತ್ತು (ಧಾ.) > ತೆತ್ತಿದನು/ತೆತ್ತಿದ, ತೆತ್ತೋಣ–ತೆರು (ಧಾ.) > ತೆತ್ತನು/ತೆತ್ತ, ತೆರೋಣ.

(೪) ರೂಪಸಾದೃಶ್ಯದ ಮೇಲೆ ತಪ್ಪುಧಾತುಗಳನ್ನು ಕಲ್ಪಿಸಿ ಕ್ರಿಯಾಪದಗಳನ್ನು ರಚಿಸುವುದುಂಟು. ಇದು ಸರಿಯಲ್ಲ. ಆದರೆ ಹೊ.ಗ.ದಲ್ಲಿ ಅಂಥವುಗಳಿಗೆ ವಿಶೇಷ ಪ್ರಚಾರವೇನೋ ಉಂಟು.

ನಗು, ಮಿಗು ಧಾತುಗಳ ರೂಪಸಾದೃಶ್ಯದಿಂದ ಸಿಕ್ಕು (<ಹ.ಗ. ಸಿಲ್ಕು) ಧಾತು ಸಿಗು

ಎಂದಾಗಿದೆ. ತಪ್ಪು–ಸರಿ ರೂಪಗಳು : ಸಿಗುತ್ತಾನೆ–ಸಿಕ್ಕುತ್ತಾನೆ, ಸಿಗುತ್ತವೆ–ಸಿಕ್ಕುತ್ತವೆ, ಸಿಗದು–ಸಿಕ್ಕದು. ಇ.

(೫) ಹೇಳು>ಹೇಳಿ, ಕೇಳು–ಕೇಳಿ ಇ. ಉಕಾರಾಂತ ಧಾತುಗಳ ನಿಷ್ಪನ್ನರೂಪಗಳ ಸಾದೃಶ್ಯದಿಂದ ಮಿಗು ಧಾತು ಮಿಕ್ಕಿ ಎಂದು ತಪ್ಪಾಗಿ ನಿಷ್ಪನ್ನಗೊಂಡಿದೆ (ಈ ಪುಸ್ತಕದಲ್ಲಿ ಏಳುನೂರಕ್ಕೂ ಮಿಕ್ಕಿ ಪುಟಗಳಿವೆ); ಆದರೆ ಮಿಕ್ಕು ಸರಿಯಾದ ರೂಪ (ಈ ಪುಸ್ತಕದಲ್ಲಿ ಏಳುನೂರಕ್ಕೂ ಮಿಕ್ಕು ಪುಟಗಳಿವೆ). ನಗು>ನಕ್ಕು ಎಂಬಂತೆ ಮಿಗು>ಮಿಕ್ಕು ಎಂಬುದು ಸರಿಯಾದ ಭೂತನ್ಯೂನರೂಪ.

(೬) ಮಿದಿ>ಮಿದಿದು. ಪುದಿ>ಪುದಿದು ಇ. ಇಕಾರಾಂತ ಧಾತುಗಳ ನಿಷ್ಪನ್ನ ರೂಪಗಳ ಸಾದೃಶ್ಯದಿಂದ ಹೊ.ಗ.ದಲ್ಲಿ ಬಹುವಾಗಿ ಪ್ರಚಾರದಲ್ಲಿರುವ ಕದಿ ಧಾತುವನ್ನು, ಹ.ಗ. ಕಳ್>ಕಳ್ದು>ಕರ್ದು>ಕದ್ದು ಎಂಬ ಭೂತನ್ಯೂನರೂಪದ ಬೆಳೆವಣಿಗೆಯ ಫಲ ವಾಗಿ ಕಲ್ಪಿಸಿಕೊಂಡಿದೆ (ಕದ್ದು > * ಕದಿದು > ಧಾ. ಕದಿ + ದು). *ಮಿದಿದು> ಮಿದ್ದು, ಒದೆದು–ಒದ್ದು ಗಮನಿಸಿ.

(೭) ಗೆಲ್ ಧಾತುವಿನ ಭೂತನ್ಯೂನರೂಪಗಳಾದ ಗೆಲ್ದು ಹ.ಗ.ದಲ್ಲಿಯೂ ಗೆಲಿದು ನ.ಗ.ದಲ್ಲಿಯೂ ಪರಿಚಿತವಾದುದು. ನ.ಗ.ದ ರೂಪದಲ್ಲಿ ನಡುವೆ ಹೊಕ್ಕಿರುವ ಇಕಾರ ಉಚ್ಚಾರ ಸೌಕರ್ಯಕ್ಕೆ ಬಂದುದು. ಹೊ.ಗ.ದ ಗೆಲ್ಲು ಧಾತು ಪ್ರಚುರವಾದುದು. ಈಚೆಗೆ ಕದಿ ಧಾತುವಿನಂತೆಯೇ ಗೆದಿ ಎಂಬ ಭ್ರಮಾರೂಪವನ್ನೂ ಕಲ್ಪಿಸಿಕೊಂಡಿದೆ (ಗೆಲ್> ಗೆಲ್ದು>ಗೆಲಿದು/ಗೆದ್ದು>*ಗೆದಿದು>ಧಾ. ಗೆದಿ+ದು). ಹೀಗೆಯೇ ಮೆದಿ ಎಂಬ ಧಾತುವಿನ ಭ್ರಮಾರೂಪ (ಮೆಲ್>ಮೆಲ್ದು>ಮೆಲಿದು/ಮೆದ್ದು>*ಮೆದಿದು> ಧಾ. ಮೆದಿ+ದು) ಸಹ. ಮಿದಿದು>ಮಿದ್ದು, ಒದೆದು>ಒದ್ದು ನೋಡಿ.

(೮) ಸಾಮಾನ್ಯ ಭೂತಕಾಲದಲ್ಲಿ ನಡೆಯುವ ಪ್ರ.ಪು.ದ. ನಪ್ ಬ.ವ. ಕ್ರಿಯಾರೂಪ ಗಳಲ್ಲಿ ಉಪಾಂತ್ಯಸ್ವರ ಉಕಾರವಾಗಿರುವುದೇ ವೈಯಾಕರಣಮಾನ್ಯವಾದುದು ; ಅಕಾರ ವಾಗಿರುವುದು ಬರೆಹದ ಶೈಥಿಲ್ಯದ ಪರಿಣಾಮವಾಗಿ ಬಂದಿರುವಂತಹುದು.

ಕ್ರಮವಾಗಿ ವಿಕಲ್ಪ/ತಪ್ಪು–ಸರಿ ರೂಪಗಳು : ಬಂದವು–ಬಂದುವು, ಕುಣಿದವು– ಕುಣಿದುವು, ನುಗ್ಗಿದವು–ನುಗ್ಗಿದುವು, ನಡೆದವು–ನಡೆದುವು, ಸತ್ತವು–ಸತ್ತುವು, ಹೋದವು –ಹೋದುವು.

(೯) ಸಾಮಾನ್ಯ ಭವಿಷ್ಯತ್ ಕಾಲದಲ್ಲಿ ನಡೆಯುವ ಪ್ರ.ಪು. ದ ನಪ್ ಏ.ವ., ಬ.ವ. ಕ್ರಿಯಾರೂಪಗಳಲ್ಲಿ–ಅವು ಸ್ವತಂತ್ರ ಧಾತುಗಳಿರಬಹುದು, ಸಂಯುಕ್ತ ಧಾತುಗಳಿರ ಬಹುದು–ಉಪಾಂತ್ಯಸ್ವರ ಉಕಾರವಾಗಿರುವುದೇ ವೈಯಾಕರಣಮಾನ್ಯವಾದುದು ; ಸಾಹಿತ್ಯ ಪರಂಪರೆಯಲ್ಲಿ ಸಿದ್ಧವಾದುದು. ಅಕಾರವಾಗಿರುವುದು ಬಲುಮಟ್ಟಿಗೆ ಪ್ರಾದೇಶಿಕ ಭೇದದ ವಿಕಲ್ಪರೂಪ.

ಕ್ರಮವಾಗಿ ವೈಕಲ್ಪಿಕ–ವೈಯಾಕರಣಮಾನ್ಯ ರೂಪಗಳು : ಕುಣಿಯುವದು/ಕುಣಿ ಯುವವು–ಕುಣಿಯುವುದು/ಕುಣಿಯುವುವು, ಬರುವದು/ಬರುವವು–ಬರುವುದು/ಬರು

ವುವು, ತಿಳಿದಿರುವುದು/ತಿಳಿದಿ... ...ದಿರುವುದು/ಪಡೆ
ದಿರುವವು–ಪಡೆದಿರುವುದು/ಪಡೆದಿರುವುವು.

(೧೦) ಧಾತುಗಳ ಅವಶಿಷ್ಟ ಪ್ರಾಚೀನರೂಪಗಳನ್ನಿಟ್ಟುಕೊಂಡು ಕ್ರಿಯಾಪದಗಳನ್ನು ರಚಿಸುವುದು ಹಾಗೂ ಅವುಗಳ ಬಳಕೆಯ ಆಧುನಿಕರೂಪಗಳನ್ನಿಟ್ಟು ಅವನ್ನು ರಚಿಸುವುದು—ಇವುಗಳಲ್ಲಿ ಎರಡನೆಯ ಕ್ರಮವೇ ಮೇಲು. ಆದರೆ ಎರಡೂ ವಿಕಲ್ಪರೂಪಗಳಾಗಿ ಗ್ರಾಹ್ಯವಾದುವೇ.

ಕ್ರಮವಾಗಿ ಪ್ರಾಚೀನ ರೂಪಗಳಿಂದ–ಆಧುನಿಕ ರೂಪಗಳಿಂದ ಕ್ರಿಯಾಪದರಚನೆ : ಎನಿಸು (ಧಾ. ಎನ್/ಎನು)–ಎನ್ನಿಸು (ಧಾ. ಎನ್ನು), ತಿನಿಸು (ಧಾ. ತಿನ್/ತಿನು)–ತಿನ್ನಿಸು (ಧಾ. ತಿನ್ನು), ಉಣಿಸು (ಧಾ. ಉಣ್/ಉಣು)–ಉಣ್ಣಿಸು (ಧಾ. ಉಣ್ಣು), ಮಾತನಾಡು (ಮಾತನ್/ಮಾತನು + ಆಡು)–ಮಾತನ್ನಾಡು(ಮಾತನ್ನು + ಆಡು)/ಮಾತಾಡು (ಮಾತು + ಆಡು).

೧೧. ನಾಮಧಾತು/ಸಂಯುಕ್ತಧಾತುಗಳ ಕ್ರಿಯಾಪದರಚನೆಯಲ್ಲಿ, ಇತರ ವಿಧದ ಕ್ರಿಯಾಪದರಚನೆಯಲ್ಲಿ ಸಹ, ಪ್ರಕೃತಿಯೂ ಅದರ ಅರ್ಥವೂ ಕೆಡುವ ಹಾಗೆ ಸಂಧಿ ಮಾಡಬಾರದು. ಆಡುಮಾತಿನಲ್ಲಿ ವಾಡಿಕೆಯಾಗಿ ಕಾಣಿಸುವ ಈ ಸಂಧಿಕಾರ್ಯ, ಈಚೆಗೆ ಬರೆಹದಲ್ಲಿ ಸಹ ತಲೆದೋರುತ್ತಿದೆ. ಇದನ್ನು ನಿವಾರಿಸಬೇಕು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಒಳಗೋಗು–ಒಳಗೆ ಹೋಗು, ಹೊರಟೋಗು–ಹೊರಟುಹೋಗು, ಹುಚ್ಚುಚ್ಚು-ಹುಚ್ಚುಹುಚ್ಚು, ಹುಳಿಯಿಂಡು-ಹುಳಿಹಿಂಡು, ಹೆಚ್ಚೆಚ್ಚು–ಹೆಚ್ಚುಹೆಚ್ಚು, ಹೊಸಕಾಕು–ಹೊಸಕಿ ಹಾಕು, ಮಾಡಲೆತ್ನಿಸು–ಮಾಡಲು ಯತ್ನಿಸು.

ನಾಮಧಾತುಗಳನ್ನು ಕಲ್ಪಿಸುವಾಗ ಅರ್ಥದ ಪರಿಜ್ಞಾನವಿಲ್ಲದೆ ಅಂತಹವನ್ನು ಕಲ್ಪಿಸುವುದು ಕಾಣುತ್ತದೆ. ಇದು ಸರಿಯಲ್ಲ.

ಮುಂದೆ ಸಾಗು, ನಡೆ ಎಂಬ ಅರ್ಥದಲ್ಲಿ ಮುಂದುವರಿ ಸರಿಯಾದ ರೂಪ (ಮುಂದು + ಪರಿ : ಪರಿ = ಹರಿ, ಸಾಗು)–ಮುಂದುವರೆ ತಪ್ಪಾದ ರೂಪ (ಮುಂದು + ಪರೆ : ಪರೆ = ಹರಡು, ಚೆದುರು). ಸುತ್ತುವರಿ–ಸುತ್ತುವರೆ ಸಹ ಹೀಗೆಯೇ ಸರಿ–ತಪ್ಪು ರೂಪಗಳು.

(೧೩) ಹೊ.ಗ.ದಲ್ಲಿ ಇ/ಉ/ಎ ಅಂತ್ಯವಾದ ಧಾತು ಬರೆಹದಲ್ಲಿ ಸಾಮಾನ್ಯವಾಗಿ ಪಡೆಯುವ ನಪ್ ಭೂತಕಾಲದ ಪೂರ್ಣಕ್ರಿಯೆ/ಕೃನ್ನಾಮದ–ದುದು/–ತುದು ಸಹಿತರೂಪವೇ ಆಡುಮಾತಿನಲ್ಲಿಯೂ ಇರುವುದೆನ್ನುವಂತಿಲ್ಲ, ಆಡುಮಾತಿನಲ್ಲಿ –ದದ್ದು ಸೇರಿದ ರೂಪ ಬರುತ್ತದೆ. ಮಾತಿನ ರೂಪವನ್ನು ಬರೆಹದಲ್ಲಿ ತಾರದಿರುವುದು ಒಳ್ಳೆಯದು.

ಕ್ರಮವಾಗಿ ಮಾತು–ಬರೆಹದ ರೂಪಗಳು : ತಿಳಿದದ್ದು–ತಿಳಿದುದು, ತಿಂದದ್ದು–ತಿಂದುದು, ಎಸೆದದ್ದು–ಎಸೆದುದು. ಹೀಗೆಯೇ ಒಡಿ, ಕಡಿ, ಸುರಿ, ಕುಣಿ (ಇಕಾರಾಂತ), ಎನ್ನು, ಬರು, ಆಗು, ಹೋಗು (ಉಕಾರಾಂತ), ನಡೆ, ಎಳೆ, ಬೆಳೆ, ಹೊಸೆ (ಎಕಾರಾಂತ) ಧಾತುಗಳಲ್ಲಿ ಸಹ.

(೧೪) ಧಾತ್ವಂತದಲ್ಲಿ ಇಕಾರಾಗಮವಾಗುವ ಕೆಲವು ಉಕಾರಾಂತ ಧಾತುಗಳಲ್ಲಿ,

ವುವು, [illegible]/ತಿಳಿದಿರುವುವು, ಪಡೆದಿರುವದು/ಪಡೆದಿರುವವು–ಪಡೆದಿರುವುದು/ಪಡೆದಿರುವುವು.

(೧೦) ಧಾತುಗಳ ಅವಶಿಷ್ಟ ಪ್ರಾಚೀನರೂಪಗಳನ್ನಿಟ್ಟುಕೊಂಡು ಕ್ರಿಯಾಪದಗಳನ್ನು ರಚಿಸುವುದು ಹಾಗೂ ಅವುಗಳ ಬಳಕೆಯ ಆಧುನಿಕರೂಪಗಳನ್ನಿಟ್ಟು ಅವನ್ನು ರಚಿಸುವುದು—ಇವುಗಳಲ್ಲಿ ಎರಡನೆಯ ಕ್ರಮವೇ ಮೇಲು. ಆದರೆ ಎರಡೂ ವಿಕಲ್ಪರೂಪಗಳಾಗಿ ಗ್ರಾಹ್ಯವಾದುವೇ.

ಕ್ರಮವಾಗಿ ಪ್ರಾಚೀನ ರೂಪಗಳಿಂದ–ಆಧುನಿಕ ರೂಪಗಳಿಂದ ಕ್ರಿಯಾಪದರಚನೆ: ಎನಿಸು (ಧಾ. ಎನ್/ಎನು)–ಎನ್ನಿಸು (ಧಾ. ಎನ್ನು), ತಿನಿಸು (ಧಾ. ತಿನ್/ತಿನು)–ತಿನ್ನಿಸು (ಧಾ. ತಿನ್ನು), ಉಣಿಸು (ಧಾ. ಉಣ್/ಉಣು)–ಉಣ್ಣಿಸು (ಧಾ. ಉಣ್ಣು), ಮಾತನಾಡು (ಮಾತನ್/ಮಾತನು + ಆಡು)–ಮಾತನ್ನಾಡು(ಮಾತನ್ನು + ಆಡು)/ಮಾತಾಡು (ಮಾತು + ಆಡು).

೧೧. ನಾಮಧಾತು/ಸಂಯುಕ್ತಧಾತುಗಳ ಕ್ರಿಯಾಪದರಚನೆಯಲ್ಲಿ, ಇತರ ವಿಧದ ಕ್ರಿಯಾಪದರಚನೆಯಲ್ಲಿ ಸಹ, ಪ್ರಕೃತಿಯೂ ಆದರ ಅರ್ಥವೂ ಕೆಡುವ ಹಾಗೆ ಸಂಧಿ ಮಾಡಬಾರದು. ಆಡುಮಾತಿನಲ್ಲಿ ವಾಡಿಕೆಯಾಗಿ ಕಾಣಿಸುವ ಈ ಸಂಧಿಕಾರ್ಯ, ಈಚೆಗೆ ಬರೆಹದಲ್ಲಿ ಸಹ ತಲೆದೋರುತ್ತಿದೆ. ಇದನ್ನು ನಿವಾರಿಸಬೇಕು.

ಕ್ರಮವಾಗಿ ತಪ್ಪು–ಸರಿ ರೂಪಗಳು : ಒಳಗೋಗು–ಒಳಗೆ ಹೋಗು, ಹೊರಟೋಗು–ಹೊರಟುಹೋಗು, ಹುಚ್ಚುಚ್ಚು-ಹುಚ್ಚುಹುಚ್ಚು, ಹುಳಿಯಿಂಡು-ಹುಳಿಹಿಂಡು, ಹೆಚ್ಚೆಚ್ಚು–ಹೆಚ್ಚುಹೆಚ್ಚು, ಹೊಸಕಾಕು–ಹೊಸಕಿ ಹಾಕು, ಮಾಡಲೆತ್ನಿಸು–ಮಾಡಲು ಯತ್ನಿಸು.

ನಾಮಧಾತುಗಳನ್ನು ಕಲ್ಪಿಸುವಾಗ ಅರ್ಥದ ಪರಿಜ್ಞಾನವಿಲ್ಲದೆ ಅಂತಹವನ್ನು ಕಲ್ಪಿಸುವುದು ಕಾಣುತ್ತದೆ. ಇದು ಸರಿಯಲ್ಲ.

ಮುಂದೆ ಸಾಗು, ನಡೆ ಎಂಬ ಅರ್ಥದಲ್ಲಿ ಮುಂದುವರಿ ಸರಿಯಾದ ರೂಪ (ಮುಂದು + ಪರಿ : ಪರಿ = ಹರಿ, ಸಾಗು)–ಮುಂದುವರೆ ತಪ್ಪಾದ ರೂಪ (ಮುಂದು + ಪರೆ : ಪರೆ = ಹರಡು, ಚೆದುರು). ಸುತ್ತುವರಿ–ಸುತ್ತುವರೆ ಸಹ ಹೀಗೆಯೇ ಸರಿ–ತಪ್ಪು ರೂಪಗಳು.

(೧೨) ಹೊ.ಗ.ದಲ್ಲಿ ಇ/ಉ/ಎ ಅಂತ್ಯವಾದ ಧಾತು ಬರೆಹದಲ್ಲಿ ಸಾಮಾನ್ಯವಾಗಿ ಪಡೆಯುವ ನಪ್ ಭೂತಕಾಲದ ಪೂರ್ಣಕ್ರಿಯೆ/ಕೃನ್ನಾಮದ–ದುದು/–ತುದು ಸಹಿತರೂಪವೇ ಆಡುಮಾತಿನಲ್ಲಿಯೂ ಇರುವುದೆನ್ನುವಂತಿಲ್ಲ, ಆಡುಮಾತಿನಲ್ಲಿ –ದದ್ದು ಸೇರಿದ ರೂಪ ಬರುತ್ತದೆ. ಮಾತಿನ ರೂಪವನ್ನು ಬರೆಹದಲ್ಲಿ ತಾರದಿರುವುದು ಒಳ್ಳೆಯದು.

ಕ್ರಮವಾಗಿ ಮಾತು–ಬರೆಹದ ರೂಪಗಳು : ತಿಳಿದದ್ದು–ತಿಳಿದುದು, ತಿಂದದ್ದು–ತಿಂದುದು, ಎಸೆದದ್ದು–ಎಸೆದುದು. ಹೀಗೆಯೇ ಬಡಿ, ಕಡಿ, ಸುರಿ, ಕುಣಿ (ಇಕಾರಾಂತ), ಎನ್ನು, ಬರು, ಆಗು, ಹೋಗು (ಉಕಾರಾಂತ), ನಡೆ, ಎಳೆ, ಬೆಳೆ, ಹೊಸೆ (ಎಕಾರಾಂತ) ಧಾತುಗಳಲ್ಲಿ ಸಹ.

(೧೩) ಧಾತ್ವಂತದಲ್ಲಿ ಇಕಾರಾಗಮವಾಗುವ ಕೆಲವು ಉಕಾರಾಂತ ಧಾತುಗಳಲ್ಲಿ,

ಅವು ನಪ್ ಭೂತಕಾಲದ ಪೂರ್ಣಕ್ರಿಯೆ/ಕೃನ್ನಾಮಗಳಾಗುವಲ್ಲಿ -ದುದು >ದ್ದು ಆಗಿ ಮಾತಿನಲ್ಲಿ ಪರಿವರ್ತಿಸುತ್ತದೆ.

ಕ್ರಮವಾಗಿ ಮಾತು–ಬರಹದ ರೂಪಗಳು : ನೋಡಿದ್ದು–ನೋಡಿದುದು, ಕೇಳಿದ್ದು–ಕೇಳಿದುದು, ಕೆಮ್ಮಿದ್ದು–ಕೆಮ್ಮಿದುದು.

ಆದರೆ, ಕೆಲವು ವಿಶೇಷ ಸಂದರ್ಭಗಳಲ್ಲಿ, ಇ/ಉ ಕಾರಾಂತಗಳಾದ ಧಾತುಗಳ ರೂಪದಲ್ಲಿ ಉಚಿತವ್ಯತ್ಯಾಸಗಳೊಂದಿಗೆ –ತದ್ದು/–ದ್ದು ಸೇರಿದ ರೂಪ ಆಡುಮಾತಿನಲ್ಲಿ ಬರುತ್ತದೆ.

ಕ್ರಮವಾಗಿ ಕಲಿತದ್ದು–ಕಲಿತುದು, ನಕ್ಕದ್ದು–ನಕ್ಕುದು, ಉಂಡದ್ದು–ಉಂಡುದು. ಕಂಡದ್ದು–ಕಂಡುದು, ಸೋತದ್ದು–ಸೋತುದು. ಹೀಗೆಯೇ ಅರಿ, ಬಲಿ, ಮಿಗು, ತಗು ಇ. ಧಾತುಗಳಲ್ಲಿ ಸಹ.

(೧೬) ಸಂಯುಕ್ತಧಾತುಗಳಲ್ಲಿ ಕೊಳ್ಳು ಉತ್ತರಪದವಾಗಿ ಬಂದಾಗ, ಆ ಪದದ ಆದ್ಯಕ್ಷರವನ್ನು ದ್ವಿತ್ವಗೊಳಿಸುವುದು ಮಾತಿನ ರೂಢಿಯಲ್ಲಿದೆ. ಇದು ಸರಿಯಲ್ಲ.

ಕ್ರಮವಾಗಿ ತಪ್ಪು ಮತ್ತು ಸರಿ ರೂಪಗಳು : ಎತ್ತಿಕ್ಕೊಂಡು–ಎತ್ತಿಕೊಂಡು, ತೆಗೆದುಕ್ಕೊಂಡು–ತೆಗೆದುಕೊಂಡು. ನಡೆದುಕ್ಕೊಂಡು–ನಡೆದುಕೊಂಡು, ಬರೆದುಕ್ಕೊಂಡು_ಬರೆದುಕೊಂಡು.

'ಚಂದಮಾಮ' ಮಕ್ಕಳ ಮಾಸಪತ್ರಿಕೆಯಲ್ಲಿ ಆಳಿಕೊಂಡಿರು, ಕಲೆತುಕೊಂಡು, ನಿರೀಕ್ಷಿಸಿಕೊಂಡಿರು, ಪ್ರೇಮಿಸಿಕೊಂಡಿರು ಎಂಬಂತಹ ಪ್ರಯೋಗಗಳು ಮೇಲಿಂದ ಮೇಲೆ ಕಾಣಿಸುತ್ತವೆ, ಇದಕ್ಕೆ ತೆಲುಗಿನ ಪ್ರಭಾವವಿರುವಂತೆ ತೋರುತ್ತದೆ. ಇಲ್ಲಿ ಕ್ರಮವಾಗಿ ಆಳುತ್ತಿರು, ಕಲೆತು, ನಿರೀಕ್ಷಿಸುತ್ತಿರು, ಪ್ರೇಮಿಸು ಎಂಬಂತೆ ರೂಪಗಳಿರುವುದು ಸಹಜವಾದ ರೀತಿ.

(೧೭) 'ಕುರಿತು' ಶಬ್ದದ ಪ್ರಯೋಗವಿಚಾರ : ಕುರಿ (< ಕುಱಿ) ಸಕರ್ಮಕಧಾತು. ಇದಕ್ಕೆ ನೇರವಾಗಿ ಕಾಲವಾಚಕ ಪುರುಷವಾಚಕ ಪ್ರತ್ಯಯಗಳು ಸೇರಿ ಕ್ರಿಯಾಪದವಾಗುವುದು ಹೊ.ಗ.ದಲ್ಲಿ ವಿರಳವಾದ್ದು. ಈ ಧಾತು ಪೂರ್ಣಕ್ರಿಯಾಪದವೊಂದರ ವಿಶೇಷಣವಾಗಿ, ಸಾಪೇಕ್ಷಕ್ರಿಯಾಪದವಾಗಿ, ಕುರಿತು ಎಂಬ ಭೂತನ್ಯೂನರೂಪದಲ್ಲಿ (ಕುರಿ+ತು) ಪ್ರಯೋಗವಾಗುವುದೇ ಹೆಚ್ಚು (ಹೋಲಿಸಿ : ಧಾ. ಅರಿ + ತು = ಅರಿತು, ಕಲಿ + ತು = ಕಲಿತು). ಹೀಗೆ ಬಂದಾಗ, ಸಕರ್ಮಕಧಾತುವಾದುದರಿಂದ, ಅದು ಕರ್ಮಪದವನ್ನು ಅಪೇಕ್ಷಿಸುತ್ತದೆ. ಈ ಕರ್ಮಪದ ಸಹಜವಾಗಿಯೇ ದ್ವಿತೀಯಾವಿಭಕ್ತಿಯಲ್ಲಿರುತ್ತದೆ.

ಉದಾ. ಅದ್ವೈತತತ್ತ್ವವನ್ನು ಕುರಿತು ವಿಚಾರಮಾಡು ; ಸಾಗರವಿಜ್ಞಾನವನ್ನು ಕುರಿತು ಪುಸ್ತಕವನ್ನು ರಚಿಸು ; ಆಗ ಹೇಳಿದ್ದನ್ನು ಕುರಿತು ಆಲೋಚಿಸು ; ಸಾವನ್ನು ಕುರಿತು ಮಾತಾಡುವುದು ಬೇಡ. ನಪ್ ಪ್ರಕೃತಿಗಳಾದುದರಿಂದ ದ್ವಿ.ವಿ. ಪ್ರತ್ಯಯವನ್ನು ಬಳಸದೆಯೂ ಈ ವಾಕ್ಯಗಳಿರಬಹುದು : ಅದ್ವೈತತತ್ತ್ವ ಕುರಿತು ವಿಚಾರಮಾಡು ಇ.

ಕರ್ಮಪದವಾಗಿ ಬರುವ ಶಬ್ದವನ್ನು ಷಷ್ಠೀವಿಭಕ್ತ್ಯಂತವಾಗಿ ಇರಿಸುವುದು ಈಚೆಗೆ

ರೂಢಿಯಲ್ಲಿ ಪ್ರಬಲವಾಗುತ್ತಿದೆ. ಇದು ಸರಿಯಲ್ಲ. ಉದಾ : ಅದ್ವೈತತತ್ತ್ವದ ಕುರಿತು, ಸಾಗರವಿಜ್ಞಾನದ ಕುರಿತು, ಆಗ ಹೇಳಿದುದರ ಕುರಿತು, ಸಾವಿನ ಕುರಿತು.

ಭೂತ ಭವಿಷ್ಯತ್ ಕೃದಂತಗಳ ಮುಂದೆ ಕುರಿತು ಬಳಸುವುದು ಸಹ ಈಗ ರೂಢಿಯಲ್ಲಿ ಹೆಚ್ಚುತ್ತಿದೆ. ಇದು ಕೂಡ ಸರಿಯಲ್ಲ. ಉದಾ : ನೋಡಿದ ಕುರಿತು, ನೀಡುವ ಕುರಿತು, ತಡೆಯುವ ಕುರಿತು, ಕಲಿಯುವ ಕುರಿತು. ಇಲ್ಲೆಲ್ಲ ದ್ವಿ.ವಿ.ಯಲ್ಲಿರುವ ಕೃನ್ನಾಮರೂಪಗಳನ್ನು ಕರ್ಮಪದಗಳನ್ನಾಗಿ ಬಳಸಬೇಕು : ನೋಡಿದುದನ್ನು ಕುರಿತು, ನೀಡುವುದನ್ನು ಕುರಿತು, ತಡೆಯುವುದನ್ನು ಕುರಿತು, ಕಲಿಯುವುದನ್ನು ಕುರಿತು.

ನಿರ್ದೇಶನಾರ್ಥಕ ಸರ್ವನಾಮಗಳ ಮುಂದೆ ಕುರಿತು ಬಳಸುವುದು ಕೂಡ ಹೀಗೆಯೇ ಸರಿಯಲ್ಲ. ಈ ಸರ್ವನಾಮಗಳು ಪ್ರ.ವಿ.ಯಲ್ಲಿರುವುದರಿಂದಾಗಿ (ಈ ಕುರಿತು, ಆ ಕುರಿತು). ದ್ವಿ.ವಿ.ಯಲ್ಲಿರುವ ಸರ್ವನಾಮ ಶಬ್ದಗಳನ್ನು ಕರ್ಮಪದಗಳನ್ನಾಗಿ (ಇದನ್ನು ಕುರಿತು, ಅದನ್ನು ಕುರಿತು) ಬಳಸುವುದು ಸರಿಯಾದ ಕ್ರಮ.

(೧೮) ಒಟ್ಟಾಗಿ ಜೋಡಿ ಕ್ರಿಯಾಪದಗಳು ನ್ಯೂನರೂಪಗಳಲ್ಲಿ ಬಳಕೆಯಾಗುವಾಗ ಮೊದಲ ನ್ಯೂನರೂಪವನ್ನು ಅನುಸರಿಸಿ, ತಪ್ಪುರೂಪವನ್ನು ಎರಡನೆಯದಕ್ಕೆ ಬಳಸಲಾಗುತ್ತದೆ.

ಉದಾ.ಗೆ ತಪ್ಪು–ಸರಿ ರೂಪಗಳು : ಅವನಿಗೆ ಹೊಡೆದು ಬಡೆದು ಬುದ್ಧಿ ಹೇಳಿದರು–ಅವನಿಗೆ ಹೊಡೆದು ಬಡಿದು ಬುದ್ಧಿ ಹೇಳಿದರು.

(೧೯) ಸ್ವರಸಾಮ್ಯವಿಧಿಯನುಸಾರವಾಗಿ ವೀಪ್ಸಾರೂಪಗಳಲ್ಲಿ ಸಾಧುರೂಪಗಳನ್ನು ತಪ್ಪಾಗಿ ಆಡುಮಾತಿನಲ್ಲಿ ಬಳಸುವುದುಂಟು.

ಉದಾ.ಗೆ ತಪ್ಪು–ಸರಿ ರೂಪಗಳು : ನೆಡೆದು ನೆಡೆದು ಕಾಲು ಸೋತಿತು–ನಡೆದು ನಡೆದು ಕಾಲು ಸೋತಿತು.

(೨೦) ಹೊ.ಗ.ದಲ್ಲಿ ಮ.ಪು.ಬ.ವ.ದ ವಿಧಿರೂಪ ಹೇಗಿರುತ್ತದೆ ? : ಇ/ಎ ಅಂತ್ಯವಾದ ಧಾತುಗಳಿಗೆ ಇರಿ ಪುರುಷವಾಚಕ ಪ್ರತ್ಯಯವು ಸೇರುತ್ತದೆ (ತಿಳಿಯಿರಿ, ಹೊಡೆಯಿರಿ). ಉಕಾರಾಂತಗಳಿಗೆ ಇರಿ ಜೊತೆಗೆ ಇ ಸಹ ಉಂಟು (ನಿಲ್ಲಿರಿ/ನಿಲ್ಲಿ ; ಉತ್ತರಿಸಿರಿ/ಉತ್ತರಿಸಿ).

ಹ.ಗ.ದ ಮ.ಪು. ಬ.ವ.ದ ವಿಧಿರೂಪಗಳಿಗೆ ಕಾರಣವಾದ ಇವಮ್ ಪ್ರತ್ಯಯದಲ್ಲಿ ಅಂತ್ಯಾನುನಾಸಿಕವು ಲುಪ್ತವಾಗಿ ಉಳಿದುಕೊಂಡ ನ.ಗ. ವಿಧಿರೂಪಗಳಿಗೆ ಮ.ಪು., ಬ.ವ.ದ ಪುರುಷವಾಚಕಪ್ರತ್ಯಯ ಸ್ವರಾಂತಗೊಂಡು (ಇರ್ > ಇರಿ) ಹೀಗೆ ಆಗಿರಬಹುದೇ ? (ತಿಳಿಯಿವಮ್ > ತಿಳಿಯಿ + ಇರಿ = ತಿಳಿಯಿರಿ ; ನಿಲ್ಲಿವಮ್ > ನಿಲ್ಲಿ + ಇರಿ = ನಿಲ್ಲಿರಿ). ಇದಕ್ಕೆ ಮುಂದೆ, ಉಕಾರಾಂತಗಳಲ್ಲಿ ರಿ ಲುಪ್ತಗೊಂಡ ರೂಪಗಳು ಪ್ರಚುರವಾಗಿರಬಹುದು. (ಕೇಳಿರಿ > ಕೇಳಿ ; ಉತ್ತರಿಸಿರಿ > ಉತ್ತರಿಸಿ).

ಹೀಗಲ್ಲವಾದರೆ, ಹೊ.ಗ.ದಲ್ಲಿ ಇ/ಉ/ಎ ಕಾರಾಂತ ಧಾತುಗಳಿಗೆ ನೇರವಾಗಿ ಮ.ಪು. ಬ.ವ. ದ 'ಇರಿ' (< ಇರ್) ನೇರವಾಗಿ ಹತ್ತಿ ಇಂತಹ ವಿಧಿರೂಪಗಳಾಗಿರಬಹುದೇ ? (ತಿಳಿ > ತಿಳಿಯಿರಿ, ನಡೆ > ನಡೆಯಿರಿ, ಕೇಳು > ಕೇಳಿರಿ). ಉಕಾರಾಂತಗಳ ಮಟ್ಟಿಗೆ

ಎ ಕಾರ ಲುಪ್ತ ರೂಪಗಳು ರೂಢವಾಗಿರಬಹುದೇ ?

ಕ್ರಮವಾಗಿ ವಿಕಲ್ಪ–ಸಾಧು ರೂಪಗಳು : ಕೇಳಿ–ಕೇಳಿರಿ, ಹೇಳಿ–ಹೇಳಿರಿ, ಉತ್ತರಿಸಿ–ಉತ್ತರಿಸಿರಿ, ತೊಲಗಿ–ತೊಲಗಿರಿ.

(೨೧) ಬರು, ತರು ಧಾತುಗಳ ಆದಿಸ್ವರ ದೀರ್ಘವಾಗಿ ನಿಷೇಧಾರ್ಥಕರೂಪಗಳು ರಚಿತವಾಗುವುವು. ಹಾಗಲ್ಲದೆ ಹ್ರಸ್ವವಾಗಿಯೇ ಇಟ್ಟುಕೊಂಡು ಅಂತಹ ರೂಪಗಳಾಗುವುದು ಈಗ ರೂಢಿ. ಇದು ಸರಿಯಲ್ಲ.

ಕ್ರಮವಾಗಿ ತಪ್ಪು ಮತ್ತು ಸರಿ ರೂಪಗಳು : ತರನು/ತರಳು/ತರದು–ತಾರನು, ತಾರಳು, ತಾರದು : ಬರನು/ಬರಳು/ಬರದು–ಬಾರನು/ಬಾರಳು/ಬಾರದು.

(೨೨) ವರ್ತಮಾನ ಕಾಲದ ಮತ್ತು ಭವಿಷ್ಯತ್ಕಾಲದ ನ್ಯೂನರೂಪಗಳನ್ನು ರಚಿಸುವಾಗ ಧಾತು + ಉತ್ತ/ಉತ್ತಾ ಎಂಬ ರಚನೆ ಸಾಮಾನ್ಯ. ಭಾವವ್ಯಂಜಕವಾದ ಆಡು ಮಾತಿನ ಉತ್ತಾ ಅಂತ್ಯವಾದ ರೂಪಗಳಿಗಿಂತ (ಅಳುತ್ತಾ ಬಂದೆವು, ನಗುತ್ತಾ ಹೊರಡುವೆವು). ಉತ್ತ ಅಂತ್ಯವಾದ ರೂಪಗಳೇ (ಅಳುತ್ತ ಬಂದೆವು, ನಗುತ್ತ ಹೊರಡುವೆವು) ವೈಯಾಕರಣಮಾನ್ಯ ಪಾರಂಪರಿಕ ರೂಪಗಳೆಂದು ತಿಳಿದಿರಬೇಕು.

(೨೩) ಹೊರತು (<ಪೊಱತು) ನಾಮಪದ (ಹೊರ + ತು). ಆದ್ದರಿಂದ "ನಿನ್ನ ಹೊರತು ಬೇರೆಯವರು ಮಾಡಲಾರರು" ಎಂಬ ಪ್ರಚಲಿತರೂಪ "ನೀನು ಹೊರತು (ಹೊರತಾಗಿ) ಬೇರೆಯವರು ಮಾಡಲಾರರು" ಎಂದಿರುವುದು ಮೇಲು. 'ನಿನ್ನ ಹೊರತು. ಎಂಬುದು ಬಹುಶಃ "ನಿನ್ನನ್ನು ಹೊರತುಪಡಿಸಿ" ಎಂಬುದರ ಸಂಕ್ಷಿಪ್ತರೂಪವಿರಬೇಕು'

## ೧೨. ಸಮುಚ್ಚಯಗಳು

(೧) ಪ್ರಕಾರವಾಚಕಗಳಾದ ಹಾಗೂ ಹೀಗೂ ಹೇಗೂ ಎಂಬುವನ್ನು (ಹಾಗೂ ಸಮುಚ್ಚಯಾರ್ಥಕವೂ ಹೌದು) ಉತ್ತರ ಕರ್ನಾಟಕದ ಕಡೆಯ ಬರವಣಿಗೆಯಲ್ಲಿ ವೈಕಲ್ಪಿಕವಾಗಿ ಹಾಗು, ಹೀಗು, ಹೇಗು ಎಂಬುದಾಗಿ ಬರೆಯುವ ರೂಢಿಯಿದೆ. ಇದನ್ನು ಹಾಗೂ/ಹಾಗು ಜೋಡಿಯಲ್ಲಿ ಹೆಚ್ಚಾಗಿ ಕಾಣಬಹುದು. ದಕ್ಷಿಣ ಕರ್ನಾಟಕದ ಕಡೆಯ ಬರವಣಿಗೆಯಲ್ಲಿ ಸಹ ಈಚೀಚೆಗೆ ಇದು ಕಾಣಿಸಿಕೊಳ್ಳುತ್ತಿದೆ. ಇದು ಸಮರ್ಥನೀಯವಲ್ಲ.

ಹ.ಗ.ದ ಉಂ > ಹೊ.ಗ.ದ ಊ ಸಮುಚ್ಚಯ ಪ್ರತ್ಯಯ ಆಗಿದೆ. ಹೊ.ಗ.ದ ಸಂದರ್ಭದಲ್ಲಿ ಎಲ್ಲಿಯೂ ಊ > ಉ ಆಗಿಲ್ಲ] (ಅವನೂ ಇವನೂ; ರಾಮನೂ ಲಕ್ಷ್ಮಣನೂ; ಅದೂ ಇದೂ; ಅವಳೂ ಇವಳೂ ಇ.). ಆದುದರಿಂದ ಪ್ರಕಾರವಾಚಕಗಳಾದ ಹಾಗೆ ಹೀಗೆ ಹೇಗೆ ಎಂಬುವು ಕ್ರಮವಾಗಿ ಹಾಗೆ + ಊ = ಹಾಗೂ, ಹೀಗೆ + ಊ = ಹೀಗೂ, ಹೇಗೆ + ಊ = ಹೇಗೂ ಎಂಬುದಾಗಿ ಲೋಪಸಂಧಿಕಾರ್ಯದೊಂದಿಗೆ ಸಮುಚ್ಚಯಸಹಿತ ರೂಪಗಳಾಗಬೇಕೆಂದು ತಿಳಿಯಬೇಕಾಗಿದೆ. ಇವು ಈ ವಿಧದಲ್ಲಿಯೇ ಬಳಕೆಯಾಗತಕ್ಕವು. ಹಾಗು, ಹೀಗು, ಹೇಗು ಎಂಬುದಾಗಿ ಸಂಕ್ಷೇಪಗೊಳ್ಳುವ ಪಕ್ಷದಲ್ಲಿ, ಇವು ಸಮುಚ್ಚಯರಹಿತ ಅಂತು, ಇಂತು, ಎಂತು ಎಂಬುದಾಗಿರುವ ಪ್ರಕಾರವಾಚಕ

ಗಳೊಂದಿಗೆ ಸಮೀಕೃತಗೊಳ್ಳುವಂತಾಗುತ್ತದೆ. ಇದು ಸರಿಯಾಗದು. ಅಂತು ಇಂತು ಎಂತುಗಳಿಗೆ ಸಮುಚ್ಚಯದ ಊ ಸೇರಿ ಅಂತೂ ಇಂತೂ ಎಂತೂ ಎಂಬುದಾಗಿ ರೂಪಗಳ ವ್ಯವಸ್ಥೆಯಾಗುತ್ತದೆ. ಹಾಗೆ–ಹೀಗೆ, ಅಂತು–ಇಂತು ಇವುಗಳಿಗೂ ಹಾಗೂ–ಹೀಗೂ ಅಂತೂ–ಇಂತೂ ಇವುಗಳಿಗೂ ಇರುವ ಪರಸ್ಪರ ಅರ್ಥಭೇದವನ್ನು ಗಮನಿಸಬೇಕು.

(೨) ಸಮುಚ್ಚಯ ಪ್ರತ್ಯಯಗಳನ್ನು ಅನಾವಶ್ಯಕವಾಗಿ ಸೇರಿಸುವ ಒಂದು ದೌರ್ಬಲ್ಯ ಆಡುಮಾತು ಬರೆಹ ಎರಡರಲ್ಲಿಯೂ ಉಂಟು. ಒಂದು ಶಬ್ದಕ್ಕೆ ಒಂದೇ ಸಮುಚ್ಚಯ ಸಾಕಾಗುತ್ತದೆ. ಇದು ಭಾವವ್ಯಂಜನೆಯನ್ನು ತೀವ್ರಗೊಳಿಸುವ ಪ್ರಯತ್ನವೆನ್ನುವುದು ವಿದಿತ.

ಕ್ರಮವಾಗಿ ತಪ್ಪು ಮತ್ತು ಸರಿ ರೂಪಗಳು : ಅವನೂನೂ/ಅವನೂನೂವೆ/ಅವನೂನೂವೇ / ಅವನೂನೂವೇಯೆ / ಅವನೂನೂವೇಯೇ / ಅವನೂನೇ–ಅವನೂ ; ಆದರೂನೂ/ಆದರೂನೂವೆ/ಆದರೂನೂವೇ–ಆದರೂ ; ಇದ್ದರೂ ಕೂಡ/ಇದ್ದರೂನೂ ಕೂಡ–ಇದ್ದರೂ ; ತಿಳಿದಿದ್ದರೂ ಸಹ–ತಿಳಿದಿದ್ದರೂ ; ಎಳೆದರೂ ಸಹ–ಎಳೆದರೂ ; ನೀನೂ ಕೂಡ–ನೀನೂ ; ನೀನೂ ಸಹ–ನೀನೂ (ಇವನ್ನು ನೀನು ಕೂಡ, ನೀನು ಸಹ ಎಂದು ಬೇಕಾದರೆ ಬಳಸಬಹುದು); ಅವನಿಗೂ ಮತ್ತು ನನಗೂ–ಅವನಿಗೂ ನನಗೂ.

(೩) ಆಗು ಧಾತುವಿನ ಸಂಬಂಧವಾಗಿ ಮಾಡುವ ಸಮುಚ್ಚಯಾರ್ಥದ ರೂಪಗಳಲ್ಲಿ ಆದಾಗ್ಗ್ಯೂ–ಆದಾಗ್ಯೂ-ಆದಾಗ್ಗೂ ಎಂಬ ರೂಪಗಳುಂಟು. ಇಲ್ಲಿ ಆದುದಾಗಿಯೂ (ಆದುದು + ಆಗಿ + ಊ)/ಆದ್ದಾಗಿಯೂ/ಆದಾಗಿಯೂ/ಆದಾಗ್ಗೂ ಎಂಬುದು ಬೆಳವಣಿಗೆ. ಸಾಧ್ಯವಿದ್ದಮಟ್ಟಿಗೆ ಗ್ಗ>ಗ್ಯ ಆಗಿ ಉಚ್ಚರಿಸುವುದನ್ನು ನಿವಾರಿಸಬೇಕು. ತ್ವರಿತೋಚ್ಚಾರದಿಂದ ಗ್ಗಿಯೂ>ಗ್ಯೂ ಆಗುತ್ತದೆ. ಆದರೆ ಈಗ್ಗಿಯೂ>ಈಗ್ಗೂ, ಆಗ್ಗಿಯೂ>ಆಗ್ಗೂ ಎಂಬ ರಚನೆಯನ್ನು ಗಮನಿಸಿದರೆ, ರೂಢಿಗೆ ಆದಾಗಿಯೂ> ಆದಾಗ್ಗೂ ಉಪಾದೇಯವೆನ್ನಬೇಕು.

(೪) ಸಮುಚ್ಚಯಗಳಲ್ಲಿ, 'ಹಾಗೂ' ಬಳಸುವುದಕ್ಕಿಂತ ಆಧಿಕ್ಯಾರ್ಥದ/ಪುನರರ್ಥದ 'ಮತ್ತು' (<ಮತ್ತಂ/ಮತ್ತೆ) ಬಳಸುವುದು ಹೆಚ್ಚು ಸೂಕ್ತ. ಇದಕ್ಕಿಂತ ಊ ಪ್ರತ್ಯಯವನ್ನು ಸೇರಿಸಿದ ರೂಪಗಳನ್ನು ಸಿದ್ಧಮಾಡುವುದು ಇನ್ನೂ ಮೇಲು ; ಇಲ್ಲವೆ ವಿರಾಮ ಚಿಹ್ನೆಗಳ ಮೂಲಕ ನಿಲುಗಡೆಗಳನ್ನು ತರುವುದೂ ಆಗಬಹುದು.

ಉದಾ : (೧) ಆ ಬೆಟ್ಟದ ಎತ್ತರ ಹಾಗೂ ಕಡಿದು ತಿಳಿಯುವುದು ಕಷ್ಟ/ಆ ಬೆಟ್ಟದ ಎತ್ತರ ಮತ್ತು ಕಡಿದು ತಿಳಿಯುವುದು ಕಷ್ಟ/ಆ ಬೆಟ್ಟದ ಎತ್ತರವೂ ಕಡಿದೂ ತಿಳಿಯುವುದು ಕಷ್ಟ/ಆ ಬೆಟ್ಟದ ಎತ್ತರ, ಕಡಿದು ತಿಳಿಯುವುದು ಕಷ್ಟ : ಇಲ್ಲಿ ಕೊನೆಯ ಎರಡು ವಿಕಲ್ಪಗಳು ಹಿತವಾದ ರಚನೆಗಳು. (೨) ಇಳಿಯುವಾಗ ಮತ್ತು ಹತ್ತುವಾಗ ನಿಮ್ಮ ಜೊತೆಯಲ್ಲಿ ತಂದಿರುವ ಸಾಮಾನುಗಳನ್ನು ಪರೀಕ್ಷಿಸಿಕೊಳ್ಳಿ/ಇಳಿಯುವಾಗಲೂ ಹತ್ತುವಾಗಲೂ.../ಇಳಿಯುವಾಗ, ಹತ್ತುವಾಗ...: ಇಲ್ಲಿಯೂ ಕೊನೆಯ ಎರಡು ವಿಕಲ್ಪಗಳೇ ಹಿತವಾದವು.

(೫) ಸಮುಚ್ಚಯದ ಊ ಕಾರವನ್ನು ಹ್ರಸ್ವಗೊಳಿಸುವ ಪ್ರವೃತ್ತಿ ಪ್ರಕಾರವಾಚಕಗಳಲ್ಲಿ ಮಾತ್ರವೇ ಅಲ್ಲದೆ. ಇತರತ್ರವೂ ಉಂಟು. ಇದು ತಪ್ಪು.

ಎಲ್ಲಾ ಕಾಲಕ್ಕೆ/ಕಾಲಕ್ಕೂ—ಎಲ್ಲಾ ಕಾಲಕ್ಕು : ದೊಡ್ಡವರಿಗೆ/ದೊಡ್ಡವರಿಗೂ—ದೊಡ್ಡವರಿಗು : ಅವನಿಗು : ಇವನಿಗು.

(೬) ವರೆಗೆ + ಊ = ವರೆಗೂ ಆಗಬೇಕಲ್ಲದೆ ವರೆವಿಗೂ ಆಗಬೇಕಾಗಿಲ್ಲ ; ವರಿವಿಗೂ ಎಂಬ ರೂಪವೂ ಸರಿಯಲ್ಲ : ವರೆವಿಗೂನೂ, ವರೆಗೂನೂ ರೂಪಗಳು ಸಹ ಸರಿಯಲ್ಲ.

ಕ್ರಮವಾಗಿ ತಪ್ಪು—ಸರಿ ರೂಪಗಳು : ಅಲ್ಲಿಯ ವರೆವಿಗೆ/ವರಿವಿಗೆ—ಅಲ್ಲಿಯ ವರೆಗೆ/ಅಲ್ಲಿವರೆಗೆ : ಕಣಿವೆಯ ವರೆವಿಗೆ/ವರಿವಿಗೆ—ಕಣಿವೆಯ ವರೆಗೆ/ಕಣಿವೆವರೆಗೆ.

(೭) ಪರ್ಯಾಯ ಪಕ್ಷಾಂತರ ಮೊದಲಾದುವನ್ನು ಸೂಚಿಸುವ, 'ಇಲ್ಲವೆ' ಎಂಬ ಅರ್ಥವನ್ನುಳ್ಳ ಅವ್ಯಯವಾಗಿರುವ 'ಅಥವಾ' ಎಂಬುದನ್ನು ಸಹ ತಪ್ಪಾಗಿ ಬಳಸಬಹುದು.

ಉದಾ. ತಲೆಯನ್ನು ಅಥವಾ ಕೈಯನ್ನು ಕಿಟಕಿಯ ಹೊರಗೆ ಚಾಚಬೇಡಿ. ಈ ವಾಕ್ಯ ತಲೆಯನ್ನೂ ಕೈಯನ್ನೂ/ತಲೆಯನ್ನಾಗಲಿ ಕೈಯನ್ನಾಗಲಿ ಎನ್ನುವಂತಿರುವುದು ಸೂಕ್ತ. ಈಗ ಇರುವಂತೆ, ತಲೆಯನ್ನೋ ಕೈಯನ್ನೋ ಯಾವುದಾದರೂ ಒಂದನ್ನು ಮಾತ್ರ ಚಾಚಬಾರದು ಎಂಬ ಅರ್ಥ ಹೊರಡುವಂತೆ ತೋರುತ್ತದೆ. ದಿಟವಾಗಿ ಇಲ್ಲಿಗೆ ಬೇಕಾದ ಸಮುಚ್ಚಯ ಪರ್ಯಾಯ/ಪಕ್ಷಾಂತರದ ಆಶಯ ಕೊಡುವಂತಹುದಲ್ಲ (ಅಥವಾ); ಒಳಕೊಳ್ಳುವ/ಕೂಡುವ ಆಶಯ ಕೊಡುವಂತಹುದು (ಮತ್ತು).

(೮) ಭ್ರಮಾತ್ಮಕವಾಗಿ ಸಮುಚ್ಚಯವನ್ನು ಬಳಸುವುದು : ಸಹಪ್ರಯಾಣಿಕರು ಕೊಟ್ಟಂತಹ ತಿಂಡಿತಿನಿಸು ಹಾಗೂ ವಗೈರೆ ಪದಾರ್ಥಗಳನ್ನು ಉಪಯೋಗಿಸಬಾರದು. (ಒಂದು ಜಾಹಿರಾತು)—ಇಲ್ಲಿ 'ಹಾಗೂ' ಅನಾವಶ್ಯಕ.

## ೧೩. ಕೆಲವು ಅಪಪ್ರಯೋಗದ ವಾಕ್ಯಗಳು

ಈಗ ನಾವು ಭಾಷೆಯ ಮೂಲಕ ವ್ಯವಹಾರವನ್ನು ಕೈಕೊಳ್ಳುವಾಗ, ನಮ್ಮ ಹಿಂದಿನ ಕಾಲದ ಜನರ ಹಾಗೆ ಭಾಷೆಯ ಪ್ರಯೋಗದ ವಿಷಯದಲ್ಲಿ ಪರಿಷ್ಕಾರ ಪರಿಶುದ್ಧತೆಗಳ ಕಡೆಗೆ ಅಷ್ಟು ಲಕ್ಷ್ಯಕೊಡುವುದಿಲ್ಲ. ಲೇಖಕರು ಸಹ ಪ್ರಾದೇಶಿಕತೆ, ವಾಸ್ತವತೆಗಳ ಹೆಸರಿನಲ್ಲಿ ಶಿಷ್ಟಭಾಷೆಯ ಬಗೆಗೆ ಉದಾಸೀನತೆ ತೋರುವುದು ಸಾಮಾನ್ಯವಾಗಿದೆ. ಶಿಕ್ಷಣದಲ್ಲಿ ಭಾಷೆಯ ಕಲಿಕೆಯನ್ನು ಅಲಕ್ಷಿಸಿರುವುದು, ಕಾಗುಣಿತದ ಬಗೆಗೆ ಗಮನಕೊಡದಿರುವುದು, ಬರೆವಣಿಗೆ ಆಡುಮಾತುಗಳಲ್ಲಿ ಅಪಪ್ರಯೋಗಗಳು ಕಾಣಿಸಿಕೊಳ್ಳಲು ಮುಖ್ಯಕಾರಣಗಳಾಗಿವೆ. ಪ್ರಸ್ತುತ, ಒಂದು ಜನಪ್ರಿಯ ದಿನಪತ್ರಿಕೆಯಿಂದ ಕೆಲವು ವಾಕ್ಯಗಳನ್ನು ಉದ್ಧರಿಸಿ, ಅಲ್ಲಿ ದೋಷಗಳು ಹೇಗೆ ಹೊಕ್ಕಿವೆ ಎಂಬುದನ್ನು ತೋರಿಸಲಾಗಿದೆ. ಪ್ರಕಟನೆಯ ಕಾಲಾನುಕ್ರಮದಲ್ಲಿ ವಾಕ್ಯಗಳನ್ನು ಕೊಡಲಾಗುವುದು. ತಪ್ಪಾದ ಭಾಗಗಳ ಮಗ್ಗುಲಲ್ಲಿ, ಚೌಕಕಂಸದಲ್ಲಿ ಸರಿಯಾದ ರೂಪಗಳನ್ನು ಬರೆದಿದೆ.

(೧) ಕೊಲ್ಲಿಯುದ್ಧ ಶಂಕೆ : ಭಾರತೀಯರ [ಭಾರತೀಯರನ್ನು] ವಾಪಸ್ ಕರೆಸಿ

ಕೊಳ್ಳುವುದಿಲ್ಲ. (೨) ಕಡತಕ್ಕೆ ಸೇರಲೋಗ್ಯವಾಗಿಲ್ಲದ [ಸೇರಲು ಯೋಗ್ಯವಲ್ಲದ] ಭಾಷೆಯನ್ನು ಉಪಯೋಗಿಸುವುದು ಹೆಚ್ಚಾಗಿದೆ. (೩) ಈ ಪಕ್ಷ ಹಿನ್ನಡೆ ಸಾಧಿಸಿದೆ [ಅನುಭವಿಸಿದೆ] : ಇಲ್ಲಿ ಸಾಧನೆ ಒಂದು ಮೇಲಾದ ಗಳಿಕೆ ಎಂಬ ಕಾರಣದಿಂದ, ಆ ಪದ ಸೂಕ್ತವಲ್ಲ. (೪) ಇಂದು ಮುಂಜಾನೆ [ಬೆಳಗ್ಗೆ/ಪೂರ್ವಾಹ್ನ] ಹೊಸ ಮಂತ್ರಿಮಂಡಲದ ಸದಸ್ಯರು ಪ್ರಮಾಣವಚನ ಸ್ವೀಕರಿಸಿದರು : ಮುಂಜಾನೆಯೆಂದರೆ ಬೆಳಗಿನಜಾವ/ನಸುಕು ಎಂದರ್ಥ. (೫) ಇಂತಹ ದುಷ್ಟಶಕ್ತಿಗಳಿಗೆ ಮಂಗಳ ಹಾಡುವುದು [ಇತಿಶ್ರೀ ಮಾಡುವುದು] ಅತ್ಯವಶ್ಯ. ಇಲ್ಲಿ 'ಮಂಗಳ ಹಾಡುವುದು' ಶುಭದ ಸಂದರ್ಭಗಳಿಗೆ ಎಂಬುದರಿಂದ, ತಕ್ಕ ಮಾತಲ್ಲ. (೬) ಸೋವಿಯತ್ ಯೂನಿಯನ್‌ದಲ್ಲಿ [ಯೂನಿಯನ್ನಿನಲ್ಲಿ] ಗೊಂದಲ ಮಯಸ್ಥಿತಿ (ಟಿ.ವಿ. ಕನ್ನಡ,ಸುದ್ದಿ). (೭) ರಾಜ್ಯ ರಸ್ತೆಸಾರಿಗೆ ಪರಿಷ್ಕರಣೆ [ಪರಿಷ್ಕರಣ] ಇನ್ನು ಎರಡುವಾರಗಳಲ್ಲಿ (ಟಿ.ವಿ. ಕನ್ನಡ ಸುದ್ದಿ.). (೮) ಗಾಯಕಿರಾಗಲು [ಗಾಯಕಿಯರಾಗಲು] ಬಂದ ಬಾಲಕಿಯರು ಪೊಲೀಸ್ [ಪೋಲೀಸರ] ವಶದಲ್ಲಿ. (೯) ಜಾಹಿರಾತಿನ [ವಿಳಾಸದ] ಬೆನ್ನುಹತ್ತಿ. (೧೦) ಇವರನ್ನು ರೋಡ್‌ರೋಮಿಯೋ ಬೆನ್ನತ್ತಿದ್ದರು [ರೋಡ್ ರೋಮಿಯೋಗಳು ಬೆನ್ನುಹತ್ತಿದ್ದರು.].

(೧೧) ಚಲನಚಿತ್ರಸಂಪರ್ಕದ ಗುಂಗತ್ತಿದ [ಗುಂಗು ಹತ್ತಿದ] ಈ ಬಾಲಕಿಯರಿಗೆ (೧೨) ಎರಡು ಸಾವಿರ ರೂಪಾಯಿಯನ್ನು ಎಗುರಿಸಿದ [ಎಗರಿಸಿದ] ತನ್ನ ಮೂವರು ಸಹಪಾಟಿಯರೊಂದಿಗೆ [ಸಹಪಾಠಿಗಳೊಂದಿಗೆ]. (೧೩) ಎಲ್ಲರನ್ನು [ಎಲ್ಲರನ್ನೂ] ಗುಪ್ತಾಚಾರದಳ [ಗುಪ್ತಚರದಳ] ನಿರ್ದೇಶನಾಲಯದ ಆದೇಶದ ಮೇರೆಗೆ ಬಂಧಿಸಲಾಗಿದೆ. (೧೪) ಕನ್ಯಾಕುಮಾರಿಯಿಂದ ೪೦ ದಿನಗಳ ಹಿಂದೆ ಹೊರಟ ಏಕತಾಯಾತ್ರೆ ನಿನ್ನೆ ದೆಹಲಿ ತಲುಪಿದ್ದು ನಾಳೆ ಹರಿಯಾಣಕ್ಕೆ ನಿರ್ಗಮಿಸಲಿದೆ [ಆಗಮಿಸಲಿದೆ]. (೧೫) ಕಲಿಕಾಕೇಂದ್ರಗಳ [ಕಲಿಕೆಯ ಕೇಂದ್ರಗಳ] ಪುನರಾರಂಭಕ್ಕೆ ಮನವಿ. (೧೬) ನೇತಾಜಿ, ಮೌಲಾನಾ ಆಜಾದ್‌ಗೆ [ಆಜಾದರಿಗೆ] ಭಾರತರತ್ನ. (೧೭) ಸಂಪನ್ಮೂಲ ಕ್ರೋಢೀಕರಣಕ್ಕೆ [ಕ್ರೋಡೀಕರಣಕ್ಕೆ] ಕರೆ. (೧೮) ಕನ್ಯಾಕುಮಾರಿಯಲ್ಲಿ ಸ್ವಾತಂತ್ರ್ಯಕ್ಕಾಗಿ ಹುತಾತ್ಮರಾದವರ ಬಂಧುಗಳು ಹಸ್ತಾಂತರಿಸಿದ್ದ [ಸ್ವಾತಂತ್ರ್ಯಕ್ಕಾಗಿ ಹುತಾತ್ಮರಾದವರ ಬಂಧುಗಳು ಕನ್ಯಾಕುಮಾರಿಯಲ್ಲಿ ಹಸ್ತಾಂತರಿಸಿದ್ದ] ತ್ರಿವರ್ಣಧ್ವಜದ ಆರೋಹಣವನ್ನು ಅವರು ನೆರವೇರಿಸಿದರು. (೧೯) ಮಧ್ಯಂತರ [ಮಧ್ಯಾಂತರ] ತೀರ್ಪಿಗೆ ತಮಿಳ್ನಾಡು ಪಟ್ಟು. (೨೦) ಮತಾಂತರಗೊಂಡ ಮುಗ್ದೆಯರು [ಮುಗ್ಧೆಯರು].

(೨೧) ಗೋಯೆಂಕಾ ಪ್ರಶಸ್ತಿಪ್ರಧಾನ [ಪ್ರದಾನ] ಸಮಾರಂಭದ ಮುಂದೂಡಿಕೆ. (೨೨) ಪ್ರಶ್ನೆಗಳಿಗೆ ಬೇಗ ಉತ್ತರ ಬರದು [ಬರೆದು]. (೨೩) ಔಷಧೀಯಗುಣಗಳ ಬದ್ರಮುಸ್ತೆ [ಭದ್ರಮುಸ್ತೆ]. (೨೪) ಮಹಿಳೆಯರ ಸಲ್ವಾರ್ ಸೂಟುಗಳು ಮತ್ತು ಪುರಷರ ಷರ್ಟುಗಳು ಈಗ ಶೇಕಡಾ ೫೦ರಷ್ಟು ನಂಬಲಾಗದ ರಿಯಾಯತಿಯಲ್ಲಿ [ನಂಬಲಾಗದ ಶೇಕಡಾ ೫೦ರಷ್ಟು ರಿಯಾಯಿತಿಯಲ್ಲಿ]. (೨೫) ಶ್ರೀವಾಸ್ತವಗೆ [ಶ್ರೀವಾಸ್ತವರಿಗೆ/ಶ್ರೀವಾಸ್ತವ ಅವರಿಗೆ] ಷರತ್ತಿನ ಜಾಮೀನು.

# ಕನ್ನಡದಲ್ಲಿ ಕರ್ಮಣಿಪ್ರಯೋಗ

**ಗುರುಪ್ರಸಾದ ಕೆ. ಹೆಗಡೆ**

ಕನ್ನಡ, ತಮಿಳು, ತೆಲುಗು ಮತ್ತು ಮಲಯಾಳಂ ಭಾಷೆಗಳು ದಕ್ಷಿಣ ಭಾರತದಲ್ಲಿ ಪ್ರಚಲಿತವಿರುವ ದ್ರಾವಿಡ ಭಾಷೆಗಳಲ್ಲಿ ಪ್ರಮುಖವೆನಿಸಿವೆ. ಈ ನಾಲ್ಕೂ ಭಾಷೆಗಳಲ್ಲಿ ಕರ್ಮಣಿ ಪ್ರಯೋಗಗಳು ಕಾಣುತ್ತವೆಯಾದರೂ, ಇಲ್ಲೆಲ್ಲ ಈ ಪ್ರಯೋಗದ ಸಹಜತೆಯ ಪ್ರಶ್ನೆ ಪ್ರಾಚೀನ ಕಾಲದಿಂದಲೂ ಕಾಡುತ್ತ ಬಂದಿದೆ ಎನ್ನುವುದು ವ್ಯಾಕರಣಕೃತಿಗಳನ್ನು ಅನುಕ್ರಮವಾಗಿ ಗಮನಿಸಿದಾಗ, ಸ್ವಾಭಾವಿಕವಾಗಿ ಕಂಡಿದೆ. ಕನ್ನಡದ ಮಟ್ಟಿಗೆ ಹೇಳುವುದಾದರೆ, 'ಕವಿರಾಜಮಾರ್ಗ' ಎಲ್ಲಿಯೂ ಕನ್ನಡ ಕರ್ಮಣಿ ಪ್ರಯೋಗವನ್ನು 'ಪಡು' ಅನುಧಾತುವಿನೊಂದಿಗೆ ಬಳಸಿದ್ದು ಕಂಡುಬರುವುದಿಲ್ಲವಾದರೂ 'ನಿಜಜಾತಿಜನಿತ ಭಾಷೆಗಳೆಂದುಂ' (೧–೭), 'ನಿಗದಿತ ಕಾವ್ಯೋಕ್ತಿಗಳೊಳ್' (೨–೫೨), 'ಶ್ರೀವಿದಿತ ಅರ್ಥಾಲಂಕಾರಾವಳಿಯುಂ' (೩–೧) ಮುಂತಾದ ಅನೇಕ ಕಡೆಗಳಲ್ಲಿ 'ಜನಿತ', 'ನಿಗದಿತ', 'ವಿದಿತ' ಎಂದು ಮುಂತಾಗಿ ಸಂಸ್ಕೃತ ಕರ್ಮಣಿ ಪ್ರಯೋಗವನ್ನು ಬಳಸಿದ್ದಿದೆ. ಕವಿರಾಜಮಾರ್ಗವು ಕಾವ್ಯಲಕ್ಷಣಗ್ರಂಥವಾದರೂ ೧–೧೧೪ರಲ್ಲಿ ಕಾರಕಗಳ ಉಲ್ಲೇಖ ಮಾಡಿದೆ ; ಆದರೆ, ಪ್ರಯೋಗದ ಗೊಡವೆಗೆ ಎಲ್ಲಿಯೂ ಹೋಗಿಲ್ಲ. 'ಕಾವ್ಯಾವಲೋಕನ' ಹಾಗೂ 'ಕರ್ಣಾಟಕ ಭಾಷಾಭೂಷಣ'ಗಳನ್ನು ಸಮೀಕ್ಷಿಸಿದರೂ ಕರ್ಮಣಿ ಪ್ರಯೋಗದ ಬಗ್ಗೆ ಸ್ಪಷ್ಟವಾಗಿ ಏನನ್ನೂ ಹೇಳದ ಸ್ಥಿತಿಯನ್ನೇ ಗಮನಿಸಬಹುದು. 'ಭಾಷಾಭೂಷಣ'ದ 'ಕರ್ತೃಕರಣಯೋಃ ತೃತೀಯಾ' ಎನ್ನುವಲ್ಲಿ (ಸೂ. ೮೦) ಕರ್ತೃವಿಗೆ ಕರಣವಿವಕ್ಷೆಯಿದ್ದಲ್ಲಿ, ತೃತೀಯಾವಿಭಕ್ತಿ ಬರುತ್ತದೆಯೆಂದು ಹೇಳುತ್ತ, 'ಯಜ್ಞದತ್ತನಿಂ ಪೇಟಿಲ್ಪಟ್ಟುದು' ಎಂಬ ಉದಾಹರಣೆಯನ್ನು ಕೊಟ್ಟರೂ, ಕರ್ಮಣಿ ಪ್ರಯೋಗವನ್ನು ಕುರಿತು ಸ್ಪಷ್ಟವಾಗಿ ಏನನ್ನೂ ಹೇಳಿಲ್ಲ, ಆದರೆ ಹಲ್ಮಿಡಿ ಶಿಲಾಶಾಸನದಲ್ಲಿಯೇ (ಸು. ೪೫೦) 'ಪಶುಪತಿಯೆಂದು ಪೊಗೞ್ಪೆಪ್ಪೊಟ್ಟಣ' ಎನ್ನುವಲ್ಲಿ ಕರ್ಮಣಿ ಪ್ರಯೋಗವು ಬಂದದ್ದು ಕಂಡುಬರುತ್ತದೆ. 'ವಡ್ಡಾರಾಧನೆ'ಯಲ್ಲಿ (ಸು. ೯೨೦) ಬರುವ 'ಅರಸರ್ಕಳಿಂ ಪೂಜಿಸೆಪಡುವರ್', 'ನಿವೇದಿಸೆಪಟ್ಟೆಂ' ಮುಂತಾದ ಉಕ್ತಿಗಳು ಕರ್ಮಣಿಪ್ರಯೋಗದಲ್ಲಿರುವಂಥವು.

೧. ಪ್ರಯೋಗ ಎನ್ನುವುದು 'ಪ್ರ' ಉಪಸರ್ಗಯುಕ್ತವಾದ 'ಯುಜ್' ಧಾತುಸಾಧಿತ

ವಾದ ನಾಮಪದವಾಗಿದೆ : 'ಜೋಡಣೆ' ಎನ್ನುವುದು ಇದರ ಅರ್ಥ. ಈ ಶಬ್ದವನ್ನು ಮುಂದಿಟ್ಟುಕೊಂಡು ಬಂದ ಸಪ್ತಮೀವಿಭಕ್ತಿಯ ಏಕವಚನದ ಪ್ರತ್ಯಯಯುಕ್ತವಾದ 'ಕರ್ಮಣಿ' ಶಬ್ದವು, ಕ್ರಿಯಾಬೋಧಕವಾದ ಅರ್ಥವು ಕರ್ಮಪ್ರಾಧಾನ್ಯದ ಜೋಡಣೆಯಲ್ಲಿರುವುದನ್ನು ತೋರಿಸುತ್ತದೆ. 'ವಾನರರು ಸೇತುವೆಯನ್ನು ಕಟ್ಟಿದರು' ಎನ್ನುವ ಕರ್ತರಿಪ್ರಯೋಗದಲ್ಲಿ ಬರುವ ಕರ್ತೃಪ್ರಾಧಾನ್ಯವು "ವಾನರರಿಂದ ಸೇತುವೆಯು ಕಟ್ಟಲ್ಪಟ್ಟಿತು" ಎನ್ನುವಲ್ಲಿ ಕರ್ಮಪ್ರಾಧಾನ್ಯವಾಗಿ ಮಾರ್ಪಡುತ್ತದೆ. ಪ್ರಾಧಾನ್ಯವನ್ನು ತೋರಿಸುವುದು ಪ್ರಥಮಾವಿಭಕ್ತಿ. ಇದು ಇಲ್ಲಿಯ ಕರ್ತೃವಾಚಕ 'ವಾನರ' ಶಬ್ದದ ಮೇಲೆ ಬಂದಾಗ ಕರ್ತರಿಪ್ರಯೋಗವೆಂತಲೂ ಕರ್ಮವಾಚಕ 'ಸೇತುವೆ' ಶಬ್ದದ ಮೇಲೆ ಬಂದಾಗ ಕರ್ಮಣಿಪ್ರಯೋಗವೆಂತಲೂ ಭಾವಿಸಲಾಗುತ್ತದೆ. ಈ ಸಂಸ್ಕೃತ ಶಬ್ದಗಳನ್ನೇ ಇಟ್ಟುಕೊಂಡು, ಸಂಸ್ಕೃತವ್ಯಾಕರಣದ ಮಾರ್ಗದಲ್ಲಿ, ಕನ್ನಡದಲ್ಲಿ ವ್ಯವಹರಿಸಲ್ಪಡುವ ಈ ಪ್ರಯೋಗ ವಿಚಾರದ ವಿಷಯದಲ್ಲಿ, ಕೇವಲ ಕ್ರಿಯೆಯು ಪ್ರಧಾನವಾಗಿ ಬರುವ ಅಕರ್ಮಕಧಾತುವಿನ ಯೋಗದಲ್ಲಿಯ ಸಂಸ್ಕೃತದ ಭಾವೇಪ್ರಯೋಗವನ್ನು ತನ್ನಿಂದ ದೂರವಿಟ್ಟು ತನ್ನ ಸ್ವಂತಿಕೆಯನ್ನು ಕಾಯ್ದುಕೊಳ್ಳುವ ಕನ್ನಡದ ವೈಶಿಷ್ಟ್ಯವೂ ಗಮನಿಸಲ್ಪಡಬೇಕಾದ ಅಂಶವಾಗಿದೆ.

ದ್ರಾವಿಡಭಾಷೆಗಳಲ್ಲಿ ಮೂಲತಃ ಕರ್ತರಿ ಪ್ರಯೋಗವೊಂದೇ ಇರುತ್ತದೆ; ಆದರೆ, ಸಂಸ್ಕೃತದ ಪ್ರಭಾವದಿಂದ ಕರ್ಮಣಿ ಪ್ರಯೋಗವು ಬಳಕೆಯಲ್ಲಿ ಬಂದಿತು ಎಂದು ಮುಂತಾಗಿ ಪ್ರ. ಗೋ. ಕುಲಕರ್ಣಿಯವರು ತಮ್ಮ 'ಕನ್ನಡ ಭಾಷೆಯ ಚರಿತ್ರೆ'ಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದು ಗಮನಾರ್ಹವಾಗಿದೆ. 'ಕನ್ನಡ ಕೈಪಿಡಿ'ಯು ಕನ್ನಡದಲ್ಲಿ ಸಹಜವಾಗಿ ಕರ್ಮಣಿಪ್ರಯೋಗವಿಲ್ಲವೆನ್ನುವುದನ್ನು ನಮೂದಿಸಿ, ತಮಿಳಿನಲ್ಲಿ ಇದು ಹೆಚ್ಚಾಗಿ ಪ್ರಚಾರದಲ್ಲಿದ್ದು ಕನ್ನಡಕ್ಕೆ ಬಂದಿರಬಹುದು ಎಂದು ಹೇಳುತ್ತ ಈ ವಿಚಾರದಲ್ಲಿ ಸ್ವಲ್ಪ ಗೊಂದಲವನ್ನು ಉಂಟುಮಾಡುತ್ತದೆ ; ಏಕೆಂದರೆ, ಕರ್ಮಣಿ ಪ್ರಯೋಗವು ಸಂಸ್ಕೃತದಿಂದ ತಮಿಳಿಗೆ ಹೋಗಿ ತಮಿಳಿನಿಂದ ಕನ್ನಡಕ್ಕೆ ಬಂದಿರಬಹುದೆಂಬ ದ್ರಾವಿಡ ಪ್ರಾಣಾಯಾಮಕ್ಕೆ ಇಲ್ಲಿ ಆಸ್ಪದವುಂಟಾಗುತ್ತದೆ. ದ್ರಾವಿಡ ಭಾಷೆಗಳಲ್ಲೆಲ್ಲ ಸಂಸ್ಕೃತದಂತೆ ಕರ್ಮಣಿ ಪ್ರಯೋಗವು ಮೂಲತಃ ಇರಲಿಲ್ಲವೆನ್ನುವುದು ಕಾಲ್ಡವೆಲ್ ಅವರ ಖಚಿತ ಅಭಿಪ್ರಾಯವಾಗಿತ್ತು ಎಂದು ಹೇಳಲು ಅವರ

"The Dravidian Languages are indeed, destitute of passives properly so called..."

ಎನ್ನುವ ವಾಕ್ಯವನ್ನೂ ಕೆ. ರಾಮಕೃಷ್ಣಯ್ಯನವರು ತಮ್ಮ **'Dravidian Passive'** ಪ್ರಬಂಧದಲ್ಲಿ ಬರೆದ

**"It appears to be one of the forms developed in course of time to express the idea of the Sanskrit passive."**

ಎನ್ನುವ ವಾಕ್ಯವನ್ನೂ ಉದ್ಧರಿಸಿ ಧಾರವಾಡಕರರು ತಮ್ಮ 'ಕನ್ನಡ ಭಾಷಾಶಾಸ್ತ್ರ'ದಲ್ಲಿ ದ್ರಾವಿಡಭಾಷೆಗಳೆಲ್ಲವುಗಳ ಕರ್ಮಣಿ ಪ್ರಯೋಗಕ್ಕೆ ಮೂಲ ಸಂಸ್ಕೃತವೆನ್ನುವುದನ್ನು ಬಿಂಬಿಸಿದ್ದಾರೆ. ಈ ಮೂವರೂ 'ಪಡು' ಎನ್ನುವ ಧಾತು ಇಚ್ಛಿತ ಕ್ರಿಯಾವಾಚಕ ಧಾತುವಿನ ಮುಂದೆ ವಿಕರಣಪ್ರತ್ಯಯದ ಜೊತೆಯಲ್ಲಿ ದ್ರಾವಿಡಭಾಷೆಗಳಲ್ಲೆಲ್ಲ ಕರ್ಮಣಿ ಪ್ರಯೋಗದಲ್ಲಿ ಸಮಾನವಾಗಿ ಬರುವುದನ್ನು ಗುರುತಿಸಿದ್ದಾರೆ. ನಾಲ್ಕೂ ಪ್ರಮುಖ ದ್ರಾವಿಡಭಾಷೆಗಳಲ್ಲಿ ಕರ್ಮಣಿಪ್ರಯೋಗವು ಬರುವ ಈ ಕೆಳಗಿನ ಉದಾಹರಣೆಗಳನ್ನು ಗಮನಿಸಬಹುದು :

| | | |
|---|---|---|
| ಕನ್ನಡ : ನನ್ನಿಂದ ಪುಸ್ತಕವು ಓದಲ್ಪಡುತ್ತದೆ. | ತಮಿಳು | : ಎನ್ನಾಲ್ ಪುಸ್ತಕಂ ಪಡಿಕ್ಕಪ್ಪಡುಗಿಱದು |
| | ತೆಲುಗು | : ನಾ ಚೇತ ಪುಸ್ತಕಂ ಚದವಬಡುತುಂದಿ |
| | ಮಲಯಾಳ | : ಎನ್ನಾಲ್ ಪುಸ್ತಕಂ ಪಠಿಕ್ಕಪ್ಪಡುನ್ನು |
| ಕನ್ನಡ : ನನ್ನಿಂದ ಪುಸ್ತಕವು ಓದಲ್ಪಟ್ಟಿತು. | ತಮಿಳು | : ಎನ್ನಾಲ್ ಪುಸ್ತಕಂ ಪಡಿಕ್ಕಪ್ಪಟ್ಟದು |
| | ತೆಲುಗು | : ನಾ ಚೇತ ಪುಸ್ತಕಂ ಚದವಬಡಿಂದಿ |
| | ಮಲಯಾಳ | : ಎನ್ನಾಲ್ ಪುಸ್ತಕಂ ಪಠಿಕ್ಕಪ್ಪೆಟ್ಟು |
| ಕನ್ನಡ : ನನ್ನಿಂದ ನಾಟಕವು ನೋಡಲ್ಪಡುತ್ತದೆ. | ತಮಿಳು | : ಎನ್ನಾಲ್ ನಾಟಕಂ ಪಾರ್ಕ್ಕಪ್ಪಟ್ಟದು |
| | ತೆಲುಗು | : ನಾ ಚೇತ ನಾಟಕಂ ಚೂಡಬಡುತುಂ |
| | ಮಲಯಾಳ | : ಎನ್ನಾಲ್ ನಾಟಕಂ ಕಾಣಲ್ಪಡುನ್ನು |
| ಕನ್ನಡ : ನನ್ನಿಂದ ನಾಟಕವು ನೋಡಲ್ಪಟ್ಟಿತು. | ತಮಿಳು | : ಎನ್ನಾಲ್ ನಾಟಕಂ ಪಾರ್ಕಪಟ್ಟುದು |
| | ತೆಲುಗು | : ನಾ ಚೇತ ನಾಟಕಂ ಚೂಡಬಡಿಂದಿ |
| | ಮಲಯಾಳ | : ಎನ್ನಾಲ್ ನಾಟಕಂ ಕಾಣಲ್ಪೆಟ್ಟು |

ಇಲ್ಲೆಲ್ಲ ಅನುಧಾತು 'ಪಡು' ಬರುವುದಕ್ಕಿಂತ ಮೊದಲು 'ಎ'. 'ಅಲ್'. 'ಅ', 'ಉ' ಭಾವಲಕ್ಷಕ ಪ್ರತ್ಯಯಗಳಲ್ಲೊಂದು ವಿಕರಣಪ್ರತ್ಯಯವಾಗಿ ಬಂದದ್ದನ್ನು ಕಾಣಬಹುದು.

ಕೇಶಿರಾಜನು ತನ್ನ 'ಶಬ್ದಮಣಿದರ್ಪಣ'ದಲ್ಲಿ (ಸುಮಾರು ೧೨೬೦) "ತೃತೀಯೆ ಪೇೞಲ್ಪಡೆಗುಂ ಸಲೆ ಕರ್ತೃಕರಣಹೇತುಸ್ಥಿತಿಯೊಳ್" (ಸೂ. ೧೨೮) ಎಂದು ಹೇಳುವಲ್ಲಿ 'ಪೇೞಲ್ಪಡೆಗುಂ' ಶಬ್ದವನ್ನು ಸೂತ್ರದಲ್ಲಿಯೇ ಬಳಸಿ ವೃತ್ತಿಯಲ್ಲಿ "ಪದಕಮುಕ್ಕ ಸಾಲೆಯಿಂ ಮಾಡೆಪಟ್ಟುದು", "ಕಾವ್ಯಮೆನ್ನಿಂ ಪೇೞೆಪಟ್ಟುದು" ಅನ್ನುವ ಎರಡು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಈತ ತನ್ನ ಮೊದಲನೆಯ ಸೂತ್ರದಲ್ಲಿಯೇ 'ಪೇೞಲ್ಪಡೆಗುಂ' ಎಂದೂ ಹಾಗೂ ೧೧೦ನೆಯ ಸೂತ್ರದಲ್ಲಿ 'ಪ್ರಯೋಗಿಸೆಪಡೆಗುಂ' ಎಂದೂ ಸ್ವತಃ ಕರ್ಮಣಿ ಪ್ರಯೋಗದ ರಚನೆ ಮಾಡಿದ್ದರೂ, ನೇರವಾಗಿ ಕರ್ಮಣಿ ಪ್ರಯೋಗವನ್ನು ಕುರಿತು ಏನನ್ನೂ ಬರೆದಿಲ್ಲ.

'ಶಬ್ದಮಣಿದರ್ಪಣ'ದ ಮೂಡಬಿದಿರೆಯ ಹಸ್ತಪ್ರತಿಯೇ ಮೊದಲಾದ ಅನೇಕ ಉತ್ತಮ ಹಸ್ತಪ್ರತಿಗಳಲ್ಲಿ ದೊರೆಯದೇ ಇರುವ ಒಂದು ಸೂತ್ರವು 'ಅನುಕ್ತಸೂತ್ರ'ವೆಂಬ ಹೆಸರಿನಡಿಯಲ್ಲಿ ಕರ್ಮಣಿ ಪ್ರಯೋಗವನ್ನು ನಿರ್ದೇಶಿಸುವುದು ಕಂಡುಬರುತ್ತದೆ. ಕಿಟ್ಟೆಲ್ ಅವರು ಈ ಸೂತ್ರವನ್ನು ತಾವು ಸಂಪಾದಿಸಿದ ಈ ಕೃತಿಯಲ್ಲಿ ಸೇರಿಸುತ್ತ,

"It is not found in our best two manuscripts and does also not occur in the ಮೂಡಬಿದರು MSS. It is therefore an interpolation"

ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಂಥದ ೨೫೧ನೆಯ ಸೂತ್ರವಾದಮೇಲೆ, ೨೫೧ಬಿ ಸೂತ್ರವೆಂದು ಗುರುತಿಸಲ್ಪಟ್ಟು ಈ ಸೂತ್ರ ಈ ಕೆಳಗಿನಂತೆ ಬರುತ್ತದೆ :

ಕ್ರಿಯೆಯ ಪದಂ ತಾಂ ಕರ್ತೃ
ಪ್ರಯುಕ್ತಮಾಗೆಲ್ಲಿಯೇನದೆಂಬಿಚ್ಚೆಯನಾ
ಶ್ರಯಿಪುದು ಸಕರ್ಮಕಮದಲ್
ಪ್ರಯುಕ್ತಪಡುಧಾತು ಸರ್ವಧಾತುಗೆಯಕ್ಕುಂ ॥

ಮೂರನೇ ಸಾಲಿನ 'ಅದಲ್' ಹೊರತುಪಡಿಸಿ, ಈ ಸೂತ್ರದ ಮೊದಲ ಮೂರು ಸಾಲುಗಳು ಸಕರ್ಮಕ ಕ್ರಿಯಾಪದವನ್ನು ಕುರಿತು ಬಂದಿವೆ. ಕ್ರಿಯಾಪದವು ಕರ್ತೃಯುಕ್ತ ವಾಗಿ ಎಲ್ಲಿ, ಏನ್ ಎಂಬ ಇಚ್ಛೆಯನ್ನಾಶ್ರಯಿಸಿ ಬಂದರೆ, ಅದು ಸಕರ್ಮಕ. ಈ ಗ್ರಂಥ ದಲ್ಲಿ ಮುಂದೆ ಹೇಳಲ್ಪಡುವ 'ಈ' (ಈಯು=ಕೊಡು) ಮುಂತಾದ ಸಮಸ್ತ ಧಾತು ಗಳಿಗೂ ಕರ್ಮಣಿ ಪ್ರಯೋಗದಲ್ಲಿ ಅ, ಅಲ್ ಪ್ರಯುಕ್ತ ಪಡುಧಾತು ಬರಬಹುದು. ಹೀಗೆ ಲಕ್ಷಣವನ್ನು ಕೊಟ್ಟು, ಪ್ರಥಮ ಮಧ್ಯಮ ಉತ್ತಮಗಳೆಂಬ ಪುರುಷತ್ರಯಕ್ಕೆ, ಏಕವಚನ ಬಹುವಚನಗಳಲ್ಲಿ ಅಮ್, ಅರ್ ; ಅಯ್, ಇರ್ : ಎನ್, ಎವು ಪ್ರತ್ಯಯ ಗಳು 'ಪಡು' ಧಾತುವಿನ ಮುಂದೆ ಬರುತ್ತವೆಯೆಂದು ತಿಳಿಸುತ್ತ

ಪ್ರಥಮ ಪುರುಷಕ್ಕೆ : ತಾನಿರಲ್ಪಟ್ಟಂ ; ತಾಮಿರಲ್ಪಟ್ಟರ್ ; ಮಧ್ಯಮ ಪುರುಷಕ್ಕೆ : ನೀನಿರಲ್ಪ ಟ್ಟಯ್, ನೀಮಿರಲ್ಪಟ್ಟಿರ್ ; ಉತ್ತಮ ಪುರುಷಕ್ಕೆ : ಆನಿರಲ್ಪಟ್ಟೆನ್, ಆಮಿರಲ್ಪಟ್ಟೆವು.

ಎಂದು ಉದಾಹರಣೆಗಳನ್ನು ಕೊಟ್ಟಿದ್ದನ್ನು ಕಾಣಬಹುದಾಗಿದೆ. ಆದರೆ ಈ ಸೂತ್ರ ಹಾಗೂ ಇದಕ್ಕೆ ಸಂಬಂಧಿಸಿದ ವೃತ್ತಿ-ಪ್ರಯೋಗಗಳು ಪ್ರಕ್ಷಿಪ್ತವೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಧಾರವಾಡಕರರು ತಮ್ಮ 'ಕನ್ನಡ ಭಾಷಾಶಾಸ್ತ್ರ'ದಲ್ಲಿ ಈ ಸೂತ್ರವು ಅನಂತರದ್ದೆಂದು ಸ್ಪಷ್ಟವಾಗಿ ತೋರುವುದಾಗಿ ಸಾರಿದ್ದಾರೆ. ಭಟ್ಟಾಕಳಂಕನ 'ಕರ್ಣಾಟಕ ಶಬ್ದಾನುಶಾಸನ'ದ "ಕರ್ಮಣಿ" ಎನ್ನುವ ೪೪೩ನೆಯ ಸೂತ್ರದಡಿಯಲ್ಲಿ ಬರುವ ಪ್ರಯೋಗದಲ್ಲಿ ಕೊಟ್ಟ ಉದಾಹರಣೆಗಳನ್ನೇ 'ಶಬ್ದಮಣಿದರ್ಪಣ'ದ ೨೫೧ಬಿ ಸೂತ್ರದ ಪ್ರಕ್ಷಿಪ್ತಕಾರನು ಆಯ್ದುಕೊಂಡದ್ದೂ ವಿಮರ್ಶಕರ ಗಮನವನ್ನು ಸೆಳೆದಿದೆ.

ಕರ್ಮಣಿ ಪ್ರಯೋಗವನ್ನು ಕನ್ನಡದಲ್ಲಿ ಸ್ಪಷ್ಟವಾಗಿ ಹೆಸರಿಸಿದ ಏಕಮೇವ ಪ್ರಾಚೀನ ವೈಯಾಕರಣ ೧೭ನೆಯ ಶತಮಾನದ ಭಟ್ಟಾಕಳಂಕದೇವ. ಇವನು "ಕರ್ತೃಕರ್ಮಣೋಃ ಕೃತಿ ಭಾವೇ" ಎನ್ನುವ 'ಶಬ್ದಾನುಶಾಸನ'ದ ೨೨೭ನೆಯ ಸೂತ್ರದ ವ್ಯಾಖ್ಯೆಯಲ್ಲಿ, ಕಾಲ ಕಾರಕಾದಿಗಳಿಂದ ಅನಾಶ್ಲಿಷ್ಟ ಧಾತ್ವರ್ಥವು ಭಾವವೆಂದು ಹೇಳುತ್ತ, ಭಾವದಲ್ಲಿ ವಿಹಿತ ವಾದ ಕೃದಂತಕ್ಕೆ ಅದ್ (ಅ) ಪ್ರತ್ಯಯ ಬರುತ್ತದೆ ಎಂದು ತಿಳಿಸುತ್ತ, ದೇವದತ್ತನ

ಘಟದ ಮಾಟಿಕ್ಕೆ, ದೇವದತ್ತನ ಇರವು, ಯಜ್ಞದತ್ತನ ನಿದ್ರೆ ಎನ್ನುವ ಉದಾಹರಣೆಗಳನ್ನು ಪ್ರಯೋಗದಲ್ಲಿ ಕೊಟ್ಟು, ಹಾಗೆಯೇ ಮುಂದುವರಿದು ಕರ್ಮಾರ್ಥದಲ್ಲಿ ಹೇಗೆ ವಾಕ್ಯಪ್ರಯೋಗವುಂಟಾಗುತ್ತದೆ ಅನ್ನುವುದನ್ನು ವಿವರಿಸಲು, "ದೇವದತ್ತನಿಂ (ಘಟಂ) ಮಾಡಲ್ಪಟ್ಟುದು" ಎಂದು ಕರ್ಮಣಿಪ್ರಯೋಗವನ್ನು ಪ್ರಸ್ತಾವಿಸುತ್ತಾನೆ. "ಮುಕ್ತೇ" ಎನ್ನುವ ೨೨೭ನೆಯ ಸೂತ್ರ ಹಾಗೂ ಅದರ ವಿವರಣೆಯಲ್ಲಿ, ಕರ್ಮಣಿ ಪ್ರಯೋಗದಲ್ಲಿ ಕರ್ಮಾರ್ಥಪ್ರಧಾನವಾಗಿರುತ್ತದೆ ಅರ್ಥಾತ್ ಕರ್ಮವಾಚಕ ಪ್ರಥಮಾವಿಭಕ್ತಿಯಲ್ಲಿರುತ್ತದೆ. ಈ ಪ್ರಧಾನತ್ವವನ್ನೇ ಉಕ್ತ ಅಭಿಹಿತಾದಿ ಶಬ್ದಗಳು ಸೂಚಿಸುತ್ತವೆ ಎನ್ನುತ್ತ "ಕುಲಾಲಂ ಘಟಮಂ ಮಾಡಿದಂ" ಎನ್ನುವ ಕರ್ತರಿ ವಾಕ್ಯದಲ್ಲಿ ಬರುವ ಕರ್ತೃವಾಚಕ 'ಕುಲಾಲ' ಶಬ್ದದ (ಪ್ರಥಮಾ ವಿಭಕ್ತಿ ಸೂಚಿತ) ಪ್ರಾಧಾನ್ಯವು ಕರ್ಮಣಿಯಲ್ಲಿ "ಕುಲಾಲನಿಂ ಘಟಂ ಮಾಡಲ್ಪಟ್ಟುದು" ಎಂದಾಗ ಕರ್ಮವಾಚಕ 'ಘಟ' ಶಬ್ದಕ್ಕೆ ಬರುವುದನ್ನು ತಿಳಿಸಿ, "ಅಕ್ಕಸಾಲೆಯಿಂ ಪದಕಂ ಗೆಯ್ಯಲ್ಪಟ್ಟುದು" ಎಂದು ಮತ್ತೊಂದು ಉದಾಹರಣೆಯ ಮೂಲಕ ಅದನ್ನು ಅವನು ಸ್ಪಷ್ಟಪಡಿಸುತ್ತಾನೆ. ಮುಂದೆ "ಕರ್ಮಣಿ" ಎನ್ನುವ ೪೪೩ನೆಯ ಸೂತ್ರಕ್ಕೆ ವೃತ್ತಿಯನ್ನು ಬರೆಯುತ್ತ, ಅನ್ಯ (ಪ್ರಥಮಪುರುಷ), ಯುಷ್ಮದ್ (ಮಧ್ಯಮ ಪುರುಷ) ಹಾಗೂ ಅಸ್ಮದ್ (ಉತ್ತಮಪುರುಷ) ಅರ್ಥಗಳಲ್ಲಿ, ಏಕತ್ವ (ಏಕವಚನ), ಅನೇಕತ್ವ (ಬಹುವಚನ)ಗಳಲ್ಲಿ, ಯಥಾಕ್ರಮವಾಗಿ ಧಾತುವಿಗೆ ಅಮ್, ಅರ್ ; ಅಯ್, ಇರ್ : ಎನ್, ಎವು ಎನ್ನುವ ಪ್ರತ್ಯಯಗಳು, ಕರ್ಮವಾಚಕವು ಅಭಿಧೇಯವಾದಾಗ, ಅರ್ಥಾತ್ ಪ್ರಧಾನವಾಗಿ ಬಂದಾಗ, ಧಾತುವಿನ ಮೇಲೆ ಬರುತ್ತವೆ ಎಂದು ಮುಂತಾಗಿ ನಿರ್ದೇಶಿಸಿದ್ದಾನೆ.

"ಕರ್ಮಣ್ಯನುಪಡುಃ" ಎಂಬ ೫೩೦ನೆಯ ಸೂತ್ರವನ್ನು ಬರೆದು, ಕರ್ಮಣಿ ಪ್ರಯೋಗ ಬರುವಾಗ ಯಾವುದೇ ಧಾತುವಿಗೂ ಮುಂದೆ 'ಪಡು' ಎಂಬ ಧಾತು ಸೇರಿಕೊಳ್ಳುತ್ತದೆ; ಹಾಗೂ ಆ ಧಾತುವಿನ ಮುಂದೆ ಅಮ್ ಮುಂತಾದ ಪ್ರತ್ಯಯಗಳು ಬರುವುದು ಎಂದು ಭಟ್ಟಾಕಳಂಕನು ತನ್ನ ವಿವರಣೆಯನ್ನು ಮುಂದುವರಿಸುತ್ತಾನೆ ; ಅಲ್ಲಿ ಮತ್ತೆ "ಮಾಡಲ್ಪಟ್ಟುದು ಘಟಂ ಕುಂಬಜಿನಿಂ", "ನೋಡಲ್ಪಟ್ಟನರಸನಂಗನೆಯಿಂ" ಎಂದು ಮುಂತಾಗಿ ಉದಾಹರಣೆಗಳನ್ನು ಕೊಟ್ಟಿದ್ದಾನೆ.

'ಅಮ್' ಮುಂತಾದ ಪ್ರತ್ಯಯಗಳು ಹೊಸಗನ್ನಡದಲ್ಲಿ 'ಅನು' ಎಂದು ಮುಂತಾಗಿ ಈ ಕೆಳಗಿನಂತೆ ಆಗುತ್ತವೆ :

ಅಮ್—(ತಾನಿರಲ್ಪಟ್ಟಂ) → ಅನು—ತಾನಿರಲ್ಪಟ್ಟನು.
ಅರ್— (ತಾಮಿರಲ್ಪಟ್ಟರ್) → ಅರು—ತಾವಿರಲ್ಪಟ್ಟರು.
ಅಯ್—(ನೀನಿರಲ್ಪಟ್ಟಯ್) → ಎ—ನೀನಿರಲ್ಪಟ್ಟೆ.
ಇರ್— (ನೀಮಿರಲ್ಪಟ್ಟಿರ್) → ಇರಿ—ನೀವಿರಲ್ಪಟ್ಟಿರಿ.
ಎನ್— (ಆನಿರಲ್ಪಟ್ಟೆನ್) → ಎನು—ನಾನಿರಲ್ಪಟ್ಟೆನು.
ಎವು— (ಆಮಿರಲ್ಪಟ್ಟೆವು) → ಎವು—ನಾವಿರಲ್ಪಟ್ಟೆವು.

"ತಸ್ಮಿನ್ನೆದಲಾ" ಅನ್ನುವ ೫೩೨ನೆಯ ಸೂತ್ರದಲ್ಲಿ ಕರ್ಮಣಿ ಪ್ರಯೋಗದಲ್ಲಿ 'ಪಡು' ಧಾತುವಿನ ಪೂರ್ವದಲ್ಲಿ ಇಚ್ಛಿತ ಕ್ರಿಯಾಸಾಧಕ ಧಾತುವಿನ ಮೇಲೆ ಎತ್ (ಎ) ಅಥವಾ ಅಲ್ ಎಂಬ ವಿಕರಣಪ್ರತ್ಯಯ ಬರುತ್ತದೆಯೆಂದು ಭಟ್ಟಾಕಳಂಕನು ನಿರ್ದೇಶಿಸುತ್ತಾನೆ; ಹಾಗೂ

ಮಾಡು + ಎ + ಪಡು = ಮಾಡೆಪಟ್ಟಂ : ಮಾಡು + ಅಲ್ + ಪಡು = ಮಾಡಲ್ಪಟ್ಟಂ
ನೋಡು + ಎ + ಪಡು = ನೋಡೆಪಟ್ಟಂ : ನೋಡು + ಅಲ್ + ಪಡು = ನೋಡಲ್ಪಟ್ಟಂ

"ತಂದಿರೆಪಟ್ಟುದು ಬಾಲಪೋಷಕರ ಪೀಯೂಷಂ" ಎಂದು ಉದಾಹರಣೆಗಳನ್ನು ಕೊಡುತ್ತಾನೆ. 'ವಡ್ಡಾರಾಧನೆ'ಯಲ್ಲಿ 'ಎ' ವಿಕರಣದ ಅನೇಕ ಪ್ರಯೋಗಗಳಿವೆಯೆಂಬುದನ್ನು

"ಪುಷ್ಪವೃಷ್ಟಿಯಿಂ ಮುಚ್ಚೆಪಟ್ಟವನಾಗಿ", "ಕೊಲೆಪಡುವಾತಂ", "ದೇಹಧಾರಿಗಳಿಂದಂ ನೆಗೞೆಪಟ್ಟುದಂ"

ಮುಂತಾದ ಉದಾಹರಣೆಗಳ ಮೂಲಕ ಧಾರವಾಡಕರರು 'ಕನ್ನಡ ಭಾಷಾಶಾಸ್ತ್ರ'ದಲ್ಲಿ ವಿವರಿಸುತ್ತಾರೆ. ಹೊಸಗನ್ನಡದಲ್ಲಿ ಸಾಮಾನ್ಯವಾಗಿ ಅಲ್ ಬರುವುದನ್ನು ಕಾಣಬಹುದು. ತಮಿಳಿನಲ್ಲಿ ಅ, ಮಲಯಾಳದಲ್ಲಿ ಎ ಹಾಗೂ ತೆಲುಗಿನಲ್ಲಿ ಉ ಸಾಮಾನ್ಯವಾಗಿ ಬರುವುದನ್ನು ಆಗಲೇ ನೋಡಲಾಗಿದೆ.

"ಕೃತಿವಾ" ಅನ್ನುವ ೫೩೧ನೆಯ ಸೂತ್ರದಲ್ಲಿ ಧಾತುವಿಗೆ ಕೃತ್ ಪ್ರತ್ಯಯವು ಪರವಾಗಿರಲು ಕರ್ಮಣಿ ಪ್ರಯೋಗದಲ್ಲಿ 'ಪಡು' ಧಾತುವಿನ ಅನುಪ್ರಯೋಗವನ್ನು ಬಿಟ್ಟರೂ ನಡೆಯುತ್ತದೆ ಎಂದು 'ಶಬ್ದಾನುಶಾಸನ'ವು ತಿಳಿಸುತ್ತದೆ :

ಮಾಡಲ್ಪಟ್ಟುದಂ : ಮಾಡಿದುದಂ, ತೋಱಲ್ಪಟ್ಟುದರ್ಕೆ → ತೋಱಿದುದರ್ಕೆ
ಮಾಡಲ್ಪಟ್ಟುದಱಿಂ : ಮಾಡಿದುದಱಿಂ, ತೂಗಲ್ಪಡುವ ಡಾಣೆ → ತೂಗುವ ಡಾಣೆ
ಆಡಲ್ಪಡುವ ಪೊಲಂ : ಆಡುವ ಪೊಲಂ

ಎನ್ನುವುದನ್ನು ಉದಾಹರಣೆಗೆ ಇಲ್ಲಿ ಕೊಡಲಾಗಿದೆ. ಇಲ್ಲಿ "ಹೊಲವು ಆಡಲ್ಪಡುವುದು" ಅಂದರೆ "ಜನರಿಂದ ಹೊಲದಲ್ಲಿ ಆಡಲಾಗುವುದು" ಎಂದು ಅರ್ಥ; ಉಳಿದ ಉದಾಹರಣೆಗಳಿಗೂ ಇದೇ ರೀತಿಯ ಅರ್ಥ ಬರುತ್ತದೆ.

ಸಂಸ್ಕೃತದಲ್ಲಿ ಕರ್ಮವಾಚಕಶಬ್ದ ನಿರಪೇಕ್ಷವಾದ ನಾಚಿಕೆಪಡು, ಇರು, ಜಾಗರಣೆ ಮಾಡು, ವೃದ್ಧಿಗೊಳ್ಳು, ಕ್ಷೀಣಿಸು, ಭಯಪಡು, ಜೀವಿಸು, ಮರಣಹೊಂದು, ಮಲಗು ಅಥವಾ ನಿದ್ರಿಸು, ಸ್ವಪ್ನಕಾಣು, ಕ್ರೀಡಿಸು, ರುಚಿಸು, ಪ್ರಕಾಶಿಸು ಅನ್ನುವ ಅರ್ಥಕೊಡುವ ಧಾತುಗಳಲ್ಲಿ ಅಕರ್ಮಕಗಳೆನಿಸುತ್ತವೆ. ಇವನ್ನು ತಿಳಿಸಲು

ಲಜ್ಜಾ ಸತ್ತಾ ಸ್ಥಿತಿ ಜಾಗರಣಂ ವೃದ್ಧಿ ಕ್ಷಯ ಭಯ ಜೀವಿತ ಮರಣಂ ।
ಸ್ವಪ್ನ ಕ್ರೀಡಾ ರುಚಿ ದೀಪ್ತ್ಯರ್ಥಾಃ ಧಾತವ ಏತೇ ಕರ್ಮವಿಹೀನಾಃ ॥

ಎನ್ನುವ ಶ್ಲೋಕವೂ ಇದೆ. ಈ ಅಕರ್ಮಕಗಳ ಯೋಗದಲ್ಲಿ ಕರ್ತೃಪ್ರಾಧಾನ್ಯವಿಲ್ಲದಿದ್ದಾಗ ಉಂಟಾಗುವ ಪ್ರಯೋಗಕ್ಕೆ ಸಂಸ್ಕೃತದಲ್ಲಿ 'ಭಾವೇ ಪ್ರಯೋಗ' ಎನ್ನುತ್ತಾರೆ.

"ತೇನ ಸ್ಥೀಯತೇ" (ಅವನಿಂದ ಇರಲ್ಪಡುತ್ತದೆ), "ತಯಾ ಕ್ಷೀಯತೇ" (ಅವಳಿಂದ ಕ್ಷೀಣಗೊಳ್ಳಲ್ಪಡುತ್ತದೆ) ಮುಂತಾದವು ಅಲ್ಲಿ ಭಾವ ಅರ್ಥಾತ್ ಕ್ರಿಯಾಪ್ರಾಧಾನ್ಯವೆನಿಸುತ್ತವೆ. ಕನ್ನಡದಲ್ಲಿ ಈ ಭಾವೇ ಪ್ರಯೋಗಕ್ಕೆ ಸಾಧ್ಯತೆಯೇ ಇಲ್ಲವೆಂದೂ ಇಂತಹ ಸಂದರ್ಭಗಳೂ ಕರ್ಮಣಿ ಪ್ರಯೋಗದ ವ್ಯಾಪ್ತಿಯಲ್ಲೇ ಬರುತ್ತವೆಯೆಂದೂ ಕರ್ಮಣಿ ಪ್ರಯೋಗದ ಏಕೈಕ ಲಕ್ಷಣವಕ್ತಾರನಾದ ಭಟ್ಟಾಕಳಂಕನು 'ಶಬ್ದಾನುಶಾಸನ'ದ ೨೨೬ನೆಯ "ಕರ್ತೃಕರ್ಮಣೋಃ ಕೃತಿ ಭಾವೇ" ಎನ್ನುವ ಸೂತ್ರದ ವ್ಯಾಖ್ಯೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ:

> "ಸಂಸ್ಕೃತೇ... ಸಕರ್ಮಕಾತ್ ಕರ್ಮಣಿ ಅಕರ್ಮಕಾತ್ ಭಾವೇ, ಸರ್ವಸ್ಮಾಚ್ಚ ಕರ್ತರಿ ಭವಂತಿ; ಭಾಷಾಯಾಂ ತು ನೈವಂ; ತತ್ರ ಆಖ್ಯಾತಪ್ರತ್ಯಯಾಃ ಕರ್ತರಿ ಕರ್ಮಣಿ ಚ ಇತಿ ಉಭಯತ್ರೈವ; ಕೃತ್‌ಪ್ರತ್ಯಯಾಸ್ತು ಭಾವೇ ಚ ಭವಂತೀತಿ ಭಾವಃ ಕೃದ್ವಾಚ್ಯ ಏವ; ನ ಆಖ್ಯಾತವಾಚ್ಯಃ"

ಭಾಷೆಯಲ್ಲಿ ಎಂದರೆ ಕನ್ನಡದಲ್ಲಿ ಕರ್ತರಿ, ಕರ್ಮಣಿ ಪ್ರಯೋಗಗಳು ಮಾತ್ರ ಇವೆ ಎಂದು ಆತ ಸ್ಪಷ್ಟಪಡಿಸಿದ್ದನ್ನು ಕಾಣಬಹುದು. ಮ. ಪ್ರ. ಪೂಜಾರರು ತಮ್ಮ "ಕೆಲವು ಕನ್ನಡ ವ್ಯಾಕರಣ ವಿಚಾರಗಳು" ಕೃತಿಯಲ್ಲಿ ಕರ್ತರಿ ಪ್ರಯೋಗದ ಬಗ್ಗೆ "ಧಾತೋರೇಕಾನೇಕತ್ವೇಽಮರಯಿರೆನೆವವೋಽನ್ಯಯುಷ್ಮದಸ್ಮಾಸು ಕರ್ತರಿ"—ಎಂಬ 'ಶಬ್ದಾನುಶಾಸನ'ದ ೪೪೨ನೆಯ ಸೂತ್ರದ ವ್ಯಾಖ್ಯೆಯಲ್ಲಿ ಬರುವ "ತಿಙ್‌ಸಂಜ್ಞಕಾಸ್ತು ಸಂಸ್ಕೃತೇ ಕರ್ತರಿ ಕರ್ಮಣಿ ಭಾವೇ ಚ ಭವಂತಿ; ಭಾಷಾಯಾಂ ತು ಕರ್ತೃಕರ್ಮಣೋರೇವ; ನ ಭಾವೇ" ಮುಂತಾದ್ದನ್ನು ಉದ್ಧರಿಸಿ ಭಾವೇಪ್ರಯೋಗವು ಕನ್ನಡದಲ್ಲಿ ಇಲ್ಲವೆನ್ನುವುದನ್ನು ಸಾರುತ್ತಾರೆ (ಪು. ೪೧).

ಮೇಲೆ ಹೇಳಿದ ಲಜ್ಜೆಪಡುವುದೇ ಮುಂತಾದ ೧೬. ಕರ್ಮಪದನಿರಾಕಾಂಕ್ಷಿ ಕ್ರಿಯೆಗಳ ಅರ್ಥಕೊಡುವ ಧಾತುಗಳ ಯೋಗದಲ್ಲಿಯೂ ಕನ್ನಡದಲ್ಲಿ ಕರ್ಮಣಿ ಪ್ರಯೋಗವೆಂದೇ ಭಟ್ಟಾಕಳಂಕನು ಏಕೆ ಹೇಳುತ್ತಾನೆ ಅನ್ನುವುದನ್ನು ವಿಚಾರಮಾಡಿದರೆ, "ತಾನಿರಲ್ಪಟ್ಟಂ", "ನಾನಿರಲ್ಪಟ್ಟೆಂ" ಎಂದು ಮುಂತಾಗಿ ಹೇಳುವುದು ಕನ್ನಡದ ಜಾಯಮಾನಕ್ಕೆ ಹೊಂದದು. ಕೇವಲ ಸಂಸ್ಕೃತದ "ತೇನ ಸ್ಥೀಯತೇ", "ಮಯಾ ಸ್ಥೀಯತೇ" ಮುಂತಾದವುಗಳ ಭಾಷಾಂತರ ಮಾತ್ರವಾಗುತ್ತದೆಯೆನ್ನುವುದು ಕೂಡಲೆ ಹೊಳೆಯುವುದು. "ಅವನಿಂದ ಇರೋಣವಾಗುತ್ತದೆ", "ನನ್ನಿಂದ ಇರೋಣವಾಗುತ್ತದೆ" ಎಂದು ಹೇಳಿದಾಗ ಇರಲ್ಪಡುತ್ತದೆ ಎಂದು ಹೇಳಿದಷ್ಟು ಕೃತ್ರಿಮವೆನಿಸದಿದ್ದರೂ, 'ನಾನು ಇರುತ್ತೇನೆ' ಎಂದು ಮುಂತಾಗಿ ಹೇಳಿದಷ್ಟು ಸಹಜವೆನಿಸುವುದಿಲ್ಲ. ಕನ್ನಡದಲ್ಲಿ ಅಕರ್ಮಕ ಧಾತುಕ್ರಿಯೆಯು ಕರ್ಮಪದದ ಬದಲು ಕೃದಂತದ ಕರ್ತೃಪದಗಳನ್ನು ಹೊಂದುವುದರಿಂದ, ಭಾವೇ ಪ್ರಯೋಗ ಸಾಧ್ಯವಿಲ್ಲವೆಂದು ಭಟ್ಟಾಕಳಂಕನ ಹೇಳಿಕೆ. ಇರಲ್ಪಡುತ್ತದೆ ಎಂದಾಗ ಇರೋಣವು ಅಥವಾ ಇರುವಿಕೆಯು 'ಪಡುತ್ತದೆ' ಅರ್ಥಾತ್ 'ನಡೆಯುತ್ತದೆ' ಎಂದಾಗುತ್ತದೆ. 'ಪಡು' ಅನ್ನುವ

ಧಾತುವು (ಅಥವಾ ಬೇಕು, ಆಗು ಮುಂತಾದ ಬೇರೆ ಧಾತುವು) ಬರುವುದರಿಂದ ಇಚ್ಛಿತ ಕ್ರಿಯಾವಾಚಕವು ಕೃದಂತಕ್ಕೆ ತಿರುಗಿ ಇರೋಣವನ್ನು ನಡೆಸಲಾಗುತ್ತದೆ ಎಂದು ಮುಂತಾದ ಅರ್ಥವುಳ್ಳದ್ದಾಗಿ. ಕರ್ಮಣಿ ಪ್ರಯೋಗದ ವ್ಯಾಪ್ತಿಗೇ ಅಕರ್ಮಕವೂ ಬಂದು ಬಿಡುವುದು.

ಭಟ್ಟಾಕಳಂಕನು ತನ್ನ ೪೪೩ನೆಯ ಸೂತ್ರದ ವ್ಯಾಖ್ಯೆಯಲ್ಲಿ "ಅಕರ್ಮಕಾ ಏವ ಧಾತವಃ ಇಸುಬಂತ ಪ್ರಯೋಗೇ ಸಕರ್ಮಕಾ ಭವಂತಿ" (ಅಕರ್ಮಕ ಧಾತುಗಳು ಇಸುಪ್ (ಇಸು) ಪ್ರತ್ಯಯವನ್ನು ಪಡೆದು ಸಕರ್ಮಕಗಳಾಗುತ್ತವೆ) ಎಂದಿದ್ದಾನೆ. "ಪೊನ್ನನಿರಿಸಿದಂ ಎನ್ನುವಲ್ಲಿ "ಹೊನ್ನನ್ನು ಇರಿಸಿದನು" ಅಂದಾಗ ಇರ್ ಧಾತುವಿಗೆ ಇಸು ಪ್ರತ್ಯಯ ಬಂದು ಆಖ್ಯಾತ ಪ್ರತ್ಯಯ ಬಂದಂತಾಯಿತು. "ಇರಿಸಲ್ಪಟ್ಟಿತು", "ಮಲಗಿಸಲ್ಪಟ್ಟಿತು" ಮುಂತಾದ ಕಡೆಗಳಲ್ಲೆಲ್ಲ, ಇಸುಪ್‌ದಿಂದಾಗಿ ಪ್ರೇರಣಾರ್ಥಕವು ಬಂದಿದೆ. ಇಲ್ಲೂ ಇಸುಪ್ ಪ್ರತ್ಯಯದ ಅನಂತರ ಅನುಧಾತು 'ಪಡು' ಬಂದದ್ದನ್ನು ಗಮನಿಸಬಹುದು. ಆದರೆ, ಅಕರ್ಮಕದ ಯೋಗದಲ್ಲಿ ಮಾತ್ರ ಇಸುಪ್ ಪ್ರತ್ಯಯವು ಬರುತ್ತದೆ ಎಂದೇನೂ ನಿಯಮವಿಲ್ಲ. ಅದಕ್ಕಾಗಿ "ಇಸುಪಃ ಪ್ರಯೋಜ್ಯಕರ್ತರಿ" ಅನ್ನುವ ೪೪೫ನೆಯ ಸೂತ್ರದ ಅಡಿಯಲ್ಲಿ "ಅರಸನಿನಾಂ ಪೆರ್ಚಿಸಲ್ಪಟ್ಟೆಂ" ಎನ್ನುವ ಸಕರ್ಮಕದ ಉದಾಹರಣೆಯನ್ನು ಭಟ್ಟಾಕಳಂಕನು ಕೊಟ್ಟಿದ್ದಾನೆ. ಸಂಸ್ಕೃತ–ಇಂಗ್ಲಿಷು ಗಳೆರಡರಲ್ಲೂ ಕರ್ಮಣಿ ಪ್ರಯೋಗವು ಸಹಜವೆನಿಸುವುದಾದರೂ ಇಂಗ್ಲಿಷಿನಲ್ಲಿ ಭಾವೇ ಪ್ರಯೋಗವಿಲ್ಲದ್ದನ್ನು ಗಮನಿಸಬಹುದು. ಅಕರ್ಮಕ **(Intransitive)** ಧಾತುಗಳು ಇಂಗ್ಲಿಷಿನಲ್ಲಿ ಕರ್ತೃಪ್ರಾಧಾನ್ಯದಲ್ಲಿ ಮಾತ್ರ, ಎಂದರೆ ಕರ್ತರಿ ಪ್ರಯೋಗದಲ್ಲಿ ಮಾತ್ರ ಬರುತ್ತವೆ. ಭಾವೇ ಪ್ರಯೋಗಕ್ಕೆ ಸಂಬಂಧಿಸಿದಂತೆ ಇಂಗ್ಲಿಷಿಗೂ ಕನ್ನಡಕ್ಕೂ ವ್ಯತ್ಯಾಸ ವಿಷ್ಟೇ : ಇಂಗ್ಲಿಷಿನಲ್ಲಿ ಆ ಪ್ರಶ್ನೆಯೇ ಬರುವುದಿಲ್ಲ ; ಆದರೆ ಕನ್ನಡದಲ್ಲಿ ಅಕರ್ಮಕಗಳು ಕರ್ಮಣಿಗೆ ತಿರುಗಿಕೊಂಡುಬಿಡುತ್ತವೆ. ಈ ದಿಸೆಯಲ್ಲಿ ಭಾವೇಪ್ರಯೋಗವು ಸಂಸ್ಕೃತಕ್ಕೆ ಮಾತ್ರ ನೂರಕ್ಕೆ ನೂರು ಸಂಬಂಧಪಟ್ಟುದಾಗಿದೆ.

ದುಹ್–ಹಾಲುಕರೆ, ಯಾಚ್–ಬೇಡು, ಪಚ್–ಬೇಯಿಸು, ದಂಡ್–ದಂಡಿಸು, ರುಧ್–ತಡೆ, ಪ್ರಚ್ಛ್–ಕೇಳು, ಚಿ–ಆಯ್ದುಕೊಳ್ಳು, ಬ್ರೂ–ಹೇಳು, ಜಿ–ಗೆಲ್ಲು, ಮಂಥ್–ಕಡೆ, ಮುಷ್-ಕದಿ ಧಾತುಗಳು ಸಂಸ್ಕೃತದಲ್ಲಿ ಹೇಗೆ ದ್ವಿಕರ್ಮಕಗಳೋ ಹಾಗೆಯೇ ಕನ್ನಡದಲ್ಲೂ ಇವುಗಳ ಅರ್ಥ ಕೊಡುವ ಶಬ್ದಗಳು ದ್ವಿಕರ್ಮಕಗಳೇ ಆಗಿರುವುದು ಸ್ವಾಭಾವಿಕ. ಭಟ್ಟಾಕಳಂಕನು ಕರ್ಮಣಿ ಪ್ರಯೋಗಕ್ಕೆ ಸಂಬಂಧಿಸಿದಂತೆ ದ್ವಿಕರ್ಮಕಗಳಿಗೆ "ಬೇಡ್ವಾದೇರಪ್ರಧಾನೇ" ಎನ್ನುವ ೪೪೪ನೇ ಸೂತ್ರವನ್ನು ಕೊಡುತ್ತಾನೆ; ಹಾಗೂ ಅದರ ವೃತ್ತಿಯಲ್ಲಿ ಈ ದ್ವಿಕರ್ಮಗಳ ಯೋಗದಲ್ಲಿ 'ಅಮಾದಯೋ ಭವಂತಿ'–ಅಮ್ ಮುಂತಾದವು ಬರುತ್ತವೆ ಎಂದು ವಿವರಿಸಿ, ಪ್ರಯೋಗಗಳಿಗೆ ಈ ಕೆಳಗಿನ ಉದಾಹರಣೆ ಗಳನ್ನು ಕೊಡುತ್ತಾನೆ :

| ಕರ್ತರಿ | ಕರ್ಮಣಿ |
|---|---|
| ಪಾರ್ವನ್ ಅರಸನಂ ಗ್ರಾಮಮಂ ಬೇಡಿದಂ | ಪಾರ್ವನಿನರಸಂ ಗ್ರಾಮಮಂ ಬೇಡಲ್ಪಟ್ಟಂ |
| ಗೋವಳನ್ ಎರ್ಮೆಯಂ ಪಾಲಂ ಕರೆದಂ | ಗೋವಳನಿಂದೆರ್ಮೆ ಪಾಲಂ ಕರೆಯಲ್ಪಟ್ಟುದು |
| ಉಪಾಧ್ಯಾಯನಂ ಶಿಷ್ಯರ್ ತತ್ತ್ವಮಂ ಬೆಸಗೊಂಡರ್ | ಉಪಾಧ್ಯಾಯಂ ಶಿಷ್ಯರಿಂ ತತ್ತ್ವಮಂ ಬೆಸಗೊಳಲ್ಪಟ್ಟಂ |
| ಬೇಹುಕಾರನಂ ಅರಸಂ ಸುದ್ದಿಯಂ ಕೇಳ್ದಂ | ಬೇಹುಕಾರನ್ ಅರಸನಿಂ ಸುದ್ದಿಯಂ ಕೇಳಲ್ಪಟ್ಟಂ |

ಬೇಡುವ ಕ್ರಿಯಾಬೋಧಕವಾಕ್ಯದಲ್ಲಿ ಏನನ್ನು ಎನ್ನುವುದು ಮುಖ್ಯವಾದುದರಿಂದ, ಕರ್ತರಿಯಲ್ಲಿ ಗ್ರಾಮಮಂ ಅನ್ನುವುದು ಮುಖ್ಯಕರ್ಮಪದವಾಯಿತು. ಅರಸನಿಂ ಎನ್ನುವುದು ಅಪ್ರಧಾನ ಕರ್ಮವಾಗುವುದು. ಕರ್ಮಣಿ ಪ್ರಯೋಗದಲ್ಲಿ ದ್ವಿಕರ್ಮಕದ ಸಂದರ್ಭವಿದ್ದಾಗ ಅಪ್ರಧಾನವಾಚಕ ಕರ್ಮಪದದ ಮೇಲೆ ಪ್ರಥಮಾ ವಿಭಕ್ತಿ ಬಂದು ಅದು ಉಕ್ತವಾಗುವುದು; ಆದ್ದರಿಂದ ಅರಸಂ ಎಂದು ಪ್ರಥಮಾ ವಿಭಕ್ತಿ ಬಂದಿದೆ. ಹಾಗೆಯೇ ಕರ್ತರಿಯಲ್ಲಿ ಅಪ್ರಧಾನಕರ್ಮವೆನಿಸಿದ ಎರ್ಮೆ, ಉಪಾಧ್ಯಾಯಂ, ಬೇಹುಕಾರಂ ಶಬ್ದಗಳ ಮೇಲೆ ಪ್ರಥಮಾವಿಭಕ್ತಿಯು ಕರ್ಮಣಿಪ್ರಯೋಗದಲ್ಲಿ ಮೇಲೆ ಬಂದಿದೆ.

ಪ್ರಯೋಜ್ಯಕರ್ತ್ರಾತ್ಮಕವಿದ್ದಾಗ್ಯೂ ಅರ್ಥಾತ್ ಯೋಜಿತಕಾರ್ಯವೊಂದನ್ನು ನಡಸುವಾಗಲೂ ಅಮಾದಿಗಳು ಬರುತ್ತವೆಯೆಂದು ಹೇಳುತ್ತ ಮೇಲೆ ಹೇಳಿದ ೪೪೫ನೆಯ ಸೂತ್ರದ ಅಡಿಯಲ್ಲಿ 'ಕೃಷ್ಣನಿಂ ಅರ್ಜುನನಿಂ ಕರ್ಣಂ ಕೊಲಿಸಲ್ಪಟ್ಟಂ' ಎಂಬ ಉದಾಹರಣೆಯನ್ನು ಕೊಟ್ಟು ಕರ್ತರಿ ಪ್ರಯೋಗದಲ್ಲಿ ಕೃಷ್ಣನು ಅರ್ಜುನನಿಂದ ಎನ್ನುವಲ್ಲಿ ಪ್ರಧಾನವಾಗಿ ಬರುವ. ಅರ್ಥಾತ್, ಪ್ರಥಮಾವಿಭಕ್ತಿಯಲ್ಲಿ ಬರುವ ಕರ್ತೃವಾಚಕ ಕೃಷ್ಣಂ ಶಬ್ದವು ಕರ್ಮಣಿಯಲ್ಲಿ ಅಪ್ರಧಾನವಾಚಕವಾಗಿ ಅರ್ಥಾತ್ ತೃತೀಯಾ ವಿಭಕ್ತಿಯಲ್ಲಿ ಬರುವುದನ್ನು ಭಟ್ಟಾಕಳಂಕನು ತೋರಿಸಿದ್ದಾನೆ.

ಸಂಸ್ಕೃತದಲ್ಲಿ 'ಮಯಾ ಪಠಿತಮಿದಂ ಪುಸ್ತಕಂ', 'ಕಥಿತಮೇತತ್' ಎಂದು ಮುಂತಾಗಿ ಕರ್ಮಣಿ ಸಹಜವಾಗಿ ಹೆಜ್ಜೆಹೆಜ್ಜೆಗೆ ಬರುತ್ತದೆ: ಇಂಥವು ಕರ್ಮಣಿ ಭೂತಕೃದಂತಗಳೆನಿಸುತ್ತವೆ. ಇನ್ನಿತರ ಯಕ್ (ಯ), ತಙ್ (ಆತ್ಮನೇಪದಿ ಪ್ರತ್ಯಯಗಳು) ಇವುಗಳನ್ನೊಳಗೊಂಡ 'ಭೋಜನಂ ಕ್ರಿಯತೇಽಧುನಾ', 'ಅತ್ರೈವ ಸ್ಥೀಯತೇ ಮಯಾ' ಮುಂತಾದ ಕರ್ಮಣಿ ಪ್ರಯೋಗಗಳೂ ಅತ್ಯಂತ ಸಹಜವೆನಿಸುತ್ತವೆ. ಇವನ್ನು ಇಂಗ್ಲಿಷಿನಲ್ಲಿ (ಅಕರ್ಮಕವಾದ ಸ್ಥಾ–ಸ್ಥೀಯತೇ ಹೊರತುಪಡಿಸಿ) **'This book is read by me', 'This** is said', **'meal is to be taken now'** ಎಂದು ಆಡುಮಾತಿನಲ್ಲಿಯೂ ಸ್ವಾಭಾವಿಕವಾಗಿ ಹೇಳಲಾಗುತ್ತದೆ. ಆದರೆ, ಕನ್ನಡದಲ್ಲಿ, ಈ ಪುಸ್ತಕವು ನನ್ನಿಂದ ಓದಲ್ಪಡುತ್ತದೆ, ಇದು ಹೇಳಲ್ಪಟ್ಟಿದೆ, ಈಗ ಊಟವು ಮಾಡಲ್ಪಡುತ್ತದೆ, ನನ್ನಿಂದ ಇಲ್ಲಿಯೇ ಇರಲ್ಪಡುತ್ತದೆ ಎಂದು ಮುಂತಾಗಿ ಹೇಳುವುದು ಅಸ್ವಾಭಾವಿಕವೆನಿಸುವುದು. ಆದರೂ ಸಹಜವೆನಿಸುವ ಕರ್ಮಣಿಪ್ರಯೋಗ ಕನ್ನಡದಲ್ಲಿಯೂ ಸಾಧ್ಯವಿದೆ. ಉದಾಹರಣೆಗೆ,

ಸಂಸ್ಕೃತದ ಕರ್ಮಣಿ ಭೂತಕೃದಂತವನ್ನು ಕನ್ನಡದಲ್ಲಿ ಭಾಷಾಂತರಿಸುವ ಗೋಜಿಗೆ ಹೋಗದೆ ಯಥಾವತ್ತಾಗಿ ತಂದರೆ. ಆಗ ಕರ್ಮಣಿ ಸ್ವಾಭಾವಿಕವೆನಿಸುವುದು.

ಪಂಪನಿಂದ **ಉಕ್ತ**ವಾದ ಮಾತು ಸದಾ ಮನ್ನಣೆ ಪಡೆಯುತ್ತದೆ
ರಾಮನಿಂದ ರಾವಣನು **ಹತ**ನಾದನು.
ಈ ಪುಸ್ತಕವು ಪ್ರಸಾರಾಂಗದಿಂದ **ಪ್ರಕಾಶಿತ**ವಾಗಿದೆ.
ಸರಕಾರದಿಂದ **ನಿರ್ಮಿತ**ವಾದ ಮನೆಗಳಿವು.

ಇಲ್ಲಿ ಹೇಳಲ್ಪಟ್ಟ, ಕೊಲ್ಲಲ್ಪಟ್ಟನು, ಪ್ರಕಾಶಿಸಲ್ಪಟ್ಟಿದೆ, ನಿರ್ಮಿಸಲ್ಪಟ್ಟ ಎಂದು ಹೇಳುವುದು ಸಹಜವೆನಿಸದೆ, ಕ್ಲಿಷ್ಟತೆಗೆ ಎಡೆಗೊಡುವುದು ಸುಲಭವೇದ್ಯ. ಭಾಷಾಂತರದ ಸಂದರ್ಭದಲ್ಲಿ ಇದನ್ನು ಅವಶ್ಯವಾಗಿ ಗಮನಿಸಬೇಕು.

ಸಂಸ್ಕೃತದ ಕೃದಂತಗಳ ಗೊಡವೆಗೆಳಸದೆಯೂ ಕರ್ಮಣಿ ಪ್ರಯೋಗವು ಸಹಜವಾಗಿ ಬರುವ ಪ್ರಸಂಗಗಳು ಕನ್ನಡದಲ್ಲಿ ಸಾಕಷ್ಟಿವೆ :

ನಮ್ಮಿಂದ ಈ ಕೆಲಸವು ಇಂದು ನಡೆಯಬೇಕು.
ನಿಮ್ಮಿಂದ ಪುರಾಣಶ್ರವಣವಾಗಬೇಕು.
ತಮ್ಮಿಂದ ಬರೋಣವಾಗಲಿ.
ತಮ್ಮಿಂದ ತುಂಬ ಉಪಕಾರವಾಯಿತು.

ಇವನ್ನೇ ಕರ್ತರಿ ಪ್ರಯೋಗದಲ್ಲಿ 'ನಾವು ಈ ಕೆಲಸವನ್ನು ಇಂದು ಮಾಡಬೇಕು', 'ನೀವು ಪುರಾಣವನ್ನು ಕೇಳಬೇಕು', 'ತಾವು ಬರಬೇಕು', 'ತಾವು ತುಂಬ ಉಪಕಾರವನ್ನು ಮಾಡಿದಿರಿ' ಎಂದಾಗ ಬರುವ ಸರಳತೆಯೇ. ಈ ಕರ್ಮಣಿಪ್ರಯೋಗದಲ್ಲೂ ಕಂಡು ಬರುತ್ತದೆ.

ಕನ್ನಡದಲ್ಲಿ ಸಂಸ್ಕೃತದಲ್ಲಿದ್ದಂತೆ ಇಚ್ಛಿತ ಕ್ರಿಯಾಬೋಧಕ ಧಾತುವು ಸ್ವತಂತ್ರವಾಗಿ ಯಕ್, ತಙ್‌ಗೆ ಸಮಾನ ಪ್ರತ್ಯಯಗಳನ್ನು ಪಡೆದು ಕರ್ಮಣಿ ಪ್ರಯೋಗದಲ್ಲಿ ಬರುವುದು ಅಸಾಧ್ಯವಾದುದರಿಂದ [ಸಂಸ್ಕೃತದಲ್ಲಿ ಉದಾಹರಣೆಗೆ, ಗಮ್+ಯ+ತೇ-ಗಮ್ಯತೇ=ಹೋಗಲ್ಪಡುತ್ತದೆ ಅನ್ನುವುದು ಸಾರ್ವಧಾತುಕಗಳಲ್ಲಿ ; ಮಯಾ ಸಃ ಮನುಷ್ಯಃ ಅದರ್ಶಿ (ದೃಶ್+ಇ)=ನನ್ನಿಂದ ಆ ಮನುಷ್ಯನು ನೋಡಲ್ಪಟ್ಟನು ಎನ್ನುವುದು ಆರ್ಧಧಾತುಕದಲ್ಲಿ] ಹಾಗೂ ಇಲ್ಲಿ ಇಚ್ಛಿತ ಕ್ರಿಯಾಬೋಧಕ ಧಾತುವಿನ ಮುಂದೆ ಎ, ಅ, ಉ, ಅಲ್ ವಿಕರಣಪ್ರತ್ಯಯಗಳಲ್ಲೊಂದು ಬಂದ ಮೇಲೆ ಪಡು, ಆಗು, ಬೇಕು ಮುಂತಾದ ಮತ್ತೊಂದು ಧಾತುವೇ ಬರಬೇಕಾದುದರಿಂದ ಕರ್ಮಣಿ ಪ್ರಯೋಗವೆಂಬ ಹೆಸರಾದರೂ ಏಕೆ ಬೇಕು ಅನ್ನುವ ವಾದಕ್ಕೂ ಅವಕಾಶವಿದೆ. ಮುರಿಯಲ್ಪಟ್ಟುದು. ಹರಿಯಲ್ಪಟ್ಟುದು ಮುಂತಾದವುಗಳನ್ನು ಮುರಿದುದು, ಹರಿದುದು ಎಂದು ಮುಂತಾಗಿ ನಪುಂಸಕಲಿಂಗಾಂತಗೊಳಿಸಲೂ ಸಾಧ್ಯವಿರುವಾಗ ಕರ್ಮಣಿ ಪ್ರಯೋಗವೆಂದು ಹೇಳಬೇಕಾದುದು ಆವಶ್ಯಕವೋ ಹೇಗೆ ಅನ್ನುವ ಮಾತೂ ಬರಬಹುದು. ಪೂಜಾರರು ತಮ್ಮ 'ಕೆಲವು ಕನ್ನಡ ವ್ಯಾಕರಣ ವಿಚಾರಗಳು' ಎನ್ನುವ ಪುಸ್ತಿಕೆಯಲ್ಲಿ ಇಂತಹ ಆಕ್ಷೇಪವೊಂದು

... ಅನುಭವಿಸುತ್ತಾನೆ ಎಂದು ಅರ್ಥವಾಗಿ ರಾವಣನೇ ಕ್ರಿಯೆಯ ಕರ್ತೃವಾಗುತ್ತಾನೆ ಎನ್ನುವುದು ಅಲ್ಲಿಯ ಆಕ್ಷೇಪಕಾರರ ವಾದದ ತಿರುಳು. ಪೂಜಾರರು ಈ ಆಕ್ಷೇಪಣೆಗೆ ಸಮಾಧಾನ ಕೊಟ್ಟು ಸಂಸ್ಕೃತದ ''ರಾಮೇಣ ರಾವಣೋ ಹನ್ಯತೇ'' (ರಾಮನಿಂದ ರಾವಣನು ಕೊಲ್ಲಲ್ಪಡುತ್ತಾನೆ) ಎನ್ನುವುದನ್ನು ಕರ್ತರಿ ಪ್ರಯೋಗದಲ್ಲೇ ಕನ್ನಡದಲ್ಲಿ ಹೇಳಿದರೆ ಆಗ ಕರ್ತೃವಾಚಕವಾಗುವ ರಾಮ ಆಕ್ಷೇಪಕರ ಅಭಿಪ್ರಾಯದಂತೆ ಹೋದರೆ, ಹೇತುವಾಗುವ ಅಶಾಸ್ತ್ರೀಯಸಂದರ್ಭ ಬರುತ್ತದೆ ಹಾಗೂ ಕನ್ನಡದಲ್ಲಿ ''ರಾಮನಿಂದಾಗಿ ರಾವಣನು ಸಾಯುತ್ತಾನೆ'' ಎಂದು ಹೇಳುವಲ್ಲಿ ಸಂಸ್ಕೃತದ ವಾಕ್ಯದಲ್ಲಿಯ ಇಚ್ಛಿತಾರ್ಥವು ಬರುವುದಿಲ್ಲವೆಂದು ಸ್ಪಷ್ಟಪಡಿಸುತ್ತಾರೆ.

ಅವನ ಕೈ ಮುರಿದು ಹೋಯಿತು
ಕಾಲುಗಳು ಕಡಿದು ಹೋದವು

ಮುಂತಾದವು ಬಂದಾಗಲೂ ಕರ್ತೃವಾಚಕವನ್ನು ಹೇಳದೇ ಇದ್ದರೂ, ಯಾರು ಯಾರಿಂದ ಎನ್ನುವುದು ಅಪೇಕ್ಷಿತವಾಗುವುದರಿಂದ ಕರ್ಮಣಿಪ್ರಯೋಗವೇ ಇಲ್ಲಿ ಬಂದಿದೆಯೆಂದು ಹೇಳಬೇಕಾಗುತ್ತದೆ. ಆದುದರಿಂದಲೇ ಕುಲಕರ್ಣಿಯವರು ಆರಿಸಿಕೊಡುವ 'ಚಿತ್ರಮಯವಾಗಿ ಕಟ್ಟಿತು ಪರ್ಣಶಾಲೆ' (ಜೈಮಿನಿ ಭಾರತ ೧೯–೪೨) ಮುಂತಾದವುಗಳಲ್ಲೂ ಅವರು ಸ್ಪಷ್ಟಪಡಿಸುವಂತೆ ಕರ್ಮಣಿಪ್ರಯೋಗವೇ ಬರುತ್ತದೆ.

ಧಾರವಾಡಕರರು ತೆಲುಗು, ತಮಿಳು ಭಾಷೆಗಳ ಕರ್ಮಣಿ ಪ್ರಯೋಗದ ವಿಚಾರವನ್ನು ಹೇಳುತ್ತ ಅಲ್ಲಿಯೂ ಮೊದಲು ಇದಕ್ಕೆ ವ್ಯಾಕರಣದ ಮರ್ಯಾದೆ ದೊರೆಯದೇ ಹೋದುದನ್ನು ಪ್ರಸ್ತಾವಿಸುತ್ತಾರೆ. ಕನ್ನಡದ ಮಟ್ಟಿಗಂತೂ ಕರ್ಮಣಿ ಪ್ರಯೋಗದ ಸಾಧ್ಯಾಸಾಧ್ಯತೆಯ ವಾದದಲ್ಲಿ ಸಿಕ್ಕಿ ಹಾಕಿಕೊಳ್ಳುವ ಮನಸ್ಸು ಇಲ್ಲದ್ದರಿಂದ ಕನ್ನಡದ ಅತ್ಯಂತ ಪ್ರಾಚೀನ ವೈಯಾಕರಣಿಗಳಾದ ನಾಗವರ್ಮನಾಗಲಿ ಕೇಶಿರಾಜನಾಗಲಿ ಕರ್ಮಣಿ ಪ್ರಯೋಗವನ್ನು ಸ್ಪಷ್ಟವಾಗಿ ಸೂತ್ರವ್ಯಾಖ್ಯೆಗಳೊಂದಿಗೆ ನಮೂದಿಸುವ ಗೊಡವೆಗೇ ಹೋಗಲಿಲ್ಲ. ಆದರೆ ಭಟ್ಟಾಕಳಂಕನು ಯಾವ ಅಳುಕಿಗೂ ಬಳುಕದೆ ''ಕರ್ಮಣಿ'' ಎಂದು ಮುಂತಾದ ಸೂತ್ರಗಳನ್ನು ಬರೆದು ಪ್ರಯೋಗಗಳನ್ನು ಸಂದರ್ಭೋಚಿತವಾಗಿ ಚಿಕ್ಕದಾಗಿ ಕೊಡುತ್ತ, ವಿವರವಾದ ವ್ಯಾಖ್ಯೆಗಳೊಂದಿಗೆ ಸಾಕಷ್ಟು ಆಳವಾದ ಚರ್ಚೆಯನ್ನು ನಡೆಸಿದ್ದಾನೆ. ಇದಕ್ಕೆ ಮುಖ್ಯಕಾರಣ ಉಭಯಭಾಷಾವ್ಯಾಕರಣಪಾಂಡಿತ್ಯದ ಜೊತೆಜೊತೆಗೆ ಕನ್ನಡ ಭಾಷೆಯು ಇತರ ಎಲ್ಲ ಭಾಷೆಗಳಿಗಿಂತಲೂ ಮನಸ್ಸಿಗೆ ಮುದವೀಯುವುದೆಂಬ ಆತನ ಅಭಿಮಾನವೂ ಹೌದು (ಚೇತಃ ಚಮತ್ಕಾರಕಾರಿಣೀ ಚ ಕರ್ಣಾಟಕ್ಯೇವ ಗೀಃ ನಾನ್ಯಾ) ಸಂಸ್ಕೃತದ ಸಮಾನಸ್ಥಾನ ಕನ್ನಡಕ್ಕಿದೆ ಎನ್ನುವುದನ್ನು ಸಂಸ್ಕೃತ ಜಗತ್ತಿಗೆ ತಿಳಿಸುವ ಉದ್ದೇಶದಿಂದ ಆತ ಕನ್ನಡವ್ಯಾಕರಣಗ್ರಂಥವನ್ನು ಸಂಸ್ಕೃತದಲ್ಲಿ ಬರೆದದ್ದು. ಪಾಣಿನಿಯ ... ಸಂಸ್ಕೃತವ್ಯಾಕರಣಗ್ರಂಥ

ಗಳನ್ನು ಕಂಠಸ್ಥಗೊಳಿಸಿಕೊಂಡಿದ್ದ ಭಟ್ಟಾಕಳಂಕನು ಕನ್ನಡಕ್ಕೂ ಅವಕ್ಕೆ ಸಮವಾದ ವ್ಯಾಕರಣಗ್ರಂಥವೊಂದನ್ನು ನಿರ್ಮಿಸಬೇಕೆಂಬ ಮಹದಾಸೆಯಿಂದ ತನ್ನ ವ್ಯಾಕರಣಕೃತಿಯನ್ನು ಸಂಸ್ಕೃತದಲ್ಲಿ ಬರೆದನು. ಮಾತ್ರವಲ್ಲದೆ ಸಂಸ್ಕೃತವ್ಯಾಕರಣದ ಎಲ್ಲ ಪ್ರಕ್ರಿಯೆಗಳನ್ನೂ ಕನ್ನಡಕ್ಕೆ ಹೊಂದಿಸಿ ವಿಶದವಾಗಿ ವಿವೇಚಿಸಿ ತನ್ನ ಸಾಮರ್ಥ್ಯವನ್ನು ಮೆರೆಸುವ ನಿರ್ಧಾರದಿಂದ ಕನ್ನಡದ ಕರ್ಮಣಿಪ್ರಯೋಗವನ್ನು ಶಾಸ್ತ್ರಾಂಕಿತಗೊಳಿಸಿದನು.

ಕನ್ನಡದಲ್ಲಿ ಎಲ್ಲ ಸಂದರ್ಭಗಳಲ್ಲೂ ಕರ್ಮಣಿ ಪ್ರಯೋಗವು ಬಳಕೆಗೆ ಬರಲಾರದು ಎನ್ನುವುದು ವಾಸ್ತವವಾದರೂ. ಅನೇಕ ಸಂದರ್ಭಗಳಲ್ಲಿ ಇದರ ಪ್ರಯೋಜನವನ್ನು ಕಡೆಗಣಿಸಲಾಗದು.

# ಶಾಸನಗಳಲ್ಲಿಯ ಕೆಲವು ಶಬ್ದಾರ್ಥಗಳ ವಿಚಾರ

ಜಿ. ಎಸ್. ಗಾಯಿ

೧

ಈಗ ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿರುವ ರಾಷ್ಟ್ರಕೂಟ ಅರಸು ಮೂರನೆಯ ಗೋವಿಂದನ ಕ್ರಿ.ಶ. ೮೦೪ರ ತಾಮ್ರಶಾಸನದಲ್ಲಿ ಹೀಗೆ ಹೇಳಿದೆ :

> ಶ್ರೀ ಪೃಥುವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಗೋಯಿನ್ದರ ಭಟಾರರಾ... ರಾಜ್ಯ ಪ್ರವರ್ದ್ಧಮಾನಕಾಲದೊಳ್ ಕಞ್ಚಿಯನಾಳ್ವ ದನ್ತಿಗನಮೇಗೆಟ್ಟು ಕಪ್ಪಂಗೊಳಲ್ಬನ್ದಲ್ಲಿ ತುಂಗಭದ್ರೆಯಾ ತಡಿಯೊಳ್ತಾಣ ಬೀಡುಗಳಿಟ್ಟು ರಾಮೇಶ್ವರ ಎಮ್ಬ ತೀರ್ತ್ಥದಾ ಮೊದಲೊಳ್ಮೆಪ್ಪಿಕ್ಕಿ ಪೊರದ ಪನ್ದಿಗಳನಿಱಿಯಲ್ಬನ್ದಲ್ಲಿ ತೀರ್ತ್ಥದೊಳ್ಪನ್ಕಣ್ಡು ಶಿವಧಾರಿ ಎಮ್ಬ ಗೊರವರ್ಗ್ಗೆ ಮುದುಮ್ಬೆಯನ್...ವಿಟ್ಟಾರ್

ಈ ಶಾಸನವನ್ನು ಪ್ರಕಟಿಸಿದ ಫ್ಲೀಟರು ಮೇಲೆ ಉದ್ಧರಿಸಿದ ಭಾಗವನ್ನು ಹೀಗೆ ಅರ್ಥೈಸಿದ್ದಾರೆ :

'ಗೋಯಿನ್ದರಾಜನ ಆಳಿಕೆಯ ಕಾಲದಲ್ಲಿ (ಈ ಅರಸನು) (ಪಲ್ಲವರ ಅರಸು) ದನ್ತಿಗನನ್ನು ಗೆದ್ದು (ಅವನಿಂದ) ಕಪ್ಪ-ಕಾಣಿಕೆಗಳನ್ನು ತೆಗೆದುಕೊಳ್ಳಲು ಬಂದಾಗ, ತುಂಗಭದ್ರೆಯ ತಟದಲ್ಲಿ ತನ್ನ ಸೈನ್ಯದ ಬೀಡು ಬಿಟ್ಟು, (ತಾನು) ಮೊದಲೊಮ್ಮೆ (ಅಲ್ಲಿಗೆ ಬಂದಾಗ ಅಲ್ಲಿದ್ದ) ರಾಮೇಶ್ವರ ಎಂಬ ತೀರ್ತ್ಥದ (ಸ್ಥಳವನ್ನು) ಒಪ್ಪಿಕೊಂಡು, (ಮತ್ತೊಮ್ಮೆ) ಅಲ್ಲಿಗೆ ಸಾಕಿದ ಹಂದಿಗಳ ಬೇಟೆಗೆಂದು ಬಂದಾಗ ಆ ತೀರ್ತ್ಥದ ಸೌಂದರ್ಯವನ್ನು ಮೆಚ್ಚಿಕೊಂಡು, ಮುದುಂಬೆಯನ್ನು ಶಿವಧಾರಿ ಭಟಾರರಿಗೆ ಕೊಟ್ಟನು.''[1]

ಫ್ಲೀಟರು ಕೊಟ್ಟಿರುವ ಮೇಲಿನ ಅರ್ಥದಲ್ಲಿ ಕೆಲವು ತಪ್ಪುಗಳಿವೆಯೆಂದು ಹೇಳಬೇಕಾಗಿದೆ. ಮೊದಲನೆಯದಾಗಿ, 'ದನ್ತಿಗನಮೇಗೆಟ್ಟು' ಎಂಬುದನ್ನು ಅವರು 'ದನ್ತಿಗನಮೆ ಗೆಟ್ಟು' ಎಂದು ಓದಿ ಪದಚ್ಛೇದ ಮಾಡಿಕೊಂಡು, ದನ್ತಿಗನನ್ನು ಗೆದ್ದು ಎಂದು ಅರ್ಥೈಸಿರುವುದು ಸರಿಯಲ್ಲ. 'ಗೆಟ್' ಶಬ್ದಕ್ಕೆ 'ಗೆಲ್ಲು, ಜಯಿಸು' ಎಂಬ ಅರ್ಥವಿಲ್ಲ. ಆದುದರಿಂದ ಇದನ್ನು 'ದನ್ತಿಗನ ಮೇಗೆಟ್ಟು' ಎಂದು ಪದಚ್ಛೇದ ಮಾಡಿಕೊಂಡು ''ದಂತಿಗನ ಮೇಲೆ ದಂಡೆತ್ತಿ ಬಂದು'' ಎಂಬುದಾಗಿ ಅರ್ಥೈಸುವುದು ಸರಿಯಾಗುತ್ತದೆ.

ಇನ್ನು ''ರಾಮೇಶ್ವರ ಎಮ್ಬ ತೀರ್ತ್ಥದಾ ಮೊದಲೊಳ್ಮೆಪ್ಪಿಕ್ಕಿ'' ಎಂಬುದನ್ನು

"ರಾಮೇಶ್ವರ ಎಂಬ ತೀರ್ತ್ಥವನ್ನು (ಅಲ್ಲಿಗೆ ಮೊದಲನೆಯ ಸಲ ಬಂದಾಗ) ಒಪ್ಪಿಕೊಂಡು" ಎಂದು ಫ್ಲೀಟರು ಅರ್ಥೈಸಿರುವದೂ ಸರಿಯಲ್ಲವೆಂದು ನನಗನಿಸುತ್ತದೆ. 'ಮೆಪ್ಪು' ಎಂಬ ಶಬ್ದಕ್ಕೆ 'ಒಪ್ಪಿಕೊಳ್ಳು' ಎಂಬ ಅರ್ಥವಿಲ್ಲ. ಈ ಶಬ್ದವು ಕಿಟ್ಟೆಲ್ ಕೋಶದಲ್ಲಿಲ್ಲ. ಇಲ್ಲಿ ಅವರು ಓದಿರುವ 'ಮೆಪ್ಪು' ಎಂಬುದನ್ನು 'ಮೇಪ್ಪು' ಎಂದೂ ಓದಬಹುದು. 'ಮೇಪ್ಪು' ಶಬ್ದವು 'ಮೇಪು' ಎಂಬ ಶಬ್ದಕ್ಕೆ ಸಂಬಂಧಪಟ್ಟಂತೆ ತೋರುತ್ತದೆ. 'ಮೇಪು' ಶಬ್ದವು 'ಮೇ' ಅಥವಾ 'ಮೇಯ್' ಧಾತುವಿನ ನಾಮಪದವಾಗಿದ್ದು ಪ್ರಸ್ತುತ ಶಾಸನದಲ್ಲಿ 'ಮೇವು' ಎಂಬರ್ಥದಲ್ಲಿ ಉಪಯೋಗವಾದಂತೆ ಕಂಡುಬರುವದು. ಇದೇ ಅರ್ಥದಲ್ಲಿ 'ಮೇಪು' ಶಬ್ದವನ್ನು 'ಪಂಪಭಾರತ'ದಲ್ಲಿ ಅರ್ಜುನನ ಮೃಗಯಾ ವಿನೋದದ ವರ್ಣನೆಯ ಸಂದರ್ಭದಲ್ಲಿ ಬಳಸಲಾಗಿದೆ. ಉದಾ : 'ಪೆರ್ವೇಂಟೆ ದೀವವೇಂಟೆಯುಂ ಕಳಿವುಂ ಉಱಿವುಂ ಕಾಪುಂ ಮೇಪುಂ' ಇತ್ಯಾದಿ (ಪಂಪಭಾ., ೫–೪೩ವ. ಮತ್ತು ಪಂಪಭಾ. ದೀಪಿಕೆ ಪು. ೧೯೫). ಆದುದರಿಂದ ಪ್ರಸ್ತುತ ಶಾಸನದಲ್ಲಿರುವ "ಮೊದಲೊಳ್ ಮೇಪ್ಪಿಕ್ಕಿ ಪೊ[ರೆ]ದ ಪಂದಿಗಳನಿಱಿಯಲ್ಬನ್ದಲ್ಲಿ" ಎಂಬ ವಾಕ್ಯವನ್ನು (ಇದೂ ಮೃಗಯಾ-ವಿನೋದಕ್ಕೆ ಸಂಬಂಧಿಸಿದೆ) ಮೊದಲಿಗೆ ಮೇವನ್ನು ಹಾಕಿ ಸಲಹಿದ ಹಂದಿಗಳನ್ನು (ಬೇಟೆಯಾಡಲು ರಾಜನು) ಬಂದಾಗ" ಎಂದು ಅರ್ಥೈಸುವುದು ಸೂಕ್ತವೆಂದೆನಿಸುತ್ತದೆ.

೨

ಸಂಸ್ಕೃತದಲ್ಲಿ 'ಶ್ರೀ' ಶಬ್ದವು ಸಾಮಾನ್ಯವಾಗಿದ್ದು, ಕೆಳಗಿನ ಕೆಲವು ಶಾಸನಗಳಲ್ಲಿ ಈ ರೀತಿ ಬಳಸಲಾಗಿದೆ :

(೧) ಈಗ ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿದ್ದ ಒಂದು ಸ್ಫಟಿಕದ ಮೇಲೆ ಕ್ರಿ.ಶ. ೩ನೆಯ ಶತಮಾನದ ಲಿಪಿಯಲ್ಲಿ ಕೊರೆಯಲಾದ ಶಾಸನದಲ್ಲಿ[2] "ಶ್ರೀವರ್ಮಹಾರಾಜಾವರೀಷ್ಯಸ್ಯ" ಎಂದು ಬರೆದಿದೆ.

(೨) ಹಿಮಾಚಲ ಪ್ರದೇಶದ ಸಾಲ್ರೀ ಎಂಬಲ್ಲಿ ದೊರೆತ ಕ್ರಿ.ಶ. ೪ನೆಯ ಶತಮಾನದ ಶಾಸನದಲ್ಲಿ[3] ರಾಜನ ಹೆಸರನ್ನು "ಮಹಾರಾಜ ಶ್ರೀಶ್ಚಣ್ಡೇಶ್ವರಹಸ್ತಿನ್" ಎಂದು ಬರೆಯಲಾಗಿದೆ.

(೩) ಪರಮಾರ ವಂಶದ ಅರಸು ನರವರ್ಮನ ಕ್ರಿ.ಶ. ೪೦೪ನೆಯ ತೇದಿಯ ಮಂದಸೋರ (ಮಾಳವ) ಶಾಸನದಲ್ಲಿ[4] "ಶ್ರೀರ್ಮ್ಮಾಲವಗಣಾಮ್ನಾತೇ ಶ್ರೀರ್ಮ್ಮಹಾರಾಜ ನರವರ್ಮ್ಮಣಿ" ಎಂದು ಹೇಳಿದೆ.

(೪) ಅದೇ ಅರಸನ ಕ್ರಿ.ಶ. ೪೧೭ನೆಯ ಬಿಹಾರ-ಕೋಟ್ರಾ ಎಂಬಲ್ಲಿ ದೊರೆತ ಶಾಸನದಲ್ಲಿ[5] "ಶ್ರೀರ್ಮ್ಮಹಾರಾಜ ನರವರ್ಮ್ಮಣಃ" ಎಂದಿದೆ.

(೫) ಕ್ರಿ.ಶ. ೬ನೆಯ ಶತಮಾನದ ಕಲಿಂಗ ಅರಸು ಉಮವರ್ಮನ ಧವಲಪೇಟ ತಾಮ್ರಶಾಸನದಲ್ಲಿ[6] "ಶ್ರೀರ್ಮ್ಮಹಾರಾಜೋಮವರ್ಮ್ಮಾ" ಎಂದು ಬರೆದಿದೆ.

ಮೇಲೆ ಕೊಟ್ಟ ಎಲ್ಲ ಉದಾಹರಣೆಗಳಲ್ಲಿ 'ಶ್ರೀ' ಶಬ್ದವನ್ನು ಪ್ರಥಮಾವಿಭಕ್ತಿಯ ಏಕವಚನದಲ್ಲಿ ಬಳಸಲಾಗಿದೆ. ಮೊದಲನೆಯ ಶಾಸನವನ್ನು ಪ್ರಕಟಿಸಿದ ಡಿ. ಸಿ. ಸರ್ಕಾರ್ ಅವರು ''ಶ್ರೀರ್ಮಹಾರಾಜಾವರೀಷ್ಯಸ್ಯ'' ಎಂಬುದರಲ್ಲಿ ವ್ಯಾಕರಣದ ದೋಷವಿದ್ದುದ ರಿಂದ ಅದನ್ನು ''ಶ್ರೀಮಹಾರಾಜಾವರೀಷ್ಯಸ್ಯ'' ಎಂದು ತಿದ್ದಿಕೊಂಡು ಓದಬೇಕೆಂದು ಸೂಚಿಸಿದ್ದಾರೆ. ಅದರಂತೆ ''ಶ್ರೀರ್ಮ್ಮಾಲವಗಣಾಮ್ನಾತೇ'' ಮತ್ತು ''ಶ್ರೀರ್ಮ್ಮಹಾರಾಜ-ನರವರ್ಮ್ಮನ್'' ಎಂಬಲ್ಲಿ ''ಶ್ರೀರ್ಮ್ಮಾಲವ'' ಹಾಗೂ ''ಶ್ರೀರ್ಮ್ಮಹಾರಾಜ'' ಎಂಬ ರೂಪಗಳು ವ್ಯಾಕರಣದ ದೃಷ್ಟಿಯಿಂದ ಸಾಧುವಲ್ಲವೆಂದೂ ಅವುಗಳನ್ನು ತಿದ್ದಿಕೊಂಡು 'ಶ್ರೀಮಾಲವ' ಮತ್ತು 'ಶ್ರೀಮಹಾರಾಜ' ಎಂದು ಓದಬೇಕೆಂದೂ ಡಿ. ಆರ್. ಭಾಂಡಾರಕರ್ ಹಾಗೂ ಡಿ. ಸಿ. ಸರ್ಕಾರ್ ಸೂಚಿಸಿದ್ದಾರೆ. ಆದರೆ ಹರಪ್ರಸಾದ ಶಾಸ್ತ್ರೀ ಅವರು 'ಶ್ರೀ' ಶಬ್ದವು ಸಮಸ್ತಪದದ ಪ್ರಥಮ ಭಾಗವಾಗಿ ಬಳಸಿದಾಗ ವಿಭಕ್ತಿರಹಿತವಾಗಿರುತ್ತದೆಂದೂ 'ಶ್ರೀರ್ಮ್ಮಾಲವ' ಮತ್ತು 'ಶ್ರೀರ್ಮ್ಮಹಾರಾಜ' ಎಂಬ ಶಾಸನಪದಗಳಲ್ಲಿ 'ಶ್ರೀ' ಶಬ್ದವನ್ನು ಪ್ರಥಮಾ ವಿಭಕ್ತಿಯ ಏಕವಚನವಾಗಿ ಬಳಸಲಾಗಿದ್ದು ವ್ಯಾಕರಣದ ದೃಷ್ಟಿಯಿಂದ ಸಾಧುವೆಂದೂ ಹೇಳಿದ್ದಾರೆ. ಇವರ ಅಭಿಪ್ರಾಯವನ್ನು ಎಸ್. ಎನ್. ಚಕ್ರವರ್ತಿ ಅವರೂ ಅನುಮೋದಿಸಿದ್ದಾರೆ. ಆದರೆ ಈ ವಿದ್ವಾಂಸದ್ವಯರು ತಮ್ಮ ಅಭಿಪ್ರಾಯಕ್ಕೆ ಆಧಾರವನ್ನು ಕೊಟ್ಟಿರುವುದಿಲ್ಲ. ನಮ್ಮ ಅಭಿಪ್ರಾಯದಲ್ಲಿ ಹರಪ್ರಸಾದ ಶಾಸ್ತ್ರೀ ಅವರ ಹೇಳಿಕೆಯು ಸರಿಯಾಗಿದ್ದು, ಮೇಲೆ ಉದಾಹರಿಸಿದ ಶಾಸನಗಳಲ್ಲಿ 'ಶ್ರೀ' ಶಬ್ದದ ಪ್ರಯೋಗವು ಸಾಧುವಾಗಿರುತ್ತದೆ. ಈ ಸಂದರ್ಭದಲ್ಲಿ 'ಅಙ್ಯಾಂ ತತ್ವಾನ್ನ ಸು-ಲೋಪಃ'[7] ಎಂಬ ವ್ಯಾಕರಣದ ನಿಯಮದತ್ತ ವಿದ್ವಾಂಸರ ಗಮನವನ್ನು ಸೆಳೆಯಬಯಸುತ್ತೇನೆ. ಅಂದರೆ 'ಶ್ರೀ' ಮತ್ತು 'ಲಕ್ಷ್ಮೀ' ಎಂಬ ಶಬ್ದಗಳು 'ಙೀ' ಪ್ರತ್ಯಯಾಂತವಾಗಿರದುದರಿಂದ ಪ್ರಥಮಾವಿಭಕ್ತಿಯ ಏಕವಚನದಲ್ಲಿ ವಿಸರ್ಗಲೋಪವಿರುವುದಿಲ್ಲ. 'ಗೌರೀ', 'ನದೀ' ಮತ್ತು 'ಸ್ತ್ರೀ' ಮುಂತಾದ ಶಬ್ದಗಳು 'ಙೀ' ಪ್ರತ್ಯಯಾಂತಗಳಾಗಿದ್ದು 'ಶ್ರೀ' ಹಾಗೂ 'ಲಕ್ಷ್ಮೀ' ಶಬ್ದಗಳು 'ಈ' ಪ್ರತ್ಯಯಾಂತಗಳಾಗಿವೆ. ಆದುದರಿಂದ ''ಹಲ್ ಙ್ಯಾಭ್ಯೋ ದೀರ್ಘಾತ್ ಸು-ತಿ-ಸ್ಯಪೃಕ್ತಂ ಹಲ್'' ಅಂದರೆ 'ಙೀ' ಪ್ರತ್ಯಯಾಂತ ಸ್ತ್ರೀಲಿಂಗ ಶಬ್ದಗಳು ಪ್ರಥಮಾವಿಭಕ್ತಿಯ ಏಕವಚನದಲ್ಲಿ ವಿಸರ್ಗವನ್ನು ಕಳೆದುಕೊಳ್ಳುತ್ತವೆ ಎಂಬ ಪಾಣಿನಿ ಸೂತ್ರವು (೬–೧–೬೮) 'ಶ್ರೀ' ಮತ್ತು 'ಲಕ್ಷ್ಮೀ' ಮುಂತಾದ 'ಈ' ಪ್ರತ್ಯಯಾಂತ ಶಬ್ದಗಳಿಗೆ ಅನ್ವಯಿಸುವುದಿಲ್ಲ. ಇದೇ ಸಂದರ್ಭದಲ್ಲಿ ''ಕೃದಿಕಾರಾದಕ್ತಿನಃ ಇತಿ ಙೀಷಿ ತು ಸು-ಲೋಪೋ ಭವತ್ಯೇವ''[8] ಎಂದರೆ ''ಸ್ತ್ರಿಯಾಂ ಕ್ತಿನ್'' ಎಂಬ ಪಾಣಿನಿ ಸೂತ್ರದ (೩–೩–೯೪) ಪ್ರಕಾರ ರಚಿತವಾದ 'ಙೀ' ಪ್ರತ್ಯಯಾಂತ ಸ್ತ್ರೀಲಿಂಗ ಶಬ್ದಗಳ ಪ್ರಥಮಾವಿಭಕ್ತಿಯ ಏಕವಚನದಲ್ಲಿ ಮಾತ್ರ ವಿಸರ್ಗಲೋಪವುಂಟಾಗುತ್ತವೆ. ಈ ವ್ಯಾಕರಣ ನಿಯಮದಂತೆ 'ಕ್ತಿನ್' (ಙೀ-ಅಂತ) ಅಲ್ಲದೆ ಹಾಗೂ 'ಈ' ಪ್ರತ್ಯಯಾಂತಗಳಾದ 'ಶ್ರೀ' ಮತ್ತು 'ಲಕ್ಷ್ಮೀ' ಶಬ್ದಗಳು ಪ್ರಥಮಾ-ವಿಭಕ್ತಿಯ ಏಕವಚನದಲ್ಲಿ ವಿಸರ್ಗವನ್ನು ಉಳಿಸಿಕೊಳ್ಳುತ್ತವೆ. ಅದರಂತೆ 'ತರೀ' (ನಾವೆ(

'ತಂತ್ರೀ' (ಕೊಳಲು). 'ಅವೀ' (ರಜಸ್ವಲೆಯಾದ ಸ್ತ್ರೀ) ಮುಂತಾದ ಸ್ತ್ರೀಲಿಂಗ ಶಬ್ದಗಳು 'ಙೀ' ಪ್ರತ್ಯಯಾಂತವಾಗಿರದೆ, 'ಈ' ಪ್ರತ್ಯಯಾಂತವಾಗಿದ್ದು ಪ್ರಥಮಾವಿಭಕ್ತಿಯ ಏಕವಚನದಲ್ಲಿ ವಿಸರ್ಗವನ್ನು ಉಳಿಸಿಕೊಳ್ಳುತ್ತವೆ :

ಅವೀ-ತಂತ್ರೀ-ತರೀ-ಲಕ್ಷ್ಮೀ-ಧೀ-ಹ್ರೀ-ಶ್ರೀಣಾಮುಣಾದಿಷು ।
ಸಪ್ತ-ಸ್ತ್ರೀ-ಲಿಂಗ ಶಬ್ದಾನಾಂ ನ ಸು-ಲೋಪಃ ಕದಾಚನ ॥

ಹೀಗೆ ಮೇಲಿನ ವಿವೇಚನೆಯಿಂದ ಕೆಲವು ಶಾಸನಗಳಲ್ಲಿರುವ ಪ್ರಥಮಾವಿಭಕ್ತಿಯ ಏಕವಚನದ 'ಶ್ರೀಃ' ಇಲ್ಲವೆ 'ಶ್ರೀರ್' ಎಂಬ ರೂಪವು ಸಾಧುವಾಗಿದ್ದು ಭಾಂಡಾರಕರ್ ಮತ್ತು ಸರ್ಕಾರ್ ಅವರು ಭಾವಿಸಿದಂತೆ ಇಲ್ಲಿ ಯಾವ ವ್ಯಾಕರಣದೋಷವೂ ಇಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಈ ರೂಪವನ್ನು ತಿದ್ದಿಕೊಂಡು 'ಶ್ರೀ' ಎಂದು ಓದು ವುದು ಅವಶ್ಯವಿಲ್ಲ.

೩

ಸುಮಾರು ನೂರು ವರುಷಗಳಿಗಿಂತ ಮೊದಲು (೧೮೭೯–೮೦) ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಪ್ರಸಿದ್ಧ ಸ್ಥಳವಾದ ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿದ್ದ ಅತ್ಯಂತ ಸುಂದರವಾದ ನಾಗಪ್ರತಿಮೆಯ ಮೇಲಿದ್ದ ಶಾಸನವನ್ನು ಜೆ. ಬರ್ಜೆಸ್ ಎಂಬ ವಿದ್ವಾಂಸರು ಕಂಡುಹಿಡಿದರು. ಅದನ್ನು ಮೊತ್ತಮೊದಲು ಭಗವಾನಲಾಲ್ ಇಂದ್ರಜಿ ಎಂಬ ವಿದ್ವಾಂಸರು ಪ್ರಕಟಿಸಿದ್ದಾರೆ.[9] ಈ ಶಾಸನವನ್ನು ಕ್ರಿ.ಶ. ೩ನೆಯ ಶತಮಾನದಲ್ಲಿ ಕರ್ನಾಟಕವನ್ನು ಆಳಿದ ಚುಟುಕುಲ ಸಾತಕರ್ಣಿಗಳ ಅರಸು ವಿಣ್ಹುಕಡ ಚುಟುಕುಲಾನನ್ದ ಸಾತಕಣ್ಣಿಯ ಆಳ್ವಿಕೆಯ ೧೨ನೆಯ ವರ್ಷದಲ್ಲಿ ಪ್ರಾಕೃತಭಾಷೆಯಲ್ಲಿ ಬರೆಯಲಾಗಿದೆ. ಅದರಲ್ಲಿ ಸಿವಖಡನಾಗಸಿರಿ ಎಂದರೆ ಶಿವಸ್ಕಂದನಾಗಶ್ರೀ ಎಂಬುವವರು ಒಂದು ನಾಗ ಪ್ರತಿಮೆ, ಕೆರೆ (ತಟಾಕ) ಮತ್ತು ವಿಹಾರ ಇವುಗಳನ್ನು ದಾನಮಾಡಿದ ಬಗ್ಗೆ ಹೇಳಿದೆ. ಶಿವಸ್ಕಂದನಾಗಶ್ರೀ ಎಂಬ ಹೆಸರಿನ ಹಿಂದೆ ೪–೬ ಅಕ್ಷರಗಳು ತ್ರುಟಿತ ಹಾಗೂ ಅಸ್ಪಷ್ಟ ವಾಗಿದ್ದು, ಅವುಗಳನ್ನು ಓದಿ ಅರ್ಥೈಸುವುದು ಕಷ್ಟಸಾಧ್ಯವಾಗಿದೆ. ಭಗವಾನಲಾಲ್ ಇಂದ್ರಜಿ ಮತ್ತು ಬ್ಯುಹ್ಲರ್ ಈ ಅಕ್ಷರಗಳನ್ನು 'ಸಕುಮಾರಾಯ' ಇಲ್ಲವೆ 'ಸಉಮಾ-ರಾಯ' (ಸಕುಮಾರಾಯ) ಎಂದು ಓದಿ ಶಿವಸ್ಕಂದನಾಗಶ್ರೀ ಎಂಬಾಕೆಯು ತನ್ನ ಕುಮಾರನೊಡನೆ ಮೇಲೆ ಉಲ್ಲೇಖಿಸಿದ ದತ್ತಿ ಕೊಟ್ಟಿದ್ದಾಳೆಂದು ಅರ್ಥೈಸಿದ್ದಾರೆ.[10] ಆದರೆ ರ್‍ಯಾಪ್ಸನ್ ಎಂಬ ವಿದ್ವಾಂಸರು ಸಕುಮಾರಾಯ ಎಂಬುದು ಶಿವಸ್ಕಂದನಾಗಶ್ರೀ ಹೆಸರಿಗೆ ಅನ್ವಯಿಸುತ್ತಿದ್ದು, ಶಿವಸ್ಕಂದನಾಗಶ್ರೀ ಎಂಬ ಹೆಸರು ರಾಜಕುಮಾರನದಾಗಿದೆಯೆಂದು ಸೂಚಿಸಿದ್ದಾರೆ.[11] ಇವರ ಅಭಿಪ್ರಾಯವನ್ನು ಲ್ಯುಡರ್ಸ್[12], ಎನ್. ಲಕ್ಷ್ಮೀನಾರಾಯಣ ರಾವ್ ಮತ್ತು ಆರ್. ಎಸ್. ಪಂಚಮುಖಿ[13] ಹಾಗೂ ಡಿ. ಸಿ. ಸರ್ಕಾರ್[14] ಇವರು ಅನುಮೋದಿಸಿದ್ದಾರೆ. ಹೀಗೆ ಶಿವಸ್ಕಂದನಾಗಶ್ರೀ ಎಂಬುದು ಒಬ್ಬ ಸ್ತ್ರೀಯ ಹೆಸರೆಂದು ಕೆಲವು ವಿದ್ವಾಂಸರು ಹೇಳಿದರೆ, ಇತರರು ಅದು ಒಬ್ಬ ಪುರುಷನ (ರಾಜಕುಮಾರನ)

ಹೆಸರೆಂದು ಪ್ರತಿಪಾದಿಸಿದ್ದಾರೆ. ಅನೇಕ ವರುಷಗಳ ಹಿಂದೆ (ಕ್ರಿ.ಶ. ೧೯೪೭–೪೮) ಮೇಲೆ ಹೇಳಿದ ಶಾಸನವನ್ನು ಬನವಾಸಿಗೆ ಹೋಗಿ ಆ ಸ್ಥಳದಲ್ಲಿಯೇ ಪರೀಕ್ಷಿಸುವ ಅವಕಾಶ ನನಗೆ ದೊರಕಿತ್ತು. ಶಾಸನದ ಮೂಲವನ್ನು ಮತ್ತು ನಾನು ಸ್ವತಃ ನಕಲು ಮಾಡಿಕೊಂಡ ಪಡಿಯಚ್ಚುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದಾಗ ಸಿವಖದನಾಗಸಿರಿ (ಶಿವಸ್ಕಂದ ನಾಗಶ್ರೀ) ಎಂಬ ಹೆಸರಿನ ಹಿಂದೆ ತ್ರುಟಿತವಾದ ಹಾಗೂ ಅಸ್ಪಷ್ಟವಾದ ಅಕ್ಷರಗಳನ್ನು ಸಮರ್ಪಕವಾಗಿ ಓದಲು ಸಾಧ್ಯವಾಯಿತು. ಅವುಗಳಲ್ಲಿ ಮೊದಲಿನ ನಾಲ್ಕು ಅಕ್ಷರಗಳನ್ನು ನಿಃಸಂದೇಹವಾಗಿ 'ಯುವರಾಜ' ಎಂದು ಓದಬಹುದು. ಮುಂದಿನ ಮೂರು ಅಕ್ಷರಗಳು ತ್ರುಟಿತವಾಗಿದ್ದು, ಅವುಗಳನ್ನು 'ಮಾತುಯ' ಎಂದು ಓದಬಹುದು.[15] ಹೀಗೆ ಮೇಲೆ ಉಲ್ಲೇಖಿಸಿದ ದತ್ತಿಯು ಯುವರಾಜ-ಮಾತುಯ ಸಿವಖದನಾಗಸಿರಿಯ ಎಂದರೆ ಯುವರಾಜನ ತಾಯಿಯಾದ ಶಿವಸ್ಕಂದನಾಗಶ್ರೀ ಎಂಬಾಕೆಯು ಕೊಟ್ಟಿದ್ದು ಎಂಬ ಅರ್ಥವು ಸ್ಪಷ್ಟವಾಗುತ್ತದೆ. ಆದುದರಿಂದ ಶಿವಸ್ಕಂದನಾಗಶ್ರೀ ಎಂಬ ಹೆಸರು ಪುರುಷನ ದಾಗಿರದೆ ಸ್ತ್ರೀಯ ಹೆಸರೆಂಬುದು ಸ್ಪಷ್ಟವಾಗಿದೆ.

## ಅಡಿಟಿಪ್ಪಣಿ

1. *Indian Antiquary*, Vol. XI (1882), pp. 125–27.
2. *Epigraphia Indica*, Vol. 36, P. 284 ಇದನ್ನು ಡಾ|| ಡಿ. ಸಿ. ಸರ್ಕಾರ್ ಪ್ರಕಟಿಸಿದ್ದಾರೆ.
3. ಅದೇ, Vol. 35, P. 68. ಇದನ್ನು ಡಾ|| ಡಿ. ಸಿ. ಸರ್ಕಾರ್ ಮತ್ತು ಜೆ. ಎಸ್. ಸುಂದರಂ ಪ್ರಕಟಿಸಿದ್ದಾರೆ.
4. *Select Ins.* (1965), pp. 397-98, ಇದನ್ನು ಡಾ|| ಡಿ. ಸಿ. ಸರ್ಕಾರ್ ಪ್ರಕಟಿಸಿದ್ದಾರೆ; *Corp. Ins. Ind.* Vol. III (Rev. ed. 1981), P. 264. ಇದನ್ನು ಡಾ|| ಡಿ. ಆರ್. ಭಾಂಡಾರಕರ್ ಅವರು ಪ್ರಕಟಿಸಿದ್ದಾರೆ.
5. *Corp. Ins. Ind.* Vol. III (Rev. ed. 1881), P. 267. ಇದನ್ನು ಡಾ|| ಡಿ. ಆರ್. ಭಾಂಡಾರಕರ್ ಅವರು ಪ್ರಕಟಿಸಿದ್ದಾರೆ.
6. *Epigraphia Indica*, Vol. 26, p. 134 ಇದನ್ನು ಆರ್. ಕೆ. ಘೋಷಾಲ್ ಪ್ರಕಟಿಸಿದ್ದಾರೆ.
7. ಸಿದ್ಧಾಂತಕೌಮುದೀ (ಚೌಖಂಬ ಸಂಸ್ಕೃತ ಸರಣಿ, ಸಂ. ರಾಮಚಂದ್ರ ಪಣಶೀಕರಶಾಸ್ತ್ರೀ, ೧೯೪೮), ಪು. ೨೦೫.
8. ಅದೇ.
9. *Inscriptions in Cave Temples of West India* (1881), pp. 100–01
10. *Indian Antiquary*, Vol. 14, pp. 331–34.
11. *Catalogue of the Coins of Andhra Dynasty*, p. L III, f.no. 25.
12. *List of Brāhmī Inscriptions*, No. 1186.
13. ಕರ್ನಾಟಕದ ಅರಸುಮನೆತನಗಳು, ಪು. ೩.
14. *Successors of Sātavāhanas*, PP. 221-23.
15. *Epigraphia Indica*, Vol. 34, pp. 241–42.

# ಸಂಸ್ಕೃತಕೋಶಗಳ ಬೆಳವಣಿಗೆ

**ಎಂ. ರಾಜಗೋಪಾಲಾಚಾರ್ಯ**

''ದೇಶ ತಿರುಗು, ಕೋಶ ಓದು'' ಎಂಬುದೊಂದು ಗಾದೆ. ದೇಶವನ್ನು ಯಾರೂ ತಿರುಗಿ ನೋಡಬಹುದು ; ಕೋಶ ನೋಡಬೇಕಾದರೆ ಪಂಡಿತನೇ ಇರಬೇಕು. ಭಾಷೆ ಬಾರದವನಿಗೆ ಕೋಶದಿಂದೇನೂ ಪ್ರಯೋಜನವಾಗದು ; ಸಾಮಾನ್ಯ ಜನರಿಗೆ ಕೋಶದಿಂದೇನೂ ಲಾಭವಿಲ್ಲ. ಈ ಮಾತು ಹೆಚ್ಚಾಗಿ ಸಂಸ್ಕೃತ ಕೋಶಗಳಿಗೆ ಸಂಬಂಧಿಸಿದೆ. ಸಂಸ್ಕೃತದಲ್ಲಿರುವ ಹಲವಾರು ನಿಘಂಟುಗಳಲ್ಲಿ ದಶನಿಘಂಟುಗಳು ಪ್ರಸಿದ್ಧವಾದುವು, ಅದರಲ್ಲೂ ಅಮರಸಿಂಹನ 'ನಾಮಲಿಂಗಾನುಶಾಸನ' ಬಹು ಉಪಯುಕ್ತವಾದ ಕೋಶ. ಇದರ ರಚನೆ ಚಿಕ್ಕದಾಗಿದ್ದರೂ, ತುಂಬ ಅಡಕವಾಗಿದ್ದು, ವ್ಯಾಪಕವಾದ ಶಬ್ದಾರ್ಥಗಳಿಂದ ತುಂಬಿದೆ. ಪ್ರತಿ ವರ್ಗದಲ್ಲೂ ಆಯಾ ವಸ್ತುಗಳಲ್ಲಿ ಮುಖ್ಯವಾದುವನ್ನು ಮಾತ್ರ ಆರಿಸಿ ಕೊಟ್ಟು ಅವುಗಳ ಲಿಂಗಭೇದಗಳನ್ನು ಬಹು ಸಮರ್ಪಕವಾಗಿ ಕೊಡಲಾಗಿದೆ. ಇದರಲ್ಲಿ ಹಲವು ಪಾಠಾಂತರಗಳಿವೆ ಮತ್ತು ಸಾಕಷ್ಟು ಟೀಕೆಗಳೂ ಇವೆ. ಈಗ ಸಂಸ್ಕೃತದಲ್ಲಿ ಹಲವಾರು ಕೋಶಗಳು ಬಂದಿವೆ. ಒಂದೊಂದರಲ್ಲೂ ವಿವಿಧ ರೀತಿಯ ಉದಾಹರಣೆಗಳೂ ಪ್ರಯೋಗ ವಿಶೇಷಗಳೂ ಇವೆ. ಆದರೂ ಅಮರವನ್ನು ಮರೆಯುವ ಹಾಗಿಲ್ಲ. ಈ ಕೋಶಗಳಲ್ಲಿರುವ ವಿಶೇಷವೇನೆಂದರೆ :

ಇದರಲ್ಲಿ ಉಚ್ಚಾರಣೆಯ ರೀತಿಯನ್ನು ಕೊಡುವ ಕ್ರಮವಿಲ್ಲ. ಒಂದು ಪದ ಲಿಂಗವಾಗಿದ್ದರೆ ನಾಮರೂಪ, ವಿಶೇಷಣ, ಅವ್ಯಯ ಇತ್ಯಾದಿ ವಿವರವನ್ನೂ ಧಾತುವಾಗಿದ್ದರೆ ಅದರ ಕ್ರಿಯಾರೂಪ, ಕೃದಂತ, ಅಕರ್ಮಕ, ಸಕರ್ಮಕ ಇತ್ಯಾದಿ ವಿವರವನ್ನೂ ನೀಡಿ, ಬಳಿಕ ಆ ಪದದ ಅರ್ಥಗಳನ್ನು ಸಂಖ್ಯಾನುಕ್ರಮವಾಗಿ ಸೋದಾಹರಣವಾಗಿ ವಿವರಿಸುವುದು. ಬಳಿಕ ಅದರ ಇತಿಹಾಸ, ಐತಿಹ್ಯ, ಸಂಬಂಧಿಸಿದ ಕತೆ, ಘಟನೆ, ಕಾವ್ಯದ ಪ್ರಯೋಗ, ಗಾದೆ ಸೂಕ್ತಿಗಳ ಉದಾಹರಣೆ ಕೊಡುವುದು; ಅಲ್ಲದೆ ಇದು ವ್ಯುತ್ಪನ್ನಶಬ್ದವೇ ಅವ್ಯುತ್ಪನ್ನವೇ ? ವೈದಿಕವೇ ಲೌಕಿಕವೇ ? ಅನ್ಯಭಾಷೆಯಿಂದ ಬಂದುದೇ ಯಾವಾಗ ಬಂದುದು ? ಇತ್ಯಾದಿಗಳನ್ನು ಕೊಡುವುದು. ಇವೆಲ್ಲ ಅಗತ್ಯವಾಗಿ ಬೇಕಾದ್ದೇ. ಆದರೆ ಈಗೀಗ ಇದೂ ಸಾಲದು ಎನಿಸುತ್ತದೆ. ಇನ್ನೂ ಕೆಲವು ಅಂಶಗಳನ್ನು ಸೇರಿಸಬೇಕೆಂದು ಕಾಣುತ್ತದೆ :

(೧) ಒಂದು ಪದಕ್ಕೆ ಅರ್ಥಗಳು ಯಾವಾಗ ಹೇಗೆ ಬಂದುವು ? ಅವುಗಳ ಸಂಕೋಚ ವಿಕಾಸ ಕ್ರಮಗಳೂ ಇರಬೇಕು, ಇದ್ದರೆ ಹೆಚ್ಚು ಉಪಯೋಗಾರ್ಹ. ಉದಾ : ಯಜ್ಞ

=ಪೂಜೆ, ಯಾಗ, ದಾನ ಇತ್ಯಾದಿ : ಈಗ ಯಾಗ ಮಾತ್ರ. ಇದು ಅರ್ಥ ಸಂಕೋಚ ಪಾದ ರೀತಿ (ಭಗವದ್ಗೀತೆ ಮುಂತಾದ ಗ್ರಂಥಗಳಲ್ಲಿ ಯಜ್ಞಪದಕ್ಕೆ ವಿಶಾಲವಾದ ಅರ್ಥವೇ ಇದೆ).

ಯಜಮಾನ=ಹೋಮ ಮಾಡುವವ, ಹೋತೃ ; ಈಗ ಮುಖಂಡ, ಪತಿ, ಒಡೆಯ ಇತ್ಯಾದಿ ವಿಶಾಲವಾದ ಅರ್ಥ ಬಂದಿದೆ. ಇದು ಅರ್ಥವಿಕಾಸ. ಇಂತಹ ಪದಗಳು ಬಂದಾಗ ಅವುಗಳ ಅರ್ಥಗಳ ಸಂಕೋಚ ವಿಕಾಸ ಕ್ರಮದ ವಿವರವನ್ನೂ ಕೊಡುವುದ ರಿಂದ ಬಹಳ ಪ್ರಯೋಜನವಿದೆ. ಅಲ್ಲದೆ—

(೨) ಆಯಾ ಪದಗಳಿಗೆ ವಿರೋಧ ಪದಗಳನ್ನೂ ಕೊಡಬೇಕು : ಸ್ವಂತ (=ಸುಖಾಂತ) : × ದುರಂತ (=ದುಃಖಾಂತ).

(೩) ಅಪಭ್ರಂಶ ರೂಪಗಳಾದರೆ, ಅವನ್ನೂ ಕೊಡಬೇಕು.

(೪) ಅನ್ಯ ಪದಗಳ ಸಂಬಂಧವಿದ್ದಾಗ ವ್ಯಾಕರಣವಿಶೇಷವನ್ನು ಕೊಡಬೇಕು. ಉದಾ : ಧಿಕ್ ಎಂಬ ಅವ್ಯಯವಿರುವಾಗ ದ್ವಿತೀಯಾ ವಿಭಕ್ತಿ ಬರುತ್ತದೆ. ಕೆಲವೊಮ್ಮೆ ಇದು ಐಚ್ಛಿಕ : ಉದಾ : ಧಿಗಸ್ತು ಹೃದಯಸ್ಯಾಸ್ಯ ಧಿಗರ್ಥಾಃ ಕಷ್ಟಸಂಶ್ರಯಾಃ ॥

(೫) ಸಮಾಸವಾದಾಗ, ವ್ಯಸ್ತವಾಗಿರುವಾಗ ರೂಪಗಳು ಹೇಗಾಗುತ್ತವೆ ಎಂಬುದನ್ನೂ ಎಲ್ಲಿ ಸಮಾಸ ಗ್ರಾಹ್ಯ, ಎಲ್ಲಿ ಸಮಾಸ ಕೂಡದು ಎಂಬುದನ್ನೂ ವಾಕ್ಯದಲ್ಲಿ ಈ ಪದದ ಸ್ಥಾನವೇನೆಂಬುದನ್ನೂ ಸೋದಾಹರಣವಾಗಿ ನಿರೂಪಿಸುವುದು ಪ್ರಯೋಜನಕಾರಿ. ಇಲ್ಲಿ 'ಚ' ಎಂಬ ಅವ್ಯಯವನ್ನು, ಆಪ್ಟೆಯವರ ಕೋಶದಲ್ಲಿ ಕೊಟ್ಟಿರುವುದನ್ನು, ಉಳಿದ ಅಂಶಗಳ ಜೊತೆಗೆ ಕೊಡಲಾಗಿದೆ. ಉದಾಹರಣೆಗಾಗಿ—

**ಚ (ಅವ್ಯಯ)**

ಚದಿ ಆಹ್ಲಾದೇ ಭ್ವಾದಿಗಣ ಸೇಟ್
ಅನ್ಯೇ ಭ್ಯೋऽಪಿ ದೃಶ್ಯತೇ ಇತಿ ಡಃ॥

ಇದು ವಾಕ್ಯಾರಂಭದಲ್ಲಿ ಬರಕೂಡದು. 'ನಾ ಪಾದಾದೌ ಖಲ್ವಾದಯಃ' (ವಾಮನ ಸೂತ್ರ); ಚಾನ್ವಾಚಯ ಸಮಾಹಾರೇತರೇತರಸಮುಚ್ಚಯೇ—ಅಮರ.

(೧) **ಅನ್ವಾಚಯ**

ಪ್ರಧಾನಗುಣ ಭಾವೇನ ಯತ್ರ ಕ್ರಿಯಾನ್ವಯ ತಾತ್ಪರ್ಯಂ ಸೋऽನ್ವಾಚಯಃ

ಎರಡು ಕ್ರಿಯೆಗಳನ್ನು ಹೇಳುವಾಗ ಎಲ್ಲಿ ಒಂದು ಮುಖ್ಯವೂ ಮತ್ತೊಂದು ಅಮುಖ್ಯವೂ ಆಗುವುದೋ ಅನ್ವಾಚಯ ; ಭಿಕ್ಷಾಮಟ ಗಾಂ **ಚಾ**ನಯ, ಇಲ್ಲಿ ಗವಾನಯನ ಆನುಷಂಗಿಕ, ಭಿಕ್ಷೆ ತರುವುದು ಮುಖ್ಯ ಕ್ರಿಯೆ ; ದನ ಸಿಕ್ಕಿದರೆ ಮಾತ್ರ ತರುವುದು.

(೨) **ಸಮಾಹಾರ**

**ಪಾಣಿಪಾದಂ—ಪಾಣೀ ಚ ಪಾದೌ ಚ** ಎಂದು ವಿಗ್ರಹ.

ಕೈಕಾಲು ; ಕೈಕಾಲುಗಳು ಎನ್ನಬೇಕಿಲ್ಲ

ಸಮಷ್ಟಿ—ಹಲವಾರು ವಸ್ತುಗಳು ಒಟ್ಟಿಗೆ ಒಂದು ಎಂಬ ಕಲ್ಪನೆ; ಕನ್ನಡದಲ್ಲೂ ಕೈಕಾಲುಗಂಟು ಬಿದ್ದುಹೋಯಿತು ಎಂಬಲ್ಲಿ ಗಂಟುಗಳು ಎನ್ನಬೇಕಿಲ್ಲ. ಇಲ್ಲಿ ಸಮುದಾಯವೇ ವಿಶೇಷ್ಯ.

(೩) **ಇತರೇತರ ಯೋಗ**

ರಾಮ**ಶ್ಚ** ಕೃಷ್ಣ**ಶ್ಚ** ರಾಮಕೃಷ್ಣೌ, ತೌ ವಂದಸ್ವ,

ಇಲ್ಲಿ ವಂದನಕ್ರಿಯೆ ಒಂದೇ, ರಾಮಕೃಷ್ಣರನ್ನು ಒಟ್ಟಿಗೆ ನಮಸ್ಕರಿಸು ಎಂಬ ಭಾವ. ಇದರಲ್ಲಿ ಸಮುದಾಯ ವಿಶೇಷಣ.

(೪) **ಸಮುಚ್ಚಯ**

ದೇವದತ್ತೋ ಯಜ್ಞದತ್ತ**ಶ್ಚ** ಗಚ್ಛತಿ
ಚೈತ್ರೋಗಚ್ಛತಿ ಮೈತ್ರ**ಶ್ಚ**
ಚೈತ್ರೋ ಗಚ್ಛತಿ, ಪಚತಿ **ಚ** (ಕ್ರಿಯಾ ಸಮುಚ್ಚಯ)
ಈಶ್ವರಂ ಗುರುಂ **ಚ** ವಂದಸ್ವ (ದ್ರವ್ಯ ಸಮುಚ್ಚಯ)
ತಯಾ ಸಪುತ್ರ**ಶ್ಚ**, ವಿಭೂಷಿತ**ಶ್ಚ** (ಕ್ರಿಯೆಗೆ ಪ್ರತ್ಯೇಕಾನ್ವಯ)

ಈಶ್ವರಂ ಗುರುಂ ಚ ವಂದಸ್ವ ಎಂಬಲ್ಲಿ ಗುರುವಿಗೆ ಈಶ್ವರ ಸಾಪೇಕ್ಷತ್ವವಿದ್ದರೂ ಈಶ್ವರನಿಗೆ ಗುರುವಿನ ಸಾಪೇಕ್ಷತ್ವವಿಲ್ಲ; ಏಕೆಂದರೆ ಅಲ್ಲಿ 'ಚ' ಶಬ್ದವಿಲ್ಲ. ಹೀಗಾಗಿ ಅನ್ವಾಚಯ ಮತ್ತು ಸಮುಚ್ಚಯಾರ್ಥಗಳಲ್ಲಿ ಸಮಾಸವಿಲ್ಲ. ಸಮಾಹಾರ ಮತ್ತು ಇತರೇತರ ಯೋಗ ಈ ಅರ್ಥಗಳಲ್ಲಿ ಮಾತ್ರ ಸಮಾಸವಿದೆ. ಈ ವಿವರ 'ಚಾರ್ಥೇ ದ್ವಂದ್ವಃ' ಎಂಬ ಸೂತ್ರದಲ್ಲಿ ವಿವೃತವಾಗಿದೆ.

(೫) **ಚ—ಪಾದಪೂರಣಾರ್ಥ**

ಭೀಮಃ ಪಾರ್ಥಸ್ತಥೈವ ಚ

ಇಲ್ಲಿ 'ತಥಾ' ಪದವಿದ್ದ ಬಳಿಕ 'ಚ' ಎಂಬುದು ಕೇವಲ ಪಾದಪೂರಣಾರ್ಥ. 'ತು ಹಿ ಚ ಸ್ಮ ಹ ವೈ ಪಾದಪೂರಣೇ' (ಅಮರ)

(೬) **ಚ—ಅವಧಾರಣ** (ಖಂಡಿತವಾಗಿ, ನಿಶ್ಚಯವಾಗಿ)

ಏತಚ್ಚ ಭವತಿ

ಇದು ಆಗಿಯೇ ತೀರುವುದು.

(೭) **ಚ—ತುಲ್ಯಯೋಗಿತಾ** (ಏಕಕಾಲದಲ್ಲಿ ಭಿನ್ನವಿಶೇಷ್ಯಕಕ್ರಿಯೆ)

ಸಂಕುಚಂತಿ ಸರೋಜಾನಿ ಸ್ವೈರಿಣೀ ವದನಾನಿ ಚ

ಸಂಕುಚಂತಿ ಎಂಬ ಕ್ರಿಯಾಪದಕ್ಕೆ ಸರೋಜ ಮತ್ತು ಸ್ವೈರಿಣೀವದನಗಳು ಆಶ್ರಯಗಳಾಗಿವೆ. ಎರಡೂ ಏಕಕಾಲದಲ್ಲಿ ನಡೆಯುತ್ತವೆ ಎಂಬ ಭಾವ.

(೮) **ಚ—ಚ (ಆ ಕೂಡಲೇ)**

ತೇ **ಚ** ಪ್ರಾಪುರುದನ್ವಂತಂ ಬುಬುಧೇ **ಚಾ**ದಿಪೂರುಷಃ

ದೇವತೆಗಳು ಕ್ಷೀರಸಮುದ್ರವನ್ನು ತಲಪುತ್ತಲೇ ನಾರಾಯಣ ನಿದ್ರೆ ತಿಳಿದೆದ್ದನು : ಇದು ತುಲ್ಯಯೋಗಿತಾರ್ಥಕ್ಕಿಂತ ತುಸು ಭಿನ್ನವಾಗಿದೆ.

(೯) **ಚ-ಆದರೆ (ಪ್ರತ್ಯುತ ಎಂಬ ಅರ್ಥ)**

ಶಾಂತಮಿದಮಾಶ್ರಮಪದಂ ಸ್ಫುರತಿ**ಚ**ಬಾಹುಃ ಕುತಃಫಲಮಿಹಾಸ್ಯ —ಶಾಕುಂತಲ

ಆಶ್ರಮದ ಪರಿಸರ ತುಂಬ ಪ್ರಶಾಂತವಾಗಿದೆ ; ಆದರೆ ಭುಜವು ಅದುರುತ್ತದೆ. ಇದರ ಪರಿಣಾಮವೇನಿರಬಹುದು ?

(೧೦) **ಚ—ಸಂಭಾವ್ಯ (ಚೇತ್ ಎಂಬ ಅರ್ಥ)**

ಲೋಭ**ಶ್ಚಾ**ತಿಗುಣೇನ ಕಿಮ್ ?

ಲೋಭ ಒಂದಿದ್ದರೆ ಸಾಕು, ಇತರ ಗುಣಗಳೇಕ್ಕಿದ್ದರೇನು ?

(೧೧) **ಕನ್ನಡದಲ್ಲೂ 'ಚ-ತು ತಪ್ಪದೆ ಹೇಳಿದ' ಎಂಬಂತಹ ಪ್ರಯೋಗಗಳಿವೆ.**

ಇಂತಹ ವಿವರಗಳು ಪ್ರತಿಪದಕ್ಕೂ ಇರಬೇಕು ; ಮಾತ್ರವಲ್ಲದೆ ಒಂದೇ ಪದಕ್ಕೆ ವಿರುದ್ಧಾರ್ಥಗಳಿದ್ದರೆ ಅದನ್ನೂ ಅಲ್ಲೇ ಕೊಡುವುದರಿಂದ ಪ್ರಯೋಜನವಿದೆ. ಇವು ತೋರಿಕೆಯ ವಿರುದ್ಧಾರ್ಥಗಳೇ ಹೊರತು ನಿಜವಾಗಿ ಹಾಗಲ್ಲ. ಕೆಲವು ಸಾಪೇಕ್ಷ ಪದಗಳನ್ನು ವಿರುದ್ಧಾರ್ಥಗಳ ಹಾಗೆ ಬಳಸುವುದುಂಟು.

ಉದಾ : ಅನಂತರಂ—ಇದಕ್ಕೆ ಮುಂದೆ, ಹಿಂದೆ ಎಂಬ ಎರಡು ಅರ್ಥಗಳಿವೆ.

(೧) ಅನಂತರಂ ಸಾ ಗತಾ (ಬಳಿಕ ಆಕೆ ಹೋದಳು).

(೨) ವೃತ್ತಮನಂತರೋಕ್ತಂ (ವೃತ್ತ ಹಿಂದೆ ಹೇಳಿದ್ದೇ ಆಗಿದೆ).

ಆದರೆ ಸಮನಂತರಂ ಎಂದರೆ ಆ ಬಳಿಕ ಎಂದು ಮಾತ್ರ ಅರ್ಥ.

ಉಕ್ತಮಧಸ್ತಾತ್—ಹಿಂದೆ ಹೇಳಿದೆ ಅಥವಾ ಮುಂದೆ ಹೇಳಿದೆ ಎಂದು ಎರಡೂ ಅರ್ಥಗಳಿವೆ.

ಅವ್ಯುತ್ಪನ್ನ ಪದಗಳು, ದೇಶಭಾಷಾ ಪದಗಳು, ಇತರ ಭಾಷೆಗಳಿಂದ ಬಂದು ಸೇರಿ ಈಗ ಸಾಧು ಪ್ರಯೋಗವೆನಿಸಿದಂಥವು—ಇವೆಲ್ಲವನ್ನೂ ವಿವರವಾಗಿ ತಿಳಿಸುವುದರಿಂದ ಬಹಳ ಪ್ರಯೋಜನವಿದೆ. ಉದಾ :

ಲೇಲಿಹಾನಃ–ಸರ್ಪ (ಅವ್ಯುತ್ಪನ್ನಪದ)

ಲೇಲಿಹ್ಯಮಾನಃ–ನೆಕ್ಕುವವ (ವ್ಯುತ್ಪನ್ನಪದ)

ಸಂಸ್ಕೃತದಲ್ಲಿ 'ಹಿಂದೂ' ಎಂಬ ಪದವಿದೆ ಎನ್ನುತ್ತಾರೆ. ನಿಜವೇ ? ಇದ್ದರೆ ಎಷ್ಟು ಪ್ರಾಚೀನ ? 'ಹಿಂದು' ಎಂಬುದನ್ನು ಸಂಸ್ಕೃತವೆಂದು ಪರಿಗಣಿಸಿದಾಗ "ಹೈಂದವಃ

ಹಿಂದುಸ್ಥಾನೀಯಾಃ'', ಹಾಗೆಯೇ ಮೋಹಮ್ಮದಾಃ ಇತ್ಯಾದಿ ಪ್ರಯೋಗಗಳೂ ಸಾಧುವೆನಿಸಬಹುದು. ಒಮ್ಮೆ ಒಬ್ಬ ಮಹಾಶಯರು 'ಹಿಂದು ಶಬ್ದ ಪುರಾಣಗಳಲ್ಲಿ ಪ್ರಯುಕ್ತವಾಗಿದೆ. ಆದ್ದರಿಂದ ಅದರ ಸಾಧುತ್ವದ ಬಗೆಗೆ ಯಾವ ಸಂದೇಹವೂ ಇಲ್ಲ ಎಂದು ಬರೆದರು. ಇಷ್ಟರಿಂದಲೇ ಅದರ ಇತಿಹಾಸ ಮುಗಿಯುವುದಿಲ್ಲ. ಆ ಪುರಾಣದ ಶ್ಲೋಕಗಳು ಪ್ರಕ್ಷಿಪ್ತವೆ ? ಪ್ರಾಚೀನ ಕಾವ್ಯಗಳಲ್ಲಿ ಅಂಗ, ವಂಗಾದಿ ದೇಶಗಳ ಹೆಸರಿರುವಂತೆ ಹಿಂದು ಎಂಬ ಶಬ್ದವಿದೆಯೆ ? ಇವೆಲ್ಲಾ ಪ್ರಶ್ನೆಗಳು ಉದ್ಭವಿಸುತ್ತವೆ. ಆದ್ದರಿಂದ 'ಹಿಂದು' ಪದವಿರಲಿ, ಯಾವುದೇ ಅನ್ಯದೇಶೀಯ ಪದವೇ ಇರಲಿ, ಅದರ ಮೂಲವನ್ನು ಕೊಡುವುದರಿಂದ ತುಂಬ ಪ್ರಯೋಜನವಿದೆ. ಒಂದು ಕೋಶದಲ್ಲಿ ಇದ್ದ ಮಾತ್ರದಿಂದ ಅಥವಾ ಇಲ್ಲದಿರುವ ಮಾತ್ರದಿಂದ ಅದರ ಸಾಧುತ್ವ ನಿರ್ಣಯವಾಗಲಾರದು. ಆಪ್ಟೆಯವರ ಸಂಸ್ಕೃತ ಕೋಶದಲ್ಲಿ 'ದಾಡಿಮ' ಎಂಬ ಪದವಿಲ್ಲ. ಆದರೆ 'ದಾಡಿಂಬ' ಎಂಬ ಪದವಿದೆ. ಇದರಿಂದ ದಾಡಿಮ ಪದವೇ ಇಲ್ಲವೆನ್ನಲಾಗದು, ಇದು ತ್ರಿಲಿಂಗವೆಂದು ಅಮರಸಿಂಹ ಹೇಳಿದ್ದಾನೆ. ಸಂಸ್ಕೃತದಲ್ಲೂ ಹಲವಾರು ದೇಶಭಾಷಾ ಪದಗಳು ಸೇರಿವೆ. ಅವೆಲ್ಲ ಕವಿಗಳಿಂದ ಅಂಗೀಕೃತಗಳೂ ಆಗಿವೆ. ಆದ್ದರಿಂದ 'ಅತಿಪ್ರಯುಕ್ತಂ ದೇಶಭಾಷಾಪದಂ' ಎಂಬ ಸೂತ್ರದಲ್ಲಿ ವಾಮನ ಅವು ಗ್ರಾಹ್ಯವೆಂದು ತಿಳಿಸಿ ಮೇಘದೂತದ 'ಹಾಲಾ' ಪದ ಅಂತಹುದೆಂದು ಉದಾಹರಿಸಿದ್ದಾನೆ.

ಇದಕ್ಕೆ ಇನ್ನೊಂದು ಉದಾಹರಣೆಯನ್ನು ಕೊಡಬಹುದು. ಕನ್ನಡದಲ್ಲೀಗ ಡೊಂಬರು, ಡೊಂಬರಾಟ ಮುಂತಾದ ಪದಗಳಿವೆ. ಇವು ದ್ರಾವಿಡಮೂಲದವು ಎಂದು ತೋರುತ್ತವೆ. ಆದರೆ 'ಡೋಮಃ' ಎಂಬ ಪದ ಆಪ್ಟೆಕೋಶದಲ್ಲಿದೆ. ಇದಕ್ಕೆ ಡೊಂಬ ಎಂದೇ ಅರ್ಥ. ಡೊಂಬ ಎಂಬ ಪದ ಡೋಮದಿಂದ ಹುಟ್ಟಿದ ಅಪಭ್ರಂಶವೆನ್ನಬಹುದೇ ಹೇಗೆ ? ಡೊಂಬ ಎಂಬ ಪದ ಸಂಸ್ಕೃತ ಕಾವ್ಯದಲ್ಲಿ ಬರುತ್ತದೆ.

> ಮೃದಂಗಹಸ್ತೋ ಮೋಷಾಯ ಡೋಂಬಃ ಕೋಽಪ್ಯನ್ವಗಾದ್ದ್ರುತಮ್ ।— ಕಥಾಸರಿತ್ಸಾಗರ

ಆದ್ದರಿಂದ ಡೋಂಬ ಎಂಬ ಪದ ಸಂಸ್ಕೃತ ಕೋಶದಲ್ಲಿ ಸೇರಲು ಅಡ್ಡಿ ಇಲ್ಲ.

ಹಾಗೆಯೇ ಕಾವಡಿ ಎಂಬ ಪದವು ಸಂಸ್ಕೃತವೂ ಆಗಬಹುದು ಎಂದು ಒಬ್ಬ ಸಂಸ್ಕೃತ ವಿದ್ವಾಂಸನ ಮತವಿದೆ. ಈ ಪದವೂ ಆಪ್ಟೆಯವರ ಕೋಶದಲ್ಲಿ ಕಾಣುವುದಿಲ್ಲ.

> ಅಂಸಾಧಿರೋಪ್ಯೋ ಯೋ ದಂಡಃ ಕುಂಭಯೋರುಭಯೋರಪಿ ।
> ಸ ಭಾರದಂಡಂ ವಹತಿ ಕಾವಡೀತ್ಯುಚ್ಯತೇ ಬುಧೈಃ॥

ಆತ ಹೀಗೆ ಕಾವಡಿ ಪದಕ್ಕೆ ನಿರ್ವಚನದ ಅರ್ಥವನ್ನು ನಿರೂಪಿಸಿ, ರೂಢಿಯಲ್ಲಿ ಬಂದಿರುವ ಯಾವ ದೇಶಭಾಷಾಪದವನ್ನೂ ಸಂಸ್ಕೃತದಲ್ಲಿ ಇಷ್ಟಬಂದ ರೀತಿಯಲ್ಲಿ ಪ್ರಾತಿಪದಿಕವನ್ನಾಗಿ ಮಾರ್ಪಡಿಸಿ ಪ್ರಯೋಗಿಸಬಹುದು ಎಂದೂ ಹೇಳಿರುವನು.

> ದಿಲ್ಲೀ ಮಕ್ಕಾ ಪುನಾ ಪುನಾ ಚೀನಾ ಕೊಚ್ಚ್ಯುಡುಪ್ಯಾದಿ ಶಬ್ದವತ್ ।
> ಲೋಕೇಽಸ್ಮಿನ್ ಕಾವಡೀ ಶಬ್ದೋಽಪ್ಯನಿಂದ್ಯೋ ಲೋಕರೂಢಿತಃ ॥

ಸರ್ವ ಭಾಷಾಸು ಯಃ ಶಬ್ದಃ ಪ್ರಸಿದ್ಧಿಮವಲಂಬತೇ ।
ವ್ಯವಹಾರಪ್ರಸಿದ್ಧತ್ವಾತ್ ಸಂಸ್ಕೃತಪ್ರಾಯ ಏವ ಸಃ ॥

(ಸ್ತೋತ್ರಾರ್ಣವದ ಟಿಪ್ಪಣಿ)

ಕಾಳಿದಾಸ ಮುಂತಾದವರೂ 'ಚೀನಾಂಬರ' ಮುಂತಾದ ಪದಗಳನ್ನು ಬಳಸಿದ್ದಾರೆ. ವರಾಹಮಿಹಿರನು ಹಲವಾರು ವಿದೇಶೀಯಪದಗಳನ್ನು ಸಂಸ್ಕರಿಸಿ ಬಳಸಿದ್ದು ಕಂಡು ಬರುತ್ತದೆ. ಉದಾ: ಜಾಮಿತ್ರ, ಹೋರಾ ಇತ್ಯಾದಿ. ಇವನ್ನೆಲ್ಲ ಶುದ್ಧಸಂಸ್ಕೃತವೆನ್ನ ಲಾಗುವುದಿಲ್ಲ. ಆದರೆ ಕೋಶಗಳಲ್ಲಿ ಸೇರ್ಪಡೆಯಾಗುವ ಅರ್ಹತೆ ಇವುಗಳಿಗಿದೆ. ಆದ್ದ ರಿಂದಲೇ 'ಅತಿಪ್ರಯುಕ್ತಂ ದೇಶಭಾಷಾಪದಂ(ಗ್ರಾಹ್ಯಂ)' ಎಂದು ವಾಮನ ಹೇಳಿರಬೇಕು.

ಕೆಲವೊಮ್ಮೆ ಶುದ್ಧಸಂಸ್ಕೃತವಾದ ವ್ಯುತ್ಪತ್ತಿಸಾಧ್ಯವಾದ ಪದಗಳೂ ಅರ್ಥ ಬೋಧಕ್ಕೆ ಅಶಕ್ತಗಳಾಗುತ್ತವೆ. ಆಗ ಅಂಥವುಗಳಿಗೆ ವ್ಯುತ್ಪತ್ತಿ ಇದೆಯೆಂದು ಅರ್ಥ ಹೇಳಲಾಗದು.

ವ್ಯಾಕರಣೇನ ಹಿ ಶಬ್ದಾ ವ್ಯುತ್ಪಾದ್ಯಂತೇ ನ ತು ಉತ್ಪಾದ್ಯಂತೇ
ಪ್ರಯೋಗೇ ಸತಿ ನಿಮಿತ್ತಾನುಸರಣಂ ನ ತು ನಿಮಿತ್ತೇ ಸತಿ ಪ್ರಯೋಗಾನುಸರಣಂ

—ಎಂಬಂತಹ ನ್ಯಾಯಗಳು ಶಬ್ದಗಳಿಗೆ ಹೊಸರೀತಿಯ ಅರ್ಥಮಾಡಬಾರದು, ಹೊಸ ಶಬ್ದಗಳ ಆವಿಷ್ಕಾರವೂ ಕೂಡದು ಎನ್ನುತ್ತವೆ. ಇಂತಹ ಪದಗಳು ಬಂದಾಗ ಆ ಪದಗಳ ಸೀಮಿತತೆಯನ್ನು ಕೊಡುವುದೊಳಿತು. ಒಂದೆರಡು ಉದಾಹರಣೆಗಳನ್ನು ನೋಡಬಹುದು:

(೧) ಪಿತರೌ=ತಂದೆತಾಯಿಗಳು. ಇದು ಏಕಶೇಷವೃತ್ತಿಯಿಂದಾದುದು; ಮಾತಾ ಪಿತರೌ=ತಂದೆತಾಯಿಗಳು. ದ್ವಂದ್ವಸಮಾಸ.

ಹಾಗೆ ಜನಕೌ=ಇಬ್ಬರು ತಂದೆಗಳು (ತಾಯಿತಂದೆಗಳಲ್ಲ; ಇಲ್ಲಿ ಏಕಶೇಷವಿಲ್ಲ). ಇದನ್ನು ಹೀಗೆ ಸೂಚಿಸದಿದ್ದರೆ. ಜನಕೌ ಎಂಬೆಡೆ ಪಿತರೌ ಎಂದೂ ಪ್ರಯೋಗಿಸಬಹು ದಲ್ಲವೆ? ಈ ಸಂಸ್ಕೃತದ ಮಾರ್ಗವನ್ನೇ ಅನುಸರಿಸಿ ಭಟ್ಟಾಕಳಂಕ ತಂದೆಸ್ತಾಯಾ ವಾ. ಎಂಬ ಸೂತ್ರ ರಚಿಸಿ ತಂದೆಗಳ್. ತಾಯ್ತಂದೆಗಳ್ ಎಂದು ಉದಾಹರಿಸಿದರೂ ಅಂತಹ ಪ್ರಯೋಗ ರೂಢಿಯಲ್ಲಿ ಬಾರದೆ. ಹೆತ್ತವರು ಎಂಬ ಪ್ರಯೋಗ ಮಾತ್ರ ಉಳಿದು ಕೊಂಡಿದೆ. ಭಟ್ಟಾಕಳಂಕ ಅಮ್ಮಂದಿರ್ ಎಂದು ಉದಾಹರಿಸಿದ್ದರೂ ಅದು ಅರ್ಥ ನಿರ್ದೇಶವಲ್ಲ.

(೨) ಚಂದ್ರನಲ್ಲಿರುವ ಕಳಂಕವನ್ನು ಮೊಲವೆಂದೂ ಜಿಂಕೆ ಎಂದೂ ಕಲ್ಪಿಸಿ, ಅಂತಹ ಚಿಹ್ನೆಯುಳ್ಳವ ಎಂಬ ಅರ್ಥದಲ್ಲಿ ಶಶಾಂಕಃ, ಮೃಗಾಂಕಃ ಎಂಬ ಪದಗಳು ರೂಢಿಯಲ್ಲಿ ಬಂದಿವೆ. ಇದೇ ಅರ್ಥದಲ್ಲಿ 'ಶಶೀ' ಎಂದು ಪ್ರಯೋಗವಿದೆ. ಆದರೆ 'ಮೃಗೀ' ಎಂದರೆ ಚಂದ್ರನಲ್ಲ, ಹೆಣ್ಣು ಜಿಂಕೆ. ವ್ಯಾಕರಣದಿಂದ ಸಾಧುತ್ವವನ್ನು ಹೇಳಬಹುದಾದರೂ ಪ್ರಯೋಗವಿಲ್ಲದಿರುವುದರಿಂದ ಶಬ್ದವು ಅಸಮರ್ಥವಾಗುತ್ತದೆ. ಪದಕ್ಕೆ ಅಸಾಮರ್ಥ್ಯ ಬರುವುದು ರೂಢಿಯಿಲ್ಲದಿರುವುದರಿಂದಲೇ ಹೊರತು ಅವಯವಾರ್ಥವಿಲ್ಲದಿರುವುದ ರಿಂದಲ್ಲ. ಉದಾ: ಅಪಾಂಗಃ—ಎಂದರೆ ಕುಡಿನೋಟ, ಓರೆನೋಟ, ಅಂಗನ್ಯೂನ

ವಾದವನಲ್ಲ. ಇಲ್ಲಿ ವ್ಯುತ್ಪತ್ತಿಬಲದಿಂದ ಅಂಗಹೀನ ಎಂಬರ್ಥ ಬರಲಾರದು ; ಈ ಅರ್ಥ ಬರಬೇಕಾದರೆ ವ್ಯಂಗಃ ಎನ್ನಬೇಕು.

ಕೋಶದಲ್ಲಿ ವೈದಿಕಶಬ್ದವೆ ಲೌಕಿಕಶಬ್ದವೆ ಎಂಬ ವಿಚಾರವಿರುವುದು ಅಗತ್ಯ. ಅನೇಕ ವೇಳೆ ಲೌಕಿಕವಾಗಿ ಅಪಶಬ್ದಗಳಾದವು ವೈದಿಕವಾಗಿ ಸಾಧುವೆನಿಸುತ್ತವೆ.

(ಲೌ) ದಂತೀ–ಆನೆ, (ವೈ) ದಂತಿಃ = ಆನೆ (ಇಲ್ಲಿ ತದ್ಧಿತ ಪ್ರತ್ಯಯ ಇ)

(ಲೌ) ದಂಪತೀ = ಗಂಡಹೆಂಡಿರು (ನಿತ್ಯದ್ವಿವಚನಾಂತ), (ವೈ) ದಂಪತಿಃ = ಗೃಹಪತಿ (ದಮಃ ಗೃಹಂ ತಸ್ಯ ಪತಿಃ)

ಲಿಂಗಭೇದದಿಂದ ಅರ್ಥವ್ಯತ್ಯಾಸ ಬರುವುದಾಗಿದ್ದರೆ, ಅಂತಹವನ್ನು ತಿಳಿಸಬೇಕು. ಇದರಿಂದ ಬಹಳ ಪ್ರಯೋಜನವಿದೆ. ಒಂದು ಪದಕ್ಕೆ ಪುಲ್ಲಿಂಗದಲ್ಲಿ ಒಂದು ಅರ್ಥವಿದ್ದರೆ ಅದೇ ಸ್ತ್ರೀಲಿಂಗದಲ್ಲಿ ಬೇರೆ ಅರ್ಥಬರುತ್ತದೆ. ಆ ಪದದ ಸ್ತ್ರೀಲಿಂಗವೇ ಇದಾಗಿರುವುದಿಲ್ಲ.

ಉದಾ : ವಂಧ್ಯಾ = ಬಂಜೆ (ಮಕ್ಕಳಿಲ್ಲದವಳು)

ವಂಧ್ಯಃ = ಫಲಬಿಡದ ಮರ; ಮಕ್ಕಳಿಲ್ಲದವನಲ್ಲ (ಈ ಅರ್ಥಕ್ಕೆ ಅಪುತ್ರ ಎನ್ನಬೇಕು).

ಪದ್ಮಃ = ನಿಧಿ, ತಾವರೆ ; ಪದ್ಮಾ = ಲಕ್ಷ್ಮಿ ; ಪದ್ಮಂ = ತಾವರೆ.

ಸುರಃ = ದೇವತೆ ; ಸುರಾ = ಹೆಂಡ ; ಸುರೀ = ದೇವಿ (ಸುರಸ್ಯ ಸ್ತ್ರೀ).

ಪದಗಳ ಸ್ವರೂಪಕ್ಕೆ ವಿಶೇಷ ಕಾರಣಗಳು ಅಥವಾ ಐತಿಹ್ಯಗಳು ಇದ್ದರೆ, ಅವನ್ನೂ ಕೊಡುವುದು ಒಳಿತು.

ಉದಾ : ಈ ಪ್ರಕೃತಿ ಚೆಲುವಾಗಿದೆ ಎಂಬುದನ್ನು ಸಂಸ್ಕೃತದಲ್ಲಿ "ಅಹೋ ಸುಂದರೀ ಪ್ರಕೃತಿಃ" ಎನ್ನಲಾಗದು. ಅದು ಶಿಷ್ಟಸಂಪ್ರದಾಯವಲ್ಲ, ಸುಂದರೀ ಎಂದರೆ ಸಾಮಾನ್ಯ ಸ್ತ್ರೀ. ಆಕೆ ಚೆಲುವೆಯೇ ಆಗಿರಬೇಕಿಲ್ಲ. ಚೆಲುವೆಯಾದರೆ ಅನ್ವರ್ಥ ಎನ್ನಬಹುದು ಅಷ್ಟೆ. ಸಾಂಖ್ಯಮತದಲ್ಲಿ ಪ್ರಕೃತಿ ಎಂದರೆ ಸೃಷ್ಟಿಗೆ ಕಾರಣವಾದ ಸೂಕ್ಷ್ಮ ಹಾಗೂ ಅತೀಂದ್ರಿಯ ವಸ್ತು. ಪ್ರಕೃತಿಃ, ಕರ್ತ್ರೀ ಇತ್ಯಾದಿ. ನಮಗೆ ತೋರುವುದು ನಿಸರ್ಗ, ಸೃಷ್ಟಿಯ ಚೆಲುವು. "ಅಹೋ ಲೋಚನಾಸೇಚನಕೋ ನಿಸರ್ಗಃ" ಎನ್ನಬೇಕು. ಹೀಗಿದ್ದರೂ ಹೊಸಹೊಸ ಶಬ್ದಗಳ ಆವಿಷ್ಕಾರಗಳು ರೂಢಿಯಲ್ಲಿ ಬರುವವರೆಗೆ ಅವು ಅಪಭ್ರಂಶವಾಗಿಯೇ ತೋರುವುದು ಸ್ವಾಭಾವಿಕ. ಅಂತಹ ವಿಚಿತ್ರವಾಗಿರುವ ಶಬ್ದರೂಪಗಳ ಸೂಕ್ಷ್ಮಪ್ರಭೇದಗಳನ್ನೂ ಅವುಗಳ ಅರ್ಥಚ್ಛಾಯೆಗಳನ್ನೂ ತೋರಿಸುವುದು ಅಗತ್ಯ. ಕೆಲವು ಉದಾಹರಣೆಗಳನ್ನು ನೋಡಬಹುದು.

ಅರ್ಥಾಂತರಂ = ಬೇರೆ ಅರ್ಥ ; ಅನರ್ಥಾಂತರಂ = ಪರ್ಯಾಯಪದ.

ಇಲ್ಲಿ ಅರ್ಥಾಂತರವಲ್ಲದಿರುವುದು ಎಂದು ಅರ್ಥ, ಅನರ್ಥದೊಳಗೆ ಎಂದಲ್ಲ.

ಸಧನಃ = ಹೆಚ್ಚೋ ಕಡಮೆಯೋ ಧನವುಳ್ಳವ ; ಧನವಾನ್ = ಬಹುಧನವುಳ್ಳವ. ಇಲ್ಲಿ ಬಹುವ್ರೀಹಿ ಮತ್ತು ಮತುಪ್ ಪ್ರತ್ಯಯಗಳಿಗಿರುವ ಭೇದ ಸ್ಪಷ್ಟವಾಗಿದೆ.

ಸನಾಥಃ = ಸಹಿತ, ಅಲಂಕೃತ ; "ಶಿಲಾತಲಸನಾಥೋಽಯಂ ಮಂಡಪಃ"

ನಾಥವಾನ್ = ಪರತಂತ್ರ. ಮೇಲುತೋರಿಕೆಗೆ ಅರ್ಥ ಒಂದೇ ಆಗಬೇಕಿತ್ತು, ಆದರೆ ಆಗಿಲ್ಲ.

ಕವಿತಾ = ಕವಿಯ ಭಾವ. ಕಾವ್ಯಂ = ಕವಿಯ ಕೃತಿ; ಕವಿತಾ ಎಂಬುದು ಕಾವ್ಯ ಎಂಬ ಅರ್ಥದಲ್ಲಿ ಪ್ರಯೋಗವಿದೆ.

೧ ''ಕವಿತಾ ವನಿತಾ ಚೈವ ಸ್ವಯಮೇವಾಗತಾ ವರಾ''
೨ ''ಸುಕವಿತಾ ಯದ್ಯಸ್ತಿ ರಾಜ್ಯೇನ ಕಿಮ್'' (ಭರ್ತೃಹರಿ)
೩ ''ಕವಿತಾಯಾಃ ಪರಿಪಾಕಂ ಹ್ಯನುಭವರಸಿಕೋ ವಿಜಾನಾತಿ॥''

ಗಂಧವಹಃ = ಗಾಳಿ, ಗಂಧವಹಾ = ಮೂಗು ; ನಿಕಷಃ = ಒರೆಗಲ್ಲು, ನಿಕಷಾ = ಸಮೀಪ, ನಿಷ್ಕ್ರಮಃ = ಧೀಶಕ್ತಿ, ನಿಷ್ಕ್ರಮಣಂ = ನಿರ್ಗಮನ ; ವಚನಕರಃ = ಹೇಳಿದ್ದನ್ನು ಮಾಡುವವ, ವಚನಕಾರಃ = ವಚನ ಬರೆದವ ; ಸಪ್ತಕಂ = ಏಳರ ಗುಂಪು, ಸಪ್ತಕೀ = ರಶನಾ ; ಸಿದ್ಧಿ = ಸಾಧನೆಯ ಫಲ, ಸಂಸಿದ್ಧಿಃ = ಪ್ರಕೃತಿ.

ಇಂತಹ ನೂರಾರು ಪದಗಳು ಲಿಂಗಭೇದದಿಂದ, ಪ್ರತ್ಯಯ ಭೇದದಿಂದ, ಸಮಾಸಭೇದಗಳಿಂದ ನಿಷ್ಪನ್ನವಾಗಿ ಬೇರೆ ಬೇರೆ ಅರ್ಥಚ್ಛಾಯೆಗಳನ್ನು ತಳೆದಿವೆ. ಇವನ್ನು ಆಯಾ ಪದಗಳ ಬಳಿಯಲ್ಲೆ ಕೊಡುವುದರಿಂದ, ಆ ಆ ಪದಗಳ ಅರ್ಥ ಮತ್ತು ಭಾವಗಳ ಇತಿಮಿತಿಗಳ ಅರಿವಾಗಿ ಹೊಸ ಬೆಳಕನ್ನು ಕೊಡಲು ಸಾಧ್ಯ. ಈಚೆಗೆ ನಿರ್ಮಾಣವಾಗುತ್ತಿರುವ ಕೋಶಗಳಲ್ಲಿ ಅಥವಾ ಇನ್ನು ಮುಂದೆ ತಯಾರು ಮಾಡುವ ಸಂಸ್ಕೃತಕೋಶಗಳಲ್ಲಿ ಇಂತಹ ವಿವರಗಳಿದ್ದರೆ, ಅವುಗಳ ಮಹತ್ತ್ವ ಹೆಚ್ಚುವುದರಲ್ಲಿ ಎರಡು ಮಾತಿಲ್ಲ.

# ವೃತ್ತಿಪದಕೋಶ : ಸ್ವರೂಪ ಮತ್ತು ರಚನೆ

ವಿಲ್ಯಂ ಮಾಡ್ತ

## ೦.೦ ಪ್ರಸ್ತಾವನೆ

೦.೧ ಮನುಷ್ಯನ ಸಾಮಾಜಿಕ ಹಾಗೂ ಆರ್ಥಿಕ ಜೀವನ ಆತನ ವೃತ್ತಿಗಳನ್ನು ಆಧರಿಸಿಕೊಂಡಿದೆ. ಮಾನವ ತನ್ನ ವಿಕಾಸದಲ್ಲಿ ಆಹಾರಸಂಗ್ರಹಣೆ, ಬೇಟೆ, ಕೃಷಿ, ಔದ್ಯಮಿಕಕ್ಷೇತ್ರಗಳಲ್ಲಿ ದುಡಿದು ಜೀವನ ನಡೆಯಿಸುತ್ತಾ ಬಂದಿದ್ದಾನೆ. ಈ ಕಾರಣದಿಂದಾಗಿ ಆತ ಅನೇಕ ವೃತ್ತಿಗಳಲ್ಲಿ ತೊಡಗಿರುತ್ತಾನೆ. ವೃತ್ತಿಯನ್ನು ಉದ್ಯೋಗ, ಕಸಬು ಎಂದೂ ಪರ್ಯಾಯವಾಗಿ ಕರೆಯುವುದುಂಟು. ವ್ಯಕ್ತಿ ತನ್ನ ಜೀವನೋಪಾಯಕ್ಕೆ ಮಾಡುವಂಥ ಕೆಲಸವೇ ಉದ್ಯೋಗ. ಅದು ಶಾರೀರಿಕವೂ ಆಗಬಹುದು, ಮಾನಸಿಕವೂ ಆಗಬಹುದು; ಸೌಂದರ್ಯ ಕಲೆ(Aesthetic art)ಯೂ ಆಗಿರಬಹುದು; ಕುಶಲಕರ್ಮ(Useful art)ವೂ ಆಗಿರಬಹುದು. ಅದನ್ನು ವೃತ್ತಿಶಿಕ್ಷಣದ ಮೂಲಕ ಕಲಿತುಕೊಂಡಿರಬಹುದು ಅಥವಾ ಅದು ಪರಂಪರಾಗತವಾಗಿ ಬಂದಂತಹ ಕೌಶಲವೂ ಆಗಿರಬಹುದು. ಬ್ಯೂಟಿಶಿಯನ್ ವೃತ್ತಿ ಮತ್ತು ಕ್ಷೌರಿಕ ವೃತ್ತಿ ಇವುಗಳಿಗೆ ಉತ್ತಮ ಉದಾಹರಣೆಗಳು.

೦.೨ ಇಂದಿನ ಸಮಾಜದಲ್ಲಿ ಔದ್ಯಮೀಕರಣದಿಂದ ಹೊಸಹೊಸ ಪದಗಳು ನಿರ್ಮಾಣಗೊಳ್ಳುತ್ತವೆಯಲ್ಲದೆ, ಸಾಂಪ್ರದಾಯಿಕವೃತ್ತಿಗೆ ಸಂಬಂಧಿಸಿದ ಹಲವಾರು ಪದಗಳು ಕಣ್ಮರೆಯಾಗುವುದೂ ಉಂಟು. ಇಂತಹ ಸಂದಿಗ್ಧಪರಿಸ್ಥಿತಿಯಲ್ಲಿ ಈ ಪದಸಂಪತ್ತನ್ನು ಸಂಗ್ರಹಿಸಿ ಸೂಕ್ತವಾದ ಪದಕೋಶಗಳನ್ನು ನಿರ್ಮಿಸದಿದ್ದರೆ ನಾವು ಅನಿವಾರ್ಯವಾಗಿ ಈ ಪದಸಂಪತ್ತನ್ನು ಕಳೆದುಕೊಳ್ಳಬೇಕಾಗುತ್ತದೆ. ಇದರಿಂದ ನಮ್ಮ ನಾಡುನುಡಿಗಳಿಗೆ ಅಪಾರವಾದ ಸಾಂಸ್ಕೃತಿಕನಷ್ಟವಾಗುತ್ತದೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಕಾರಣ, ವೃತ್ತಿಪದ ಸಂಗ್ರಹ ಹಾಗೂ ವೃತ್ತಿಪದಕೋಶ ರಚನೆ ಅತ್ಯಂತ ತ್ವರಿತವಾಗಿ ಅಂತೆಯೇ ವೈಜ್ಞಾನಿಕವಾಗಿಯೂ ಆಗಬೇಕಾದ ಕೆಲಸ. ಈ ಬಗೆಗೆ ಕನ್ನಡದಲ್ಲಿ ಆದ ಕೆಲಸ ಬಹಳ ಕಡಿಮೆ (ನೋಡಿ : ಕುಲಕರ್ಣಿ, ೧೯೮೮).

೦.೩ ಪಟ್ಟಣಗಳಲ್ಲಿ ಹೆಚ್ಚಾಗಿ ಔದ್ಯಮೀಕರಣಕ್ಕೆ ಸಂಬಂಧಿಸಿದ ವೃತ್ತಿಪದಗಳನ್ನು ಕಲೆಹಾಕುವ ಹಾಗೂ ಅವುಗಳನ್ನು ವಿಶ್ಲೇಷಿಸುವ, ಅಭ್ಯಸಿಸುವ ಅಗತ್ಯವಿದ್ದರೆ, ಹಳ್ಳಿಗಳಲ್ಲಿ ಪರಂಪರಾಗತವಾಗಿ ಬಂದಂತಹ ಕಸುಬುಗಳಿಗೆ ಸಂಬಂಧಿಸಿದ ವೃತ್ತಿಪದಗಳು, ಅವುಗಳ ನಿರ್ಮಾಣಕ್ಕೆ ಸಹಾಯಕವಾಗಿರುವ ಭಾಷಿಕತಂತ್ರಗಳು (Techniques), ಅವುಗಳಿಗೆ ಆಕರ

ವಾಗಿರುವಂತಹ ಸಾಮಾಜಿಕ ಉಪಭಾಷೆಗಳು. ವೃತ್ತಿಪದಗಳ ರಚನಾತ್ಮಕ ಸ್ವರೂಪ, ಅವುಗಳ ಬಳಕೆಯ ರೀತಿನೀತಿ ಇತ್ಯಾದಿಗಳ ಅಧ್ಯಯನ ಮಾಡುವುದು ಕೂಡ ಆಗಬೇಕಾದ ಕೆಲಸಗಳೇ.

೦.೪ ಮೇಲೆ ಸೂಚಿಸಿದ ಅಧ್ಯಯನಗಳಿಗೆ ಮೂಲ ಆಕರವಾಗಿರುವ ವೃತ್ತಿಪದ ದತ್ತವನ್ನೇ ಕನ್ನಡದ ಮಟ್ಟಿಗೆ ನಾವು ಇನ್ನೂ ಸಾಕಷ್ಟು ಸಂಗ್ರಹಿಸಿಲ್ಲ. ವಸ್ತುಸ್ಥಿತಿ ಹೀಗಿರುವಾಗ, ಅವುಗಳ ಆಧಾರದ ಮೇಲೆ ನಡೆಯಬೇಕಾದ ಭಾಷಾವೈಜ್ಞಾನಿಕ, ಜಾನಪದವೈಜ್ಞಾನಿಕ, ಸಮಾಜವೈಜ್ಞಾನಿಕ, ಮಾನವವೈಜ್ಞಾನಿಕ ಇತ್ಯಾದಿ ಅಧ್ಯಯನಗಳು ಇನ್ನೂ ಬಹು ದೂರ.

೦.೫ ಪ್ರಸ್ತುತದಲ್ಲಿ ವೃತ್ತಿಪದಗಳ ಅನೇಕಾನೇಕ ವಿಶಿಷ್ಟ ಅಭ್ಯಾಸಗಳಿಗೆ ಬುನಾದಿಯಾಗಿರುವ ವೃತ್ತಿಪದಕೋಶಗಳ ಸ್ವರೂಪ ಮತ್ತು ರಚನೆಯನ್ನು ಕುರಿತು ಸಂಗ್ರಹರೂಪದಲ್ಲಿ ಚರ್ಚಿಸಲಾಗಿದೆ.

**೧.೦ ಪಾರಿಭಾಷಿಕ ಪದಗಳು**

ಪ್ರಸ್ತುತ ಅಧ್ಯಯನದಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಪಾರಿಭಾಷಿಕ ಪದಗಳು :

೧. ವೃತ್ತಿಪದ **(Professional term)**
೨. ನಿಘಂಟಿಮ **(Lexeme)**
೩. ನಿಘಂಟು **(Lexicon)**
೪. ಪದಕೋಶ **(Dictionary)**
೫. ವೃತ್ತಿಪದಕೋಶ **(Dictionary of Professional Terms)**

**೧.೧ ವೃತ್ತಿಪದ :** ಒಂದು ಸಮಾಜದಲ್ಲಿಯ ನಿರ್ದಿಷ್ಟ ಉದ್ಯೋಗ (Profession/Occupation)ಕ್ಕೆ ಸಂಬಂಧಿಸಿ ವಿಶಿಷ್ಟ ಅರ್ಥ ಪಡೆದುಕೊಂಡಿರುವ ನಿಂಘಟಿಮ (Lexeme)ವೇ ವೃತ್ತಿಪದ. ಉದಾ :

| | | | |
|---|---|---|---|
| ಕೃಷಿಗೆ | : | ೧. ಗದ್ದೆ | 'Wet field' |
| | | ೨. ನೇಜಿ | 'Paddy plant' |
| | | ೩. ನೊಗ | 'Yoke' |
| ನೇಕಾರ ವೃತ್ತಿಗೆ | : | ೪. ಮಗ್ಗ | 'Loom' |
| | | ೫. ದಡಿ | 'Border' |
| | | ೬. ಪದರೆಳಿ | 'Red yarn' |
| ಬಡಗಿ ವೃತ್ತಿಗೆ | : | ೭. ಉಳಿ | 'Chissel' |
| | | ೮. ಚಮ್ಮಟಿಗೆ | 'Hammer' |
| | | ೯. ಗೀಸುಳಿ | 'Plainer' |

**೧.೨ ನಿಘಂಟಿಮ :** ನಿಘಂಟುವಿನಲ್ಲಿ ಬರಬಹುದಾದ ಸ್ವತಂತ್ರ ಭಾಷಾಘಟಕವೇ ನಿಘಂಟಿಮ.[1]

ಉದಾ :

| ಕನ್ನಡ | ಇಂಗ್ಲಿಷ್ |
|---|---|
| ೧. ಅಂಕ | 1. A |
| ೨. ಅಂಕಗಣಿತ | 2. An |
| ೩. ಅಂಕಮಾಲೆ | 3. The |
| ೪. ಅಂಕಿತ | 4. A Few |
| ೫. ಅಂಕಿತನಾಮ | 5. A Little |
| | 6. Sick-room |
| | 7. Letter-box |
| | 8. A Three-and-a-half-year old girl. |

**೧.೩ ನಿಘಂಟು :** ನಿಘಂಟಿಮಗಳ ಸಂಗ್ರಹ(**Corpus**)ವೇ ನಿಘಂಟು.

**೧.೪ ಪದಕೋಶ :** ಆಯ್ಕೆ ಮಾಡಿದ ನಿಘಂಟಿಮಗಳ ವ್ಯವಸ್ಥಿತಸಂಯೋಜನೆಯೇ ಪದಕೋಶ.

ಹಲವಾರು ಬಾರಿ ಪದಕೋಶವನ್ನು, ನಿಘಂಟು ಎಂದು ಕರೆಯುವ ರೂಢಿ ಉಂಟು:

೧. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟು, ೧೯೬೫.

೨. ಸಂಕ್ಷಿಪ್ತ ಕನ್ನಡ ನಿಘಂಟು, ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು, ೧೯೭೫.

**೧.೫ ವೃತ್ತಿಪದಕೋಶ :** ಆಯ್ಕೆ ಮಾಡಿದ ವೃತ್ತಿಪದಗಳ ವ್ಯವಸ್ಥಿತ ಸಂಯೋಜನೆಯೇ ವೃತ್ತಿಪದಕೋಶ.

## ೨.೦ ವೃತ್ತಿಪದಕೋಶದ ಸ್ವರೂಪ

ವೃತ್ತಿಪದಕೋಶದ ಸ್ವರೂಪ ನಿರ್ಧರಿಸುವ ಪ್ರಮುಖ ಘಟಕಗಳೆಂದರೆ :

೧. ಅರ್ಥವಿವರಣೆ (**Semantics**)

೨. ವೃತ್ತಿಪದಗಳ ಸಂಯೋಜನೆ (**Collation of Lemma**)[2]

**೨.೧ ಅರ್ಥವಿವರಣೆ :** ಒಂದು ನಿಘಂಟಿಮ ರೂಪ (**Lemma**)ದ ಅರ್ಥವಿವರಣೆಯನ್ನು ಸಾಮಾನ್ಯವಾಗಿ ನಾಲ್ಕು ಮಗ್ಗಲು (**Parameter**)ಗಳ ಮೂಲಕ ಕೊಡಲಾಗುತ್ತದೆ : ೧. ನಿಘಂಟಿಮದ ವ್ಯಾಖ್ಯೆ ; ೨. ಉದಾಹರಣೆಗಳು ; ೩. ಸಮಾನಾರ್ಥಕಗಳು ;

ವಿ.ಸೂ : ವೃತ್ತಿಪದಕೋಶಗಳಲ್ಲಿ ನಿಘಂಟಿಮದ ವ್ಯಾಖ್ಯೆಯ ಜೊತೆ ಸಾಹಿತ್ಯಿಕ ಉದಾಹರಣೆಗಳನ್ನು, ಸಂಬಂಧಿಸಿದ ಗಾದೆಮಾತುಗಳನ್ನು, ನುಡಿಗಟ್ಟುಗಳನ್ನು ಕೊಡುವುದ ರಿಂದ ಆ ವೃತ್ತಿಗಾರರ ಸಮಾಜದ ಸಂಸ್ಕೃತಿ ಹಾಗೂ ಭಾಷೆಯನ್ನು ತಿಳಿದುಕೊಳ್ಳು ವುದಕ್ಕೆ ಅನುಕೂಲವಾಗುತ್ತದೆ. ಆದರೆ ಈ ವಿವರ ಕಡ್ಡಾಯವಲ್ಲ.

೩. 'ಉಳಿ'ಗೆ ಬೇರೆಬೇರೆ ಪರ್ಯಾಯಗಳು ಸಿಕ್ಕರೆ ಅದನ್ನು ಸೂಚಿಸಬೇಕು ; ಅಲ್ಲಿಯೇ ಪ್ರಾದೇಶಿಕತೆ ಅಥವಾ ಸಾಮಾಜಿಕ ವಿವರಗಳನ್ನು ನಮೂದಿಸ ಬಹುದು : ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಿಗುವ ರೂಪ. ಲಿಂಗಾಯತರ ಬಳಕೆ ಯಲ್ಲಿರುವ ರೂಪ ಇತ್ಯಾದಿ.

೪. ನಿಘಂಟಿಮದ ಸ್ವರೂಪವನ್ನು ತಿಳಿಸುವುದೇ ಅದರ ವಿವರಣೆ **(Gloss)** : ಗ್ರಾಂ. (ಗ್ರಾಂಥಿಕ ರೂಪ) : ಆ.ಮಾ. (ಆಡುಮಾತು) : ಪ್ರಾ.ರೂ. (ಪ್ರಾಚೀನ ರೂಪ) ಇತ್ಯಾದಿ.

ವಿ.ಸೂ : ಅರ್ಥವಿವರಣೆಯಲ್ಲಿ ಪ್ರತಿ ನಿಘಂಟುರೂಪವನ್ನೂ ಕಡ್ಡಾಯವಾಗಿ ನಾಲ್ಕು ಮಗ್ಗಲುಗಳಲ್ಲಿ ವಿವರಿಸಬೇಕೆಂದರ್ಥವಲ್ಲ. ಸಾಧ್ಯತೆಗಳಿಗನುಗುಣವಾಗಿ ಅರ್ಥವಿವರಣೆ ಯನ್ನು ನೀಡಬೇಕಾಗುತ್ತದೆ.

## ೨.೨ ವೃತ್ತಿಪದಗಳ ಸಂಯೋಜನೆ

ವೃತ್ತಿಪದಗಳನ್ನು ಸಂಯೋಜಿಸುವಲ್ಲಿ ಅವುಗಳ ಮೂಲಾರ್ಥ ಹಾಗೂ ಉಪಾರ್ಥ **(Satellite meaning)**ಗಳನ್ನು ನಿರ್ಧರಿಸಿ, ಅವುಗಳನ್ನು ಶ್ರೇಣಿ-ರೂಪದಲ್ಲಿ ಕಾಣಿಸ ಬೇಕಾಗುತ್ತದೆ. ಹೀಗೆ ಮಾಡುವಲ್ಲಿ ಆಯಾಯಾ ವೃತ್ತಿಸಮಾಜದ ಹಿನ್ನೆಲೆಯಲ್ಲಿ ಈ ಕೆಲಸ ವನ್ನು ಮಾಡಬೇಕಾಗುತ್ತದೆ. ವೃತ್ತಿಪದಗಳ ಅರ್ಥವನ್ನು ಸೂಚಿಸುವಾಗ ಪ್ರತಿಯೊಂದು ನಿಘಂಟಿಮದ ರೂಪ**(Lemma)**ಕ್ಕೆ ಇರುವ ನಿರ್ದೇಶಕಾರ್ಥ**(Indexical meaning)** ದಲ್ಲಿ ಅಡಗಿಕೊಂಡಿರುವ ಭಿನ್ನಾರ್ಥಕಲಕ್ಷಣಗಳನ್ನು **(Criterial features)** ಗಮನಿಸ ಬೇಕಾಗುತ್ತದೆ.

ಕೆಲವೊಮ್ಮೆ ವೃತ್ತಿಪದಗಳಿಗೆ ನಿರ್ದೇಶಕಾರ್ಥದೊಡನೆ ಶೈಲೀಯಾರ್ಥವೂ **(Stylistic meaning)** ಇರಬಹುದು. ವೃತ್ತಿಪದಕೋಶದಲ್ಲಿ ಶೈಲೀಯಾರ್ಥವೇ ಪ್ರಧಾನವಲ್ಲ. ಆದುದರಿಂದ ಅದನ್ನು ಗೌಣಸ್ಥಾನದಲ್ಲಿ ಸೂಚಿಸಿ ಉದಾಹರಣೆಗಳನ್ನು ಕೊಟ್ಟರೆ ಯಾವ ಯಾವ ಸಾಮಾಜಿಕ ಸಂದರ್ಭಗಳಲ್ಲಿ **(Social contexts)** ಈ ಪದದ ಬಳಕೆಯಾಗುತ್ತ ದೆಂಬ ಮಾಹಿತಿ ನಮಗೆ ದೊರಕುತ್ತದೆ. ಶೈಲೀಯಾರ್ಥದ ವ್ಯಾಪ್ತಿ ವೃತ್ತಿಕಾರರ ಸಮಾಜ ದಲ್ಲಿ ಬಹಳ ಗಾಢವಾಗಿರುವ ಸಾಧ್ಯತೆ ಹೆಚ್ಚು.

ವೃತ್ತಿಪದಗಳಿಗೆ ನಿರ್ದೇಶಕಾರ್ಥ, ಶೈಲೀಯಾರ್ಥದ ಜೊತೆ ವ್ಯಾಕರಣಾರ್ಥವೂ ಇರುತ್ತದೆ. ಒಂದು ವಾಕ್ಯದಲ್ಲಿ ವೃತ್ತಿಪದದ ಕ್ರಿಯೆಯನ್ನು ಸೂಚಿಸುವುದೇ ಅದರ

ವಿ.ಸೂ : ವೃತ್ತಿಪದಕೋಶಗಳಲ್ಲಿ ನಿಘಂಟಿಮದ ವ್ಯಾಖ್ಯೆಯ ಜೊತೆ ಸಾಹಿತ್ಯಿಕ ಉದಾಹರಣೆಗಳನ್ನು, ಸಂಬಂಧಿಸಿದ ಗಾದೆಮಾತುಗಳನ್ನು, ನುಡಿಗಟ್ಟುಗಳನ್ನು ಕೊಡುವುದರಿಂದ ಆ ವೃತ್ತಿಗಾರರ ಸಮಾಜದ ಸಂಸ್ಕೃತಿ ಹಾಗೂ ಭಾಷೆಯನ್ನು ತಿಳಿದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಆದರೆ ಈ ವಿವರ ಕಡ್ಡಾಯವಲ್ಲ.

೩. 'ಉಳಿ'ಗೆ ಬೇರೆಬೇರೆ ಪರ್ಯಾಯಗಳು ಸಿಕ್ಕರೆ ಅದನ್ನು ಸೂಚಿಸಬೇಕು ; ಅಲ್ಲಿಯೇ ಪ್ರಾದೇಶಿಕತೆ ಅಥವಾ ಸಾಮಾಜಿಕ ವಿವರಗಳನ್ನು ನಮೂದಿಸಬಹುದು : ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಿಗುವ ರೂಪ. ಲಿಂಗಾಯತರ ಬಳಕೆಯಲ್ಲಿರುವ ರೂಪ ಇತ್ಯಾದಿ.

೪. ನಿಘಂಟಿಮದ ಸ್ವರೂಪವನ್ನು ತಿಳಿಸುವುದೇ ಅದರ ವಿವರಣೆ (Gloss) : ಗ್ರಾಂ. (ಗ್ರಾಂಥಿಕ ರೂಪ) ; ಆ.ಮಾ. (ಆಡುಮಾತು) : ಪ್ರಾ.ರೂ. (ಪ್ರಾಚೀನ ರೂಪ) ಇತ್ಯಾದಿ.

ವಿ.ಸೂ : ಅರ್ಥವಿವರಣೆಯಲ್ಲಿ ಪ್ರತಿ ನಿಘಂಟುರೂಪವನ್ನೂ ಕಡ್ಡಾಯವಾಗಿ ನಾಲ್ಕು ಮಗ್ಗಲುಗಳಲ್ಲಿ ವಿವರಿಸಬೇಕೆಂದರ್ಥವಲ್ಲ. ಸಾಧ್ಯತೆಗಳಿಗನುಗುಣವಾಗಿ ಅರ್ಥವಿವರಣೆಯನ್ನು ನೀಡಬೇಕಾಗುತ್ತದೆ.

## ೨.೨ ವೃತ್ತಿಪದಗಳ ಸಂಯೋಜನೆ

ವೃತ್ತಿಪದಗಳನ್ನು ಸಂಯೋಜಿಸುವಲ್ಲಿ ಅವುಗಳ ಮೂಲಾರ್ಥ ಹಾಗೂ ಉಪಾರ್ಥ (Satellite meaning)ಗಳನ್ನು ನಿರ್ಧರಿಸಿ, ಅವುಗಳನ್ನು ಶ್ರೇಣಿ-ರೂಪದಲ್ಲಿ ಕಾಣಿಸಬೇಕಾಗುತ್ತದೆ. ಹೀಗೆ ಮಾಡುವಲ್ಲಿ ಆಯಾಯಾ ವೃತ್ತಿಸಮಾಜದ ಹಿನ್ನೆಲೆಯಲ್ಲಿ ಈ ಕೆಲಸವನ್ನು ಮಾಡಬೇಕಾಗುತ್ತದೆ. ವೃತ್ತಿಪದಗಳ ಅರ್ಥವನ್ನು ಸೂಚಿಸುವಾಗ ಪ್ರತಿಯೊಂದು ನಿಘಂಟಿಮದ ರೂಪ(Lemma)ಕ್ಕೆ ಇರುವ ನಿರ್ದೇಶಕಾರ್ಥ(Indexical meaning)ದಲ್ಲಿ ಅಡಗಿಕೊಂಡಿರುವ ಭಿನ್ನಾರ್ಥಕಲಕ್ಷಣಗಳನ್ನು (Criterial features) ಗಮನಿಸಬೇಕಾಗುತ್ತದೆ.

ಕೆಲವೊಮ್ಮೆ ವೃತ್ತಿಪದಗಳಿಗೆ ನಿರ್ದೇಶಕಾರ್ಥದೊಡನೆ ಶೈಲೀಯಾರ್ಥವೂ **(Stylistic meaning)** ಇರಬಹುದು. ವೃತ್ತಿಪದಕೋಶದಲ್ಲಿ ಶೈಲೀಯಾರ್ಥವೇ ಪ್ರಧಾನವಲ್ಲ. ಆದುದರಿಂದ ಅದನ್ನು ಗೌಣಸ್ಥಾನದಲ್ಲಿ ಸೂಚಿಸಿ ಉದಾಹರಣೆಗಳನ್ನು ಕೊಟ್ಟರೆ ಯಾವ ಯಾವ ಸಾಮಾಜಿಕ ಸಂದರ್ಭಗಳಲ್ಲಿ **(Social contexts)** ಈ ಪದದ ಬಳಕೆಯಾಗುತ್ತದೆಂಬ ಮಾಹಿತಿ ನಮಗೆ ದೊರಕುತ್ತದೆ. ಶೈಲೀಯಾರ್ಥದ ವ್ಯಾಪ್ತಿ ವೃತ್ತಿಕಾರರ ಸಮಾಜದಲ್ಲಿ ಬಹಳ ಗಾಢವಾಗಿರುವ ಸಾಧ್ಯತೆ ಹೆಚ್ಚು.

ವೃತ್ತಿಪದಗಳಿಗೆ ನಿರ್ದೇಶಕಾರ್ಥ, ಶೈಲೀಯಾರ್ಥದ ಜೊತೆ ವ್ಯಾಕರಣಾರ್ಥವೂ ಇರುತ್ತದೆ. ಒಂದು ವಾಕ್ಯದಲ್ಲಿ ವೃತ್ತಿಪದದ ಕ್ರಿಯೆಯನ್ನು ಸೂಚಿಸುವುದೇ ಅದರ

ವ್ಯಾಕರಣಾರ್ಥ. ಉದಾ: ನೊಗ: ನಾಮಪದ, ಏಕವಚನ, ನಪುಂಸಕ.
ಉಳು: ಸಕರ್ಮಕ ಕ್ರಿಯಾಪದ; ಉತ್—ಭೂತಕಾಲ ಪ್ರಕೃತಿ (—ತ್ ಭೂತಕಾಲಪ್ರತ್ಯಯ). ನಿಘಂಟಿವುದ ವಿವಿಧ ಅರ್ಥಗಳನ್ನು ಶ್ರೇಣಿರೂಪದಲ್ಲಿ **(Hierarchically/in rank)** ನಮೂದಿಸಬೇಕು.

ನಿಘಂಟಿಮುಗಳ ಮೂಲರೂಪಗಳನ್ನಲ್ಲದೆ ಅವುಗಳಿಗೆ ಪ್ರತ್ಯಯಗಳನ್ನು ಹಚ್ಚಿ ಉತ್ಪಾದಿಸಲಾದ ಸಾಧಿತರೂಪಗಳನ್ನೂ ಸೂಚಿಸಬೇಕು. ಉದಾ: ತೋಟ: ತೋಟಗಾರ; ನೇಯು: ನೇಕಾರ; ಹೂ: ಹೂವಾಡಿಗ ಇತ್ಯಾದಿ.

ನಿಘಂಟಿಮುಗಳ ಸಮಾಸರೂಪಗಳನ್ನು ಕೊಡುವುದು ಒಳ್ಳೆಯದು. ಇದರಿಂದಾಗಿ ವೃತ್ತಿಪದಗಳ ಕ್ರಿಯಾತ್ಮಕಗುಣ ತಿಳಿಯುತ್ತದೆ.

ಉದಾ: ರಾಗಿಹಿಟ್ಟು, ಅಡಿಕೆತೋಟ, ಲಿಂಬೆಗಿಡ ಇತ್ಯಾದಿ.

ನಿಘಂಟಿಮುಗಳ ಅಸಮಸ್ತ ಜೋಡಣೆಯೇ ಪದಪುಂಜ: ಭತ್ತದ ಹುಲ್ಲು: ಜೋಳದ ಕಡ್ಡಿ: ನೇಗಿಲ ಕುಳ ಇಂತಹ ಸಮುಚ್ಚಯಗಳನ್ನು ವೃತ್ತಿಪದಕೋಶದಲ್ಲಿ ಕೊಟ್ಟರೆ, ವೃತ್ತಿಪದಗಳ ಕ್ರಿಯಾತ್ಮಕತೆಯ ಅರಿವು ನಮಗುಂಟಾಗುತ್ತದೆ.

ಈ ಗುಣಗಳಿಂದಾಗಿ ವೃತ್ತಿಪದಕೋಶ, ಕೇವಲ ಪಾರಿಭಾಷಿಕ ಪದಕೋಶ **(Dictionary of Technical Terms)**ಕ್ಕಿಂತ ಭಿನ್ನಸ್ವರೂಪದ್ದಾಗುತ್ತದೆ. ವೃತ್ತಿಗಳಿಗೆ ಸಮಾಜದ ಸಂಸ್ಕೃತಿಯ ಹಿನ್ನೆಲೆಯಿದ್ದು ಆ ಸಂಸ್ಕೃತಿಯ ಅಭಿವ್ಯಕ್ತಿಯಾಗಿ ವೃತ್ತಿಪದಗಳು ಆ ಸಮಾಜದ ಭಾಷೆಯಲ್ಲಿ ಹುಟ್ಟುವುದರಿಂದ ಮೇಲಿನ ವಿವರಗಳ ಸಂಯೋಜನೆ ವೃತ್ತಿಪದಕೋಶದಲ್ಲಿ ಆವಶ್ಯಕ ಎಂಬುದು ನನ್ನ ಅಭಿಮತ.

ಈ ಎಲ್ಲ ವಿವರಗಳನ್ನು ಶ್ರೇಣಿ-ರೂಪದಲ್ಲಿ ನಮೂದಿಸಿದ ನಿಘಂಟಿಮುಗಳನ್ನು ಅಕಾರಾದಿಯಲ್ಲಿ ಜೋಡಿಸುವುದೇ ವೃತ್ತಿಪದಗಳ ಸಂಯೋಜನೆ

## ೩.೦ ವೃತ್ತಿಪದಕೋಶದ ರಚನೆ

ವೃತ್ತಿಪದಕೋಶದ ರಚನೆಯಲ್ಲಿ ಪ್ರಮುಖವಾಗಿ ಮೂರು ಹಂತಗಳನ್ನು ಗುರುತಿಸಬಹುದು:

೧. ಕ್ಷೇತ್ರಕಾರ್ಯ, ೨. ನಿಘಂಟಿಮುಗಳ ಆಯ್ಕೆ, ೩. ನಿಘಂಟಿಮುಗಳ ನಮೂದನೆ.

## ೩.೧ ಕ್ಷೇತ್ರಕಾರ್ಯ

ಕ್ಷೇತ್ರಕಾರ್ಯದಲ್ಲಿ ಪೂರ್ವಸಿದ್ಧತೆ, ಪ್ರಶ್ನಾವಳಿ, ಅನ್ವೇಷಕ, ನಿರೂಪಕ—ಇವು ಪ್ರಮುಖ ಅಂಶಗಳು.

**೩.೧.೧ ಪೂರ್ವಭಾವಿ ಸಿದ್ಧತೆ:** ವೃತ್ತಿಪದಕೋಶದ ರಚನೆಯನ್ನು ಉದ್ದೇಶವನ್ನಾಗಿಟ್ಟುಕೊಂಡು ನಿಘಂಟುಕಾರ ಕ್ಷೇತ್ರಕಾರ್ಯದಲ್ಲಿ ತೊಡಗಬೇಕು. ಕ್ಷೇತ್ರವನ್ನು ಆಯ್ಕೆ ಮಾಡುವ ಪೂರ್ವದಲ್ಲಿ ಆ ಕ್ಷೇತ್ರದ ಭೌಗೋಳಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಚಯ ಅನ್ವೇಷಕ**(Investigator)**ನಿಗೆ ಸಾಕಷ್ಟು ಪ್ರಮಾಣದಲ್ಲಿರಬೇಕು.

(KARPELES, 8). ತಾನು ಹೋಗಬೇಕಾದ ಕ್ಷೇತ್ರಗಳು, ಅಲ್ಲಿಯ ಹವಾಮಾನ, ವಸತಿಸೌಕರ್ಯ, ರಸ್ತೆಸಂಪರ್ಕಗಳ ವ್ಯವಸ್ಥೆ, ಆಯ್ಕೆಮಾಡಿದ ವೃತ್ತಿಯನ್ನು ಮಾಡುವ ಜನಸಂಖ್ಯೆ, ಭೇಟಿಯಾಗಬೇಕಾದ ಪ್ರಮುಖ ವ್ಯಕ್ತಿಗಳು, ಕೆಲಸನಿರ್ವಹಣೆಗೆ ಬೇಕಾಗುವ ಸಾಮಗ್ರಿಗಳು, ಕೆಲಸದ ವೇಳಾಪಟ್ಟಿ ಇತ್ಯಾದಿಗಳ ಬಗೆಗೆ ಸಾಕಷ್ಟು ಗಮನಹರಿಯಿಸಿ ಪೂರ್ವಭಾವಿಸಿದ್ಧತೆಯನ್ನು ಮಾಡಿಕೊಳ್ಳಬೇಕು (ಅದೇ, ೯-೧೩, **Paul, 430**).

ಜಾತಿಪದ್ಧತಿಯಿಂದಾಗಿ ಶ್ರೇಣೀಕೃತಗೊಂಡ ಸಮಾಜದಲ್ಲಿ ಅನ್ವೇಷಕನಾಗಿ ಕೆಲಸ ನಿರ್ವಹಿಸುವುದು ಅಷ್ಟು ಸುಲಭದ ಕೆಲಸವಲ್ಲ. ಅನ್ಯಪ್ರದೇಶಗಳಿಂದ ಬಂದಂಥವರನ್ನು ಸಂಶಯಭಾವದಿಂದ ನೋಡುವುದೇ ಸಾಮಾನ್ಯ. ಇವರಿಗೆ ಆತಿಥ್ಯ ಆದರಗಳು ಸಿಗುವುದೂ ಕಡಿಮೆ. ಅಷ್ಟೇ ಅಲ್ಲದೆ, ವೃತ್ತಿಗಾರರಿಗೆ ವೃತ್ತಿಪದಕೋಶದ ಸ್ವರೂಪ, ರಚನೆ ಮತ್ತು ಯೋಜನೆಗಳ ಬಗೆಗೆ ಪರಿಚಯವಿರುವುದೂ ಕಡಿಮೆ. ಹೊರಗಿನವರು ಬಂದು ಇಲ್ಲಿಯ ತನಕ ಉಪೇಕ್ಷೆಗೊಳಪಟ್ಟ ತಮ್ಮ ವೃತ್ತಿಜೀವನ ಸಂಸ್ಕೃತಿಗಳ ಬಗೆಗೆ ಎಲ್ಲಿಲ್ಲದ ಆಸಕ್ತಿಯನ್ನು ಯಾಕೆ ತೋರಿಸುತ್ತಾರೆಂಬುದೇ ಅವರಿಗೊಂದು ಯಕ್ಷಪ್ರಶ್ನೆ. ಈ ಕಾರಣದಿಂದಾಗಿ ಅನ್ವೇಷಕನು ಪೂರ್ವಭಾವಿಯಾಗಿ ತನ್ನ ಕಾರ್ಯಕ್ಷೇತ್ರದ ಬಗೆಗೆ ಸಾಕಷ್ಟು ಪರಿಚಯ ಮಾಡಿಕೊಂಡು ಸಿದ್ಧತೆಯಲ್ಲಿರುವುದು ಅತ್ಯಗತ್ಯ.

**೩.೧.೨ ಪ್ರಶ್ನಾವಳಿ:** ವೃತ್ತಿಪರಿಭಾಷೆಗೆ **(Register)** ಸಂಬಂಧಿಸಿದಂತೆ ಪ್ರಶ್ನಾವಳಿಯನ್ನು ರೂಪಿಸಿಕೊಳ್ಳಬೇಕು. ಪ್ರಶ್ನಾವಳಿಯಲ್ಲಿ ಹಲವಾರು ಮಾದರಿಗಳನ್ನು ಬಳಸಿಕೊಳ್ಳಬಹುದು (ನೋಡಿ : ಪೈ, ೧೯೭೮). ವೃತ್ತಿಗೆ ಸಂಬಂಧಿಸಿದಂತೆ ಚಿತ್ರಗಳುಳ್ಳ ಕಾರ್ಡುಗಳನ್ನು ತಯಾರಿಸಿ ಅವುಗಳನ್ನು ಬಳಸಿಕೊಳ್ಳಬಹುದು. ಸ್ಲೈಡುಗಳನ್ನು ಸಿದ್ಧಗೊಳಿಸಿ ಅವುಗಳನ್ನು ಉಪಯೋಗಿಸಬಹುದು. ಚಿಕ್ಕಪುಟ್ಟ ಪ್ರಶ್ನೆಗಳನ್ನು ರಚಿಸಿಕೊಳ್ಳಬಹುದು. ಇದು ಏನು ? ಇದನ್ನು ಏನೆಂದು ಕರೆಯುತ್ತೀರಿ ? ಯಾವ ಕಚ್ಚಾಮಾಲು ಬಳಸುತ್ತೀರಿ ? ಬೇಕಾಗಿರುವ ಸಾಮಗ್ರಿಗಳು ಏನು ? ಉಪಯೋಗಿಸುವ ಉಪಕರಣಗಳು ಯಾವುವು ? ಇದರ ಭಾಗಗಳಾವುವು ? ಪ್ರಕಾರಗಳಾವುವು ? ಹಂತಗಳಾವುವು ?—ಈ ರೀತಿಯ ಸೀಮಿತ ಭಾಷೆಯನ್ನು **(Meta-language)** ಬಳಸುವುದರಿಂದ ನಿರೂಪಕರಿಗೆ **(Informants)** ಮಾಹಿತಿಯನ್ನು ಕೊಡುವುದು ಸುಲಭವಾಗುತ್ತದೆ. ವೃತ್ತಿಕಾರನ ಭಾಷೆಯಲ್ಲಿಯೇ(**GOLDSTEIN, 31**)ಪ್ರಶ್ನಾವಳಿ ಇದ್ದರೆ ಬಹು ಉಪಯುಕ್ತ. ಕ್ಷೇತ್ರಾನುಭವದ ಹಿನ್ನೆಲೆಯಲ್ಲಿ ಪ್ರಶ್ನಾವಳಿಯನ್ನು ಸಂಬಂಧಿತ ವಸ್ತುವಿನ ವರ್ಗೀಕರಣಗಳ ಮೂಲಕ ವಿಸ್ತೃತಗೊಳಿಸುತ್ತಾ ಹೋಗಬೇಕಾಗುತ್ತದೆ :

೧.೦ ಕೃಷಿ ಉಪಕರಣ: ೧.೧ ಮರದ ಉಪಕರಣ; ೧.೨ ಕಬ್ಬಿಣದ ಉಪಕರಣ; ೧.೩ ಬಿದಿರಿನ ಉಪಕರಣ; ೧.೪ ಚರ್ಮದ ಉಪಕರಣ.

೨.೦ ಭತ್ತ: ೨.೧ ಭತ್ತದ ತಳಿಗಳು; ೨.೧.೧ ಹಳೆಯ ತಳಿಗಳು; ೨.೧.೨ ಹೊಸ ತಳಿಗಳು; ೨.೨ ಭತ್ತದ ಸಾಲುಗಳು; ೨.೩ ಭತ್ತದ ರೋಗಗಳು.[4]

**೩.೧.೩ ಅನ್ವೇಷಕ:** ಕ್ಷೇತ್ರಕಾರ್ಯದಲ್ಲಿ ಅನ್ವೇಷಕ ಅತ್ಯಂತ ಪ್ರಮುಖವ್ಯಕ್ತಿ.

ಅನ್ವೇಷಕ ಸಿಗುವುದು ಮಾತ್ರ ದುರ್ಲಭ: ಯಾಕೆಂದರೆ ಅನ್ವೇಷಕರಲ್ಲಿ ಕೆಲವೊಂದು ವಿಶಿಷ್ಟ ಗುಣಲಕ್ಷಣಗಳು ಇರಬೇಕಾಗುತ್ತದೆ.

ವೃತ್ತಿಪದಗಳ ಅನ್ವೇಷಣೆ ಮಾಡುವಾತ ವೃತ್ತಿಗಾರರ ಸಂಸ್ಕೃತಿಯನ್ನು ಒಳಹೊಕ್ಕು ಅದನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕು. ಅಲ್ಲಿಯ ಜನರ ಸೂಕ್ಷ್ಮಸಂವೇದನೆಗಳನ್ನು ಚೆನ್ನಾಗಿ ಅರಿತುಕೊಂಡು ಅವರ ಕ್ರಿಯೆ ಪ್ರತಿಕ್ರಿಯೆಗಳನ್ನು ಅರ್ಥೈಸಿಕೊಳ್ಳುವ ಸಾಮರ್ಥ್ಯ ಅನ್ವೇಷಕನಲ್ಲಿರಬೇಕು. ಜನರ ಆಚಾರ ವಿಚಾರಗಳನ್ನು ಚೆನ್ನಾಗಿ ತಿಳಿದುಕೊಂಡು, ಗುರು ಹಿರಿಯರೊಡನೆ, ಪ್ರತಿಷ್ಠಿತವ್ಯಕ್ತಿಗಳೊಡನೆ ಯಾವ ರೀತಿಯಲ್ಲಿ ವರ್ತಿಸಬೇಕೆಂಬುದನ್ನು ಖಚಿತವಾಗಿ ತಿಳಿದುಕೊಳ್ಳಬೇಕು (PAUL, 430-51). ಸ್ಥಳೀಯ ರಾಜಕೀಯದಿಂದ ದೂರವಿದ್ದು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಜನರೊಡನೆ ಬೆರೆತು ಅವರ ಸಮಸ್ಯೆಗಳನ್ನು ನಿವಾರಿಸುವಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಸಹಾಯಕನಾಗಿ ಬಾಳಬೇಕು.

ಕ್ಷೇತ್ರಕಾರ್ಯದಲ್ಲಿ ಮಾನಸಿಕ ಹಾಗೂ ಶಾರೀರಿಕ ಆರೋಗ್ಯ ಅತ್ಯಾವಶ್ಯಕ. ಕ್ಷೇತ್ರದಲ್ಲಿಯ ಜನರ ಆಚಾರವಿಚಾರ, ರೀತಿನೀತಿಗಳು ಅನ್ವೇಷಕನನ್ನು ಭಾವೋದ್ರೇಕಗೊಳಿಸಬಹುದು. ಹಲವಾರು ಸಲ ಶಾರೀರಿಕ ಆಯಾಸವೂ ಹೆಚ್ಚಾಗಬಹುದು. ಈ ಸಂದರ್ಭದಲ್ಲಿ ಆತ ಕೆಟ್ಟ ಹವ್ಯಾಸಗಳಿಂದ ಆದಷ್ಟು ದೂರವಿರಬೇಕಲ್ಲದೆ, ಯೋಗ್ಯವಾದ ನೀರು ಆಹಾರ ಸೇವನೆಗಳೊಂದಿಗೆ ಸೂಕ್ತ ವ್ಯಾಯಾಮ ಹಾಗೂ ಬಿಡುವುಗಳ ಮೂಲಕ ತನ್ನ ಆರೋಗ್ಯಾಯುಷ್ಯಗಳನ್ನು ಕಾಪಾಡಿಕೊಳ್ಳಬೇಕು.

ಅನ್ವೇಷಕ ತನ್ನ ನಿರೂಪಕರೊಂದಿಗೆ ಸದಾ ಪ್ರೀತಿ ಸೌಹಾರ್ದತೆಗಳಿಂದಿರಬೇಕು. ಇದರ ಜೊತೆಗೆ ತನ್ನ ಕಾರ್ಯನಿರ್ವಹಣೆಗೆ ಅಗತ್ಯವಾದ ವೈಜ್ಞಾನಿಕತರಬೇತಿ ಆತನಿಗೆ ಅತ್ಯಾವಶ್ಯಕ. ಧ್ವನಿವಿಜ್ಞಾನ (Phonetics), ವಿಶ್ಲೇಷಣಾಪದ್ಧತಿ, ನಿಘಂಟುವಿಜ್ಞಾನ (Lexicology), ನಿಘಂಟುರಚನಾವಿಜ್ಞಾನ (Lexicography) ಇವುಗಳ ನಿರ್ದಿಷ್ಟ ಜ್ಞಾನ ಆತನಿಗಿರಬೇಕು. ಜ್ಞಾತಿಪದಗಳ (Cognates) ಜ್ಞಾನವಿದ್ದರೆ ವೃತ್ತಿಪದಗಳ ಮೂಲ ಹಾಗೂ ವ್ಯಾಪ್ತಿಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಸೂಕ್ತ ವೈಜ್ಞಾನಿಕ ತರಬೇತಿ ಇಲ್ಲದ ಅನ್ವೇಷಕ/ಸಂಗ್ರಹಕಾರ (Collector) ಹಲವಾರು ಪ್ರಮಾದಗಳಿಗೆ ಕಾರಣನಾಗುತ್ತಾನೆ. ದತ್ತಸಂಗ್ರಹಣೆ ಹಾಗೂ ವಿಶ್ಲೇಷಣೆಗಳಲ್ಲಿ ಸಾಕಷ್ಟು ಅನುಭವವುಳ್ಳ ವ್ಯಕ್ತಿಗಳ ಒಡನಾಟ ಹಾಗೂ ಪರಿಚಯ ಆತನಿಗಿದ್ದರೆ ತನ್ನ ಕೆಲಸದಲ್ಲಿ ಧೈರ್ಯದಿಂದ ಮುಂದೆ ಸಾಗಲು ಆತನಿಗೆ ಸಾಧ್ಯವಾಗುತ್ತದೆ (KARPELES, 8).

**೩.೧.೪ ನಿರೂಪಕ :** ಕ್ಷೇತ್ರಕಾರ್ಯದಲ್ಲಿ ಅನ್ವೇಷಕನಂತೆ ನಿರೂಪಕನೂ ಅತ್ಯಂತ ಪ್ರಮುಖವ್ಯಕ್ತಿ. ಆತನಿಲ್ಲದೆ ದತ್ತಸಂಗ್ರಹ ಅಸಾಧ್ಯ. ದತ್ತವನ್ನು ಒದಗಿಸಿಕೊಡುವುದೇ ಆತನ ಪ್ರಪ್ರಥಮಕಾರ್ಯ. ಕ್ಷೇತ್ರಕಾರ್ಯದಲ್ಲಿ ಅನ್ವೇಷಕನೊಡನೆ ಆತ ಸದಾ ಸಹಭಾಗಿ. ಒಂದು ವೃತ್ತಿಯನ್ನು ಮಾಡುವವರೆಲ್ಲರೂ ಉತ್ತಮನಿರೂಪಕರಾಗಬೇಕಾಗಿಲ್ಲ. ಕಾರಣ, ಅವರನ್ನು ಆಯ್ಕೆ ಮಾಡಬೇಕಾಗುತ್ತದೆ. ನಾವು ಅಧ್ಯಯನಕ್ಕೆ ಆರಿಸಿಕೊಂಡ ವೃತ್ತಿ ನಿರೂಪಕರಿಗೆ ಪಾರಂಪರಿಕವಾಗಿ ಬಂದಿರಬೇಕು.

ನಿರೂಪಕರಿಗೆ ಅನ್ವೇಷಕನ ಜೊತೆ ಕೆಲಸ ನಿರ್ವಹಿಸಲು ಆಸಕ್ತಿ ಹಾಗೂ ಸಮಯವಿರಬೇಕು. ತನ್ನ ವೃತ್ತಿಯಲ್ಲಿ ಆತ ಪರಿಣತನಾಗಿಯೂ ಹೆಚ್ಚಿನ ಮಾಹಿತಿಯುಳ್ಳವನಾಗಿಯೂ ಇರಬೇಕು. ಆದಷ್ಟು ಅನ್ಯಭಾಷಾಪ್ರಭಾವ ಇಲ್ಲದಂತಹ ವ್ಯಕ್ತಿಯನ್ನು ಆರಿಸುವುದೇ ಒಳಿತು. ಆತನ ಉಚ್ಚಾರ ಸ್ಪಷ್ಟವಾಗಿರಬೇಕು. ಆತ ಮಾಹಿತಿ ಹಾಗೂ ವಿವರಗಳನ್ನು ತೃಪ್ತಿಕರರೀತಿಯಲ್ಲಿ ಕೊಡುವಾತನಿರಬೇಕು.

ಸಮರ್ಥ ಹಾಗೂ ಪ್ರಾಮಾಣಿಕ ನಿರೂಪಕರನ್ನು ಗುರುತಿಸಿಕೊಳ್ಳುವಲ್ಲಿ ಸ್ಥಳೀಯ ಜನರ ಸಲಹೆಯನ್ನು ಪಡೆದುಕೊಳ್ಳುವುದು ಲೇಸು. ನಿರೂಪಕನ ಜವಾಬ್ದಾರಿ ಹಿರಿದಾದುದರಿಂದ ಅವರನ್ನು ಬಹು ಜಾಗರೂಕತೆಯಿಂದ ಕಾಳಜಿಪೂರ್ವಕವಾಗಿ ಆರಿಸಿಕೊಳ್ಳುವುದು ಉತ್ತಮ. ತಮ್ಮ ವೃತ್ತಿಯನ್ನು ಕುರಿತು ಅಭಿಮಾನವುಳ್ಳವರನ್ನು, ಸ್ಪಷ್ಟ ಉಚ್ಚಾರವುಳ್ಳವರನ್ನು. ಶ್ರವಣ-ಸ್ಮರಣಶಕ್ತಿ ಚೆನ್ನಾಗಿ ಇದ್ದವರನ್ನು, ಅನುಭವಸ್ಥ ಮಾಹಿತಿಗಾರರನ್ನು ನಿರೂಪಕರನ್ನಾಗಿ ನೇಮಿಸಿಕೊಳ್ಳಬೇಕು.

ನಿರೂಪಕರು ಸಂಭಾವನೆಯನ್ನು ಅಪೇಕ್ಷಿಸಿದ್ದಲ್ಲಿ. ಅವರಿಗೆ ಸೂಕ್ತವಾದುದನ್ನು ಕೊಡುವುದು ಸರಿಯ. ಅದನ್ನು ಅಪೇಕ್ಷಿಸದಿದ್ದಲ್ಲಿ. ಕಾಣಿಕೆಯನ್ನು ಕೊಡುವುದು ಉಪಯುಕ್ತ. ಒಟ್ಟಿನಲ್ಲಿ ಅವರ ಸಹಕಾರ ಪ್ರೇಮಗಳನ್ನು ದೀರ್ಘಕಾಲದ ವರೆಗೆ ಉಳಿಸಿಕೊಳ್ಳಬೇಕು (**GOLDSTEIN, 172. f.n. 16 & 17**). ಒಬ್ಬನಿಗಿಂತ ಹೆಚ್ಚು ನಿರೂಪಕರನ್ನು ಆರಿಸಿದರೆ ದತ್ತಸಂಗ್ರಹದ ಖಚಿತತೆಗೆ ಅನುಕೂಲವಾಗುತ್ತದೆ.

ಉತ್ತಮನಿರೂಪಕರು ಹುಟ್ಟುವುದಿಲ್ಲ. ತರಬೇತಿಕೊಟ್ಟು ಅವರನ್ನು ಸಿದ್ಧಗೊಳಿಸಬೇಕು. ಅನ್ವೇಷಕ ತನ್ನ ಯೋಜನೆಯ ಸ್ವರೂಪ ಗುರಿ ವಿಧಾನಗಳ ಬಗೆಗಿನ ವಿವರ ನಿರೂಪಕನಿಗೆ ತಿಳಿಸಿ ಹೇಳಬೇಕು. ಪ್ರಾಥಮಿಕಮಾಹಿತಿಯ ತರಬೇತಿ ಕೊಟ್ಟು ಬಳಿಕ ದೈನಂದಿನ ಕೆಲಸದ ಮೂಲಕ ತನ್ನಿಂದ ತಾನೇ ನಿರೂಪಕನಿಗೆ ಹೆಚ್ಚಿನ ತರಬೇತಿ ದೊರಕುತ್ತದೆ. ನಿರೂಪಕರೊಂದಿಗೆ ಸಹೋದ್ಯೋಗಿಯಾಗಿ ಶಾಂತರೀತಿಯಿಂದ ಸಮಾನಭಾವದಿಂದ ಅನ್ವೇಷಕ ಕೆಲಸದಲ್ಲಿ ತೊಡಗಿದರೆ ಮಾತ್ರ ಇವರಿಬ್ಬರಲ್ಲಿ ಅನ್ಯೋನ್ಯತೆ ಬೆಳೆದು ವೃತ್ತಿಪದಸಂಗ್ರಹ ಸರಿಯಾದ ರೀತಿಯಲ್ಲಿ ನಡೆಯುತ್ತದೆಂಬುದನ್ನು ಮರೆಯುವಂತಿಲ್ಲ. ನಿರೂಪಕರ ಸ್ಥೂಲ ಜೀವನ ವೃತ್ತಾಂತವನ್ನು ಬರೆದಿಟ್ಟುಕೊಳ್ಳಬೇಕು. ದತ್ತವನ್ನು ಧ್ವನಿಸುರುಳಿಯಲ್ಲಿ ಹಿಡಿದಿಟ್ಟುಕೊಳ್ಳುವುದೂ ಬಹು ಉಪಯುಕ್ತ.

## ೩.೨ ನಿಘಂಟಿಮುಗಳ ಆಯ್ಕೆ

ಆಯ್ಕೆ ಮಾಡಿದ ವೃತ್ತಿಗೆ ಸಂಬಂಧಿಸಿದ ನಿಘಂಟಿಮುಗಳನ್ನು ಮಾತ್ರ ಧ್ವನ್ಯಾತ್ಮಕವಾಗಿ ನಮೂದಿಸಿಕೊಳ್ಳಬೇಕಾಗುತ್ತದೆ. ಪ್ರತಿಯೊಂದು ನಿಘಂಟಿಮುವನ್ನು ...

ಅದನ್ನೇ ಪ್ರಧಾನನಿಘಂಟಿಮವೆಂದು ಪರಿಗಣಿಸಬೇಕು. ಉಳಿದ ರೂಪಗಳು ಮೂಲರೂಪಗಳ ಪಾಠಾಂತರ(Variant)ಗಳೆಂದು ಇಟ್ಟುಕೊಳ್ಳಬೇಕು. ನಿಘಂಟಿಮಗಳ ಆಯ್ಕೆ ಮಾಡುವಲ್ಲಿ ಸಂಶೋಧನೆಯಲ್ಲಿ ಪರಿಣತರಾದವರ ಸಹಾಯ ಪಡೆದುಕೊಳ್ಳುವುದು ಸೂಕ್ತ. ಅಭಿಜ್ಞಾನ

### ೩.೩ ನಿಘಂಟಿಮಗಳ ನಮೂದನೆ

ಪ್ರತಿಯೊಂದು ವೃತ್ತಿಪದವನ್ನು ಭಿನ್ನಭಿನ್ನ ಕಾರ್ಡುಗಳಲ್ಲಿ ನಮೂದಿಸಬೇಕು. ನಿಘಂಟಿಮದ ನಮೂದನೆಯಲ್ಲಿ ಪ್ರಮುಖವಾಗಿ ಎರಡು ಭಾಗಗಳಿವೆ :

೧. ವೃತ್ತಿಪದದ ನಮೂದನೆ : ೨. ವೃತ್ತಿಪದದ ವಿವಿಧ ವಿವರಗಳ ನಮೂದನೆ.

೩.೩.೧ ವೃತ್ತಿಪದದ ನಮೂದನೆಯಲ್ಲಿ ಪ್ರಧಾನಪದ (Head-word) ಬಹು ಪ್ರಮುಖವಾದದ್ದು ; ಅದು ವೃತ್ತಿಪದದ ರೂಪವರ್ಗ(form-class)ವನ್ನು ಸೂಚಿಸುತ್ತದೆಯಲ್ಲದೆ ಅದರ ಕೆಳಗೆ ಬರುವ ಎಲ್ಲ ಮಾಹಿತಿಗಳಿಗೆ ಆಧಾರಸ್ತಂಭವಾಗಿ ನಿಲ್ಲುತ್ತದೆ. ಪ್ರಧಾನಪದದ ನಂತರ, ಅದರ ವ್ಯಾಕರಣಮಾಹಿತಿಯನ್ನು ಸೂಚಿಸಬೇಕು. ಆ ಬಳಿಕ ಅದರ ಪಾಠಾಂತರಗಳನ್ನು ಕೊಡಬೇಕು.

೩.೩.೨ ವೃತ್ತಿಪದದ ವಿವರಗಳ ನಮೂದನೆಯಲ್ಲಿ ನಿಘಂಟಿಮದ ಉಚ್ಚಾರವನ್ನು ಧ್ವನ್ಯಾತ್ಮಕಲಿಪಿ(Phonetic script)ಯಲ್ಲಿ ಕೊಡಬೇಕು. ನಿಘಂಟಿಮದ ವ್ಯುತ್ಪತ್ತಿ **(Etymology)** ಕೊಡುವುದು ಒಳ್ಳೆಯದು. ಈ ವಿವರಗಳೆಲ್ಲವೂ ನಿಘಂಟಿಮರೂಪಕ್ಕೆ **(Lemma)** ಸಂಬಂಧಿಸಿದವುಗಳು. ಅದರ ಮುಂದೆ ಬರುವ ವಿವರಗಳೆಲ್ಲವೂ ಅರ್ಥ ವಿವರಣೆ (ನೋಡಿ . ೨.೧).

೩.೩.೩ **ನಿಘಂಟಿಮ ನಮೂದನೆಯ ಮಾದರಿ** (ನೋಡಿ : ಕುಲಕರ್ಣಿ, ೪೦-೪೧)

| | |
|---|---|
| ೧. ಉಡಾತ್ರ [uDaatra] | ನಾ(ಮ)ಪ(ದ) |
| ~ಉತಾತ್ರ : ~ಉಡಾತ್ಲ : ~ಉಡೇತ್ಲ | 'ನೂಲನ್ನು ಒಣಗಿಸಲು ಮತ್ತು ಗಂಟನ್ನು ಬಿಚ್ಚಲು ಬಳಸುವ ಉಪಕರಣ' |
| ೨. ಚಟ್ಟು [chaTTu] | ನಾ.ಪ. |
| ~ಚೆಟ್ಟು : ~ಚಟ್ಲಿ | 'ನೇಕಾರ ಬಳಸುವ ಚೌಕಟ್ಟು' |
| ೩. ಇಳಕಲ್ಲ ದಡಿ [iLakalla daDI] | ನಾ.ಪ. 'ಇಳಕಲ್ಲ ಊರಿನಲ್ಲಿ ಸಿದ್ಧವಾದ ಸೀರೆಯ ಅಂಚು' |
| ~ಇಲಕಲ್ಲ— : ~ಇರಕಲ್ಲ— | ಈ ಅಂಚಿನಲ್ಲಿ ಎರಡು ಸಾಲು ತ್ರಿಕೋನಾಕೃತಿಯ ನೆಯ್ಗೆ ಇರುತ್ತದೆ. |
| ೪. ಕೊಲ್ಡು [kolDU] | ನಾ.ಪ. |

ವೃತ್ತಿಪ... 'ನೆಲವನ್ನು ಸಮಮಾಡಲು ...

~ಕೊರಡು ಒಡೆಯಲು ಬಳಸುವ ಉಪಕರಣ.[8]

ಬಗೆಗೇ—: ಬೀಟೆ—೪.

## ೪.೦ ವೃತ್ತಿಪದಕೋಶ ಯೋಜನೆ

ವೃತ್ತಿಪದಕೋಶದ ರಚನೆಗೆ ಅದರ ಸ್ವರೂಪ ಹಾಗೂ ಗಾತ್ರವನ್ನು ಅವಲಂಬಿಸಿ, ನಿರ್ದಿಷ್ಟ ಸಮಯಾವಕಾಶ ನಿಗದಿಪಡಿಸಬೇಕಾಗುತ್ತದೆ. ಈ ಕೆಲಸದಲ್ಲಿ ಕ್ಷೇತ್ರಕಾರ್ಯ ಅನಿವಾರ್ಯವಾದುದರಿಂದ ನಿರ್ದಿಷ್ಟಸಂಖ್ಯೆಯಲ್ಲಿ ಸೂಕ್ತತರಬೇತಿ ಹೊಂದಿದ ಅನ್ವೇಷಕರನ್ನು ನಿಯಮಿಸಬೇಕಾಗುತ್ತದೆ. ವೃತ್ತಿಪದಕೋಶದ ಸಂಪಾದಕನಾದವನು ನಿರೂಪಕರನ್ನೂ ಮತ್ತಿತರ ಕಛೇರಿಯ ಸಿಬ್ಬಂದಿಯನ್ನೂ ಬಹು ಎಚ್ಚರದಿಂದ ಆರಿಸಿ ಕೆಲಸ ನಿರ್ವಹಿಸಬೇಕಾಗುತ್ತದೆ. ಈ ಜವಾಬ್ದಾರಿಯುತ ಕೆಲಸದ ನಿರ್ವಹಣೆಗಾಗಿ ಸಂಪಾದಕಮಂಡಳಿಯನ್ನೂ ರಚಿಸಬೇಕಾಗಬಹುದು. ಈ ಮಂಡಳಿಯಲ್ಲಿ ಭಾಷಾವಿಜ್ಞಾನಿಗಳನ್ನು, ಪದಕೋಶರಚನೆಯಲ್ಲಿ ಸಾಕಷ್ಟು ಪರಿಣತಿಯುಳ್ಳವರನ್ನು, ಹಾಗೂ ಸಾಹಿತ್ಯಕ್ಷೇತ್ರದ ವಿದ್ವಾಂಸರನ್ನು ಪ್ರತಿನಿಧಿಸಬೇಕಾಗುತ್ತದೆ. ವೃತ್ತಿಪದಕೋಶ ಅಧಿಕೃತಸಂಸ್ಥೆಯ ಅಂಗವಾಗಿ ಬರಬೇಕಾದ ಪ್ರಸಂಗದಲ್ಲಿ ಕಾರ್ಯನಿರ್ವಹಣೆಯ ಜವಾಬ್ದಾರಿ ಇನ್ನೂ ಅಧಿಕಗೊಳ್ಳುತ್ತದೆ.

ವೃತ್ತಿಪದಕೋಶಗಳ ರಚನಾಕಾರ್ಯ ಹೆಚ್ಚು ವೆಚ್ಚದಲ್ಲಿ ಹಾಗೂ ದೀರ್ಘಕಾಲದಲ್ಲಿ ನಡೆಯಬೇಕಾದ ಕೆಲಸ. ಕಾರಣ. ಸೂಕ್ತ ಧನವ್ಯವಸ್ಥೆಯ ಜೊತೆಗೆ ಕಾಲಾವಕಾಶವನ್ನು ಗೊತ್ತುಪಡಿಸಿಕೊಳ್ಳಬೇಕು. ಪದಕೋಶರಚನೆಯ ಕೆಲಸ ಬಹಳ ಕ್ಲೇಶಕರವಾದುದರಿಂದ ಅದನ್ನು ನಿಗದಿತವೇಳೆಯಲ್ಲಿ ಅಥವಾ ನಿರ್ದಿಷ್ಟ ಹಣಕಾಸುಯೋಜನೆಯಲ್ಲಿ ಮುಗಿಸುವುದು ದುಸ್ಸಾಧ್ಯ. ಆದರೂ ಒಂದು ಸ್ಪಷ್ಟಯೋಜನೆಯನ್ನು ಸಿದ್ಧಗೊಳಿಸಿ ಅದರ ಪ್ರಕಾರ ಕೆಲಸದಲ್ಲಿ ತೊಡಗಬೇಕು: ಇಲ್ಲವಾದರೆ ಪದಕೋಶರಚನೆ ಕೊನೆಯಿಲ್ಲದ ಕೆಲಸವಾಗಿ ಉಳಿದೀತು.

ಸಂಪಾದಕಮಂಡಳಿಯ ಸದಸ್ಯರೊಡನೆ ಪ್ರಧಾನಸಂಪಾದಕರು ಮತ್ತು ಸಹಸಂಪಾದಕರು ನಿಗದಿಪಡಿಸಿದ ವೇಳೆಯಲ್ಲಿ ಪ್ರತಿ ನಿಘಂಟಿಮದ ರೂಪ, ಅರ್ಥ ಹಾಗೂ ಇತರ ವಿಷಯಗಳ ಬಗೆಗೆ. ಪೂರ್ವಭಾವಿಸಿದ್ಧತೆಯ ಬೆಳಕಿನಲ್ಲಿ, ಚರ್ಚಿನಡೆಯಿಸಿದಾಗ ಮಾತ್ರ ಪದಕೋಶದಲ್ಲಿ ನುಸುಳಿಬರಬಹುದಾದ ದೋಷಗಳನ್ನು ನಿವಾರಿಸುವುದು ಸಾಧ್ಯವಾಗುತ್ತದೆ. ಈ ಚರ್ಚೆಗಳು ಎಷ್ಟುಮಟ್ಟಿಗೆ ತೀಕ್ಷ್ಣವಾಗಿ ಹಾಗೂ ಉಪಯುಕ್ತವಾಗಿ ನಡೆಯುತ್ತವೆ. ಅಷ್ಟುಮಟ್ಟಿಗೆ ಸಂಪಾದಕರು ಚುರುಕಾಗುತ್ತಾರೆ.

ಸಹಸಂಪಾದಕರುಗಳು ಸಿದ್ಧಗೊಳಿಸಿದ ಕರಡುಪ್ರತಿಗಳನ್ನು ಪ್ರಧಾನಸಂಪಾದಕರು ಪರಿಶೀಲಿಸುವಾಗ ಕ್ಷೇತ್ರಕಾರ್ಯದಿಂದ ಒದಗಿ ಬಂದ ಸಂಪೂರ್ಣಮಾಹಿತಿ, ನಿಘಂಟಿಮಗಳ ಆಯ್ಕೆ, ಸಂಯೋಜನೆ, ಅರ್ಥವಿವರಣೆ ಹಾಗೂ ನಮೂದನೆಗಳತ್ತ ತೀವ್ರಗಮನ ಹರಿಯಿಸಿ ತಕ್ಕುದಾದ ತಿದ್ದುಪಡಿಗಳನ್ನು ಗಮನವಿಟ್ಟು ಮಾಡಬೇಕು. ಅಚ್ಚಿಸಿದ ಕರಡುಪ್ರತಿಗಳನ್ನು

~ಕೊರಡು 'ನೆಲವನ್ನು ಸಮಮಾಡಲು ಹಾಗೂ ಹೆಂಡೆಗಳನ್ನು
ಬಗನೇ—; ಬೀಟೆ—೩. ಒಡೆಯಲು ಬಳಸುವ ಉಪಕರಣ.[5]

## ೪.೦ ವೃತ್ತಿಪದಕೋಶ ಯೋಜನೆ

ವೃತ್ತಿಪದಕೋಶದ ರಚನೆಗೆ ಅದರ ಸ್ವರೂಪ ಹಾಗೂ ಗಾತ್ರವನ್ನು ಅವಲಂಬಿಸಿ ನಿರ್ದಿಷ್ಟ ಸಮಯಾವಕಾಶ ನಿಗದಿಪಡಿಸಬೇಕಾಗುತ್ತದೆ. ಈ ಕೆಲಸದಲ್ಲಿ ಕ್ಷೇತ್ರಕಾರ್ಯ ಅನಿವಾರ್ಯವಾದುದರಿಂದ ನಿರ್ದಿಷ್ಟಸಂಖ್ಯೆಯಲ್ಲಿ ಸೂಕ್ತತರಬೇತಿ ಹೊಂದಿದ ಅನ್ವೇಷಕ ರನ್ನು ನಿಯಮಿಸಬೇಕಾಗುತ್ತದೆ. ವೃತ್ತಿಪದಕೋಶದ ಸಂಪಾದಕನಾದವನು ನಿರೂಪಕ ರನ್ನೂ ಮತ್ತಿತರ ಕಛೇರಿಯ ಸಿಬ್ಬಂದಿಯನ್ನೂ ಬಹು ಎಚ್ಚರದಿಂದ ಆರಿಸಿ ಕೆಲಸ ನಿರ್ವ ಹಿಸಬೇಕಾಗುತ್ತದೆ. ಈ ಜವಾಬ್ದಾರಿಯುತ ಕೆಲಸದ ನಿರ್ವಹಣೆಗಾಗಿ ಸಂಪಾದಕಮಂಡಳಿ ಯನ್ನೂ ರಚಿಸಬೇಕಾಗಬಹುದು. ಈ ಮಂಡಳಿಯಲ್ಲಿ ಭಾಷಾವಿಜ್ಞಾನಿಗಳನ್ನು, ಪದಕೋಶರಚನೆಯಲ್ಲಿ ಸಾಕಷ್ಟು ಪರಿಣತಿಯುಳ್ಳವರನ್ನು, ಹಾಗೂ ಸಾಹಿತ್ಯಕ್ಷೇತ್ರದ ವಿದ್ವಾಂಸರನ್ನು ಪ್ರತಿನಿಧಿಸಬೇಕಾಗುತ್ತದೆ. ವೃತ್ತಿಪದಕೋಶ ಅಧಿಕೃತಸಂಸ್ಥೆಯ ಅಂಗ ವಾಗಿ ಬರಬೇಕಾದ ಪ್ರಸಂಗದಲ್ಲಿ ಕಾರ್ಯನಿರ್ವಹಣೆಯ ಜವಾಬ್ದಾರಿ ಇನ್ನೂ ಅಧಿಕ ಗೊಳ್ಳುತ್ತದೆ.

ವೃತ್ತಿಪದಕೋಶಗಳ ರಚನಾಕಾರ್ಯ ಹೆಚ್ಚು ವೆಚ್ಚದಲ್ಲಿ ಹಾಗೂ ದೀರ್ಘಕಾಲದಲ್ಲಿ ನಡೆಯಬೇಕಾದ ಕೆಲಸ. ಕಾರಣ, ಸೂಕ್ತ ಧನವ್ಯವಸ್ಥೆಯ ಜೊತೆಗೆ ಕಾಲಾವಕಾಶವನ್ನು ಗೊತ್ತುಪಡಿಸಿಕೊಳ್ಳಬೇಕು. ಪದಕೋಶರಚನೆಯ ಕೆಲಸ ಬಹಳ ಕ್ಲೇಶಕರವಾದುದರಿಂದ ಅದನ್ನು ನಿಗದಿತವೇಳೆಯಲ್ಲಿ ಅಥವಾ ನಿರ್ದಿಷ್ಟ ಹಣಕಾಸುಯೋಜನೆಯಲ್ಲಿ ಮುಗಿಸು ವುದು ದುಸ್ಸಾಧ್ಯ. ಆದರೂ ಒಂದು ಸ್ಪಷ್ಟಯೋಜನೆಯನ್ನು ಸಿದ್ಧಗೊಳಿಸಿ ಅದರ ಪ್ರಕಾರ ಕೆಲಸದಲ್ಲಿ ತೊಡಗಬೇಕು: ಇಲ್ಲವಾದರೆ ಪದಕೋಶರಚನೆ ಕೊನೆಯಿಲ್ಲದ ಕೆಲಸವಾಗಿ ಉಳಿದೀತು.

ಸಂಪಾದಕಮಂಡಳಿಯು ಸದಸ್ಯರೊಡನೆ ಪ್ರಧಾನಸಂಪಾದಕರು ಮತ್ತು ಸಹಸಂಪಾದಕರು ನಿಗದಿಪಡಿಸಿದ ವೇಳೆಯಲ್ಲಿ ಪ್ರತಿ ನಿಘಂಟಿಮುದ ರೂಪ, ಅರ್ಥ ಹಾಗೂ ಇತರ ವಿಷಯಗಳ ಬಗೆಗೆ, ಪೂರ್ವಭಾವಿಸಿದ್ಧತೆಯ ಬೆಳಕಿನಲ್ಲಿ, ಚರ್ಚೆನಡೆಯಿಸಿದಾಗ ಮಾತ್ರ ಪದಕೋಶದಲ್ಲಿ ನುಸುಳಿಬರಬಹುದಾದ ದೋಷಗಳನ್ನು ನಿವಾರಿಸುವುದು ಸಾಧ್ಯವಾಗುತ್ತದೆ. ಈ ಚರ್ಚೆ ಗಳು ಎಷ್ಟುಮಟ್ಟಿಗೆ ತೀಕ್ಷ್ಣವಾಗಿ ಹಾಗೂ ಉಪಯುಕ್ತವಾಗಿ ನಡೆಯುತ್ತವೆ. ಅಷ್ಟು ಮಟ್ಟಿಗೆ ಸಂಪಾದಕರು ಚುರುಕಾಗುತ್ತಾರೆ.

ಸಹಸಂಪಾದಕರುಗಳು ಸಿದ್ಧಗೊಳಿಸಿದ ಕರಡುಪ್ರತಿಗಳನ್ನು ಪ್ರಧಾನಸಂಪಾದಕರು ಪರಿಶೀಲಿಸುವಾಗ ಕ್ಷೇತ್ರಕಾರ್ಯದಿಂದ ಒದಗಿ ಬಂದ ಸಂಪೂರ್ಣಮಾಹಿತಿ, ನಿಘಂಟಿಮುಗಳ ಆಯ್ಕೆ, ಸಂಯೋಜನೆ, ಅರ್ಥವಿವರಣೆ ಹಾಗೂ ನಮೂದನೆಗಳತ್ತ ತೀವ್ರಗಮನ ಹರಿಯಿಸಿ ತಕ್ಕುದಾದ ತಿದ್ದುಪಡಿಗಳನ್ನು ಗಮನವಿಟ್ಟು ಮಾಡಬೇಕು. ಅಚ್ಚಿಸಿದ ಕರಡುಪ್ರತಿಗಳನ್ನು

ತಿದ್ದುವಲ್ಲಿಯೂ ವಿಶೇಷಗಮನ ಹರಿಯಿಸಬೇಕು. ಪ್ರತಿಯೊಂದೂ ವಿಷಯವನ್ನೂ ಆಯಾಯಾ ಹಂತದಲ್ಲಿ ಕೂಲಂಕಷವಾಗಿ ಚರ್ಚಿಸಿದ ಬಳಿಕ ಪ್ರಧಾನಸಂಪಾದಕರು ಸರಿಯೆಂದು ತೀರ್ಮಾನಿಸಿದ ವಿಷಯಗಳನ್ನು ಎಲ್ಲರೂ ಒಪ್ಪಬೇಕು. ವೃತ್ತಿಪದಕೋಶದ ರಚನೆಯಲ್ಲಿ ಏಕಾಗ್ರತೆಯಿಂದ ದುಡಿದಾಗ ಸಿಗುವ ಆನಂದವೇ ನಿಘಂಟುಕಾರನಿಗೆ ದೊರಕುವ ಪ್ರಯೋಜನವೆಂದು ತಿಳಿದು, ನಿಷ್ಕಾಮವಾಗಿ ದುಡಿಯುವುದು ಪ್ರಸ್ತುತದಲ್ಲಿ ಅನಿವಾರ್ಯ.

## ಅಡಿಟಿಪ್ಪಣಿ

1. ನಿಘಂಟಿಮ ಮತ್ತು ಪದ ಇವುಗಳ ಬಗೆಗಿನ ಚರ್ಚೆಗೆ ನೋಡಿ: ಮಾಡ್ತ (1989) 18.1–2 : 63–68.

2. Lemma ಎಂದರೆ ನಿಘಂಟಿಮ ರೂಪ. ಪ್ರತಿಯೊಂದು ನಿಘಂಟಿಮದ ಅರ್ಥ (Sememe) ರೂಪ (**Lemma**)ದ ಮೂಲಕ ಅಭಿವ್ಯಕ್ತಗೊಳ್ಳುತ್ತದೆ.

3. ವಿವರಗಳಿಗೆ ನೋಡಿ : ಮಾಡ್ತ (೧೯೮೯) 18.3—4 : 12–1೫.

4. ಕೃಷಿಗೆ ಸಂಬಂಧಿಸಿದ ಪಾರಿಭಾಷಿಕ ಪದಗಳ ವರ್ಗೀಕರಣದ ಮಾದರಿಗೆ ನೋಡಿ: (೧) ಮಹೇಶ್ವರಯ್ಯ, ೧೯೯೦ : ೫೫–೭೬ ; (೨) ಶಿವಾನಂದ, ೧೯೭೮.

5. ಆದೇ, ಪು. ೫೯.

## ೫.೦ ಆಕರಸೂಚಿ

೫.೧ ಕುಲಕರ್ಣಿ, ಆರ್. ವಾಯ್., ೧೯೮೮, ಕನ್ನಡದಲ್ಲಿ ವೃತ್ತಿಪದಕೋಶಗಳು, ಕರ್ನಾಟಕ ಭಾರತಿ, ೨೦.೩.

೫.೨ ಕುಲಕರ್ಣಿ, ಆರ್. ವಾಯ್., ೧೯೯೨ ಮೇ, ವೃತ್ತಿಪದಕೋಶಗಳ ರಚನಾಕ್ರಮ, ಕರ್ನಾಟಕ ಭಾರತಿ, ೨೪.೪ : ೩೫–೪೩.

೫.೩ ಪೈ (ಎಸ್. ಜೆ.), ಸಿ.ಸಿ.ಎ., ೧೯೭೮, 'ಜಾನಪದ ವೈಜ್ಞಾನಿಕ ಕ್ಷೇತ್ರಕಾರ್ಯ', ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ.

೫.೪ ಮಹೇಶ್ವರಯ್ಯ, ಎಚ್. ಎಂ., ೧೯೯೦, 'ಜಾನಪದಸಂವಹನ', ಧಾರವಾಡ : ಸಹಿತ ಪ್ರಕಾಶನ.

೫.೫ ಮಾಡ್ತ, ವಿಲ್ಯಂ, ೧೯೮೭, ಕ್ಷೇತ್ರಭಾಷಾವಿಜ್ಞಾನಿ ಮತ್ತು ಭಾಷಾಕ್ಷೇತ್ರ, ಕರ್ನಾಟಕ ಭಾರತಿ, ೧೯.೩ : ೨೮–೪೩.

೫.೬ ಮಾಡ್ತ, ವಿಲ್ಯಂ, ೧೯೮೭, ಭಾಷಾನಿರೂಪಕ, ಕರ್ನಾಟಕ ಭಾರತಿ, ೨೦.೨ : ೭೩-೮೨.

೫.೭ ಮಾಡ್ತ, ವಿಲ್ಯಂ, ೧೯೮೯, ನಿಘಂಟುವಿಜ್ಞಾನ, ಸಾಧನೆ, ೧೮.೧–೨ : ೬೩–೬೮.

೫.೮ ಮಾಡ್ತ, ವಿಲ್ಯಂ, ೧೯೮೯, ನಿಘಂಟುರಚನೆ, ಸಾಧನೆ, ೧೮.೩–೪ : ೨–೨೨.

೫.೯ ಶಿವಾನಂದ, ವಿ., ೧೯೭೮, ಒಕ್ಕಲುತನ ವೃತ್ತಿಪದಕೋಶ, ಕರ್ನಾಟಕ ಭಾರತಿ, ೧೦.೪–೫.

5.10 **GOLDSTEIN**, Kenneth S., 1964. *A Guide for Field Workers in Folklore*, Hatboro, Pa.: Folklore Associates (Memoirs of the American Folklore Society, Vol. 52) xviii, pp. 199.

5.11 **HALL**, Robert A.(Jr.), 1969, *Introductory Linguistics*, Delhi: Motilal Banarsidass, xiii, pp. 308.

5.12 KARPELES, Maud (Ed.), 1958, *The Collecting of Folk Music and Other Ethnomusicological Material: A Manual for Field Workers*. London: International Folk Music Council and Royal Anthropological Institute of Great Britain and Ireland, pp. 40.

5.13 PAUL, Benjamin D., 1953, "Interview Techniques and Field Relationships", In A. L. Kroeber (Ed), *Anthropology Today: An Encyclopaedic Inventory*. Chicago: University of Chicago Press pp. 430–451.

5.14 SAMARIN, William J., 1966, *Field Linguistics: A Guide to Linguistic Field Work*, New York: Holt Rinehart and Winston, x, pp. 246.

5.15 ZGUSTA Ladislav, 1971, *Manual of Lexicography* The Hague, Paris; Mouton.

# ಕನ್ನಡ ಛಂದಸ್ಸಿನ ಪ್ರಾಚೀನ ಗೇಯಪ್ರಬಂಧಗಳು

ರಾ. ಸತ್ಯನಾರಾಯಣ

## ಪ್ರವೇಶ

ಭಾರತದಲ್ಲಿ ಸಂಗೀತಶಾಸ್ತ್ರ ಛಂದಃಶಾಸ್ತ್ರಗಳ ನಡುವೆ ಬಹುಕಾಲದಿಂದಲೂ ಮೈತ್ರಿಯಿದೆ. ಇದನ್ನು ಬೇರೆಡೆ ಪ್ರಸ್ತಾಪಿಸಿದ್ದೇನೆ. ಸಂಗೀತಶಾಸ್ತ್ರಗ್ರಂಥಗಳಲ್ಲಿ ಹಲವು ಛಂದೋವೃತ್ತಗಳನ್ನು ಗೇಯಪ್ರಬಂಧಗಳಾಗಿ ವರ್ಣಿಸಿದೆ. ಇವುಗಳಲ್ಲಿ ಕೆಲವು ಕನ್ನಡದ ಹಾಡುಗಳೂ ಸೇರಿವೆ. ಇಂತಹ ಹಾಡುಗಳ ಛಂದೋವೈಶಿಷ್ಟ್ಯಗಳನ್ನು ಮಾತ್ರವಲ್ಲದೆ ಗೇಯರಚನಾವಿನ್ಯಾಸ, ಗಾಯನಕ್ರಮ/ವಿಧಾನ ಮುಂತಾದ ವಿವರಗಳನ್ನೂ ಅಲ್ಲಿ ಕಾಣಬಹುದು. ಛಂದಃಶಾಸ್ತ್ರಗ್ರಂಥಗಳಲ್ಲಿ ಕೊಡದಿರುವ ಕೆಲವು ಛಂದೋರೂಪಗಳೂ ಒಮ್ಮೊಮ್ಮೆ ಅಲ್ಲಿ ದೊರೆಯುತ್ತವೆ. ಇದನ್ನು ಪರಿಚಯಿಸಿಕೊಳ್ಳುವುದರಲ್ಲಿ ಛಂದಃಶಾಸ್ತ್ರವಿದ್ವಾಂಸರಿಗೆ ಆಸಕ್ತಿಯಿರಬಹುದೆಂದು ಭಾವಿಸಿ, ಪ್ರಾಚೀನ ಸಂಗೀತಶಾಸ್ತ್ರಗ್ರಂಥಗಳಲ್ಲಿ ವರ್ಣಿಸಿರುವ ಕೆಲವು ಕನ್ನಡಗೇಯ ಪ್ರಬಂಧಗಳ ಸಂಕ್ಷೇಪ ವಿವೇಚನೆಯನ್ನು ಈ ಲೇಖನದಲ್ಲಿ ಕೈಗೊಂಡಿದ್ದೇನೆ.

ಇಲ್ಲಿ ವಿವೇಚಿಸಲಾಗುವ ಕನ್ನಡಗೇಯ ಪ್ರಬಂಧಗಳು : ೧. ಏಲಾ ೨. ವರ್ಣ ೩. ಕಂದ ೪. ತ್ರಿಪದೀ ೫. ಚತುಷ್ಪದೀ ೬. ಷಟ್ಪದೀ ೭. ಶುಕಸಾರಿಕಾ

ವಿವೇಚನೆಗೆಂದು ಬಳಸಿರುವ ಆಕರಗಳು :

೧. 'ಬೃಹದ್ದೇಶೀ' (ಬೃದೇ.) : ಮತಂಗಮುನಿ ವಿರಚಿತ ; ಇದು ಭರತಮುನಿಯ ನಾಟ್ಯಶಾಸ್ತ್ರದ ನಂತರ ರಚಿತವಾದ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಪ್ರಮುಖ, ಪ್ರಮಾಣಭೂತ. ಮತಂಗಮುನಿಯು ಕರ್ನಾಟಕದ ಹಂಪೆಯ ಬಳಿ ಇದ್ದವನೆಂದು ಊಹಿಸಲು ಕಾರಣಗಳನ್ನು ಬೇರೆಡೆಯಲ್ಲಿ ಚರ್ಚಿಸಿದ್ದೇನೆ. ಕಾಲ ಕ್ರಿ.ಶ. ೫–೭ನೆಯ ಶತಮಾನ (ಬೇರೆ ಕೆಲವು ವಿದ್ವಾಂಸರ ಅಭಿಪ್ರಾಯದಲ್ಲಿ ಕ್ರಿ.ಶ. ೭–೯ನೆಯ ಶತಮಾನ). ಭಾರತೀಯ ಸಂಗೀತದ ಗೇಯಪ್ರಬಂಧಗಳನ್ನು ವರ್ಣಿಸುವುದರಲ್ಲಿ ಇದೇ ಪ್ರಥಮೋಪಲಬ್ಧ ಆಕರ ; ತಿರುವಂದರಂ ಸಂಸ್ಕರಣದಲ್ಲಿ ಪ್ರಕಟಿತ (೧೯೨೮).

೨. 'ಸರಸ್ವತೀಹೃದಯಾಲಂಕಾರಹಾರ' (ಸಹೃ.) : ನಾನ್ಯದೇವ ವಿರಚಿತ. ಇವನು ಕರ್ನಾಟಕದ ಉತ್ತರಕಾಲೀನ ರಾಷ್ಟ್ರಕೂಟ ದೊರೆ. ಕಾಲ : ಕ್ರಿ.ಶ. ಹನ್ನೊಂದನೆಯ

ರಾಜ್ಯದಲ್ಲಿ ತನ್ನ ಬಂಧುವೊಬ್ಬನನ್ನು ರಾಜನನ್ನಾಗಿ ... ಸಂಗೀತಶಾಸ್ತ್ರದಲ್ಲಿ ಪ್ರಾಮಾಣಿಕನಾದ ಕೀರ್ತಿಧರನು ಇವನ ಸೋದರ. ಮೋಹನಮುರಾರಿ, ಧರ್ಮಾವಲೋಕ, ಮಹಾಸಾಮಂತಾಧಿಪತಿ ಮುಂತಾದ ಬಿರುದುಗಳನ್ನು ನಾನ್ಯದೇವನು ವಹಿಸಿದ್ದಾನೆ ಇವನ ಗ್ರಂಥಕ್ಕೆ ಭರತವಾರ್ತಿಕ, ಭರತಭಾಷ್ಯ ಎಂಬ ನಾಮಾಂತರಗಳೂ ಇವೆ. ಆದರೆ ಇದು ನಾಟ್ಯಶಾಸ್ತ್ರದ ವ್ಯಾಖ್ಯಾನವಲ್ಲ, ಸ್ವತಂತ್ರಗ್ರಂಥ. ಬೇರೆ ಆಕರಗಳಲ್ಲಿ ಸಿಗದಿರುವ ಅನೇಕ ಅಮೂಲ್ಯ ಸಂಗೀತಶಾಸ್ತ್ರೀಯ ಅಂಶಗಳು ಇದರಲ್ಲಿ ದೊರೆಯುತ್ತವೆ. ಕರ್ನಾಟಕದಲ್ಲಿ ರೂಢಿಸಿದ್ದ ಸಂಗೀತಪದ್ಧತಿಯನ್ನು ದೂರದ ಮಿಥಿಲೆಯಲ್ಲಿ ಪ್ರಚಾರ ಮಾಡಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಇದಲ್ಲದೆ 'ಗ್ರಂಥಮಹಾರ್ಣವ' ಎಂಬ ಇನ್ನೊಂದು (ಅನುಪಲಬ್ಧ) ಉದ್ಗ್ರಂಥವನ್ನೂ ಇವನು ರಚಿಸಿದ್ದಾನೆ; ವಿವೇಚನೆಗೆ ಆಕರ ಪುಣೆಯ ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ೧೧೧/೧೮೬೯–೭೦ ಎಂಬ ಹಸ್ತಪ್ರತಿ. ಇದರ ಪ್ರತಿಯು ಮೈಸೂರಿನ ವರಲಕ್ಷ್ಮೀ ಅಕೆಡಮಿಯಲ್ಲಿದೆ.

೩. 'ಅಭಿಲಷಿತಾರ್ಥಚಿಂತಾಮಣಿ' ಅಥವಾ 'ರಾಜಮಾನಸೋಲ್ಲಾಸ' (ಅಚಿಂ.): ಚಾಳುಕ್ಯ 'ಸರ್ವಜ್ಞ' ಸೋಮೇಶ್ವರ ವಿರಚಿತ. ಮುಮ್ಮಡಿ ಸೋಮೇಶ್ವರನು ಮಹಾರಾಜಾಧಿರಾಜ, ಸತ್ಯಾಶ್ರಯಕುಲತಿಲಕ, ಚಾಳುಕ್ಯಾಭರಣ, ಭೂಲೋಕಮಲ್ಲ ಮೊದಲಾದ ಬಿರುದುಗಳನ್ನು ವಹಿಸಿದ್ದಾನೆ. ಕಾಲ ಕ್ರಿ. ಶ. ೧೧೨೭–೧೧೩೮. ರಾಜಮಾನಸೋಲ್ಲಾಸವು ಒಂದು ವಿಶ್ವಕೋಶದಂತಿದ್ದು ಸಂಗೀತವನ್ನು (ಅದರಲ್ಲಿ ಪ್ರಬಂಧಗಳನ್ನು) ನಾಲ್ಕನೆಯ ವಿಂಶತಿಯ ಹದಿನಾರನೆಯ ಅಧ್ಯಾಯದಲ್ಲಿ ವರ್ಣಿಸಿದೆ. ವಿಶೇಷವೆಂದರೆ, ಹೆಚ್ಚುಕಡಿಮೆ ಪ್ರತಿಯೊಂದು ಪ್ರಬಂಧಕ್ಕೂ ಗ್ರಂಥಕಾರನು ಆಯಾ ಭಾಷೆಯಲ್ಲೇ ರಚನೆಗಳನ್ನು ನಿರ್ಮಿಸಿ ನಿದರ್ಶನಗಳನ್ನು ಒದಗಿಸಿದ್ದಾನೆ. ನಾನ್ಯದೇವನನ್ನು ಬಿಟ್ಟರೆ ಸೋಮೇಶ್ವರನಲ್ಲದೆ ಅನ್ಯತ್ರ ಪ್ರಬಂಧಗಳಿಗೆ ಲಕ್ಷ್ಯೋದಾಹರಣೆಗಳು ದೊರೆಯುವುದಿಲ್ಲ. ಉಪಲಬ್ಧ ಗ್ರಂಥವು ತುಂಬಾ ಲೋಪದೋಷಗಳನ್ನು ಒಳಗೊಂಡಿದೆ. ಇದು ಗಾಯಕವಾಡ್ ಓರಿಯಂಟಲ್ ಸೀರೀಸ್‌ನ ೧೩೮ನೆಯ ಕ್ರಮಸಂಖ್ಯೆಯಾಗಿ (೧೯೬೧) ಬರೋಡದಿಂದ ಪ್ರಕಟವಾಗಿದೆ.

೪. 'ಸಂಗೀತಚೂಡಾಮಣಿ' (ಸಂಚೂ.): ಚಾಳುಕ್ಯ ಚಕ್ರವರ್ತಿ ಎರಡನೆಯ ಜಗದೇಕಮಲ್ಲ (ಮುಮ್ಮಡಿ ಸೋಮೇಶ್ವರನ ಹಿರಿಯ ಮಗ)ನಿಂದ ವಿರಚಿತ. ಗೇಯ ಪ್ರಬಂಧ ವರ್ಣನೆಯಲ್ಲಿ ಇದು ಅತ್ಯಂತ ಪ್ರಾಮಾಣಿಕ ಗ್ರಂಥ; ಸಂಗೀತರತ್ನಾಕರಾದಿ ಗ್ರಂಥಗಳಿಗೆ ಆಕರ. ಏಳೆಯ ವರ್ಣನೆಯಲ್ಲಿ ಇದು ಕೊಡುವ ವಿವರಗಳು ಅನನ್ಯೋಪಲಬ್ಧ. ಕಾಲ ಕ್ರಿ.ಶ. ೧೧೩೮–೧೧೫೦. ಅಪ್ರಕಟಿತ; ಗಾಯಕವಾಡ್ ಓರಿಯಂಟಲ್ ಸೀರೀಸ್‌ನಲ್ಲಿ ಪ್ರಕಟವಾಗಿರುವ ಸಂಗೀತ ಚೂಡಾಮಣಿ...

ಮೈಸೂರಿನ ವರಲಕ್ಷ್ಮೀ ಅಕೆಡಮಿಯಲ್ಲಿ ಇದರ ಪ್ರತಿಯಿದೆ. ಗ್ರಂಥಕಾರನ ನಿಜವಾದ ಹೆಸರು ತಿಳಿಯದು. ಜಗದೇಕಮಲ್ಲ, ಪ್ರತಾಪಚಕ್ರವರ್ತಿ ಎಂಬವುಗಳು ಅವನ ಬಿರುದುಗಳು.

೫. 'ಸಂಗೀತರತ್ನಾಕರ' (ಸಂರ.): ಅನವದ್ಯವಿದ್ಯಾವಿನೋದ, ನಿಃಶಂಕ ಶಾರ್ಙ್ಗದೇವನು ರಚಿಸಿದ್ದು. ದೇವಗಿರಿಯ ಯಾದವ ದೊರೆ ಸಿಂಘಣನ(ಕ್ರಿ.ಶ. ೧೨೧೦–೧೨೪೭)ಆಶ್ರಯದಲ್ಲಿ ರಚಿತವಾಯಿತು. ಇದು ಭಾರತೀಯ ಸಂಗೀತದ ಅತ್ಯಂತ ಮಹತ್ವಪೂರ್ಣ ಪ್ರಮಾಣಭೂತ ಪ್ರಭಾವಶಾಲೀ ಗ್ರಂಥ: ಗೀತವಾದನ ನರ್ತನಗಳ ಸೂತ್ರಪ್ರಾಯವಾದ ವಿಶ್ವಕೋಶ : ನಂತರದ ಗ್ರಂಥಗಳಿಗೆ ಪ್ರತ್ಯಕ್ಷವಾದ ಅಥವಾ ಪರೋಕ್ಷವಾದ ಆಕರ. "ಪೂರ್ವಾಚಾರ್ಯಮತಪಯೋನಿಧಿಯನ್ನು ಕಡೆಯುವಾಗ ಹುಟ್ಟಿದ ಅಮೃತ." ಇದರ ನಾಲ್ಕನೆಯ ಅಧ್ಯಾಯದಲ್ಲಿ ಪ್ರಬಂಧಗಳನ್ನು ಅತ್ಯಂತ ಸಂಗ್ರಹವಾಗಿ, ಆದರೆ ಸಮಗ್ರವಾಗಿ ವರ್ಣಿಸಿದೆ. ಅಡ್ಯಾರ್ ಲೈಬ್ರರಿ ಮತ್ತು ರಿಸರ್ಚ್ ಸೆಂಟರಿನ ನಲವತ್ತಮೂರನೆಯ ಪ್ರಕಟನೆಯಾಗಿ (೧೯೫೩) ಹೊರಬಂದಿದೆ. ಇದರಲ್ಲಿ ಸಿಂಹಭೂಪಾಲನ (ಸಿಂಹ.) 'ಸಂಗೀತ ಸುಧಾಕರ' ಎಂಬ ವ್ಯಾಖ್ಯೆಯೂ (ಸು. ೧೩೩೦) ಕಲ್ಲಿನಾಥನ (ಕಲ್ಲಿ.) 'ಸಂಗೀತಕಲಾನಿಧಿ' ಎಂಬ ವ್ಯಾಖ್ಯೆಯೂ (ಸು. ೧೪೫೦) ಪ್ರಕಟವಾಗಿವೆ.

೬. ಸಂಗೀತರಾಜ (ಸಂ.ರಾಜ) : ಮೇವಾಡದ ಕುಂಭಕರ್ಣನು ರಚಿಸಿದ್ದು (ಕೆಲವು ಹಸ್ತಪ್ರತಿಗಳಲ್ಲಿ ಗ್ರಂಥಕರ್ತನು ಕಾಲಸೇನನೆಂದಿದೆ). ರಚನಾ ಕಾಲ ಕ್ರಿ.ಶ. ೧೪೩೩–೧೪೬೮. ಸಂಗೀತಶಾಸ್ತ್ರದಲ್ಲಿ ಬೃಹದ್ಗ್ರಂಥ; ಸಂರ.ವನ್ನು ಬಹುಮಟ್ಟಿಗೆ ಅವಲಂಬಿಸಿದೆ; ಪ್ರಬಂಧಗಳ ಹಾಗೂ ಇತರ ವಿಷಯಗಳಲ್ಲಿ ಸಮಸಾಮಯಿಕ ಸಾಮಗ್ರಿಯನ್ನು ತಕ್ಕಮಟ್ಟಿಗೆ ಒಳಗೊಂಡಿದೆ. ಇದರ ಎರಡನೆಯ ಗೀತರತ್ನಕೋಶದ ನಾಲ್ಕನೆಯ ಭಾಗವಾದ ಪ್ರಬಂಧೋಲ್ಲಾಸದಲ್ಲಿ ವಿವಿಧ ಗೇಯಪ್ರಬಂಧಗಳನ್ನು ಪರೀಕ್ಷಣಗಳೆಂಬ ೧–೪ ಅಧಿಕರಣಗಳಲ್ಲಿ ಸುದೀರ್ಘವಾಗಿ ವಿವರಿಸುತ್ತದೆ. ಉತ್ತರಭಾರತದ, ವಿಶೇಷವಾಗಿ ರಾಜಾಸ್ಥಾನದ ಸಂಗೀತವು ೧೫ನೆಯ ಶತಮಾನದಲ್ಲಿ ಹೇಗಿತ್ತು ಎಂಬುದಕ್ಕೆ ತಕ್ಕಮಟ್ಟಿಗೆ ಉತ್ತಮ ಆಕರ. ಇಷ್ಟು ದೊಡ್ಡ ಗ್ರಂಥವಾದರೂ ನಂತರದ ಯಾವ ಲಾಕ್ಷಣಿಕರೂ ಇದರಿಂದ ಪ್ರಭಾವಿತರಾಗದೆ, ಸ್ಮರಿಸದೆ ಇರುವುದು ವಿಸ್ಮಯಕರವಾಗಿದೆ. ಕಾಶಿಯ ಹಿಂದೂವಿಶ್ವವಿದ್ಯಾಲಯದ ನೇಪಾಲರಾಜ್ಯ ಸಂಸ್ಕೃತಮಾಲೆಯ ಸಂಖ್ಯೆ ೫ (೧೯೬೩).

೭. ನರ್ತನನಿರ್ಣಯ (ನನಿ.) : ಪಂಡರೀವಿಟ್ಠಲನು ಕ್ರಿ.ಶ. ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಮೊಘಲ್ ಚಕ್ರವರ್ತಿ ಅಕಬರನ ಕೋರಿಕೆಯಂತೆ ರಚಿಸಿದ್ದು. ಎರಡನೆಯ ಗಾಯಕ ಪ್ರಕರಣದ ಎರಡನೆಯ ಅಧಿಕರಣದಲ್ಲಿ ಪ್ರಬಂಧಗಳನ್ನು, ಸಂರ.ವನ್ನು —ಮುಖ್ಯವಾಗಿ ಕಲ್ಲಿನಾಥನನ್ನು—ಅವಲಂಬಿಸಿ ವಿವರಿಸಿದೆ. ವಿಟ್ಠಲನು ಪುರಂದರದಾಸರ ಹಾಗೂ ತಾನಸೇನರ ಸಮಕಾಲೀನನಾದ ಕನ್ನಡಿಗ. ಕರ್ನಾಟಕದಲ್ಲಿ ವಿಶೇಷವಾಗಿಯೂ ದಕ್ಷಿಣ ಭಾರತದಲ್ಲಿ ಸಾಮಾನ್ಯವಾಗಿಯೂ ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಸಂಗೀತ ನೃತ್ಯಗಳನ್ನು ಅಧಿಕಾರವಾಣಿಯಿಂದ ವಿವರಿಸಿದ್ದಾನೆ; ಕರ್ನಾಟಕ ಸಂಗೀತ, ಹಿಂದೂಸ್ಥಾನಿ

ಸಂಗೀತ, ಪರ್ಷಿಯನ್ ಸಂಗೀತ, ನರ್ತನಶಾಸ್ತ್ರ, ಅಲಂಕಾರಶಾಸ್ತ್ರ ಮತ್ತು ನಿಘಂಟುಗಳಲ್ಲಿ ಪ್ರಾಮಾಣಿಕ. ಇವನ ಇತರ ಗ್ರಂಥಗಳು ಸದ್ರಾಗಚಂದ್ರೋದಯ, ರಾಗಮಾಲಾ, ರಾಗ ಮಂಜರೀ ಈ ನಾಲ್ಕನ್ನೂ ಕನ್ನಡಾನುವಾದ ಮತ್ತು ವ್ಯಾಖ್ಯಾನಗಳೊಡನೆ ಪುಂಡರೀಕ ಮಾಲಾ ಎಂಬ ಬೃಹದ್ಗ್ರಂಥವಾಗಿ ಕರ್ನಾಟಕ ಸರ್ಕಾರದ ಕನ್ನಡ ಸಂಸ್ಕೃತಿ ಇಲಾಖೆ ಹಾಗೂ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಗಳು ಪ್ರಕಟಿಸಿವೆ (ಬೆಂಗಳೂರು ೧೯೮೬).

೮. ಚತುರ್ದಂಡೀಪ್ರಕಾಶಿಕಾ (ಚಪ್ರ.) : ಕನ್ನಡಿಗ ವೆಂಕಟಮಖಿಯು ಕ್ರಿ.ಶ. ೧೭ನೆಯ ಶತಮಾನದ ಮಧ್ಯದಲ್ಲಿ ತಂಜಾವೂರಿನ ದೊರೆ ವಿಜಯರಾಘವನಾಯಕನ ಪ್ರೇರಣೆಯಂತೆ ರಚಿಸಿದ್ದು. ತನ್ನ ಪರಮಾಚಾರ್ಯನಾಗಿದ್ದ ತಾನಪ್ಪಾಚಾರ್ಯನು ಅವನ ಕಾಲದಲ್ಲಿ ರೂಢಿಸಿದ್ದ ಸಂಗೀತವನ್ನು ಆಲಾಪ, ಠಾಯ, ಗೀತ ಮತ್ತು ಪ್ರಬಂಧಗಳೆಂಬ ಚತುರ್ದಂಡಿಗಳನ್ನಾಗಿ ಪುನಾರಚಿಸಿದ್ದನ್ನು ಪ್ರಕಾಶಪಡಿಸಲು ಗ್ರಂಥವನ್ನು ರಚಿಸಿದ್ದಾನೆ: ಪ್ರತಿಯೊಂದು ಪ್ರಕರಣ ದಲ್ಲೂ ಸಮಸಾಮಯಿಕವಾದ ಅನನ್ಯೋಪಲಬ್ಧ ಸಂಗತಿಗಳನ್ನೂ ನಾಲ್ಕನೆಯ ಮೇಳ ಪ್ರಕರಣದಲ್ಲಿ ಇಂದಿನ ಕರ್ನಾಟಕ ಸಂಗೀತಕ್ಕೆ ಆಧಾರಭೂತವಾಗಿರುವ ೭೨ ಮೇಳಗಳನ್ನು ಗಣಿತ ಪ್ರಸ್ತಾರದಿಂದ ಪಡೆಯುವ ರೀತಿಯನ್ನೂ ಸ್ವಂತಪ್ರತಿಭೆಯಿಂದ ಕಂಡುಹಿಡಿದು ಹೇಳಿದ್ದಾನೆ. ಒಂಬತ್ತನೆಯ ಪ್ರಬಂಧಪ್ರಕರಣದಲ್ಲಿ ಸಂರ.ವನ್ನು ಸಾಮಾನ್ಯವಾಗಿಯೂ ಕಲ್ಲಿನಾಥನನ್ನು ಮುಖ್ಯವಾಗಿಯೂ ಅವಲಂಬಿಸಿದ್ದಾನೆ. ಇದರ ಕನ್ನಡ ಆವೃತ್ತಿಯನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಪ್ರಕಟಿಸಿದೆ (ಬೆಂಗಳೂರು ೧೯೭೮).

ಈ ಲೇಖನದಲ್ಲಿ ಆಕರನಿರ್ದೇಶ ಮಾಡುವಾಗ(:)ಎಂಬ ಚಿಹ್ನೆಯ ಹಿಂದೆ ಅಧ್ಯಾಯ, ಪ್ರಕರಣ, ಶ್ಲೋಕ ಸಂಖ್ಯೆಗಳನ್ನೂ (ಇದೇ ಕ್ರಮದಲ್ಲಿ) ಅದರ ಮುಂದೆ ಪುಟಸಂಖ್ಯೆ ಯನ್ನೂ ಹೇಳಿದೆ. ಉದಾ : ಸಂರ. ೪. ೮೩ : ೨೩೫ ಎಂದರೆ ಸಂಗೀತರತ್ನಾಕರದ ನಾಲ್ಕ ನೆಯ ಅಧ್ಯಾಯದ ೮೩ನೆಯ ಶ್ಲೋಕ, ೨೩೫ನೆಯ ಪುಟ. ಬೃದೇ ೪೧೦ : ೧೪೪ ಎಂದರೆ ಬೃಹದ್ದೇಶಿಯ ೪೧೦ನೆಯ ಶ್ಲೋಕ, ೧೪೪ನೆಯ ಪುಟ. ಅಚಿಂ. ೪.೧೬.೩೭ : ೬೬ ಎಂದರೆ ಅಭಿಲಷಿತಾರ್ಥಚಿಂತಾಮಣಿಯ ನಾಲ್ಕನೆಯ ವಿಂಶತಿಯ ೧೬ನೆಯ ಅಧ್ಯಾಯದಲ್ಲಿ ೩೭ನೆಯ ಶ್ಲೋಕ, ೩೬ನೆಯ ಪುಟ : ಸಂಚೂ : ೩೧ ಎಂದರೆ ಸಂಗೀತ ಚೂಡಾಮಣಿಯ (ವರಲಕ್ಷ್ಮೀ ಆಕಾಡೆಮಿಯ) ಹಸ್ತಪ್ರತಿಯಲ್ಲಿ ೩೧ನೆಯ ಪುಟ : ಸಹೃ: ೪೧೬ ಎಂದರೆ ಸರಸ್ವತೀ ಹೃದಯಾಲಂಕಾರಹಾರದ (ವರಲಕ್ಷ್ಮೀ ಅಕೆಡಮಿಯ) ಹಸ್ತ ಪ್ರತಿಯಲ್ಲಿ ೪೧೬ನೆಯ ಪುಟ.

## ಪರಿಭಾಷೆ

ಭಾರತೀಯ ಸಂಗೀತದಲ್ಲಿ ಪಾರಿಭಾಷಿಕ ಸಂಜ್ಞಾಕೋಶವು ಗ್ರಾಂಥಿಕ ಹಾಗೂ ಸ್ವಸಾಮಯಿಕ ಎಂಬ ಎರಡು ಸಮಾನಾಂತರ ಸ್ರೋತಗಳಲ್ಲಿ ಹರಿದು ಬಂದಿದೆ. ಮೊದಲನೆಯದರಿಂದ ಸಂಗೀತಪದ್ಧತಿಗೆ ಕಾಲದೇಶಗಳಲ್ಲಿ ಐಕ್ಯವೂ ಐತಿಹಾಸಿಕ ಅವಿಚ್ಛಿನ್ನತೆಯೂ ಉಂಟಾಗಿದ್ದು ಅದು ಸಂಸ್ಕೃತಭಾಷೆಯಲ್ಲಿದೆ. ಎರಡನೆಯದನ್ನು ಸಂಗೀತ

ವಿದ್ವಾಂಸರು ಅಂಥಾ ಪ್ರಾಂತೀಯ ಭಾಷೆಯಲ್ಲಿ ಸ್ವಸಮಯದಲ್ಲಿ ಬಳಸಿಕೊಂಡು ಬೆಳೆ-ದ್ದಾರೆ. ಎರಡರಲ್ಲಿಯೂ ಸಂಜ್ಞೆಗಳಿಗೆ ಯೌಗಿಕ ಮತ್ತು ನಿರೂಢ ಎಂಬ ಆಯಾಮಗಳಿವೆ: ಒಂದು ಮೂಲಶಬ್ದ (ಧಾತು, ಪ್ರಕೃತಿ, ಪ್ರಾತಿಪದಿಕ)ಕ್ಕೆ ವಿವಿಧ ಹಂತಗಳಲ್ಲಿ ಬೇರೆ ಬೇರೆ ಅರ್ಥಾಯಾಮಗಳನ್ನು ಕೊಡುವ ಸೇರ್ಪಡೆಗಳಿಂದ, ವ್ಯಾಕರಣ ನಿಯಮಗಳಿಂದ ಉದ್ದಿಷ್ಟಾರ್ಥವನ್ನು ಪಡೆಯುವುದು (ಅಥವಾ ಒಂದು ಶಬ್ದವನ್ನು ಹೀಗೆ ವಿಭಜಿಸಿ ಸಂಕೀರ್ಣಾರ್ಥವನ್ನು ಮೂಲ ಸರಳಾರ್ಥವೊಂದರಿಂದ ಪಡೆಯಲು ಸಾಧ್ಯವಾಗುವುದು) ಯೌಗಿಕ; ಹೀಗಿಲ್ಲದೆ ಜನಪದವೊಂದರ ಭಾಷಾವ್ಯವಹಾರದಲ್ಲಿ ಕಟ್ಟಳೆಯಿಂದ ರೂಢಿಸಿರುವ, ಕೊಟ್ಟ ಅರ್ಥವು ನಿರೂಢ. ಒಮ್ಮೊಮ್ಮೆ ಒಂದೇ ಶಬ್ದಕ್ಕೆ ಎರಡು ಬಗೆಯ ಅರ್ಥಗಳು ಇರುವುದುಂಟು. ಹೀಗೆ ಪಂಕ–ಜ ಎಂದರೆ ಕೆಸರಿನಲ್ಲಿ ಹುಟ್ಟಿದ್ದು, ತಾವರೆ; ಪಂಕಜ ಎಂಬುದು ಒಂದು ವ್ಯಕ್ತಿಯ ಹೆಸರು. ಗ್ರಾಂಥಿಕ ಪರಂಪರೆಯ ಪಾರಿಭಾಷಿಕ ಸಂಜ್ಞೆಗಳು ಸಾಮಾನ್ಯವಾಗಿ ನಿಷ್ಪತ್ತಿಪೂರ್ವಕ ಅರ್ಥವನ್ನು ಪಡೆದಿರುತ್ತವೆ; ವಿದ್ವತ್ ಸ್ವಸಮಯದ ಸಂಜ್ಞೆಗಳು ಸಾಮಾನ್ಯವಾಗಿ ನಿರೂಢಾರ್ಥವನ್ನು ಪಡೆದಿರುತ್ತವೆ; ಎರಡರಲ್ಲಿಯೂ ಅಪವಾದಗಳುಂಟು. ಶಬ್ದಗಳು ಒಂದರಿಂದ ಇನ್ನೊಂದಕ್ಕೆ ವಲಸೆ ಹೋಗುವುದೂ ಉಂಟು. ಒಮ್ಮೊಮ್ಮೆ ಸಾಮಾನ್ಯಾರ್ಥವುಳ್ಳ ಯೌಗಿಕಶಬ್ದಗಳು ವಿಶಿಷ್ಟ, ಪರಿಮಿತಾರ್ಥವನ್ನು ಪಡೆದು ಪಾರಿಭಾಷಿಕ ಸಂಜ್ಞೆಗಳಾಗುತ್ತವೆ; ಇನ್ನೊಮ್ಮೆ ಏಕಾರ್ಥವೂ ವಿಶೇಷಾರ್ಥವೂ ಇರುವ ಶಾಸ್ತ್ರಮರ್ಯಾದಿತ ಶಬ್ದಗಳು ವಿಶಾಲ, ಸಾಮಾನ್ಯಾರ್ಥಗಳಿಗೆ ವಿಸ್ತರಿಸಿ ಯೌಗಿಕಗಳಾಗುತ್ತವೆ. ಸಂಗೀತಶಾಸ್ತ್ರ ನೃತ್ಯಶಾಸ್ತ್ರಗಳಲ್ಲಿ ಇವೆಲ್ಲಕ್ಕೂ ನಿದರ್ಶನಗಳು ದೊರೆಯುತ್ತವೆ.

'ಗೈ' ಧಾತುವಿನಿಂದ ನಿಷ್ಪನ್ನವಾದ 'ಗೀತ' ಎಂದರೆ ಹಾಡಿದ್ದು, ಹಾಡು: 'ಬಂಧ್' ಧಾತುವಿನಿಂದ ಹುಟ್ಟಿದ 'ಪ್ರಬಂಧ' ಶಬ್ದಕ್ಕೆ ರಚಿಸಿದ್ದು, ಕಟ್ಟಿದ್ದು ಎಂದರ್ಥ. ಸಂಗೀತ ಶಾಸ್ತ್ರದಲ್ಲಿ ಗೀತವೆಂದರೆ ರಂಜಕವಾದ ಸ್ವರಸಂದರ್ಭ. ಅದು ಗಾಂಧರ್ವ, ಗಾನ ಎಂದು ಎರಡು ವಿಧ. ಅನಾದಿಸಂಪ್ರದಾಯದಲ್ಲಿ ಗಂಧರ್ವರು ಪ್ರಯೋಗಿಸಿ ನಿಯತವಾದ ಶ್ರೇಯಸ್ಸಿಗೆ ಹೇತುವಾಗುವುದು ಗಾಂಧರ್ವ. ವಾಗ್ಗೇಯಕಾರರಿಂದ (=ಧಾತುಮಾತುಗಳೆರಡನ್ನೂ ರಚಿಸಿ ಹಾಡುಗಳನ್ನು ಕಟ್ಟುವವರು) ನಿರ್ಮಿತವಾದ ನಿರ್ದಿಷ್ಟವಾದ, ಶಾಸ್ತ್ರೋಕ್ತವಾದ ಲಕ್ಷಣಗಳಿಂದ ಕೂಡಿರುವುದು (ಇದನ್ನು ಮುಂದೆ ವಿವರಿಸಿದೆ), ದೇಶೀರಾಗ ಇತ್ಯಾದಿಗಳಲ್ಲಿ (ದೇಶೀತಾಳ, ಸಂಸ್ಕೃತ, ಪ್ರಾಕೃತ, ದೇಶಭಾಷೆ ಮೊದಲಾದವುಗಳಲ್ಲಿ, ದೃಷ್ಟಫಲವಾದ ರಂಜನೆಗೆಂದು) ರಚಿತವಾಗಿ ಪ್ರಯುಕ್ತವಾಗುವುದು ಗಾನ. ಗ್ರಾಮರಾಗಗಳಲ್ಲಿ, ಮಾರ್ಗತಾಳಗಳಲ್ಲಿ,ಅದೃಷ್ಟಫಲಗಳಿಗಾಗಿ, ನಿಯತವಾದ ಅಭ್ಯುದಯಪ್ರದವಾಗಿ, ದೇವತಾಪ್ರೀತಿಕರವಾಗಿ, ಪ್ರಯುಕ್ತವಾಗುತ್ತಿದ್ದ ಜಾತಿ, ಕಪಾಲ, ಕಂಬಲ, ಮದ್ರಕಾದಿ ಪ್ರಕರಣ ಗೀತಗಳು ಮೊದಲಾದವು ಗಾಂಧರ್ವ; ದೇಶಕಾಲಗಳಲ್ಲಿ ಜನಮನದ ರುಚಿಯು ವ್ಯತ್ಯಾಸವಾದಂತೆಲ್ಲ ಅದಕ್ಕೆ ಹೊಂದಿಕೊಂಡು ವಾಗ್ಗೇಯಕಾರರು ನಿಯಮಗಳಿಗೆ, ಲಕ್ಷಣಗಳಿಗೆ ಅನುಸಾರವಾಗಿ ರಚಿಸುವ ಗೇಯಸಮಷ್ಟಿಗೆ–ಉದಾ. ಏಲಾ, ವರ್ಣ, ಶ್ರೀರಂಗ, ಕೈವಾಡ, ಪದವರ್ಣ, ಕೃತಿ, ಜಾವಳಿ-ಗಾನವೆಂದು ಹೆಸರು. (ಸಂರ ೪.೧–೪ : ೨೦೩, ೨೦೪)

ಗೀತವು ನಿಬದ್ಧ, ಅನಿಬದ್ಧವೆಂದು ಎರಡು ವಿಧ. ವಾಗ್ಗೇಯಕಾರನಿಂದ ರಚಿತವಾಗದೆ ಪ್ರಯೋಕ್ತೃವಿನ ಆಶುಸ್ಫೂರ್ತಿಯಿಂದ ನಿರ್ದಿಷ್ಟ ಪೂರ್ವಕಲ್ಪಿತ ರಚನಾವಿನ್ಯಾಸವಿಲ್ಲದೆ ಸೃಷ್ಟವಾಗುವ ಆಲಾಪ (ಕಲ್ಪನಾಸ್ವರ, ನೆರವಲು, ಹಿಂದೂಸ್ಥಾನೀ ಸಂಗೀತದ ಆಲಾಪ್, ಬಢತ್, ಫಿರತ್, ಬೋಲ್‌ತಾನ್, ಆಲಂಕಾರಿಕತಾನ್) ಮುಂತಾದವುಗಳು ಅನಿಬದ್ಧ. ನಿಬದ್ಧ ಗೀತಕ್ಕೆ ಮೂರು ಸಂಜ್ಞೆಗಳಿವೆ—ಪ್ರಬಂಧ, ವಸ್ತು ಮತ್ತು ರೂಪಕ. ನಾಲ್ಕು ಧಾತುಗಳಿಂದಲೂ ಆರು ಅಂಗಗಳಿಂದಲೂ ವಾಗ್ಗೇಯಕಾರನು ಏನನ್ನು ಕಟ್ಟುತ್ತಾನೋ ಅದು ನಿಬದ್ಧ; ಅದೇ ಪ್ರಬಂಧ. ಪ್ರಬಂಧನಾಯಕನನ್ನು ರಾಮ ಇತ್ಯಾದಿಗಳಿಗೆ ಹೋಲಿಸಿ ವರ್ಣಿಸಿದರೆ, ವಿವಿಧ ರೀತಿಗಳಲ್ಲಿ ಸಂಪ್ರದಾಯ ಶರಣತೆಯಿಲ್ಲದೆ ನವ್ಯತೆಯಿದ್ದರೆ ಅದು ರೂಪಕ; ಕಥನವಸ್ತುವಿದ್ದರೆ ವಸ್ತು (ಸಂಚೂ : ೫; ಸಂರ. ೪.೪–೬ : ೨೦೪; ೩.೭೧–೩.೭೩ : ೩೪೫–೩೪೭).

ಪ್ರಬಂಧದ ಧಾತು ಎಂದರೆ ಅದರ ನಾದ-ಲಯ (∼ರಾಗ-ತಾಳ)ಗಳ ಅಂಶ, ಎಂದರೆ ಗೇಯಾಂಶ. ಇದು ನಾಲ್ಕು ಬಗೆ: ಉದ್ಗ್ರಾಹ-ಹಾಡನ್ನು ಎತ್ತಿಕೊಳ್ಳುವ, ಎಂದರೆ ಪ್ರಾರಂಭಿಸುವ ಭಾಗ. ಈಗಿನ ಕರ್ನಾಟಕ ಸಂಗೀತದ ಕೃತಿಗಳಲ್ಲಿ ಪಲ್ಲವಿಯಂತಹದು; ಮೇಲಾಪಕ-ಉದ್ಗ್ರಾಹಕ್ಕೂ ಧ್ರುವಕ್ಕೂ ನಡುವೆ ಏರ್ಪಡುವ ಸೇತು, ಕೃತಿಯಲ್ಲಿ ಅನುಪಲ್ಲವಿಯಂತಹದು. ಧ್ರುವ-ಹಾಡಿನಲ್ಲಿ ಇದ್ದೇ ಇರಬೇಕಾದ (ಸೋಮೇಶ್ವರನ ಅಚಿಂ. ಪ್ರಕಾರ ಪುನಃ ಪುನಃ ಆವರ್ತಗೊಳ್ಳುವ, ಅಚಿಂ. ೪.೧೬.೯೭ : ೫೦) ಭಾಗ, ಕೃತಿಯಲ್ಲಿ ಚರಣದಂತಹ, ಅಷ್ಟಪದಿಯಲ್ಲಿ ಧ್ರುವಪದದಂತಹ, ಭಾಗ: ಆಭೋಗ-ಹಾಡನ್ನು ಸಮಾಪನಗೊಳಿಸುವ ಭಾಗ; ಹಿಂದಿನ ಪ್ರಬಂಧಗಳಲ್ಲಿ ಇದು ಪ್ರಬಂಧನಾಯಕ(ಸ್ತುತ್ಯ)ನ, ವಾಗ್ಗೇಯಕಾರನ ಅಥವಾ ಗಾಯಕನ ಮತ್ತು ಪ್ರಬಂಧದ ಹೆಸರುಗಳನ್ನು ಬೇರೆಯೇ ಆದ ಮಾತುಗಳಲ್ಲಿ ಒಳಗೊಂಡಿದ್ದ ಪ್ರತ್ಯೇಕ ಅಂತಿಮಭಾಗವಾಗಿರುತ್ತಿತ್ತು. ಸುಮಾರು ಹದಿನೇಳನೆಯ ಶತಮಾನದಲ್ಲಿ ಆಭೋಗವನ್ನು ಆಲಾಪರೂಪವಾದ (=ವಾಕ್ಯ), ತಾಳರಹಿತವಾದ ಪೂರ್ವಾರ್ಧವನ್ನಾಗಿಯೂ ತಾಳಸಹಿತವಾದ ಉತ್ತರಾರ್ಧವನ್ನಾಗಿಯೂ ಪ್ರಯೋಗಿಸುತ್ತಿದ್ದರು. ಪೂರ್ವಾರ್ಧದಲ್ಲಿ ಗಾಯಕ/ವಾಗ್ಗೇಯಕಾರನ ಹೆಸರನ್ನೂ ಉತ್ತರಾರ್ಧದಲ್ಲಿ ಸ್ತುತ್ಯನ ಹೆಸರನ್ನೂ ಇಡಲಾಗುತ್ತಿತ್ತು ಎಂದು ವೆಂಕಟಮುಖಿಯು (ಚಪ್ರ. ೯.೪೪–೪೮ : ೨೧೬) ಹೇಳುತ್ತಾನೆ. ಇವುಗಳೇ ಅಲ್ಲದೆ ಅಂತರ ಎಂಬ ಐದನೆಯ ಭಾಗವೂ ಇತ್ತು. ಇದು ಧ್ರುವ-ಆಭೋಗಗಳ ನಡುವೆ ಸೇತುವೆಯನ್ನು ಏರ್ಪಡಿಸುತ್ತಿತ್ತು. ಆದರೆ ಇದಕ್ಕೆ ಸಾರ್ವತ್ರಿಕ ಉಪಯೋಗವಿರದೆ ಸಾಲಗಸೂಡವೆಂಬ ವಿಧದ ಪ್ರಬಂಧಗಳಲ್ಲಿ—ವೆಂಕಟಮುಖಿಯ ಪ್ರಕಾರ ಮೂರು ಖಂಡಗಳಲ್ಲಿರುವವುಗಳಲ್ಲಿ ಮಾತ್ರ (ಉಕ್ತಗ್ರಂಥ, ೯.೨೭ : ೨೧೪), ಮತ್ತು ಪಂಚತಾಲೇಶ್ವರದಂತಹ ಪ್ರಬಂಧಗಳಲ್ಲಿ—ಅಪವಾದರೂಪವಾಗಿ (ಅದೇ, ೯.೧೧೨–೧೩೪ : ೨೨೧, ೨೨೨) ಪ್ರಯುಕ್ತಿಯಿರುತ್ತಿತ್ತು. ಆದರೆ ಅಂತರದ ಪ್ರಯೋಗವನ್ನು ಅಪವಾದಾತ್ಮಕವೆಂದು ಬಗೆದು ಧಾತುಗಳನ್ನು ಸಾಮಾನ್ಯವಾಗಿ ನಾಲ್ಕೆಂದೇ ಎಣಿಸಿಕೊಳ್ಳಲಾಗುತ್ತದೆ. ಹೀಗಾಗಿ ಧಾತುವಿನ ದೃಷ್ಟಿಯಿಂದ

ಪ್ರಬಂಧಗಳನ್ನು ಚತುರ್ಧಾತುಕ, ತ್ರಿಧಾತುಕ ಮತ್ತು ದ್ವಿಧಾತುಕಗಳೆಂದು ವರ್ಗೀಕರಿಸುವುದುಂಟು. ಚತುರ್ಧಾತುಕ ಪ್ರಬಂಧಗಳಲ್ಲಿ ಉದ್ಗ್ರಾಹ, ಮೇಲಾಪಕ, ಧ್ರುವ ಮತ್ತು ಆಭೋಗಗಳೆಲ್ಲ ಇರುತ್ತವೆ. ತ್ರಿಧಾತುಕಗಳಲ್ಲಿ ಮೇಲಾಪಕವಿರುವುದಿಲ್ಲ; ದ್ವಿಧಾತುಕಗಳಲ್ಲಿ ಮೇಲಾಪಕ-ಆಭೋಗಗಳಿರುವುದಿಲ್ಲ; ಒಂದೇ ಧಾತುವಿನಿಂದ ಪ್ರಬಂಧ ರಚನೆಯು ಸಾಧ್ಯವಾಗುವುದಿಲ್ಲ (ಅದೇ. ೯.೩೬–೪೨ : ೨೧೫-೨೧೬). ವಾತಪಿತ್ತಕಫವೆಂಬ ಧಾತುಗಳು ದೇಹವನ್ನು ಧರಿಸುವಂತೆಯೇ ಉದ್ಗ್ರಾಹಾದಿಗಳು ಪ್ರಬಂಧದೇಹವನ್ನು ಧಾರಣ ಮಾಡುವುದರಿಂದ ಅವುಗಳಿಗೂ ಧಾತುವೆಂಬ ಹೆಸರು ಬಂದಿದೆ (ಸಂರ. ೪.೧೦-೧೧ : ೨೦೫-೨೦೬).

ಧಾತುಗಳು ಪ್ರಬಂಧದ ಅವಯವಗಳಾದರೆ, ಸ್ವರ ಮುಂತಾದ ಆರು ಅದರ ಅಂಗಗಳು–ಸ್ವರ, ಬಿರುದ, ಪದ, ತೇನ (ತೆನ್ನ), ಪಾಟ ಮತ್ತು ತಾಲ. ಪ್ರಬಂಧದೇಹಕ್ಕೆ ಪದ-ತೇನಗಳು ಕಣ್ಣುಗಳಿದ್ದ ಹಾಗೆ, ಪಾಟ-ಬಿರುದಗಳು ಕೈಗಳಿದ್ದಂತೆ, ತಾಲ-ಸ್ವರಗಳು ಪಾದಗಳಿದ್ದ ಹಾಗೆ. ಸ್ವರವೆಂದರೆ ಸರಿಗಮ ಇತ್ಯಾದಿ ಏಳು ಸ್ವರಗಳು. ಹಾಡನ್ನು ನಿರ್ವಾಹಮಾಡುವಲ್ಲಿ ಮಾತುಗಳಲ್ಲಿರುವ ಅಕ್ಷರಗಳ ಉಚ್ಚಾರದಲ್ಲಿ ಸ್ವರಗಳು ಪ್ರಯೋಗವಾಗುತ್ತವೆ. ಆದರೆ ಅವುಗಳಿಗೆ ತರ-ತಮಭಾವದ ಧ್ವನಿಮಟ್ಟಗಳ ರೂಪದ ಪ್ರಯುಕ್ತಿಯಿರುತ್ತದೆಯೇ ಹೊರತು ಸರಿಗಮಪಧನಿ ಎಂಬ ಉಚ್ಚಾರವಿರುವುದಿಲ್ಲ. ಉದಾ: ಶ್ರೀರಾಮಂ ಎಂಬ ಮಾತಿಗೆ ಧನಿಗರಿಸನಿಸಾ ಎಂಬ ಸ್ವರಗಳು ಶ್ರೀ (ಧನಿ) ರಾ (ಗರಿಸ) ಮಂ (ನಿಸಾ) ಎಂಬಂತೆ ವಿನಿಯೋಗವಾಗುತ್ತವೆ ಎಂದಿಟ್ಟುಕೊಳ್ಳೋಣ; ಇಲ್ಲಿ ಧನಿ-ಗಳಿಗೆ ಧನಿ ಎಂಬ ಸಂಜ್ಞೆಗಳ ಉಚ್ಚಾರವಿಲ್ಲ; ಶ್ರೀ ಎಂಬ ಅಕ್ಷರವನ್ನು (ಸ್ವರವ್ಯಂಜನಗಳನ್ನು) ತಮ್ಮ ಸ್ಥಾನಗಳಲ್ಲಿದ್ದುಕೊಂಡು ನಿರ್ವಾಹ ಮಾಡುವ ವ್ಯಾಪಾರವಿರುತ್ತದೆ. ಹೀಗೆಯೇ 'ರಾ' ಎಂಬ ಅಕ್ಷರವನ್ನು ಗರಿಸ ಎಂಬ ಸ್ವರಗಳು ಆಯಾಯಾ ಸ್ಥಾನಗಳಲ್ಲಿ ಧ್ವನಿತವಾಗಿ ನಿರ್ವಹಿಸುತ್ತವೆ. ಆದರೆ ಅವುಗಳಿಗೆ ಗ-ರಿ-ಸ ಎಂಬ ಸಂಜ್ಞೆಗಳ ಉಚ್ಚಾರವಿರುವುದಿಲ್ಲ, ಉಚ್ಚಾರವಿರುವುದು 'ರಾ' ಎಂಬ ಅಕ್ಷರಕ್ಕೆ ಮಾತ್ರ. ಆದರೆ ಕೆಲವು ಸಂದರ್ಭಗಳಲ್ಲಿ (ಕರ್ನಾಟಕ ಸಂಗೀತದಲ್ಲಿ ಚಿಟ್ಟಿಸ್ವರ, ಎತ್ತುಗಡೆಸ್ವರ, ಮುಕ್ತಾಯಸ್ವರ, ಕಲ್ಪನಾಸ್ವರ ಇತ್ಯಾದಿ: ಹಿಂದೂಸ್ಥಾನೀ ಸಂಗೀತದಲ್ಲಿ 'ಸರ್‌ಗಮ್') ಸ್ವರಸಂದರ್ಭಗಳು ಆಯಾ ಸ್ವರಗಳ ಸಂಜ್ಞೆಗಳ ಉಚ್ಚಾರವನ್ನೇ ಪಡೆದಿರುತ್ತವೆ. ಪ್ರಬಂಧಾಂಗವಾದ ಸ್ವರವೆಂದರೆ ಇದೇ. ಒಮ್ಮೊಮ್ಮೆ ಹಾಡಿನ ಮಾತುಗಳಲ್ಲಿ–ಉದಾ. ಸಮಾಗಮ, ಸರಿ, ಸದಾ, ಪನಿ, ನೀಸರಿ ಇತ್ಯಾದಿ–ಅಕ್ಷರಗಳೂ ಸ್ವರಗಳೂ ಒಂದೇ ಆಗಿರುವುದುಂಟು. ಇದು ಸ್ವರಸಾಹಿತ್ಯವೆಂಬ ಅಲಂಕಾರ. ಸ್ವರಾರ್ಥವೆಂಬ ಪ್ರಾಚೀನಗೇಯ ಪ್ರಬಂಧವು ಇಡಿಯಾಗಿ ಹೀಗೆಯೇ ರಚಿತವಾಗಿರುತ್ತಿತ್ತು. ರಾಮಸ್ವಾಮಿದೀಕ್ಷಿತನು ತೋಡಿರಾಗದಲ್ಲಿ ರಚಿಸಿರುವ 'ಸರಿಗಾನಿದಾನಿ' ಎಂಬ ತಾನವರ್ಣವು ಶುದ್ಧಸ್ವರಾರ್ಥ ಪ್ರಬಂಧಕ್ಕೆ ಇತ್ತೀಚಿನ ನಿದರ್ಶನ. ಬಿರುದವೆಂದರೆ ಪ್ರಬಂಧನಾಯಕನ ಧೈರ್ಯಶೌರ್ಯಪರಾಕ್ರಮಾದಿಗಳನ್ನು ವರ್ಣಿಸುವ ಮಾತುಗಳು, 'ತೇನ' ಎಂಬುದು ಬ್ರಹ್ಮವಾಚಕವಾದ 'ತತ್' ಶಬ್ದದ ತೃತೀಯಾ ವಿಭಕ್ತಿರೂಪ. ಇದು ಭಾಂಡೀರ

ಸಂಬುದ್ಧ್ಯಂತಗಳು : ಪದದ ಮಾತುಗಳು ಕ್ರಿಯಾಕಾರಕ ಸಂಬಂಧವನ್ನುಳ್ಳ ವಾಕ್ಯರೂಪ ... ಗುಣವಾಚಕ ಅಥವಾ ದಲ್ಲಿರುತ್ತವೆ. ತಾಲವೆಂದರೆ ಕಾಲ, ಕ್ರಿಯಾ, ಗ್ರಹ ಇತ್ಯಾದಿ ದಶಪ್ರಾಣಗಳಿಂದ ಲಕ್ಷಿತವಾದ ಗೀತವಾದನನರ್ತನಕಾಲಮಾಪಕಸಾಧನಗಳು–(ಆದಿ, ರೂಪಕ, ಝಂಪ ಇತ್ಯಾದಿ) (ಸಂರ. ೪.೧೨–೧೯ : ೨೦೬–೨೦೮).

ಒಂದು ಪ್ರಬಂಧದಲ್ಲಿ ಬಳಸಲಾಗುವ ಅಂಗಗಳ ಸಂಖ್ಯೆಯನ್ನು ಆಧರಿಸಿ ಅದನ್ನು ವರ್ಗೀಕರಿಸುವುದುಂಟು. ಆರೂ ಅಂಗಗಳಿರುವುದು ಮೇದಿನೀ ಜಾತಿಯ ಪ್ರಬಂಧ; ಐದಿರುವುದು ಆನಂದಿನೀ ; ನಾಲ್ಕು ಅಂಗಗಳನ್ನುಳ್ಳದ್ದು ದೀಪನೀ ಜಾತಿಯದು : ಮೂರಿದ್ದರೆ ಭಾವನೀ ; ಎರಡೇ ಇರುವುದು ತಾರಾವಲೀ. ಒಂದೇ ಅಂಗವಿರುವ ಪ್ರಬಂಧವನ್ನು ರಚಿಸಲಾಗುವುದಿಲ್ಲ. ಇವುಗಳಿಗೆ ಆಯಾ ಸಂಖ್ಯಾಸೂಚಕಗಳಾದ ಶ್ರುತಿ, ನೀತಿ, ಸೇನಾ, ಕವಿತಾ, ಚಂಪೂ ಎಂಬ ಸಂಜ್ಞೆಗಳನ್ನೂ ಕ್ರಮವಾಗಿ ಕೊಟ್ಟಿದೆ (ಸಂರ. ೪.೧೯–೨೦ : ೨೧೨). ಪ್ರಬಂಧವು ನಿರ್ಯುಕ್ತ, ಅನಿರ್ಯುಕ್ತವೆಂದು ಪುನಃ ಎರಡು ವಿಧ. ಇಂತಹದೇ ರಾಗ, ತಾಲ, ಛಂದಸ್ಸು, ಭಾಷೆ, ರಸ ಮುಂತಾದುದರಲ್ಲಿ ರಚಿತವಾಗಬೇಕೆಂಬ ವಿಶೇಷವಿಧಿಯಿದ್ದರೆ ಅದು ನಿರ್ಯುಕ್ತ, ಇಲ್ಲದಿದ್ದರೆ ಅನಿರ್ಯುಕ್ತ (ಸಂರ. ೪.೨೦–೨೨ : ೨೧೨).

## ೩. ಏಲಾ

ಕನ್ನಡದ ಛಂದಃಪ್ರಕಾರವಾಗಿ ಏಳೆ ಮೊದಲ ಬಾರಿಗೆ ಕಾಣಸಿಕೊಳ್ಳುವುದು ನಾಗವರ್ಮನಲ್ಲಿ (ಛಂದೋಂಬುಧಿ ೫.೧೩). ಇದರ ಪ್ರಕಾರ ಏಳೆಯು ೨,೨,೩ ಎಂಬ ಗಣವಿಂಗಡನೆಯಲ್ಲಿದ್ದು ಆರನೆಯದು ಬ್ರಹ್ಮಗಣವಾಗಿಯೂ ಉಳಿದವು ವಿಷ್ಣುಗಳಾಗಿಯೂ ಇರುತ್ತವೆ. ಒಟ್ಟು ಎರಡು ಪಾದಗಳಿರುತ್ತವೆ. ಜಯಕೀರ್ತಿಯು ಛಂದೋನುಶಾಸನದಲ್ಲಿ (೭.೧೪) ಮೂರನೆಯ ಪಾದವನ್ನು ಬಿಟ್ಟ ತ್ರಿಪದಿಯೇ ಏಳೆಯೆಂದು ಹೇಳಿದ್ದಾನೆ. ಆದರೆ ಇದು ಶಾಸನಗಳಲ್ಲಾಗಲಿ ಪ್ರಾಚೀನಕಾವ್ಯಗಳಲ್ಲಾಗಲಿ ಬಳಸಲ್ಪಟ್ಟಂತೆ ಕಾಣುವುದಿಲ್ಲ. ಜಾನಪದ ಸಾಹಿತ್ಯದಲ್ಲೂ ಆಧುನಿಕ ಕನ್ನಡ ಕಾವ್ಯದಲ್ಲೂ ದೊರೆಯುವ ಉದಾಹರಣೆಗಳಲ್ಲಿ ಗಣನಿಯಮಪಾಲನೆಗಿಂತ ಗಣಪರ್ಯಾಯವನ್ನೊಳಗೊಂಡ ಅಪವಾದಗಳೇ ಹೆಚ್ಚಾಗಿ ಕಂಡುಬರುತ್ತವೆ.

ಜಾನಪದದ ಏಳೆಗಳೆಂದು ಭಾವಿಸಿರುವ ಕೆಲವು ಪದ್ಯಗಳಲ್ಲಿ (ಉದಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ, ಕನ್ನಡ ಛಂದಃಸ್ವರೂಪ : ೪೨೯) ಆಯಾ ಪದ್ಯವು ಒಳಗೊಳ್ಳದಿರುವ (ಉದಾ. ಕೋಲಣ್ಣ ಕೋಲೆ) ಪಲ್ಲವಿಯಂತಹ ಭಾಗವು ಪುನರುಕ್ತವಾಗುತ್ತದೆ. ಸಂಗೀತಶಾಸ್ತ್ರದಲ್ಲಿ ವರ್ಣಿತವಾದ ಏಳೆಯು ಯಾವುದೇ ವಿಧದಲ್ಲಿ ಇಂತಹ ಪುನರುಕ್ತಿಯಿಲ್ಲ, ತ್ರಿಪದಿಯಲ್ಲಿ ಪುನರಾವರ್ತನೆಗೊಳ್ಳು...

ಒಂದೇ ಮಾತುಖಂಡವಲ್ಲ ಎಂಬುದನ್ನು ನೆನೆಯಬಹುದು.

ಡಿ. ಎಲ್. ನರಸಿಂಹಾಚಾರ್, ಎಂ. ವಿ. ಸೀತಾರಾಮಯ್ಯ, ಸೀತಾರಾಮ ಕೆದಿಲಾಯ ಮುಂತಾದ ಕೆಲವು ವಿದ್ವಾಂಸರೂ ಟಿ. ವಿ. ವೆಂಕಟಾಚಲಶಾಸ್ತ್ರಿಯವರೂ ನಾಗವರ್ಮ, ಜಯಕೀರ್ತಿಗಳು ವರ್ಣಿಸಿರುವ ಏಳೆಗೂ ಸಂಗೀತಶಾಸ್ತ್ರಗ್ರಂಥಗಳಲ್ಲಿ ವರ್ಣಿಸಿರುವ ಏಲಾ ಪ್ರಬಂಧಕ್ಕೂ ಯಾವ ಸಂಬಂಧವೂ ಇಲ್ಲವೆಂದು ತೀರ್ಮಾನಿಸಿದ್ದಾರೆ. ಇದು ಒಪ್ಪತಕ್ಕದ್ದೇ. ಆದರೆ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಕನ್ನಡಭಾಷೆಯಲ್ಲಿ ರಚಿತವಾಗುತ್ತಿದ್ದ ಆರು ಪ್ರಕಾರಗಳ ಹಲವತ್ತು ಅವಾಂತರಭೇದಗಳನ್ನು ವರ್ಣಿಸಲಾಗಿದೆ. ಇವು ಛಂದೋನಿಬದ್ಧಗಳು. ಇವುಗಳು ಛಂದಃಶಾಸ್ತ್ರವಿದ್ವಾಂಸರ ಗಮನಕ್ಕೆ ಸಾಕಷ್ಟು ಬಂದಂತೆ ಕಾಣುವುದಿಲ್ಲ. ಆದುದರಿಂದ ಅವುಗಳ ವಿವೇಚನೆಯು ಇಲ್ಲಿ ಪ್ರಸಕ್ತವಾಗಿದೆ. ಅವುಗಳು ನಾನಾ ಏಲಾ ಪ್ರಕಾರಗಳಲ್ಲಿ ಹಂಚಿಹೋಗಿರುವುದರಿಂದ, ಏಲಾಸಮಷ್ಟಿಯ ಹಿನ್ನೆಲೆಯಲ್ಲಿ ಈ ಅಭ್ಯಾಸವನ್ನು ಸಂಕ್ಷೇಪವಾಗಿ ಕೈಗೊಳ್ಳಬಹುದು.

ಏಲಾ ಶಬ್ದದಲ್ಲಿ ಏಕಾರವು, ಅಕಾರವು ಇಕಾರದೊಡನೆ ಗುಣವಾದಾಗ ಹುಟ್ಟುತ್ತದಷ್ಟೆ. ಅಕಾರಕ್ಕೆ ವಿಷ್ಣು, ಇಕಾರಕ್ಕೆ ಮನ್ಮಥ, ಲಕಾರಕ್ಕೆ ಲಕ್ಷ್ಮೀ ಅಧಿದೇವತೆಗಳು: ಇವರಿಂದ ಏಲಾ ಆಗುತ್ತದೆ ಎಂದು ಸಂಚೋ (:೨೬) ಹೇಳುತ್ತದೆ. ಅದರಲ್ಲಿ ಸ್ವಾತ್ಯಾಗ ತ್ಯಾಗ, ಸೌಭಾಗ್ಯ, ಸೌಂದರ್ಯ, ಶೌರ್ಯ, ಧೈರ್ಯ ಇತ್ಯಾದಿಗಳ ವರ್ಣನೆಗಳಿರುತ್ತವೆ: ಅದರಲ್ಲಿ ಶ್ರಾವ್ಯವಾದ ಗೀತಗುಣಗಳು, ಯತಿತಾಲಲಯಗಳು, ರಸಾಲಂಕಾರಗಳು ಇರುತ್ತವೆ. ಅದು ಪ್ರಯೋಕ್ತೃಗಳಿಗೂ ಶ್ರೋತೃಗಳಿಗೂ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳನ್ನು ಕೊಡುತ್ತದೆ. ರಚನೆಯಲ್ಲಿಯೂ ಫಲಗಳನ್ನು ಕೊಡುವುದರಲ್ಲಿಯೂ ಅದು ಒಂದು ಮಹಾವೃಕ್ಷ: ರಾಗವು ಅದರ ಬೇರು, ತಾಳವು ದೃಢವಾದ ಕಾಂಡ, ಬಂಧ, ಪದಸಮುದಾಯ, ಪಲ್ಲವ, ಪ್ರಯೋಗ (=ಗಮಕಾಲಪ್ತಿ)ಗಳು ಶಾಖೆಗಳು. (ಸ್ಥಾಯೀ ಇತ್ಯಾದಿ) ವರ್ಣಗಳು ಹೂಗೊಂಚಲುಗಳು–ಹೀಗೆ ಗೀತಶಾಖಾವಿಶಾಲವಾದ, ಏಲಾ ಪ್ರಬಂಧವು ಸ್ವಾದಿಷ್ಟವಾದ, ಅನುಪಮವಾದ ಫಲವನ್ನು ನೀಡುತ್ತದೆ (ಅದೇ).

ಪ್ರಬಂಧವನ್ನು ವರ್ಣಿಸುವ ಪ್ರತಿಯೊಂದು ಸಂಗೀತಶಾಸ್ತ್ರಗ್ರಂಥವೂ ಏಲಾ ವರ್ಣನೆಗೆ ಸಿಂಹಪಾಲು ಗ್ರಂಥವನ್ನು ವಿನಿಯೋಗಿಸುತ್ತದೆ. ಸಂರ.ದ ನಂತರ ರಚಿತವಾದವುಗಳು ಏಲಾವರ್ಣನೆಗಾಗಿ ಅದನ್ನೇ ಮುಖ್ಯವಾಗಿ (ಸ್ಮರಣಪೂರ್ವಕವಾಗಿ ಅಥವಾ ಅಲ್ಲದೆ) ಆಶ್ರಯಿಸುತ್ತವೆ. ಇಂತಹ ಆಕರಗಳಲ್ಲಿ ಕುಂಭಕರ್ಣನ ಸಂಗೀತರಾಜ (೪.೨.೨.೧-೨೦೭: ೫೫೧–೫೬೭), ವೆಂಕಟಮಖಿಯ ಚತುರ್ದಂಡೀಪ್ರಕಾಶಿಕೆ (೯.೩.೧೮-೪೬೭: ೨೩೬–೨೪೭)ಗಳನ್ನು ಹೆಸರಿಸಬಹುದು. ಉಳಿದ ಮುಖ್ಯ ಆಕರಗಳನ್ನು ಮೇಲೆ ಸೂಚಿಸಿದೆ. ಈ ಗೇಯಪ್ರಬಂಧದ ವಿಕಾಸದ ಜಾಡನ್ನು ಹಿಡಿದು ಅದನ್ನು ಹೆದ್ದಾರಿಯಾಗಿ ಮಾಡಿದ ಹಲವು ಏಲಾಚಾರ್ಯರನ್ನು ಇವುಗಳಲ್ಲಿ ಸ್ಮರಿಸಲಾಗಿದೆ. ಹೀಗೆ ಮತಂಗನು ಏಲಾಲಕ್ಷಣ ಪ್ರಸಕ್ತಿಯಲ್ಲಿ ಮುನೀಶಿಭಿಃ, ಮುನಿಪುಂಗವೈಃ, ಪೂರ್ವಸೂರಿಭಿಃ ಎಂದೂ ವಲ್ಲಭ ಎಂಬ ಆಚಾರ್ಯನನ್ನೂ ಸ್ಮರಿಸುತ್ತಾನೆ. ನಾನ್ಯದೇವ ಮತ್ತು ಸೋಮೇಶ್ವರರು ಪೂರ್ವಾಚಾರ್ಯ

ಆಗಿರುವ ಜಗದೇಕಮಲ್ಲನು ಶೈಲಕನ್ಯಾ (ಪಾರ್ವತಿ), ಮತಂಗ, ಪಾರ್ಥ (=ಅರ್ಜುನ, ಸವ್ಯಸಾಚಿ, ಧನಂಜಯ, ಪಾಂಡುಸೂನು), ಭೋಜ, ಪರಮರ್ದಿ ಮತ್ತು ಸೋಮೇಶ್ವರ (ಅಬಿಂ. ? ಸೋಮರಾಜದೇವನ ಸಂಗೀತರತ್ನಾವಲೀ ?)ರನ್ನು ಹೆಸರಿಸುತ್ತಾನೆ (:೨೬). ಶಾರ್ಙ್ಗದೇವನು ಮತಂಗ, ಅರ್ಜುನ, ಸೋಮೇಶ್ವರರನ್ನೂ ಕುಂಭಕರ್ಣನು ಬೃಹದ್ದೇಶೀ, ಮತಂಗ, ಅರ್ಜುನ, ಭೋಜ, ನಂದಿಗಳನ್ನೂ ಸ್ಮರಿಸುತ್ತಾರೆ.

## ಏಲಾಪ್ರಭೇದಗಳು

ಸಂಗೀತಶಾಸ್ತ್ರಗ್ರಂಥಗಳಲ್ಲಿ ಏಲಾಪ್ರಬಂಧವನ್ನು ಮುಖ್ಯವಾಗಿ ಎರಡು ರೀತಿಗಳಲ್ಲಿ ವಿಂಗಡಿಸಿದೆ : (i) ರಚನಾಸಾಮಗ್ರಿ: ಉದಾ : ಗಣ (ಗಣೈಲಾ), ಮಾತ್ರಾ(ಮಾತ್ರೈಲಾ), ವರ್ಣ (ವರ್ಣೈಲಾ) ಮತ್ತು ದೇಶಭಾಷಾಪ್ರಯುಕ್ತಿ (ದೇಶೈಲಾ) (ii) ಉತ್ತರೋತ್ತರ ವಿಕೃತಿ : ಶುದ್ಧೈಲಾ, ವಿಕೃತೈಲಾ ಮತ್ತು ಸಂಕರೈಲಾ. ಬೃದೇ.ಯ ಕಾಲದಿಂದ ಇವುಗಳ ಸಂಖ್ಯೆಯು ಬೆಳೆಯುತ್ತ ಹೋಗಿ ಸಂಚೂ. ಮತ್ತು ಸಂರ.ಗಳ ವೇಳೆಗೆ ಗರಿಷ್ಠಮಿತಿಯನ್ನು ಮುಟ್ಟಿ ಹದಿನೇಳನೆಯ ಶತಮಾನದ ಸುಮಾರಿಗೆ ಲಕ್ಷ್ಯವ್ಯಪದೇಶವನ್ನು ಕಳೆದುಕೊಳ್ಳತೊಡ ಗಿತು. ಮತಂಗನು ನಾದಾವತೀ, ಹಂಸಾವತೀ, ನಂದಾವತೀ, ಭದ್ರಾವತೀ ಎಂಬ ಗಣೈಲಾ (ಶುದ್ಧೈಲಾ)ಗಳನ್ನೂ, ರತಿಲೇಖಾ, ಕಾಮಲೇಖಾ, ಬಾಣಲೇಖಾ ಮತ್ತು ಚಂದ್ರಲೇಖಾ ಎಂಬ ನಾಲ್ಕು ಮಾತ್ರೈಲಾಗಳನ್ನೂ, ಮದನವತೀ, ಶಶಿಲೇಖಾ, ಪ್ರಭಾವತೀ, ಮಾಲತೀ, ಹೇಮವತೀ, ಕುಸುಮಾವತೀ, ವರ್ಣನಿಬಂಧಾ, ರಮಣೀ, ಚಂದ್ರಿಕಾ, ಲಕ್ಷ್ಮೀ, ಪದ್ಮಿನೀ, ರಂಜನೀ, ಮಾಲತೀ, ಮೋಹಿನೀ ಎಂಬ ಹದಿನಾಲ್ಕು ವರ್ಣೈಲಾಗಳನ್ನೂ ಕರ್ನಾಟೈಲಾ, ಗೌಡೈಲಾ, ದ್ರವಿಡೈಲಾ, ಆಂಧ್ರೈಲಾ ಮತ್ತು ಲಾಟೈಲಾ ಎಂಬ ಐದು ದೇಶೈಲಾಗಳನ್ನು ಗಣಸಾಂಕರ್ಯದಿಂದ ಹುಟ್ಟುವ ಒಂದು ಸಂಕರೈಲಾವನ್ನೂ (ಒಟ್ಟು ೨೮) ಹೇಳುತ್ತಾನೆ (ಬೃದೇ. ೪೩೧–೪೯೨ : ೧೪೬–೧೫೨). ಮುಂದಿನ ಲಾಕ್ಷಣಿಕರಿಗೆ ಈ ಲಕ್ಷಣಗಳೇ ಪ್ರಮಾಣ, ಬೀಜರೂಪ; ಇವನ್ನು ಅವಾಂತರಭೇದಗಳನ್ನಾಗಿ ಉಪಬೃಂಹಿಸಿಕೊಳ್ಳುತ್ತಾರೆ, ಅಷ್ಟೆ. ನಾನ್ಯದೇವನು ಮತಂಗನನ್ನು ಸಾಮಾನ್ಯವಾಗಿ ಆಶ್ರಯಿಸಿದರೂ, ಕ್ರಮ, ವರ್ಗೀಕರಣಗಳಿಲ್ಲದೆ ಇಪ್ಪತ್ತು ಗೇಯಪ್ರಬಂಧಗಳನ್ನೂ ಅವುಗಳಲ್ಲಿ ನಾದಾ, ನಂದಾ, ಹಂಸೀ, ಭದ್ರಾ, ಚಿತ್ರ, ಉಪಚಿತ್ರ, ಕಮಲಾ, ಲಲಿತಾ, ಲೀಲಾ, ಜ್ಯೋತ್ಸ್ನಾ, ರಂಭಾ, ಮೃಗಾವತಿ, ಮಂಜರಿ, ವಿದ್ಯುನ್ಮಾಲಾ, ಕುಂದಪ್ರಭಾ, ಶಶಿಲೇಖಾ, ಚೂತಮಂಜರೀ, ಮಧುಕರೀ ಎಂದು (ಮೊದಲನೆಯ ನಾಲ್ಕರ ಹೊರತು) ಅನನ್ಯೋಪಲಬ್ಧ ೧೪ ಏಲಾಪ್ರಕಾರಗಳನ್ನೂ (ಸಪ್ಪ : ೩೫೫–೪೨೦), ಏಲಾ, ಮಧುಮಾಧವ, ವರ್ಣ, ಪಾಟಾಂಶಕ, ಮೃಗಾಂಶಕ, ತ್ರಿವಿಷ್ಟಕ, ಭಾವತ್ರಿವಿಕ್ರಮ, ತ್ರಿಕೂಟ, ಚತುರ್ಭುಜ, ವಿಜಯ, ಚತುರ್ಯುಗ, ಚತುರಶ್ರ, [illegible] ಎಂಬ (ಬೇರೆಯವರು ಹೇಳದ) ೧೫

ಮದನವತಿಗೂ ಮೇಲೆ ಹೇಳಿರುವ ವರ್ಣೈಲಾಪ್ರಭೇದಕ್ಕೂ ನಾಮಸಾದೃಶ್ಯವಲ್ಲದೆ ಬೇರೆ ಯಾವ ಸಂಬಂಧವೂ ಇಲ್ಲ.

ಅಚಿಂ. ಗ್ರಂಥದ ಏಲಾವರ್ಣನವು ಅಪಪಾಠ, ಪ್ರಕ್ಷಿಪ್ತ ಮತ್ತು ಗ್ರಂಥಪಾತಗಳಿಂದ ತುಂಬಿದೆ. ಉಪಲಬ್ಧ ಗ್ರಂಥಭಾಗದಲ್ಲಿ ನಾದಾವತೀ ಇತ್ಯಾದಿ ಗಣೈಲಾಚತುಷ್ಟಯ, ರತಿಲೇಖಾದಿ ಮಾತ್ರೈಲಾ ಚತುಷ್ಟಯಗಳನ್ನು ಮಾತ್ರವಲ್ಲದೆ ಮದನವತೀ, ಶಶಿಲೇಖಾ, ಪ್ರಭಾವತೀ, ಲಲಿತಾ, ಭೋಗವತೀ, ಕುಸುಮವತೀ, ಮಾಲತೀ, ಮಾಲಿನೀ ಎಂಬ ಎಂಟು ವರ್ಣೈಲಾಗಳನ್ನೂ ಲಕ್ಷ್ಯೋದಾಹರಣೆಗಳನ್ನೂ ಕೊಟ್ಟಿದೆ : ಮತಂಗಪ್ರಣೀತವಾದ ಹೇಮವತಿ, ರಮಣೀ ಇತ್ಯಾದಿ ಏಲಾಸಪ್ತಕದ ಬದಲು ಲಲಿತಾ, ಭೋಗವತೀ ಮತ್ತು ಮಾಲಿನೀಗಳು ಅಧಿಕವಾಗಿವೆ. ಅಷ್ಟೇ ಅಲ್ಲದೆ ವರ್ಣಮಾಲಾ ಎಂಬ ಅನನ್ಯೋಪಲಬ್ಧ ಏಳೆಯ ಅವಾಂತರ ಭೇದಗಳಾದ ಮಧುಕರೀ, ಸುಸ್ವರೀ, ಕಾಕಕಾರಿಣೀ, ಸುರಸಾ, ಪ್ರಭಂಜನೀ, ಕುಬ್ಜಿನೀ, ವಿಪುಲಾ, ತಡಿಲ್ಲತಾ, ವಿಶಾಲಾ, ತರಲಾ ಮತ್ತು ಕಾಂತಿಮತೀ ಎಂಬ ಹನ್ನೊಂದನ್ನು ಲಕ್ಷ್ಯೋದಾಹರಣೆಗಳಿಲ್ಲದೆ ಅಲ್ಲಿ ಕೊಡಲಾಗಿದೆ : ಅಚಿಂ.ಯಲ್ಲಿ ಕರ್ನಾಟೈಲಾ ಮುಂತಾದ ಐದು ದೇಶೈಲಾಗಳನ್ನು ಹೇಳಿಲ್ಲವೆಂಬುದು ಗಮನಾರ್ಹವಾಗಿದೆ. ಸೋಮೇಶ್ವರನು ಕೊಡುವ ಕೆಲವು ಏಲಾನಿದರ್ಶನಗಳನ್ನು ಅವುಗಳ ಲಕ್ಷಣಗಳಿಗಾಗಿ ಬೇರೆಡೆ ವಿವೇಚಿಸಿದ್ದೇನೆ. (ಅಚಿಂ, ೪.೧೬೯–೧೭೫ : ೫೧–೫೯ : ೪೪೯–೫೨೪ : ೭೦–೭೯ : ರಾ. ಸತ್ಯನಾರಾಯಣ, ಏಳೆ : ಒಂದು ಶಾಸ್ತ್ರೀಯ ಅಧ್ಯಯನ).

ಸಂಚೂ.ದಲ್ಲಿ ಏಳೆಯ ವಿಷಯಕವಾದ ಈ ವಿವರಗಳು ದೊರೆಯುತ್ತವೆ : ಪೂರ್ವಾಚಾರ್ಯರು, ಏಲಾಶಬ್ದನಿರ್ವಚನ, ವರ್ಣನೆ, ಉಪಮೆ ( :೨೬) ಗಾನಪ್ರಕಾರ, ನಾದಾವತೀ ಮುಂತಾದ ನಾಲ್ಕು ಶುದ್ಧೈಲಾಗಳು (:೨೬) ಇವು ಪ್ರಕೃತಿಗಳು ; ಇವುಗಳ ೧೬ ಪದಗಳು, ಅಧಿದೇವತೆಗಳು, ದಶಪ್ರಾಣಗಳು ಹಾಗೂ ಅವುಗಳ ಅನ್ವಯ ( : ೨೭), ವಾಸವೀ ಇತ್ಯಾದಿ ವಿಕೃತೈಲಾ ಜಾತಿಗಳು ( : ೨೮) ಇವುಗಳಲ್ಲಿ ಹುಟ್ಟುವ ವಿಕೃತೈಲಾಗಳು ಹೆಸರುಗಳು, ಲಕ್ಷಣ (: ೨೯), ಮತಂಗ ಮತದಲ್ಲಿ ಕರ್ನಾಟೈಲಾಪಟ್ಕ–ನಾದಾವತೀಸುರೇಖಾ (:೩೦),ಹಂಸಾವತೀ ಕಾಮಲೇಖಾ, ನಂದಾವತೀ ಸ್ಮರಲೇಖಾ, ಭದ್ರಾವತೀ ಭದ್ರಲೇಖಾ, ಏಲಾಛಂದಸ್ಸ್ವತೀ, ಏಲಾಭಾಸಗಳು ; ಶಿಖಾಪದ ( : ೩೧), ಶುದ್ಧೈಲಾಗಳಲ್ಲಿ ಗಣಭಂಗದಿಂದ, ಮಾತ್ರಾಭಂಗದಿಂದ, ಹುಟ್ಟುವ ವಿಕೃತೈಲಾಗಳು–ವಿಚಿತ್ರೈಲಾ, ರತಿಲೇಖಾ, ಕಾಮಲೇಖಾ, ಬಾಣಲೇಖಾ, ಚಂದ್ರಲೇಖಾ ; ಮತ್ತು ಇವುಗಳ ಲಕ್ಷಣಗಳು ; ಗಣಮಿಶ್ರದಿಂದ ಜನಿಸುವ ಸುರೇಖಾ, ಸ್ವರ್ಣರೇಖಾ, ಭದ್ರಲೇಖಾ ಎಂಬ ಏಲಾಗಳು; ಮಾತ್ರೈಲಾಗಳಲ್ಲಿ ೨೮೦೦ ಪ್ರಭೇದಗಳು ಹುಟ್ಟುತ್ತವೆ : ಆದರೆ ಅವು ರೂಢಿಯಲ್ಲಿಲ್ಲ. ( : ೩೨). ಇಂದುಮತೀ, ಜ್ಯೋತಿಷ್ಮತೀ, ಅಪರ್ಧಾ, ವಸುಮತೀ, ನಭಸ್ವತೀ ಎಂಬ ಏಲೆಗಳು ( : ೩೩). ವರ್ಣೈಲಾಗಳು—ಆರು ವರ್ಣಗಳಿಂದ ಮೊದಲುಗೊಂಡು ೨೯ರವರೆಗೆ ಏಕೋತ್ತರವಾಗಿ ವರ್ಧಿಸುವ ೨೪ ವರ್ಣೈಲಾಗಳು ; ಇವುಗಳ ಪೈಕಿ ಮಧುಕರೀ, ಸಸ್ತರಿಕಾ, ಕರಣ, ಸರಸ, ಪ್ರಭಂಜನೀ, ಮದನವತೀ, ಶಶಿನೀ, ಪ್ರಭಾವತೀ, ಮಾಲತೀ,

ಲಲಿತಾ. ಭೋಗವತೀ. ಕುಸುಮವತೀ ಎಂಬ ಹನ್ನೆರಡು ಸಾಮಾನ್ಯ ವರ್ಣೈಲಾಗಳು. ಕಾಂತಿಮತೀ, ಕಲಿತಾ. ಕಮಲಾ. ವಿಮಲಾ. ನಲಿನೀ. ಕಾಲಿಂದೀ. ವಿಪುಲಾ. ವಿದ್ಯುಲ್ಲತಾ. ತರಲಾ. ಸರಲಾ. ಅನ್ಯಸರಲಾ ಎಂಬ ಹನ್ನೆರಡು ವರ್ಣಮಾಲಾಗಳು (: ೩೩). ಶುದ್ಧ ಹಾಗೂ ದೇಶೀವರ್ಣೈಲಾಗಳು: ವರ್ಣೈಲಾಗಳಲ್ಲಿ ಇರಬೇಕಾದ ವಿಷಯ–ಸ್ತುತ್ಯನ ಯಶಸ್ಸು, ಪ್ರತಾಪ. ಸೌಭಾಗ್ಯ. ಸೌಧರ್ಮ್ಯ. ತ್ಯಾಗ. ಗೌರವ. ವಿಲಾಸ. ಶೌರ್ಯ. ಗಾಂಭೀರ್ಯ ಮತ್ತು ಸತ್ಯ: ಗಮಕ. ವರ್ಣ. ಮೂರ್ಛನಾ. ನಾದ. ಬಿಂದು ಮತ್ತು ತಾಳ ಎಂಬ ಆರು ಸಾಮಾನ್ಯಲಕ್ಷಣಗಳು (:೩೩). ವರ್ಣೈಲಾ ರಚನೆ. ಕರ್ನಾಟೈಲಾ. ಲಾಟೈಲಾ. ಗೌಡೈಲಾ. ಆಂಧ್ರೈಲಾ. ದ್ರಾವಿಡೈಲಾ ಎಂಬ ದೇಶೈಲಾಗಳು. ಪಾಲಿಕಾ. ವಿಲಾಸಿನೀ, ಮಧುಕರೀ, ಬಹುರೂಪಾ ಎಂಬ ಅಪ್ರಸಿದ್ಧ ಏಳೆಗಳು. ವಸ್ತು ಎಂಬ ಛಂದಸ್ಸಿನಲ್ಲಿ ರಚಿತವಾದ ಏಳೆಗೆ ವಸ್ತ್ವೈಲಾ ಎಂದು ಹೆಸರು; ಹಾಗಲ್ಲದ ಪ್ರಬಂಧಕ್ಕೆ ವಸ್ತು ಎಂದು ಹೆಸರು(:೩೪). ನಂದಿನಿ. ಚಿತ್ರಿಣಿ. ಚಿತ್ರಾ, ವಿಚಿತ್ರಾ ಎಂಬ ಮಾತ್ರೈಲಾಗಳು. ಛಂದಸ್ವತೀ ಏಲಾ(:೩೫). ಸಂಕೀರ್ಣ ಹಾಗೂ ಸಂಕರ ಏಲಾಗಳ ಪ್ರಸ್ತಾರ (: ೩೫–೩೮).

ಭಾರತೀಯ ಸಂಗೀತಶಾಸ್ತ್ರಗ್ರಂಥಗಳಲ್ಲಿ ಅತ್ಯಂತ ಸುವ್ಯವಸ್ಥಿತವೂ ವ್ಯಾಪಕವೂ ಆದರೆ ಸಂಕ್ಷಿಪ್ತವೂ ಆದ ಏಲಾವರ್ಣನವು ದೊರೆಯುವುದು ಸಂರ.ದಲ್ಲಿ. ಅದನ್ನಿಲ್ಲಿ ಸಂಗ್ರಹಿಸ ಲಾಗುವುದು.

## ಏಲಾಸಾಮಾನ್ಯ ಲಕ್ಷಣ

**ಮಾತು:** ಏಲೆಯಲ್ಲಿ (=ಏಲಾ. ಏಳೆ) ಮಾತುಗಳು ಏನೆಲ್ಲ ವಿಷಯಗಳನ್ನು ಒಳಗೊಂಡಿರಬಹುದೆಂಬುದನ್ನು ಮೇಲೆ (೩)ರಲ್ಲಿ ಸೂಚಿಸಿದೆ. ಇದರ ಉದಾಹರಣೆಗಳು ದೊರೆಯುವುದು ಸಹ್ಯ. ಮತ್ತು ಅಚಿಂ.ಗಳಲ್ಲಿ ಮಾತ್ರ: ಇವುಗಳ ಗ್ರಂಥವು ಅಪಪಾತ, ಪ್ರಕ್ಷಿಪ್ತ ಹಾಗೂ ಗ್ರಂಥಪಾತಗಳಿಂದ ತುಂಬಿದ್ದು ಸಂಸ್ಕರಣವು ಆವಶ್ಯಕವಾಗಿದೆ. ಇವುಗಳು ಸಂಸ್ಕೃತಭಾಷೆಯಲ್ಲಿರುವುದರಿಂದ (ಪ್ರಾಚೀನತಮ ಕನ್ನಡೈಲೆಯ ಒಂದೇ ಒಂದು ನಿದರ್ಶನವೂ ಈವರೆಗೆ ಸಂಗೀತಶಾಸ್ತ್ರ ಪ್ರಸಕ್ತಿಯಲ್ಲಿ ದೊರೆತಿಲ್ಲ) ಆಯಾ ಮಾತುಗಳ ಸಾಮಾನ್ಯಲಕ್ಷಣವನ್ನು ಮಾತ್ರ ಇಲ್ಲಿ ಸಂಗ್ರಹಿಸಿದರೆ ಸಾಕು (ಈ ಲಕ್ಷಣಗಳು ಕನ್ನಡದ ಮಾತುಗಳಿಗೂ ಅನ್ವಯಿಸುತ್ತಿದ್ದವೆಂದು ಭಾವಿಸಬಹುದು).

ಏಳೆಯಲ್ಲಿ ಒಟ್ಟು ಹದಿನಾರು ಪದಗಳು ಮೂರು ಪಾದಗಳಲ್ಲಿ ಅಡಕವಾಗಿರುತ್ತವೆ. ಇವುಗಳಿಗೆ ಅಧಿದೇವತೆ, ಪ್ರಾಣ, ಸಂಜ್ಞೆ, ವೇದೋಪವಸತಿ, ಅದೃಷ್ಟಫಲ ಮುಂತಾದವುಗಳನ್ನು ಸಂಗೀತಶಾಸ್ತ್ರದಲ್ಲಿ ವಿಧಿಸಿದೆ. ಇಷ್ಟೆಲ್ಲ ಗೌರವ, ಮಹತ್ತ್ವಗಳು ದೊರೆತಿರುವುದು ಏಳೆಗೆ ಮಾತ್ರ. ಅದರ ಹದಿನಾರು ಪದಗಳಿಗೆ ಈ ಸಂಜ್ಞೆಗಳನ್ನಿಟ್ಟಿದೆ: ೧. ಕಾಮ ೨. ಮನ್ಮಥವರ್ತ್ ೩. ಕಾಂತ ೪. ಜಿತ ೫. ಮತ್ತ ೬. ವಿಕಾರಿ ೭. ಮಾಂಧಾತೃ ೮. ಸುಮತಿ ೯. ಶೋಭೀ ೧೦. ಸುಶೋಭೀ ೧೧. ಗೀತಕ ೧೨. ಉಚಿತ ೧೩. ವಿಚಿತ್ರ ೧೪. ವಾಸವ ೧೫. ಮೃದು ೧೬. ಸುಚಿತ್ರ. ಇವುಗಳಲ್ಲಿ ಹತ್ತು ಪ್ರಾಣಗಳು ವಿನಿಯೋಗಗೊಳ್ಳುತ್ತವೆ.

(ಏಲಾಪದಗಳನ್ನು ಕಲಸಿ...
(ನಾದ)ವೂ ಇರುವುದು (೨,೭) : ಇವೆರಡು ಪದಗಳಲ್ಲಿಯೂ ಪ್ರಯೋಗ ಅಥವಾ ಗಮಕಾಲಪ್ತಿಯೂ, ಎಂದರೆ ಕಾವ್ಯವಾಚನದಂತಹ ಗೇಯತೆಯೂ ಪ್ರಬಂಧನಾಯಕನ ಸಂಬೋಧನೆಯೂ ಇರುತ್ತವೆ. ಇವುಗಳಲ್ಲಿಯೂ ರೂಪಕಾಲಪ್ತಿಯಲ್ಲಿಯೂ ಸ್ವರಗಳು ಸ್ವಲ್ಪವಾಗಿರುತ್ತವೆ. **(ii)** ಮಧುರ–ಅಲ್ಪನಾದ, ಅಲ್ಪಮೂರ್ಛನೆ (೩,೮). ಇದನ್ನು ತಾನೀಕರಣದಿಂದ, ಎಂದರೆ ಆರಂಭಸ್ವರದಿಂದ ಮುನ್ನಡೆದು ನಂತರದ, ಎಂದರೆ ನೆರೆ ಹೊರೆಯ. ಸ್ವರಗಳನ್ನು ಅಲ್ಪವಾಗಿ ಸ್ಪರ್ಶಿಸುತ್ತ ವಿಲಂಬಲಯದಲ್ಲಿ ಚಲಿಸಬೇಕು. ಇವೆರಡೂ ಪಲ್ಲವಪದಗಳು (ಮುಂದೆ ನೋಡಿ). **(iii)** ಸಾಂದ್ರ–ನಿಬಿಡಾಕ್ಷರತೆ, ಎಂದರೆ ಸ್ವರಗಳಿಗಿಂತ ಅಕ್ಷರಗಳೇ ಹೆಚ್ಚಾಗಿರುವುದು, ಎಂದರೆ ಅಲ್ಪಧ್ವನಿ; ಆದರೆ ತಾರಸ್ಥಾಯಿಯಲ್ಲಿ ಮೊದಲು ಮಾಡಿ ಅತಿಶಯವಾದ ರಕ್ತಿಯನ್ನು ಉಂಟುಮಾಡಬೇಕು; ಧಾತುವು ಉಚ್ಚತರವಾದ ಸ್ವರಗಳಲ್ಲಿ, ವಿಲಂಬಲಯದಲ್ಲಿ ಇರಬೇಕು (೪,೯). **(iv)** ಕಾಂತ–ತಾರಸ್ಥಾಯಿಯಲ್ಲಿ ವ್ಯಾಪಿಸಿದ್ದು ದ್ರುತಲಯದಲ್ಲಿ ರಮಣೀಯವಾದ ಕಾಂತಗುಣವುಳ್ಳ ನಾದವನ್ನು ಪಡೆದಿರುತ್ತದೆ (೫,೧೦ : ಕೊನೆಯ ಪಲ್ಲವ ಪದಗಳು). **(v)** ದೀಪ್ತ–ತಾರಸ್ಥಾಯಿಯಲ್ಲಿ ಪೂರ್ಣವಾದ ಎಂದರೆ ಪುಷ್ಟವಾದ ಸ್ವರಗಳ ಪ್ರಯೋಗವಿರುತ್ತದೆ (೧,೬,೧೧) : ಈ ಮೂರು ಪದಗಳೂ ಆಯಾ ಪಾದಗಳ ಮೊದಲನೆಯ ಮಾತುಗಳಾಗಿದ್ದು ಎರಡೆರಡು ಖಂಡಗಳಲ್ಲಿರುತ್ತವೆ. **(vi)** ಸಮಾಹಿತ–ಸ್ಥಾಯಿವರ್ಣದಲ್ಲಿ, ಎಂದರೆ ನಿಂತು ನಿಂತು ಚಲಿಸುವ ಸ್ವರಗಳಲ್ಲಿ ಇರುತ್ತದೆ. (೧೨ : ಹಿಂದಿನ ಎರಡು ಪ್ರಯೋಗಗಳಿಗಿಂತ, ಎಂದರೆ ಎರಡನೆಯ ಮತ್ತು ಏಳನೆಯ ಪದಗಳಲ್ಲಿ ಹಾಡಲಾಗುವ ಪ್ರಯೋಗ ಅಥವಾ ಗಮಕಾಲಪ್ತಿಗಿಂತ ಬೇರೆಯಾದ ಪ್ರಯೋಗವಾಗಿರುತ್ತದೆ). **(vii)** ಅಗ್ರಾಮ್ಯ–ಚಕ್ರವಾಲಬಂಧದಲ್ಲಿ ಅಕ್ಷರಗಳ ಆವೃತ್ತಿಯನ್ನು ಮಾಡುವುದು; ಎಂದರೆ ಹಿಂದಿನ ಪದದ ಕೊನೆಯಲ್ಲಿರುವ ಒಂದು, ಎರಡು ಅಥವಾ ಮೂರು ಅಕ್ಷರಗಳನ್ನು ಮುಂದಿನ ಪದದ ಮೊದಲಿನಲ್ಲಿ ಒಂದು, ಎರಡು ಅಥವಾ ಮೂರು ಅಕ್ಷರಗಳಾಗಿರುವಂತೆ ಏರ್ಪಡಿಸುವುದು. ಆಯಾಯಾ ಅಕ್ಷರಗಳಲ್ಲಿರುವ ನಾದವನ್ನೂ (ಸ್ವರವನ್ನೂ) ಹೀಗೆಯೇ ಪುನರುಚ್ಚರಿಸುವುದು (೩ : ಇದು ಧ್ರುವಧಾತುವಿನಲ್ಲಿರುತ್ತದೆ); ಮಧ್ಯಲಯದಲ್ಲಿ ಹಾಡಬೇಕು. **(viii)** ಸುಕುಮಾರ–'ವರ್ಣನಾದಮೂರ್ಛನಾಕೋಮಲತ್ವ' (೧೪) : ಈ ಪಾದದಲ್ಲಿರುವ ಅಕ್ಷರಗಳನ್ನೂ ಸ್ವರಗಳನ್ನೂ ತಾನಗಳನ್ನೂ ವಿಕಾರಗೊಳಿಸದೆ. ಕೋಮಲವಾಗಿ, ಎಂದರೆ ಮೃದುವಾಗಿ, ಹಾಡಬೇಕು. **(ix)** ಪ್ರಸನ್ನ–ಪದ, ಸ್ಥಾನ ಹಾಗೂ ಸ್ವರಗಳ ಪ್ರಸಾದಗುಣ (೧೫ : ಇದೂ ಧ್ರುವಧಾತುವಿನಲ್ಲಿರುತ್ತದೆ). ಪದಾರ್ಥವು ವಿಳಂಬವಿಲ್ಲದೆ ಥಟ್ಟನೆ ಗೋಚರವಾಗುವುದು ಪದಪ್ರಸಾದ; ಮಂದ್ರಮಧ್ಯತಾರಸ್ಥಾಯಿಗಳು ಕಲಸುಮೇಲೋಗರವಾಗದೆ ಸ್ಪಷ್ಟವಾಗಿ, ಎಂದರೆ ಅವುಗಳ ವಿವಿಕ್ತರೂಪದಲ್ಲಿ ಗೋಚರಿಸುವುದು ...
ಗಳು, ಗಮಕಗಳು ಪ್ರಸಾದ...

ಗಳಲ್ಲದೆ ಪ್ರ... ವಾಗ್ಗೇಯಕಾರನನ್ನೂ ಪ್ರಯೋಕ್ತೃವನ್ನೂ ಏಳೆಯು ರಕ್ಷಿಸುತ್ತದೆ–'ಏಭಿಃ ಸರ್ವಗುಣೈ-ರ್ಯುತಾಃ ಏಲಾಃ ಶ್ರೋತುಃ ಪ್ರಯೋಕ್ತುಶ್ಚ ಧರ್ಮಾರ್ಥಕಾಮಸಿದ್ಧಿದಾಃ' (ಸಂರ. ೪.೪೨-೫೨ : ೨೧೯–೨೨೩ : ಕಲ್ಲಿ. ಸಿಂಹ.)

**ಧಾತು :** ಏಳೆಯು ತ್ರಿಧಾತುಕ ಅಥವಾ ಚತುರ್ಧಾತುಕ ಪ್ರಬಂಧ : ಎಂದರೆ ಅದರಲ್ಲಿ ಉದ್ಗ್ರಾಹ, ಧ್ರುವ ಮತ್ತು ಆಭೋಗಧಾತುಗಳಿರುತ್ತವೆ : ಕೆಲವೊಮ್ಮೆ ಮೇಲಾಪಕವಿರುತ್ತದೆ. ಕೆಲವು ವೇಳೆ ಇರುವುದಿಲ್ಲ. ಉದ್ಗ್ರಾಹದಲ್ಲಿ ಏಳೆಯು ಮೂರು ಪಾದಗಳಿರುತ್ತವೆ; ಇವೇ ಅದರ ಛಂದೋಲಕ್ಷಣವುಳ್ಳ ಭಾಗ. ಅವುಗಳ ಪೈಕಿ ಮೊದಲನೆಯ ಎರಡರಲ್ಲಿ ಮಾತ್ರ ಛಂದೋನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಉದ್ಗ್ರಾಹದ ಮೊದಲನೆಯ ಮತ್ತು ಎರಡನೆಯ ಪಾದದಲ್ಲಿ ಐದೈದು ಪದಗಳಿರುತ್ತವೆ. ಇವುಗಳಲ್ಲಿ ಪ್ರತಿಯೊಂದು ಪಾದದ ಮೊದಲನೆಯ ಪದದಲ್ಲಿಯೂ (೧.೬,೧೧. ದೀಪ್ತಪ್ರಾಣ) ಎರಡೆರಡು ಖಂಡಗಳಿದ್ದು ಅವಕ್ಕೆ ಒಂದೇ ಮಟ್ಟು(ಸಮಾನಧಾತು)ಇರುತ್ತದೆ. ಹೀಗೆಯೇ ಎರಡನೆಯ ಪದವು (೨.೭,೧೨) ಪ್ರಯೋಗವನ್ನುಳ್ಳದ್ದು (ಸಮಾನಪ್ರಾಣ) : ಮೊದಲನೆಯ ಎರಡು ಪ್ರಯೋಗಗಳ ಧಾತುವು ಸಮಾನವಾಗಿರುತ್ತದೆ. ಹನ್ನೆರಡನೆಯ ಪದದ ಧಾತುವು ಭಿನ್ನವೂ ಉಚ್ಚತರವೂ ಆಗಿರುತ್ತದೆ; ಆದರೆ ಉದ್ಗ್ರಾಹಕ್ಕೂ ಧ್ರುವಖಂಡಕ್ಕೂ ನಾದಲಯಗಳ ಸೇತುವನ್ನು ಏರ್ಪಡಿಸುವುದಿಲ್ಲ. ಇದು ಸಾಂಪ್ರದಾಯಿಕ ಲಕ್ಷಣ. ಹನ್ನೆರಡನೆಯ ಶತಮಾನದ ವೇಳೆಗೆ (ಅಚಿಂ. ಮತ್ತು ಸೋಮರಾಜದೇವನ ಸಂಗೀತ ರತ್ನಾವಲೀ) ಇದನ್ನು ಮೇಲಾಪಕವನ್ನಾಗಿ ಮಾರ್ಪಡಿಸಲಾಯಿತು. ಮೂರನೆಯ ಪಾದದಲ್ಲಿ ಶಿಖಾಪದವು (ಮುಂದೆ ನೋಡಿ) ಏರ್ಪಟ್ಟರೆ. ಅದರ ನಂತರವೇ ಮೇಲಾಪಕ ರೂಪದ ಪ್ರಯೋಗವನ್ನು ಹಾಡಬೇಕೆಂಬ ನಿಯಮವು ಕಾಣಿಸಿಕೊಂಡಿತು.

ಉದ್ಗ್ರಾಹದ ಮೊದಲನೆಯ ಹಾಗೂ ಎರಡನೆಯ ಪಾದದ ಕೊನೆಯ ಮೂರು ಪದಗಳಿಗೆ ಪಲ್ಲವಗಳೆಂಬ ಸಮುಚ್ಚಯನಾಮವಿದೆ. ಮೊದಲನೆಯ ಎರಡು ಪಲ್ಲವಗಳನ್ನು (೩–೮ ಮಧುರಪ್ರಾಣ, ೪–೯ ಸಾಂದ್ರಪ್ರಾಣ) ವಿಲಂಬ ಲಯದಲ್ಲಿಯೂ ಕೊನೆಯದನ್ನು (೫–೧೦ ಕಾಂತಪ್ರಾಣ) ದ್ರುತಲಯದಲ್ಲಿಯೂ ಹಾಡಬೇಕು.

ಏಳೆಯ ಮೂರನೆಯ ಪಾದವು ಮಿಶ್ರರೂಪದ್ದು ; ಅದರ ಮೊದಲನೆಯ ಎರಡು (೧೧,೧೨) ಪದಗಳಿಂದ ಉದ್ಗ್ರಾಹ ಮತ್ತು ಪ್ರಯೋಗ/ಮೇಲಾಪಕ ; ಮುಂದಿನ ಮೂರರಿಂದ (೧೩,೧೪.೧೫) ಧ್ರುವ ; ಇವುಗಳಲ್ಲಿ ೧೩ ಮತ್ತು ೧೪ನೆಯವುಗಳನ್ನು ಮಧ್ಯಲಯದಲ್ಲಿಯೂ ಸಮಾನಧಾತುವಿನಲ್ಲಿಯೂ ಹಾಡಬೇಕು ; ೧೫ನೆಯ ಪದವನ್ನು ... ಎಂದರೆ

ಹದಿನಾರನೆಯ ಪದದಿಂದ ಆಭೋಗಧಾತು. ಮೊದಲನೆಯ ಹನ್ನೆರಡು ಪದಗಳಲ್ಲಿ ಪ್ರಬಂಧನಾಯಕ ಅಥವಾ ಇಷ್ಟದೈವ (ಸ್ತುತ್ಯ)ವನ್ನು ಕುರಿತ ಕ್ರಿಯಾಕಾರಕ ಸಂಬಂಧವುಳ್ಳ, ವಾಕ್ಯರೂಪದ ಮಾತುಗಳಿರುತ್ತವೆ; ಇದು ಉದ್ಗ್ರಾಹ. ಧ್ರುವಧಾತುವಿನಲ್ಲಿ ಮತ್ತು ಆಭೋಗದಲ್ಲಿ ಎಂದರೆ ಮೂರನೆಯ ಪಾದದಲ್ಲಿ ಸ್ತುತ್ಯವಿಷಯಕವಾದ ಸಂಬೋಧನಾಂತ ಪದಗಳು ಮಾತ್ರ ಇರಬೇಕು. ಆದರೆ ಧ್ರುವಧಾತುವಿನಲ್ಲಿ ಸ್ತುತ್ಯನನ್ನು ಕುರಿತ ಮಾತುಗಳಿದ್ದರೆ. ಆಭೋಗಪದದಲ್ಲಿ ವಾಗ್ಗೇಯಕಾರನ ಸ್ವನಾಮ ಮುದ್ರೆಯಿರುತ್ತದೆ. ಏಳೆಯ ವಿಷಯದಲ್ಲಿ ತಾಳನಿರ್ಯುಕ್ತಿಯಿದೆ. ಎಂದರೆ ಇಂತಿಂತಹ ತಾಳಗಳಲ್ಲಿಯೇ ರಚಿಸಬೇಕು ಎಂಬ ನಿಯಮವಿದೆ; ಅಲ್ಲದೆ ಆಯಾ ತಾಳದ ವಿಷಮಗ್ರಹದಲ್ಲಿ ಪ್ರಾರಂಭಿಸಬೇಕು–ಎಂದರೆ ತಾಳದ ಆವರ್ತವೂ ಹಾಡಿನ ಪ್ರಾರಂಭವೂ ಒಟ್ಟಿಗೇ ಮೊದಲಾಗಬಾರದು–ಎಂಬ ವಿಧಿಯೂ ಇದೆ. ಏಳೆಯ ಗಾನಕ್ರಮವು ಹೀಗಿತ್ತು: ಮೇಲೆ ವಿವರಿಸಿರುವ ರೀತಿಯಲ್ಲಿ ಏಳೆಯನ್ನು ಹಾಡಿ, ಪುನಃ ಅದನ್ನು ಸಮಗ್ರವಾಗಿ ಹಾಡಿ ಧ್ರುವಖಂಡದಲ್ಲಿ ಯಾವುದಾದರೊಂದು ಸಹಜ ನಿಲುಗಡೆಯಲ್ಲಿ ಮುಕ್ತಾಯಗೊಳಿಸಬೇಕು (ಸಂರ. ೪.೩೩–೩೯ : ೨೧೫–೨೧೮ ; ಸಿಂಹ. ಕಲ್ಲಿ).

## ೩. ಏಲಾಪ್ರಭೇದಗಳು : ವಿವೇಚನೆ

ಸಂಗೀತಶಾಸ್ತ್ರದಲ್ಲಿ ಏಳೆಗಳನ್ನು ಉತ್ತರೋತ್ತರ ವಿಕೃತಿಯ ದೃಷ್ಟಿಯಿಂದ ಶುದ್ಧ, ವಿಕೃತ, ಸಂಕೀರ್ಣ ಎಂದೂ ರಚನಾವಿನ್ಯಾಸದೃಷ್ಟಿಯಿಂದ ಗಣ, ವರ್ಣ, ಮಾತ್ರಾ ಎಂದೂ ವಿಂಗಡಿಸಲಾಗಿದೆಯೆಂಬುದನ್ನು ಮೇಲೆ ಸೂಚಿಸಿದೆ. ಇವುಗಳನ್ನು ಇಲ್ಲಿ ಸ್ವಲ್ಪ ಮಟ್ಟಿಗೆ ಪರಿಶೀಲಿಸಬಹುದು.

**ಶುದ್ಧಗಣೈಲಾ :** ಗಣಗಳು ವರ್ಣಗಣ ಮತ್ತು ಮಾತ್ರಾಗಣ ಎಂದು ಎರಡು ವಿಧ. ವರ್ಣಗಣದ ಏಳೆಗಳಲ್ಲಿ ಮೂರು ಬಗೆಯುಂಟು—ಶುದ್ಧ, ವಿಕೃತ, ಸಂಕೀರ್ಣ.

ಶುದ್ಧಗಣೈಲಾಗಳಲ್ಲಿ ನಾದಾವತೀ, ಹಂಸಾವತೀ, ನಂದಾವತೀ ಮತ್ತು ಭದ್ರಾವತಿಯೆಂಬ ನಾಲ್ಕು ಪ್ರಭೇದಗಳಿವೆ. ಇವು ಉಳಿದೆಲ್ಲ ವಿಕೃತ ಹಾಗೂ ಸಂಕೀರ್ಣ ಏಳೆಗಳಿಗೆ ಪ್ರಕೃತಿಗಳು; ಎಂದರೆ ಇವುಗಳಲ್ಲಿರುವ ಗಣಗಳನ್ನು ವಿಕೃತ(ಭಂಗ)ಗೊಳಿಸುವುದರಿಂದ ವಿಕೃತೈಲಾಗಳೂ ಎರಡು ಅಥವಾ ಹೆಚ್ಚು ಏಳೆಗಳ ಮಾದರಿಗಳನ್ನು ಸಂಕರಗೊಳಿಸುವುದರಿಂದ ಸಂಕೀರ್ಣೈಲಾಗಳೂ ಹುಟ್ಟುತ್ತವೆ. ಗಣೈಲಾಗಳಲ್ಲಿ ವಿಧಿಸಿರುವ ಗಣನಿಯಮವು ಮೊದಲೆರಡು ಪಾದಗಳಿಗೆ ಸಮಾನವೂ ಕಡ್ಡಾಯವೂ ಆಗಿರುತ್ತದೆ; ಮೂರನೆಯ ಪಾದದಲ್ಲಿ ಕಾಮಚಾರಕ್ಕೆ ಅವಕಾಶವುಂಟು. ಗಣೈಲಾಗಳಲ್ಲಿ ಮಯರಸತಜಭನ ಎಂಬ ಗಣಗಳು ಪ್ರಯುಕ್ತವಾಗುತ್ತವೆ. ಇವುಗಳಿಗೆ ಭೂಮಿ. ಜಲ. ಅಗ್ನಿ. ಮರುತ್. ಆಕಾಶ, ಸೂರ್ಯ. ಚಂದ್ರ. ಇಂದ್ರರು ಅಧಿದೇವತೆಗಳೂ ಶ್ರೀ. ವೃದ್ಧಿ. ನಿಧನ. ಸ್ಥಾನಭ್ರಷ್ಟತೆ, ನಿರ್ಧನತೆ, ಆರೋಗ್ಯ, ಕೀರ್ತಿ, ಆಯುಸ್ಸು ಎಂಬ ಫಲಗಳೂ (ಸ್ತುತ್ಯನಿಗೆ) ಉಂಟು. ಅಲ್ಲದೆ ಅಕಚಟತಪಯಶ ಎಂಬ ವರ್ಣವರ್ಗಗಳಿಗೆ ಸೋಮ, ಮಂಗಳ, ಬುಧ, ಗುರು,

ನಾದಾವತೀ : ೫ ಭ.೧ಸ. ಟಕ್ಕರಾಗ. ಮಂಠತಾಳ : ಋಗ್ವೇದಜನ್ಯ. ಬಿಳುಪು, ಬ್ರಾಹ್ಮಣಜಾತಿ. ಪಾಂಚಾಲೀರೀತಿ. ಕೈಶಿಕೀವೃತ್ತಿ. ಭಾರತೀಪ್ರೀತಿಗಾಗಿ ವಿನಿಯೋಗ, ಶೃಂಗಾರರಸ ಸಂವರ್ಧಕ.

ಹಂಸಾವತೀ : ೫ರ.೧ಸ. ಹಿಂದೋಲರಾಗ. ದ್ವಿತೀಯವೆಂಬ ತಾಳ, ಯಜುರ್ವೇದಜನ್ಯ, ಕ್ಷತ್ರಿಯಜಾತಿ. ರಕ್ತವರ್ಣ. ಆರಭಟೀವೃತ್ತಿ. ಲಾಟೀರೀತಿ, ರೌದ್ರರಸವರ್ಧನದಲ್ಲಿ ಚಂಡಿಕಾಪ್ರಸಾದಕ್ಕಾಗಿ ವಿನಿಯೋಗ.

ನಂದಾವತೀ : ೫ತ.೧ಜ. ಮಾಲವಕೈಶಿಕರಾಗ. ಪ್ರತಿಯೆಂಬ ತಾಳ. ಪೀತವರ್ಣ, ಸಾಮವೇದಜನ್ಯ. ವೈಶ್ಯಜಾತಿ. ಸಾತ್ತ್ವತೀವೃತ್ತಿ. ಗೌಡೀರೀತಿ. ವೀರರಸವರ್ಧನದಲ್ಲಿ ಇಂದ್ರಾಣೀಪ್ರಸಾದಕ್ಕಾಗಿ ವಿನಿಯೋಗ.

ಭದ್ರಾವತೀ : ೫ಮ.೧ಯ. ಕಕುಭರಾಗ. ಕಂಕಾಲತಾಲ, ಕಪ್ಪುಬಣ್ಣ, ಅಥರ್ವವೇದ ಜನ್ಯ, ಶೂದ್ರಜಾತಿ. ಭಾರತೀವೃತ್ತಿ. ವೈದರ್ಭೀರೀತಿ. ಬೀಭತ್ಸರಸಾಶ್ರಯವಾದುದು, ವಾರಾಹೀದೇವತಾಪ್ರೀತಿಗಾಗಿ ಪ್ರಯುಕ್ತ.

ಇವುಗಳ ಸಾಂಕರ್ಯದಿಂದ ಅಸಂಖ್ಯೇಯವಾದ ಸಂಕರೈಲಾಗಳು ಹುಟ್ಟುತ್ತವೆ ; ರೂಢಿಯಲ್ಲಿ ಅವು ದೊರೆಯುವುದಿಲ್ಲ : ಆದುದರಿಂದ ಅವುಗಳ ವರ್ಣನೆಯು ಅಪ್ರಸಕ್ತ (ಸಂರ. ೪.೬೬–೬೬ : ೨೩೦–೨೩೧. ಸಿಂಹ, ಕಲ್ಲಿ).

**ವಿಕೃತೈಲಾ :** ಶುದ್ಧೈಲಾಗಳಲ್ಲಿ ಹೇಳಿರುವ ಗಣಗಳನ್ನು ವಿಕೃತ(ಭಂಗ)ಗೊಳಿಸುವುದರಿಂದ. ಎಂದರೆ ಅವುಗಳಲ್ಲಿರುವ ಗುರುಲಘುಗಳನ್ನು ಸ್ಥಾನಪಲ್ಲಟಗೊಳಿಸುವುದರಿಂದ (ಗುರುವನ್ನು ಲಘುಗಳನ್ನಾಗಿ ಒಡೆಯುವುದರಿಂದಲ್ಲ). ವಿಕೃತೈಲಾಗಳು ಜನಿಸುತ್ತವೆ. ಉದಾ. ಭ (ನಾದಾವತೀ)—ಗಲಲ→ಲಗಲ(ಜ), ಲಲಗ(ಸ) : ರ (ಹಂಸಾವತೀ)–ಗಲಗ →ಗಗಲ (ತ). ಲಗಗ (ಯ) : ತ (ನಂದಾವತೀ)–ಗಗಲ→ಲಗಗ (ಯ). ಗಲಗ (ರ) : ಮ(ಭದ್ರಾವತೀ)–ಗಗಗ→ರೂಪಭೇದಗಳಿಲ್ಲ. (ಲ=ಲಘು. ಗ=ಗುರು). ಆದುದರಿಂದ ನಾದಾವತೀ ಹಂಸಾವತೀ ಮತ್ತು ನಂದಾವತೀಗಳಲ್ಲಿ ಮಾತ್ರ ವಿಕೃತೈಲಾಗಳು ಸಾಧ್ಯ. ಇವುಗಳಲ್ಲಿರುವ ಐದೈದು ಅನನ್ಯಗಣಗಳಲ್ಲಿ ಒಂದು, ಎರಡು, ಮೂರು, ನಾಲ್ಕು ಮತ್ತು ಐದು ಗಣಗಳನ್ನು ಒಮ್ಮೆಗೇ ವಿಕೃತಗೊಳಿಸುವುದರಿಂದ ಕ್ರಮವಾಗಿ ವಾಸವೀ, ಸಂಗತಾ, ಶ್ರೇಷಾ, ಚತುರಾ ಮತ್ತು ...

ಬದಲಾಯಿಸುವುದರಿಂದ ಕ್ರಮವಾಗಿ ೫, ೧೦, ೧೦, ೫ ಮತ್ತು ೧ ಪ್ರಭೇದಗಳು ದೊರೆಯುತ್ತವೆ. ಇವುಗಳಿಗೆ ನಾದಾವತೀವಾಸವೀ, ನಾದಾವತೀಸಂಗತಾ...ನಾದಾವತೀಬಾಣ, ಹಂಸಾವತೀವಾಸವೀ...ಹಂಸಾವತೀಬಾಣ. ನಂದಾವತೀವಾಸವೀ...ನಂದಾವತೀಬಾಣ ಎಂಬ ಹೆಸರುಗಳಿರುತ್ತವೆ. ಐದು ಅನನ್ಯಗಣಗಳಲ್ಲಿ ವಿಕಾರವಾಗುವ ಗಣಸ್ಥಾನವನ್ನು **i ii iii iv v** ಎಂದು ನಿರ್ದೇಶಿಸಿ ಈ ವಿಕೃತೈಲಾಜಾತಿಗಳನ್ನೂ ಅವುಗಳಲ್ಲಿ ಜನಿಸುವ ಏಳೆಗಳನ್ನೂ ಹೀಗೆ ತೋರಿಸಬಹುದು :

**I** ವಾಸವೀ : ೧. ರಾಮಾ **(i)** ೨. ಮನೋರಮಾ **(ii)** ೩. ಉನ್ನತಾ (iii) ೪. ಶಾಂತಿ **(iv)** ೫. ನಾಗರಾ **(v)**.

**II** ಸಂಗತಾ : ೧. ರಮಣೀಯಾ **(i, ii)** ೨. ವಿಷಮಾ **(i, iii)** ೩. ಸಮಾ **(i, iv)** ೪. ಲಕ್ಷ್ಮೀ **(i, v)** ೫. ಕೌಮುದೀ **(ii, iii)** ೬. ಕಾಮೋತ್ಸವಾ **(ii, iv)** ೭. ನಂದಿನೀ **(ii, v)** ೮. ಗೌರೀ **(iii, iv)** ೯. ಸೌಮ್ಯ **(iii, v)** ೧೦. ರತಿದೇಹಾ **(iv, v)**.

**III** ತ್ರೇತಾ : ೧. ಮಂಗಲಾ **(i, ii, iii)** ೨. ರತಿಮಂಗಲಾ **(i, ii, iv)** ೩. ಕಲಿಕಾ **(i, ii, v)** ೪. ತನುಮಧ್ಯಾ **(i, iii, iv)** ೫. ವೀರಶ್ರೀ **(i, iii, v)** ೬. ಜಯಮಂಗಲಾ **(i, iv, v)** ೭. ವಿಜಯಾ **(ii, iii, iv)** ೮. ರತ್ನಮಾಲಾ **(ii,iii,v)** ೯. ಗುರುಮಧ್ಯಾ **(ii, iv, v)** ೧೦. ರತಿಪ್ರಭಾ **(iii, iv, v)**.

**IV** ಚತುರಾ : ೧. ಉತ್ಸವಪ್ರಿಯಾ **(ii, iii, iv, v)** ೨. ಮಹಾನಂದಾ **(i, iii, iv, v)** ೩. ಲಹರೀ **(i, ii, iv, v)** ೪. ಜಯಾ **(i, ii, iii, v)** ೫. ಕುಸುಮಾವತೀ **(i, ii, iii, iv)**

**V** ಬಾಣ ೧. ಪಾರ್ವತೀಪ್ರಿಯಾ **(i, ii, iii, iv, v)**.

ಉದಾಹರಣೆಗೆ ನಾದಾವತೀತ್ರೇತಾರತ್ನಮಾಲಾ ಎಂಬ ವಿಕೃತೈಲೆಯ ರಚನೆಯು ಭಜಜಭಜನ ಎಂದೋ ಭಸಸಭಸನ ಎಂದೋ ಆಗುತ್ತದೆ. ಇವುಗಳಲ್ಲಿರುವ ಜಗಣ–ಸಗಣಗಳನ್ನು ಅದಲುಬದಲು ಮಾಡುವುದರಿಂದ ಭಸಜಭಜನ, ಭಸಸಭಜನ, ಭಜಸಭಜನ ಮುಂತಾದ ಇತರ ಪ್ರಸ್ತಾರಭೇದಗಳು ಹುಟ್ಟುತ್ತವೆ. ಅಂತೆಯೇ ಹಂಸಾವತೀ ಚತುರಾ ಲಹರೀ ಎಂಬ ವಿಕೃತೈಲೆಯ ರಚನೆ ತತರತತಸ ಅಥವಾ ಯಯರಯಯಸ ಎಂದಾಗುತ್ತದೆ. ಇವುಗಳಲ್ಲಿರುವ ಯಗಣ–ತಗಣಗಳನ್ನು ಕ್ರಮವಾಗಿ ಪಲ್ಲಟಿಸುವುದರಿಂದ ಹುಟ್ಟುವ ಬೇರೆ ಪ್ರಸ್ತಾರಭೇದಗಳನ್ನು ಊಹಿಸಿಕೊಳ್ಳಬೇಕು.

ಹೀಗೆ ನಾದಾವತೀ ಹಂಸಾವತೀ ಮತ್ತು ನಂದಾವತೀಗಳಲ್ಲಿ ಪ್ರತಿಯೊಂದರಲ್ಲಿಯೂ ತಲಾ ಮೂವತ್ತೊಂದರಂತೆ ಒಟ್ಟು ೯೩ ವಿಕೃತೈಲೆಗಳು ಸಿದ್ಧಿಸುತ್ತವೆ. ಇದರಲ್ಲಿ ಮೇಲೆ ಹೇಳಿದ ಪ್ರಸ್ತಾರಭೇದಗಳು ಸೇರಿಲ್ಲ. ಇದಲ್ಲದೆ ಈ ಪ್ರತಿಯೊಂದರ ವಾಸವೀಜಾತಿಯಲ್ಲಿ ಎರಡು, ಸಂಗತಾಜಾತಿಯಲ್ಲಿ ಮೂರು–ಹೀಗೆ ಐದೈದು (ಒಟ್ಟು ಹದಿನೈದು) ವಿಕೃತೈಲಾ

ಆಕರಸ್ಮರಣೆಯಿಲ್ಲದ [illegible]
ವಾಸವೀಜಾತಿಯ ವಿಕೃತೈಲೆಯ ಒಂದು (ಇನ್ನೂ ಒಂದು ?) ಭಗಣಸ್ಥಾನದಲ್ಲಿ ಸೂರ್ಯ (=ಸವಿತೃ)ವು ದೇವತೆಯಾಗಿರುವ ಜಗಣವನ್ನಿಟ್ಟರೆ ವಾಸವೀಸಾವಿತ್ರಿಯೆಂಬ, ಬದಲು ಮರುತ್ತು (=ಪವನವು) ದೇವತೆಯಾಗಿರುವ ಸಗಣವನ್ನಿಟ್ಟರೆ ವಾಸವೀಪಾವನಿಯೆಂಬ ಎರಡು ಭೇದಗಳು ದೊರೆಯುತ್ತವೆ. ಇದೇ ರೀತಿಯಲ್ಲಿ ನಾದಾವತೀ ಸಂಗತಾಜಾತಿಯ ವಿಕೃತೈಲೆಯ ಎರಡು (ಇನ್ನೂ ಎರಡು ?) ಭಗಣಗಳ ಸ್ಥಾನದಲ್ಲಿ ಎರಡು ಜಗಣಗಳನ್ನಿಟ್ಟರೆ ಸಂಗತಾಸಾವಿತ್ರಿಯೆಂಬ ಒಂದು, ಎರಡು ಸಗಣಗಳನ್ನಿಟ್ಟರೆ ಸಂಗತಾಪಾವನಿಯೆಂಬ ಒಂದು, ಒಂದು ಜಗಣ-ಒಂದು ಸಗಣವನ್ನಿಟ್ಟರೆ ಸಂಗತಾವಾತ (=ಪವನ) ಸಾವಿತ್ರಿಯೆಂಬ ಇನ್ನೊಂದು–ಹೀಗೆ ಮೂರು ಭೇದಗಳಾಗುತ್ತವೆ. ಆದುದರಿಂದ ನಾದಾವತಿಯಲ್ಲಿ ಒಟ್ಟು ಐದು ವಿಕೃತೈಲಾಭೇದಗಳು (ಹೆಚ್ಚಾಗಿ ?) ಹುಟ್ಟುತ್ತವೆ. ಹಂಸಾವತಿಯಲ್ಲೂ ಇಂತಹದೇ ಐದು ಭೇದಗಳು ಬರುತ್ತವೆ : ೧. ವಾಸವಿಯ ಒಂದು (ಇನ್ನೂ ಒಂದು ?) ರಗಣಸ್ಥಾನದಲ್ಲಿ ವ್ಯೋಮ (=ಆಕಾಶ)ವು ದೇವತೆಯಾಗಿರುವ ತಗಣವನ್ನಿಡುವುದರಿಂದ ವಾಸವೀವ್ಯೋಮಜಾ : ೨. ಬದಲು, ವರುಣನು ದೇವತೆಯಾಗಿರುವ ಯಗಣವನ್ನಿಡುವುದರಿಂದ ವಾಸವೀ ವಾರುಣೀ ; ೩. ಸಂಗತಾದ ಎರಡು (ಇನ್ನೂ ಎರಡು ?) ರಗಣಗಳ ಸ್ಥಾನದಲ್ಲಿ ತಗಣಗಳನ್ನಿಟ್ಟರೆ ಸಂಗತಾವ್ಯೋಮಜಾ ; ೪. ಬದಲು ಎರಡು ಯಗಣಗಳನ್ನಿಟ್ಟರೆ ಸಂಗತಾವಾರುಣೀ; ೫. ಬದಲು ಒಂದು ತಗಣ–ಒಂದು ಯಗಣವನ್ನಿಟ್ಟರೆ ಸಂಗತಾವ್ಯೋಮವಾರುಣೀ. ನಂದಾವತಿಯಲ್ಲೂ ಹೀಗೆಯೇ ಐದು (ಅಧಿಕ ?) ಭೇದಗಳು : ೧. ವಾಸವೀಜಾತಿಯ ನಂದಾವತಿಯಲ್ಲಿ ಒಂದು (ಇನ್ನೂ ಒಂದು ?) ತಗಣದ ಬದಲು ಅಗ್ನಿ (=ವಹ್ನಿ)ಯು ದೇವತೆಯಾಗಿರುವ ರಗಣವನ್ನಿಟ್ಟರೆ ವಾಸವೀವಹ್ನಿಜಾ : ೨. ಅದರ ಬದಲು ವರುಣನು ದೇವತೆಯಾಗಿರುವ ತಗಣವನ್ನಿಟ್ಟರೆ ವಾಸವೀವಾರುಣೀ; ೩. ಸಂಗತಾಜಾತಿಯ ನಂದಾವತಿಯಲ್ಲಿ ಎರಡು (ಇನ್ನೂ ಎರಡು ?) ತಗಣಗಳ ಸ್ಥಾನದಲ್ಲಿ ಎರಡು ರಗಣಗಳನ್ನಿಟ್ಟರೆ ಸಂಗತಾವಹ್ನಿಜಾ ; ೪. ಅದರ ಬದಲು ಎರಡು ಯಗಣಗಳನ್ನಿಟ್ಟರೆ ಸಂಗತಾವಾರುಣೀ; ೫. ಅದರ ಬದಲು ಒಂದು ರಗಣ–ಒಂದು ಯಗಣವನ್ನಿಟ್ಟರೆ ಸಂಗತಾವಹ್ನಿವಾರುಣೀ.

ಮೇಲೆ ಎಣಿಸಿಕೊಂಡ ೯೩ ವಿಕೃತೈಲೆಗಳಿಗೆ ಈ ಹದಿನೈದನ್ನು ಕೂಡಿದರೆ ಒಟ್ಟು ೧೦೮ ವಿಕೃತೈಲೆಗಳು ದೊರೆಯುತ್ತವೆ. ಸಂರ.ದಲ್ಲಿ ಲೆಕ್ಕವು ಹೀಗೇ ಇದೆ ; ಸಿಂಹ. ಕಲ್ಲಿ.ಗಳ ಅಭಿಪ್ರಾಯವೂ ಇದೇ (೪.೭೭–೯೪ ; ೨೩೩–೨೩೭). ಆದರೆ ಇಲ್ಲಿ ಒಂದು ಸಂಶಯಕ್ಕೆ ಎಡೆಯಿದೆ : ವಾಸವೀಜಾತಿಯ ಅನನ್ಯ ಗಣಪಂಚಕದಲ್ಲಿ ಒಂದೊಂದನ್ನೇ ಪಲ್ಲಟಿಸಿದರೆ

ದರೆ ಆಯಾ ಸಂಗತಾಜಾತಿಯು ಹತ್ತು ಅವಾಂತರಭೇದಗಳಲ್ಲಿಯೂ ಅಂತರ್ಭಾವವನ್ನು ಪಡೆಯುವುದಿಲ್ಲವೆ ? ಅಂತೆಯೇ ಸಂಗತಾಜಾತಿಯಲ್ಲಿರುವ ಆಯಾ ಅನನ್ಯಗಣಪಂಚಕದಲ್ಲಿ ಎರಡನ್ನು ಬದಲಾಯಿಸಿದಾಗ ಬರುವ ಪ್ರಸ್ತಾರಗಳು ಅದೇ ಜಾತಿಯ ಹತ್ತು ಅವಾಂತರ ಭೇದಗಳಲ್ಲಿಯೂ. ಮಿಶ್ರಗಣಗಳಿಂದ ಪಲ್ಲಟಿಸಿದರೆ ಆಯಾ ಪ್ರಸ್ತಾರಭೇದಗಳಲ್ಲಿಯೂ, ಅಥವಾ ಇನ್ನೂ ಎರಡು ಅನನ್ಯಗಣಗಳನ್ನು ಪಲ್ಲಟಿಸಿದರೆ ಆಯಾ ಚತುರಾಜಾತಿಯ ಭೇದಗಳಲ್ಲಿಯೂ ಅಂತರ್ಭಾವವನ್ನು ಪಡೆಯುವುದಿಲ್ಲವೆ ? ಸಂರ. ಹಾಗೂ ನಂತರದ ಸಂಗೀತಶಾಸ್ತ್ರಗ್ರಂಥಗಳು ಈ ವಿರೋಧವನ್ನು ಗಮನಿಸಿಲ್ಲ ಅಥವಾ ಸಮನ್ವಯಿಸಲು ಯತ್ನಿಸದೆ ಮೌನತಾಳಿವೆ.

**ಮಾತ್ರೈಲಾ** : ಮಾತ್ರಾಗಣಗಳಿಂದ ರಚಿತವಾದ ಏಳೆಗೆ ಮಾತ್ರೈಲಾ ಎಂದು ಹೆಸರು. ಇದು ಪ್ರಾಕೃತಗಣಗಳಾದ ಭಗಣ (ಗಗಗ), ಪಗಣ (ಗಗಲ), ಚಗಣ (ಗಗ), ತಗಣ (ಗಲ), ದಗಣ (ಗ)ಗಳನ್ನೂ ಅವುಗಳ ಪ್ರಸ್ತಾರಭೇದಗಳನ್ನೂ ಬಳಸಿಕೊಳ್ಳುತ್ತದೆ (ಗ=ಗುರು, ಲ=ಲಘು). ಇವಲ್ಲದೆ ರತಿ, ಕಾಮ ಮತ್ತು ಬಾಣಗಳೆಂಬ ಮೂರು ಗಣಗಳನ್ನು ವಿಶೇಷವಾಗಿ ಉಪಯೋಗಿಸಿಕೊಳ್ಳಲಾಗುತ್ತದೆ. ಇವುಗಳಿಗೆ ಬ್ರಹ್ಮ, ವಿಷ್ಣು, ರುದ್ರ ಎಂಬ ನಾಮಾಂತರಗಳೂ ತೆಲುಗಿನಲ್ಲಿ ಸೂರ್ಯ, ಚಂದ್ರ, ಇಂದ್ರ ಎಂಬ ನಾಮಾಂತರಗಳೂ ಇವೆ. ರತಿ, ಕಾಮ, ಬಾಣ ಎಂಬ ಗಣಗಳನ್ನು ಮತಂಗನೇ ಹೇಳುತ್ತಾನೆ (ಬೃದೇ. ೪೫೮–೪೬೫ : ೧೪೯–೧೫೦). ಇವುಗಳನ್ನು ಸಂಸ್ಕೃತದ ಛಂದಸ್ಸುಗಳಿಂದ ಪಡೆದುಕೊಂಡುದಾಗಿ ಸಂಗೀತಲಾಕ್ಷಣಿಕರು ಹೇಳಿಕೊಳ್ಳುತ್ತಾರೆ: ರತಿಯು ಅತ್ಯುಕ್ತಾ ಎಂಬ ಎರಡಕ್ಷರಗಳುಳ್ಳ ಛಂದೋಪ್ರಕಾರದ ನಾಲ್ಕು ಪ್ರಸ್ತಾರಗಳನ್ನು—ಗಗ, ಲಗ, ಗಲ, ಲಲ—ಒಳಗೊಂಡಿದೆ. ಕಾಮಗಣವು ಪಾದವೊಂದರಲ್ಲಿ ಮೂರು ಅಕ್ಷರಗಳಿರುವ ಮಧ್ಯಾಛಂದಸ್ಸಿನ ಪ್ರಸ್ತಾರಗಳಾದ ಮ, ಯ, ರ, ಸ, ತ, ಜ, ಭ, ನ ಎಂಬ ಎಂಟು ಗಣಗಳನ್ನು ಒಳಗೊಂಡಿದೆ. ಬಾಣಗಣವು ಪ್ರತಿಪಾದದಲ್ಲಿಯೂ ನಾಲ್ಕು ಅಕ್ಷರಗಳಿದ್ದು ಗಗಗಗದಿಂದ ಹಿಡಿದು ಲಲಲಲ ವರೆಗಿನ ಹದಿನಾರು ಪ್ರತಿಷ್ಠಾಛಂದೋಪ್ರಸ್ತಾರಗಳನ್ನು ಒಳಗೊಂಡಿದೆ–ಗಗಗಗ ಲಗಗಗ ಗಲಗಗ ಗಗಲಗ ಗಗಗಲ ಲಲಗಗ ಲಗಲಗ ಲಗಗಲ ಗಲಲಗ ಗಗಲಲ ಗಲಗಲ ಲಲಲಗ ಗಲಲಲ ಲಗಲಲ ಲಲಗಲ ಲಲಲಲ. ಈ ಮೂರೂ ಗಣಗಳಲ್ಲಿ ಲಘುವಿನಿಂದ ಮೊದಲಾಗುವ ಪ್ರಸ್ತಾರಗಳಿಗೆ ಆದಿಯಲ್ಲಿ ಒಂದೊಂದು ಲಘುವನ್ನು ಹೆಚ್ಚಾಗಿ ಸೇರಿಸಿಕೊಳ್ಳಬೇಕೆಂಬುದು ಸಂಗೀತಶಾಸ್ತ್ರೀಯ ಪರಿಸಂಖ್ಯೆ.

ಹೀಗೆ ಮಾತ್ರಾಗಣಗಳನ್ನು ಪರಿಚಯಿಸಿಕೊಂಡ ಮೇಲೆ ಮಾತ್ರೈಲಾಗಳನ್ನು ಪರಿಶೀಲಿಸಬಹುದು. ಇವು ರತಿಲೇಖಾ, ಕಾಮಲೇಖಾ, ಬಾಣಲೇಖಾ ಮತ್ತು ಚಂದ್ರಲೇಖಾ ಎಂಬ ನಾಲ್ಕು ಬಗೆ. ಮೊದಲನೆಯ ಮೂರರ ಹೆಸರುಗಳು ಸ್ವನಾಮಕಗಣಗಳಿಂದ ಬಂದಿವೆ. ಚಂದ್ರಲೇಖೆಯು ಈ ಗಣಗಳ ಬೆರಕೆಯಿಂದಾಗುತ್ತದೆ. ಈ ನಾಲ್ಕರಲ್ಲಿ ಪ್ರತಿಯೊಂದರಲ್ಲಿಯೂ ಮೂರು ಮೂರು ಪಾದಗಳು. ಇವುಗಳಲ್ಲಿ ಮಾತ್ರಾಸಂಖ್ಯೆಯ ವಿನಿಯೋಗವು ಹೀಗಿದೆ : ರತಿಲೇಖಾ ೧೧ ೧೧ ೧೦, ಕಾಮಲೇಖಾ ೨೨ ೨೨ ೨೦, ಬಾಣಲೇಖಾ ೩೩ ೩೩ ೩೦, ಚಂದ್ರಲೇಖಾ ೪೪ ೪೪ ೪೦. ಸಂಚೂ. ಸಂರ.ಗಳು ಬೇರೆ

ಇಂದುಮತೀ, ಜ್ಯೋತಿಷ್ಮತೀ, ನಭಸ್ವತೀ,
ವಾದ ನಾಲ್ಕು ಮಾತ್ರೈಲಾಗಳಿವೆ. ಇವುಗಳ ರಚನೆ ಹೀಗಿದೆ : ಇಂದುಮತೀ—
ಜ್ಯೋತಿಷ್ಮತೀ—೫ಪ.೧ಚ. ನಭಸ್ವತೀ—ಭ ೩ಚ ಪಭ. ವಸುಮತೀ—ದಪಚ ೩ಪ ಭತ.

ಅರ್ಜುನನ ಮತಾನುಸಾರವಾಗಿ ನಾದಾವತೀ ಮೊದಲಾದ ನಾಲ್ಕು ಶುದ್ಧಗಣೈಲಾಗಣ್ಣೇ ಅವುಗಳಲ್ಲಿರುವ ವರ್ಣಗಣಗಳನ್ನು ಒಡೆದರೆ ಬರುವ ಮಾತ್ರಾಸಂಖ್ಯೆಯನ್ನು ನಿರ್ದಿಷ್ಟವಾದ ಭಪಚತದ ಗಣಗಳ ಸಂಯೋಜನೆಯಿಂದ ಪುನಾರಚಿಸಿಕೊಂಡರೆ ಅದೇ ಹೆಸರಿನ ಮಾತ್ರೈಲಾ ದೊರೆಯುತ್ತದೆ. ಹೀಗೆ ನಾದಾವತೀ ಮಾತ್ರೈಲಾದಲ್ಲಿ (೨೩ ಮಾತ್ರೆಗಳು) ೫ಚ—೩ (ಬಿಡಿ) ಲಘುಗಳೂ ಹಂಸಾವತೀ ಮಾತ್ರೈಲಾದಲ್ಲಿ (೨೯ಮಾತ್ರೆಗಳು) ೭ಚ—೧ ಗಳು) ೭ಚ—೧ಲಘುಗಳೂ ನಂದಾವತೀ ಮಾತ್ರೈಲಾದಲ್ಲಿ (೨೯ಮಾತ್ರೆಗಳು) ೮ಚ—೩(ಬಿಡಿ)ಲಘುಗಳೂ ಭದ್ರಾವತೀ ಮಾತ್ರೈಲಾದಲ್ಲಿ (೩೫ ಮಾತ್ರೆಗಳು) ೮ಚ—೩(ಬಿಡಿ)ಲಘುಗಳೂ ಇರುತ್ತವೆ. ಇಲ್ಲಿ ಹಂಸಾವತೀ ಮತ್ತು ನಂದಾವತೀ ಮಾತ್ರೈಲಾಗಳೆರಡರಲ್ಲಿಯೂ ೭ಚ—೧ಲಘು ಎಂಬ ಒಂದೇ ರಚನೆಯು ಸಿದ್ಧಿಸುತ್ತದಷ್ಟೆ. ಅವುಗಳ ಪೂರ್ವ ಹಾಗೂ ಉತ್ತರ ರೂಪಗಳಲ್ಲಿ ವ್ಯತ್ಯಾಸವಿದ್ದು, ಬಹುಶಃ ಚಗಣದ ಗಗ ಲಗ ಗಲಲ ಲಲಲಲ ಎಂಬ ಪ್ರಸ್ತಾರಗಳ ವ್ಯತ್ಯಸ್ತ ಪ್ರಯೋಗದಿಂದ ಭಿನ್ನತೆಯು ಏರ್ಪಡುತ್ತದೆ.

ಅರ್ಜುನನದೇ ಇನ್ನೂ ಒಂದು ಮಾತ್ರೈಲಾವಿಧವುಂಟು. ಇವುಗಳಿಗೆ ವಿಚಿತ್ರೈಲಾ ಎಂಬ ಹೆಸರಿದ್ದು ನಾದಾವತೀ ಮೊದಲಾದವುಗಳ ಬಂಧವನ್ನು ವಿಕೃತಗೊಳಿಸುವುದರಿಂದ ಉಂಟಾಗುತ್ತವೆ : ಆಯಾ ಮಾತ್ರೈಲಾಗಳಲ್ಲಿನ ಮಾತ್ರಾಸಂಖ್ಯೆಯನ್ನು ಒಂದರಿಂದ ಐದರ ವರೆಗೆ ಇಚ್ಛೆಬಂದಂತೆ ಹೆಚ್ಚಿಸಿದರೆ ಆಯಾ ವಿಚಿತ್ರೈಲಾ ದೊರೆಯುತ್ತದೆ : ನಾದಾವತೀ ವಿಚಿತ್ರೈಲಾ : ಪಾದದಲ್ಲಿ ೨೪.೨೫.೨೬.೨೭ ಅಥವಾ ೨೮ ಮಾತ್ರೆಗಳು ; ಹಂಸಾವತೀ ವಿಚಿತ್ರೈಲಾ ಮತ್ತು ನಂದಾವತೀ ಮಾತ್ರೈಲಾ : ಪಾದದಲ್ಲಿ ೩೦,೩೧,೩೨,೩೩ ಅಥವಾ ೩೪ ಮಾತ್ರೆಗಳು ; ಭದ್ರಾವತೀ ವಿಚಿತ್ರೈಲಾ : ೩೬,೩೭,೩೮,೩೯ ಅಥವಾ ೪೦ ಮಾತ್ರೆಗಳ ಪಾದ.

ಇವುಗಳೇ ಅಲ್ಲದೆ ನಂದಿನೀ, ಚಿತ್ರಿಣೀ, ಚಿತ್ರಾ ಮತ್ತು ವಿಚಿತ್ರಾ ಎಂಬ ಮಾತ್ರೈಲಾಗಳು ಮತಾಂತರದಲ್ಲಿ ಉಂಟು. ರತಿಲೇಖೆಯೇ ಮೊದಲಾದ ಮಾತ್ರೈಲಾಗಳಲ್ಲಿ ಆಯಾ ಹೆಸರಿನ ಗಣಗಳನ್ನು ಕೈಬಿಟ್ಟು ಬೇರೆ ಯಾವುದೇ ಗಣಗಳನ್ನು ಬಳಸಿಕೊಂಡು ಪಾದದಲ್ಲಿ ಮಾತ್ರಾಸಂಖ್ಯಾನಿಯಮವನ್ನು ಉಳಿಸಿಕೊಂಡರೆ ಇವು ಸಿದ್ಧಿಸುತ್ತವೆ. ಹೀಗೆ ರತಿಲೇಖೆಯಲ್ಲಿ ೧೧, ೧೧, ೧೦ ಎಂಬ ಮಾತ್ರಾವಿನಿಯೋಗವಿದ್ದು ರತಿಯಲ್ಲದ ಬೇರೆ ಗಣಗಳನ್ನಿಟ್ಟರೆ ಅದು ನಂದಿನೀ ; ಕಾಮಲೇಖೆಯಲ್ಲಿ ಕಾಮಗಣಗಳಿಲ್ಲದೆಯೇ ೨೨ ೨೨ ೨೦ ಎಂಬ ಮಾತ್ರಾವಿನಿಯೋಗದ ಪಾದಗಳು ಏರ್ಪಟ್ಟರೆ ಚಿತ್ರಿಣೀ ; ಬಾಣಗಣರಹಿತವಾಗಿ ಅನ್ಯಗಣ ಸಂಯೋಜನೆಯಿಂದ ೩೩. ೩೩. ೩೦ ಎಂಬ ಮಾತ್ರಾವಿನಿಯೋಗವುಳ್ಳ ಬಾಣಲೇಖೆಯೇ ಚಿತ್ರಾ ಎನ್ನಿಸಿಕೊಳ್ಳುತ್ತದೆ ; ಈ ಗಣಗಳ ಬೆರಕೆಯಿರಬೇಕು ಎಂಬ ನಿಯಮವಿಲ್ಲದೆ ೪೪

೪೪ ೪೦ ಎಂಬ ಮಾತ್ರಾಸಂಖ್ಯೆಗಳನ್ನುಳ್ಳ ಪಾದಗಳನ್ನು ರಚಿಸಿದರೆ ಚಂದ್ರಲೇಖೆಯು ವಿಚಿತ್ರಾ ಎಂಬ ಹೆಸರನ್ನು ತಳೆಯುತ್ತದೆ. ಆದರೆ ಇವುಗಳಲ್ಲಿ ಒಂದು ವಿಶೇಷನಿಯಮವಿದೆ: ನಂದಿನೀ ಮತ್ತು ಚಿತ್ರಿಣಿಗಳಲ್ಲಿ ಪಾದಗಳನ್ನು ೧೧ ೧೧ ೧೦ ಎಂಬ ಮಾತ್ರಾವಿನಿಯೋಗದ ಬದಲು ೧೦ ೧೧ ೧೧ ಎಂದೂ ೨೦ ೨೨ ೨೨ ಎಂದೂ ಮಾರ್ಪಡಿಸಿಕೊಳ್ಳಬೇಕು: ಎಂದರೆ ಈ ಪಾದಗಳನ್ನು ೩–೨–೧ ಎಂಬ ಕ್ರಮದಲ್ಲಿ ಹಾಡಬೇಕು (ಸಿಂಹ. ಕಲ್ಲಿ).

ಹೀಗೆ ರತಿಯೇ ಮೊದಲಾದ ವಿಶಿಷ್ಟಗಣಗಳ ನಿಯತಪ್ರಯುಕ್ತಿಯಿಂದಲೂ, ನಾದಾವತಿಯೇ ಮೊದಲಾದ ಗಣೈಲಾಗಳನ್ನು ಏಕರೂಪವಾಗಿ ಚಗಣ ಮಾತ್ರಕ್ಕೆ ಪರಿವರ್ತಿಸಿ ಕೊಳ್ಳುವುದರಿಂದಲೂ ಇವುಗಳ ಪಾದಗಳಲ್ಲಿ ಮಾತ್ರಾಸಂಖ್ಯೆಯನ್ನು ಏಕೋತ್ತರವೃದ್ಧಿ ಒಂದರಿಂದ ಐದರವರೆಗೆ ಹೆಚ್ಚಿಸುವುದರಿಂದಲೂ ಪ್ರಾಕೃತಗಣಗಳ ಬಳಕೆಯಿಂದಲೂ ಮಾತ್ರೈಲಾಗಳಲ್ಲಿ ಗಣನಿಯಮವನ್ನು ಉಲ್ಲಂಘಿಸಿ ಮಾತ್ರಾನಿಯಮವನ್ನು ಪಾಲಿಸುವುದರಿಂದಲೂ ನಾಲ್ಕುನಾಲ್ಕರಂತೆ ಒಟ್ಟು ಇಪ್ಪತ್ತು ಮಾತ್ರೈಲಾಗಳು ದೊರೆಯುತ್ತವೆ. (ಸಂರ. ೪. ೯೪–೧೦೫ : ೨೩೯–೨೪೩).

**ವರ್ಣೈಲಾ:** ವರ್ಣೈಲಾಗಳಲ್ಲಿ ಗಣಗಳಾಗಲಿ ಮಾತ್ರೆಗಳಾಗಲಿ ಇಂತಹದು ಇಷ್ಟೇ ಇರಬೇಕೆಂಬ ನಿಯಮವಿರದೆ ಪ್ರತಿಯೊಂದು ಪಾದದಲ್ಲಿಯೂ ಇಷ್ಟೇ ವರ್ಣಗಳಿರಬೇಕೆಂಬ ನಿಯಮವು ಮಾತ್ರ ಇರುತ್ತದೆ. ಹೀಗೆ ಪ್ರತಿಯೊಂದು ಪಾದದಲ್ಲಿಯೂ ಆರರಿಂದ ಪ್ರಾರಂಭಿಸಿ ಇಪ್ಪತ್ತೊಂಬತ್ತರವರೆಗೆ (ಅದನ್ನೂ ಸೇರಿಸಿಕೊಂಡು) ವರ್ಣಗಳನ್ನು ಏಕೋತ್ತರ ವೃದ್ಧಿಯಿಂದ ಇಟ್ಟರೆ ಮುಂದೆ ಹೇಳುವ ೨೪ ವರ್ಣೈಲಾಗಳು ದೊರೆಯುತ್ತವೆ. (ಪಾದದಲ್ಲಿರಬೇಕಾದ ವರ್ಣಸಂಖ್ಯೆಯನ್ನು ಕಂಸಗಳಲ್ಲಿ ತೋರಿಸಿದೆ.)

೧. ಮಧುಕರೀ (೬) ೨. ಸುಸ್ವರಾ (೭) ೩. ಕರಣೀ (೮) ೪. ಸುರಸಾ (೯) ೫. ಪ್ರಭಂಜನೀ (೧೦) ೬. ಮದನವತೀ (೧೧) ೭. ಶಶಿನೀ (೧೨) ೮. ಪ್ರಭಾವತೀ (೧೩) ೯. ಮಾಲತೀ (೧೪) ೧೦. ಲಲಿತಾ (೧೫) ೧೧. ಭೋಗವತೀ (೧೬) ೧೨. ಕುಸುಮಾವತೀ (೧೭). ೧೩. ಕಾಂತಿಮತೀ (೧೮) ೧೪. ಕುಮುದಿನೀ (೧೯) ೧೫. ಕಲಿಕಾ (೨೦) ೧೬. ಕಮಲಾ (೨೧) ೧೭. ವಿಮಲಾ (೨೨) ೧೮. ನಲಿನೀ (೨೩) ೧೯. ಕಾಲಿಂದೀ (೨೪) ೨೦. ವಿಪುಲಾ (೨೫) ೨೧. ವಿದ್ಯುಲ್ಲತಾ (೨೬) ೨೨. ವಿಶಾಲಾ (೨೭) ೨೩. ಸರಲಾ (೨೮) ೨೪. ತರಲಾ (೨೯).

ಇವುಗಳಲ್ಲಿ ಕಡೆಯ ಹನ್ನೆರಡು (ಕಾಂತಿಮತೀ...ತರಲಾ) ಮಾತ್ರೈಲಾಗಳೂ ಆಗುತ್ತವೆಂದು ಕೆಲವು ಲಾಕ್ಷಣಿಕರ ಮತ. ಹಾಗಿದ್ದರೆ ಅವಕ್ಕೆ ವರ್ಣಮಾತ್ರೈಲಾ ಎಂಬ ಹೆಸರು ಬರುತ್ತದೆ. ವರ್ಣಸಂಖ್ಯಾನಿಯಮವನ್ನು ಪಾಲಿಸುವುದರಿಂದ ಅವು ವರ್ಣೈಲಾಗಳೂ ಹೌದು. ಮಂಠಾದಿ ತಾಳಗಳಲ್ಲಿ ಪ್ರಯುಕ್ತವಾಗುವುದರಿಂದ ಆಯಾ ತಾಳಗಳಲ್ಲಿರುವ ಮಾತ್ರಾಸಂಖ್ಯೆಗೂ ಅನುಸಾರವಾಗಿರುತ್ತವೆ ; ಆದುದರಿಂದ ಮಾತ್ರೈಲಾಗಳೂ ಹೌದು. ಇಲ್ಲಿ ಸಂರ.ದ ಒಂದು ವಿಶೇಷೋಕ್ತಿಯಿದೆ (೪.೧೧೧–೧೧೨ : ೨೪೫) :

ತತ್ರಾಂತ್ಯಾ ವರ್ಣಮಾತ್ರೈಲಾ ದ್ವಾದಶೇತ್ಯಪರೇ ಜಗುಃ ।
ಮಂಠದ್ವಿತೀಯಕಂಕಾಲಪ್ರತಿತಾಲೇಷು ಕಶ್ಚನ ।
ತಾಲಸ್ತಾಸು ವಿಧಾತ್ಯವ್ಯೋ ರಾಗಾದಿ ನಿಯಮೋ ನ ತು ।

ಇದರ 'ತಾಸು' ಎಂಬುದಕ್ಕೆ ನೈಕಟ್ಯದಿಂದ ವರ್ಣಮಾತ್ರೈಲಾಗಳನ್ನು ಗ್ರಹಿಸಿದರೆ ಅವುಗಳಿಗೆ ಮಂಠ, ದ್ವಿತೀಯ, ಕಂಕಾಲ ಅಥವಾ ಪ್ರತಿತಾಳಗಳಲ್ಲಿ ಒಂದನ್ನು ಅನ್ವಯಿಸಬೇಕು. ಅವುಗಳಲ್ಲಿ ನಾದಾವತಿಯೇ ಮೊದಲಾದ ಶುದ್ಧೈಲಾಗಳಲ್ಲಿರುವಂತೆ ಇಂತಹದೇ ರಾಗ, ರಸ, ರೀತಿ, ವೃತ್ತಿ, ದೇವತೆ, ಜಾತಿ, ವರ್ಣ ಇತ್ಯಾದಿಯಾಗಿ ಇರಬೇಕು ಎಂಬ ನಿರ್ಯುಕ್ತಿಯಿಲ್ಲ ಎಂಬ ಅರ್ಥವು ಹೊರಡುತ್ತದೆ. ಹಾಗಲ್ಲದೆ 'ಅಪರೇ ಜಗುಃ' ಎಂಬಲ್ಲಿಗೆ ವರ್ಣಮಾತ್ರೈಲಾ ಲಕ್ಷಣವರ್ಣನವು ಮುಗಿಯಿತೆಂದು ಇಟ್ಟುಕೊಂಡರೆ 'ತಾಸು' ಎಂಬುದಕ್ಕೆ ಇಡೀ ೨೪ ವರ್ಣೈಲಾಗಳನ್ನು ಗ್ರಹಿಸಿ ಮಂಠಾದಿ ತಾಳದ ನಿರ್ಯುಕ್ತಿಯನ್ನು, ರಾಗಾದಿಗಳ ಅನಿರ್ಯುಕ್ತಿಯನ್ನು ಗ್ರಹಿಸಬೇಕು. ಕುಂಭಕರ್ಣಾದಿ ನಂತರದ ಲಾಕ್ಷಣಿಕರು ವರ್ಣಮಾತ್ರೈಲಾ ಪಕ್ಷವನ್ನೇ ಹಿಡಿಯುತ್ತಾರೆ (ಸಂರ. ೪. ೧೦೫–೧೧೩ : ೨೪೪–೨೪೫).

**ಕನ್ನಡೈಲಾ :** ಕನ್ನಡ, ತಮಿಳು, ತೆಲುಗು, ಗೌಡ, ಲಾಟ ಎಂಬ ದೇಶಭಾಷೆಗಳಲ್ಲಿ ರಚಿತವಾದರೆ ಏಳೆ ಐದು ವಿಧವಾಗಿ ದೇಶೈಲಾ ಎನ್ನಿಸಿಕೊಳ್ಳುತ್ತದೆ. ಏಳೆಯು ಸಂಸ್ಕೃತ ಮತ್ತು ಈ ಐದು ಭಾಷೆಗಳಲ್ಲಲ್ಲದೆ ಬೇರೆಯವುಗಳಲ್ಲಿ ಇರಲಿಲ್ಲ. ಇವುಗಳಲ್ಲಿ ಕರ್ನಾಟೈಲಾ ಅತ್ಯಂತ ಪ್ರಮುಖವಾದುದು ; ಕರ್ನಾಟಕದ ಲಾಕ್ಷಣಿಕರು ಮಾತ್ರವಲ್ಲದೆ ರಾಜಾಸ್ಥಾನ, ಉತ್ತರ ಪ್ರದೇಶ, ಬಂಗಾಳ, ತಮಿಳುನಾಡು ಇತ್ಯಾದಿಯಾಗಿ ಬೇರೆಡೆಯ ಎಲ್ಲ ಲಾಕ್ಷಣಿಕರು ಅದನ್ನೇ ಪ್ರಥಮವಾಗಿಯೂ ವಿವರಪೂರ್ಣವಾಗಿಯೂ ಪ್ರಧಾನವಾಗಿಯೂ ವರ್ಣಿಸಿ ಇವುಗಳನ್ನೇ ಪ್ರಕೃತಿಯಾಗಿ ಇಟ್ಟುಕೊಂಡು ಉಳಿದವುಗಳನ್ನು ಇವುಗಳ ಮೂಲಕವೇ ವರ್ಣಿಸುತ್ತಾರೆ. ಸಂಚೂ. ಸಂರ. ಮೊದಲಾದ ಪ್ರಾಮಾಣಿಕ ಪ್ರಮುಖ ಆಕರಗಳಿಂದ ಪ್ರಭಾವಿತರಾಗಿ ಅವರು ಗತಾನುಗತಿಕನ್ಯಾಯದಿಂದ ಹೀಗೆ ಮಾಡಿದ್ದರೂ ಮಾಡಿರಬಹುದು. ಸ್ವಾರಸ್ಯವೆಂದರೆ ಕನ್ನಡಿಗ ಗೋವಿಂದದೀಕ್ಷಿತನು ತಮಿಳುನಾಡಿನಲ್ಲಿ ನೆಲೆಸಿ ತಂಜಾವೂರಿನ ಮೂರು ತಲೆಮಾರುಗಳ ದೊರೆಗಳ ಪ್ರಧಾನಿಯಾಗಿದ್ದರೂ ತನ್ನ ಸಂಗೀತಸುಧೆಯಲ್ಲಿ ದ್ರಾವಿಡೈಲಾಗಳನ್ನು ಉಪಚಾರಕ್ಕೆ ಮಾತ್ರ ವರ್ಣಿಸಿ, ಕರ್ನಾಟೈಲಾಗಳನ್ನು ಕನ್ನಡೈಲಾಗಳೆಂದು ಮೊದಲ ಬಾರಿಗೆ (ಸು. ಕ್ರಿ.ಶ. ೧೬೨೦) ಕರೆದು ಅವುಗಳನ್ನು ವಿವರಪೂರ್ಣವಾಗಿ ವಿವೇಚಿಸಿದ್ದಾನೆ (೪.೩೪೬, ೩೪೭–೩೦೩ ; ೪. ೩೨೪–೩೬೦ : ೩೦೧–೩೦೪). ಸಾಮಾನ್ಯ ಲಕ್ಷಣವುಳ್ಳ ಏಳೆಯನ್ನು ಕನ್ನಡ ಭಾಷೆಯಲ್ಲಿ ಆದಿಮಧ್ಯಾಂತಾನುಪ್ರಾಸವಿರುವಂತೆ ರಚಿಸಿದರೆ ಅದೇ ಕನ್ನಡೈಲಾ ಆಗುತ್ತದೆ. ಲಾಟೈಲಾದಲ್ಲಿ ಅಂತ್ಯಪ್ರಾಸವುಳ್ಳ ಲಾಟಭಾಷಾ ಮಾತು, ಹೇರಳವಾದ ರಸಪ್ರತೀತಿ ; ಗೌಡೈಲಾದಲ್ಲಿ ಗೌಡಭಾಷೆ : ಗಮಕಪ್ರಾಸಗಳಿಲ್ಲ ; ಒಂದೇ ರಸ. ಆಂಧ್ರೈಲಾದಲ್ಲಿ ತೆಲುಗುಭಾಷೆ, ನಾನಾ ರಾಗಾಂಶ, ಪ್ರಯೋಗ, ರಸಭಾವಗಳ ಉತ್ಕಟತೆ ; ದ್ರಾವಿಡೈಲಾದಲ್ಲಿ ತಮಿಳುಭಾಷೆ, ಪ್ರಾಸವಿಲ್ಲ, ರಸಭಾವಗಳು ಅವಿರಳವಾಗಿರುತ್ತವೆ ಎಂಬ ಲಕ್ಷಣಗಳನ್ನು ಹೇಳಿವೆ (ಸಂರ. ೪.೧೨೭–೧೩೧ : ೨೫೦).

ಸಂರ.ದಲ್ಲಿ (೪.೧೧೫–೧೨೬ : ೨೪೬–೨೪೮) ಕನ್ನಡೈಲಾಗಳು ಆರು ವಿಧವೆಂದು ಹೇಳಿದೆ : 

ಕರ್ನಾಟೈಲಾದಿ ಮಧ್ಯಾಂತವರ್ತ್ಯನುಪ್ರಾಸಭೂಷಿತಾ ।
ನಾದಾವತ್ಯಾದಿಕಾ ಏವ ಕರ್ನಾಟೀರಪರೇ ವಿದುಃ ।
ಷಟ್‌ಪ್ರಕಾರತ್ವಮೇತಾಸಾಂ ವಕ್ಷ್ಯಮಾಣೈರ್ವಿಶೇಷತಃ॥ (೪.೧೨೭-೧೨೮ : ೨೪೬)

ಮುಂದಿನ ಗ್ರಂಥದಲ್ಲಿ ಐದು ಪ್ರಕಾರಗಳನ್ನು ಮಾತ್ರ ಹೇಳಿದೆ. ನಾದಾವತೀ ಮೊದಲಾದವುಗಳನ್ನು (ಮತಾಂತರದಲ್ಲಿ) ಮೊದಲನೆಯ ವಿಧವೆಂದು ಇಟ್ಟುಕೊಂಡರೆ ಮಾತ್ರ 'ಷಟ್‌ಪ್ರಕಾರತ್ವಂ ಏತಾಸಾಂ' ಎಂಬುದು ಹೊಂದುತ್ತದೆ. ಆದರೆ 'ವಕ್ಷ್ಯಮಾಣೈಃ' ಎಂಬುದರೊಡನೆ ಸಂಗತವಾಗುವುದಿಲ್ಲ. ಈ ಸಂದಿಗ್ಧತೆಯು ಅದರ ವ್ಯಾಖ್ಯಾನಕಾರರಲ್ಲಿ ಅಭಿಪ್ರಾಯಭೇದ ಮತ್ತು ಗೊಂದಲಗಳಿಗೆ ಎಡೆಮಾಡಿಕೊಟ್ಟಿದೆ.

೧. ನಾದಾವತೀ, ಹಂಸಾವತೀ, ನಂದಾವತೀ, ಭದ್ರಾವತೀ ಎಂಬ ಪ್ರಕೃತಿರೂಪದ ಶುದ್ಧ ಗಣೈಲಾಗಳೇ ಕನ್ನಡೈಲೆಗಳು. ಇವುಗಳನ್ನು ಕನ್ನಡದಲ್ಲೇ ರಚಿಸಿ ಹಾಡಬೇಕು.

೨. ಇವುಗಳಲ್ಲೇ ಗಣ, ಪ್ರಾಸ, ವಿನಿಯೋಗ ಮುಂತಾದವುಗಳ ಲಕ್ಷಣಾಂತರವನ್ನು ಏರ್ಪಡಿಸಿದರೆ, ಕನ್ನಡದಲ್ಲಿ ರಚಿಸಿದರೆ, ಕನ್ನಡೈಲೆಗಳು ಸಿದ್ಧಿಸುತ್ತವೆ. ಇವು ನಾಲ್ಕು ವಿಧ:

ಅ) ನಾದಾವತೀ ಸುಲೇಖಾ : ಬ್ರಹ್ಮನ ಪೂರ್ವಮುಖದಿಂದ ಹುಟ್ಟಿದೆ; ಗಣಾಧಿದೇವತೆ ಶಂಭು. ಗಣವಿನಿಯೋಗವು ಹೀಗಿದೆ : ೧ನೆಯ ಪಾದದಲ್ಲಿ ಎರಡು ಕಾಮ, ಕಡೆಯಲ್ಲಿ ರತಿ ; ಆದ್ಯಂತಾನುಪ್ರಾಸ ; ೨ನೆಯ ಪಾದ–ಅದೇ ; ೩ನೆಯ ಪಾದ–ನಾಲ್ಕು ಕಾಮ, ಕೊನೆಯಲ್ಲಿ ರತಿ, ಅದಿಮಧ್ಯಪ್ರಾಸ : ರತಿಯು ಅಂತ್ಯ ಗಣವಾದುದರಿಂದ ಸುಲೇಖಾ ಎಂಬ ಹೆಸರು. (ಸುಲೇಖಾ=ರತಿಲೇಖಾ. ಕಲ್ಲಿ.)
(ನಾದಾವತೀ–೫ಭ, ೧ನ)

ಆ) ಹಂಸಾವತೀ ಕಾಮಲೇಖಾ : ಬ್ರಹ್ಮನ ದಕ್ಷಿಣ ಮುಖದಿಂದ ಹುಟ್ಟಿದೆ, ಸಾವಿತ್ರಿ ಏಲಾಧಿದೇವತೆ, ವಿಷ್ಣುವು ಗಣಾಧಿದೇವತೆ, ಒಂದನೆಯ ಪಾದ-ನಾಲ್ಕು ಕಾಮ, ಆದಿಮಧ್ಯಪ್ರಾಸ, ಎರಡನೆಯ ಪಾದ–ಅದೇ ; ಮೂರನೆಯ ಪಾದ–ಎಂಟು ಕಾಮ ; ಆದಿಮಧ್ಯಾಂತ ಪ್ರಾಸ (ಹಂಸಾವತೀ–೫ರ,೧ಸ ; ಕಾಮಲೇಖೆ–ಕಾಮಗಣಗಳಿಂದಾದ ೨೨,೨೨,೨೦ ಎಂಬ ಮೂರು ಪಾದಗಳು)

ಇ) ನಂದಾವತೀ ಸ್ವರಲೇಖಾ : ಬ್ರಹ್ಮನ ಪಶ್ಚಿಮ ಮುಖದಲ್ಲಿ ಹುಟ್ಟಿದೆ: ಗಾಯತ್ರಿ ಏಲಾಧಿದೇವತೆ, ಬ್ರಹ್ಮನು ಗಣಾಧಿದೇವತೆ. ಮೂರು ಪಾದಗಳಲ್ಲಿ ಪ್ರತಿಯೊಂದರಲ್ಲಿಯೂ ನಾಲ್ಕು ನಾಲ್ಕು ಕಾಮಗಣಗಳು, ಮಧ್ಯಾನುಪ್ರಾಸ (ನಂದಾವತೀ ೫ತ,೧ಜ).

ಈ) ಭದ್ರಾವತೀ ಭದ್ರಲೇಖಾ : ಬ್ರಹ್ಮನ ಉತ್ತರ ಮುಖದಲ್ಲಿ ಹುಟ್ಟಿದೆ. ಗಂಧರ್ವನು ಏಲಾಧಿದೇವತೆ, ಗಣೇಶನು ಗಣಾಧಿದೇವತೆ : ಮೊದಲನೆಯ

ಮತ್ತು ಎರಡನೆಯ ಪಾದಗಳಲ್ಲಿ ಆರು ಕಾಮ, ಕೊನೆಯಲ್ಲಿ ಬಾಣ ; ಮೂರನೆಯ ದರಲ್ಲಿ ಎಂಟು ಕಾಮಗಳು (ಭದ್ರಾವತೀ ೫ಮ.೧ಯ ; ಬಾಣಲೇಖೆ : ಬಾಣಗಣ ಗಳಿರುವ ೩೩,೩೩,೩೦ ಎಂಬ ಮಾತ್ರಾಸಂಖ್ಯೆಯುಳ್ಳ ಮೂರು ಪಾದಗಳು) ಹೀಗೆ ಎರಡನೆಯ ಪ್ರಕಾರದಲ್ಲಿ ನಾಲ್ಕು ಕನ್ನಡ್ಡೈಲಾಗಳಿವೆ.

೩. ಛಂದಸ್ವತೀ : ೨(ಅ–ಈ)ಗಳಲ್ಲಿ ವರ್ಣಿಸಿರುವ ನಾಲ್ಕು ಭೇದಗಳಲ್ಲಿ ಪ್ರತಿಯೊಂದರ ಮೂರುಪಾದಗಳಲ್ಲಿಯೂ ೫ ಕಾಮ-೧ರತಿ, ಕೊನೆಯಲ್ಲಿ ಕಾಮ ಎಂಬ ವಿನ್ಯಾಸವಿದ್ದರೆ ರತಿಲೇಖಾಛಂದಸ್ವತೀ ಮುಂತಾದ ನಾಲ್ಕು ಕನ್ನಡ್ಡೈಲಾ ಛಂದಸ್ವತೀಗಳು ಹುಟ್ಟುತ್ತವೆ (ಕಲ್ಲಿ.) ನಾದಾವತೀ ಕರ್ನಾಟೈಲಾಗಳಿಗೆ ಪೂರ್ವೋಕ್ತಗಣವಿನ್ಯಾಸವನ್ನು ಅನ್ವಯಿಸಿದರೆ ಆಯಾ ಛಂದಸ್ವತೀ ಪ್ರಭೇದವು ಹುಟ್ಟುತ್ತದೆ (ಸಿಂಹ.) ; ಇವುಗಳಲ್ಲಿ ನಾಲ್ಕನೆಯ ಪಾದವೂ ಇದ್ದು ಅದು ಇತರ ಮೂರು ಪಾದಗಳ ಲಕ್ಷಣವನ್ನೇ ಪಡೆದಿರುತ್ತದೆ.

೪. ಏಲಾಭಾಸಾ : (೩)ರಲ್ಲಿ ನಿರೂಪಿಸಿರುವ ಛಂದಸ್ವತೀಗಳಲ್ಲಿ ಬರುವ ಗಣ ಮತ್ತು/ಅಥವಾ ಮಾತ್ರೆಗಳಲ್ಲಿ ಹೆಚ್ಚು ಅಥವಾ ಕಡಿಮೆ ಮಾಡಿದರೆ ಅವುಗಳ ಆಭಾಸ ರೂಪವಾದ ನಾಲ್ಕು ಕನ್ನಡ್ಡೈಲಾಗಳು ಉದಯಿಸುತ್ತವೆ.

೫. ಶಿಖಾಪದ : ಛಂದಸ್ವತೀ ಏಲಾಗಳಲ್ಲಿ ಪ್ರತಿಯೊಂದು ಪಾದದ ಕೊನೆಯಲ್ಲಿ ಕಾಮಗಣವಿದೆಯೆಂದು ಹೇಳಿದೆಯಷ್ಟೆ. ಇವುಗಳ ಆಭಾಸಗಳಲ್ಲಿ ಗಣಗಳನ್ನೂ ಮಾತ್ರೆಗಳನ್ನೂ ಹೆಚ್ಚಿಸಬಹುದು ಅಥವಾ ಕಡಿಮೆ ಮಾಡಬಹುದು. ಹೀಗಾದಾಗ ಅವುಗಳ ಪಾದಾಂತ್ಯಗಳಲ್ಲಿರುವ ಕಾಮಗಣವು ವ್ಯತ್ಯಾಸವಾಗಿ ಬೇರೆಯದೇ ಮಾತ್ರಾಗಣ ವಿನ್ಯಾಸವು ಫಲಿಸಬಹುದು. ಆಗ ಪಾದಪ್ರಮಾಣವನ್ನು ಸರಿಪಡಿಸಿಕೊಳ್ಳಲು ಇನ್ನೊಂದು ಪದವನ್ನು ಸೇರಿಸಿಕೊಳ್ಳಬಹುದು. ಇದಕ್ಕೆ ಶಿಖಾಪದವೆಂದು ಸಂಜ್ಞೆ. ಹೀಗೆ ಶಿಖಾಪದವಿದ್ದರೆ ಏಳೆಯ ಹನ್ನೆರಡನೆಯ (ಉದ್ಗ್ರಾಹದ ಮೂರನೆಯ ಪಾದದ ಕೊನೆಯಲ್ಲಿರುವ) ಉಚಿತವೆಂಬ ಪದದ ನಂತರ ಮೇಲಾಪಕವನ್ನು ಹಾಡಲಾಗದು ; ಶಿಖಾಪದದ ನಂತರವೇ ಮೇಲಾಪಕ, ಧ್ರುವ ಮತ್ತು ಆಭೋಗಗಳನ್ನು ಹಾಡಬೇಕು. ಹೀಗೆ ಒಂದೊಂದು ಏಲಾಭಾಸಕ್ಕೂ ಒಂದೊಂದರಂತೆ ಒಟ್ಟು ನಾಲ್ಕು ಶಿಖಾಪದ ಕನ್ನಡ್ಡೈಲೆಗಳಿವೆ. ಈ ಐದು ಪ್ರಕಾರಗಳನ್ನೂ ಕೂಡಿದರೆ ಒಟ್ಟು ಇಪ್ಪತ್ತು ಕನ್ನಡ್ಡೈಲೆಗಳಾಗುತ್ತವೆ.

೬. ಮೇಲೆ ಹೇಳಿದ ಇಪ್ಪತ್ತೂ ವರ್ಣಕಗಳು, ಎಂದರೆ ವರ್ಣನಾಪ್ರಧಾನವಾದ ಮಾತುಗಳನ್ನುಳ್ಳವುಗಳು. ಆರನೆಯ ಪ್ರಕಾರವು ವಸ್ತ್ವೈಲಾ. ಇದರಲ್ಲಿ ನಾಲ್ಕು ಪಾದಗಳಿರುತ್ತವೆ. ಈ ಲಕ್ಷಣವು ಛಂದಸ್ವತಿಗೂ ಉಂಟು (ಸಂರ. ೪.೧೯ : ೨೫೦) ಮೇಲೆ ಹೇಳಿರುವ ಐದು ಪ್ರಕಾರಗಳಲ್ಲಿ ಮೊದಲನೆಯ ಮೂರು (ಅಥವಾ ಎರಡು) ಪಾದಗಳಿಗೆ ಯಾವ ಲಕ್ಷಣಗಳನ್ನು ಹೇಳಿದೆಯೋ ಅದೇ ಲಕ್ಷಣಗಳಿರು

ವಂತೆ ನಾಲ್ಕನೆಯ ಪಾದವನ್ನು ರಚಿಸಿದರೆ ಅಂತಹ ಏಳೆಯು ಛಂದಸ್ವತೀ ಎಂಬ ಸಂಜ್ಞೆಯನ್ನು ಪಡೆಯುತ್ತದೆ. ಇದರ ನಾಲ್ಕು ಪಾದಗಳಲ್ಲಿ ಮೊದಲನೆಯ ಎರಡು ಪ್ರಾಸರಹಿತವೂ ಮೂರನೆಯದು ಪ್ರಾಸಸಹಿತವೂ, ಧ್ರುವ ಮತ್ತು ಆಭೋಗ ಖಂಡಗಳೂ ಪ್ರಾಸಸಹಿತವೂ ಆಗಿದ್ದರೆ ಮತ್ತು ಎಲ್ಲಾ ಪಾದಗಳಲ್ಲಿಯೂ ನಾಲ್ಕು ನಾಲ್ಕು ಯತಿಗಳೂ ಇದ್ದರೆ ಅದು ವಸ್ತು-ಏಳೆ. ಮೇಲೆ ಹೇಳಿದ ಇಪ್ಪತ್ತು ವರ್ಣಕಗಳಿಗೂ ಪರಸ್ಪರವಾದ ಒಂದೊಂದು ವಸ್ತ್ವೇಳೆಯು ಇರುವುದರಿಂದ ಕನ್ನಡದ ಏಳೆಗಳ ಒಟ್ಟು ಸಂಖ್ಯೆಯು ನಲವತ್ತು. ವರ್ಣೈಲಾಗಳಲ್ಲಿರುವಂತೆಯೇ ಇವುಗಳಲ್ಲಿಯೂ ರಾಗ, ರಸ, ರೀತಿ, ವೃತ್ತಿ, ದೇವತೆ ಮುಂತಾದ ನಿರುಕ್ತಿಯಿಲ್ಲ.

ಉಳಿದ ಲಾಟೈಲಾ, ದ್ರಾವಿಡೈಲಾ, ಅಂಧ್ರೈಲಾ ಮತ್ತು ಗೌಡೈಲಾಗಳಲ್ಲಿಯೂ ಹೀಗೆಯೇ ತಲಾ ನಲವತ್ತು ಅವಾಂತರ ಭೇದಗಳಿವೆ. ಮೇಲ್ಕಂಡ ವಿವೇಚನೆಯಿಂದ ಸಂಗೀತಶಾಸ್ತ್ರದಲ್ಲಿ ನಿರೂಪಿಸಿರುವ ಏಳೆಯು ನಾಗವರ್ಮಾದಿಗಳು ವರ್ಣಿಸಿರುವ ಏಳೆಗಿಂತ ಭಿನ್ನವೆಂಬುದು ಸ್ಪಷ್ಟವಾಗುತ್ತದೆ.

## ತ್ರಿಪದಿ

ಕನ್ನಡದಲ್ಲಿ ತ್ರಿಪದಿಯ ಪ್ರಥಮೋಪಲಬ್ಧಿಯಿರುವುದು ಬಾದಾಮಿಯ ತಟ್ಟುಕೋಟೆ ಶಾಸನದಲ್ಲಿ (ಸು. ೭೦೦). ಅದರ ಪ್ರಥಮ ಲಕ್ಷಣೋಕ್ತಿಯು ದೊರೆಯುವುದು ನಾಗವರ್ಮನ ಛಂದೋಂಬುಧಿಯಲ್ಲಿ (೫.೧೦), ನಂತರ ಜಯಕೀರ್ತಿಯ ಛಂದೋನುಶಾಸನದಲ್ಲಿ (೭.೯). ಅದರ ಲಕ್ಷಣವು ಮೂರು ಪಾದಗಳಲ್ಲಿ ಒಟ್ಟು ೧೧ಗಣಗಳೆಂದೂ ಇವುಗಳ ಪೈಕಿ ೬ನೆಯ ಹಾಗೂ ೧೧ನೆಯ ಗಣವು ಬ್ರಹ್ಮ (=ರತಿ), ಉಳಿದವುಗಳು ವಿಷ್ಣು (=ಮನ್ಮಥ). ಕನ್ನಡ ಛಂದಃಶಾಸ್ತ್ರಕಾರರು ತ್ರಿಪದಿಯಲ್ಲಿ ಚಿತ್ರಾ, ವಿಚಿತ್ರಾ ಎಂಬ ಎರಡು ಭೇದಗಳನ್ನು ಗ್ರಹಿಸಿ, ಮೊದಲನೆಯದು ಮೇಲೆ ಹೇಳಿದ ತ್ರಿಪದೀಸಾಮಾನ್ಯ ಲಕ್ಷಣವುಳ್ಳದ್ದೆಂದೂ ಎರಡನೆಯದರಲ್ಲಿ ಹನ್ನೊಂದನೆಯ (ಕೊನೆಯ) ಗಣವು ವಿಷ್ಣುವಿನ ಬದಲು ರುದ್ರವಾಗಿರುತ್ತದೆಂದೂ ಹೇಳುತ್ತಾರೆ ; ಜಯಕೀರ್ತಿಯು ಚಿತ್ರಾತ್ರಿಪದಿಯಲ್ಲಿ ೭ನೆಯ ಮತ್ತು ೧೧ನೆಯ ಗಣಗಳ ಮೊದಲಿನಲ್ಲಿ ಲಘುವಿರಬೇಕೆಂಬ ಅಧಿಕೋಕ್ತಿಯನ್ನು ಸೇರಿಸುತ್ತಾನೆ ; ಅಂತೆಯೇ ವಿಚಿತ್ರಾತ್ರಿಪದಿಯಲ್ಲಿ ೧೧ನೆಯ ಗಣವು ಗುರ್ವಾದಿಯಾಗಿರುತ್ತದೆ ಎಂದೂ ಹೇಳುತ್ತಾನೆ ; ಚಿತ್ರೆಯಲ್ಲಿ ಒಟ್ಟು ೬೨ ಮಾತ್ರೆಗಳು (ಹೆಚ್ಚು ಕಡಿಮೆಯೂ ಇರಬಹುದು), ತ್ರಿಪದಿಯಲ್ಲಿ ಬರಿಯ ಲಘುಗಳೇ ಇದ್ದರೆ ೪೨ ಮಾತ್ರೆಗಳ ಪ್ರಮಾಣವಾಗುತ್ತದೆ, ಯತಿ ಇರುತ್ತದೆ ; ತ್ರಿಪದಿಯ ಎಲ್ಲ ಅಕ್ಷರಗಳೂ ಲಘುವಾಗುವುದೂ ಸಾಧ್ಯವಿಲ್ಲ, ಗುರುಗಳಾಗುವುದೂ ಸಾಧ್ಯವಿಲ್ಲ (೭.೧೧,೧೨,೧೩). ತ್ರಿಪದಿಯ ಇತಿಹಾಸದಲ್ಲಿ ಈ ಮಾತ್ರಾಪರಿಮಾಣವು ಮುಖ್ಯವೂ ಆಗಲಿಲ್ಲ, ನಿಯಮವೂ ಆಗಲಿಲ್ಲ, ತ್ರಿಪದಿಯು ಶುದ್ಧ ಕನ್ನಡ ಛಂದೋಬಂಧ ; ಅದು ಸುಮಾರು ೧೩೦೦ ವರ್ಷಗಳಿಂದ ಶಾಸನಗಳಲ್ಲಿಯೂ

ಕಾವ್ಯಗ್ರಂಥಗಳಲ್ಲಿಯೂ, [illegible] ಜನಪದದಲ್ಲಿಯೂ ಹೇರಳವಾಗಿ ದೊರೆಯುತ್ತದೆ: ಲಕ್ಷಣೋಕ್ತಿಗೆ ಅಪವಾದರೂಪದಲ್ಲಿ ಗಣಪರ್ಯಾಯವೇ ಮೊದಲಾದ ವ್ಯತ್ಯಾಸಗಳೂ ಅವಿರಳವಾಗಿಯೇ ಇವೆ. ಇದೆಲ್ಲದರ ಸುದೀರ್ಘ, ಪಾಂಡಿತ್ಯಪೂರ್ಣ ವಿವೇಚನೆಯನ್ನು ಟಿ. ವಿ. ವೆಂಕಟಾಚಲಶಾಸ್ತ್ರಿಯವರ ಕನ್ನಡ ಛಂದಃಸ್ವರೂಪದಲ್ಲಿ (:೩೮೪–೪೨೫) ಕಾಣಬಹುದು.

ಸಂಗೀತಶಾಸ್ತ್ರಕಾರರನ್ನೂ ಒಳಗೊಂಡು ಸಂಸ್ಕೃತಛಂದಃಶಾಸ್ತ್ರಜ್ಞರು ತ್ರಿಪದಿಯನ್ನು ನಾಲ್ಕು ಪಾದಗಳ ಗೇಯ ಪ್ರಬಂಧವನ್ನಾಗಿ ಲೆಕ್ಕಿಸಿಕೊಂಡಿದ್ದಾರೆ: ವಿ ವಿ। ವಿ ವಿ। ವಿ ಬ್ರ ವಿ ವಿ। ವಿ ಬ್ರ ವಿ। (ವಿ=ವಿಷ್ಣು ಅಥವಾ ಕಾಮ, ಬ್ರ=ಬ್ರಹ್ಮ ಅಥವಾ ರತಿ). ಆದರೆ ಮೊದಲನೆಯ ಎರಡು ಪಾದಗಳನ್ನು ಒಂದು ಘಟಕವನ್ನಾಗಿ ಪರಿಭಾವಿಸುವುದು ರೂಢಿಯಲ್ಲಿದೆ. ತೆಲುಗು ಛಂದಃಶಾಸ್ತ್ರಕಾರನಾದ ಕವಿಜನಾಶ್ರಯಕಾರನು 'ತ್ರಿಪದ'ವನ್ನು ಇಂ ಇಂ ಇಂ ಇಂ। ಇಂ ಸೂ ಇಂ। ಇಂ ಇಂ ಸೂ। ಎಂದೂ ಅಪ್ಪಕವೀಯದಲ್ಲಿ ಇಂ ಇಂ ಇಂ ಇಂ ಇಂ। ಇಂ ಇಂ ಸೂ ಇಂ ಇಂ ಸೂ। ಎಂದೂ ಸಂದೇಹಾಸ್ಪದವಾಗಿ ವರ್ಣಿಸಿದೆ (ಕನ್ನಡಛಂದಃಸ್ವರೂಪ : ೩೯೧). ಇಲ್ಲಿ ಇಂ=ಇಂದ್ರಗಣ, ಸೂ=ಸೂರ್ಯಗಣ. ಮೇಲ್ಕಂಡ ೨ ೨ ೪ ೩ ಎಂಬ ಗಣವಿನಿಯೋಗವು ಅಚಿಂ (೪.೧೬.೨೭೮, ೨೭೯ : ೩೦), ಸಂಚೂ. (:೫೧), ಸಂರ. (೪.೨೬೮–೨೭೦ : ೩೧೨–೩೧೩)ಗಳಲ್ಲಿದೆ. ಬೃದೇ.ಯಲ್ಲಿ ತ್ರಿಪದೀಷಟ್ಪದಿಗಳನ್ನು ಪ್ರಬಂಧೋದ್ದೇಶಕ್ರಮದಲ್ಲಿ (೩೮೬ : ೧೪೨) ಹೇಳಿದೆ: ಆದರೆ ಲಕ್ಷಣಭಾಗದಲ್ಲಿ ಗ್ರಂಥಪಾತವಿದೆ. ತ್ರಿಪದಿಯ ಗಾನಕ್ರಮದಲ್ಲಿ, ವಿಶೇಷವಾಗಿ ಜಾನಪದ ತ್ರಿಪದಿಗಳಲ್ಲಿ (೪.೪.೩ ಎಂಬ ಗಣವಿನ್ಯಾಸವುಳ್ಳವುಗಳಲ್ಲಿ) ಮೊದಲನೆಯ ಪಾದವನ್ನು ಹಾಡಿ, ಮಧ್ಯದ ಪಾದದಲ್ಲಿ ಮೂರು ಗಣಗಳಷ್ಟನ್ನು ಹಾಡಿ, ನಂತರ ಅದನ್ನು ಸಮಗ್ರವಾಗಿ ಹಾಡಿ, ಕೊನೆಯಲ್ಲಿ ನಾಲ್ಕನೆಯ ಪಾದವನ್ನು ಹಾಡಿ ಮುಗಿಸುವ ಪದ್ಧತಿಯಿದೆಯಷ್ಟೆ. ಇದನ್ನು ಮೇಲ್ಕಂಡ ಸಂಗೀತಶಾಸ್ತ್ರೀಯ ಆಕರಗಳು ಸ್ಪಷ್ಟೋಕ್ತಿಯಲ್ಲೇ ಹೇಳಿವೆ. ಉದಾ. ಸಂರ.ದಲ್ಲಿ (೪. ೨೬೯–೨೭೦ : ೩೧೩) ಗೀತ್ವಾss ಎಂದರೆ ದ್ಯಪಾದೌ ತದನು ಕಿಂಚಿಚ್ಚೇಷಂ ತೃತೀಯಕಮ್ । ತತಃ ಸಮಗ್ರಂ ತಂ ಗೀತ್ವಾ ಚತುರ್ಥೋ ಯದಿ ಗೀಯತೇ । ತದಾ ಸ್ಯಾತ್ ತ್ರಿಪದೀ' ಎಂದು ಹೇಳಿದೆ. ಇವುಗಳಲ್ಲಿರುವ ಅಧಿಕೋಕ್ತಿಗಳನ್ನು ಹೀಗೆ ಸಂಗ್ರಹಿಸಬಹುದು: ಅಚಿಂ.ಯಲ್ಲಿ (ಉಕ್ತಸ್ಥಾನ) ಪಾದದಲ್ಲಿ ದ್ವಿತೀಯಾಕ್ಷರವು ಪ್ರಾಣ, ಎಂದರೆ ಪ್ರಾಸ, ಸ್ವರನಿಯಮವಿಲ್ಲ. ಎಂದಿದೆ. ಸ್ವರನಿಯಮವಿಲ್ಲ ಎನ್ನುವುದರಲ್ಲಿ ಒಂದು ಸ್ವಾರಸ್ಯವಿದೆ: ಸಂರ.ದಲ್ಲಿ ಸ್ವರದ ವಿಷಯವಾಗಿ ಏನನ್ನೂ ಹೇಳದಿದ್ದರೂ ಕಲ್ಲಿನಾಥನು ವ್ಯಾಖ್ಯಾನ ಸಂದರ್ಭದಲ್ಲಿ ತಾಲವೂ (ಪಾಟ, ಬಿರುದ ತೆನ್ನಗಳೂ) ಇಲ್ಲದಿರುವ (ಸಂರ. 'ತ್ರಿಪದೀ ತಾಲಹೀನಾ') ತ್ರಿಪದಿಯಲ್ಲಿ ಸ್ವರವೂ ಇಲ್ಲದಿದ್ದರೆ ಪದವೆಂಬ ಒಂದೇ ಅಂಗದಿಂದ ಪ್ರಬಂಧತ್ವವು ಸಿದ್ಧಿಸುವುದಿಲ್ಲ. ಆದುದರಿಂದ ಸ್ವರವನ್ನು ಧ್ರುವಾನಂತರದಲ್ಲಿ ಪ್ರಯೋಗಿಸಬೇಕು ಎಂದು ವಿಧಿಸುತ್ತಾನೆ (:೩೧೪). ಅಚಿಂ.ದ 'ಸ್ವರಸ್ಯ ನಿಯಮೋ ನ ಹಿ' ಎಂಬುದು ಇಲ್ಲಿ ಅರ್ಥಪೂರ್ಣ ನಿಯಮವಾಗಿ [illegible]

Scanned by CamScanner

ಲಕ್ಷಣವು ಗಮನಾರ್ಹವಾಗಿದೆ. ವೃತ್ತಜಾತಿಗೆ ಛಂದಸ್ಸು ಮುಖ್ಯ, ತಾಳವಲ್ಲ ಎಂಬ ಅಚಿಂ.ದ ಮಾತೂ (೪.೧೬. ೨೦೦ : ೨೦) ಇಲ್ಲಿ ಅರ್ಥಪೂರ್ಣವಾಗಿದೆ. ಕಲ್ಲಿನಾಥನು (:೩೧೬, ೩೧೭) ಮೂಲಗ್ರಂಥಾರ್ಥವನ್ನು ವಿಸ್ತರಿಸಿ ಮೊದಲನೆಯ ಎರಡು (೨, ೨) ಪಾದಗಳು ಉದ್ಗ್ರಾಹ, ಕೊನೆಯ ಎರಡು (೪, ೩) ಧ್ರುವಧಾತು, ಪದ್ಯದಲ್ಲಿಲ್ಲದ ಬೇರೆ ಪದಗಳಿಂದ ಆಭೋಗ ಎಂಬ ತ್ರಿಧಾತುತ್ವವನ್ನು ತ್ರಿಪದಿಗೆ ಹೇಳುತ್ತಾನೆ. ಅಚಿಂ.ಯಲ್ಲಿ (೪.೧೬.೨೮೦ : ೩೧) ಕೊಟ್ಟಿರುವ ಕನ್ನಡಭಾಷೆಯ ಉದಾಹರಣೆಯನ್ನು ಡಿ. ಎಲ್. ನರಸಿಂಹಾಚಾರ್ಯರು (ಪೀಠಿಕೆಗಳು, ಲೇಖನಗಳು : ೬೯೧) ಹೀಗೆ ಊಹಾತ್ಮಕವಾಗಿ ಪರಿಷ್ಕರಿಸಿದ್ದಾರೆ :

ಮೇದಿನಿ ವರ್ಣಿಸಲ್ಕಾದಿಯೊಳ್ ಮಿೂನಾಗಿ  
ವೇದವೊತ್ತಗೆಯನೆತ್ತಿ ತಂದಿತ್ತವನ  
ಪಾದಂಗಳೀಗೆ ಮಹಿಮೆಯಂ ॥

ಟಿ. ವಿ. ವೆಂಕಟಾಚಲಶಾಸ್ತ್ರಿಯವರು (ಉಕ್ತಗ್ರಂಥ : ೩೯೦) ಇದರ ಮೂರನೆಯ ಪಾದದ ಕೊನೆಯಲ್ಲಿರುವ 'ದಿತ್ತವನ' ಎಂಬ ರುದ್ರಗಣವನ್ನು 'ದಿತ್ತನ' ಎಂಬ ವಿಷ್ಣುಗಣವಾಗಿ ಮಾಡಿಕೊಳ್ಳಬೇಕು ಎಂದು ಸಲಹೆಮಾಡಿರುವುದು ಸಮುಚಿತವಾಗಿದೆ.

ಸಂಗೀತಶಾಸ್ತ್ರದಲ್ಲಿ ನಿರೂಪಿಸಿರುವ ಏಳೆಗೂ ತ್ರಿಪದಿಗೂ ಜನ್ಯಜನಕ ಸಂಬಂಧವು ಅಸಂಭಾವ್ಯವೆಂಬುದನ್ನು ಬೇರೆಡೆ (ಏಳೆ : ಒಂದು ಸಂಗೀತಶಾಸ್ತ್ರೀಯ ಅಧ್ಯಯನ) ತಕ್ಕಷ್ಟು ವಿವರವಾಗಿ ಚರ್ಚಿಸಿದ್ದೇನೆ.

## ಚತುಷ್ಪದೀ

ಚತುಷ್ಪದೀ ಎಂಬ ಪ್ರಬಂಧವನ್ನು ಸಂಗೀತಶಾಸ್ತ್ರಗ್ರಂಥಗಳಲ್ಲಿ ನಿರೂಪಿಸಿದೆ ; ಆದರೆ ಇದನ್ನು ಕನ್ನಡಭಾಷೆಯಲ್ಲಿ ರಚಿಸಬೇಕೆಂಬ ನಿರ್ಬಂಧವಿಲ್ಲ. ಮಾತ್ರಾವೃತ್ತವಾಗಿಯೇ ಇದು ಪ್ರಯುಕ್ತವಾಗುತ್ತಿತ್ತು. ನಾಗವರ್ಮನು (೫.೧೮) 'ಚೌಪದಿಗೆ'ಯನ್ನು ನಾಲ್ಕು ಪಾದಗಳಲ್ಲಿ ಪ್ರತಿಯೊಂದರಲ್ಲಿಯೂ ಕ್ರಮವಾಗಿ ವಿಷ್ಣು ಮತ್ತು ರುದ್ರ ಗಣಗಳು ಇರುವ ಛಂದೋಬಂಧ ಎಂದು ವರ್ಣಿಸುತ್ತಾನೆ. ಜಯಕೀರ್ತಿಯೂ (೭.೧೫) ಇದನ್ನೇ ಅನು ಮೋದಿಸಿ ಚತುಷ್ಪದಿಕಾ ಎಂದು ಕರೆಯುತ್ತಾನೆ ; ಇದನ್ನು ಚೂಡಾಮಣಿಯಲ್ಲಿ ಹೇಳಿದೆ ಎಂಬ ಅಧಿಕೋಕ್ತಿಯನ್ನು ಸೇರಿಸುತ್ತಾನೆ. ಇಲ್ಲಿರುವ ಚತುಷ್ಪದೀ ಶಬ್ದವು ಚೌಪದಿಗೆ ಅನ್ವಯವಾಗುತ್ತದೆಯೇ ಹೊರತು ಸಂಗೀತಶಾಸ್ತ್ರದಲ್ಲಿ ಹೇಳಿರುವ ಚತುಷ್ಪದೀ ಎಂಬ ಗೇಯ ಪ್ರಬಂಧಕ್ಕಲ್ಲ. ಅಲ್ಲದೆ 'ವಿದಿತಾಸೌ ಚೂಡಾಮಣೌ' ಎನ್ನುವಲ್ಲಿ ಚೂಡಾಮಣಿ ಎಂಬ ಹೆಸರಿನ ಅನುಪಲಬ್ಧ ಕಾವ್ಯಗ್ರಂಥವೊಂದನ್ನು ವಿದ್ವಾಂಸರು ಅನುಮಾನಿಸುತ್ತಾರೆ. ಜಯಕೀರ್ತಿಯು ಇದನ್ನು ಛಂದೋನುಶಾಸನದ ಕರ್ನಾಟವಿಷಯಭಾಷಾಜಾತ್ಯಧಿಕಾರ ವೆಂಬ ಏಳನೆಯ ಅಧ್ಯಾಯದಲ್ಲಿ ವರ್ಣಿಸಿರುವುದರಿಂದಲೂ ಇದರ ಲಕ್ಷಣವು ನಾಗವರ್ಮನು ಚೌಪದಿಗೆಗೆ ಹೇಳಿರುವದರೊಡನೆ ಸಂಪೂರ್ಣಸಾಮ್ಯವನ್ನು ಹೊಂದಿರು

ಪುದರಿಂದಲೂ ಎರಡೂ ಒಂದೇ ಛಂದೋಪ್ರಕಾರದ ಹೆಸರುಗಳೆಂಬುದು ಸಿದ್ಧವಾಗುತ್ತದೆ.

ಬೃದೇ.ಯಲ್ಲಿ (೪೦೫. ೪೦೬ : ೧೪೪) ಚತುಷ್ಪದಿಯನ್ನು ತಾಲಯುಕ್ತ, ತೆನ್ನ, ಸ್ವರಗಳಿವೆ ('ಪರೂಪ್ರತಿಪದಾರ್ಥಂ' ಎಂಬ ಭ್ರಷ್ಟಪಾಠದಲ್ಲಿ ಯಮಕದ ಸೂಚನೆಯಿರ ಬಹುದೆ ?) ಎಂದು ಮಾತ್ರ ವರ್ಣಿಸಿದೆ. ಅಚಿಂ. ಯಲ್ಲಿ (೪.೧೬.೨೮೩–೨೮೫ : ೩೧) ಇದರ ನಾಲ್ಕುಪಾದಗಳಲ್ಲಿ ಪ್ರತಿಯೊಂದರಲ್ಲಿಯೂ ೧೬, ೨೧ ಅಥವಾ ೨೪ ಮಾತ್ರೆ ಗಳಿರುತ್ತವೆ. ಯಾವುದಾದರೂ ರಾಗ, ತಾಳಗಳಲ್ಲಿ ಹಾಡಬಹುದು. ಸ್ವರವೆಂಬ ಪ್ರಬಂ ಧಾಂಗವಿದೆ ಎಂಬ ಲಕ್ಷಣವನ್ನು ಹೇಳಿದೆ, ತೆನ್ನಕವನ್ನು ಬಿಟ್ಟಿದೆ. ಸಂಚೂ.ಯಲ್ಲಿ (:೨೫) ಇದನ್ನು ಚತುಷ್ಪದೀ ವೃತ್ತದಲ್ಲಿ, ಎಲ್ಲ ಪಾದಗಳಲ್ಲಿಯೂ ಒಂದೇ ಪ್ರಾಸವಿರುವಂತೆ, ಎಲ್ಲ ಪಾದಗಳೂ ಸಮವಾಗಿರುವಂತೆ ನಿರ್ಮಿತ ಎಂಬ ಅಸ್ಪಷ್ಟಗ್ರಂಥವಿದೆ. ಸಂರ.ದಲ್ಲಿ (೪.೨೭೧, ೨೭೨ : ೩೧೪, ೩೧೫) ಇದನ್ನು ಸ್ಪಷ್ಟವಾಗಿ ಅರ್ಧಸಮವೃತ್ತವಾಗಿಯೇ ವ್ಯವಹರಿಸಿ ಸಮಪಾದಗಳಲ್ಲಿ ಪ್ರತಿಯೊಂದಕ್ಕೆ ೧೬ ಮಾತ್ರೆಗಳನ್ನೂ ಅಸಮ (೧–೩) ಪಾದಗಳಲ್ಲಿ ಪ್ರತಿಯೊಂದರಲ್ಲಿ ೧೫ ಮಾತ್ರೆಗಳನ್ನೂ ವಿಧಿಸಿ, ಅರ್ಧಗಳಲ್ಲಿ ಭಿನ್ನಾರ್ಥಯಮಕಗಳನ್ನೂ ಸ್ವರತೆನ್ನಕಗಳನ್ನೂ, ತೆನ್ನಕದಲ್ಲಿ ಮುಕ್ತಾಯವನ್ನೂ ಹೇಳಿದೆ. ಕಲ್ಲಿನಾಥನು (:೩೧೫) ಇದನ್ನು ವಿಸ್ತರಿಸಿ ಸ್ವರವು ಪೂರ್ವಾರ್ಧದಲ್ಲೂ ತೆನ್ನಕವು ಉತ್ತರಾರ್ಧದಲ್ಲೂ ಇರಬೇಕು ; ಪುನಃ ತೆನ್ನಕವನ್ನು ಆರಂಭಿಸಿ ಹಾಡನ್ನು ಮುಗಿಸಬೇಕು ; ಸ್ವರಸಮೇತವಾದ ಪೂರ್ವಾರ್ಧವು ಉದ್ಗ್ರಾಹ, ತೆನ್ನಕಸಹಿತವಾದ ಉತ್ತರಾರ್ಧವು ಧ್ರುವ, ಬೇರೆ ಪದಗಳಿಂದ ಆಭೋಗ ರಚನೆ. 'ಮಾತ್ರಾಸಂಖ್ಯಾಭಾಷಾನಿಯಮಾನ್ನಿರ್ಯುಕ್ತಃ', ತ್ರಿಧಾತು, ಪದ, ಸ್ವರ, ತೆನ್ನಕಗಳೆಂಬ ಮೂರು ಅಂಗಗಳಿರುವುದರಿಂದ ಭಾವನೀಜಾತಿಯ ಪ್ರಬಂಧ ಎಂಬ ಲಕ್ಷಣಗಳನ್ನು ಅನುಮಾನಿಸುತ್ತಾನೆ. ಇದರಲ್ಲಿ ಭಾಷಾನಿಯಮವೆಂಬ ಮಾತನ್ನು ಗಮನಿಸ ಬೇಕು. ತ್ರಿಪದೀ, ಚತುಷ್ಪದೀ, ಷಟ್ಪದೀ ಎಂಬ ಮೂರರಲ್ಲಿಯೂ ಸಮಾನಧರ್ಮವಿರು ವುದರಿಂದಲೂ, ವಿಶೇಷ ಲಕ್ಷಣವನ್ನು ಅಧಿಕೋಕ್ತಿಯಿಂದ ಹೇಳಿಲ್ಲದಿರುವುದರಿಂದಲೂ 'ಅನುಕ್ತಮನ್ಯತೋ ಗ್ರಾಹ್ಯಂ' ಎಂಬ ನ್ಯಾಯದಿಂದಲೂ, ದ್ವಿ(!ತ್ರಿ)ಪದೀ ಷಟ್ಪದೀಗಳಲ್ಲಿ ಹೇಳಿರುವ ತಾಲಹೀನತ್ವವನ್ನೂ ಕರ್ನಾಟಭಾಷಾನಿರ್ಮಿತತ್ವವನ್ನೂ ಚತುಷ್ಪದಿಯಲ್ಲಿ ಮುಕ್ತೋಕ್ತಿಯಲ್ಲಿ ಹೇಳಿಲ್ಲವಾದರೂ ಅನ್ವಯಿಸಿಕೊಳ್ಳಬೇಕು ಎಂಬ ಅಧಿಕೋಕ್ತಿಯನ್ನು ಕಲ್ಲಿನಾಥನು ಆಡುತ್ತಾನೆ. ಈ ಎರಡು ಲಕ್ಷಣಗಳನ್ನು ಬೃದೇ. ಅಚಿಂ. ಮತ್ತು ಸಂಚೂ. ಗಳಲ್ಲಿ ಹೇಳಿಲ್ಲ : ಆದರೆ ಸಂರ.ಕ್ಕಿಂತ ಕಲ್ಲಿನಾಥನನ್ನೇ ವಿಶೇಷವಾಗಿ ಅವಲಂಬಿಸುವ ಪಂಡರೀಕವಿಟ್ಠಲನೂ (ನನಿ. ೩. ೨. ೧೯೭–೧೯೯ : ೧೧೭) ವೆಂಕಟಮಖಿಯೂ (ಚ.ಪ್ರ. ೯.೨೯೫–೩೦೨ : ೨೩೪, ೨೩೫) ಅವುಗಳನ್ನು ಹೇಳಿದ್ದಾರೆ. ಇದು ಗತಾನುಗತಿಕನ್ಯಾಯದಿಂದ ಫಲಿಸಿದೆಯೋ ಅಥವಾ ಕನ್ನಡದಲ್ಲಿ ಮೇಲ್ಕಂಡ ಲಕ್ಷಣಗಳಿದ್ದ ಚತುಷ್ಪದಿಯು ರೂಢಿಸಿತ್ತೋ ಎಂಬುದು ತಿಳಿಯುವಂತಿಲ್ಲ. ಅಲ್ಲದೆ ಚತುಷ್ಪದಿಯಲ್ಲಿ ನಿಯತವಾದ ಛಂದೋಲಕ್ಷಣವಿರದೆ ಕಾಲಕಾಲಕ್ಕೆ ಅದು ವ್ಯತ್ಯಾಸವಾಗುತ್ತಿತ್ತೆಂದು ಮೇಲಿನ ಅವಲೋಕನದಿಂದ ಗೊತ್ತಾಗುತ್ತದೆ.

## ಷಟ್ಪದೀ

ಷಟ್ಪದಿಯೂ ಅಚ್ಚಕನ್ನಡ ಛಂದಸ್ಸಿನ ಪ್ರಮುಖ ಪ್ರಕಾರವೇ : ಬೃದೇ.ಯಷ್ಟು ಪ್ರಾಚೀನ. ಪ್ರಾರಂಭದಲ್ಲಿ ಅದು ಅಂಶಛಂದಸ್ಸಾಗಿದ್ದುದು ತ್ರಿಪದಿಯಂತೆ ಕ್ರಿ.ಶ. ೧೨ನೆಯ ಶತಮಾನದ ಮಧ್ಯದ ವೇಳೆಗೆ ಮಾತ್ರಾಛಂದಸ್ಸಾಗಿ ಪರಿವರ್ತನೆಗೊಂಡು ಮುಂದಿನ ನೂರು ವರ್ಷಗಳಲ್ಲಿ ಮಾತ್ರಾಛಂದಸ್ಸಿನ ಹಲವು ರೂಪಗಳಲ್ಲಿ ಟಿಸಿಲೊಡೆದುದು ಅದರ ಇತಿಹಾಸದಿಂದ ತಿಳಿಯುತ್ತದೆ. ಅದರ ಬಹುರೂಪೀ ವಿಕಾಸವನ್ನು ವೆಂಕಟಾಚಲಶಾಸ್ತ್ರಿಯವರು ವಿಮರ್ಶಾತ್ಮಕವಾಗಿ ಚರ್ಚಿಸಿದ್ದಾರೆ (ಉಕ್ತಗ್ರಂಥ : ೪೮೮–೫೪೪). ಅದರ ಸಂಗೀತಶಾಸ್ತ್ರೀಯ ವಿಕಾಸವನ್ನು ಬೇರೆಡೆ (ಪುಂಡರೀಕಮಾಲಾ : ೪೬೬, ೪೬೭) ಸ್ವಲ್ಪ ಮಟ್ಟಿಗೂ ಇನ್ನೊಂದೆಡೆ (ಪುಂಡರೀಕವಿಟ್ಠಲನ ನರ್ತನ ನಿರ್ಣಯ, ಆಂಗ್ಲ ಪರಿಷ್ಕರಣ, ಅಚ್ಚಿನಲ್ಲಿ) ತಕ್ಕಮಟ್ಟಿಗೆ ವಿವರಪೂರ್ಣವಾಗಿಯೂ ಚಿತ್ರಿಸಿದ್ದೇನೆ; ಅದು ಇನ್ನೂ ವಿಕಾಸದ ಮೂಸೆಯಲ್ಲೇ ಪ್ರಯೋಗವಶವಾಗಿದೆ ಎಂದಿಲ್ಲಿ ಹೇಳಿದರೆ ಸಾಕು.

ನಾಗವರ್ಮ (೫.೨೧), ಜಯಕೀರ್ತಿ (೭.೧೭)ಗಳು ಲಕ್ಷಿಸಿರುವುದು ಅಂಶಛಂದಸ್ಸಿನ ಷಟ್ಪದಿಯನ್ನು. ಈ ಲಕ್ಷಣದೊಡನೆ (ಅದು ತೆಲುಗಿನಲ್ಲಿ ಅಪರೂಪವಾದರೂ) ಭೀಮ, ಪೆದ್ದನ, ಚಿತ್ರಕವಿ, ಅನಂತಾಮಾತ್ಯ, ಅಪ್ಪಕವಿ ಮುಂತಾದವರೂ ಅಚಿಂ, ಸಂಚೂ. ಸಂರ. ದಂತಹ ಪ್ರಾಚೀನ ಸಂಗೀತಶಾಸ್ತ್ರಗ್ರಂಥಗಳೂ ನಂತರದ ಸಂಗೀತರಾಜ, ನರ್ತನನಿರ್ಣಯ, ಚತುರ್ದಂಡೀ ಪ್ರಕಾಶಿಕಾ ಮುಂತಾದವುಗಳೂ ಸಂಪೂರ್ಣವಾಗಿ ಸಮ್ಮತಿಸುತ್ತವೆ. ಇದರ ಛಂದೋಲಕ್ಷಣವನ್ನು ಹೀಗೆ ಸಂಗ್ರಹಿಸಬಹುದು : ಇದರ ಆರು ಪಾದಗಳ ಪೈಕಿ ೧, ೨, ೪, ೫ರಲ್ಲಿ ಪ್ರತಿಯೊಂದರಲ್ಲಿಯೂ ಎರಡೆರಡು ವಿಷ್ಣು (=ಮದನ) ಗಣಗಳು, ೩–೬ರಲ್ಲಿ ಪ್ರತಿಯೊಂದರಲ್ಲಿಯೂ ಎರಡೆರಡು ವಿಷ್ಣುಗಣಗಳು, ಕೊನೆಯಲ್ಲಿ ಒಂದು ರುದ್ರಗಣ; ಎಂದರೆ ಸರ್ವಸಮವಾದ ಎರಡು ಅರ್ಧಗಳಿಂದ ಇದು ರಚಿತವಾಗುತ್ತದೆ.

ಇನ್ನು ಸಂಗೀತಶಾಸ್ತ್ರದಲ್ಲಿ ಷಟ್ಪದೀ ವಿಷಯಕವಾದ ಅಧಿಕೋಕ್ತಿಗಳನ್ನು ಗಮನಿಸಬಹುದು. ಕ್ರಿ.ಶ. ೧೫, ೧೬, ೧೭ನೆಯ ಶತಮಾನಗಳಲ್ಲಿ ಕ್ರಮವಾಗಿ ರಚಿತವಾದ ಸಂಗೀತರಾಜ, ನರ್ತನನಿರ್ಣಯ, ಚತುರ್ದಂಡೀಪ್ರಕಾಶಿಕೆಗಳಲ್ಲಿ ಸಹ ಆವೇಳೆಗಾಗಲೇ ಬಹುವಾಗಿ ಶಬಲಿತವಾಗಿದ್ದ ಮಾತ್ರಾಷಟ್ಪದಿಯ ಪ್ರಸ್ತಾಪವಾಗಲಿ ವರ್ಣನೆಯಾಗಲಿ ಕಂಡುಬರುವುದಿಲ್ಲ : ಕೊನೆಯ ಎರಡನ್ನು ರಚಿಸಿದ್ದು ಕನ್ನಡಿಗರೇ ಎಂಬುದನ್ನಿಲ್ಲಿ ಸ್ಮರಿಸಬಹುದು. ಇದಕ್ಕೆ ಪೂರ್ವಾಚಾರ್ಯರನ್ನು ಅಂಧವಾಗಿ ಅನುಸರಿಸಿದ್ದೇ ಕಾರಣ. ಬೃದೇ.ಯಲ್ಲಿ ಅದರ ಉದ್ದೇಶಕಥನವಿದೆ (೩೮೬ : ೧೪೨). ಆದರೆ ಲಕ್ಷಣಕಥನಕ್ಕೆ ಗ್ರಂಥಪಾತವಿದೆ. ಅಚಿಂ.ಯಲ್ಲಿ ಮೇಲ್ಕಂಡ ಛಂದೋಲಕ್ಷಣವನ್ನು ಹೇಳಿದ ಮೇಲೆ ಒಂದು ಉದಾಹರಣೆಯನ್ನು ಕೊಟ್ಟಿದೆ. ಅದನ್ನು ಡಿ. ಎಲ್. ನರಸಿಂಹಾಚಾರ್ಯರು

> ಗಡಣದಿಂದುರಗನ
> ಪೆಡೆವಣಿಗಳ ದೀಪ್ತಿ
> ಗೆಡೆಗೊಂಡು ತಮಗೆತ್ತುವಾರತಿಯಾ

ಸೊಣರ್ಗಳ ಪೋಲೆ ಪಾ
ಲ್ಗಡಲೊಳಿರ್ದಾ ವಿಷ್ಣು
ಕುಡುತಿಕ್ಕೆ ನಮಗಿಷ್ಟಸಂಸಿದ್ಧಿಯಂ ॥

ಎಂದು ನಿರ್ದುಷ್ಟವಾಗಿ ಪರಿಷ್ಕರಿಸಿದ್ದಾರೆ (ಉಕ್ತಗ್ರಂಥ : ೬೯೩). ಅಚಿಂ.ಯಲ್ಲಿ ಇದನ್ನು ಕನ್ನಡದಲ್ಲಿ ಪ್ರಾಸಬದ್ಧವಾಗಿ, ಕಥಾತ್ಮಕವಾಗಿ, ಅನುಪ್ರಾಸವನ್ನೊಳಗೊಂಡು, ತಾಳವಿಲ್ಲದೆ ರಚಿಸಬೇಕು ಎಂಬ ಲಕ್ಷಣವನ್ನು ಹೇಳಿದೆ (೪.೧೬.೨೮೬–೨೮೯ : ೩೧). ಕಥೆಯನ್ನು ಹೇಳಲು ಅನುಕೂಲವಾದುದು ಎಂದು ಮತ್ತೆ ಮತ್ತೆ ಹೇಳಿದೆ (೪.೧೬.೫೫೨ : ೮೧; ೪.೧೬.೧೪೨೫.: ೧೬೪). ಸಂಚೂ.ದಲ್ಲಿ ಛಂದೋಲಕ್ಷಣವಿಲ್ಲ. ಬದಲು ಗೊಂದಲಮಯವಾದ ಪ್ರಾಸನಿರ್ಯುಕ್ತಿಯಿದೆ (:೨೪, ೨೫) ಸಂರ.ದಲ್ಲಿ ಕನ್ನಡಭಾಷೆಯ ನಿರ್ಯುಕ್ತಿ, ತಾಲಹೀನತೆಗಳ ಜೊತೆಗೆ ಎರಡು ಸ್ವಾರಸ್ಯಪೂರ್ಣ ಅಧಿಕೋಕ್ತಿಗಳನ್ನು ಕಾಣಬಹುದು : 'ನಾದಮುಕ್ತಿಕಾ', 'ಭೇದಾ ವೇದ್ಯಾಸ್ತ್ರಿಪದ್ಯಾದೇಶ್ಛಂದೋಲಕ್ಷ್ಮಣಿ ಭೂರಯಃ'. ಮೊದಲನೆಯ ಮಾತಿಗೆ ಸಹಜವಾಗಿ ಸ್ಫುರಿಸುವ ಅರ್ಥವಿದು : ಷಟ್ಪದಿಯನ್ನು ಹಾಡಿ ಮುಗಿಸಿದ ಮೇಲೆ ಅದರ ಕಡೆಯ ಅಕ್ಷರದಲ್ಲಿರುವ ಸ್ವರವನ್ನು ಲಂಬಿಸಿ ಆಯಾ ರಾಗದಲ್ಲಿಯೇ ಸ್ವಲ್ಪ ಸ್ವರಸಂಚಾರವನ್ನು ಸ್ವಾಭಾವಿಕವಾಗಿ ಮಾಡಿ ಅದರಲ್ಲಿಯೇ ಮುಗಿಸಬೇಕು (೪.೨೮೨–೨೮೪ : ೩೧೫, ೩೧೬). ಕಲ್ಲಿನಾಥನು ನಾದವೆಂದರೆ (ಆಯಾರಾಗದ) ಸ್ಥಾಯಿಸ್ವರವೆಂದೂ, ಸರಿಗಾದಿವರ್ಣಗಳನ್ನು ಉಚ್ಚರಿಸದೆ ಅವುಗಳ ನಾದರೂಪವನ್ನು ಮಾತ್ರ ಉಚ್ಚರಿಸಬೇಕೆಂದೂ ಹೇಳುತ್ತಾನೆ (: ೩೧೬). ಸ್ಥಾಯಿಸ್ವರವೆಂದರೆ ಆಯಾ ರಾಗದ ಆಲಾಪನೆಗೆ ಆಧಾರಭೂತವಾಗಿ ತೆಗೆದುಕೊಳ್ಳುವ ಪ್ರಾರಂಭಿಕ ಸ್ವರ. ಈ ಅರ್ಥವನ್ನು ಮೂಲಗ್ರಂಥಕಾರನು ವಿವಕ್ಷಿಸಿದ್ದಾನೆಯೋ ಎಂಬುದು ಸಂದೇಹ. ತ್ರಿಪದೀ, ಚತುಷ್ಪದೀ, ಷಟ್ಪದೀಗಳಲ್ಲಿ ಅನೇಕ ಛಂದೋಭೇದಗಳು ಶಾರ್ಙ್ಗದೇವನ ಕಾಲದಲ್ಲಿ ಇದ್ದವು ಎಂಬುದೂ ಗಮನಾರ್ಹವಾಗಿದೆ : ಷಟ್ಪದಿಯ ಮಾತ್ರಾಛಂದಸ್ಸಿನ ಹಲವು ರೂಪಗಳು ಈಗಾಗಲೇ ಮೂಡತೊಡಗಿದ್ದವೆ ?

ಷಟ್ಪದಿಯ ಮೊದಲನೆಯ ಅರ್ಧವು ಉದ್ಗ್ರಾಹ, ಉತ್ತರಾರ್ಧವು ಧ್ರುವ, ಬೇರೆ ಮಾತುಗಳಲ್ಲಿ ಆಭೋಗರಚನೆ, ಆದುದರಿಂದ ಇದು ತ್ರಿಧಾತುಕ ಪ್ರಬಂಧ, ಪದ-ಸ್ವರಗಳೆಂಬ ಎರಡು ಅಂಗಗಳಿರುವುದರಿಂದ ತಾರಾವಲೀ ಜಾತಿಯದು ಎಂಬ ವಿವರಗಳನ್ನೂ ಕಲ್ಲಿನಾಥನು ಕೊಡುತ್ತಾನೆ (: ೩೧೬).

## ಕಂದ

ಕಂದವೆನ್ನುವ ಮಾತು ಸ್ಕಂಧಕ (–ಖಂಧಅ–ಖಂಧ–ಕಂದ) ಎಂಬ ಪ್ರಾಕೃತ ಛಂದಸ್ಸಿನ ಹೆಸರಿನ ಅಪಭ್ರಂಶವಿರಬಹುದು. ಕಂದಪದ್ಯವು ಸ್ಕಂಧಕದಿಂದ ಜನ್ಮತಾಳಿರಬಹುದು. ಅಥವಾ ಆರ್ಯಾಗೀತಿಯೆಂಬ ಸಂಸ್ಕೃತ ಛಂದಸ್ಸಿನಿಂದ ಹುಟ್ಟಿದ್ದರೂ ಇರಬಹುದು. ಇವೆರಡರ ಇಂಗಿತಗಳು ಛಂದಃಶಾಸ್ತ್ರದಲ್ಲಿಯೂ ಸಂಗೀತಶಾಸ್ತ್ರದಲ್ಲಿಯೂ

ದೊರೆಯುತ್ತವೆ. ಹೀಗೆ ಸಂಗೀತಶಾಸ್ತ್ರದಲ್ಲಿ ಸಂಚೂ.ಯು (: ೨೧) ಕಂದವು 'ಕಂದಕ' ಛಂದಸ್ಸಿನಲ್ಲಿರಬೇಕು ಎಂದರೆ ಸಂರ.ವು ಅದು ಆರ್ಯಾಗೀತಿಯಲ್ಲಿ ರಚಿತವಾಗಬೇಕು ಎಂದು ವಿಧಿಸುತ್ತದೆ (೪.೨೦೫ : ೨೭೮) ಸಂಸ್ಕೃತ ಮತ್ತು ಕನ್ನಡದ ಛಂದಃಶಾಸ್ತ್ರಕಾರರು ಕಂದಕ್ಕೆ ಹೇಳಿರುವ ಸಾಮಾನ್ಯಲಕ್ಷಣಗಳು ಸಂಗೀತಶಾಸ್ತ್ರಕಾರರಿಗೂ ಸಮ್ಮತವೇ. ಆದರೆ ಸಂಗೀತಶಾಸ್ತ್ರದಲ್ಲಿ ಕಂದಕ್ಕೆ ಹೇಳಿರುವ ಕೆಲವು ಛಂದೋಲಕ್ಷಣಗಳೂ ಛಂದೋಪ್ರಕಾರಗಳೂ ಛಂದಃಶಾಸ್ತ್ರದಲ್ಲಿ ಕಾಣಸಿಗುವುದಿಲ್ಲ.

ಕಂದದ ಛಂದಃಶಾಸ್ತ್ರೀಯ ಸಾಮಾನ್ಯಲಕ್ಷಣಗಳನ್ನು ನಾಗವರ್ಮ (೪.೫), ಜಯಕೀರ್ತಿ (೫.೧೩), ಗುಣಚಂದ್ರ, (ಛಂದಃಸಾರ) (೨.೪) ಮುಂತಾದ ಲಾಕ್ಷಣಿಕರಿಂದ ಸಮಷ್ಟಿಯಲ್ಲಿ ಹೀಗೆ ಸಂಗ್ರಹಿಸಬಹುದು : ಅದು ಎರಡೆರಡು ಪಾದಗಳ ಎರಡು ಸರ್ವಸಮ ಅರ್ಧಗಳಿಂದ ರಚಿತವಾಗಿದೆ. ಈ ಅರ್ಧಗಳಲ್ಲಿ ಪ್ರತಿಯೊಂದರ ಮೊದಲನೆಯ ಪಾದದಲ್ಲಿ ಮೂರು ಚತುರ್ಮಾತ್ರಾಗಣಗಳೂ ಎರಡನೆಯದರಲ್ಲಿ ಐದು ಚತುರ್ಮಾತ್ರಾಗಣಗಳೂ ಇರಬೇಕು. ಹೀಗೆ ಪ್ರತಿಯೊಂದು ಅರ್ಧದ ಪರಿಮಾಣ ೩೨ ಮಾತ್ರೆಗಳು. ಇಡೀ ಕಂದಪದ್ಯದ ವಿಷಮಸಂಖ್ಯೆಯ ಗಣಗಳಲ್ಲಿ ಜಗಣವು ನಿಷಿದ್ಧ : ಆದರೆ ಆರನೆಯ ಚತುರ್ಮಾತ್ರಾಗಣವು ಜಗಣದಿಂದಾಗಲಿ ನಾಲ್ಕು ಲಘುಗಳಿಂದಾಗಲಿ (ನಗಣ + ಲಘು) ಆಗಿಯೇ ತೀರಬೇಕು; ಆಗ ಅದರ ಪ್ರಾರಂಭಿಕ ಲಘುವಿನ ಮೊದಲು ಯತಿಯಿರಬೇಕು. ಏಳನೆಯ ಗಣವು ಸರ್ವಲಘುವಾಗಿದ್ದರೂ ಈ ಯತಿನಿಯಮವು ಅನ್ವಯಿಸುತ್ತದೆ. ಕಂದದಲ್ಲಿ ಆದಿಪ್ರಾಸವು ನಿಯಮ. ಕಂದವು ಕನ್ನಡದ ಪ್ರಾಚೀನತರ, ಪ್ರಮುಖ, ಪ್ರಚುರ ಛಂದಃಪ್ರಕಾರ: ಗಣಪರ್ಯಾಯದ, ಪಾದಪ್ರಮಾಣದ, ಪ್ರಾಸದ ಅಪವಾದಗಳು ಇರದೆ ಇಲ್ಲವಾದರೂ ಒಟ್ಟಿನಲ್ಲಿ ನಿಯಮಪಾಲನೆಯೇ ಹೆಚ್ಚಾಗಿ ಕಂಡುಬರುತ್ತದೆ.

ಇನ್ನು ಸಂಗೀತಶಾಸ್ತ್ರೀಯವಾದ ಅಧಿಕೋಕ್ತಿಗಳನ್ನು ಸಂಗ್ರಹಿಸಬಹುದು : ಬೃದೇ.ಯಲ್ಲಿ ಅದರ ಛಂದಸ್ಸನ್ನು ನಿರ್ದೇಶಿಸಿಲ್ಲ : ಕಂದವು ತಾಲಹೀನ, ಪಾಟ, ಬಿರುದಗಳಿರುತ್ತವೆ ಎಂದು ಲಕ್ಷಿಸಿದೆ ; ಸ್ವಾರಸ್ಯವೆಂದರೆ 'ಕರ್ನಾಟಭಾಷಾದಿಪದಮಿಶ್ರಿತಃ' ಎಂದಿರುವುದು ; ಎಂದರೆ ಕಂದವನ್ನು ಕನ್ನಡ. ಮತ್ತಿತರ (ತೆಲುಗು. ತಮಿಳು ಇತ್ಯಾದಿ ದೇಶ್ಯ ಭಾಷೆಗಳ) ಮಾತುಗಳನ್ನು ಬೆರೆಸಿ ರಚಿಸಲಾಗುತ್ತಿತ್ತು ಎಂಬುದು : ಅಲ್ಲದೆ ಇದನ್ನು ಪ್ರಬಂಧಾಧ್ಯಾಯದಲ್ಲಿ ಪ್ರಪ್ರಥಮವಾಗಿ ವರ್ಣಿಸಿ 'ಕಂದಾದಿಪ್ರಬಂಧಾ ಲಕ್ಷ್ಯತೇ ಪ್ರಸಿದ್ಧಾ ಏವ' (ಏವ ಕಾರದಲ್ಲಿರುವ ಒತ್ತು ಗಮನಾರ್ಹವಾಗಿದೆ) ಎನ್ನುವುದು (೩೯೭-೩೯೮ : ೧೪೩). 'ಕರ್ನಾಟಭಾಷಾದಿ' ಎನ್ನುವಲ್ಲಿನ 'ಆದಿ' ಶಬ್ದವನ್ನು ಸಂಚೂ. (: ೨೧) ಸಂರ. (೪. ೨೦೪ : ೨೭೭ : 'ಕರ್ನಾಟಾದಿಪದ್ಯೈರಿತ್ಯನೇನ ದೇಶಭಾಷಾಪದಾನ್ಯೇವ ಗೃಹ್ಯಂತೇ ; ನ ಸಂಸ್ಕೃತಪದಾನಿ' ಕಲ್ಲಿ. : ೨೭೭–೨೭೮). ಸಂಗೀತರಾಜ ('ಕರ್ನಾಟಲಾಟಗೌಡಾದಿಭಾಷಾವಿರಚಿತೈಃ ಪದ್ಯೈಃ' ೨.೪.೩.೧೪೭ : ೬೦೬ : ಆದರೆ ಮುಂದಿನ ಶ್ಲೋಕದಲ್ಲಿ 'ಅತಾಲಃ, ಕಂದುಕಂ ಕೇಚಿತ್ತಾಲಮಾಹುರತದ್ವಿದಃ' ಎನ್ನುವಾಗ 'ಕಂದುಕ' ಶಬ್ದವು ಸ್ವಲ್ಪ ಗೊಂದಲವನ್ನುಂಟುಮಾಡುತ್ತದೆ. ಆದರೆ ಕಂದುಕ ಪ್ರಬಂಧದ ಲಕ್ಷಣವನ್ನು

ವರ್ಜಿತೈ' (೯.೨೨೮: ೨೨೯) ಇದು ಸ್ಥಿರಪಡಿಸುತ್ತದೆ. ಅಚಿಂ.ಯು ಮಾತ್ರ 'ಕರ್ನಾಟಭಾಷೈವಾಸೌ ಗೀಯತೇ ಕಂದಸಂಜ್ಞಕಃ' ಎನ್ನುವಲ್ಲಿ ಕಂದವು ಕನ್ನಡಭಾಷೆಯಲ್ಲಿ ಮಾತ್ರ ರಚಿತವಾಗುತ್ತಿತ್ತು ಎಂದು ಅದರ ವ್ಯಾಪ್ತಿಯನ್ನು ಸೀಮಿತಗೊಳಿಸುತ್ತದೆ. ಒಟ್ಟಿನಲ್ಲಿ, ಕಂದವು ಬೃದೇ.ಯ ಕಾಲದಿಂದಲೂ ದ್ರಾವಿಡ ಭಾಷೆಗಳಲ್ಲೆಲ್ಲ ಪ್ರಸಿದ್ಧವಾಗಿತ್ತು ಎಂದು ಹೇಳಬಹುದು. ಈ ವಿವಿಧ ಭಾಷೆಗಳ ಪದಮಿಶ್ರಣವು ಮಾತ್ರವಲ್ಲದೆ, ಕಂದವು ಈ ಭಾಷೆಗಳಲ್ಲಿ ಪ್ರತ್ಯೇಕವಾಗಿಯೂ ರಚಿತವಾಗುತ್ತಿತ್ತು ಎಂದೂ ಅನುಮಾನಿಸಬಹುದು.

ಮೇಲ್ಕಂಡ ಸಂಗೀತಶಾಸ್ತ್ರೀಯ ಆಕರಗಳಲ್ಲಿ ಕಂದವನ್ನು ಕಂದಕಛಂದಸ್ಸಿನಲ್ಲಿ ತಾಲವರ್ಜಿತವಾಗಿ. ಪದಪಾಟಗಳಿಂದ. ಆಭೋಗವನ್ನು ಅನ್ಯಪದಗಳಿಂದ, ಮುಕ್ತಾಯವನ್ನು ಶ್ರುತಿಮನೋರಮವಾದ ಪಾಟಗಳಿಂದ ರಚಿಸಬೇಕೆಂದು ಹೇಳಿದೆ (ಸಂಚೂ. : ೨೧). ಪೂರ್ವಾರ್ಧದ ಪ್ರಥಮ ಪಾದದಲ್ಲಿ ೧೨, ದ್ವಿತೀಯ ಪಾದದಲ್ಲಿ ೨೦ ಹೀಗೆ ಮಾತ್ರಾ ಪರಿಮಾಣ. ಉತ್ತರಾರ್ಧದಲ್ಲಿಯೂ ಹೀಗೆಯೇ. ತಾಲರಹಿತ, ಪದ. ಬಿರುದಗಳಿಂದ (ಪಾಟವನ್ನು ಹೇಳಿಲ್ಲವೆಂಬುದನ್ನು ಗಮನಿಸಬೇಕು) ಎಂದು ಅಚಿಂ.ಯಲ್ಲಿ ಹೇಳಿ ಒಂದು ಉದಾಹರಣೆಯನ್ನು ಅದರಲ್ಲಿ (೪.೧೬.೨೯೦–೨೯೨ : ೩೨) ಕೊಟ್ಟಿದೆ. ಅದನ್ನು ಡಿ. ಎಲ್. ನರಸಿಂಹಾಚಾರ್ಯರು (ಉಕ್ತಗ್ರಂಥ : ೬೪೪) ಹೀಗೆ ಸಂಸ್ಕರಿಸಿದ್ದಾರೆ :

ಸಿರಿಕೌಸ್ತುಭರುಚಿಯಿಂ ತ
ಳ್ತಿರದೊಳ್ ಕಾರ್ಮುಗಿಲ ಪೊಣರ ವಿದ್ಯುಚ್ಛವಿಯಿಂ ।
ಕಿರೆ ಪರಿರಂಜಿಪ ಸುರಗಣ
ಪರಿವೃಢನೆಮಗೀಗೆ ವಿಷ್ಣು ಬೇಡಿದ ವರಮಂ ॥

ಸಂರ.ದಲ್ಲಿ ಕಂದವು ಪಾಟಬಿರುದಸಹಿತ, ತಾಲರಹಿತ, ಆರ್ಯಾಗೀತಿ ಛಂದಸ್ಸಿನಲ್ಲಿ ವೀರರಸದಲ್ಲಿ, ಪಾಟಗಳಲ್ಲಿ ಮುಕ್ತಾಯಗೊಂಡು ಇರುತ್ತದೆ ಎಂದು ನಿರೂಪಿಸಿದೆ (೪. ೨೦೪–೨೦೯ : ೨೭೭–೨೭೮). ಛಂದಃಶಾಸ್ತ್ರದಲ್ಲಿ ದೊರೆಯದಿರುವ ಒಂದು ವಿವರವನ್ನು ಸಂಚೂ.ಯು (ಉಕ್ತಸ್ಥಾನ) ಮೊದಲ ಬಾರಿಗೆ ಒಳಗೊಂಡಿದೆ : ಕಂದದ ಒಟ್ಟು ಮಾತ್ರಾ ಪ್ರಮಾಣ ೬೪: ಆದರೆ ಅದರ ಆರನೆಯ ಮತ್ತು ಏಳನೆಯ ಗಣಗಳಲ್ಲಿರುವ ವಿಧಿಗಳಿಂದಾಗಿ ಅದರಲ್ಲಿ ಸರ್ವಲಘುವಾಗಲಿ ಸರ್ವಗುರುವಾಗಲಿ ಇರುವುದು ಸಾಧ್ಯವಿಲ್ಲವಷ್ಟೆ. ಆದರೆ ಮೂವತ್ತನೆಯ ಗುರುವಿನಿಂದ ಪ್ರಾರಂಭಿಸಿ ಎರಡು ಗುರುಗಳವರೆಗೆ ಒಂದೊಂದು ಗುರುವನ್ನು (ಒಪ್ಪೊಮ್ಮೆ ಮಾತ್ರ) ಎರಡೆರಡು ಲಘುಗಳನ್ನಾಗಿ ಭಂಗಗೊಳಿಸುತ್ತ ಒಂದರೆ ಇಪ್ಪತ್ತೊಂಬತ್ತು ಕಂದಪ್ರಭೇದಗಳು ದೊರೆಯುತ್ತವೆ. ಅವುಗಳ ಹೆಸರುಗಳು ಹೀಗಿವೆ (ಎಷ್ಟನೆಯ ಗುರುವು ಭಂಗವಾಗುತ್ತದೆ ಎಂಬುದನ್ನು ಕಂಸಗಳಲ್ಲಿ ತೋರಿಸಿದೆ :

೧. ಪವನ (೩೦) ೨. ರವಿ (೨೯) ೩. ಧನದ (೨೮) ೪. ಹುತವಹ ( =ಹವ್ಯವಾಹನ

ಸಂರ.) (೨೭) ೫. ಸುರನಾಥ (೨೬) ೬. ಸಮುದ್ರ (೨೫) ೭. ವರೇಣ (೨೪) ೮. ಶಶೀ (೨೩) ೯. ಶೈಲ (೨೨) ೧೦. ಮಧು (೨೧) ೧೧. ಮಾಧವ (೨೦). ೧೨. ಮದನ ( =ಮಕರಧ್ವಜ, ಸಂರ. ೧೯) ೧೩. ಜಯಂತ (೧೮) ೧೪. ಮಧುಪ (೧೭) ೧೫. ಶುಕ (೧೬) ೧೬. ಸಾರಸ (೧೫) ೧೭. ಕೇಕೀ (೧೪) ೧೮. ಹರಿ (೧೩) ೧೯. ಹರಿಣ (೧೨) ೨೦. ಹಸ್ತೀ (೧೧) ೨೧. ಕಾದಂಬ (೧೦) ೨೨. ಕೂರ್ಮ (೯) ೨೩. ನಯ(೮) ೨೪. ವಿನಯ (೭) ೨೫. ವಿಕ್ರಮ (೬) ೨೬. ಉತ್ಸಾಹ (೫) ೨೭. ಧರ್ಮ (೪) ೨೮. ಅರ್ಥ (೩) ೨೯. ಕಾಮ (೨). ಇವುಗಳನ್ನು ಸಂರ.ವೂ ಹೇಳಿದೆ (ಉಕ್ತಸ್ಥಾನ). ಸಂಗೀತರಾಜವೂ ಈ ಕಂದಪ್ರಭೇದಗಳನ್ನು ಒಳಗೊಂಡಿದೆ (೨.೪.೩. ೧೫೧–೧೫೪ : ೬೦೬, ೬೦೭). ಹೆಸರುಗಳು ಅಲ್ಲಲ್ಲಿ ಪರ್ಯಾಯಗೊಂಡಿವೆ. ಈ ಪ್ರಭೇದಗಳಲ್ಲಿ ಗಣಭಂಗವು ಏಕೋತ್ತರವೃದ್ಧಿಯಿಂದ ನಡೆಯುತ್ತದೆಯೋ ಏಕೈಕವಾಗಿ ನಡೆಯುತ್ತದೆಯೋ ಎಂಬ ಪ್ರಶ್ನೆಗೆ ಕಲ್ಲಿನಾಥನು ಸ್ಪಷ್ಟೋಕ್ತಿಯಲ್ಲಿ ಉತ್ತರವನ್ನು ನೀಡಿದ್ದಾನೆ: 'ಏಕೈಕಭಂಗತ ಇತ್ಯನೇನೈಕಸ್ಯೈವ ಗುರೋರ್ಭಂಗೇನ ಲಘುದ್ವಯರೂಪತಾ। ಇತರೇಷಾಂ ಗುರುರೂಪತ್ವೈವ।' (೨೭೯) ಉದಾ : ವಿನಯ ಕಂದದಲ್ಲಿ ಏಳನೆಯ ಗುರುವಿನ ಭಂಗ ಮಾತ್ರ ಆಗುತ್ತದೆ. ಅದರಲ್ಲಿನ ಇತರ ಗುರುಗಳು ಹಾಗೇ ಉಳಿದಿರುತ್ತವೆ.

ಕಲ್ಲಿನಾಥನು ಕಂದಕ್ಕೆ ಉಳಿದ ಸಂಗೀತಶಾಸ್ತ್ರೀಯ ವಿವರಗಳನ್ನು ಹೀಗೆ ಕೊಡುತ್ತಾನೆ ( : ೨೭೮–೨೮೦) : ಮೊದಲನೆಯ ಎರಡು ಪಾದಗಳಿಂದ ಉದ್ಗ್ರಾಹ : ಇದರಲ್ಲಿ ಪದಗಳನ್ನು ಹಾಡಬೇಕು. ದ್ವಿತೀಯಾರ್ಧವು ಧ್ರುವ; ಇದರಲ್ಲಿ ಪಾಟಗಳೂ ಬಿರುದಗಳೂ ಇರುತ್ತವೆ. ಇದನ್ನು ಹಾಡಿಯಾದ ಮೇಲೆ ಪುನಃ ಪಾಟಗಳನ್ನೆತ್ತಿಕೊಂಡು ಅಲ್ಲಿ ಮುಗಿಸಬೇಕು ; ತಾಳವಿಲ್ಲದೆ ಹಾಡಬೇಕು ; ಆಭೋಗವನ್ನು ಬೇರೆ ಪದಗಳಿಂದ ನಿರ್ವಿಸಬೇಕು ; ಆದುದರಿಂದ ಕಂದವು ತ್ರಿಧಾತುಕ ಪ್ರಬಂಧ : ಪದ, ಪಾಟ, ಬಿರುದಗಳೆಂಬ ಮೂರು ಅಂಗಗಳಿರುವುದರಿಂದ ಭಾವನೀಜಾತಿಯದು. ಹೀಗೆ ಸಾಹಿತ್ಯ(ಕಾವ್ಯ)ಪ್ರಬಂಧವಾದ ಕಂದಪದ್ಯಕ್ಕೂ ಗೇಯಪ್ರಬಂಧಕ್ಕೂ ಗಮನಾರ್ಹವಾದ ವ್ಯತ್ಯಾಸಗಳಿವೆ.

## ವರ್ಣ

ಇಲ್ಲಿಯವರೆಗೆ ಛಂದೋರೂಪಗಳಾದ ಕೆಲವು ಕನ್ನಡ ಗೇಯಪ್ರಬಂಧಗಳನ್ನು ಪರಿಶೀಲಿಸಿದ್ದಾಯಿತು. ಈಗ ಛಂದೋನಿರ್ಮುಕ್ತಿಯಿಲ್ಲದ ಎರಡು ಕನ್ನಡಗೇಯ ಪ್ರಬಂಧಗಳನ್ನು ಸಂಕ್ಷೇಪವಾಗಿ ಪ್ರಸ್ತಾಪಿಸಿ ಈ ಲೇಖನವನ್ನು ಮುಗಿಸಬಹುದು.

ವರ್ಣಶಬ್ದಕ್ಕೆ ನಮ್ಮ ಸಂಗೀತದಲ್ಲಿ ಮೂರು ಅರ್ಥಗಳಿವೆ : i. ಗಾನಕ್ರಿಯೆ, ನಾದಲಯಗಳ ಸೌಂದರ್ಯಾಕೃತಿನಿಷ್ಠ ಚಲನೆ, ಸ್ಥಾಯಿ, ಆರೋಹೀ, ಅವರೋಹೀ, ಸಂಚಾರೀ ಎಂಬ ನಾಲ್ಕು ವಿಧಗಳಲ್ಲಿ ಅಸಂಖ್ಯೇಯವಾದ ಸ್ವರಗುಚ್ಛಮಾದರಿಗಳನ್ನು ಅಲಂಕಾರಗಳೆಂಬ ಹೆಸರಿನಲ್ಲಿ ಒಳಗೊಂಡಿರುವುದು. ii. ಕರ್ನಾಟಕಸಂಗೀತದಲ್ಲಿ ಅಧುನಾಪ್ರಸಿದ್ಧವಾದ ಒಂದು ಪ್ರಮುಖ ಹಾಡಿನ ರೀತಿ. ಇದನ್ನು ಸವಿಸ್ತಾರವಾಗಿ ಬೇರೆಡೆ (ಕರ್ನಾಟಕ

ಸಂಗೀತವಾಹಿನೀ : ೩೫೯–೩೬೪) ವಿವರಿಸಿದ್ದೇನೆ. iii. ಈ ಹೆಸರಿನ ಪ್ರಾಚೀನ ಗೇಯ ಪ್ರಬಂಧ. ಇದನ್ನು ಈಗ ಸಂಕ್ಷೇಪವಾಗಿ ಪರಿಶೀಲಿಸಬಹುದು : ಇದೂ ಬೃದೇ.ಯಷ್ಟು ಪ್ರಾಚೀನವಾದುದು. ಅಲ್ಲಿ ಅದನ್ನು ತಾಳ ತೆನ್ನ ಬಿರುದ (ಪದ) ಸಹಿತವೆಂದೂ ಕನ್ನಡ ಭಾಷೆಯಲ್ಲಿ ರಚಿತವಾಗಬೇಕೆಂದೂ ಲಕ್ಷಣವಿದೆ (೪೦೩ : ೧೪೪). ಅಚಿಂ.ಯಲ್ಲಿ ವರ್ಣಪ್ರಬಂಧವು ಕನ್ನಡಭಾಷೆಯಲ್ಲಿ, ಬಿರುದಗಳಲ್ಲಿ, ವರ್ಣವೆಂಬ ತಾಳದಲ್ಲಿ ನಿರ್ಮಾಣವಾಗಬೇಕೆಂದಿದೆ (೪.೧೬. ೨೯೩ : ೩೨), ಉದಾಹರಣೆಯಿಲ್ಲ. ಸಂಚೂ.ಯು ಅದನ್ನು ಕನ್ನಡಭಾಷೆಯಲ್ಲಿ ಬಿರುದಗಳಿಂದ ವರ್ಣತಾಳದಲ್ಲಿ ರಚಿಸಬೇಕೆಂದೂ, ವರ್ಣತಾಳವು ಮೂರು ವಿಧವಾದುದರಿಂದ (ತ್ರಸ್ರ, ಚತುರಸ್ರ, ಮಿಶ್ರ ಎಂದು ಅದು ಮೂರು ವಿಧ) ವರ್ಣಪ್ರಬಂಧವು ಮೂರು ಬಗೆಯೆಂದೂ ವರ್ಣಿಸುತ್ತದೆ ( : ೪೯) ಸಂರ.ದಲ್ಲಿ ಇದೇ ಮಾತುಗಳನ್ನು ಹೇಳಿದೆ (೪. ೧೮೧–೧೮೨ : ೨೬೯). ಕಲ್ಲಿನಾಥನು ಇದನ್ನು ವಿಸ್ತರಿಸಿ ಹಾಡಿನ ಉದ್ಗ್ರಾ ಹ. ಧ್ರುವಗಳೆರಡನ್ನೂ ಬಿರುದಗಳಿಂದಲೇ ರಚಿಸಬೇಕು (ಕ್ರಿಯಾಕಾರಕ ಸಂಬಂಧವಿರುವ), ಪದಗಳಿಂದ ಆಭೋಗವನ್ನು ನಿರ್ಮಿಸಬೇಕು, ಇದು ತ್ರಿಧಾತುಕ, ಬಿರುದಪದತಾಲಗಳಿರುವುದರಿಂದ ಭಾವನೀಜಾತಿಯ ಪ್ರಬಂಧ, ತಾಳ ಹಾಗೂ ಭಾಷೆಗಳ ನಿಯಮವಿರುವುದರಿಂದ ಇದು ನಿರ್ಯುಕ್ತ ಎಂದು ವ್ಯಾಖ್ಯಾನಿಸುತ್ತಾನೆ ( : ೨೬೯). ಸಂರ.ದಲ್ಲಿ ವರ್ಣವನ್ನುಆಲಿಕ್ರಮ ಪ್ರಬಂಧಗಳಲ್ಲಿ ಮೊದಲನೆಯದನ್ನಾಗಿ ನಿರೂಪಿಸಿರುವುದರಿಂದ ಆ ಕಾಲಕ್ಕೆ ಅದು ಪ್ರಸಿದ್ಧಿ ಪ್ರಾಚುರ್ಯಗಳನ್ನು ಪಡೆದಿದ್ದಿರಬೇಕು.

### ಶುಕಸಾರಿಕಾ

ಶುಕ ಎಂದರೆ ಗಿಳಿ, ಸಾರಿಕಾ (ಶಾರಿಕಾ) ಎಂದರೆ ಮೈನಾ ಹಕ್ಕಿ. ಇವೆರಡಕ್ಕೂ ಮಾತು ಕಲಿಸಿ ಅವುಗಳ ಮುದ್ದು ಮಾತು ಆಲಿಸಿ ನಲಿಯುವುದೂ ಕವಿಸಮಯದಲ್ಲಿ ಅವುಗಳನ್ನು ಪ್ರಣಯಿಗಳು ದೂತರಾಗಿ ಬಳಸುವುದೂ ಉಂಟಷ್ಟೆ. ಸಂಗೀತಶಾಸ್ತ್ರಗ್ರಂಥಗಳಲ್ಲಿ ಇವೆರಡು ಪಕ್ಷಿಗಳನ್ನೂ (ಪ್ರಣಯ ?)ಸಂವಾದಕ್ಕೆ, ಪ್ರಶ್ನೋತ್ತರಕ್ಕೆ ಸಂಕೇತಗಳನ್ನಾಗಿ ಬಳಸಿ ಇಂತಹ ಸಂವಾದಕ್ಕೆಂದು ಒಂದು ಪ್ರಬಂಧವನ್ನು ಬಹಳ ಹಿಂದಿನಿಂದಲೂ ನಿರೂಪಿಸಲಾಗಿದೆ. ಇದರ ಹೆಸರು ಶುಕಸಾರಿಕಾ.

ಶುಕಸಾರಿಕೆಯ ಪ್ರಾಚೀನತಮ ಉಲ್ಲೇಖವಿರುವುದು ಬೃದೇ.ಯಲ್ಲಿ–(ಪ್ರಶ್ನೆಗೊಂದು, ಉತ್ತರಕ್ಕೊಂದು–ಹೀಗೆ) ಎರಡು ತಾಳಗಳಲ್ಲಿ ಪದಪಾಟಗಳಿದ್ದು (ಲಾಟ), ಕನ್ನಡ ಭಾಷೆಗಳಲ್ಲಿ ಅಥವಾ (ಅವುಗಳ ?) ಮಿಶ್ರಣದಲ್ಲಿ ಪ್ರಶ್ನೋತ್ತರಗಳಿರುವ ಸಂವಾದದಲ್ಲಿ ಅದು ರಚಿತವಾಗುತ್ತದೆ (೪೧೦, ೪೧೧ : ೧೪೪, ೧೪೫). ಅಚಿಂ.ಯಲ್ಲಿ ಇದೆಲ್ಲವನ್ನೂ ಹೇಳಿ ಅದು ಪದ್ಯ ಅಥವಾ ಗದ್ಯದಲ್ಲಿ ನಿರ್ಮಾಣವಾಗಬಹುದೆಂಬ ಅಧಿಕೋಕ್ತಿಯಿದೆ ಮತ್ತು ಸಂಸ್ಕೃತಭಾಷೆಯ ಮತ್ತು ಲಾಟಭಾಷೆಯ ಉದಾಹರಣೆಗಳನ್ನು ಕೊಟ್ಟಿದೆ (೪.೧೬. ೩೨೬–೩೨೯ : ೩೬,೩೭). ಸಪ್ಯ.ದಲ್ಲಿ ಭಾಷಾನಿರ್ಯುಕ್ತಿಯನ್ನು ಕೈಬಿಟ್ಟು ಅನೇಕ (ಉಕ್ತಿ–ಪ್ರತ್ಯುಕ್ತಿಗಳ) ಪಾದಗಳಿರುತ್ತವೆ ಎಂದು ಈ ಪ್ರಬಂಧದ ಲಕ್ಷಣವನ್ನು ಕೊಡಲಾಗಿದೆ

(:೪೨೧). ಸಂಚೂ. ಲಾಟ–ಕನ್ನಡ ಭಾಷೆಗಳಲ್ಲಿ ಪ್ರಶ್ನೋತ್ತರಗಳನ್ನೂ ಪ್ರತಿಯೊಂದು ಪಾದದ ಕೊನೆಯಲ್ಲಿ ಪಾಟರಚನೆಯನ್ನೂ, ಎರಡು ತಾಳಗಳನ್ನೂ, ತಾಳದ ಎರಡು ಆವರ್ತಗಳ ವಿಸ್ತಾರದಲ್ಲಿ ಪ್ರಬಂಧಮುಕ್ತಾಯವನ್ನೂ ಈ ಹಾಡಿಗೆ ವಿಧಿಸುತ್ತದೆ (:೪೮). ಸಂರ., ನರ್ತನನಿರ್ಣಯ, ಚತುರ್ದಂಡೀಪ್ರಕಾಶಿಕಾ ಮುಂತಾದ ಪ್ರಾಮಾಣಿಕ ಆಕರಗಳಲ್ಲಿ ಶುಕಸಾರಿಕೆಯ ನಿರೂಪಣೆಯಿಲ್ಲವೆಂಬುದು ಸ್ವಾರಸ್ಯದ ಸಂಗತಿಯಾಗಿದೆ. ಸಂಗೀತರಾಜದಲ್ಲಿ ಈ ಗೇಯಪ್ರಬಂಧದ ವಿವರಪೂರ್ಣ, ವ್ಯಾಪಕ ವರ್ಣನೆಯಿದೆ: ಅಷ್ಟೋತ್ತರೀ ಎಂದೂ ಹೆಸರುಳ್ಳ ಇದರಲ್ಲಿ ಎಂಟು ಚರಣಗಳಿರುತ್ತವೆ. ಅದನ್ನು ನಾನಾ ಭಾಷೆಗಳಲ್ಲಿ ರಚಿಸಬಹುದು; ಪ್ರಶ್ನೆಯು ಉದ್ಗ್ರಾಹ, ಉತ್ತರವು ಧ್ರುವ; ಕೆಲವು ವೇಳೆ ಕನ್ನಡದಲ್ಲಿ ಪ್ರಶ್ನೆಯೂ ಲಾಟದಲ್ಲಿ ಉತ್ತರವೂ ಇರುತ್ತವೆ; ಆಭೋಗವನ್ನು ಬೇರೆ ಪಾದಗಳಿಂದ ನಿರ್ಮಿಸಬೇಕು; ಪ್ರಶ್ನೆಯೂ ಉತ್ತರವೂ ಒಂದೊಂದೇ ಪಾದದಲ್ಲಿ ಅಡಕವಾಗಿರಬೇಕು; ಪಾದದ ಕೊನೆಯಲ್ಲಿ ಪಾಟವಿರುತ್ತದೆ, ಒಂದೇ ತಾಲದಲ್ಲಿ ಪ್ರಬಂಧವಿರುತ್ತದೆ, ಅದರ ಕೊನೆಯನ್ನು ತಾಳದ ಎರಡು ಆವರ್ತಗಳ ಪ್ರಮಾಣದಲ್ಲಿ ನಿರ್ವಹಿಸಬೇಕು (ಶಿ. ೪. ೪. ೩೩–೩೫ : ೬೧೦, ೬೧೨).

ಶುಕಸಾರಿಕವು ಕರ್ನಾಟಕದಲ್ಲಿ ಬಹು ಜನಪ್ರಿಯ ಹಾಡು. ಅದನ್ನು ಹರಿದಾಸರು ಪದೇಪದೇ ನಿರ್ಮಿಸಿದ್ದಾರೆ; ಅನೇಕ ಜಾನಪದ ಗೀತೆಗಳು ಇದರ ಮಾದರಿಯಲ್ಲಿ ರಚಿತವಾಗಿವೆ. ಉದಾ. ಶ್ರೀಪಾದರಾಜರ 'ಕಂಜನೇತ್ರೆ ಶುಭಮಂಜುಳಗಾತ್ರೆ' (ಶ್ರೀಪಾದರಾಜರ ಕೃತಿಗಳು: ೩೩) 'ಮಾನನಿಧಿ ಸಿರಿಕೃಷ್ಣ' (ಅದೇ: ೧೧೩). ವಾದಿರಾಜರ ನಾರದ ಕೊರವಂಜಿ (ವಾದಿರಾಜರ ಕೃತಿಗಳು: ೪೬೨–೪೭೧) ಪುರಂದರದಾಸರ 'ಕಂದ, ಮಣ್ಣು ತಿನ್ನಬೇಡವೋ' (ಪುರಂದರದಾಸರ ಸಾಹಿತ್ಯದರ್ಶನ, ೪.೭೨:೧೩೮, ೧೩೯) ಕನಕದಾಸರ 'ನೆರೆದು ಗೋಪಿಯರೆಲ್ಲರು' (ಕನಕದಾಸರ ಭಕ್ತಿಗೀತೆಗಳು, ೧೦೩: ೧೨೭, ೧೨೮). ಹರಪನಹಳ್ಳಿಭೀಮವ್ವನ 'ಅಕ್ಕರವುಳ್ಳ ನಮ್ಮಕ್ಕ ಕೇಳೆ' (ಹರಪನಹಳ್ಳಿ ಭೀಮವ್ವನ ಹಾಡುಗಳು ೧: ೧), 'ಕೋಲುಕೋಲೆನ್ನಿ' (ಅದೇ ೭೪: ೧೫೮, ೧೫೯). 'ಕದವನಿಕ್ಕಿದ ಕಾರಣವೇನೆ ಮುದದಿ ಕೇಳೆ ಮೋಹನಾಂಗಿ' (ಅದೇ ೮೧: ೧೭೦–೧೭೩), 'ಪುರುಪರ್ವವರು ಕೂಡಿ ಹರುಷದಿ ಬರುತಿರೆ' (ಅದೇ ೪೯: ೧೮೫–೧೮೯), 'ಗಜಮುಖ ಗಣಪನಂಬುಜಪಾದಕ್ಕೆರಗುವೆ' (ಅದೇ ೪೯: ೧೦೦–೧೧೫). 'ನೀಲವರ್ಣಗೋಪಾಲನು ಎಲ್ಲಿ' (ಅದೇ ೭೬: ೧೬೪–೧೬೮). 'ಇಂದುವದನೆ ಪಾರ್ವತಿಯೆ' (ಅದೇ ೧೪: ೨೭–೨೯); ಜನಪದಸಂಗೀತದಲ್ಲಿಯೂ ಶುಕಸಾರಿಕಕ್ಕೆ ಕೆಲವು ನಿದರ್ಶನಗಳನ್ನು ನೀಡಬಹುದು: ಭಾವನಾದಿನಿಯರ ಸರಸ (ನಾಡಪದಗಳು: ೨೮, ೨೯), ಚಿತ್ತಲಾರದ ಗೊಂಬೆ (ಅದೇ ೪೨). ಕುಂಜರದ ಬೊಂಬೆ ಕೇಳೆ (ಅದೇ: ೩೫), 'ಬಳೆಗಾರ' (ಅದೇ: ೭೮), ತಾಯಿಲ್ಲದ ತವರು (ಅದೇ: ೭೦), 'ಅಣ್ಣನ ಮನೆಗೆ ಹೆಣ್ಣಿಗೆ ಹೋದದ್ದು' (ಅದೇ. ೭೧), 'ಉತ್ತರದೇವಿಯ ಹಾಡು' (ಅದೇ: ೯೧–೯೬), 'ಗೌರಮ್ಮನ ಮದುವೆ' (ಅದೇ: ೧೯೯–೧೧೩). 'ಲಕ್ಕಣ್ಣ–ಈರಣ್ಣ' (ಅದೇ: ೧೫೭–೧೬೮). 'ನಂಜುಂಡಯೋಗಿ'

(ಅದೇ : ೧೮೭–೧೯೧) ಇತ್ಯಾದಿ. ಕನ್ನಡ ರಂಗಗೀತೆಗಳಲ್ಲಿ ಶುಕಸಾರಿಕೆಯ ನಿದರ್ಶನಗಳು ಹೇರಳವಾಗಿ ದೊರೆಯುತ್ತವೆ.

## ಗ್ರಂಥಋಣ


ಕನಕದಾಸರು, 'ಶ್ರೀಕನಕದಾಸರ ಭಕ್ತಿಗೀತೆಗಳು' ಸಂ. ಕೃಷ್ಣಶರ್ಮಾ ಬೆಟಗೇರಿ. ಬೆಂಗೇರಿ ಹುಚ್ಚೂರಾವ್, ಸಮಾಜ ಪುಸ್ತಕಾಲಯ, ಧಾರವಾಡ ೧೯೬೫

ಕುಂಭಕರ್ಣ, 'ಸಂಗೀತರಾಜ,' ಸಂ. ಪ್ರೇಮಲತಾಶರ್ಮಾ, ಹಿಂದೂವಿಶ್ವವಿದ್ಯಾಲಯ ನೇಪಾಲರಾಜ ಸಂಸ್ಕೃತಗ್ರಂಥಮಾಲಾ ೫, ಕಾಶೀ ಹಿಂದೂ ವಿಶ್ವವಿದ್ಯಾಲಯ, ಬನಾರಸ್ ೧೯೬೩

ಕೃಷ್ಣಮೂರ್ತಿ, ಮತಿಘಟ್ಟ ಮತ್ತು ರಾಮಸ್ವಾಮಿ, ಸಂ· 'ನಾಡಪದಗಳು', ಸಂ. ಗುಂಡಪ್ಪ, ಎಲ್. ಬೆಂಗಳೂರು, ೧೯೪೭

ಗುಣಚಂದ್ರ, 'ಛಂದಸ್ಸಾರ', ಮದ್ರಾಸ್ ಸಂಸ್ಕರಣ

ಜಗದೇಕಮಲ್ಲ, 'ಸಂಗೀತಚೂಡಾಮಣಿ', ಹಸ್ತಪ್ರತಿ, ವರಲಕ್ಷ್ಮೀ ಅಕಾಡೆಮಿ, ಮೈಸೂರು

ಜಯಕೀರ್ತಿ, 'ಛಂದೋನುಶಾಸನಂ', ಸಂ. ವೇಲಣಕರ್ ಎಚ್. ಡಿ., ಜಯದಾಮನ್, ಮುಂಬಯಿ, ೧೯೪೯

ನರಸಿಂಹಾಚಾರ್, ಡಿ. ಎಲ್., 'ಪೀಠಿಕೆಗಳು ಲೇಖನಗಳು', ಡಿ.ವಿ.ಕೆ. ಮೂರ್ತಿ, ಮೈಸೂರು ೧೯೭೧

ನಾಗವರ್ಮ, 'ಛಂದೋಂಬುಧಿ' ಸಂ. ಕುಕ್ಕಿಲ ಕೃಷ್ಣಭಟ್ಟ, ಡಿ.ವಿ.ಕೆ. ಮೂರ್ತಿ, ಮೈಸೂರು ೧೯೭೫

ನಾನ್ಯದೇವ, 'ಸರಸ್ವತೀ ಹೃದಯಾಲಂಕಾರಹಾರ' (ಭರತಭಾಷ್ಯ), ಹಸ್ತಪ್ರತಿ, ವರಲಕ್ಷ್ಮೀ ಅಕಾಡೆಮಿ, ಮೈಸೂರು

ಪುಂಡರೀಕ ವಿಠಲ, 'ನರ್ತನನಿರ್ಣಯ', ಸಂ. ಅನು. ಸತ್ಯನಾರಾಯಣ, ರಾ., (ಪುಂಡರೀಕಮಾಲಾ), ಕನ್ನಡ—ಸಂಸ್ಕೃತಿ ನಿರ್ದೇಶನಾಲಯ ಹಾಗೂ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಕರ್ನಾಟಕ ಸರ್ಕಾರ, ಬೆಂಗಳೂರು ೧೯೮೬

ಪುರಂದರದಾಸ, 'ಪುರಂದರ ಸಾಹಿತ್ಯದರ್ಶನ', ರಾಮಚಂದ್ರರಾವ್, ಎಸ್. ಕೆ. (ಸಂ.), ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ (೪ ಸಂಪುಟಗಳು), ಬೆಂಗಳೂರು ೧೯೮೫

ಮತಂಗ, 'ಬೃಹದ್ದೇಶೀ', ಸಂ.ಸಾಂಬಶಿವಶಾಸ್ತ್ರಿ, ಕೆ. ತಿರುವಂದರಂ ಸಂಸ್ಕೃತ ಗ್ರಂಥಮಾಲಾ ೯೪, ತಿರುವಂದರಂ ೧೯೨೮.

ವಾದಿರಾಜ, 'ಶ್ರೀವಾದಿರಾಜರ ಕೃತಿಗಳು', ಸಂ. ನಾಗರತ್ನ ಟಿ. ಎನ್., ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೮೦

ವೆಂಕಟಮುಖಿ, 'ಚತುರ್ದಂಡೀಪ್ರಕಾಶಿಕಾ', ಸಂ. ಅನು. ಸತ್ಯನಾರಾಯಣ,ರಾ., ಪ್ರಸಾರಾಂಗ,ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು ೧೯೭೮

ವೆಂಕಟಾಚಲಶಾಸ್ತ್ರೀ, ಟಿ. ವಿ., 'ಕನ್ನಡಛಂದಃಸ್ವರೂಪ', ಡಿ.ವಿ.ಕೆ. ಮೂರ್ತಿ, ಮೈಸೂರು ೧೯೭೮

ಶಾರ್ಙ್ಗದೇವ, 'ಸಂಗೀತರತ್ನಾಕರ', ಸಂ. ಸುಬ್ರಹ್ಮಣ್ಯಶಾಸ್ತ್ರೀ ಎಸ್., ಅಡ್ಯಾರ್, ಸಂಪುಟ ೧, ಸಂಖ್ಯೆ ೬೦, ೧೯೪೩ ; ಸಂಪುಟ ೨, ಸಂಖ್ಯೆ ೪೩, ೧೯೪೪ ; ಸಂಪುಟ ೩, ಸಂಖ್ಯೆ-೭೮, ೧೯೫೧ ; ಸಂಪುಟ ೪, ಸಂಖ್ಯೆ ೮೬, ೧೯೫೩.
(ಸಿಂಹಭೂಪಾಲನ 'ಸಂಗೀತ ಸುಧಾಕರ' ಹಾಗೂ ಕಲ್ಲಿನಾಥನ 'ಸಂಗೀತ ಕಲಾನಿಧಿ' ಎಂಬ ವ್ಯಾಖ್ಯಾನಗಳ ಸಮೇತ)

ಶ್ರೀಪಾದರಾಜ,'ಶ್ರೀಪಾದರಾಜರ ಕೃತಿಗಳು', ಸಂ. ವರದರಾಜರಾವ್, ಜಿ., ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೩

ಸತ್ಯನಾರಾಯಣ, ರಾ., 'ಪುಂಡರೀಕಮಾಲಾ' (ನೋಡಿ : ಪಂಡರೀಕವಿಠಲ)

ಸತ್ಯನಾರಾಯಣ, ರಾ., 'ಕರ್ನಾಟಕ ಸಂಗೀತವಾಹಿನೀ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೮೦

ಸೋಮೇಶ್ವರ, ಸರ್ವಜ್ಞ, 'ಅಭಿಲಷಿತಾರ್ಥಚಿಂತಾಮಣಿ' ('ಮಾನಸೋಲ್ಲಾಸ'), ಸಂ. ಶ್ರೀ ಗೊಂಡೇಕರ್, ಜಿ. ಕೆ., ಸಂ. ೩, ಗಾಯಕವಾಡ್ ಓರಿಯಂಟಲ್ ಸೀರೀಸ್ ೧೩೮, ಓರಿಯಂಟಲ್ ಇನ್‌ಸ್ಟಿಟ್ಯೂಟ್, ಬರೋಡ ೧೯೬೧

ಹರಪನಹಳ್ಳಿ ಭೀಮವ್ವ, 'ಹರಪನಹಳ್ಳಿ ಭೀಮವ್ವನ ಹಾಡುಗಳು', ಸಂ. ನಾಗರತ್ನ, ಟಿ. ಎನ್., ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೮೮

# ನಾನಾರ್ಥ ಪದಕೋಶ

ತಾಳ್ತಜೆ ವಸಂತಕುಮಾರ

ಕನ್ನಡದ ಸರ್ವಾಂಗೀಣ ಬೆಳವಣಿಗೆಯನ್ನು ಯೋಜಿಸಿ ಅನುಷ್ಠಾನಗೊಳಿಸುತ್ತಿರುವ ಇಂದು, ನಮಗೆ ಉಪಯುಕ್ತವೆನಿಸುವ ಕೈಪಿಡಿಗಳು, ನಿಘಂಟುಗಳು, ವಿಶ್ವಕೋಶಗಳು, ಮತ್ತಿತರ ಆಕರ ಸಾಮಗ್ರಿಗಳ ಶಾಸ್ತ್ರೀಯವಾದ ಸಂಯೋಜನೆಯ ಅಗತ್ಯವಿದೆ. ಆಧುನಿಕ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಕಂಪ್ಯೂಟರುಗಳಂಥ ಸಾಧನಗಳನ್ನು ಬಳಸಿಕೊಂಡು ಭಾಷೆ ಸಾಹಿತ್ಯ, ಸಂಸ್ಕೃತಿಗಳ ಅಧ್ಯಯನವನ್ನು ಶಿಸ್ತುಬದ್ಧಗೊಳಿಸುವುದು ಸಾಧ್ಯವಿದೆ.

ಭಾಷೆಯ ರಚನೆಯಲ್ಲಿ ಮುಖ್ಯವಾದ ಎರಡು ನೆಲೆಗಳಿವೆ. ಮೊದಲನೆಯದು, ಪದ ಮತ್ತು ವಾಕ್ಯವಿನ್ಯಾಸ ಕ್ರಮ : ಎರಡನೆಯದು ಶಬ್ದಕೋಶ. ಪ್ರಕೃತ, ಇವುಗಳಲ್ಲಿ ಎರಡನೆಯ ನೆಲೆಯಾದ ಶಬ್ದಕೋಶವನ್ನು ಉಪಲಕ್ಷಿಸಿ, ಅದರ ಆಕರಸಾಮಗ್ರಿಯ ಒಂದು ಪ್ರಕಾರವನ್ನು ವಿವೇಚಿಸುವ ಉದ್ದೇಶವನ್ನು ಇಟ್ಟುಕೊಂಡಿದೆ.

ಭಾಷೆ ಮತ್ತು ಸಾಹಿತ್ಯಗಳ ವಿದ್ಯಾರ್ಥಿ ಅಸಂಖ್ಯಾತ ಆಕರಗಳನ್ನು, ಅವುಗಳ ಭಿನ್ನ ಆಯಾಮಗಳೊಂದಿಗೆ, ನೋಡಬೇಕಾಗುತ್ತದೆ. ಆ ಸಂದರ್ಭಗಳಲ್ಲಿ ಪದಗಳಿಗೆ ಸಂಬಂಧಿಸಿ ದಂತೆ ಆತನಿಗೆ ದೊರಕುವ ಬಹುದೊಡ್ಡ ಭಂಡಾರವೆಂದರೆ ನಿಘಂಟು. ನಿಘಂಟುಗಳಲ್ಲಿ ಅನೇಕ ವಿಧಗಳಿದ್ದು, ಉದ್ದೇಶ, ವ್ಯಾಪ್ತಿ, ಬಳಕೆ, ಭಾಷೆ ಮುಂತಾದ ನೆಲೆಗಳಲ್ಲಿ ಅವು ಗಳನ್ನು ವಿಭಿನ್ನಪ್ರಕಾರಗಳಾಗಿ ವಿಂಗಡಿಸಬಹುದು. ಸಾಮಾನ್ಯಪದಕೋಶ, ಸಮಾನಾರ್ಥ ಪದಕೋಶ, ವಿರುದ್ಧಾರ್ಥಪದಕೋಶ, ನಾಣ್ಣುಡಿಗಳ ಕೋಶ, ಉಪಭಾಷೆಗಳ ಪದಕೋಶ, ಪಾರಿಭಾಷಿಕಪದಕೋಶ ಇವೆಲ್ಲ ಇಂಥ ಕೆಲವು ವಿಶಿಷ್ಟ ಪ್ರಕಾರಗಳು.

ಕೆಲವೊಮ್ಮೆ ಒಂದೇ ಕೋಶವು ಒಂದಕ್ಕಿಂತ ಹೆಚ್ಚು ನೆಲೆಗಳಲ್ಲೂ ಪ್ರವರ್ತಿಸಬಹುದು. ಇದನ್ನು ಸ್ವಲ್ಪ ವಿವರವಾಗಿ ಪರಿಶೀಲಿಸೋಣ.

ಸಂಕ್ಷಿಪ್ತ ಆಕ್ಸ್‌ಫರ್ಡ್ ಇಂಗ್ಲಿಷ್ ನಿಘಂಟುವಿನಂಥ ಒಂದು ಮಾದರಿಯನ್ನು ಉದಾ ಹರಣೆಗಾಗಿ ತೆಗೆದುಕೊಂಡರೆ ಈ ಕೆಳಗಿನಂತೆ ಅದರ ವಿನ್ಯಾಸವನ್ನು ರೇಖಿಸಬಹುದು.[1]

ಮೇಲಿನ ಆಕೃತಿಯ ಕೇಂದ್ರವು ಸಮಾನಪದಗಳಿಂದ ಕೂಡಿದ್ದು, ಅಲ್ಲಿ ಆಡುನುಡಿ ಮತ್ತು ಗ್ರಂಥಸ್ಥಶಬ್ದಗಳು ಒಂದಾಗುವುದನ್ನು ಕಾಣುತ್ತೇವೆ. ವೈಜ್ಞಾನಿಕ, ಅನ್ಯದೇಶ್ಯ ಮತ್ತು ಪಾರಂಪರಿಕ ಪದಗಳು ಗ್ರಂಥಸ್ಥ ಭಾಷೆಯ ವಿಸ್ತಾರಿತ ಬಿಂದುಗಳಾಗುತ್ತವೆ.




ಪಾರಿಭಾಷಿಕ ಮತ್ತು ಉಪಭಾಷಿಕಪದಗಳು ಸಾಮಾನ್ಯಭಾಷೆಯಿಂದ ಟಿಸಿಲೊಡೆದು ಮಾತಿನಲ್ಲೂ ಕೃತಿಗಳಲ್ಲೂ ಎಡೆಪಡೆಯುತ್ತವೆ. ಗ್ರಾಮ್ಯಪದಗಳೂ ವೃತ್ತಿ ವ್ಯಾಪಾರ ಮುಂತಾದ ಕ್ಷೇತ್ರಗಳಲ್ಲಿ ಪಾರಿಭಾಷಿಕಗಳ ಗಡಿಗೆರೆಯನ್ನು ದಾಟುವ ಸಾಧ್ಯತೆಗಳೂ ಇವೆ. ಗ್ರಾಮ್ಯ, ಅಶ್ಲೀಲ ಹಾಗೂ ಉಪಭಾಷೆಗಳು ಕೆಳಸ್ತರದಲ್ಲಿ ಪರಿಗಣಿತವಾಗುವುದಿದ್ದು, ಉಪಭಾಷಿಕ ಮತ್ತು ಪಾರಂಪರಿಕ ಪದಗಳು ಕೆಲವೊಮ್ಮೆ ಅಂತರ್ ಸಂಬಂಧವನ್ನೂ ಹೊಂದಿರಬಹುದು.

ಇವಲ್ಲದೆ ಒಂದು ಪದಕ್ಕೆ ನಾಮಪದ. ಕ್ರಿಯಾಪದ, ವಿಶೇಷಣ ಮುಂತಾದ ನೆಲೆಗಳೂ ಇರುವುದಿದ್ದು, ನಿಷ್ಪತ್ತಿ ಚಾರಿತ್ರಿಕತೆ ಮುಂತಾದುವುಗಳೂ ಈ ದೃಷ್ಟಿಯಿಂದ ವಿಶಿಷ್ಟವೆನಿಸುತ್ತವೆ. ಭಾಷೆಯ ಪ್ರಾಚೀನ ಸ್ತರಗಳನ್ನು ಗಮನಿಸಿದಾಗ ಈ ಅಂಶ ಇನ್ನಷ್ಟು ಸ್ಪಷ್ಟವಾಗುತ್ತದೆ. ಹೀಗೆ ಪದವೊಂದರ ಅರ್ಥವಿಸ್ತಾರ. ಅರ್ಥಾಂತರ ಇತ್ಯಾದಿಗಳು. ಅವುಗಳ ವರ್ಗೀಕರಣ ಮತ್ತು ವಿಶ್ಲೇಷಣೆಯ ಪ್ರಕ್ರಿಯೆಗಳು—ಇವುಗಳ ಮಹತ್ವ ಅರಿವಿಗೆ ಬರುತ್ತದೆ.

ಒಂದು ಪದವನ್ನು ಸಂಪೂರ್ಣ ಘಟಕವೆಂದು ಪರಿಗಣಿಸಿದಾಗ, ಪದಗಳ ನಡುವೆ ಎರಡು ಬಗೆಯ ಸಂಬಂಧಗಳನ್ನು ಕಾಣಲು ಸಾಧ್ಯವಿದೆ :

೧. ಶಬ್ದಾರ್ಥ ಸಂಬಂಧ, ೨. ಶ್ರೇಣೀಕೃತ ಸಂಬಂಧ.

ಒಂದು ಪದದ ನಂಟನ್ನು ಇನ್ನೂ ಅನೇಕ ಪದಗಳೊಂದಿಗೆ ಜೋಡಿಸುವುದು ಸಾಧ್ಯವಿದೆ.

೧. ಸಮಾನಾರ್ಥಕ — ಪ್ರತಿಭೆ = ಹೊಳೆಯುವಿಕೆ
೨. ವಿರುದ್ಧಾರ್ಥಕ — ಬಿಳುಪು X ಬೀಳು
೩. ಸಂಬಂಧಾರ್ಥಕ — ಗಂಡ + ಹೆಂಡತಿ
೪. ಪೂರಕ ಪದಗಳು — ಕಂಡು—ಹಿಡಿ
೫. ವಿಸದೃಶ ಪದಗಳು — ಮೇಲರಿಮೆ/ಕೀಳರಿಮೆ

ಯಾವುದೇ ಒಂದು ಪದಕ್ಕೆ ಈ ಕೆಳಗಿನಂತೆ ಮೂರು ಪ್ರಧಾನ ಪ್ರಕಾರಗಳಲ್ಲಿ ಸಂಬಂಧಗಳನ್ನು ಸ್ಥಾಪಿಸಬಹುದು :

೧. ಕೆಲವು ಪದಗಳ ಮಧ್ಯದ ಸಂಬಂಧ ಅನುಲೋಮವಾಗಿರುತ್ತದೆ : ಜೀವಶಾಸ್ತ್ರ > ಸಸ್ಯಶಾಸ್ತ್ರ.

೨. ಕೆಲವು ಪದಗಳ ಮಧ್ಯದ ಸಂಬಂಧ ವಿಲೋಮವಾಗಿರುತ್ತದೆ : ಉಪಮೆ < ಅಲಂಕಾರ.

೩. ಕೆಲವು ಪದಗಳ ಮಧ್ಯೆ ಸಮಾನಾಂತರಸಂಬಂಧವಿರುತ್ತದೆ : ಉಪಮೆ—ರೂಪಕ.

ಹೀಗೆ ಒಂದು ಪದ ಇಲ್ಲವೆ ಪರಿಕಲ್ಪನೆಗೆ ಸಂಬಂಧಿಸಿದಂತೆ ನಾವು ಅನ್ವೇಷಿಸುವ ಮಾಹಿತಿಗಳೆಲ್ಲವನ್ನೂ ಒಂದೇ ನಿಘಂಟು ಅಥವಾ ಪದಕೋಶವು ಕೊಡಬಲ್ಲುದೇ ? ಇದಕ್ಕೆ ಸಕಾರಾತ್ಮಕವಾದ ಉತ್ತರವೆಂದರೆ, ನಾನಾರ್ಥಪದಕೋಶ **(Thesaurus)**.

ಈ ಲೇಖನದಲ್ಲಿ 'ನಾನಾರ್ಥ ಪದಕೋಶ'ದ ರಚನೆಗೆ ಸಂಬಂಧಿಸಿದಂತೆ ಒಂದು ತಾತ್ವಿಕ ಚರ್ಚೆಯನ್ನು ಮತ್ತು ಅನುಷಂಗಿಕವಾಗಿ ಕನ್ನಡ ಕಾವ್ಯಮೀಮಾಂಸೆಯ ಐದು ಪದಗಳನ್ನು ಒಳಗೊಂಡ ಪ್ರಾಯೋಗಿಕ ನಾನಾರ್ಥಪದಕೋಶವನ್ನು ಅಳವಡಿಸಿದೆ. ನಾನಾರ್ಥಪದಕೋಶದ ರಚನಾವಿಧಾನಗಳ ಬಗೆಗೂ ಲಕ್ಷ್ಯವಿರಿಸುತ್ತ ಚಿಂತನೆಯನ್ನು ಬೆಳೆಸಲಾಗಿದೆ.

**ನಿರ್ವಚನ**

ನಾನಾರ್ಥ ಪದಕೋಶವನ್ನು ಇಂಗ್ಲಿಷಿನಲ್ಲಿ ಬಳಕೆಯಲ್ಲಿರುವ 'ಥೆಸಾರಸ್' **(Thesauras)**ಗೆ ಸಂವಾದಿಯಾಗಿ ಬಳಸಬಹುದು. ಇದು ಗ್ರೀಕ್‌ಮೂಲದ ಪದವಾಗಿದ್ದು, 'ಶಬ್ದ ಭಂಡಾರ' ಎನ್ನುವ ಅರ್ಥವನ್ನು ಹೊಂದಿದೆ. **Webster** ಕೋಶದಲ್ಲಿ **"It is a book of words or of information about a field or set of concepts—specfically a dictionary of synonyms"** ಎನ್ನುವ ವಿವರಣೆಯಿದ್ದು, ಇದರಿಂದ "ಯಾವುದೇ ಒಂದು ಕ್ಷೇತ್ರದ ಅಥವಾ ಪರಿಕಲ್ಪನೆಯ ಬಗೆಗೆ ಸಮಾನಪದಗಳನ್ನು ಕೊಡುವ ಕೋಶ" ಎನ್ನುವುದು ವಿದಿತವಾಗುತ್ತದೆ.

ಇದಲ್ಲದೆ ನಾನಾರ್ಥಪದಕೋಶಕ್ಕೆ ಸಂಬಂಧಿಸಿದಂತೆ ಇನ್ನೂ ಕೆಲವು ನಿರ್ವಚನಗಳು ಸಿಗುತ್ತವೆ: ಉದಾಹರಣೆಗೆ,

"It is a controlled and dynamic documentary language containing semantically and generically related terms which comprehensively covers a specific domain of language."[3] ಆದುದರಿಂದ, ನಾನಾರ್ಥಪದಕೋಶವನ್ನು, ಪದಗಳು ಮತ್ತು ನುಡಿಗಟ್ಟುಗಳ ವಿವಿಧ ಅರ್ಥಗಳನ್ನೂ ಪರಸ್ಪರಸಂಬಂಧ ಮತ್ತು ಅವಲಂಬನಗಳನ್ನೂ ನೀಡುವ, ಆ ಮೂಲಕ ಭಾಷೆಗೆ ಒಂದು ವಿಶಿಷ್ಟಸ್ವರೂಪವನ್ನು ಕೊಡುವ ರಚನೆ ಎನ್ನಬಹುದು. ಸಾಂಪ್ರದಾಯಿಕ ನಿಘಂಟಿಗಿಂತ ಹೆಚ್ಚಿನ ಮೌಲಿಕತೆ ಮತ್ತು ವ್ಯಾಪ್ತಿ ಇದಕ್ಕಿರುವುದು ಈ ಮೂಲಕ ಸ್ಪಷ್ಟವಾಗುತ್ತದೆ.

ನಾನಾರ್ಥಪದಕೋಶದ ಬಗೆಗಿನ ಇನ್ನೂ ಕೆಲವು ನಿರ್ವಚನಗಳು ಬೇರೆಯೇ ನೆಲೆಗಳಿಂದ ಅದರ ರಚನೆ ಮತ್ತು ವ್ಯಾಪ್ತಿಯನ್ನು ನಿರ್ದೇಶಿಸುತ್ತವೆ:

"(It is) a collection... arranged not in alphabetical order as they are in a dictionary, but according to the ideas they express.... the object aimed at is the idea being given to find the words/words by which the idea may be most fitly and aptly expressed."[3]

ಒಟ್ಟಿನಲ್ಲಿ ಇದು ನಿಘಂಟಿಗೆ ಪೂರಕವಾಗಿ ನಿಲ್ಲುವ ಆಕರಗ್ರಂಥವೆನ್ನಬಹುದು.

## ಚಾರಿತ್ರಿಕ ದೃಷ್ಟಿಕೋನ

"Roget's Thesaurus of English Words and Phrases" (1852) ಈ ನಿಟ್ಟಿನ ಮೊದಲ ಗಮನಾರ್ಹ ಪ್ರಯತ್ನವಾಗಿದೆ. ಇಲ್ಲಿ ನಾನಾರ್ಥಪದಕೋಶಕ್ಕೆ ಒಂದು ನಿರ್ದಿಷ್ಟವಿನ್ಯಾಸವನ್ನೂ ಸಾಂಪ್ರದಾಯಿಕ ನಿಘಂಟಿನಿಂದ ಭಿನ್ನವಾದ ನೆಲೆಯನ್ನೂ ಕಲ್ಪಿಸುವ ಪ್ರಯತ್ನವನ್ನು ಕಾಣುತ್ತೇವೆ. ಇದರ ಮುನ್ನುಡಿಯಲ್ಲಿ,

"Conceiving that such a compilation might help to supply my own dificiencies, I had in 1805 completed a classed catalogue of words on a small scale on the same principle and nearly in the same form as the Thesaurus now published."[4]

ಹೀಗೆ ಕಳೆದ ಶತಮಾನದಲ್ಲಿಯೇ ಈ ಬಗೆಯ ಪ್ರಯತ್ನಗಳು ಮೊದಲಾದುವು. ಈ ಮೇಲಿನ ಕೋಶದಲ್ಲಿ ಉಪಲಬ್ಧಪದಸಂಪತ್ತಿಯನ್ನು ಶಿಷ್ಟಸಾಹಿತ್ಯ, ಗ್ರಾಮಾಂತರ ಪ್ರದೇಶಗಳ ಆಡುನುಡಿಗಳು, ಕಲೆ ಇತಿಹಾಸ ಇತ್ಯಾದಿ ಎಲ್ಲ ಶಿಸ್ತುಗಳ ವಾಙ್ಮಯ ಮೂಲದಿಂದ ಬಳಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಹೀಗೆ ಸಂಗ್ರಹಿಸಿದ

ಎಲ್ಲಾ ಶಬ್ದಗಳನ್ನೂ ಸಮಾನ ಅರ್ಥವಿರುವ ಗುಂಪುಗಳಾಗಿ ವರ್ಗೀಕರಿಸಿ ಅವುಗಳನ್ನು ಜೋಡಿಸಲಾಗಿದೆ.

ಅನಂತರದ ದಿನಗಳಲ್ಲಿ ಈ ನಿಟ್ಟಿನಲ್ಲಿ ಅನೇಕ ಯಶಸ್ವಿ ಪ್ರಯತ್ನಗಳು ನಡೆದಿದ್ದು, ಇಂದಿಗೆ ಇದೊಂದು ಪ್ರತ್ಯೇಕ ಆಕರಮೂಲ(**Reference source**)ವೆಂದು ಪರಿಗಣಿತವಾಗಿದೆ.

## ನಾನಾರ್ಥ ಪದಕೋಶದ ಪ್ರಯೋಜನಗಳು

ಯಾವುದೇ ಒಂದು ಪರಿಕಲ್ಪನೆಯನ್ನೂ ಅತ್ಯಂತ ಸೂತ್ರಬದ್ಧ ಮತ್ತು ನಿರ್ದಿಷ್ಟಗೊಳಿಸಲು ನಾನಾರ್ಥಪದಕೋಶ ನೆರವಾಗುತ್ತದೆ. ಈ ಅರ್ಥದಲ್ಲಿ ಇದು ಬೇರೆ ಬೇರೆ ಬಗೆಯ ಪದಕೋಶಗಳ ಸಂಯುಕ್ತರೂಪ ಎನ್ನಬಹುದು. ಇದನ್ನು ಇನ್ನಷ್ಟು ಸ್ಪಷ್ಟಗೊಳಿಸುವುದಾದರೆ :

(೧) ಒಂದು ಜ್ಞಾನಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲ ಶಬ್ದಗಳನ್ನು ಒಂದೆಡೆ ಒದಗಿಸಿಕೊಡುವುದು. (೨) ಈ ಮೊದಲೇ ವಿವರಿಸಿದಂತೆ, ನಿರ್ದಿಷ್ಟ ಪರಿಕಲ್ಪನೆಯೊಂದರ ಮೂರು ಆಯಾಮಗಳನ್ನು ಒದಗಿಸುವುದು. (೩) ಯಾವುದೇ ಒಂದು ವಿಷಯಕ್ಕೆ ಸಂಬಂಧಿಸಿದಂತೆ ಒಂದು ಶಿಷ್ಟಪದವನ್ನು ನಿರ್ದೇಶಿಸುವುದರ ಮೂಲಕ ಏಕರೂಪತೆಯನ್ನು ಕಾಪಾಡಿಕೊಳ್ಳುವುದು. (೪) ಪದಗಳು ಅಥವಾ ಪರಿಕಲ್ಪನೆಗಳಲ್ಲಿ ದ್ವಿಮುಖಸಂವಹನ ಸಾಧ್ಯವಾಗುವಂತೆ ಒಂದು ವಿಶಿಷ್ಟ ಆಕರ ಸಾಮಗ್ರಿಯನ್ನು ಒದಗಿಸುವುದು. ಉದಾ :

ಸೃಜನಶೀಲ ← ಸೃಷ್ಟಿಶೀಲ, ಸೃಷ್ಟ್ಯಾತ್ಮಕ.
ಮೂಲರೂಪಾತ್ಮಕ

ಸೃಷ್ಟಿಶೀಲ — ನೋಡಿ : ಸೃಜನಶೀಲ.

(೫) ಅತ್ಯಂತ ಸೂಕ್ತವಾದ ಪದವೊಂದರ ನೇರವಾದ ಒದಗಣೆಯು ಮೂಲಕ ಅನ್ವೇಷಕನ ಸಮಯದ ಉಳಿತಾಯ.

* * *

ಈ ಚರ್ಚೆಯ ಹಿನ್ನೆಲೆಯಲ್ಲಿ ನಾವು ಇಂದು ಕನ್ನಡದ ಸಂದರ್ಭವನ್ನು ಯೋಚಿಸಬೇಕಾಗಿದೆ. ಕನ್ನಡದ ಸರ್ವಾಂಗೀಣವಾದ ಅಭಿವೃದ್ಧಿಯ ದಿಸೆಯಲ್ಲಿ ಈ ಬಗೆಯ ಕೋಶಗಳು ಸಹ ಅತ್ಯಂತ ಮಹತ್ತ್ವದ ಮತ್ತು ನಿರ್ಣಾಯಕವಾದ ಆಕರಸಾಮಗ್ರಿಗಳಾಗಿ ಬಳಕೆಗೊಳ್ಳಬಹುದು. ಸಾಂಪ್ರದಾಯಿಕವಾದ ಪದಕೋಶಗಳ ಜೊತೆಗೇ ಇಂತಹ ನೂತನವಾದ ಕೋಶಗಳೂ ಶಾಸ್ತ್ರೀಯವಾಗಿ ಸಂಕಲನಗೊಂಡಾಗ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಸಂಶೋಧಕರಿಗಂತೂ ತುಂಬಾ ಉಪಕಾರವಾಗುತ್ತದೆ. ಇದರ ಮೊದಲ ಪ್ರಯತ್ನವೆಂದು ಸದ್ಯಕ್ಕೆ ಕಾವ್ಯಮೀಮಾಂಸೆಯಲ್ಲಿ ಬಳಕೆಯಲ್ಲಿರುವ ಐದು ಪರಿಕಲ್ಪನೆಗಳನ್ನು ಮಾದರಿಗಳೆಂದು ಗ್ರಹಿಸಿ ವಿವರಿಸುವ ಪ್ರಯತ್ನವನ್ನು ಮುಂದಿನ ಭಾಗದಲ್ಲಿ ಮಾಡಿದೆ. ಈ ಪ್ರಯತ್ನವನ್ನು ಕೇವಲ ಪ್ರಾರಂಭಿಕ-ಪ್ರಯೋಗಾತ್ಮಕ ನೆಲೆಯದಾಗಿ ಪರಿಗಣಿಸಬಹುದು.

ಕನ್ನಡಕ್ಕೆ ಹೊಂದಿಕೊಳ್ಳುವಂತೆ ಸಿದ್ಧಪಡಿಸಲಾಗಿದ್ದು, ಇದು ಈಗಾಗಲೇ ಪ್ರಚಲಿತವಿರುವ ಇತರ ನಾನಾರ್ಥಪದಕೋಶಗಳಿಗಿಂತ ವಿಭಿನ್ನವಾಗಿದ್ದು, ಕನ್ನಡಕ್ಕೆ ವಿಶಿಷ್ಟವಾಗಿದೆ. ಪ್ರತಿ ನಮೂದು ಕೂಡ ನಾನಾರ್ಥಪದಕೋಶದ ರಚನೆಯಲ್ಲೇ ಒಳಗೊಂಡಿರುವ, ಪದದ ಮೂರು ಆಯಾಮಗಳನ್ನು ನಿರೂಪಿಸುತ್ತದೆ : ಇದಲ್ಲದೆ ವಿರುದ್ಧಾರ್ಥಕ ಪದಗಳು, ಪದಗಳ ವ್ಯುತ್ಪತ್ತಿ, ಚಾರಿತ್ರಿಕತೆ, ಅರ್ಥಾಂತರಗಳೂ ಇದರಲ್ಲಿ ಅಂತರ್ಗತವಾಗಿವೆ. ಮುಖ್ಯ ನಮೂದುಗಳಿಗೆ ದಪ್ಪ ಅಕ್ಷರಗಳನ್ನು ಬಳಸಲಾಗಿದೆ.

(ಅ) ಚಿಹ್ನೆ ಪದದ ಅರ್ಥವನ್ನು ಸೂಚಿಸುತ್ತದೆ : (ವ್ಯ) ಚಿಹ್ನೆ ಪದದ ವ್ಯುತ್ಪತ್ತಿಯನ್ನು ಸೂಚಿಸುತ್ತದೆ : (ಚಾ) ಚಿಹ್ನೆ ಪದದ ಚಾರಿತ್ರಿಕತೆಯನ್ನು ಸೂಚಿಸುತ್ತದೆ ; ಅಲ್ಲೇ ಕಂಸದಲ್ಲಿ ಅದರ ಕಾಲವನ್ನೂ ಸೂಚಿಸಲಾಗಿದೆ ; (ಅ) ಚಿಹ್ನೆ ಅರ್ಥಾಂತರವನ್ನು ಸೂಚಿಸುತ್ತದೆ : ಕಂಸದಲ್ಲಿ ವಿಶಿಷ್ಟಾರ್ಥದಲ್ಲಿ ಪದ ಬಳಕೆಯಾಗುತ್ತಿದ್ದ ಕೊನೆಯ ಗಡುವನ್ನು ಸೂಚಿಸಲಾಗಿದೆ ; (ನೋ) ಚಿಹ್ನೆ ಅರ್ಥಾಂತರಿತ ಪದವನ್ನು ನಿರ್ದೇಶಿಸುವುದು ; (ನಾ) ನಾಮಪದವನ್ನೂ (ಕ್ರಿ) ಕ್ರಿಯಾಪದವನ್ನೂ (ಕ್ರಿ.ವಿ.) ಕ್ರಿಯಾವಿಶೇಷಣವನ್ನೂ (ನಾ.ವಿ) ನಾಮವಿಶೇಷಣವನ್ನೂ ಸೂಚಿಸುತ್ತವೆ : (ವ್ಯಾ) ಚಿಹ್ನೆ ವ್ಯಾಪಕಾರ್ಥವನ್ನೂ ; (ಅ) ಚಿಹ್ನೆ ಆಕುಂಚಿತಾರ್ಥವನ್ನೂ ; (ಸ) ಸಂಬಂಧಿತ ಅರ್ಥವನ್ನೂ : (ವಿ) ವಿರುದ್ಧಾರ್ಥವನ್ನೂ ಸೂಚಿಸುತ್ತವೆ.

ನಾನಾರ್ಥ ಪದಕೋಶದ ಕೊನೆಯಲ್ಲಿರುವ ಪದಸೂಚಿ ಕೋಶದ ಉಪಯೋಗವನ್ನು ಹೆಚ್ಚಿಸುತ್ತದೆ. ಇದರ ಜೋಡಣೆ ಅಕಾರಾದಿಗೆ ಅನುಗುಣವಾಗಿದೆ. ಯಾವುದೇ ಪದಕ್ಕೆ ನಿರ್ದಿಷ್ಟನೆಲೆಯಲ್ಲಿ ಒಂದು ನಮೂದು ಇಲ್ಲದಿದ್ದಾಗ (—) ಚಿಹ್ನೆಯನ್ನು ಬಳಸಬಹುದು.

**ಆಕರಗಳು :** ಈ ನಾನಾರ್ಥಪದಕೋಶದ ರಚನೆಯಲ್ಲಿ ಮೂಲ ಆಕರಗಳಾಗಿ ಕಾವ್ಯಮೀಮಾಂಸೆಯ ಕೃತಿಗಳನ್ನು ಪರಿಗ್ರಹಿಸಿದೆ. ಉಳಿದ ಆಕರಗಳಾದ ಪಾರಿಭಾಷಿಕ

ಪ್ರತಿ ನಮೂದಿಗೂ ಕ್ರಮಸಂಖ್ಯೆಯನ್ನು ಕೊಡಲಾಗಿದ್ದು, ಪದಸೂಚಿಯು ಈ ಸಂಖ್ಯೆಯನ್ನೂ ಸೂಚಕಗಳನ್ನೂ ಕೊಡುತ್ತದೆ.

### ಕಾವ್ಯಮೀಮಾಂಸೆಯ ನಾನಾರ್ಥ ಪದಕೋಶ

**೧. ಅಲಂಕಾರ :** (ಅ) ಸೌಂದರ್ಯ. ಕಾವ್ಯಸೌಂದರ್ಯ. ಕಾವ್ಯತತ್ತ್ವ : (ವ್ಯ) ಅಲಂ + ಕ್ರಿಯತೇ ; (ಚಾ) ವೈದಿಕ ಸಾಹಿತ್ಯ, ನಾಟ್ಯಶಾಸ್ತ್ರ ; (ಅ̅) ಯುಕ್ತ, ಸಶಕ್ತ (ವೈದಿಕಸಾಹಿತ್ಯ) : (ನೋ) ಕಾವ್ಯಸೌಂದರ್ಯ ; (ನಾ) ಅಲಂಕಾರ ; (ಕ್ರಿ) —; (ಕ್ರಿ.ವಿ) —; (ನಾ.ವಿ) ಅಲಂಕಾರಕೃತಿ ; (ವ್ಯಾ) ಕಾವ್ಯಮೀಮಾಂಸೆ. ಕ್ರಿಯಾಕಲ್ಪ ; (ಅ) ಉಪಮೆ. ಉತ್ಪ್ರೇಕ್ಷೆ. ರೂಪಕ. ಸ್ವಭಾವೋಕ್ತಿ, ದೀಪಕ ; (ಸ) ಭೂಷಣ. ಅಲಂಕಾರ, ಒಡವೆ : (ವಿ) ನಿರಲಂಕಾರ.

**೨. ಉಪಮೆ :** (ಅ) ಸಾದೃಶ್ಯ. ಹೋಲಿಕೆ ; (ವ್ಯ) ಉಪ + ಮಾ : (ಚಾ) ನಾಟ್ಯಶಾಸ್ತ್ರ ; (ಅ̅) : (ನೋ) : (ನಾ) ಉಪಮೆ ; (ಕ್ರಿ) ; (ಕ್ರಿ.ವಿ) ; (ನಾ.ವಿ) ; (ವ್ಯಾ) ಅಲಂಕಾರ ; (ಅ) ಪೂರ್ಣೋಪಮೆ. ಲುಪ್ತೋಪಮೆ. ಮಾಲೋಪಮೆ. ಮಹೋಪಮೆ ; (ಸ) ಉತ್ಪ್ರೇಕ್ಷೆ. ರೂಪಕ. ಅನ್ಯೋಕ್ತಿ ; (ವಿ).

**೩. ಕಾವ್ಯ :** (ಅ) ಲಯಬದ್ಧ ಸೃಜನಶೀಲ ರಚನೆ : (ವ್ಯ) ; (ಚಾ) ; (ಅ̅) ; (ನೋ) ಪದ್ಯ. ಕವಿತೆ. ಕಬ್ಬ ; (ನಾ) ಕಾವ್ಯ ; (ಕ್ರಿ) ; (ಕ್ರಿ.ವಿ) ; (ನಾ.ವಿ) ಕಾವ್ಯಕೃತಿ ; (ವ್ಯಾ) ಸೃಜನಶೀಲಸಾಹಿತ್ಯ ; (ಅ) ಗದ್ಯಕಾವ್ಯ, ಪದ್ಯಕಾವ್ಯ. ದೃಶ್ಯಕಾವ್ಯ. ಶ್ರವ್ಯಕಾವ್ಯ ; (ಸ) : (ವಿ) ಅಕಾವ್ಯ.

**೪. ಪ್ರತಿಭೆ :** (ಅ) ಹೊಳೆಯುವಿಕೆ ; (ವ್ಯ) ಪ್ರತಿ + ಭಾ ; (ಚಾ) ಕಾವ್ಯಕೌತುಕ (ಟೀಯ ಶ) : (ಅ̅) : (ನೋ) ; (ನಾ) ಪ್ರತಿಭೆ ; (ಕ್ರಿ) ; (ನಾ.ವಿ) ಪ್ರತಿಭಾವಂತ. ಪ್ರತಿಭಾನ್ವಿತ ; (ವ್ಯಾ) ಸೃಜನಶೀಲತೆ, ಕಾವ್ಯಕ್ರಿಯೆ ; (ಅ) ಕಾರಯಿತ್ರೀ. ಭಾವಯಿತ್ರೀ ; (ಸ) ಪ್ರತಿಭಾನ. ಕಲ್ಪಕತೆ. ಕಲ್ಪನೆ, ಸ್ಫೂರ್ತಿ. ಊಹೆ : (ವಿ) ಅಪ್ರತಿಭೆ.

**೫. ರಸ :** (ಅ) ಸಾರ. ಸವಿಯಾದ ಸಾರ : (ವ್ಯ) ರಸ್ : (ಚಾ) ವೈದಿಕಸಾಹಿತ್ಯ, ನಾಟ್ಯಶಾಸ್ತ್ರ ; (ಅ̅)ಆಹ್ಲಾದ. ಸಂತೋಷ. ಬ್ರಹ್ಮಜ್ಞಾನ, ಬ್ರಹ್ಮಾನಂದ (ವೈದಿಕಸಾಹಿತ್ಯ) ; (ನೋ) ; (ನಾ) ರಸ ; (ಕ್ರಿ) : (ಕ್ರಿ.ವಿ) ; (ನಾ.ವಿ) ರಸಾವಹ, ರಸಾನುಭವ, ರಸಾನುಭೂತಿ : (ವ್ಯಾ) ಆನಂದ ; (ಅ) ಶೃಂಗಾರ, ಹಾಸ್ಯ, ಕರುಣ, ಬೀಭತ್ಸ, ಭಯಾನಕ, ಅದ್ಭುತ, ರೌದ್ರ. ವೀರ. ಶಾಂತ ; (ಸ)—: (ವಿ) ನೀರಸ (?)

### ಮಾದರಿ ಪದಕೋಶ

ಮಾದರಿಗಾಗಿ ಈ ಕೆಳಗೆ ಒಂದು ಪದಕೋಶವನ್ನು ನೀಡಿದೆ. ಮೊದಲನೆಯ ನಮೂದು **ಅಲಂಕಾರಕ್ಕೆ** ಸೀಮಿತಗೊಳಿಸಿ ಈ ಪದಕೋಶ ರಚಿತವಾಗಿದೆ. ಇದೇ ಮಾದರಿಯಲ್ಲಿ ಪದಕೋಶವನ್ನು ಬೆಳೆಸಬಹುದು.

| | | |
|---|---|---|
| ಅಲಂ. ೧ (ವ್ಯ) | ಕಾವ್ಯಮೀಮಾಂಸೆ ೧(ಪ್ರಾ) | ಯುಕ್ತ ೧ (ಅ) |
| ಅಲಂಕಾರ ೧ (ನಾ) (ಸ) | ಕಾವ್ಯಸೌಂದರ್ಯ ೧(ಅ) | ರೂಪಕ ೧ (ಅ) |
| ಅಲಂಕಾರಕೃತಿ ೧ (ನಾ.ವಿ.) | ಕ್ರಿಯಾಕಲ್ಪ ೧ (ಪ್ರಾ) | ವೈದಿಕಸಾಹಿತ್ಯ ೧ (ಚಾ) (ಅ) |
| ಉತ್ಪ್ರೇಕ್ಷೆ ೧ (ಅ) | ದೀಪಕ ೧ (ಅ) | ಸಶಕ್ತ ೧ (ಅ) |
| ಉಪಮೆ ೧ (ಅ) | ನಾಟ್ಯಶಾಸ್ತ್ರ ೧ (ವ್ಯ) | ಸೌಂದರ್ಯ ೧ (ಅ) |
| ಒಡಪೆ ೧ (ಸ) | ನಿರಲಂಕಾರ ೧ (ವಿ) | ಸ್ವಭಾವೋಕ್ತಿ ೧ (ಅ) |
| ಕಾವ್ಯತತ್ತ್ವ ೧ (ಅ) | ಭೂಷಣ ೧ (ಸ) | |

## ಅಡಿಟಿಪ್ಪಣಿ

1. *Shorter Oxford English Dictionary*, vol. I—Oxford: Clarendon Press, 1973. P.X.
2. Aitchison J.: *Thesaurus Construction: A Practical Manual* by J. Aitchison and A. Gilehrist, London: Aslib, 1964, p. 43.
3. Gilehrist A.: *Thesaurus in Retrieval*, London: Aslib, 1971, p. 4.
4. Roget P. M.: *Roget's Thesaurus of English Words and Phrases*: Preface to the 1st edition 1852, England: Penguin Books, 1984, p. v.

## ಶತಕವು ಭಾವಗೀತೆಯೋ ?

ಶತಕಸಾಹಿತ್ಯಪ್ರಕಾರವು ಭಾವಗೀತೆಗಳ ಸಾಲಿಗೆ ಸೇರುತ್ತದೆಯೋ ಇಲ್ಲವೇ ಎಂಬ ವಿಚಾರವಾಗಿ ವಿಮರ್ಶಕರಲ್ಲಿ ಏಕಾಭಿಪ್ರಾಯವಿಲ್ಲ. ಕೆಲವು ವಿಮರ್ಶಕರು ಶತಕಗಳನ್ನು ಭಾವಗೀತೆಗಳೆಂದು ಕರೆದಿದ್ದಾರೆ. ಆದರೆ ಇನ್ನು ಕೆಲವು ವಿಮರ್ಶಕರು ಈ ಹೇಳಿಕೆಯನ್ನು ಖಂಡಿಸಿ, ಶತಕಗಳು ಭಾವಗೀತೆಗಳಲ್ಲ, ಅವು ಭಾವಗೀತೆಗಳಿಗೆ ಅತೀತವಾದ ಆತ್ಮಾನಂದವನ್ನುಂಟುಮಾಡುತ್ತ ಪುರುಷಾರ್ಥವನ್ನು ಪಡೆಯುವುದಕ್ಕೆ ಸಾಧನಗಳಾಗಿವೆ ಎಂದು ಹೇಳಿ, ಪ್ರಾಚ್ಯಸಂಸ್ಕಾರದ ಶತಕಕ್ಕೂ ಪಾಶ್ಚಾತ್ಯ ಸಂಸ್ಕಾರದ ಭಾವಗೀತೆಗಳಿಗೂ ಸಾಮ್ಯವಿಲ್ಲವೆಂದು ವಾದಿಸಿದ್ದಾರೆ.

ಕನ್ನಡದಲ್ಲಿ ಭಾವಗೀತೆ ಎಂಬ ಪದವನ್ನು ಇಂಗ್ಲಿಷಿನ 'ಲಿರಿಕ್' ಎಂಬ ಪದಕ್ಕೆ ಸಮಾನಾರ್ಥವಾಗಿ ಉಪಯೋಗಿಸುತ್ತಿದ್ದಾರೆ. ಕಾವ್ಯಪ್ರಕಾರಗಳಲ್ಲಿ ಭಾವಪ್ರಧಾನವಾದುದು ಭಾವಗೀತೆ ; ಭಾವದ ಮೂಲಾರ್ಥ ಇರುವಿಕೆ ಎಂದಾದರೂ ಸಂಸ್ಕೃತದಲ್ಲಿ ಇದಕ್ಕೆ ತುಂಬ ಅರ್ಥಗಳಿವೆ. ಅವುಗಳಲ್ಲಿ ಭಾವಗೀತೆಗೆ ಹೊಂದಿಕೆಯಾಗುವ ಅರ್ಥ ಚಿತ್ತವೃತ್ತಿ ಎಂಬುದು, ಕ್ರೋಧ, ಭಯ, ಆಶ್ಚರ್ಯ, ಚಿಂತೆ, ಔತ್ಸುಕ್ಯ, ನಾಚಿಕೆ, ಹರ್ಷ ಮೊದಲಾದುವು ಚಿತ್ತವೃತ್ತಿಗಳು. ಅನಂತಮುಖವಾಗಿರುವ ಭಾವಗಳ ಒಂದು ಮುಖವನ್ನು ಮಾತ್ರ ಭಾವಗೀತೆ ಒಮ್ಮೆಗೆ ಒಳಗೊಳ್ಳುತ್ತದೆ. ಮಹಾಕಾವ್ಯದಲ್ಲಿ ಕವಿಯು ಒಂದು ಜನಾಂಗದ ಸಮಸ್ತಭಾವಗಳನ್ನೂ ಘಟನೆಗಳನ್ನೂ ವೈವಿಧ್ಯ ವೈಶಾಲ್ಯ ಬಾಹುಳ್ಯಗಳಲ್ಲಿ ಒಂದೇ ಕಡೆ ಚಿತ್ರಿಸುತ್ತಾನೆ ; ಆದರೆ ಭಾವಗೀತೆಯಲ್ಲಿ ಮಾನವಜನಾಂಗದ

ಗಳನ್ನು ನೇರವಾಗಿ ಅಭಿವ್ಯಕ್ತಿಗೊಳಿಸುವ ಸಣ್ಣಕವಿತೆಯೇ ಲಿರಿಕ್ : "Short poems usually divided into stanzas, and directly expressing the poet's own thoughts and sentiments"

—*Oxford Dictionary*.

೨. ಲಿರಿಕ್‌ನ ಲಕ್ಷಣವನ್ನು ಸ್ಥೂಲವಾಗಿ ಹೇಳುವುದಾದರೆ, ಕವಿ ತನ್ನ ಸ್ವಂತ ಅನುಭವಗಳನ್ನು ನೇರವಾಗಿ ಹೇಳುವುದು. ಇದನ್ನೇ ನಾವು ಭಾವಗೀತೆಯ ಲಕ್ಷಣವೆಂದು ಕರೆಯುವುದು: **"The soul of the poet is then to be considered as the real principle of unity for a lyrical poem."** ಎಂದರೆ, "ಕವಿಯ ಆತ್ಮವೇ ಭಾವಗೀತೆಯ ಏಕತೆಯ ಸೂತ್ರವೆಂಬ ಮಾತನ್ನು ಒಪ್ಪಬಹುದು" (ಎಸ್. ಅನಂತನಾರಾಯಣ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ.' ೧೯೬೨. ಪು. ೧೬೮).

೩. **"Lyrical has been here held essentially to imply that each poem shall turn on some single thought, feeling or situation.** ಒಂದು ಆಲೋಚನೆ, ಒಂದು ಭಾವ, ಒಂದು ಸನ್ನಿವೇಶ ಇವುಗಳೇ ಭಾವಗೀತೆಯ ಕೇಂದ್ರವಾಗಿರುತ್ತವೆ. ಭಾವಗೀತೆಯು ಅಡಕವಾಗಿ ಅಚ್ಚುಕಟ್ಟಾಗಿರಬೇಕು"

**—(F. T. Palgrave, *The Golden Treasury*, Preface, 1861).**

೪. ಭಾವಗೀತೆಯಲ್ಲಿ ಒಂದು ನಿರ್ದಿಷ್ಟಭಾವದ ಅಭಿವ್ಯಕ್ತಿ, ಹ್ರಸ್ವತೆ ಹಾಗೂ ಸಂಗ್ರಹ ಗುಣ, ಇವು ಇದ್ದರೆ ಉತ್ತಮವೆಂದು ಹಡ್ಸನ್ನಿನ ವಿವರಣೆ :

**Pure lyric, having for its purpose the expression of some single mood or feeling, commonly gains much in emotional power by brevity and condensation**

**—(W. H. Hudson : *Introduction to the Study of Literature*, p. 97).**

೫. "ಕವಿಯು ಭಾವಗೀತೆಯಲ್ಲಿ ತನ್ನ ಸ್ವಂತಭಾವವನ್ನು ನೇರವಾಗಿ ಅಭಿವ್ಯಕ್ತಿಗೊಳಿಸುವುದರಿಂದ ಅಲ್ಲಿ ಅವನ ವ್ಯಕ್ತಿತ್ವವು ಮೂಡಿರುತ್ತದೆ. ಭಾವಗೀತೆಯಲ್ಲಿ ನೇರವಾಗಿಯೋ ಸೂಚ್ಯವಾಗಿಯೋ ಕವಿಯ ವ್ಯಕ್ತಿತ್ವ ಕಾಣಿಸಿಕೊಳ್ಳುತ್ತದೆ. ಕವಿಯ ಭಾವಗಳು ಅದಕ್ಕೆ ಸತ್ವ ಕೊಡುತ್ತವೆ. ಅವನ ಮನಸ್ಸಿನ ಸ್ಥಿತಿ ಬಣ್ಣಗೊಡುತ್ತದೆ. ಅವನ ವಿಚಾರ, ಆದರ್ಶ, ಅನುಭವಜನ್ಯವಾದ ಭಾವ ಇವುಗಳು ಭಾವಗೀತೆಯಲ್ಲಿ ಪ್ರಧಾನವಾದುದರಿಂದ ಭಾವಗೀತೆಯು ಕವಿಯ ವ್ಯಕ್ತಿತ್ವದ ಕನ್ನಡಿಯಾಗುತ್ತದೆ"

**—(Hepple : *Lyrical Forms in English*, 1939, p. 9).**

೬. '**"A moment's monument'** 'ಕ್ಷಣವೊಂದರ ಸ್ಮಾರಕ' ಎಂಬ ಮಾತನ್ನು ರಾಸೆಟಿ ಕವಿಯು ಭಾವಗೀತದ ಒಂದು ರೂಪವಾದ ಸಾನೆಟ್ಟಿನ ಬಗ್ಗೆ ಹೇಳಿದ್ದಾನೆ: ಆ ಮಾತನ್ನು ಸಾನೆಟ್ಟಿಗೆ ಮಾತ್ರವೇ ಅಲ್ಲ, ಸಮಗ್ರವಾದ ಭಾವಗೀತೆಗೆ ಅನ್ವಯಿಸಬಹುದು" (ಎಸ್. ಅನಂತನಾರಾಯಣ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ.' ೧೯೬೨. ಪು. ೧೭೧).

೭. ಭಾವಗೀತಕಾವ್ಯದ ಮನೋಧರ್ಮ ಮಿಂಚಿನಷ್ಟೇ ಕ್ಷಣಿಕ, ಮಿಂಚಿನಷ್ಟೇ ಚಂಚಲ,

ಮಿಂಚಿನಷ್ಟೇ ಆಕರ್ಷಕ (ಎಸ್. ವಿ. ಪರಮೇಶ್ವರಭಟ್ಟ, 'ಭಾವಗೀತೆ' ೧೯೫೭. ಪು. ೪೪).

೮. ಭಾವಗೀತೆಯ ವಸ್ತು ಜಗತ್ತಿನಷ್ಟೇ ವಿಶಾಲವಾಗಿರುತ್ತದೆ. "ಇದು ಅನುಭವದ ಎಲ್ಲಾ ಮಜಲುಗಳನ್ನೂ ರೀತಿಗಳನ್ನೂ ಅಳವಡಿಸಿಕೊಳ್ಳುತ್ತದೆ. ಬಹು ವೈಯಕ್ತಿಕವಾದುದರಿಂದ ಹಿಡಿದು, ವಿಶ್ವವ್ಯಾಪ್ತವಾಗುವಂತಹ ವಸ್ತುವಿನವರೆಗೂ ಇದರ ಆವರಣ."

—(Hudson : *Introduction to the Study of Literature*, p. 96).

೯. ಕವಿಯು ತನ್ನ ಅಂತರಂಗದ ತನ್ನದೇ ಆದ ಭಾವಗಳಿಗೆ ರೂಪುಗೊಟ್ಟರೆ, ಅದು ವ್ಯಕ್ತಿನಿಷ್ಠ (subjective) ಗುಣವನ್ನು ಪಡೆದ ಲಿರಿಕ್ ಅಥವಾ ಭಾವಗೀತೆಯಾಗುತ್ತದೆ.

೧೦. "ಭಾವಗೀತೆ ಕವಿಯ ವೈಯಕ್ತಿಕ ಅನುಭವದ ಅಭಿವ್ಯಕ್ತಿ. ಇಲ್ಲಿ ಭಾವಕ್ಕೇ ಪ್ರಧಾನಸ್ಥಾನ. ಕವಿಗೆ ವಸ್ತು ಪ್ರಧಾನವಲ್ಲ, ವಸ್ತುವಿನಿಂದ ಪ್ರಚೋದನೆಯಾದ ಭಾವವೇ ಮುಖ್ಯ. ಘಟನೆಯಾಗಲಿ, ಸನ್ನಿವೇಶವಾಗಲಿ ಈ ಭಾವವನ್ನು ಪ್ರಚೋದಿಸಿ ಅದರಿಂದಲೇ ತಾವೂ ಹಿರಿಮೆಯನ್ನು ಎರವಲು ಪಡೆಯುತ್ತವೆ. ಭಾವದಿಂದ ಘಟನೆ, ಸನ್ನಿವೇಶ ಇವುಗಳಿಗೆ ಪ್ರಾಮುಖ್ಯ ಬರುತ್ತದೆಯೇ ಹೊರತು, ಅವುಗಳಿಂದ ಭಾವಕ್ಕಲ್ಲ ಎಂದು ವರ್ಡ್ಸ್‌ವರ್ತ್ ಹೇಳಿದುದನ್ನು ಇಲ್ಲಿ ಅನ್ವಯಿಸಬಹುದು. ಆದುದರಿಂದ ಕವಿಯ ಅನುಭವ, ಸಂವೇದನೆ ಇವುಗಳು ಬಹಳ ಮುಖ್ಯ." ('ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ', ೧೯೬೨. ಪು. ೧೬೮–೧೬೯).

ಈ ಮೇಲಿನ ಅಭಿಪ್ರಾಯಗಳಿಂದ ಭಾವಗೀತೆ ಮುಖ್ಯವಾಗಿ ಸಂಕ್ಷಿಪ್ತವಾಗಿರುತ್ತದೆ ; ಅದು ತಾತ್ಕಾಲಿಕವಾದ ಕ್ಷಣಾವೇಶದ ಕೃತಿ. ಒಂದು ಆಲೋಚನೆ, ಒಂದು ಭಾವ, ಒಂದು ಸನ್ನಿವೇಶ ಇವು ಅದರ ಕೇಂದ್ರವಾಗಿರುತ್ತವೆ ; ಅದರಲ್ಲಿ ನೇರವಾಗಿಯೋ ಸೂಚ್ಯವಾಗಿಯೋ ಕವಿಯ ವ್ಯಕ್ತಿತ್ವ ಕಾಣಿಸಿಕೊಳ್ಳುತ್ತದೆ; ಅದಕ್ಕೆ ಇಂಥದೇ ವಸ್ತುವಾಗಬೇಕೆಂಬ ನಿಯಮವಿಲ್ಲ : ಅದೊಂದು ವ್ಯಕ್ತಿನಿಷ್ಠವಾದ ಸಣ್ಣಕವಿತೆ—ಎಂಬ ವಿಚಾರಗಳು ತಿಳಿದುಬರುತ್ತವೆ.

ಶತಕವು ಭಾವಗೀತೆಯ ವಿಭಾಗಕ್ಕೆ ಸೇರುತ್ತದೆಂದು ಹೇಳಿದ ಕೆಲವು ವಿಮರ್ಶಕರ ಅಭಿಪ್ರಾಯಗಳನ್ನು ಕೆಳಗೆ ಕೊಡಲಾಗಿದೆ :

೧. ಶುದ್ಧಭಾವಗೀತೆಯಾಗಿ ನಿಲ್ಲುವ ಶಕ್ತಿಯನ್ನೂ ಅವಕಾಶವೈಪುಲ್ಯವನ್ನೂ ಪಡೆದುಕೊಂಡ ಮತ್ತೊಂದು ಸಾಹಿತ್ಯರೂಪ ಶತಕ. ಭಕ್ತಿಜ್ಞಾನವೈರಾಗ್ಯಗಳ ಸಾಧನೆಬೋಧನೆಗಳ ನಿರ್ವಹಣೆಯಲ್ಲಿ ವಚನಗಳು ವಹಿಸಿದ ಪಾತ್ರವನ್ನೇ ಶತಕಗಳೂ ವಹಿಸಿದುವು(ಪ್ರಭುಶಂಕರ, 'ಕನ್ನಡದಲ್ಲಿ ಭಾವಗೀತೆ'. ೧೯೬೬. ಪು. ೧೭೪).

೨. ಶತಕವು ಸ್ವರೂಪದಲ್ಲಿ ಭಾವಗೀತೆಯ ಲಕ್ಷಣಕ್ಕೆ ಅಳವಡುತ್ತದೆ. ಕವಿಮನಸ್ಸಿನ ನೂರೆಂಟುಭಾವಗಳ ಅಭಿವ್ಯಕ್ತಿ ಅನ್ನಿಸಿಕೆಗಳು, ರಾಗವಿರಾಗಗಳು, ಪ್ರೇಮ, ಕರುಣ, ಶೃಂಗಾರ, ಭಕ್ತಿವಿಚಾರಗಳು ಇಲ್ಲಿ ಮುಕ್ತರೂಪದಲ್ಲಿ ಪ್ರಕಟವಾಗುತ್ತವೆ. ಕವಿಯ ವ್ಯಕ್ತಿತ್ವ, ಆಲೋಚನಾಮಾರ್ಗ, ಆಶೋತ್ತರಗಳ ನೇರ ಅಭಿವ್ಯಕ್ತಿಗೆ ಇಲ್ಲಿ ಹೆಚ್ಚಿನ

ಸ್ವಾತಂತ್ರ್ಯವುಂಟು. ವಸ್ತುನಿಷ್ಠವಾದ ಕಾವ್ಯದಲ್ಲಿ ಇದರ ಆವಿರ್ಭಾವಕ್ಕೆ ಅವಕಾಶಗಳಿರುವುದಿಲ್ಲ (ಪಿ. ಶಿವಾನಂದ : 'ಸಮಗ್ರ ಕನ್ನಡಸಾಹಿತ್ಯ ಚರಿತ್ರೆ', ಸಂ. ೪, ಭಾಗ-೨, ೧೯೭೮, ಪು. ೭೬೦).

೩. ಶತಕಸಾಹಿತ್ಯ ಒಂದು ದೃಷ್ಟಿಯಿಂದ ಆಯಾ ಕವಿಯ ಅಂತರಂಗದ ಭಾವಗಳ ಕನ್ನಡಿಯಾಗಿದೆ. ಅಂತೆಯೇ ಇದು ಭಾವಗೀತಾತ್ಮಕವಾದ ಸಾಹಿತ್ಯವೆನಿಸಿದೆ. ಪ್ರತಿಯೊಬ್ಬ ಕವಿಯೂ ತನ್ನ ಅನುಭವ, ಅನಿಸಿಕೆ, ನಂಬಿಕೆಗಳನ್ನು ಸಬಲವಾಗಿ ಪ್ರತಿಪಾದಿಸಿರುವುದನ್ನು ಕಾಣುತ್ತೇವೆ (ಬಿ. ನಂ. ಚಂದ್ರಯ್ಯ, ಸಮಗ್ರ ಕನ್ನಡಸಾಹಿತ್ಯ ಚರಿತ್ರೆ, ಸಂ. ೪, ಭಾಗ-೧, ೧೯೭೭, ಪು. ೧೬೬).

೪. ಕನ್ನಡಸಾಹಿತ್ಯದಲ್ಲಿ ಶತಕಗಳೇ ವೇದೋಪನಿಷತ್ತುಗಳು. ಇವೇ ಸನಾತನ ಧರ್ಮದೀಪಿಕೆಗಳು. ಇವುಗಳಲ್ಲಿ ಕೆಲವು ಭಾವಗೀತೆಗಳು; ಹಲವು ಖಂಡಕಾವ್ಯಗಳಾಗಿವೆ. ಇವುಗಳೆಲ್ಲಾ ಏಕವಿಷಯಪ್ರಧಾನವಾಗಿದ್ದು ಸ್ತೋತ್ರ, ದೃಶ್ಯ, ನೀತಿ, ಧರ್ಮ, ಶೃಂಗಾರ, ವೈರಾಗ್ಯಗಳ ಹೃದ್ಯವಿವರಣೆಯಲ್ಲಿ ಮುಗಿದಿವೆ (ಯ.ನಾ. ಉಡುಪ, ಕನ್ನಡ ಸಾಹಿತ್ಯದಲ್ಲಿ ಶತಕಗಳು, ನವಯುಗ, ಪ್ರಜಾರಾಜ್ಯ ಸಂಚಿಕೆ, ೧೯೬೫, ಪು. ೧೫).

ಈ ಮೇಲಿನ ಅಭಿಪ್ರಾಯಗಳ ಪ್ರಕಾರ ಶತಕಗಳೂ ಭಾವಗೀತೆಯ ಸಾಲಿಗೆ ಸೇರುತ್ತವೆ. ಆದರೆ ಶತಕಸಾಹಿತ್ಯಪ್ರಕಾರದ ಪ್ರಧಾನಲಕ್ಷಣಗಳನ್ನೂ ಭಾವಗೀತೆಯ ಮುಖ್ಯ ಲಕ್ಷಣಗಳನ್ನೂ ತುಲನೆಮಾಡಿ ನೋಡಿದಾಗ ಅವುಗಳಿಗಿರುವ ಅಂತರವೇ ಹೆಚ್ಚು. ಶತಕವು ರಚನೆಯಲ್ಲಿ ಭಾವಗೀತೆಯಷ್ಟು ಸಣ್ಣದಲ್ಲ, ಅದರಲ್ಲಿ ಕಡಿಮೆಯೆಂದರೆ ನೂರುಪದ್ಯಗಳಾದರೂ ಇರುತ್ತವೆ. ಶತಕಗಳಲ್ಲಿ ಅಂಕಿತವಿರುತ್ತದೆ. ಆದರೆ ಭಾವಗೀತೆಯಲ್ಲಿ ಆ ಲಕ್ಷಣವಿಲ್ಲ. ಭಾವಗೀತೆಯು ಭಾವಪ್ರಧಾನವಾದುದು. ಶತಕಗಳಲ್ಲಿ ಹೆಚ್ಚಿನವು ಭಾವಪ್ರಧಾನಗಳಲ್ಲ. ಕೇವಲ ಶೃಂಗಾರ ಹಾಗೂ ಭಕ್ತಿಯನ್ನು ನಿರೂಪಿಸುವ ಶತಕಗಳು ಮಾತ್ರ ಭಾವಪ್ರಧಾನ. ಶತಕಗಳು ಮುಖ್ಯವಾಗಿ ಭಕ್ತಿ, ಜ್ಞಾನ, ನೀತಿ, ತತ್ತ್ವ ವೈರಾಗ್ಯಗಳನ್ನು ಬೋಧಿಸುತ್ತವೆ. ಭಾವಗೀತೆಗೆ ವಸ್ತು ಇಂಥದೇ ಆಗಬೇಕೆಂಬ ನಿಯಮವಿಲ್ಲ. ಶತಕಗಳೂ ಭಾವಗೀತೆಗಳೂ ವಸ್ತುನಿಷ್ಠವಾದುವು ಎಂಬ ವಿಚಾರದಲ್ಲಿ ಅವುಗಳಿಗೆ ಹೋಲಿಕೆಯಿದೆ. ಅವುಗಳಲ್ಲಿ ಕವಿಯ ವೈಯಕ್ತಿಕ ಅನುಭವದ ನೇರ ಪ್ರಕಟಣೆಯಿರುತ್ತದೆ. ಭಾವಗೀತೆಯ ಅಂಶವನ್ನು ಶತಕಗಳಲ್ಲಿ ಗುರುತಿಸ ಹೊರಡುವಾಗ ಒಂದು ಮುಖ್ಯವಾದ ವಿಚಾರವನ್ನು ಗಮನಿಸಬೇಕಾಗುತ್ತದೆ. ಶತಕಸಾಹಿತ್ಯ ಪ್ರಕಾರವು ಕನ್ನಡದಲ್ಲಿ ಹನ್ನೊಂದನೆಯ ಶತಮಾನದಿಂದಲೇ ರಚನೆಯಾಗತೊಡಗಿದೆ. ಆದರೆ ಕನ್ನಡದಲ್ಲಿ ಭಾವಗೀತೆ ಆರಂಭವಾದುದು ಆಂಗ್ಲಸಾಹಿತ್ಯದ ಪ್ರಭಾವದಿಂದ ; ಅದೂ ಇತ್ತೀಚೆಗೆ. ಕನ್ನಡದ ಹಿಂದಿನ ಕಾವ್ಯಗಳಲ್ಲಿ ಅಲ್ಲಲ್ಲಿ ನಾವು ಭಾವಗೀತೆಯ ಅಂಶವನ್ನು ನೋಡಬಹುದಾದರೂ ಮೇಲೆ ಹೇಳಿದ ಲಕ್ಷಣಗಳುಳ್ಳ ಆಧುನಿಕ ಭಾವಗೀತೆಯು ಕನ್ನಡದಲ್ಲಿ ಬೆಳೆದು ಬಂದುದು ಇತ್ತೀಚೆಗೆ. ಆದುದರಿಂದ ಶತಕಗಳೂ ಭಾವಗೀತೆಗಳೇ ಎಂದು

ಗುತ್ತದೆ. ಇಷ್ಟು ಹೇಳಿದ ಮಾತ್ರಕ್ಕೆ ಶತಕಗಳಲ್ಲಿ ಭಾವಗೀತೆಯ ಅಂಶ ಇಲ್ಲವೇ ಇಲ್ಲವೆಂದು ಅರ್ಥವಲ್ಲ.

ಹಂಪ. ನಾಗರಾಜಯ್ಯನವರ ಪ್ರಕಾರ ('ಸಾಂಗತ್ಯ ಕವಿಗಳು', ೧೯೭೫, ಪು. ೧೭೪-೧೭೫) ಸ್ವಲ್ಪಮಟ್ಟಿಗೆ ಶತಕಗಳು ವ್ಯಕ್ತಿನಿಷ್ಠ ಮಾದರಿಗೆ ಉದಾಹರಣೆಗಳಾಗಿ ನಿಲ್ಲುತ್ತವೆ. "ವ್ಯಕ್ತಿನಿಷ್ಠಕಾವ್ಯ ಭಾವಪ್ರಧಾನ. ಇದು ಆಧುನಿಕಭಾವಗೀತೆಗಳ ಮಾದರಿಯದು. ವಸ್ತುನಿಷ್ಠವಾದ ಕಾವ್ಯದಲ್ಲಿ ಭಾವಪ್ರಾಧಾನ್ಯ ಇಲ್ಲವೆಂದು ತಿಳಿಯಬೇಕಾಗಿಲ್ಲ. ಆದರೆ ಇಲ್ಲಿ ಅಲ್ಲಿರುವಂತೆ ವ್ಯಕ್ತಿನಿಷ್ಠರಚನೆಯಲ್ಲಿ ಸಿದ್ಧವಸ್ತು ಇಲ್ಲ. ವೈಯಕ್ತಿಕ ಕಷ್ಟ–ನಷ್ಟ, ರಾಗ–ವಿರಾಗ, ನೋವು–ನಲಿವು, ಸೋಲು–ಗೆಲುವು ಮೊದಲಾದವುಗಳ ನಿವೇದನೆ ಇಲ್ಲಿ ಸಲೀಸು. ಹೀಗೆ ಇರಬೇಕು, ಇದೇ ಆಗಬೇಕು, ಇಂತಹುದೇ ಛಂದಸ್ಸು ಎಂಬ ಗಡಿಬಂಧಗಳಿರುವುದಿಲ್ಲ"—ಎಂದು ಹೇಳಿ, ಮುಂದೆ "ಚಂಪೂ ಸಂಪ್ರದಾಯದ ಇಕ್ಕಟ್ಟಿನಲ್ಲಿ ಪಡೆಯಲಾಗದ ಆತ್ಮಸ್ವಾತಂತ್ರ್ಯವನ್ನು ಶತಕಪ್ರಬಂಧದಲ್ಲಿ ಪಡೆಯಲು ಸಾಧ್ಯವಾಯಿತು. ಆದರೆ ಈ ವ್ಯಕ್ತಿನಿಷ್ಠಸಾಹಿತ್ಯಪ್ರಕಾರದ ಸೌಲಭ್ಯ ವಿಶಿಷ್ಟತೆಗಳ ಅನುಕೂಲವನ್ನು ಹರಿಹರ, ರತ್ನಾಕರರಂತಹ ಒಂದು ಕೈಯ ಬೆರಳೆಣಿಕೆಯ ಕವಿಗಳಷ್ಟೇ ಕೊಳ್ಳೆಹೊಡೆದಿದ್ದಾರೆ. ಉಳಿದವರು ಬಹುಪಾಲು ಸಾಮಾನ್ಯಶಾಸ್ತ್ರದಲ್ಲಿ ಚಲಿಸುವ ಛಾಯೆಯಾಗಿದ್ದಾರೆ"—ಎಂದು ಹೇಳಿದ್ದಾರೆ.

ಈ ಮಾತುಗಳನ್ನು ಒಪ್ಪಿಕೊಳ್ಳಬಹುದು. ಕೇವಲ ಹರಿಹರನ ಶತಕಗಳಲ್ಲಿ ಮತ್ತು ರತ್ನಾಕರನ ಶತಕಗಳಲ್ಲಿ ಮಾತ್ರ ಅಲ್ಲಲ್ಲಿ ಭಾವಗೀತೆಯ ಅಂಶವನ್ನು ಕಾಣಬಹುದು. ಪ್ರಭುಶಂಕರ ಅವರು ಶತಕಗಳಿಗೆ ಶುದ್ಧ ಭಾವಗೀತೆಯಾಗಬಲ್ಲ ಶಕ್ತಿಯಿದೆ ಎಂದು ಹೇಳಿದರೂ ಅವರು ತಮ್ಮ ಶತಕಗಳಲ್ಲಿ ಭಾವಗೀತೆ ಎಂಬ ಅಧ್ಯಾಯದಲ್ಲಿ ಕೇವಲ ಹರಿಹರನ ಶತಕಗಳಿಂದ ಹಾಗೂ 'ರತ್ನಾಕರಾಧೀಶ್ವರ ಶತಕ'ದಿಂದ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಉಳಿದ ಯಾವುದೇ ಶತಕದಿಂದ ಉದಾಹರಣೆ ಕೊಟ್ಟಿಲ್ಲ. ಆದುದರಿಂದ ಕೆಲವು ಶತಕಗಳಲ್ಲಿ ಮಾತ್ರ ಭಾವಗೀತೆಯ ಅಂಶವಿದೆಯೆಂದೂ ಕೇವಲ ಕೆಲವು ಕವಿಗಳು ಮಾತ್ರ ಬೋಧಪ್ರದವಾದ ಶತಕವನ್ನು ಭಾವಗೀತೆಯಾಗಿ ಮಾಡಬಲ್ಲರೆಂದೂ ಸ್ಪಷ್ಟವಾಗುತ್ತದೆ.

ಕೆ. ಕೃಷ್ಣಮೂರ್ತಿಯವರು, ಕಾಳಿದಾಸನಿಗೆ ಸ್ಫೂರ್ತಿಯನ್ನಿತ್ತ ಪೂರ್ವದ ಭಾವಗೀತೆಗಳಾವುವೆಂದು ವಿಚಾರಮಾಡುತ್ತಾಹೊರಟರೆ ಮಹಾರಾಷ್ಟ್ರೀಪ್ರಾಕೃತ ಸಾಹಿತ್ಯದ ಅಮರ ಭಾವಗೀತೆಗಳ ಸಂಗ್ರಹವಾದ "ಗಾಥಾಸಪ್ತಶತೀ" ಎಂಬ ಕಾವ್ಯಕೋಶವು ಕಣ್ಣಿಗೆ ಬೀಳುತ್ತದೆ—ಎಂದು ಹೇಳಿ ಗಾಥಾಸಪ್ತಶತೀಯನ್ನು ಭಾವಗೀತೆಗಳ ಸಾಲಿಗೆ ಸೇರಿಸಿದ್ದಾರೆ ('ಸಂಸ್ಕೃತಕಾವ್ಯ', ೧೯೫೮, ಪು. ೩೨೮). ಅವರು ಸಂಸ್ಕೃತದ ಭಾವಗೀತೆಗಳ ಆವಿರ್ಭಾವ ಹಾಗೂ ವಿಕಾಸಕ್ಕೆ ಪ್ರಾಕೃತದ ಶೃಂಗಾರರತ್ನಕೋಶವಾದ 'ಗಾಥಾಸಪ್ತಶತೀ' ಹೆಚ್ಚಿನ ಪ್ರಭಾವಬೀರಿದೆಯೆಂದು ಹೇಳಿದರೂ, ಭರ್ತೃಹರಿಯ 'ಶೃಂಗಾರಶತಕ' ಮತ್ತು ಅಮರು ಕವಿಯ 'ಅಮರುಶತಕ'ಗಳು ಭಾವಗೀತೆಗಳ ಸಾಲಿಗೆ ಸೇರುತ್ತವೆಯೋ

ಗುತ್ತದೆ. ಇಷ್ಟು ಹೇಳಿದ ಮಾತ್ರಕ್ಕೆ ಶತಕಗಳಲ್ಲಿ ಭಾವಗೀತೆಯ ಅಂಶ ಇಲ್ಲವೇ ಇಲ್ಲವೆಂದು ಅರ್ಥವಲ್ಲ.

ಹಂಪ. ನಾಗರಾಜಯ್ಯನವರ ಪ್ರಕಾರ ('ಸಾಂಗತ್ಯ ಕವಿಗಳು', ೧೯೭೫, ಪು. ೧೭೪-೧೭೫) ಸ್ವಲ್ಪಮಟ್ಟಿಗೆ ಶತಕಗಳು ವ್ಯಕ್ತಿನಿಷ್ಠ ಮಾದರಿಗೆ ಉದಾಹರಣೆಗಳಾಗಿ ನಿಲ್ಲುತ್ತವೆ. "ವ್ಯಕ್ತಿನಿಷ್ಠಕಾವ್ಯ ಭಾವಪ್ರಧಾನ. ಇದು ಆಧುನಿಕಭಾವಗೀತೆಗಳ ಮಾದರಿಯದು. ವಸ್ತುನಿಷ್ಠವಾದ ಕಾವ್ಯದಲ್ಲಿ ಭಾವಪ್ರಾಧಾನ್ಯ ಇಲ್ಲವೆಂದು ತಿಳಿಯಬೇಕಾಗಿಲ್ಲ. ಆದರೆ ಇಲ್ಲಿ ಅಲ್ಲಿರುವಂತೆ ವ್ಯಕ್ತಿನಿಷ್ಠರಚನೆಯಲ್ಲಿ ಸಿದ್ಧವಸ್ತು ಇಲ್ಲ. ವೈಯಕ್ತಿಕ ಕಷ್ಟ-ನಷ್ಟ, ರಾಗ-ವಿರಾಗ, ನೋವು-ನಲಿವು, ಸೋಲು-ಗೆಲುವು ಮೊದಲಾದವುಗಳ ನಿವೇದನೆ ಇಲ್ಲಿ ಸಲೀಸು. ಹೀಗೆ ಇರಬೇಕು, ಇದೇ ಆಗಬೇಕು, ಇಂತಹುದೇ ಛಂದಸ್ಸು ಎಂಬ ಗಡಿಬಂಧಗಳಿರುವುದಿಲ್ಲ"—ಎಂದು ಹೇಳಿ, ಮುಂದೆ "ಚಂಪೂ ಸಂಪ್ರದಾಯದ ಇಕ್ಕಟ್ಟಿನಲ್ಲಿ ಪಡೆಯಲಾಗದ ಆತ್ಮಸ್ವಾತಂತ್ರ್ಯವನ್ನು ಶತಕಪ್ರಬಂಧದಲ್ಲಿ ಪಡೆಯಲು ಸಾಧ್ಯವಾಯಿತು. ಆದರೆ ಈ ವ್ಯಕ್ತಿನಿಷ್ಠಸಾಹಿತ್ಯಪ್ರಕಾರದ ಸೌಲಭ್ಯ ವಿಶಿಷ್ಟತೆಗಳ ಅನುಕೂಲವನ್ನು ಹರಿಹರ, ರತ್ನಾಕರರಂತಹ ಒಂದು ಕೈಯ ಬೆರಳೆಣಿಕೆಯ ಕವಿಗಳಷ್ಟೇ ಕೊಳ್ಳೆಹೊಡೆದಿದ್ದಾರೆ. ಉಳಿದವರು ಬಹುಪಾಲು ಸಾಮಾನ್ಯತಾಸ್ತರದಲ್ಲಿ ಚಲಿಸುವ ಛಾಯೆಯಾಗಿದ್ದಾರೆ"—ಎಂದು ಹೇಳಿದ್ದಾರೆ.

ಈ ಮಾತುಗಳನ್ನು ಒಪ್ಪಿಕೊಳ್ಳಬಹುದು. ಕೇವಲ ಹರಿಹರನ ಶತಕಗಳಲ್ಲಿ ಮತ್ತು ರತ್ನಾಕರನ ಶತಕಗಳಲ್ಲಿ ಮಾತ್ರ ಅಲ್ಲಲ್ಲಿ ಭಾವಗೀತೆಯ ಅಂಶವನ್ನು ಕಾಣಬಹುದು. ಪ್ರಭುಶಂಕರ ಅವರು ಶತಕಗಳಿಗೆ ಶುದ್ಧ ಭಾವಗೀತೆಯಾಗಬಲ್ಲ ಶಕ್ತಿಯಿದೆ ಎಂದು ಹೇಳಿದರೂ ಅವರು ತಮ್ಮ ಶತಕಗಳಲ್ಲಿ ಭಾವಗೀತೆ ಎಂಬ ಅಧ್ಯಾಯದಲ್ಲಿ ಕೇವಲ ಹರಿಹರನ ಶತಕಗಳಿಂದ ಹಾಗೂ 'ರತ್ನಾಕರಾಧೀಶ್ವರ ಶತಕ'ದಿಂದ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಉಳಿದ ಯಾವುದೇ ಶತಕದಿಂದ ಉದಾಹರಣೆ ಕೊಟ್ಟಿಲ್ಲ. ಆದುದರಿಂದ ಕೆಲವು ಶತಕಗಳಲ್ಲಿ ಮಾತ್ರ ಭಾವಗೀತೆಯ ಅಂಶವಿದೆಯೆಂದೂ ಕೇವಲ ಕೆಲವು ಕವಿಗಳು ಮಾತ್ರ ಬೋಧಪ್ರದವಾದ ಶತಕವನ್ನು ಭಾವಗೀತೆಯಾಗಿ ಮಾಡಬಲ್ಲರೆಂದೂ ಸ್ಪಷ್ಟವಾಗುತ್ತದೆ.

ಕೆ. ಕೃಷ್ಣಮೂರ್ತಿಯವರು, ಕಾಳಿದಾಸನಿಗೆ ಸ್ಫೂರ್ತಿಯನ್ನಿತ್ತ ಪೂರ್ವದ ಭಾವಗೀತೆಗಳಾವುವೆಂದು ವಿಚಾರಮಾಡುತ್ತಾಹೊರಟರೆ ಮಹಾರಾಷ್ಟ್ರೀಪ್ರಾಕೃತ ಸಾಹಿತ್ಯದ ಅಮರ ಭಾವಗೀತೆಗಳ ಸಂಗ್ರಹವಾದ "ಗಾಥಾಸಪ್ತಶತೀ" ಎಂಬ ಕಾವ್ಯಕೋಶವು ಕಣ್ಣಿಗೆ ಬೀಳುತ್ತದೆ—ಎಂದು ಹೇಳಿ ಗಾಥಾಸಪ್ತಶತೀಯನ್ನು ಭಾವಗೀತೆಗಳ ಸಾಲಿಗೆ ಸೇರಿಸಿದ್ದಾರೆ ('ಸಂಸ್ಕೃತಕಾವ್ಯ', ೧೯೫೮, ಪು. ೩.೨೮). ಅವರು ಸಂಸ್ಕೃತದ ಭಾವಗೀತೆಗಳ ಆವಿರ್ಭಾವ ಹಾಗೂ ವಿಕಾಸಕ್ಕೆ ಪ್ರಾಕೃತದ ಶೃಂಗಾರರತ್ನಕೋಶವಾದ 'ಗಾಥಾಸಪ್ತಶತೀ' ಹೆಚ್ಚಿನ ಪ್ರಭಾವಬೀರಿದೆಯೆಂದು ಹೇಳಿದರೂ, ಭರ್ತೃಹರಿಯ 'ಶೃಂಗಾರಶತಕ' ಮತ್ತು ಅಮರು ಕವಿಯ 'ಅಮರುಶತಕ'ಗಳು ಭಾವಗೀತೆಗಳ ಸಾಲಿಗೆ ಸೇರುತ್ತವೆಯೋ

ಎಂಬುದನ್ನು ಸ್ಪಷ್ಟಪಡಿಸಿಲ್ಲ. 'ನೀತಿ ವೈರಾಗ್ಯಶತಕ'ಗಳನ್ನು ಪ್ರತ್ಯೇಕ ವಿಭಾಗದಲ್ಲಿ ಹೇಳಿರುವುದರಿಂದ, ಅವುಗಳು ಭಾವಗೀತೆಗಳ ಸಾಲಿಗೆ ಸೇರಿಲ್ಲವೆಂಬುದು ಸ್ಪಷ್ಟ.

ಎಚ್. ಗಂಗಾಧರಶಾಸ್ತ್ರೀ ಅವರು, "ಮಹಾಕಾವ್ಯಗಳ ವಿಷ್ಟೋ ಭಾಗಗಳು ಭಾವಗೀತೆಗಳೇ. ಭಕ್ತಿಪ್ರಧಾನವಾದ ಹರಿಹರನ ಶತಕಗಳೂ ಹರಿದಾಸರ ಗೀತೆಗಳೂ ಶಿವಶರಣರ ವಚನಗಳೂ ಉತ್ತಮಭಾವಗೀತೆಗಳೆಂದು ಹೇಳಬಹುದು"—ಎಂದಿದ್ದಾರೆ ('ಅಮರು ಕವಿಯ ಅಮರುಶತಕ,' ಪೀಠಿಕೆ, ಪು. ೧೧).

'ಪಂಚಶತಕ'ದ ಪ್ರಕಾಶಕರು ಶತಕವನ್ನು ಕುರಿತು ಹೇಳುತ್ತಾ "ಭಾವಗೀತೆಯ ಸ್ವರೂಪಕ್ಕೆ ಹತ್ತಿರವಾದ ಈ ಕಾವ್ಯಪ್ರಕಾರ ಸಂಸ್ಕೃತ ಸಾಹಿತ್ಯದ ಸಾರ. ಕನ್ನಡ ಜನಜೀವನದ ಮೌಲ್ಯಗಳನ್ನು ಒಳಗೊಂಡು ಜನಮನದ ಸಂಸ್ಕಾರ ನಡೆಸಿತು" ಎಂದು ಅಭಿಪ್ರಾಯಪಟ್ಟಿದ್ದಾರೆ ('ಪಂಚಶತಕ', ಪ್ರಕಾಶಕರ ಮಾತು, ೧೯೬೯). ಈ ರೀತಿ ಅನೇಕರು ಶತಕಗಳನ್ನು ಭಾವಗೀತೆಗಳೆಂದು ನೇರವಾಗಿಯೋ ಅಥವಾ ಸೂಕ್ಷ್ಮವಾಗಿಯೋ ಹೇಳಿದ್ದಾರೆ. ಆದರೆ ಇದಕ್ಕೆ ವಿರುದ್ಧವಾದ ಅಭಿಪ್ರಾಯಗಳೂ ಇವೆ.

ಟಿ. ಎಚ್. ಎಂ. ಸದಾಶಿವಯ್ಯನವರು 'ರಕ್ಷಾಶತಕಂ' ಮುನ್ನುಡಿಯಲ್ಲಿ ಈ ರೀತಿ ಹೇಳಿದ್ದಾರೆ (೧೯೬೦, ಪು. ೪): "ಕೆಲವರು ಶತಕಗಳನ್ನು ಭಾವಗೀತೆಗಳ ವಿಭಾಗಕ್ಕೆ ಸೇರಿಸಿರುವರು. ಆಂಗ್ಲ ವಾಙ್ಮಯ ರೀತಿಯ ಲಕ್ಷ್ಯದಿಂದ ಶತಕವಾಙ್ಮಯ ರೀತಿಯನ್ನು ಪರಿಶೀಲಿಸಿದರೆ, ಈ ನಿರ್ಣಯವು ಯುಕ್ತವೆಂದು ತೋರಿದರೂ, ಈ ಹೋಲಿಕೆಯ ನಿರ್ಣಯವು ಅಸಂಗತವೆಂದೇ ಹೇಳಬಹುದು. ಭಾವಗೀತೆಗಳಲ್ಲಿ ಕವಿಯು ಪ್ರಕೃತಿಸ್ವರೂಪಗಳ ಗುಣಸೌಂದರ್ಯಗಳನ್ನು ಮನೋಭಾವಗಳನ್ನು ಮನೋಹರವಾಗಿ ವರ್ಣಿಸುತ್ತ ಭಾವವಿಕಾಸವನ್ನುಂಟುಮಾಡುವುದೇನೋ ನಿಜ. ಆದರೆ ಈ ಭಾವವಿಕಾಸವು ಮಾನಸಿಕಾನಂದವನ್ನುಂಟುಮಾಡಿದರೂ ಪುರುಷಾರ್ಥಸಾಧನೆಗೆ ಪ್ರಯೋಜನವಲ್ಲ. ಶತಕಗಳಾದರೋ ಭಾವಗೀತೆಗಳಿಗೆ ಅತೀತವಾದ ಆತ್ಮಾನಂದವನ್ನುಂಟುಮಾಡುತ್ತ ಪುರುಷಾರ್ಥವನ್ನು ಪಡೆಯುವುದಕ್ಕೆ ಸಾಧನಗಳಾಗಿರುವುವು. ಇವು ಸಾಮಾನ್ಯವಾಗಿ ಭಕ್ತಿಯೋಗವನ್ನು ಪ್ರತಿಪಾದಿಸುವುದಾಗಿದ್ದು, ಇವುಗಳಿಗೆ ಮೋಕ್ಷಪ್ರಾಪ್ತಿಯೇ ಪ್ರಯೋಜನವು. ಶತಕಗಳಲ್ಲಿ ಕಂಡುಬರುವ ಪರಮಾತ್ಮನ ಲೀಲೆಗಳ ವರ್ಣನೆಗಳು ಭಾವಗೀತೆಗಳ ಭಾವವರ್ಣನೆಗೆ ಅತೀತವಾಗಿದ್ದು ಕವಿಯ ವ್ಯಕ್ತಿತ್ವವನ್ನು ಸ್ಫುಟಗೊಳಿಸಿ ಭಕ್ತಿರಸಾವೇಶನೆಯನ್ನುಂಟುಮಾಡುವುವು. ಭಾವಗೀತೆಗಳು ಭೌತಿಕಾನಂದವನ್ನುಂಟುಮಾಡಿ ಮನಸ್ಸನ್ನು ತಣಿಸಿದರೆ, ಶತಕಗಳು ಆಧ್ಯಾತ್ಮಿಕಾನಂದವನ್ನುಂಟುಮಾಡಿ ಹೃದಯವನ್ನು ಸೂರೆಗೊಳ್ಳುವುವು. ಅನನ್ಯಭಕ್ತಿಪಾರವಶ್ಯಾನಂದವನ್ನು ವರ್ಣಿಸಲೂ ಶತಕಗಳು ಯೋಗ್ಯವಾಗಿರುವುವು." ಇಲ್ಲಿ ಅವರು ಶತಕಗಳು ಭಾವಗೀತೆಗಳಿಗೆ ಅತೀತವಾದವುಗಳೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಟಿ. ಎಚ್. ಎಂ. ಸದಾಶಿವಯ್ಯನವರ ಈ ಅಭಿಪ್ರಾಯವನ್ನು ಒಪ್ಪಬಹುದು. ಭಾವಗೀತೆಯನ್ನು ಕವಿಯು ರಚಿಸುವುದು ತನ್ನ ಆತ್ಮಾನಂದಕ್ಕಾಗಿ ಅಥವಾ ಆತ್ಮತೃಪ್ತಿಗಾಗಿ ಹೊರತು ಲೋಕಪ್ರಯೋಜನಾರ್ಥವಾಗಿ ಅಲ್ಲ. ಶತಕಗಳನ್ನು ಕವಿಯು ರಚಿಸುವುದು ತನಗಾಗಿ

ಅಲ್ಲ, ಜನರಿಗಾಗಿ ; ಸಮಾಜಕ್ಕೆ ಉಪದೇಶವನ್ನು ನೀಡುವುದಕ್ಕಾಗಿ.

ತೆಲುಗಿನಲ್ಲಿಯೂ ಶತಕಗಳು ಭಾವಗೀತೆಗಳೇ ಅಲ್ಲವೇ ಎಂಬ ಬಗ್ಗೆ ವಾದ ನಡೆದಿದೆ. ತೆಲುಗಿನ ವಂಗೂರಿ ಸುಬ್ಬರಾವ್ ಎಂಬವರು 'ಶತಕವಾಙ್ಮಯ ಚರಿತ್ರೆ'ಯಲ್ಲಿ "ಶತಕಮುಲು ಭಾವಗೀತಮುಲು ಅನು ಕಾವ್ಯಾಂಗಮುನಕು ಚೇರಿನದಿ" ಎಂದರೆ ಶತಕವು ಭಾವಗೀತೆ ಅನ್ನುವ ಕಾವ್ಯವಿಭಾಗಕ್ಕೆ ಸೇರಿದ್ದೆಂದು ಹೇಳುತ್ತಾರೆ. ಆದರೆ ಈ ನಿರ್ಣಯವು ನಮ್ಮ ಸಂಪ್ರದಾಯಕ್ಕೆ ಅನುಗುಣವಾಗಿಲ್ಲವೆಂದು ಹೇಳಿದ ನಾಗೇಶ್ವರರಾವ್ ಅವರು, "ಶತಕವು ಭಾವಗೀತೆಯಾಗಲಾರದು. ಭಾವಗೀತೆಗಳ ಭೌತಿಕಾನಂದವನ್ನುಂಟುಮಾಡುತ್ತದೆ. ಶತಕಗಳು ಆಧ್ಯಾತ್ಮಿಕಾನಂದವನ್ನುಂಟುಮಾಡುವುದರಿಂದ ಇವು ಭಾವಗೀತೆಯಾಗಲಾರವು. ಅವರು ಈ ರೀತಿ ಹೇಳಲು ಕಾರಣ ಅವರ ದೃಷ್ಟಿಯಲ್ಲಿದ್ದುದು ಭಕ್ತಿ ಶತಕಗಳು ಮಾತ್ರ. ಆತ್ಮಾಶ್ರಯಕವಿತಾಧರ್ಮವು ಭಾವಗೀತೆಯಲ್ಲೂ ಶತಕದಲ್ಲೂ ಪ್ರಧಾನವಾದುದೆಂದು ಹೇಳುತ್ತಾರೆ. ಈ ಕಾರಣದಿಂದ ಶತಕವು ಭಾವಗೀತೆಯಾಗಲಾರದು" ಎಂದು ಹೇಳಿದ್ದಾರೆ (ಕೆ. ಗೋಪಾಲಕೃಷ್ಣರಾವ್, 'ಆಂಧ್ರಶತಕ ಸಾಹಿತ್ಯ ವಿಕಾಸಮು', ೧೯೭೬, ಪು. ೬).

ಎಂ. ಮರಿಯಪ್ಪಭಟ್ಟರು ಕನ್ನಡ ಶತಕಗಳ ಬಗ್ಗೆ ಬರೆಯುತ್ತಾ "ತೆಲುಗು ಸಾಹಿತ್ಯ ವಿಮರ್ಶಕರಲ್ಲಿ ಕೆಲವರು ಶತಕಗಳನ್ನು ಆಂಗ್ಲ ಭಾವಗೀತೆಗಳಿಗೆ **(Lyrics)** ಹೋಲಿಸಿರುವರು. ಈ ಅಭಿಪ್ರಾಯವನ್ನು 'ಶತಕಕವುಲ ಚರಿತ್ರ'ದಲ್ಲಿ ಹೀಗೆ ಖಂಡಿಸಿರುವರು: "ಪ್ರಾಚ್ಯಸಂಸ್ಕಾರಪರಮುಲೈನ ಶತಕಮುಲಕುನು ಪಾಶ್ಚಾತ್ಯಸಂಸ್ಕಾರಪರಮುಲೈನ ಭಾವಗೀತಮುಲಕುನು ಸಾಮ್ಯತ್ವಮು ದುರ್ಲಭಮು." ಮಾತ್ರವಲ್ಲ ಭಕ್ತಿ, ಜ್ಞಾನ ವೈರಾಗ್ಯಬೋಧಕಗಳಾದ ಶತಕಗಳು ಭಾಷಾಭೂಷಣಗಳಾಗಿ ಪೂಜಾರ್ಹಗಳು, ಪಠನಾರ್ಹಗಳು, ಸ್ಮರಣಾರ್ಹಗಳು, ಮನನಾರ್ಹಗಳು. ಭಾವಗೀತೆಗಳು ಹೆಚ್ಚಾಗಿ ಪ್ರಕೃತಿ ವರ್ಣನೆಯನ್ನು ಮಾಡುವುವು. ಕಾಮಪರವಾಗಿ ಬಂಧನಮೂಲಗಳು ; ಶತಕಗಳು ಹೆಚ್ಚಾಗಿ ನಿತ್ಯಸತ್ಯವನ್ನು ಸಾರುವುದರಿಂದ ದೈವಪರವಾಗಿ ಮೋಕ್ಷಕಾರಣಗಳು. ಈ ಅಭಿಪ್ರಾಯದಿಂದ ಶತಕಗಳ ಹಿರಿಮೆ ಸ್ವಲ್ಪವಾದರೂ ಮುಂದಟ್ಟಾಗದಿರದು. ಅನೇಕ ಶತಕಗಳಲ್ಲಿ ಜ್ಞಾನಿಗಳ ಅನುಭವದೊಂದಿಗೆ ಪುರಾಣಪುರುಷರ ಜೀವನ ಆದರ್ಶಗಳು ಹಾಸುಹೊಕ್ಕಾಗಳಾಗಿ ಬಂದಿರುವುದರಿಂದ ಅವುಗಳಿಗೆ ಒಂದು ಪ್ರಮಾಣದ ಯೋಗ್ಯತೆ ಬಂದಿರುತ್ತದೆ"—ಎಂದು ಹೇಳಿದ್ದಾರೆ ('ಕನ್ನಡ ಸಂಸ್ಕೃತಿ', ೧೯೭೭, ಪು. ೧೯೪). ಇಲ್ಲಿ ಮರಿಯಪ್ಪಭಟ್ಟರು ಶತಕಗಳು ಭಾವಗೀತೆಗಿಂತ ಭಿನ್ನ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಕೋ. ಚೆನ್ನಬಸಪ್ಪನವರು : "ಶತಕಗಳು ಯಾವ ಜಾತಿಯ ಕಾವ್ಯ? ಶತಕಗಳ ಉದ್ದೇಶ ಮೇಲೆ ಹೇಳಿದಂತೆ ಭಕ್ತಿಯೋಗಕ್ಕೆ ಅನುಕೂಲವಾಗಬೇಕಾದ್ದರಿಂದ ಕಥಾ ನಿರೂಪಣೆಗಿಂತ ಭಾವಾಭಿವ್ಯಕ್ತಿಗೇ ಹೆಚ್ಚು ಪ್ರಾಧಾನ್ಯ. ಆದ್ದರಿಂದ ಕೆಲವರು ಶತಕಗಳನ್ನು ಭಾವಗೀತೆಗಳ ವಿಭಾಗಕ್ಕೆ ಸೇರಿಸಿದ್ದಾರೆ ; ಇದು ಒಂದು ಅರ್ಥದಲ್ಲಿ, ಸೀಮಿತ ಅರ್ಥದಲ್ಲಿ, ಸರಿಯೆನಿಸಬಹುದು—ಶತಕದ ಒಂದೊಂದು ಪದ್ಯವೂ ಕವಿಯ ಒಂದೊಂದು ಮನೋ

ಭಾವವನ್ನು ಸುಂದರವಾಗಿ ವರ್ಣಿಸಲು ನೆರವಾಗುತ್ತದೆ ಎಂಬುದರಿಂದ. ಆದರೆ ಪಾಶ್ಚಾತ್ಯ ಸಾಹಿತ್ಯದಲ್ಲಿ ಭಾವಗೀತೆಗಳಿಗಿರುವ ವಿಶಿಷ್ಟ ಅರ್ಥ ಲಕ್ಷಣ ವ್ಯಾಪ್ತಿ ಪ್ರಯೋಜನದ ದೃಷ್ಟಿಯಿಂದ ಹರಿಹರನ ಶತಕಗಳು ಭಾವಗೀತೆಗಳಲ್ಲ. ಭಾವಗೀತೆಗಳು ಬಹುತೇಕ ಪ್ರಕೃತಿವರ್ಣನೆ ಅಥವಾ ಲೌಕಿಕ ವಸ್ತುಗಳಿಂದಾದ ಅನುಭವದ ಅಭಿವ್ಯಕ್ತಿಗೆ ಮೀಸಲಾಗಿವೆ. ಅಂದರೆ ಲೋಕೋತ್ತರವಿಷಯ ವಿಚಾರಗಳ ಅಭಿವ್ಯಕ್ತಿ, ಭಾವಗೀತೆಗಳಿಗೂ ಶತಕಗಳಿಗೂ ಇರುವ ಒಂದು ಎದ್ದುಕಾಣುವ ವ್ಯತ್ಯಾಸ. ಅವೆರಡರಲ್ಲಿರುವ ಸಂಖ್ಯಾವ್ಯತ್ಯಾಸ: ಭಾವಗೀತೆ ಯಾವ ಸಂಖ್ಯಾಬದ್ಧತೆಗೂ ಬದ್ಧವಾಗಿಲ್ಲ. ಆದರೆ ಅಷ್ಟಕಶತಕಗಳು ಸಂಖ್ಯಾಬದ್ಧಕಾವ್ಯಗಳು. ಒಂದು ಭಾವಗೀತೆಯಲ್ಲಿ ಒಂದು ಭಾವದ ಏಕಸೂತ್ರತೆ ಇದ್ದೇ ಇರುವುದು ಅನಿವಾರ್ಯ, ಆದರೆ ಶತಕದಲ್ಲಿ ಈ ಅರ್ಥದಲ್ಲಿ ಭಾವದ ಏಕಸೂತ್ರತೆ ಕಾಣದು. ಅದರ ಭಾವದಲ್ಲಿ ಏಕಸೂತ್ರತೆ ಇದ್ದರೆ ಅದು ಭಕ್ತಿಭಾವದ ಏಕಸೂತ್ರತೆ ಎಂಬುದೊಂದೇ —ಹೀಗೆ ಅಭಿಪ್ರಾಯವನ್ನು ಪ್ರಕಟಿಸಿದ್ದಾರೆ (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ. ೩. ೧೯೭೬, ಪು. ೩೩೦–೩೩೧).

ಭಾವಗೀತೆ ಹಾಗೂ ಭಕ್ತಿಶತಕದಂತಹ ಕೆಲವು ಶತಕಗಳಲ್ಲಿ ಆತ್ಮನಿವೇದನಕ್ಕೆ ಪ್ರಾಧಾನ್ಯವಿದೆ. ಸ್ವಾತಂತ್ರ್ಯವೂ ಇದೆ. ಇದನ್ನು ಗಮನಿಸಿ ಕೆಲವರು ಶತಕಗಳನ್ನು ಭಾವಗೀತೆಗಳೆಂದು ಕರೆದರು. ಪ್ರಭುಶಂಕರ ಅವರು "ಕವಿ ತನ್ನ ಮನಸ್ಸಿನ ವಿವಿಧ ಭಾವಗಳಿಗೆ ಕಾವ್ಯಮಯವಾದ ಅಭಿವ್ಯಕ್ತಿಯನ್ನು ನೀಡಿದಾಗ ಅಲ್ಲಿ ನಾವು ಸಾಹಿತ್ಯವನ್ನು ಕಾಣುತ್ತೇವೆ. ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಬೋಧಿಸಹೊರಟಾಗ ಅವು ಶಾಸ್ತ್ರವಾಗುತ್ತವೆ" ಎಂದಿದ್ದಾರೆ. ಆದುದರಿಂದ ಮುಖ್ಯವಾಗಿ ಭಕ್ತಿ-ಜ್ಞಾನ ವೈರಾಗ್ಯಗಳನ್ನು ಚಿತ್ರಿಸುವ ಶತಕಗಳನ್ನು ಶಾಸ್ತ್ರಗಳೆಂದು ಹೇಳಬಹುದು. ಪ್ರಭುಶಂಕರ ಅವರು ತಮ್ಮ ಶತಕಗಳಲ್ಲಿ ಭಾವಗೀತೆ ಎಂಬ ಲೇಖನಕ್ಕೆ ಉದಾಹರಣೆಗಳನ್ನು ಎತ್ತಿಕೊಂಡ ಶತಕಗಳಾದ ಹರಿಹರನ 'ಪಂಪಾಶತಕ', 'ರಕ್ಷಾಶತಕ' ಹಾಗೂ ರತ್ನಾಕರವರ್ಣಿಯ 'ರತ್ನಾಕರಾಧೀಶ್ವರ ಶತಕ'ಗಳು ಭಕ್ತಿ, ಜ್ಞಾನ, ವೈರಾಗ್ಯ ನಿರೂಪಕ ಶತಕಗಳು. ಜಿ. ವಿ. ಗುಂಜೆಟ್ಟಿ ಅವರೂ ಶತಕಗಳನ್ನು ವಿಭಾಗಿಸುವಾಗ ಈ ಶತಕಗಳನ್ನು ಭಕ್ತಿ, ಜ್ಞಾನ ವೈರಾಗ್ಯ ನಿರೂಪಕ ಶತಕಗಳ ವಿಭಾಗಕ್ಕೆ ಸೇರಿಸಿದ್ದಾರೆ. ಈ ದೃಷ್ಟಿಯಲ್ಲಿ ನೋಡಿದಾಗ ಈ ಶತಕಗಳು ಭಾವಗೀತೆಗಳಾಗುವುದಿಲ್ಲ, ಶಾಸ್ತ್ರಗಳಾಗುತ್ತವೆ. ಆದರೂ ಕೆಲವು ವಿಮರ್ಶಕರು ಹೇಳಿದಂತೆ ಹರಿಹರನ ಮತ್ತು ರತ್ನಾಕರವರ್ಣಿಯ ಶತಕಗಳಲ್ಲಿ ಕೆಲವೆಡೆ ಭಾವಗೀತೆಯ ಲಕ್ಷಣ ಅಥವಾ ಅಂಶಗಳು ಕಂಡುಬರುತ್ತವೆ ಎನ್ನುವುದು ಒಪ್ಪತಕ್ಕ ಮಾತು. ಹಾಗೆಂದು ಇಡಿಯ ಶತಕ ಸಾಹಿತ್ಯ ಪ್ರಕಾರವನ್ನೇ ಭಾವಗೀತೆಯೆಂದು ಕರೆಯುವುದು ಸರಿಯಲ್ಲ. ಆಂಗ್ಲಸಾಹಿತ್ಯದಲ್ಲಿ ಪ್ರಚಾರದಲ್ಲಿರುವ ಲಿರಿಕ್‌ಗೆ ಅಥವಾ ಭಾವಗೀತೆಗೆ ಶತಕಗಳು ಸಮಾನವಾದವುಗಳಲ್ಲ. ಭಾವಗೀತೆ ಎಂಬುದು ಸಣ್ಣ ಕವಿತೆ. ಅದು ಸಂಕ್ಷಿಪ್ತವಾಗಿರುತ್ತದೆ. ಮಾತ್ರವಲ್ಲ ತಾತ್ಕಾಲಿಕವಾದ ಕ್ಷಣಾವೇಶದ ಕೃತಿಯಾಗಿರುತ್ತದೆ. ಶತಕವು ಭಾವಗೀತೆಯಷ್ಟು ಸಣ್ಣದೂ ಅದರಂತೆ ತಾತ್ಕಾಲಿಕ ಕ್ಷಣಾವೇಶದ ರಚನೆಯೂ ಅಲ್ಲ ಭಾವಗೀತೆ ಹಾಗೂ

ಶತಕಗಳ ಲಕ್ಷಣಗಳನ್ನು ಸರಿಯಾಗಿ ವಿಮರ್ಶಿಸಿ ನೋಡಿದಾಗ ಶತಕವು ಹೆಚ್ಚಿನ ಅಂಶಗಳಲ್ಲಿ ಭಾವಗೀತೆಗಿಂತ ಭಿನ್ನವಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಆದುದರಿಂದ ಕೇವಲ ಕೆಲವು ಶತಕಗಳಲ್ಲಿ ಭಾವಗೀತೆಯ ಅಂಶವಿರುವುದರಿಂದ ಶತಕಗಳನ್ನು ಭಾವಗೀತೆಯ ವಿಭಾಗಕ್ಕೆ ಸೇರಿಸುವುದು ಸರಿಯಾಗಲಾರದು.

## ಶತಕವು ಪ್ರಗಾಥವೇ ?

ರಂ. ಶ್ರೀ. ಮುಗಳಿ ಅವರು ' ಅಷ್ಟಕಗಳು ಸಣ್ಣಪ್ರಮಾಣದ ಭಾವಗೀತಗಳಂತಿದ್ದರೆ ಶತಕಗಳಲ್ಲಿ ಕೆಲವಾದರೂ ಪ್ರಗಾಥದಂತೆ ತುಂಬುಗೊರಳಿನ ಉದ್ಗಾರಗಳಾಗಿರುತ್ತವೆ'' ಎಂದೂ ('ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು', ೧೯೭೩, ಪುಟ ೯೨–೧೦೩) ''ಹರಿಹರನ ಪಂಪಾಶತಕ ಮತ್ತು ರಕ್ಷಾಶತಕಗಳು ಭಾವಗೀತಾತ್ಮಕ ಶತಕಗಳ ಒಂದು ಉತ್ಕಟ ಸ್ವರೂಪವನ್ನು ತಳೆದು ಪ್ರಾಚೀನ ಪ್ರಗಾಥಗಳಂತೆ ಕಂಗೊಳಿಸುತ್ತವೆ'' ಎಂದೂ ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಪ್ರಗಾಥದ ಲಕ್ಷಣಗಳೇನು ? ಶತಕಗಳು ಪ್ರಗಾಥಗಳಾಗುತ್ತವೆಯೋ ಎಂಬುದನ್ನು ವಿವೇಚಿಸಬೇಕಾಗುತ್ತದೆ.

ಡಿ. ಎಸ್. ಕರ್ಕಿ ಅವರು 'ಕನ್ನಡ ಛಂದೋವಿಕಾಸ'ದಲ್ಲಿ (೧೯೭೭, ಪುಟ ೩೦೬–೩೦೮) ಪ್ರಗಾಥದ ಬಗ್ಗೆ ಹೀಗೆ ಬರೆದಿದ್ದಾರೆ : ''ಇಂಗ್ಲಿಷ್‌ನ ಮುಖಾಂತರ ಕನ್ನಡಕಾವ್ಯ ಕ್ಷೇತ್ರದಲ್ಲಿ ಸುಳಿದು ಬಂದ ಛಂದೋರೂಪಗಳಲ್ಲಿ ಪ್ರಗಾಥವೂ ಒಂದು. ಇಂಗ್ಲಿಷ್‌ನಲ್ಲಿ ಅದಕ್ಕೆ **'Ode'** (ಓಡ್) ಎಂಬ ಹೆಸರು ರೂಢವಾಗಿದೆ. ಪ್ರಗಾಥವು ಭಾವಗೀತದ ಒಂದು ಪ್ರಕಾರ. ಗಂಭೀರವಾದ ಶೈಲಿಯಲ್ಲಿ ರಚಿತವಾದ ಹಾಗೂ ಪ್ರಶಂಸನಾಪರವಾದ ಭಾವಗೀತವದು. ಸಾಮಾನ್ಯವಾಗಿ ಅದು ಸಂಬೋಧನಾಪರವಾಗಿಯೋ ಧ್ಯಾನ ಪ್ರಧಾನವಾಗಿಯೋ ಇರುವ ಕವಿತೆ. ಅದು ಕಟ್ಟುನಿಟ್ಟಾದ ಚರಣಗಳನ್ನೊಳಗೊಂಡ ಪದ್ಯಗಳ ಮಾಲೆಯಾಗಿರದೆ, ವಿವಿಧ ಪ್ರಾಸವಿನ್ಯಾಸಗಳಿಂದ ಕೂಡಿದ ಅನಿಯಮಿತಚರಣಗಳು ಸೇರಿದ ಪದ್ಯಗಳ ಸಂಕೀರ್ಣವಾಗಿರುವುದೇ ಹೆಚ್ಚು. ನಿಯಮಿತ ಸಂಖ್ಯೆಯ ಚರಣಗಳ ಪದ್ಯಗಳನ್ನು ನಿಯತವಾದ ಕ್ರಮದಲ್ಲಿ ಒಳಗೊಂಡ ಪ್ರಗಾಥದ ಪ್ರಭೇದಕ್ಕೆ ಪಿಂಡಾರಿಕ್ ಪ್ರಗಾಥವೆಂದು ಹೆಸರು. ಮುಂದೆ ಪಿಂಡಾರಿಕ್ ಪ್ರಗಾಥಕ್ಕೆ ಉದಾಹರಣೆಯಾಗಿ, ಡಿ. ವಿ. ಗುಂಡಪ್ಪನವರ 'ಬೇಲೂರಿನ ಶಿಲಾಬಾಲಿಕೆಯರು' ಮತ್ತು ಕುವೆಂಪು ಅವರ 'ಗೋವಟೇಶ್ವರ' ಎಂಬ ಕವನಗಳನ್ನು, ಅನಿಯಮಿತ ಪ್ರಗಾಥಕ್ಕೆ ಪುಟ್ಟಪ್ಪನವರ ಸ್ವಾತಂತ್ರ್ಯೋದಯ ಪ್ರಗಾಥವನ್ನು ಉದಾಹರಿಸಿ, ಪ್ರಗಾಥಗಳು ''ಇಂಗ್ಲಿಷ್‌ನಲ್ಲೂ ಅಷ್ಟು ರಚಿತವಾಗಿಲ್ಲ ; ಕನ್ನಡದಲ್ಲಂತೂ ಇನ್ನೂ ಕಡಮೆ ; ಇದಕ್ಕೆ ಕಾರಣ ಭಾವದ ಕಾವು ಬಹಳ ಹೊತ್ತಿನವರೆಗೆ ಒಂದೇ ಗತಿಯಲ್ಲಿ ಉಳಿದಾಗ ಸಮರ್ಥನಾದ ಕವಿ ಮಾತ್ರ ಪ್ರಗಾಥವನ್ನು ರಚಿಸಬಲ್ಲನೆಂದೂ ಭಾವದ ಕಾವು ಆರಿದರೆ ಪ್ರಗಾಥ ಕೊನೆಗೊಳ್ಳುವುದೆಂಬುದನ್ನೂ ಪ್ರಗಾಥಕ್ಕೆ ಕಾವ್ಯಸಮಾಧಿ ಆವಶ್ಯಕವೆಂಬುದನ್ನೂ ಉತ್ತಮವಾದ ಇಂಗ್ಲಿಷ್ ಪ್ರಗಾಥಗಳನ್ನು ರಚಿಸಿದ ಕೀಟ್ಸ್ ಕವಿಯ 'ಓಡ್ ಟು ನೈಟಿಂಗೇಲ್' ಎಂಬ

ಪ್ರಗಾಥದ ಕೊನೆಯ ಪದ್ಯವು ವಿಚಿತ್ರವಾಗಿ ದ್ವಿತ್ರಿಮಾನದ್ದೆಂದು ಹೇಳಿದ್ದಾರೆ.

ಎಸ್. ಅನಂತನಾರಾಯಣ ಅವರು, ಭಾವಗೀತೆಯ ಬಗ್ಗೆ ಬರೆಯುತ್ತಾ (ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ೧೯೬೭, ಪು. ೧೮೦) "ಭಾವಗೀತೆಯಲ್ಲಿ ಸಾನೆಟ್, ಪ್ರಗಾಥ ಮುಂತಾದ ವಿವಿಧ ರೂಪಗಳಿವೆ. ಇವು ವಸ್ತುವಿನ ಆಧಾರದ ಮೇಲೆ ಮಾಡಿದ ವಿಭಾಗಗಳಲ್ಲ; ಛಂದೋರೂಪ ಮತ್ತು ನಿರೂಪಣೆಯ ರೀತಿಯ ಆಧಾರದ ಮೇಲೆ ಮಾಡಿದ ವಿಭಾಗಗಳು" ಎಂದು ಹೇಳಿದ್ದಾರೆ. ಅದೇ ಕೃತಿಯಲ್ಲಿ ಅವರು ಪ್ರಗಾಥದ ಬಗ್ಗೆ ಹೀಗೆ ಬರೆದಿದ್ದಾರೆ (ಪು. ೨೨೧):

"ಇಂಗ್ಲಿಷಿನ ಓಡ್ ಕನ್ನಡದ ಭಾವಗೀತೆಯಂತೆಯೇ 'ಓಡ್' ಪ್ರಗಾಥವಾಯಿತು. ಪ್ರಗಾಥವು ಭಾವಗೀತೆಯ ಒಂದು ರೂಪ ಎನ್ನಬಹುದು. ಪ್ರಗಾಥ ಎಂಬ ಪದ ಬಹಳ ಹಿತವಾದ ಮತ್ತು ಹದವಾದ ಪದ. 'ಗಾಥ' ಎಂಬುದು ಹಾಡನ್ನು ಸೂಚಿಸುತ್ತದೆ. ಈ 'ಹಾಡು'ತನವೇ 'ಓಡ್'ನ ಮುಖ್ಯ ಲಕ್ಷಣ. 'ಓಡ್' ಎನ್ನುವುದು ಸಾಮಾನ್ಯವಾಗಿ ಪ್ರಾಸವುಳ್ಳ ಗೀತೆ. ಗಂಭೀರವಾದ ಮತ್ತು ಘನವಾದ ಶೈಲಿಯಲ್ಲಿರುತ್ತದೆ. ಬದಲಾಯಿಸುವ ಮತ್ತು ಅನಿಯತ ಛಂದಸ್ಸನ್ನೊಳಗೊಂಡಿರುತ್ತದೆ. ಸಾಮಾನ್ಯವಾಗಿ ೫೦ ರಿಂದ ೨೦೦ ಸಾಲುಗಳಷ್ಟಿರುತ್ತದೆ. ಇದು ಸಂಬೋಧನೆಯ ರೂಪದಲ್ಲಿರುತ್ತದೆ. ವಸ್ತು, ಭಾವನೆಗಳಲ್ಲಿಯೂ ಶೈಲಿಯಂತೆಯೇ ಗಂಭೀರವಾಗಿರುತ್ತದೆ. ಎಡ್ಮಂಡ್ ಗಾಸ್ ಅದನ್ನು 'ಉತ್ಸಾಹಪೂರ್ಣ ಗಂಭೀರವಾದ ಭಾವಗೀತೆ, ಒಂದೇ ಗುರಿಯನ್ನುಳ್ಳದ್ದು, ಪ್ರೌಢವಾದ ವಸ್ತುವಿನ ಬಗ್ಗೆ ಗಂಭೀರವಾದ ನಡೆಯುಳ್ಳದ್ದು' ಎಂದು ನಿರ್ದೇಶಿಸಿದ್ದಾನೆ." ಮುಂದುವರಿದು, "ಇದರ ಲಕ್ಷಣಗಳ ಬಗ್ಗೆ ವಿಮರ್ಶಕರಲ್ಲಿ ಒಮ್ಮತದ ಅಭಿಪ್ರಾಯವಿಲ್ಲದಿದ್ದರೂ ಇದರಲ್ಲಿ ಗಂಭೀರ ಶೈಲಿ ಮತ್ತು ಪ್ರೌಢವಾದ ವಸ್ತು, ಇರಬೇಕೆಂದು ಎಲ್ಲಾ ವಿಮರ್ಶಕರೂ ಒಪ್ಪುತ್ತಾರೆ. ಸಾಧಾರಣವಾಗಿ ಪ್ರಾಸವುಳ್ಳದ್ದು, ಗಂಭೀರವಾದ ಕಾವ್ಯ **(Majestic poem)** ಮತ್ತು ನಿರ್ದಿಷ್ಟ ಛಂದಸ್ಸಿಲ್ಲದುದು" ಎಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಬಿ.ಎಂ.ಶ್ರೀ. ಅವರ 'ಕೃಷ್ಣರಾಜ ರಜತಮಹೋತ್ಸವದ ಪ್ರಗಾಥ', 'ಕನ್ನಡ ತಾಯ್ನೋಟ' ಹಾಗೂ 'ಶಂಕ್ರಗೀತೆ' ಉತ್ತಮ ಪ್ರಗಾಥಗಳೆಂದು ಹೇಳಿದ್ದಾರೆ.

ಎಲ್. ಎಸ್. ಶೇಷಗಿರಿರಾವ್ ಅವರು ('ಹೊಸಗನ್ನಡ ಸಾಹಿತ್ಯ', ೧೯೭೫, ಪು.೧೨೧). "ಪ್ರಗಾಥ ಭಾವಗೀತೆಯ ಮತ್ತೊಂದು ರೂಪ. ಇದರ ವಸ್ತು ಉದಾತ್ತ, ಧ್ವನಿ ಗಂಭೀರ. ಭಾಷೆ ಉನ್ನತ. ಇದರಲ್ಲಿ ಭಾವನೆ ಬೆಳೆದುಕೊಂಡು ಹೋಗುತ್ತದೆ. ಇದರಲ್ಲಿ ಅಂತಶ್ಶಿಲ್ಪ ಬಹುಮುಖವಾದದ್ದು. ವರ್ಡ್ಸ್‌ವರ್ತನ 'ಇಮ್ಮಾರ್ಟಾಲಿಟಿ ಓಡ್', ಕೀಟ್ಸ್‌ನ ಹಲವು ಪ್ರಗಾಥಗಳು ಒಂದು ವೃತ್ತವನ್ನು ಮುಗಿಸುತ್ತವೆ"—ಎಂದು ತಿಳಿಸುತ್ತ, ಶ್ರೀಯವರ ರಜತೋತ್ಸವದ ಪ್ರಗಾಥ, ಡಿ.ವಿ.ಜಿ.ಯವರ 'ಬೇಲೂರಿನ ಶಿಲಾಬಾಲಿಕೆಯರು', ಕುವೆಂಪು ಅವರ 'ಗೊಮ್ಮಟೇಶ್ವರ' ಮತ್ತು 'ಸ್ವಾತಂತ್ರ್ಯೋದಯ ಮಹಾಪ್ರಗಾಥ' ಕನ್ನಡದಲ್ಲಿ ಪ್ರಸಿದ್ಧ ಪ್ರಗಾಥಗಳು"—ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಎಚ್. ಗಂಗಾಧರಶಾಸ್ತ್ರಿ ಅವರು ('ಅಮರ ಧರ್ಶ', ೩೦೦೬, ೧೯೫೪, ಪು. ೧೩–೧೪)

''ಉದಾತ್ತ ವಸ್ತು ಭಾವಶೈಲಿಯನ್ನೊಳಗೊಂಡದ್ದು ಪ್ರಗಾಥ (ಶ್ರೀಯವರ ಶ್ರೀಕೃಷ್ಣ ರಾಜೇಂದ್ರ ರಜತಮಹೋತ್ಸವ ಪ್ರಗಾಥ) : ಚರಮಗೀತೆ, ವರ್ಣನಾಕವಿತೆ, ಅನ್ಯೋಕ್ತಿ, ವಿಡಂಬನ, ಮುಕ್ತಕ, ಅಷ್ಟಪದಿ ಇವೆಲ್ಲ ಭಾವಗೀತೆಯ ಪ್ರಭೇದಗಳು'' ಎಂದಿದ್ದಾರೆ.

'ಓಡ್' ಎಂಬ ಪದಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು ವಿನಲ್ಲಿ (೧೯೭೫ ಪು. ೭೯೬) ''ಪ್ರಶಂಸಾರೂಪವಾದ ಉದಾತ್ತಶೈಲಿಯೂ ಉತ್ಸಾಹ ಭಾವವೂ ಉಳ್ಳ, ಅನೇಕ ವೇಳೆ ನಾನಾ ಬಗೆಯ ವೃತ್ತಗಳಿಂದ (ಛಂದಸ್ಸುಗಳಿಂದ) ಕೂಡಿದ, ೫೦ರಿಂದ ೩೦೦ರ ವರೆಗೆ ಪಂಕ್ತಿಗಳುಳ್ಳ ಭಾವಗೀತೆ. ಪ್ರಗಾಥ'' ಎಂಬ ಅರ್ಥ ವನ್ನು ಕೊಡಲಾಗಿದೆ.

ಪ್ರಗಾಥದ ಲಕ್ಷಣಗಳನ್ನು ಈ ರೀತಿ ಸಂಗ್ರಹಿಸಬಹುದು : ಪ್ರಗಾಥವು ಭಾವಗೀತದ ಒಂದು ಪ್ರಕಾರ. ಗಂಭೀರವಾದ ಶೈಲಿ ಹಾಗೂ ಗೇಯತೆಯಿಂದ ಕೂಡಿದ್ದು ಸಂಬೋಧನಾ ಪರವಾಗಿಯೋ ಧ್ಯಾನಪ್ರಧಾನವಾಗಿಯೋ ಇರುತ್ತದೆ. ವಿವಿಧ ಪ್ರಾಸಗಳಿಂದ ಕೂಡಿದ್ದು, ಅದರಲ್ಲಿ ನಿಯಮಿತ ಅಥವಾ ಅನಿಯಮಿತ ಚರಣಗಳಿರುತ್ತವೆ. ಸಾಮಾನ್ಯವಾಗಿ ೫೦ರಿಂದ ೨೦೦ರ ವರೆಗೆ ಚರಣಗಳಿರುತ್ತವೆ. ಹೆಚ್ಚಾಗಿ ನಾನಾ ಬಗೆಯ ಛಂದಸ್ಸಿನಲ್ಲಿರುತ್ತದೆ. ವಸ್ತುಭಾವಗಳಲ್ಲಿಯೂ ಅದು ಗಂಭೀರವಾಗಿರುತ್ತದೆ.

ಶತಕವಾದರೋ, ಭಾವಗೀತದ ಪ್ರಕಾರವಲ್ಲ. ಶತತಗಳಲ್ಲಿ ನೂರು ಪದ್ಯಗಳಿರಬೇಕು. ಇದಕ್ಕೆ ಅಪವಾದವಾಗಿ ಕೆಲವು ಶತಕಗಳಲ್ಲಿ ನೂರಕ್ಕಿಂತ ಹೆಚ್ಚು, ಕೆಲವು ಶತಕಗಳಲ್ಲಿ ನೂರ ಕ್ಕಿಂತ ಕಡಮ ಪದ್ಯಗಳಿರುವುದೂ ಇದೆ. ಶತಕವು ಹೆಚ್ಚಾಗಿ ಒಂದೇ ಛಂದಸ್ಸಿನಲ್ಲಿ ರಚಿತ ವಾಗುತ್ತದೆ. ಹೆಚ್ಚಿನ ಶತಕಗಳು ವೃತ್ತದಲ್ಲಿರುವುದು ಗಮನಾರ್ಹ, ಪ್ರಗಾಥವಾದರೋ ಇಂಗ್ಲಿಷಿನ ಮುಖಾಂತರ ಕನ್ನಡಕ್ಕೆ ಬಂದ ಛಂದೋರೂಪ. ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್ ಸಾಹಿತ್ಯದ ಪ್ರಭಾವವಾಗುವುದಕ್ಕೆ ಮುಂಚಿತವಾಗಿಯೇ ಕನ್ನಡದಲ್ಲಿ ಶತಕ ಗಳು ರಚಿತವಾಗಿವೆ. ಕನ್ನಡಸಾಹಿತ್ಯದಲ್ಲಿ ಪ್ರಗಾಥ ರಚನೆಯಾಗತೊಡಗಿದುದು ತೀರ ಇತ್ತೀಚೆಗೆ. ಲಕ್ಷಣಪ್ರಕಾರ ಪ್ರಗಾಥದಲ್ಲಿ ಐವತ್ತರಿಂದ ಇನ್ನೂರರವರೆಗೆ ಚರಣಗಳಿರು ತ್ತವೆ. ವೃತ್ತ ಹಾಗೂ ಕಂದಗಳಲ್ಲಿ ರಚಿತವಾದ ಶತಕಗಳಲ್ಲಿ ನಾನೂರು ಚರಣಗಳೂ ಷಟ್ಪದಿಗಳಾದರೆ ೬೦೦ ಚರಣಗಳೂ ಇರುತ್ತವೆ. ಆದುದರಿಂದ ಪ್ರಗಾಥವು ಗಾತ್ರದಲ್ಲಿ ಶತಕಕ್ಕಿಂತ ಕಿರಿದು. ಹೆಚ್ಚಿನ ಶತಕಗಳು ಛಂದಸ್ಸಿನಲ್ಲಿ ರಚಿತವಾಗಿರುತ್ತದೆ. ಪ್ರಗಾಥಗಳು ಬದಲಾಯಿಸುವ ಮತ್ತು ಅನಿಯತ ಛಂದಸ್ಸಿನಲ್ಲಿರುತ್ತವೆ : ಮಾತ್ರವಲ್ಲ, ಅನೇಕ ವೇಳೆ ನಾನಾ ಬಗೆಯ ವೃತ್ತಗಳಿಂದ ಕೂಡಿರುತ್ತವೆ.

ರಂ.ಶ್ರೀ ಮುಗಳಿಯವರು ಶತಕಗಳಲ್ಲಿ ಕೆಲವಾದರೂ ಪ್ರಗಾಥಗಳಂತಿರುತ್ತವೆಯೆಂದು ಹೇಳಿರುವುದಕ್ಕೆ ಶತಕ ಹಾಗೂ ಪ್ರಗಾಥ ಎರಡೂ ಸಂಬೋಧನೆಯ ರೂಪದಲ್ಲಿರುವುದು, ಎರಡೂ ಗೇಯತೆಯಿಂದ ಕೂಡಿರುವುದೂ ಎರಡೂ ಗಂಭೀರವಾದ ವಸ್ತು ಹಾಗೂ ಶೈಲಿ ಗಳಿಂದ ಕೂಡಿ ಪ್ರಶಂಸನಾಪರವಾಗಿಯೋ ಧ್ಯಾನಪ್ರಧಾನವಾಗಿಯೋ ಇರುವುದು ಕಾರಣ ವಾಗಿರಬೇಕು. ಪ್ರಗಾಥವು ಸಂಬೋಧನಾ ರೂಪದಲ್ಲಿದ್ದರೂ ಶತಕದಲ್ಲಿರುವಂತೆ ಅಲ್ಲಿ

ಮಕುಟವಿಲ್ಲ ; 'ಗೇಯತೆ' ಎಂಬುದು ಶತಕ ಮತ್ತು ಪ್ರಗಾಥಗಳಿಗೆ ಮಾತ್ರ ಇರುವ ಲಕ್ಷಣವಲ್ಲ. ಇತರ ಕಾವ್ಯಪ್ರಕಾರಗಳಲ್ಲೂ ಗೇಯತೆಯ ಗುಣವಿರುತ್ತದೆ. ಗಂಭೀರವಾದ ವಸ್ತು ಹಾಗೂ ಗಂಭೀರಶೈಲಿ ಎರಡರಲ್ಲೂ ಸಮಾನವಾಗಿದ್ದರೂ ಶತಕವು ಬೋಧಪ್ರದವಾಗಿದ್ದು, ಭಕ್ತಿ, ಜ್ಞಾನ, ವೈರಾಗ್ಯ, ತತ್ತ್ವನೀತಿಗಳನ್ನು ನಿರೂಪಿಸುತ್ತದೆ. ಈ ರೀತಿ ಪ್ರಧಾನಲಕ್ಷಣಗಳಲ್ಲಿ ಹಾಗೂ ಗುಣಗಳಲ್ಲಿ ಶತಕವು ಪ್ರಗಾಥಕ್ಕಿಂತ ಭಿನ್ನವಾದುದು. ಆದುದರಿಂದ ಭಾವಗೀತೆಯ ಒಂದು ಪ್ರಕಾರವಾದ ಪ್ರಗಾಥಕ್ಕೂ ಶತಕಕ್ಕೂ ಸಂಬಂಧವನ್ನು ಕಲ್ಪಿಸುವುದು ಸಮಂಜಸವಲ್ಲ. ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಕೆಲವಂಶಗಳು ಸಮಾನವಾಗಿರುತ್ತವೆಯಾದರೂ, ಅವುಗಳನ್ನು ಒಂದೇ ಎಂದು ಹೇಳುವುದಾಗಲಿ, ಇದು ಅದರಂತಿದೆಯೆಂದು ಬೆರಳಿಟ್ಟು ತೋರಿಸುವುದಾಗಲಿ ಸರಿಯಲ್ಲ.

# ಕನ್ನಡದಲ್ಲಿ ಅಂಶದ್ವಿಪದಿ

ಕೆ. ಜಿ. ನಾರಾಯಣ ಪ್ರಸಾದ್

ಕರ್ಣಾಟಕ ವಿಷಯಜಾತಿ ಮಟ್ಟುಗಳ ಪಟ್ಟಿಯಲ್ಲಿ ನಾಗವರ್ಮನಾಗಲಿ, ಜಯಕೀರ್ತಿಯಾಗಲಿ ಹೆಸರಿಸದಿರುವ ಒಂದು ಅಂಶಬಂಧ ದ್ವಿಪದಿ (ಮುಂದಕ್ಕೆ ಇದನ್ನು 'ಅಂಶದ್ವಿಪದಿ'ಯೆಂದು ಕರೆಯಲಾಗಿದೆ). ಕನ್ನಡ ಭಾಷೆಗೆ ಚೆನ್ನಾಗಿ ಹೊಂದುವ ಈ ಬಂಧವನ್ನು ಅವರು ಏಕೆ ಹೆಸರಿಸಲಿಲ್ಲ ಎಂಬುದು ಪ್ರಶ್ನೆ. ಇಂತಹ ಸಂದರ್ಭಗಳಲ್ಲಿ, ಒಂದೋ, ಆ ಬಂಧವು ಇನ್ನೂ ಶಿಷ್ಟಸಾಹಿತ್ಯ ಕ್ಷೇತ್ರದಲ್ಲಿ ಎಡೆಪಡೆದುಕೊಂಡಿರಲಿಲ್ಲ ಎಂದು ಊಹಿಸಬೇಕಾಗುತ್ತದೆ; ಇಲ್ಲದೆ ಇದ್ದಲ್ಲಿ, ಆ ಬಂಧ ಆ ಕಾಲಕ್ಕೆ ಇನ್ನೂ ಹುಟ್ಟಿಯೇ ಇರಲಿಲ್ಲ ಎಂದು ಊಹಿಸಬೇಕಾಗುತ್ತದೆ. ದ್ವಿಪದಿಯ ಸಂದರ್ಭದಲ್ಲಿ ಹೇಳುವ ಮಾತೆಂದರೆ : ಅದು ತೆಲುಗಿನಿಂದ ಕನ್ನಡಕ್ಕೆ ಬಂದುದು : ಆದರೆ, ಕನ್ನಡದಲ್ಲಿ ಅಷ್ಟರಮಟ್ಟಿನ ಪ್ರಚಾರವನ್ನು ಪಡೆಯಲಿಲ್ಲ ಎಂಬುದು. ಈ ಸಂಬಂಧದಲ್ಲಿ ಈವರೆಗೆ ನಿರೂಪಿತವಾಗಿರುವ ಅಭಿಪ್ರಾಯಗಳನ್ನು ಮೊದಲಿಗೆ ಗಮನಿಸಬಹುದು.

ಈ ದಿಶೆಯಲ್ಲಿ ಮೊದಲು ಗಮನಿಸಬೇಕಾದವರೆಂದರೆ ಬಿಎಂಶ್ರೀಯವರು. ಆದರೆ ಅವರು ಇದರ ಬಗ್ಗೆ ಹೆಚ್ಚೇನೂ ಹೇಳಿಲ್ಲ.[1] ತೆಲುಗಿನಲ್ಲಿ ಇದನ್ನು ದ್ವಿಪದವೆಂದು ಕರೆಯುವರೆಂದು ಹೇಳಿ, ಕನ್ನಡಕ್ಕೆ ಸಂಬಂಧಿಸಿದಂತೆ ಮಾತ್ರಾರಚನೆಯನ್ನೂ ತೆಲುಗಿಗೆ ಸಂಬಂಧಿಸಿದಂತೆ ಅಂಶರಚನೆಯನ್ನೂ ಹೇಳಿದ್ದಾರೆ. ಇದರಿಂದ ಊಹಿಸಬಹುದಾದ ಅಂಶವೆಂದರೆ, 'ಶ್ರೀ'ಯವರ ಪ್ರಕಾರ ದ್ವಿಪದಿಯು ತೆಲುಗಿನಲ್ಲಿ ಅಂಶರಚನೆಯನ್ನು ಹೊಂದಿದ್ದು, ಕನ್ನಡದಲ್ಲಿ ಮಾತ್ರಾರಚನೆಯನ್ನು ಹೊಂದಿದೆ ಎಂಬುದು.'ಕನ್ನಡಕೈಪಿಡಿ'ಯ 'ಕರ್ಣಾಟಕಛಂದಸ್ಸಿ'ನ ಭಾಗವನ್ನು ಬರೆದಿರುವ ಟಿ. ಶ್ರೀನಿವಾಸರಾಘವಾಚಾರ್ಯರಂತೂ ಸ್ಪಷ್ಟವಾಗಿ ಮಾತ್ರಾಬಂಧವಾಗಿಯೇ ಇದನ್ನು ಪರಿಗಣಿಸಿದ್ದಾರೆ;[2] ಜೊತೆಗೆ, ಹಾಡುಗಳಲ್ಲಿ ಇದು ಬಳಕೆಯಾಗುವುದಾಗಿ ಸೂಚಿಸಿದ್ದಾರೆ. 'ಶ್ರೀ'ಯವರಾದರೋ ಯಕ್ಷಗಾನಗಳಲ್ಲಿ ಇದು ಬಳಕೆಯಾಗುವುದನ್ನು ಸೂಚಿಸಿದ್ದಾರೆ.

ಕರ್ಕಿಯವರು ದ್ವಿಪದಿಯನ್ನು ಕನ್ನಡದ ಮಟ್ಟೆಂದು ಪರಿಗಣಿಸಿದಂತಿಲ್ಲ. 'ಗೌರಮ್ಮನ ಮದುವೆ'ಯ ಹಾಡಿನ ಉದಾಹರಣೆಯ ಬಗ್ಗೆ ಹೇಳುವಲ್ಲಿ ಕೂಡ, ಅದನ್ನು ''ಛಂದೋವತಂಸದಿಂದ ರಚಿಸಿಕೊಂಡ ರಗಳೆಯಂತಹ ಮಟ್ಟು'' ಎಂದೇ ಕರೆದಿದ್ದಾರೆ.[3] ಛಂದೋವ

ತಂಸದ ಬಗ್ಗೆ ಹೇಳುವಲ್ಲಿ "ತೆಲುಗಿನ ದ್ವಿಪದದ ಲಕ್ಷಣವನ್ನು ಪರಿಶೀಲಿಸಿದರೆ (ದ್ವಿಪದದ ಇಮ್ಮಡಿ ಚರಣಗಳನ್ನುಳ್ಳ) ಛಂದೋವತಂಸದ ಲಕ್ಷಣವು ವಿವಿವಿಬ್ರ–ಎಂದರೆ ಮೊದಲು ಮೂರು ವಿಷ್ಣುಗಣಗಳು ಕೊನೆಯಲ್ಲಿ ನಾಲ್ಕನೆಯದು ಬ್ರಹ್ಮಗಣ–ಈ ರೀತಿಯಾಗಿಯೇ ಇರಬೇಕೆಂದು ಹೊಳೆಯದಿರದು"[4] ಎಂದಿದ್ದಾರೆ. ಒಟ್ಟಾರೆ, ಅವರ ಊಹೆಯ ಪ್ರಕಾರ ಛಂದೋವತಂಸವು ದ್ವಿಪದಿಯ ದ್ವಿಗುಣೀಕೃತ ರೂಪವಿರಬೇಕು, ಛಂದೋವತಂಸದ ಮಾತ್ರಾರೂಪವೇ ಮಾನೌವಿಚೌಪದವಿರಬೇಕು ಎಂದಾಗುತ್ತದೆ. ಅಂತೂ ದ್ವಿಪದಿ ಕನ್ನಡದಲ್ಲಿ ಹೆಚ್ಚು ಬಳಕೆಯಾಗಲಿಲ್ಲವೆಂದು ಸೂಚಿತವಾಗುತ್ತದೆ.

ತೆಲುಗಿನಲ್ಲಿ "ಇಂದ್ರಗಣಮುಲು ಮೂಡಿನಗಣಂಬೊಕಟಿ" ಎಂಬುದಾಗಿ (=ಇಇಇ–೧ ಬ್ರ) ದ್ವಿಪದದ ಲಕ್ಷಣವನ್ನು ಹೇಳಿದೆ. ವಿಷ್ಣುಗಣಗಳು ಪಂಚಮಾತ್ರಕಗಳಾದ ಯಾವುದೋ ಈಚಿನ ಘಟ್ಟದಲ್ಲಿ ಈ ಛಂದಸ್ಸು ತೆಲುಗಿನಿಂದ ಕನ್ನಡಕ್ಕೆ ಬಂದಿರಬಹುದು,[5] ಎಂದಿದ್ದಾರೆ ಟಿ. ವಿ. ವೆಂಕಟಾಚಲಶಾಸ್ತ್ರಿಯವರು. ಈ ಸಂಬಂಧದಲ್ಲಿ ದ್ವಿಪದಿಗೆ ಅವರು ಕೊಡುವ ಉದಾಹರಣೆಗಳು ಮಾತ್ರಾರಚನೆಯನ್ನೇ ಹೊಂದಿವೆ. ಆದ್ದರಿಂದ ಕನ್ನಡದಲ್ಲಿ ಅಂಶದ್ವಿಪದಿ ಬಳಕೆಯಲ್ಲಿಲ್ಲವೆಂಬುದು ಇದರಿಂದ ಸೂಚಿತವಾಗುತ್ತದೆ.

ಎಂ. ಪಿ. ಮಂಜಪ್ಪಶೆಟ್ಟಿಯವರ ಅಭಿಪ್ರಾಯಗಳನ್ನು ಗಮನಿಸಿದಾಗ, ಅಂಶದ್ವಿಪದಿ ಕನ್ನಡದಲ್ಲಿ (ಅಷ್ಟಾಗಿ) ಬಳಕೆಯಲ್ಲಿಲ್ಲವೆಂದೇ ಅವರು ಕೂಡ ಭಾವಿಸಿರುವಂತೆ ಕಾಣುತ್ತದೆ. "ಆ ಅಂಶಗಣಬಂಧ ಇಲ್ಲಿ ಹೆಚ್ಚು ಪ್ರಚಲಿತವಾಗಲಿಲ್ಲ ಎಂದು ತೋರುತ್ತದೆ. ತ್ರಿಪದಿ, ಷಟ್ಪದಿ, ಛಂದೋವತಂಸ ಮುಂತಾದ ಬಂಧಗಳಂತೆ ಕಾಲಾನುಕ್ರಮದಲ್ಲಿ ಇದೂ ಮಾತ್ರಾಗಣಕ್ಕೆ ತಿರುಗಿರಬೇಕು"[6] ಎಂದು ಹೇಳಿ, ಶಾಸ್ತ್ರಿಗಳು ಹೇಳಿರುವ ವಿಚಾರಗಳನ್ನು ಅನುಸರಿಸಿ, ಇದು ತೆಲುಗಿನಿಂದ ಬಂತೆಂದು ಊಹಿಸುತ್ತಾರೆ. ಅಂತೆಯೇ, "ಕನ್ನಡದಲ್ಲಿ ದ್ವಿಪದಿಯ ಚರಿತ್ರೆ ಎಂದಿನಿಂದ ಪ್ರಾರಂಭವಾಗುತ್ತದೆಂದು ಖಚಿತವಾಗಿ ಹೇಳುವಂತಿಲ್ಲ"[7] ಎಂದು ಹೇಳಿ, ದಾಸರ ಪದಗಳಿಂದ ಅವುಗಳ ಆರಂಭವನ್ನು ಗುರುತಿಸಲು ಪ್ರಯತ್ನ ಪಟ್ಟಿದ್ದಾರೆ ; ಸು. ೧೭೫೦ರ ಚೆನ್ನಪ್ಪನ 'ಶರಣಲೀಲಾಮೃತ'ವೇ ದ್ವಿಪದಿಗಳನ್ನು ಒಳಗೊಂಡ ಮೊದಲ ಕಾವ್ಯಕೃತಿ ಎನ್ನುತ್ತಾರೆ.[8] ಏನೇ ಆದರೂ ಅವರ ಅಭಿಪ್ರಾಯದಲ್ಲಿ, ಕನ್ನಡದಲಿ ಮಾತ್ರಾದ್ವಿಪದಿಯಷ್ಟೇ ಬಳಕೆಯಾಗಿದೆ, ಜನಪದಗೀತೆಗಳಲ್ಲಿ ಮಾತ್ರ ಅಲ್ಲಲ್ಲಿ ಅಂಶಲಯವನ್ನು ಗುರುತಿಸುವ ಸಾಧ್ಯತೆಯಿದೆ—ಎಂಬುದು ಸೂಚಿತವಾಗುತ್ತದೆ. ದ್ವಿಪದಿಯ ಬಳಕೆಯನ್ನು ಕುರಿತಂತೆ ಅವರು ದೊಡ್ಡಪಟ್ಟಿಯೊಂದನ್ನು ಕೊಟ್ಟಿದ್ದಾರೆ. ಅಲ್ಲಿ ದ್ವಿಪದಿಯೆಂದರೆ, ಮಾತ್ರಾದ್ವಿಪದಿ ಎಂದೇ ಭಾವಿಸಿದ್ದಾರೆಂಬುದನ್ನು ಮರೆಯಬಾರದು.

ಸೀತಾರಾಮ ಕೆದಿಲಾಯರು ಯಕ್ಷಗಾನ ಛಂದಸ್ಸನ್ನು ಕುರಿತು ಬರೆಯುತ್ತಾ "ಯಕ್ಷಗಾನ ಕೃತಿಗಳಲ್ಲಿ ದ್ವಿಪದಿ ಹೇರಳವಾಗಿ ಗೋಚರಿಸುತ್ತದೆ"[9] ಎಂದಿದ್ದಾರೆ. ಆದರೆ ಕೊಟ್ಟಿರುವ ಉದಾಹರಣೆಗಳನ್ನು ಗಮನಿಸಿದಾಗ, ಅವರು ಕೂಡ ಮಾತ್ರಾದ್ವಿಪದಿಯ ಬಗ್ಗೆಯೇ ಹೇಳುತ್ತಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಅವರೇ ಮತ್ತೊಂದೆಡೆ[10] ಕೊಡುವ ಉದಾ

ಬಳಕೆಯಾಗಿದೆಯೆಂಬುದಕ್ಕೆ ಪರಣೆ ಮಾತ್ರ, ವಿರಳವಾಗಿಯಾದರೂ ಅಂಶದ್ವಿಪದಿ ಸಾಕ್ಷಿಯಾಗಿದೆ.

''ಕನ್ನಡದಲ್ಲಿ ಅಲ್ಲಲ್ಲಿ ದ್ವಿಪದಿಯು ಕಾಣಿಸಿಕೊಂಡರೂ ಅದರಲ್ಲಿ ಬಹುಪಾಲು ಮಾತ್ರಾ ಛಂದಸ್ಸನ್ನು ಕಾಣಬಹುದು''[11] ಎಂಬುದಾಗಿ ಪಿ. ವಿ. ನಾರಾಯಣ ಅವರು ಹೇಳಿದ್ದಾರೆ ; ಜೊತೆಗೆ ಒಂದು ಹೊಸ ಊಹೆಯನ್ನು ಕೂಡ ಮುಂದಿಟ್ಟಿದ್ದಾರೆ : 'ನಂದಿಛಂದೋರ್ಣವ' ದಲ್ಲಿ ಉಕ್ತವಾಗಿರುವ ಅಂಶದ್ವಿಪದಿಯ ಲಕ್ಷಣದ ಬಗ್ಗೆ ಹೇಳುತ್ತಾ, ''ಈ ವಿವರಣೆಯ ಪ್ರಕಾರ, ಪ್ರತಿಪಾದದಲ್ಲಿ ಮೂರು ಇಂದ್ರಗಣಗಳೂ (ವಿಷ್ಣುಗಣ) ಒಂದು ಸೂರ್ಯಗಣ (ಬ್ರಹ್ಮಗಣ)ವೂ ಬರುತ್ತದೆ ; ಎರಡನೆಯ ಗಣಾಂತ್ಯದಲ್ಲಿ ಯತಿಯಿರುತ್ತದೆ. ಕೊನೆಯ ಬ್ರಹ್ಮಗಣವೂ (ಮುಂದೆ ಸಹಜಯತಿಯಿರುವುದರಿಂದಾಗಿ) ಎಳೆಯಲ್ಪಟ್ಟು ಉಚ್ಚಾರ ಕಾಲದ ದೃಷ್ಟಿಯಿಂದ ವಿಷ್ಣುಗಣದ ಹರಹನ್ನೇ ಪಡೆಯುತ್ತದೆ. ಇದು ರಗಳೆಯ ಓಟ ವನ್ನೇ ಹೋಲುವಂಥದು. ಕನ್ನಡದ ರಗಳೆಗೆ ಈ ಅಂಶದ್ವಿಪದವೇ ಮೂಲವಾಗಿರ ಬಹುದೇ ? ಏಕೆಂದರೆ ಅಂಶಗಣಘಟಿತವಾದ ಒಂದೇ ಬಗೆಯ ಷಟ್ಪದಿಯು ಮುಂದೆ ನಾನಾಬಗೆಯ ಮಾತ್ರಾಷಟ್ಪದಿಗಳಿಗೆ ದಾರಿಮಾಡಿಕೊಟ್ಟಿತು. ಇದಕ್ಕೆ ಕಾರಣ ವಿಷ್ಣು ಗಣವು ನಾಲ್ಕರಿಂದ ಆರು ಮಾತ್ರೆಗಳ ವ್ಯಾಪ್ತಿಯನ್ನು ಪಡೆಯುವುದು. ಹಾಗೆಯೇ ವಿಷ್ಣುಗಣಗಳಿಂದಲೇ ಪ್ರಮುಖವಾಗಿ ಕೂಡಿರುವ ಅಂಶದ್ವಿಪದವು ಮಾತ್ರಾರೂಪಕ್ಕೆ ತಿರುಗಿದಾಗ ನಾಲ್ಕು ಮಾತ್ರೆಗಳ (ಮಂದಾನಿಲ) ಐದು ಮಾತ್ರೆಗಳ (ಲಲಿತ) ಹಾಗೂ ಆರು ಮಾತ್ರೆಗಳ ಅಥವಾ ಮೂರು ಮಾತ್ರೆಗಳ ಎರಡು ಘಟಕಗಳನ್ನುಳ್ಳ (ಉತ್ಸಾಹ) ರಗಳೆಗೆ ಅವಕಾಶ ಮಾಡಿಕೊಟ್ಟಿರಬಹುದು. ಈ ಬಗ್ಗೆ ವಿದ್ವಾಂಸರಿಂದ ಇನ್ನೂ ನಿಖರ ವಾಗಿ ಸಂಶೋಧನೆ ನಡೆಯಬೇಕಾಗಿದೆ''[12] ಎಂದಿದ್ದಾರೆ.

ಈ ಹೊಸ ಸಮಸ್ಯೆ ಹೇಗೇ ಇರಲಿ, ಇಲ್ಲಿ ಸೂಚಿತವಾಗುವ–ನಮಗೆ ಬೇಕಾದ–ಅಂಶ ವೆಂದರೆ, ಅಂಶದ್ವಿಪದಿಯು ರಗಳೆಗಳಿಗಿಂತ ಪ್ರಾಚೀನವಾದುದು ಮತ್ತು ಕನ್ನಡದಲ್ಲಿ ಬಹು ಹಿಂದೆ ಅದು ಇದ್ದಿರಬಹುದು ಎಂಬುದು.

ಈವರೆಗಿನ ಅಭಿಪ್ರಾಯಗಳನ್ನೆಲ್ಲ ಪರಿಶೀಲಿಸಿದಾಗ ತಿಳಿದುಬರುವ ಅಂಶಗಳೆಂದರೆ :

೧. ಹೆಚ್ಚಿನವರ ಮತದಂತೆ, ಕನ್ನಡದಲ್ಲಿ ಅಂಶದ್ವಿಪದಿಯು ಬಳಕೆಯಲ್ಲಿಲ್ಲ. ಅದು ತೆಲುಗಿನಿಂದ ಕನ್ನಡಕ್ಕೆ ಬಂತು ; ಆದರೆ ಹಾಗೆ ಬರುವಾಗ ಮಾತ್ರಾರೂಪವನ್ನು ತಾಳಿ ಬಂತು.

೨. ಕನ್ನಡದಲ್ಲಿ ಹೆಚ್ಚು ಪ್ರಚಲಿತವಿರುವುದು ಮಾತ್ರಾದ್ವಿಪದಿ ಮಾತ್ರ ; ಅದು ಕೂಡ ಬಹಳ ಇತ್ತೀಚೆಗಷ್ಟೇ ಬಳಕೆಗೆ ಬಂದಿದೆ.

೩. ಇನ್ನು ಕೆಲವರ ಮತದಂತೆ, ಕನ್ನಡದಲ್ಲಿ ಅಂಶದ್ವಿಪದಿಯಿದ್ದಿರಬಹುದು : ಆದರೆ ಅದು ಬಹುಬೇಗ ಮಾತ್ರಾಬಂಧವಾಗಿರಬೇಕು.

ಈ ಹಿನ್ನೆಲೆಯಲ್ಲಿ ಎದುರಾಗುವ ಪ್ರಶ್ನೆಗಳೆಂದರೆ ಇವು :

೧. ಕನ್ನಡದಲ್ಲಿ ಅಂಶದ್ವಿಪದಿ ಬಳಕೆಯಲ್ಲಿತ್ತೇ ಇಲ್ಲವೆ ?
೨. ಇದ್ದರೆ, ಅದರ ಪ್ರಾಚೀನತೆಯನ್ನು ಎಷ್ಟು ಹಿಂದಕ್ಕೆ ಕೊಂಡೊಯ್ಯಬಹುದು ?
೩. ಅದರ ಬಳಕೆಯ ಇತಿಹಾಸವನ್ನು ಕುರಿತು ಏನಾದರೂ ಹೊಸವಿಚಾರಗಳನ್ನು ಹೇಳಬಹುದೆ ?

ಈ ಪ್ರಶ್ನೆಗಳಿಗೆ ಉತ್ತರಿಸುವುದು ಪ್ರಕೃತಲೇಖನದ ಉದ್ದೇಶ.

**ದ್ವಿಪದಿಯ ಲಕ್ಷಣ :** ಕನ್ನಡದಲ್ಲಿ ದ್ವಿಪದಿಯ ಲಕ್ಷಣನಿರೂಪಣೆಯು ಮೊದಲು ಬಾರಿಗೆ ಕಂಡುಬರುವುದು ೧೯ನೆಯ ಶತಮಾನದ 'ನಂದಿಛಂದೋರ್ಣವ'ದಲ್ಲೇ. ಈ ಸಂಬಂಧದ ಅಲ್ಲಿಯ ಪದ್ಯ ಹೀಗಿದೆ :

ದೇವೇಂದ್ರ. ಗಣ ಮೂರು. ದಿನಕರ. ನೊಂದು.
ಭಾವಿಸು. ದ್ವಿಗಣಾಂತ್ಯ. ಭವ್ಯವಿ. ಶ್ರಾಂತಿ
ಚಪಲಾಕ್ಷಿ. ಪೂರ್ವದಾ. ಚಾರ್ಯರ. ಮತದಿ.
ದ್ವಿಪದಲ. ಕ್ಷಣವೆಂದು. ತಿಳಿಯ ನೀ. ನಿಂದು. (೩–೨೨)

ತೆಲುಗಿನ ದಟ್ಟ ಪ್ರಭಾವ ಇಲ್ಲಿ ಸ್ಪಷ್ಟವಾಗಿದೆ. ಲಕ್ಷಣವಿವರಣೆ ಮಾತ್ರವೇ ಅಲ್ಲದೆ ಗಣಗಳ ಹೆಸರು ಕೂಡ ತೆಲುಗಿನದೇ ಆಗಿದೆ. ಮಿಗಿಲಾಗಿ ಇದು ಇತ್ತೀಚಿನ ಕೃತಿ. ಇದು ಹೇಗೇ ಇರಲಿ, ಇಲ್ಲಿ ವ್ಯಕ್ತವಾಗುವ ವಿಚಾರವೆಂದರೆ, ಪ್ರತಿ ಪಾದದಲ್ಲಿಯೂ ಮೂರು ಇಂದ್ರ (ವಿಷ್ಣು) ಗಣಗಳು ಮತ್ತು ಒಂದು ಸೂರ್ಯ (ಬ್ರಹ್ಮ) ಗಣ ಬರಬೇಕು ; ಎರಡೆರಡು ಗಣಕ್ಕೆ ಯತಿ ಬರಬೇಕು (ವಡಿಯ ಪಾಲನೆಯೂ ಇದೆ) : ಇದು 'ದ್ವಿಪದ'ದ ಲಕ್ಷಣ. ಇದರ ಮತ್ತು ತೆಲುಗಿನ ಛಂದೋಗ್ರಂಥಗಳ ವಿವರಣೆಯ ಆಧಾರದ ಮೇಲೆ, ಕನ್ನಡದಲ್ಲಿ ಬಳಕೆಯಾಗಿರುವ ಗಣಗಳನ್ನು ಬಳಸಿಕೊಂಡು, ಕನ್ನಡಕ್ಕೆ ಹೊಂದುವಂತೆ, ದ್ವಿಪದಿಯ ಲಕ್ಷಣವನ್ನು ಹೀಗೆ ಸೂತ್ರೀಕರಿಸಬಹುದು :

ವಿ. ವಿ. ವಿ. ಬ್ರ.
ವಿ. ವಿ. ವಿ. ಬ್ರ.

ಪ್ರತಿ ನುಡಿಯಲ್ಲೂ ಆದಿಪ್ರಾಸ ಅಂತ್ಯಪ್ರಾಸಗಳಿರುತ್ತವೆ (ರಗಳೆಯಲ್ಲಿಯಂತೆ) ಎಂದು ಹೇಳಬಹುದು. ಇದು ಅಂಶದ್ವಿಪದಿಯ ಲಕ್ಷಣ. ಇದೇ ಮಾತ್ರಾಛಂದಸ್ಸಿಗೆ ತಿರುಗಿದಾಗ,

ಪ. ಪ. ಪ. ಪ.
ಪ. ಪ. ಪ. ಪ.

ಎಂದಾಗುತ್ತದೆ. ಪ್ರಕೃತದಲ್ಲಿ ಒಪ್ಪಿರುವ ಲಕ್ಷಣವನ್ನು ಪರಿಗಣಿಸಿದಲ್ಲಿ ಛಂದೋವತಂಸವು ಈ ಅಂಶದ್ವಿಪದಿಯ ದ್ವಿಗುಣಿತರೂಪವಾಗುತ್ತದೆ : ಅಂತೆಯೇ ಮಾನಸೌಖ್ಯಪದ ಮಾತ್ರಾದ್ವಿಪದಿಯ ದ್ವಿಗುಣಿತರೂಪವಾಗುತ್ತದೆ.

**ಅಂಶದ್ವಿಪದಿಯ ಬಳಕೆ :** ಎಲ್ಲರೂ ಒಪ್ಪಿರುವಂತೆ ಅಂಶದ್ವಿಪದಿಯು 'ದ್ವಿಪದ' ವೆಂಬ ಹೆಸರಿನಿಂದ ತೆಲುಗಿನಲ್ಲಿ ಬಹುಪ್ರಸಿದ್ಧವಾಗಿದೆ. ಅದರ ಬಳಕೆಯ ಇತಿಹಾಸದಲ್ಲಿ ೧೩ನೆಯ ಶತಮಾನದ ಪಾಲ್ಕುರಿಕೆ ಸೋಮನಾಥನಿಗೆ ಪ್ರಥಮಾಚಾರ್ಯಪ್ರಶಸ್ತಿ ದೊರೆತಿದೆ. ಇದರ ಜೊತೆಗೆ ಕನ್ನಡ, ಮರಾಠಿ, ತಮಿಳು ಹಾಗೂ ಸಂಸ್ಕೃತ ಭಾಷೆಗಳಿಗೆ ಸಂಬಂಧಿಸಿ ದಂತೆ ಕೂಡ ಇಂತಹದೇ ಪ್ರಶಸ್ತಿ ಅವನಿಗೆ ಸಲ್ಲುತ್ತದೆ. ಏಕೆಂದರೆ ಈ ಭಾಷೆಗಳಲ್ಲಿ ಕೂಡ ಅಂಶದ್ವಿಪದಿಯನ್ನು ಬಳಸಿದ ಪ್ರಥಮ ಪ್ರಾಚೀನಕವಿ, ಸದ್ಯದ ಮಟ್ಟಿಗೆ ಆತನೇ ಆಗಿದ್ದಾನೆ. (ಕನ್ನಡದಲ್ಲಿ ಇದಕ್ಕಿಂತ ಹಿಂದಿನ ಉದಾಹರಣೆಗಳನ್ನು ಗುರುತಿಸಲು ಈ ಮುಂದೆ ಪ್ರಯತ್ನಿಸಲಾಗಿದೆ.) ಅವನ 'ಪಂಡಿತಾರಾಧ್ಯಚರಿತಮು' ಕೃತಿಯ 'ಪರ್ವತಪ್ರಕರಣಮು' ಎಂಬ ಪ್ರಕರಣದಲ್ಲಿ ಈ ನಾಲ್ಕು ಭಾಷೆಗಳ ಜನರ ಪರುಷೆಗಳು ತಮ್ಮ ತಮ್ಮ ಭಾಷೆಗಳಲ್ಲಿ ಮಾತಾಡುತ್ತ ಗುಂಪುಗುಂಪಾಗಿ ಹೇಗೆ ಶ್ರೀಶೈಲಕ್ಕೆ ಬರುತ್ತಿದ್ದರೆಂಬುದನ್ನು ಆಯಾ ಭಾಷೆಯಲ್ಲಿಯೇ ದ್ವಿಪದಿಛಂದಸ್ಸಿನಲ್ಲಿ ನಿರೂಪಿಸಲಾಗಿದೆ. ಕನ್ನಡ ಭಾಗವನ್ನು ಪೂರ್ಣವಾಗಿ ಅನುಬಂಧವಾಗಿ ಮುಂದೆ ನೀಡಲಿರುವುದರಿಂದ ಪ್ರಕೃತದಲ್ಲಿ ಒಂದೆರಡು ನುಡಿಗಳನ್ನಷ್ಟೇ ಗಮನಿಸಬಹುದು : ಹಾಗೆಯೇ ಇತರ ಭಾಷೆಗಳ ಒಂದೆರಡು ಮಾದರಿಗಳನ್ನು ಕೂಡ.

**ಕನ್ನಡ :** ಶಿವರಾತ್ರಿ. ಬಸವಯ್ಯ. ಚಿತ್ತಯಿ. ಸಯ್ಯ.
ವಿರುಪಾಕ್ಷ. ದೇವಯ್ಯ. ಕರುಣಿಸು. ಬೇಗ.
ಪುರವಣಿ. ಸಂಗಯ್ಯ. ಹರಿದು ಬಾ. ರಯ್ಯ.
ಮಹಲಿಂಗ. ದೇವಯ್ಯ. ಮಂದಿ ಬೇ. ಡಯ್ಯ.
ಸಹಸುಖಿ. ದೇವಯ್ಯ. ಸರಸರ. ಬನ್ನಿ.[13]

**ಮರಾಠಿ :** ಮಾಗ ರ. ಹೋ ನಕೋ. ಮರಝ ಬಾಪ. ಮ್ಹಣತ.
ಭಾಗವ. ತೇ ವಟೇ. ಭಕ್ತ ತೇ. ಮ್ಹಣತ.[14]

**ತಮಿಳು :** ಅಂಗಮಾ. ಱುಂದಾನೆ. ಯಾಯಿರುಂ. ದವನೆ.
ಮಂಗೈಯರ್. ಪಾಂಗನೆ. ಮಲ್ಲಿಕಾ. ರ್ಜುನನೆ.[15]

**ಸಂಸ್ಕೃತ :** ಶ್ರಾಂತಾಸಿ. ಕಿಂ ಸಖಿ. ಶೈಲತ. ಲೇಷು.
ಶ್ರಾಂತಿರ್ಗ. ತಾ ಪುರ. ಸಂವೀಕ್ಷ. ಣೇನ.[16]

ಇಲ್ಲೆಲ್ಲ ಪಂಚಮಾತ್ರಾಗಣಗಳ ಆಧಿಕ್ಯವಿದ್ದರೂ ಚತುರ್ಮಾತ್ರಾಗಣಗಳ ಹೊಂದಿಕೆಯು ಒಟ್ಟಾರೆಯಾಗಿ ವಿಷ್ಣು (ಇಂದ್ರ) ಗಣರಚನೆಯನ್ನೇ ದೃಢಪಡಿಸುತ್ತದೆ. ಆದಿಪ್ರಾಸ ಅಂತ್ಯಪ್ರಾಸಗಳ ಬಳಕೆ ಮಾತ್ರ ನಿಯತವಾಗಿಯೇನೂ ಇಲ್ಲವೆಂಬುದು ಗಮನಾರ್ಹ.

ಈ ಭಾಗವನ್ನು ಒಟ್ಟಾರೆಯಾಗಿ ಗಮನಿಸಿದಾಗ ಕವಿಯು ಕನ್ನಡಕ್ಕೆ ಹೆಚ್ಚಿನ ಪ್ರಾಶಸ್ತ್ಯವಿತ್ತಿರುವುದು ಸ್ಪಷ್ಟವಾಗುತ್ತದೆ. ಏಕೆಂದರೆ, ಸಂಸ್ಕೃತ ಭಾಗದಲ್ಲಿ ೩೨ ಪಾದಗಳೂ ತಮಿಳು ಭಾಗದಲ್ಲಿ ೧೬ ಪಾದಗಳೂ ಮರಾಠೀ ಭಾಗದಲ್ಲಿ ೨೨ ಪಾದಗಳೂ ಬಂದಿದ್ದರೆ. ಕನ್ನಡದ ಭಾಗದಲ್ಲಿ ೮೩ ಪಾದಗಳಿವೆ. ಇದು ಹೇಗೇ ಇರಲಿ. ಅನಂತರದ ಕಾಲದಲ್ಲಿ ದ್ವಿಪದಿಯ

ಬಳಕೆಯು ಕನ್ನಡ ಮತ್ತು ಮರಾಠಿಗಳಲ್ಲಿ ಮಾತ್ರ ಮುಂದುವರಿಯಿತೆಂಬುದೂ ತಮಿಳು ಸಂಸ್ಕೃತಗಳಲ್ಲಿ ಕೈಬಿಟ್ಟು ಹೋಯಿತೆಂಬುದೂ ಗಮನಾರ್ಹ. ತೆಲುಗಿನ ಅಪಾರ ಪ್ರಭಾವಕ್ಕೆ ಒಳಗಾದ ತಂಜಾವೂರು ಮರಾಠೀ ಯಕ್ಷಗಾನಗಳಲ್ಲಿ ದ್ವಿಪದಿಗಳ ಬಳಕೆ ಸಾಕಷ್ಟು ಕಂಡು ಬರುತ್ತದೆ; ಆದರೆ ಇತರತ್ರ ಮರಾಠಿಯಲ್ಲಿ ಅದರ ಬಳಕೆಯು ಕಂಡುಬರುವುದಿಲ್ಲ.

ಹೀಗೆ ಪಾಲ್ಕುರಿಕೆ ಸೋಮನಾಥನ ಈ ರಚನೆಯು ಕನ್ನಡದ ಅಂಶದ್ವಿಪದಿಯ ಪ್ರಾಚೀನ ಉದಾಹರಣೆಯೆಂಬುದು ಸ್ಪಷ್ಟವಾಗಿದೆ. ಆ ವೇಳೆಗೆ ತೆಲುಗಿನಲ್ಲಿ ಅದು ಪ್ರಸಿದ್ಧವಾಗಿತ್ತು; ಆದರೆ ಕನ್ನಡದಲ್ಲಿ ಅಷ್ಟಾಗಿರಲಿಲ್ಲವೆಂಬುದನ್ನೂ ಮರೆಯಬಾರದು.

ಕನ್ನಡ ಕೊರವಂಜಿ ಸಾಹಿತ್ಯವನ್ನು ಪರಿಶೀಲಿಸಿದಾಗ ಈ ಪ್ರಾಚೀನತೆಯ ಗಡಿಯನ್ನು ಮತ್ತಷ್ಟು ಹಿಂದಕ್ಕೆ ಕೊಂಡೊಯ್ಯಲು ಅವಕಾಶವಿದೆ. ಜಚನಿಯವರು ಪ್ರಕಟಿಸಿರುವ 'ಕೊರವಂಜಿ ಸಾಹಿತ್ಯ'[17] ಎಂಬ ಕೃತಿಯಲ್ಲಿ ಅಕ್ಕಮಹಾದೇವಿಯದೆಂದು ಹೇಳಲಾದ ಒಂದು ರಚನೆಯಿದೆ. ಇದೇ ಕೃತಿಯು ಎಲ್. ಬಸವರಾಜು ಅವರ 'ಅಕ್ಕನ ವಚನಗಳು'[18] ಮತ್ತು ವೀರಣ್ಣ ರಾಜೂರ ಅವರು ಸಂಪಾದಿಸಿರುವ 'ಶಿವಯೋಗಪ್ರದೀಪಿಕೆ'[19] ಇವುಗಳಲ್ಲೂ ಉಕ್ತವಾಗಿದೆ. ಅಲ್ಪಸ್ವಲ್ಪ ಪಾಠಭೇದಗಳನ್ನು ಬಿಟ್ಟರೆ ಉಳಿದಂತೆ ಮೂರೂ ಒಂದೇ ರೀತಿ ಇವೆ. ಈ ಕೃತಿಯಲ್ಲಿ ನಡುನಡುವೆ ಅಂಶದ್ವಿಪದಿಯು ಬಳಕೆಯಾಗಿದೆ. ಜಚನಿಯವರ ಪಾಠಕ್ಕನುಗುಣವಾಗಿ ಈ ಉದಾಹರಣೆಗಳನ್ನು ಗಮನಿಸಬಹುದು :

ಬಿಡದೇಳು. ಮಂದಿಯು. ಬಯ್ಗಳು. ಘನವೆ.
ಪಿಡಿದಾರೆ. ನಾಲ್ವರು. ಹೆದರದಿ. ರಮ್ಮ.
ಪೊಡವೀಶ. ನಡಿಯು ನೀ. ಬಿಡದೆ ಪಿಡಿ.ಯುಮ್ಮ.

ಹೇಸಿದ್ಯೆ. ವವ ಬಿಡು. ಪಿಡಿಯೀಶ. ನಡಿಯು.
ಸೂಸದ. ಮನವ ಮಿಾ. ಸಲ ಪಿಡಿ. ಯುಮ್ಮ.

ಕುಂಭಿನಿ. ದೈವವ. ಪಿಡಿದು ನೀ. ಕೆಟ್ಟೆ.
ಶಂಭುಲಿಂ. ಗನ ಕೈಯ. ಬಿಟ್ಟು ನೀ. ಭ್ರಷ್ಟೆ.

ಇದು ನಿಜವಾಗಿಯೂ ಅಕ್ಕಮಹಾದೇವಿಯ ರಚನೆಯೇ ಆಗಿದ್ದಲ್ಲಿ, ಕನ್ನಡ ಅಂಶ ದ್ವಿಪದಿಯ ಅತ್ಯಂತಪ್ರಾಚೀನ ಉದಾಹರಣೆಯಾಗುತ್ತದೆ.ಜೊತೆಗೆ ತೆಲುಗಿನಲ್ಲಿಯಂತೆಯೇ ಕನ್ನಡದಲ್ಲಿ ಕೂಡ ವೀರಶೈವರೇ ಇದನ್ನು ಗ್ರಾಂಥಿಕ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಗೊಳಿಸಿದರೆಂದು ಹೇಳಬೇಕಾಗುತ್ತದೆ. ಹೀಗಾಗಿ ಅಂಶದ್ವಿಪದಿಯ ಇತಿಹಾಸವು ಕನ್ನಡದಲ್ಲಿ ಕ್ರಿ.ಶ. ೧೨ನೆಯ ಶತಮಾನದಿಂದ ಪ್ರಾರಂಭವಾಯಿತೆಂದು ಹೇಳಬಹುದಾಗಿದೆ. ತೆಲುಗಿನಲ್ಲಿ ಅದು ಪ್ರಸಿದ್ಧಿಗೆ ಬಂದದ್ದು ಅನಂತರದ ಕಾಲದಲ್ಲಿ. ಕನ್ನಡ ಜನಪದ ಸಾಹಿತ್ಯದಲ್ಲಿ ಆ ವೇಳೆಗಾಗಲೇ ಅದು ನೆಲೆನಿಂತಿತ್ತೆಂದು ಊಹಿಸಬಹುದು. ಕಾಲ ಗೊತ್ತಿಲ್ಲದ ಹಲವು ಜನಪದ ಗೀತಗಳಲ್ಲಿ ದ್ವಿಪದಿಯು ಬಳಕೆಯಾಗಿದೆ. ಉದಾಹರಣೆಗೆ,

ಕಲ್ಲ ಸ್ಥ, ರೂಪಿನ, ಕಪಟ ಪಾ. ಲಾಂಕೆ ದಿದಿದಿಬ್ಬ
ಬಿಲ್ಲನ. ಕ್ರಿಯ ಸೊಪ್ಪ, ಮುಡಿದಿಕ. ಸಂಕೆ ,,
ಎಲ್ಲ ಚಾ. ತಿಗಳಿಲಿಂ. ಬಂಧುತ್ವ, ಮಂಕೆ ,,
ಇಲ್ಲಿಗೆ. ಕೈಲಾಸ. ಪುರ ದೂರ. ಮಂಕೆ. ,,
ಅಲ್ಲಿಗೆ. ನಿನ್ನನು. ಕೊಡಲಾರೆ. ದೇವಿ. ,,
ನೀರೆ ನಿ. ನ್ನನು ಕೊಡ. ಲಾರೆನೆ. ನಾನು. ,,

(ಕೊಡಲಾರನೆ ಕೋಮಲೆ ನಿನ್ನ)[20]

ಮುತ್ತಿನ. ಭಿಕ್ಷವ. ನೀಡಲು ಸ್ವಾಮಿ.
ಮುತ್ತು. ನ. ನ್ನರಮನೆ. ಮುಕ್ಕು ಜಾ. ಳವು.
ನವರತ್ನ. ಭಿಕ್ಷವ. ನೀಡಲು. ಸ್ವಾಮಿ.
ನವರತ್ನ. ನನ ಮನೆ. ರಾಗಿಯ. ಕಾಳು.
ದನ ಕೊ. ಟ್ಟರು ಸ್ವಾಮಿ. ಒಲ್ಲೆನೆಂ. ದೀಯ.

(ಗೌರಮ್ಮನ ಮದುವೆ)[21]

ಮಲ್ಲಣ್ಣ. ಬೆಳೆದನು. ಮಲ್ಲಿಗೆ. ಹೂವ.
ಈರಣ್ಣ. ಬೆಳೆದನು. ನೀಜಾರ್ಜಿ. ಹೂವ.
ಶಿವರಾಯ. ಬೆಳೆದನು. ಸಂಪಿಗೆ. ಹೂವ.

(ಗಂಗೆ–ಗೌರಿ ಜಗಳ)[22]

ಬಾಗುತಾ. ಬಳಕುತ. ಬಂದಳೆ. ಕೊರಮಿ
ಯಾ ವದೇ. ಸಾದಿಂದ. ಹುಟ್ಟಳೆ. ಕೊರಮಿ
ಯಾ ವದೇ. ಸಾದಿಂದ. ಬೆಳೆದಳೆ. ಕೊರಮಿ
ಮೂಡಲಾ. ದೇಸದಲ್ಲಿ. ಹುಟ್ಟಳೆ. ಕೊರಮಿ
ಕಟ್ಟೆ ಯಾ. ಹಿಂದಕೆ. ಹೋದಳೆ. ಕೊರಮಿ
ಬೆಟ್ಟುದ್ದ. ನದಿಗಳ. ಜಡಿದಳೇ. ಕೊರಮಿ

(ಹಗರೆಯ ಕೋಲಾಟ)[23]

ಇದೇ ರೀತಿ ಕೊಡವ ಭಾಷೆಯ ಜನಪದ ಸಾಹಿತ್ಯದಲ್ಲಿ ಕೂಡ ಇದನ್ನು ಕಾಣುತ್ತೇವೆ. ಉದಾಹರಣೆಗೆ :

ಬಾಯಕ್ಕ. ಪೋಲೆ ಬ. ವುಂಡಾಡೋ. ದೇವಿ
ಕೋಯಕ್ಕ. ಪೋಲೆ ಕೊ. ಣಂಜಾಡೋ. ದೇವಿ[24]

ನಾ ಪೋಪಿ. ನಾ ಪೋಪಿ. ಪೆತ್ತವ್ವ. ತಾಯೋ
ಬೆನ್ನಟ್. ಪೋಪಕ್. ಬಯ್ಯತಿ. ತಾಯೋ[25]

ಆದರೆ ಇವೆಲ್ಲ ಎಷ್ಟು ಪ್ರಾಚೀನವೆಂದು ನಿರ್ಧರಿಸುವುದು ಕಷ್ಟ.

ಹದಿನೇಳನೆಯ ಶತಮಾನದ ಮಹೀಪತಿದಾಸರ ಕೃತಿಗಳಲ್ಲಿ ಅಂಶದ್ವಿಪದಿಗಳು ಬಳಕೆಯಾಗಿವೆ. (ಕೀ. ೧೪೬, ಕೀ. ೩೧೭ ಮತ್ತು ಕೀ. ೭೪೦ ನೋಡಿ)[26] ಉದಾಹರಣೆಗೆ,

ಅಮಿತಪ. ರಾಕ್ರಮ. ಅಗಣಿತ. ಮಹಿಮ
ಅಮರಜ. ನೇತ್ರ ನೀ. ನಹುದೊ ನಿ. ಸ್ಸೀಮ. (ಕೀ. ೩೧೭)

ಇವರಲ್ಲಿ ಕಂಡುಬರುವ ಇನ್ನೊಂದು ವಿಶೇಷವೆಂದರೆ ಏಕಪದಿಗಳ ಬಳಕೆ. ಇವುಗಳ ಪಾದ ರಚನೆಯು ದ್ವಿಪದಿಯುದರಂತೆಯೇ ಇದೆ ; ಆದರೆ ಒಂದೊಂದು ಪಾದವೂ ಬಿಡಿಬಿಡಿಯಾಗಿದ್ದು ಸ್ವತಂತ್ರನುಡಿಯಾಗಿ ಪರಿಗಣಿತವಾಗುತ್ತದೆ. ಉದಾಹರಣೆಗೆ :

ಅಲ್ಲಾವ. ನಾದರೆ. ಅಲ್ಲವೇ. ತಿಳಿದಾ ॥೨॥
ಬಲ್ಲ ವ. ಹಿಮರ. ಬಲಗೊಂಡು. ಕೇಳಿ ॥೩॥
ಒಳಗಲ್ಲ. ಹೊರಗಲ್ಲ. ಒಳಿತಾಗಿ. ಕೇಳಿ ॥೪॥ (ಕೀ. ೧೩)

೧೮ನೆಯ ಶತಮಾನದಲ್ಲಿ, ವೆಂಕಟಕವಿಯು (ಸು. ೧೭೫೦) ತನ್ನ 'ಕರ್ಣಾಟಕಾಷ್ಟಪದಿ'ಯನ್ನು ಅಂಶದ್ವಿಪದಿಯಲ್ಲಿ ರಚಿಸಿದ್ದಾನೆ. ಉದಾಹರಣೆಗೆ,

ಕಣ್ಣಿಗೆ. ಚೆಲುವಾದ. ತಳಿರ ಹಾ. ಸಿನೊಳು
ಚೆನ್ನಾದು. ದಿಂಗಳ. ಸಾಮ್ಯವೆ. ನ್ನುವಳು[27]

೧೯ನೆಯ ಶತಮಾನದಲ್ಲಿ ಸುಮಾರು ನಾಲ್ಕೈದು ಜನರು ಇದನ್ನು ಬಳಸಿದ್ದಾರೆ. ದೇವಲಾಪುರದ ನಂಜುಂಡನ 'ಸಮುದ್ರಮಥನದ ಕಥೆ'[28], ಸರ್ಪಭೂಷಣ ಶಿವಯೋಗಿಗಳ 'ಕೈವಲ್ಯ ಕಲ್ಪವಲ್ಲರಿ'[29] (ಕೆಲವು ಪಲ್ಲವಿಗಳು), ಬಾಲಲೀಲಾ ಮಹಂತ ಶಿವಯೋಗಿಗಳ 'ಕೈವಲ್ಯ ದರ್ಪಣ'[30] (ಒಂದೆಡೆ), ಹೆನ್ನೆರಂಗದಾಸರ 'ಹೆನ್ನೆರಂಗವಿಠಲ ಶತಕ ಮತ್ತು ಕೀರ್ತನೆಗಳು'[31] (ಒಂದು ಕೃತಿ)—ಇವನ್ನು ಇಲ್ಲಿ ಹೆಸರಿಸಬಹುದು. ಮಾದರಿಗೆ,

ರನ್ನದಾ. ಭರಣದಿಂ. ರಾಜಿಪ. ಗಾತ್ರ.
ಸನ್ನುತ. ಚಾರಿತ್ರ. ಸರಸಿಜ. ನೇತ್ರ. (ದೇವಲಾಪುರದ ನಂಜುಂಡ)

ಸ್ಥಿರಮುಕ್ತಿ. ವಡೆಯದ. ನರಜನ್ಮ. ವೇಕೆ
ಪರಮನ. ನೆಲೆಗಾಣ. ದತಿಜಾಣ್ಮೆ. ಯೇಕೆ (ಸರ್ಪಭೂಷಣ ಶಿವಯೋಗಿ)

ಮುಂದಿನೆ. ಚ್ಚರ ನಿಮ. ಗೆಳ್ಳನಿ. ತಿಲ್ಲ.
ಇಂದಿನ. ಬ್ಬರದ ಮೇ. ಲ್ಹೋಗದಿ. ರವ್ವ. (ಬಾಲಲೀಲಾ ಮಹಂತಶಿವಯೋಗಿ)

ಗೌತಮ. ಸತಿಶಾಪ. ಖಂಡನ. ರಾಮ.
ಪಾತಕ. ಹರರಾಮ. ಪ್ರಖ್ಯಾತ. ರಾಮ. (ಹೆನ್ನೆರಂಗದಾಸ)

ಹಿಂದೆಯೇ ಸೂಚಿಸಿದಂತೆ, ಇದೇ ಶತಮಾನದ ವೀರಭದ್ರಕವಿಯು ತನ್ನ 'ನಂದಿಛಂದೋರ್ಣವ'ದಲ್ಲಿ ಮೊದಲ ಬಾರಿಗೆ ದ್ವಿಪದಿಯ ಲಕ್ಷಣವನ್ನು ದ್ವಿಪದಿಯಲ್ಲಿಯೇ ನಿರೂಪಿಸಿದ್ದಾನೆ.

೨೦ನೆಯ ಶತಮಾನದಲ್ಲಿ, ಪಿ. ವಿ. ನಾರಾಯಣ ಅವರ 'ಪಾಲ್ಕುರಿಕೆ ಸೋಮನಾಥನ ಬಸವಪುರಾಣ' ಎಂಬ ಕೃತಿಯು ಅಂಶದ್ವಿಪದಿಯಲ್ಲಿ ಅನುವಾದಿತವಾಗಿರುವ ಬೃಹದ್

ಗ್ರಂಥ. ಇದರಲ್ಲಿ ಸರಳರಗಳೆಯ ಲಕ್ಷಣಗಳನ್ನು ದ್ವಿಪದಿಗೆ ಹೊಂದಿಸುವ ಪ್ರಯತ್ನ ನಡೆದಿದೆ. ಮಾದರಿಗೆ :

ಆದರ. ವೆತ್ತ ಕ. ರ್ಣಾಟದೇ. ಶಕ್ಕೆ.
ಕೋಟೀರ. ದಂತೆಸೆ. ಯುವ ಗೊಬ್ಬೂ. ರೆನುವ.
ಒಂದಗ್ರ. ಹಾರ ಮ. ಹಾಜನೋ. ತ್ತಮನ.
ಕಾಯಪೂ. ಜಿತ ಪಾದ. ಕಮಲದ್ವ. ಯನಹ.
ಶಾಂಭವ. ವೇಧ ದೀ. ಕ್ಷಾಸದ್ವಿ. ಶೇಷ.
ಸಂಭಾವಿ. ತಾಶ್ರಿತ. ಜನಸಮು. ತ್ಕರನು.
ಸುರುಚಿರ. ಪ್ರಣವ ವಿ.ಸ್ಫುರಿತೋಪ. ದೇಶ.
ಚರಿತಾರ್ಥ. ನಿಖಿಲ ಶಿ. ಷ್ಯಪ್ರತಾ. ನನೆನೆ.
ಕಿಂಕರ. ನಿಚಯ ಹೃ. ತ್ಪಂಕೇರು. ಹಾಂತ-
ರಾಂಕಿತ. ವರ ಸಚ್ಚಿ. ದಾನಂದ. ಮೂರ್ತಿ.[32]

ಹೀಗೆ ಕನ್ನಡದಲ್ಲಿ ಅಂಶದ್ವಿಪದಿಯು ವಿರಳವಾಗಿಯಾದರೂ ಇಂದಿನವರೆಗೂ ಬಳಕೆಯಾಗುತ್ತಾ ಬಂದಿದೆ.

**ಒಟ್ಟುನೋಟ :** ಈವರೆಗಿನ ಪರಿಶೀಲನೆಯಿಂದ ತಿಳಿದುಬರುವ ಸಂಗತಿಗಳು ಇವು :

೧. ಕನ್ನಡದಲ್ಲಿ ಹಿಂದಿನಿಂದಲೂ ವಿರಳವಾಗಿಯಾದರೂ ಅಂಶದ್ವಿಪದಿಯು ಬಳಕೆಯಲ್ಲಿದೆ.

೨. ಲಭ್ಯ ಆಧಾರಗಳನ್ನವಲಂಬಿಸಿ ಇದರ ಪ್ರಾಚೀನತೆಯನ್ನು ಕ್ರಿ.ಶ. ೧೨ನೆಯ ಶತಮಾನದವರೆಗೆ ಕೊಂಡೊಯ್ಯಬಹುದು.

೩. ಕನ್ನಡ. ಕೊಡವ ಜನಪದ ಸಾಹಿತ್ಯಗಳಲ್ಲಿ ಇದರ ಬಳಕೆಯಿದೆ.

೪. ತೆಲುಗಿನಲ್ಲಿ ಮಾತ್ರ ಇದು ವಿಶೇಷವಾಗಿ ಬಳಕೆಯಾಯಿತು.

ಇದರ ಆಧಾರದ ಮೇಲೆ ಊಹಿಸಬಹುದಾದ ಅಂಶಗಳೆಂದರೆ :

೧ ಅಂಶದ್ವಿಪದಿಯು ದ್ರಾವಿಡಛಂದೋವರ್ಗಕ್ಕೆ ಸೇರುವ ಒಂದು ಸರ್ವಸಾಮಾನ್ಯ ಬಂಧ.

೨ ಜನಪದ ಸಾಹಿತ್ಯದಲ್ಲಿ ಅದು ವ್ಯಾಪಿಸಿದೆ.

೩ ತೆಲುಗಿನಲ್ಲಿ ಗ್ರಾಂಥಿಕ ಸಾಹಿತ್ಯದಲ್ಲಿ ವಿಶೇಷವಾಗಿ ಮಾನ್ಯತೆ ಪಡೆದಿದೆ.

೪ ಕನ್ನಡದಲ್ಲಿ ವಿರಳವಾಗಿಯಷ್ಟೇ ಬಳಕೆಯಾಗಿದೆ ; ಅದೂ ಹೆಚ್ಚಾಗಿ ವೀರಶೈವ ಕವಿಗಳೇ ಬಳಸಿದ್ದಾರೆ.

೫ ಮಾತ್ರಾಛಂದಸ್ಸಿಗೆ ಪರಿವರ್ತನೆ ಹೊಂದಿದ ನಂತರ ಇದರ ಬಳಕೆಯು ತಕ್ಕ ಮಟ್ಟಿಗೆ ಹೆಚ್ಚಾಯಿತು.

ಅಂತೂ, ಅಂಶದ್ವಿಪದಿಯು ಕನ್ನಡಕ್ಕೆ ಅಪರಿಚಿತ ಬಂಧವಲ್ಲ ಎನ್ನಬಹುದು.

**ಅನುಬಂಧ :** 'ಪಂಡಿತಾರಾಧ್ಯಚರಿತ್ರ'ದಲ್ಲಿ ಪಾಲ್ಕುರಿಕೆ ಸೋಮನಾಥನು ರಚಿಸಿದ ಕನ್ನಡ ಭಾಗ (ಚಿಲಕೂರಿ ನಾರಾಯಣರಾವು ಅವರ ಪರಿಷ್ಕರಣದ (ಚೆನ್ನಪುರಿ, ೧೯೬೫) ೧೯೭೪ರ ಮುದ್ರಣದ ಪು. ೨೪೩–೨೪೪ರಲ್ಲಿರುವ ಪಾಠವನ್ನು ಆಧರಿಸಿದೆ.) :

ಪ್ರಸ್ಮನಿ ಕರ್ಣಾಟಭಾಷ ಸಾಂಗವುಗ

ನಜಗಮುದೇವಯ್ಯ ಬಿಜಮಾಡಿರಯ್ಯ
ನಿಜಭಾವದೇವಯ್ಯ ನೀವಿತ್ತ ಬನ್ನಿ

ಯಲ್ಲಮದೇವಯ್ಯ ಎತ್ತಲೋ ಹೋದಿ ?
ಬ[ಳ]ದ ದೇವಯ್ಯ ಬನ್ನಿರಿ ನೀವು

ಶಿವಮುದ್ದುದೇವಯ್ಯ ಚಿಲಿಕಿದೇವಯ್ಯ
ಶಿವರಾತ್ರಿ ಬಸವಯ್ಯ ಚಿಕ್ಕಯ್ಯಸಯ್ಯ

ವಿರುಪಾಕ್ಷದೇವಯ್ಯ ಕರುಣಿಸು ಬೇಗ
ಪುರವಣಿಸಂಗಯ್ಯ ಹರಿದು ಬಾರಯ್ಯ

ಮಹಲಿಂಗದೇವಯ್ಯ ಮುಂದಿ ಬೇಡಯ್ಯ
ಸಹಸುಖ ದೇವಯ್ಯ ಸರಸರ ಬನ್ನಿ

ಬವಡಿಗೆದೇವಯ್ಯ ಬನ್ನಿ ಮಲ್ಲಯ್ಯ
ಶಿವದೇವ ನಿಲಬೇ(ಡ) ಶೀಘ್ರವೆ ಬನ್ನಿ

ಗುರುದೇವ ನೀ ಕುಣಿಕುಣಿದಾಡಬೇಕೆ ?
ಸಿರಿಗಿರಿಯಿದು ನಿಮ್ಮ ಸಿರಿಗಿರಲ್ಲಯ್ಯ

ಸಂಗದೇವಯ್ಯ ಪ್ರಸಾದಿದೇವಯ್ಯ
ಲಿಂಗದೇವಯ್ಯ (ಉ)ತ್ತುಂಗದೇವಯ್ಯ

(ಅ)ಮೃತದೇವಯ್ಯ ಮಹಾತ್ಮದೇವಯ್ಯ
ವಿಮಲಾತ್ಮದೇವಯ್ಯ ವಿಶ್ವನಾಥಯ್ಯ

ಸರ್ವಜ್ಞದೇವಯ್ಯ ಶಾಂತಿದೇವಯ್ಯ
ಪರ್ವತದೇವಯ್ಯ ಭದ್ರದೇವಯ್ಯ

ಬಾಣದೇವಯ್ಯ ನಿರ್ವಾಣದೇವಯ್ಯ
ಜಾಣದೇವಯ್ಯ ಕಲ್ಯಾಣದೇವಯ್ಯ

ಅಂತೂ, ಅಂಶದ್ವಿಪದಿಯು ಕನ್ನಡಕ್ಕೆ ಅಪರಿಚಿತ ಬಂಧವಲ್ಲ ಎನ್ನಬಹುದು.

**ಅನುಬಂಧ :** 'ಪಂಡಿತಾರಾಧ್ಯಚರಿತ್ರ'ದಲ್ಲಿ ಪಾಲ್ಕುರಿಕೆ ಸೋಮನಾಥನು ರಚಿಸಿರುವ ಕನ್ನಡ ಭಾಗ (ಚಿಲಕೂರಿ ನಾರಾಯಣರಾವು ಅವರ ಪರಿಷ್ಕರಣದ (ಚೆನ್ನಪುರಿ, ೧೯೩೯) ೧೯೭೪ರ ಮುದ್ರಣದ ಪು. ೨೪೩–೨೪೪ರಲ್ಲಿರುವ ಪಾಠವನ್ನು ಆಧರಿಸಿದೆ.) :

ವೃನ್ನನಿ ಕರ್ಣಾಟಭಾಷ ಸಾಂಗಮುಗ

ನಜಗಮದೇವಯ್ಯ ಬಿಜಮಾಡಿರಯ್ಯ
ನಿಜಭಾವದೇವಯ್ಯ ನೀವಿತ್ತ ಬನ್ನಿ

ಯಲ್ಲಮದೇವಯ್ಯ ಎತ್ತಲೋ ಹೋದಿ ?
ಬ[ಳ್ಳ]ದ ದೇವಯ್ಯ ಬನ್ನಿರಿ ನೀವು

ಶಿವಮುದ್ದುದೇವಯ್ಯ ಚಿಲಿಕಿದೇವಯ್ಯ
ಶಿವರಾತ್ರಿ ಬಸವಯ್ಯ ಚಿತ್ತಯಿಸಯ್ಯ

ವಿರುಪಾಕ್ಷದೇವಯ್ಯ ಕರುಣಿಸು ಬೇಗ
ಪುರವಣಿಸಂಗಯ್ಯ ಹರಿದು ಬಾರಯ್ಯ

ಮಹಲಿಂಗದೇವಯ್ಯ ಮಂದಿ ಬೇಡಯ್ಯ
ಸಹಸುಖ ದೇವಯ್ಯ ಸರಸರ ಬನ್ನಿ

ಬವಡಿಗೆದೇವಯ್ಯ ಬನ್ನಿ ಮಲ್ಲಯ್ಯ
ಶಿವದೇವ ನಿಲಬೇ(ಡಿ) ಶೀಘ್ರವೆ ಬನ್ನಿ

ಗುರುದೇವ ನೀ ಕುಣಿಕುಣಿದಾಡಬೇಕೆ ?
ಸಿರಿಗಿರಿಯಿದು ನಿಮ್ಮ ಸಿರಿಗಿರಲ್ಲಯ್ಯ

ಸಂಗದೇವಯ್ಯ ಪ್ರಸಾದಿದೇವಯ್ಯ
ಲಿಂಗದೇವಯ್ಯ (ಉ)ತ್ತುಂಗದೇವಯ್ಯ

(ಅ)ಮೃತದೇವಯ್ಯ ಮಹಾತ್ಮದೇವಯ್ಯ
ವಿಮಲಾತ್ಮದೇವಯ್ಯ ವಿಶ್ವನಾಥಯ್ಯ

ಸರ್ವಜ್ಞದೇವಯ್ಯ ಶಾಂತಿದೇವಯ್ಯ
ಪರ್ವತದೇವಯ್ಯ ಭದ್ರದೇವಯ್ಯ

ಬಾಣದೇವಯ್ಯ ನಿರ್ವಾಣದೇವಯ್ಯ
ಜಾಣದೇವಯ್ಯ ಕಲ್ಯಾಣದೇವಯ್ಯ

ಪರುಸೆ ಹೋಯಿತು ಬೇಗ ಬನ್ನಿಯಿವಗಳ
ತರಲಾಟ ನೀವು ನಿಂದರಸಿರಿಯೆಸುತ

ಗುಡ್ಡವ್ವ ದುಗ್ಗವ್ವ ಗೊಗ್ಗವ್ವ ಬನ್ನಿ
ಪೊಡ್ನಲ ಸೋಮವ್ವ ಪೋಡಶಿ ಬನ್ನಿ

ಹೆಮ್ಮವ್ವ ರೆಮ್ಮವ್ವ ಹೆಗ್ಗವ್ವ ಬನ್ನಿ
(ಎ)ಮ್ಮವ್ವ ನಿಮ್ಮವ್ವ ಜೊಮ್ಮವ್ವ ಬನ್ನಿ

ಹೆಲ್ಲವ್ವ ಹಲ್ಲವ್ವ ಹೇಚವ್ವ ಬನ್ನಿ
ಮಲ್ಲವ್ವ ಚೆಲ್ಲವ್ವ ಮಾದವ್ವ ಬನ್ನಿ

ಯಕ್ಕವ್ವ ಕಕ್ಕವ್ವ ಯಾದವ್ವ ಬನ್ನಿ
ಜಕ್ಕವ್ವ ರೆಕ್ಕವ್ವ ಸಾಂತವ್ವ ಬನ್ನಿ

ಸಂಗವ್ವ ಲಿಂಗವ್ವ ಸಿಂಗವ್ವ ಬನ್ನಿ
ಗಂಗವ್ವ ರಾಮವ್ವ ಕಾಮವ್ವ ಬನ್ನಿ

ಪ್ರಮಥವ್ವ ರುದ್ರವ್ವ ಭದ್ರವ್ವ ಬನ್ನಿ
ಕೊಮರವ್ವ ವಿಮಲವ್ವ ಕೊಮ್ಮವ್ವ ಬನ್ನಿ

ಚನ್ನವ್ವ ಹೊನ್ನವ್ವ ಕನ್ನವ್ವ ಬನ್ನಿ
ಜನ್ನವ್ವ ಸೋಕವ್ವ ಸತ್ರವ್ವ ನಿಬ್ನಿ

ಶರಣವ್ವ ಸಾಂತವ್ವ ಸರಳವ್ವ ಬನ್ನಿ
ಪುರುಷವ್ವ ಯಪ್ಪವ್ವ ಬೊಪ್ಪವ್ವ ಬನ್ನಿ

ಮತ್ತೆಯಲ್ಲಡದೇವಿ ಮಲ್ಲಡದೇವಿ
ಬ(ತ್ರ)ಲೇಶ್ವರದೇವಿ ಬಸವಲದೇವಿ

ಸರದೇವಿ ಗುರುದೇವಿ ವಿರುಪಾಕ್ಷದೇವಿ
ಸಿರಿದೇವಿ ಮಹದೇವಿ ಸಿದ್ಧಲದೇವಿ

(ಉ)ಮದೇವಿ ಶಿವದೇವಿಯುದ್ಭಟದೇವಿ
ಸಮಭಾವದೇವಿ ಬಾಚಲದೇವಿ ಬನ್ನಿ

ಮುಂದೆ ಹೋಗಲು ಬೇಡ ಮಂದಿ ತಾ ಹೊಲ್ಲ
ಹಿಂದೆ ನಿಲ್ಲಲು ಬೇಡ ಇರುವುದು ಭಯವು

ಉಲುಕದೆ ನಿಲ್ಲದೆ(ಯೊಂ)ದಾಗಿನಮ್ಮ
ಬಲದಲ್ಲಿ ಕೆಲದಲ್ಲಿ ಬನ್ನಿಬನ್ನೆನುತು

ವಾರೆಕಾರರು ತಮ್ಮವರ ಹಿಂದೆ ಬರಲು
ಸಾರೆ ಪರ್ವತವೆಂದು ಸಂತಸದಲ್ಲಿ

ಪರುಸೆ ಹೋಯಿತು ಬೇಗ ಬನ್ನಿಯಿವಗಳ
ತರಲಾಟ ನೀವು ನಿಂದರಸಿರಿಯೆನುತ

ಗುಡ್ಡವ್ವ ದುಗ್ಗವ್ವ ಗೊಗ್ಗವ್ವ ಬನ್ನಿ
ಪೊನ್ನಲ ಸೋಮವ್ವ ಷೋಡಶಿ ಬನ್ನಿ

ಹೆಮ್ಮವ್ವ ರೆಮ್ಮವ್ವ ಹೆಗ್ಗವ್ವ ಬನ್ನಿ
(ಎ)ಮ್ಮವ್ವ ನಿಮ್ಮವ್ವ ಜೊಮ್ಮವ್ವ ಬನ್ನಿ

ಹೆಲ್ಲವ್ವ ಹಲ್ಲವ್ವ ಹೇಚವ್ವ ಬನ್ನಿ
ಮಲ್ಲವ್ವ ಚೆಲ್ಲವ್ವ ಮಾದವ್ವ ಬನ್ನಿ

ಯಕ್ಕವ್ವ ಕಕ್ಕವ್ವ ಯಾದವ್ವ ಬನ್ನಿ
ಜಕ್ಕವ್ವ ರೆಕ್ಕವ್ವ ಸಾಂತವ್ವ ಬನ್ನಿ

ಸಂಗವ್ವ ಲಿಂಗವ್ವ ಸಿಂಗವ್ವ ಬನ್ನಿ
ಗಂಗವ್ವ ರಾಮವ್ವ ಕಾಮವ್ವ ಬನ್ನಿ

ಪ್ರಮಥವ್ವ ರುದ್ರವ್ವ ಭದ್ರವ್ವ ಬನ್ನಿ
ಕೊಮರವ್ವ ವಿಮಲವ್ವ ಕೊಮ್ಮವ್ವ ಬನ್ನಿ

ಚೆನ್ನವ್ವ ಹೊನ್ನವ್ವ ಕನ್ನವ್ವ ಬನ್ನಿ
ಜನ್ನವ್ವ ಸೋಕವ್ವ ಸತ್ತವ್ವ ನಿಬ್ಬಿ

ಶರಣವ್ವ ಸಾಂತವ್ವ ಸರಳವ್ವ ಬನ್ನಿ
ಪುರುಷವ್ವ ಯಪ್ಪವ್ವ ಬೊಪ್ಪವ್ವ ಬನ್ನಿ

ಮತ್ತೆಯಲ್ಲಡದೇವಿ ಮಲ್ಲಡದೇವಿ
ಬ(ತ್ತ)ಲೇಶ್ವರದೇವಿ ಬಸವಲದೇವಿ

ಸರದೇವಿ ಗುರುದೇವಿ ವಿರುಪಾಕ್ಷದೇವಿ
ಸಿರಿದೇವಿ ಮಹದೇವಿ ಸಿದ್ಧಲದೇವಿ

(ಉ)ಮದೇವಿ ಶಿವದೇವಿಯುದ್ಭಟದೇವಿ
ಸಮಭಾವದೇವಿ ಬಾಚಲದೇವಿ ಬನ್ನಿ

ಮುಂದೆ ಹೋಗಲು ಬೇಡ ಮಂದಿ ತಾ ಹೊಲ್ಲ
ಹಿಂದೆ ನಿಲ್ಲಲು ಬೇಡ ಇರುವುದು ಭಯವು

ಉಲುಕದೆ ನಿಲ್ಲದೆ(ಯೊಂ)ದಾಗಿನಮ್ಮ
ಬಲದಲ್ಲಿ ಕೆಲದಲ್ಲಿ ಬನ್ನಿಬನ್ನೆನುತು

ವಾರೆಕಾರರು ತಮ್ಮವರ ಹಿಂದೆ ಬರಲು
ಸಾರೆ ಪರ್ವತವೆಂದು ಸಂತಸದಲ್ಲಿ

(ಒ)ಬ್ಬರೊಬ್ಬರ ನೋಡಿ ಕೊಬ್ಬುತ್ತ ಮನದ
ಲುಬ್ಬುತ್ತ ಮತ್ತಂತೆ ಹಬ್ಬುತ್ತ ಹಸಿವು

ತೊರೆಯುತ್ತ ಬ(ಳ)ಲಿಕೆಯ(ರೆ)ಯುತ್ತ ಸುರತಿ
ನೆರವುತ್ತ ದೇಹವಂ ಮರೆಯುತ್ತ ಶಿವನ

ಕೇಳುತ್ತ ಭಕ್ತರಂ ಹೇಳುತ್ತ ಮಹಿಮೆ
ಸಾಳುತ್ತ ಸಮಯಗಳ್ ಬೀಳುತ್ತ ತಮಕ

ಪೇಳುತ್ತ ಮಂದಿಯೊಳ್ ಮಾಳುತ್ತ ನೆರಹಿ
ತಿಳಿಯುತ್ತ ಮಂದಿಯೊಳ್ ಸುಳಿಯುತ್ತ ಪ್ರಿಯವು
ಬೆಳೆಯುತ್ತ ಜನಗಳ ಕಳುವುತ್ತ ಪುರವ

ನುಡಿಯುತ್ತ ತನಗೆ ತಾ ಕುಡಿಯುತ್ತ ಸ(ಲ)ಹಿ
ಹಡೆಯುತ್ತ ಕುಣಿಕುಣಿದಾಡುತ್ತ ಸೊಕ್ಕಿ

ಸಿಂದುಗಳಿಕ್ಕುತ್ತ ಸಿದ್ಧಿತಾಳಗಳು
ಸಂದಿಸುತ್ತಾ ತಾಳ ಜ(ತಿ)ಗೆ ಮೆಟ್ಟುತ್ತ

ನ(ಡೆಯು)ವರ್ ನಮ್ಮವರ್ ನಾವೇಕೆ ಹಿಂದೆ
ನಡೆನಡೆಯೆನುತ ಸಂದಣಿಸುತ್ತ ಕೂಡಿ

ಕಯ್ಯ ತಾಳಂಗಳ ಕವಿದು ಬಾರಿಸುತ
ಮೈಯೆಲ್ಲ ಬಾಯಾಗಿ ಮೃಡನ ಹಾಡಿರಿ ಭೋ

ಹಬ್ಬುತ್ತ ಕೊಬ್ಬುತ್ತಯುಬ್ಬಿಯಾಡುತ್ತ
ಪಬ್ಬುತದೊಡೆಯಂಗೆ ಭಕ್ತಿಮಾಡಿರಿ ಭೋ

ಹಾಡುತ್ತ (ಆ)ಡುತ್ತ ನೋಡುತ್ತ (ಭಕ್ತಿ)
ಮಾಡಿ ಭೋ ಸಿರಿಗಿರಿ ಮಲ್ಲಿಕಾರ್ಜುನಗೆ

ಪ್ರಾಣೇಶ ನಮಗೆ ಶ್ರೀ ಪರ್ವತದೊಡೆಯ
(ಮ)ಣಿದೆನ್ನಿ ಭೋ ಮಲ್ಲಿಕಾರ್ಜುನಗೆ

ಹರಹರ ಶಿವಶಿವ ಶರಣು ನೀವೆಮಗೆ
ಸಿರಿಗಿರಿ ಮಲ್ಲಯ್ಯ ಶರಣೆನ್ನಿರಯ್ಯ

ಪರಮ ಪಾತಕಗಳ ಪರಿಹರಿಸುವನು
ಸಿರಿಗಿರಿ ಮಲ್ಲಯ್ಯ ಶರಣೆನ್ನಿರಯ್ಯ

ಮಂಗಳ ಮೂರುತಿ ಮಲ್ಲಯ್ಯನಾಳು
ಸಂಗನ ಬಸವಯ್ಯ ಶರಣೆನ್ನಿರಯ್ಯ

ಬಸವ(ಣ್ಣ)ಯಿಷ್ಟಾರ್ಥ ಫಲಕೆಯೊಳಿಗನು
ಪಸರಿಸಿ ಮಾಡಿ ಭೋ ಭಕ್ತಿಮಲ್ಲಯಗೆ''
ಯನಿಯಿಟ್ಟು ಪಾಡುಚುನಾಡುಚು......

## ಅಡಿಟಿಪ್ಪಣಿಗಳು

1. 'ಕನ್ನಡ ಕೈಪಿಡಿ'–ಸಂ.೧., ಮೈವಿವಿ., ಮೈಸೂರು, ೧೯೭೧, ಪು. ೧೫೮
2. ಅದೇ, ಪು. ೧೦೪
3. 'ಕನ್ನಡ ಛಂದೋವಿಕಾಸ', ಭಾರತ ಬುಕ್ ಡಿಪೊ ಮತ್ತು ಪ್ರಕಾಶನ, ಧಾರವಾಡ ೧೯೭೩ ಪು. ೨೪೬
4. ಅದೇ, ಪು. ೧೪೫
5. 'ಕನ್ನಡ ಛಂದಃಸ್ವರೂಪ', ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು, ೧೯೭೮, ಪು. ೬೮೨
6–7. 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಛಂದಸ್ಸಿನ ಚರಿತ್ರೆ', ಭಾಗ ೧, ಮೈವಿವಿ., ಮೈಸೂರು, ೧೯೮೦, ಪು. ೬೨೪
8. ಅದೇ, ಪು. ೬೨೫
9. ಅದೇ, ಭಾಗ ೨, ಪು. ೬೧೬
10. ಅದೇ, ಪು. ೬೩೨
11. 'ಪ್ರಸ್ತಾವನೆ', 'ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ', (ಅನು) ಪಿ. ವಿ. ನಾರಾಯಣ, ತರಳಬಾಳು ಪ್ರಕಾಶನ, ಸಿರಿಗೆರೆ, ೧೯೮೨, ಪು. xvi
12. ಅದೇ, ಪು. xvii
13. ಪಾಲ್ಕುರಿಕೆ ಸೋಮನಾಥ : 'ಪಂಡಿತಾರಾಧ್ಯಚರಿತಮು', (ಪ). ಚಿಲಕೂರಿ ನಾರಾಯಣರಾವು, ಚೆನ್ನಪುರಿ (೧೯೩೯), ೧೯೭೪ರ ಮು., ಪು. ೨೪೩
14. ಅದೇ, ಪು. ೨೪೪
15–16. ಅದೇ, ಪು. ೨೪೬
17. (ಸಂ) ಶ್ರೀ ಜಚನಿ, 'ಕೊರವಂಜಿ ಸಾಹಿತ್ಯ', ಶ್ರೀ ಶೈಲ ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ಪು. ೪–೧೨
18. (ಸಂ) ಎಲ್. ಬಸವರಾಜು : 'ಅಕ್ಕನ ವಚನಗಳು', ಗೀತಾ ಬುಕ್ ಹೌಸ್, ಮೈಸೂರು (೧೯೬೬), ೧೯೭೭ರ ಮು., ಪು. ೨೧೦–೨೧೯
19. (ಸಂ) ವೀರಣ್ಣ ರಾಜೂರ : 'ಶಿವಯೋಗ ಪ್ರದೀಪಿಕೆ', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೮೧, ಪು. ೩೧–೩೯
20. (ಸಂ) ಮತಿಘಟ್ಟ ಕೃಷ್ಣಮೂರ್ತಿ : 'ಕನ್ನಡ ಜನಪದ ಸಾಹಿತ್ಯ ಭಂಡಾರ, ಸಂ. ೧ : ಗೀತೆಗಳು', ಗುರುಮೂರ್ತಿ ಪ್ರಕಾಶನ, ಬೆಂಗಳೂರು, ೧೯೭೫, ಪು. ೭೩೧
21. ಅದೇ, ಪು. ೭೪೧
22. ಅದೇ, ಪು. ೭೬೫
23. ಎಂ. ಆರ್. ಲ. : 'ಹಗರೆಯ ಕೋಲಾಟ', ಪ್ರಕ., ೨೫–೧, ಪು. ೫೩–೫೪
24. ನಡಿಕೇರಿಯಂಡ ಚಿಣ್ಣಪ್ಪ : 'ಪಟ್ಟೋಲೆ ಪಳಮೆ', ಕಅಸಂ., ಮೈವಿವಿ., ಮೈಸೂರು, ೧೯೭೫, ಪು. ೨೫೧

25. ಕೆ. ರಾಮಕೃಷ್ಣ ಉಡುಪ : ಕೊಡಗಿನ ಸಾಹಿತ್ಯ, 'ಮಡಿಕೇರಿ ಸಾಹಿತ್ಯ ಸಮ್ಮೇಳನ ೧೯೮೧', ಕಸಾಪ., ಬೆಂಗಳೂರು, ೧೯೮೧, ಪು. ೨೩೩
26. (ಸಂ) ಜಿ. ವರದರಾಜರಾವ್ : 'ಮಹೀಪತಿದಾಸರ ಕೃತಿಗಳು', ಕಅಸಂ, ಮೈವಿವಿ., ಮೈಸೂರು, ೧೯೭೬
27. ರಾ. ನರಸಿಂಹಾಚಾರ್ : 'ಕರ್ಣಾಟಕ ಕವಿಚರಿತೆ', ಸಂ.೩, ಕಸಾಪ., ಬೆಂಗಳೂರು, ಪು. ೮೭
28. (ಸಂ) ಎನ್. ಬಸವಾರಾಧ್ಯ : 'ದೇವಲಾಪುರದ ನಂಜುಂಡ ವಿರಚಿತ ಕೃತಿಗಳು', ಗೀತಾ ಬುಕ್ ಹೌಸ್, ಮೈಸೂರು, ೧೯೮೫, ಪು. ೧೦೪–೧೧೬
29. (ಸಂ) ಶಿ. ಶಿ. ಬಸವನಾಳ : 'ಸರ್ಪಭೂಷಣ ಶಿವಯೋಗಿ ವಿರಚಿತ ಕೈವಲ್ಯಕಲ್ಪವಲ್ಲರಿ', ಬೆಂಗಳೂರು, ೧೯೪೩, ಪು. ೧೨೨ ಮತ್ತು ೧೪೬
30. (ಸಂ) ಶಿ. ಶಿ. ಬಸವನಾಳ : 'ಬಾಲಲೀಲಾ ಮಹಂತಶಿವಯೋಗಿ ವಿರಚಿತ ಕೈವಲ್ಯದರ್ಪಣ', ಧಾರವಾಡ, ೧೯೪೩, ಪು. ೮೪–೮೫
31. 'ಹೆನ್ನೆರಂಗವಿಠಲ ಶತಕ ಮತ್ತು ಕೀರ್ತನೆಗಳು', ಸುರಪುರ, ೧೯೩೯, ಪು. ೩೬
32. 'ಪಾಲ್ಕುರಿಕೆ ಸೋಮನಾಥನ ಬಸವಪುರಾಣ', (ಅನು) ಪಿ.ವಿ. ನಾರಾಯಣ, ಪೂರ್ವೋಕ್ತ, ಪು. ೫

# 'ಧ್ವನ್ಯಾಲೋಕ'ದಲ್ಲಿ ಉಪಮಾ ಲೋಕ

ಸಿ. ಪಿ. ಕೃಷ್ಣಕುಮಾರ್

ಕಾವ್ಯಮೀಮಾಂಸೆಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಕನ್ನಡಕ್ಕೂ ಸಂಸ್ಕೃತಕ್ಕೂ ಒಂದು ಎದ್ದು ತೋರುವ ವ್ಯತ್ಯಾಸವಿದೆ. ಕನ್ನಡದಲ್ಲಿ ಬಹುತೇಕ ಕವಿಗಳೆ ಕಾವ್ಯಜಿಜ್ಞಾಸೆಯಲ್ಲಿ ತೊಡಗುತ್ತಾರೆ, ತಮ್ಮ ತಮ್ಮ ಕೃತಿಗಳಲ್ಲಿ. (ಲಾಕ್ಷಣಿಕರ ವರ್ಗವೊಂದು ಕನ್ನಡದಲ್ಲಿ ಪ್ರತ್ಯೇಕವಾಗಿದ್ದರೂ, ಅವರ ಅಲಂಕಾರ ಗ್ರಂಥಗಳಲ್ಲಿ ಸ್ವಂತಿಕೆ ಕಡಮೆ). ಸಂಸ್ಕೃತದಲ್ಲಾದರೊ ಕವಿಗಳೆ ಬೇರೆ, ಆಲಂಕಾರಿಕರೆ ಬೇರೆ. ಈ ವಿದ್ಯಮಾನಕ್ಕೊಂದು ಉಜ್ವಲವಾದ ಅಪವಾದ, ಆನಂದವರ್ಧನ. ಅವನು ಸ್ವತಃ ಕವಿಯೂ ಹೌದು ; ಆಲಂಕಾರಿಕನೂ ಹೌದು. ಅವನ ಕವಿಹೃದಯದ ವಿಲಾಸ ವಿಹಾರಗಳಿಗೆ ಆಡುಂಬೊಲವಾಗಿದೆ, 'ಧ್ವನ್ಯಾಲೋಕ'.

ಭಾರತೀಯ ಕಾವ್ಯಮೀಮಾಂಸೆಯ ಇತಿಹಾಸದಲ್ಲಿ ಆನಂದವರ್ಧನನ 'ಧ್ವನ್ಯಾಲೋಕ'ವೊಂದು ಅದ್ವಿತೀಯವಾದ ಗ್ರಂಥ, ಅನೇಕ ದೃಷ್ಟಿಗಳಿಂದ. (ಪ್ರಾಯಃ ಎರಡನೆಯ ಸ್ಥಾನ ಕುಂತಕನ 'ವಕ್ರೋಕ್ತಿಜೀವಿತ'ದ್ದು). ಹಾಗೆ ನೋಡಿದರೆ 'ಧ್ವನ್ಯಾಲೋಕ'ವೇನೂ ಬೃಹತ್ಕೃತಿಯಲ್ಲ ; ಆದರೆ ಅದರ ತಾತ್ತ್ವಿಕ ವ್ಯಾಪ್ತಿ ಆಶ್ಚರ್ಯಕರವಾದುದು. ಸಂದೇಹಕ್ಕೆಡೆಯಿಲ್ಲದಂತೆ ಧ್ವನಿತತ್ತ್ವದ ಪ್ರತಿಷ್ಠಾಪನೆ 'ಧ್ವನ್ಯಾಲೋಕ'ದ ಧ್ಯೇಯ ; ಆದರೆ ಅಷ್ಟೇ ಅಲ್ಲ, ರಸತತ್ತ್ವ ಮತ್ತು ಔಚಿತ್ಯ ತತ್ತ್ವಗಳನ್ನೂ ಅದು ಬೆಳಗಿದೆ : ಪೊತ್ತದಲ್ಲಿ 'ಕಾವ ಗಾಯತ್ರಿ'ಯ ಅನೂನ ಸಮರ್ಥನೆಯಾಗಿದೆ. ಇಷ್ಟಕ್ಕೇ ಮುಗಿಯುವುದಿಲ್ಲ, 'ಧ್ವನ್ಯಾಲೋಕ'ದ ಮಹತ್ತ್ವ. ಆದು ಅಲಂಕಾರ, ರೀತಿ ಮುಂತಾದುವುಗಳ ಸ್ಥಾನಮಾನಗಳನ್ನೂ ಯಥೋಚಿತವಾಗಿ ನಿಷ್ಕರ್ಷಿಸುತ್ತದೆ. ಈ ಕೆಲಸಗಳನ್ನೆಲ್ಲ ಅದು ಮನೋಹರವಾದ ಬಗೆಯಲ್ಲಿ ಮಾಡಿದೆ ಎನ್ನುವುದು ಮತ್ತೊಂದು ವಿಶೇಷ. 'ಧ್ವನ್ಯಾಲೋಕ' ಕಾವ್ಯಶಾಸ್ತ್ರ ಮಾತ್ರವಲ್ಲ, ನಿಜವಾದ ಅರ್ಥದಲ್ಲಿ ಶಾಸ್ತ್ರಕಾವ್ಯ ಕೂಡ.

ಆನಂದವರ್ಧನ ತನ್ನ ಗ್ರಂಥದಲ್ಲಿ ವಿಷಯ ವಿಶದೀಕರಣಕ್ಕಾಗಿ ಮೇಲಿಂದ ಮೇಲೆ ಉಪಮೆಗಳನ್ನು ಕೊಡುತ್ತಾನೆ. ಉಪಮಾದಿ ಅಲಂಕಾರಗಳು ವಾಚ್ಯಾರ್ಥ ಪ್ರಕಾರಗಳೆಂದು ಅವನು ಒಂದೆಡೆ ಹೇಳಿದರೂ, ಅವು ಧ್ವನಿಯ ಅಂಗಗಳು ಕೂಡ ಆಗಬಲ್ಲುವು ಎಂದು ಅನ್ಯತ್ರ ಪ್ರತಿಪಾದಿಸುವುದು ಗಮನಾರ್ಹ. ಇದಕ್ಕೆ ನಿದರ್ಶನವೆಂಬಂತೆ, ಅವನ ಸ್ವಂತ ಉಪಮೆಗಳೇ ಧ್ವನಿಯುಕ್ತವಾಗಿವೆ ; ಹೃದ್ಯವಾಗಿವೆ. ಅವುಗಳನ್ನು ತುಸು ನೋಡುವುದು ಇಲ್ಲಿನ ಉದ್ದೇಶ.

ಧ್ವನಿಯನ್ನು ಲಕ್ಷಣೀಕರಿಸುವ ಆರಂಭದ ಕಾರಿಕೆಯೊಂದು ಕಮನೀಯವಾದ, ಅಷ್ಟೆ ಸಾರ್ಥಕವಾದ ಉಪಮಾನವನ್ನೊಳಗೊಂಡಿದೆ :

ಪ್ರತೀಯಮಾನಂ ಪುನರನ್ಯದೇವ
ವಸ್ತ್ವಸ್ತಿ ವಾಣೀಷು ಮಹಾಕವೀನಾಮ್ ।
ಯತ್ತತ್ಪ್ರಸಿದ್ಧಾವಯವಾತಿರಿಕ್ತಂ
ವಿಭಾತಿ ಲಾವಣ್ಯಮಿವಾಂಗನಾಸು ॥ (೧–೪)

(ಕೇವಲ ಪ್ರತೀಯಮಾನವೇ ಆದ ಮತ್ತೊಂದು ವಸ್ತುವು ಮಹಾಕವಿಗಳ ವಾಣಿಯಲ್ಲಿರುತ್ತದೆ ; ಅದು ಅಂಗನೆಯರ ಲಾವಣ್ಯದಂತೆ ಪ್ರಸಿದ್ಧವಾದ ಅವಯವಗಳ ಚೆಲುವಿಗಿಂತ ಬೇರೆಯಾಗಿಯೇ ಪ್ರಕಾಶಿಸುತ್ತದೆ). ಧ್ವನಿಯೆನ್ನುವುದು ಸ್ಥೂಲವಲ್ಲ, ಅದರಾಚೆಗಿರುವ ಸೂಕ್ಷ್ಮ. ಅದು ಅಂಗವಲ್ಲ, ಭಂಗಿ ಎಂಬುದನ್ನು ಇಲ್ಲಿ ಆನಂದವರ್ಧನ ಸೂಚಿಸಿದ್ದಾನೆ.[1] ಬಿಡಿ ಅವಯವಗಳ ಚೆಲುವಿನಿಂದ ಬೇರೆಯಾದ, ಎಲ್ಲ ಅವಯವಗಳ ಚೆಲುವಿನಿಂದ ಸಿದ್ಧಿಸುವ ಒಟ್ಟಂದವೊಂದು ಹೆಣ್ಣಿನಲ್ಲಿರುತ್ತದೆ. ಧ್ವನಿ ಅಂತಹುದು. ಅದು ಕಾವ್ಯದ 'ಸಮುದಾಯ ಶೋಭೆ'; ಸಾಮರಸ್ಯದ ಫಲ.

ಇಲ್ಲಿಗೇ ನಿಲ್ಲದೆ, ವ್ಯಾಕರಣಸಂಬಂಧವಾದ ಒಂದು ಹೋಲಿಕೆಯ ಮೂಲಕ ಧ್ವನಿ ಸ್ವರೂಪವನ್ನು ವಿವರಿಸುತ್ತಾನೆ, ಆನಂದವರ್ಧನ :

ಯಥಾ ಪದಾರ್ಥದ್ವಾರೇಣ ವಾಚ್ಯಾರ್ಥಃ ಸಂಪ್ರತೀಯತೇ
ವಾಚ್ಯಾರ್ಥಪೂರ್ವಿಕಾ ತದ್ವತ್ ಪ್ರತಿಪತ್ತಸ್ಯ ವಸ್ತುನಃ ॥ (೧-೧೦)

(ಪದಗಳ ಅರ್ಥದ ಮುಖಾಂತರವಾಗಿಯೇ ವಾಕ್ಯದ ಅರ್ಥವು ಹೇಗೆ ಗೊತ್ತಾಗುವುದೋ ಹಾಗೆ, ವಾಚ್ಯಾರ್ಥದ ಮೂಲಕವಾಗಿಯೇ ಆ ವ್ಯಂಗ್ಯಾರ್ಥವು ಗೊತ್ತಾಗುತ್ತದೆ).

ವ್ಯಂಗ್ಯಾರ್ಥ ಸ್ವರೂಪವನ್ನು ಮತ್ತೂ ವಿಶದಪಡಿಸುತ್ತದೆ, ಇಲ್ಲಿರುವ ಅನುರಣನದ ಸುಶಕ್ತ ಉಪಮೆ :

ಕ್ರಮೇಣ ಪ್ರತಿಭಾತ್ಯಾತ್ಮಾ ಯೋಽಸ್ಯಾನುಸ್ವನಸನ್ನಿಭಃ
ಶಬ್ದಾರ್ಥಶಕ್ತಿಮೂಲತ್ವಾತ್ಸೋಽಪಿ ದ್ವೇಧಾ ವ್ಯವಸ್ಥಿತಃ ॥ (೨–೨೦)

(ಈ ಧ್ವನಿಯ ಆತ್ಮವು, ನಾದದ ಅನುರಣನದಂತೆ, ಕ್ರಮವು ಗೋಚರವಾಗುವ ರೀತಿಯಲ್ಲಿ ನಮ್ಮ ಅರಿವಿಗೆ ಬರುವುದು. ಮತ್ತೆ ಅದನ್ನು 'ಶಬ್ದಶಕ್ತಿಮೂಲ' ಮತ್ತು 'ಅರ್ಥಶಕ್ತಿಮೂಲ' ಎಂದು ಎರಡು ಪ್ರಕಾರವಾಗಿ ವ್ಯವಸ್ಥೆ ಮಾಡಲಾಗಿದೆ).

ಬಹುಶಃ ಈ ಅನುರಣನದ ಹೋಲಿಕೆಯಿಂದಲೆ ಪ್ರೇರಣೆಗೊಂಡು, ಅದನ್ನೆ ಬೆಳೆಯಿಸಿ, ಎ. ಆರ್. ಕೃಷ್ಣಶಾಸ್ತ್ರೀ ಅವರು ಧ್ವನಿತತ್ತ್ವವನ್ನು ಹೀಗೆ ಸೊಗಸಾಗಿ ಸ್ಪಷ್ಟೀಕರಿಸುತ್ತಾರೆ : "ಒಂದು ಮರದ ದಿಮ್ಮಿಯನ್ನು ಸಲಾಕಿಯಿಂದ ಹೊಡೆದರೆ 'ಥಡ್' ಎಂದು ಸದ್ದಾಗುತ್ತದೆ ; ಉತ್ತರಕ್ಷಣದಲ್ಲಿಯೇ ಅಡಗಿ ಹೋಗುತ್ತದೆ. ಅದೇ ಒಂದು ಲೋಹದ, ಅದರಲ್ಲಿಯೂ ಬೆಳ್ಳಿಯ ಅಥವಾ ಕಂಚಿನ ಪಾತ್ರೆಯನ್ನು ಹೊಡೆದರೆ, 'ಠಣ್' ಎಂದು

ಸದ್ದಾಗುತ್ತದೆ. ಆ ಸದ್ದು ಅಲ್ಲಿಯೇ ಅಡಗಿಹೋಗುವುದಿಲ್ಲ; ಹರಡುತ್ತದೆ. ಅಲೆ ಅಲೆಯಾಗಿ ಮುಂದುವರಿಯುತ್ತದೆ. 'ಅನುರಣನ'ವಾಗುತ್ತದೆ. ಹಾಗೇ, ಪರ್ವತ ಪ್ರಾಂತದಲ್ಲಿ ಸಿಡಿಯುವ ಸಿಡಿಲು ಮಾರ್ದನಿ ಪಡಿಮಾರ್ದನಿಗೊಟ್ಟು ಕುಡಿವರಿದು ಆ ಪ್ರಾಂತವನ್ನೆಲ್ಲಾ ಗುಡು ಗುಡು ಶಬ್ದದಿಂದ ತುಂಬುತ್ತದೆ. ವಸ್ತುತಃ ಅದು 'ಢಂ !' ಎಂಬ ಒಂದೇ ಏಟು, ಒಂದೇ ಸದ್ದು. ಹೀಗೆ ಸತ್ತ್ವವುಳ್ಳ, ಜೀವವುಳ್ಳ, ಒಂದು ಮಾತೂ ಹತ್ತು ಮಾತಿನ ಕೆಲಸ ಮಾಡುತ್ತದೆ: ಮಾತನಾಡಿ ಆಗದ ಕೆಲಸವನ್ನೂ ಮಾಡುತ್ತದೆ; ಇದು 'ಧ್ವನಿ'ಯ ಮಹತ್ವ.''[3]

ಧ್ವನಿಯೆ ಕಾವ್ಯಕ್ಕೆ ನಿಜವಾದ ಆಭರಣ, ಅದರಿಂದ ಸೌಂದರ್ಯಪ್ರಾಪ್ತಿ ಎಂಬುದನ್ನು ಆನಂದವರ್ಧನ ಒಂದು ಉಪಮೆಯಿಂದ ತಿಳಿಸುತ್ತಾನೆ :

> ವಿಚ್ಛಿತ್ತಿ ಶೋಭಿನೈಕೇನ ಭೂಷಣೇನೇವ ಕಾಮಿನೀ
> ಪದದ್ಯೋತ್ಯೇನ ಸುಕವೇರ್ಧ್ವನಿನಾ ಭಾತಿ ಭಾರತೀ ॥

(ರಮಣೀಯವಾದ ಕಾಂತಿಯಿಂದ ಕೂಡಿದ ಒಂದೇ ಒಂದು ಆಭರಣದಿಂದ ಶೋಭಿಸುವ ಕಾಮಿನಿಯಂತೆ, ಸುಕವಿಯ ವಾಣಿ ಪದಪ್ರಕಾಶಿತವಾದ ಧ್ವನಿಯಿಂದ ಶೋಭಿಸುತ್ತದೆ).

ಮುಂದಿನ ಕಾರಿಕೆಯಲ್ಲಿ ವ್ಯಂಗ್ಯಾರ್ಥಕ್ಕೆ ಲಜ್ಜೆಯ ಹೋಲಿಕೆ ಕೊಟ್ಟಿರುವುದು ಅತ್ಯಂತ ಸ್ವೋಪಜ್ಞವಾಗಿದೆ :

> ಮುಖ್ಯಾ ಮಹಾಕವಿಗಿರಾಮಲಂಕೃತಿ ಭೃತಾಮಪಿ
> ಪ್ರತೀಯಮಾನಚ್ಛಾಯೈಷಾ ಭೂಷಾ ಲಜ್ಜೇವ ಯೋಷಿತಾಮ್ ॥ (೩–೩೭)

(ನಾರಿಯರಿಗೆ ಬೇರೆ ಒಡವೆಗಳಿದ್ದರೂ ಸಹ ಲಜ್ಜೆಯು ಹೇಗೆ ಎಲ್ಲಕ್ಕಿಂತಲೂ ಮಿಗಿಲಾದ ಭೂಷಣವೋ. ಹಾಗೆಯೇ ಮಹಾಕವಿಗಳ ಮಾತುಗಳಿಗೂ ಬೇರೆ ಅಲಂಕಾರಗಳಿದ್ದರೂ ಸಹ ಈ ವ್ಯಂಗ್ಯಾಂಶದ ಛಾಯೆಯೇ ಅತ್ಯುತ್ತಮವಾದ ಭೂಷಣ). ನಾಚಿಕೆಯಿಂದ ಸ್ತ್ರೀಯರ ಚೆಲುವು ಇಮ್ಮಡಿಸುತ್ತದೆ ; ವಿಶಿಷ್ಟವಾಗುತ್ತದೆ. ಅಲ್ಲದೆ, ಲಜ್ಜಾವಸ್ಥೆಯಲ್ಲಿ ನಾರಿಯರು ಬಾಯಿಬಿಟ್ಟು ಮಾತನಾಡುವುದಿಲ್ಲ ; ಮೌನದಿಂದಲೆ ತಮ್ಮ ಇಂಗಿತವನ್ನು ಸೂಚಿಸುತ್ತಾರೆ. ಧ್ವನಿಯೂ ಒಂದು ವಿಧದ ಮೌನ ; ಕಾವ್ಯಲಲನೆಯ ಲಜ್ಜಾಸ್ಥಿತಿ. ಅದು ಮಾತಿಗಿಂತ ಪರಿಣಾಮಕಾರಿ ಹಾಗೂ ಚೇತೋಹಾರಿ.

ವ್ಯಂಗ್ಯಾರ್ಥ ಕಾವ್ಯದ ಜೀವಾಳ ಎಂದಾಕ್ಷಣ ವಾಚ್ಯಾರ್ಥ ಅಮುಖ್ಯವಲ್ಲ. ಅದನ್ನು ದೀವಿಗೆಗೆ ಹೋಲಿಸುತ್ತಾನೆ, ಆನಂದವರ್ಧನ :

> ಆಲೋಕಾರ್ಥೀ ಯಥಾ ದೀಪಶಿಖಾಯಾಂ ಯತ್ನವಾನ್ ಜನಃ
> ತದುಪಾಯತಯಾ ತದ್ವದರ್ಥೇ ವಾಚ್ಯೇ ತದಾದೃತಃ ॥ (೧–೯)

(ನೋಡಬಯಸುವವನು ಅದಕ್ಕೆ ಸಾಧಕವಾದ ದೀವಿಗೆಯನ್ನು ದೊರಕಿಸಲು ಪ್ರಯತ್ನಪಡುವಂತೆಯೇ ವ್ಯಂಗ್ಯಾರ್ಥದಲ್ಲಿ ಆದರವುಳ್ಳವನಾದರೂ ವಾಚ್ಯಾರ್ಥವನ್ನು ಸಂಪಾದಿಸಲು ಮೊದಲು ಪ್ರಯತ್ನಿಸುತ್ತಾನೆ). ಇದೊಂದು ಉತ್ತಮವಾದ ಹೋಲಿಕೆ. ವಾಚ್ಯಾರ್ಥ

ವಿಲ್ಲದೆ ವ್ಯಂಗ್ಯಾರ್ಥವಿಲ್ಲ, ಭಾವವಿಲ್ಲದೆ ರಸ ಹೇಗಿಲ್ಲವೋ ಹಾಗೆ. ವಾಚ್ಯಾರ್ಥ ಸ್ಫುಟವಾಗಿರಬೇಕು, ಸರ್ವಗ್ರಾಹ್ಯವಾಗಿರಬೇಕು ಎಂಬುದು ಆನಂದವರ್ಧನನ ಅಭಿಪ್ರಾಯ. ವಾಚ್ಯಾರ್ಥದ ಬೆಳಕಿನಲ್ಲಿ ವ್ಯಂಗ್ಯಾರ್ಥವನ್ನು ಕಂಡುಕೊಳ್ಳಬೇಕು. ವಾಚ್ಯಾರ್ಥವೆ ಅಸ್ಪಷ್ಟವಾಗಿದ್ದರೆ, ಧ್ವನಿ ದೂರವೆ ಉಳಿಯುತ್ತದೆ. ಎಷ್ಟೋ ಆಧುನಿಕ ಕಾವ್ಯಗಳು ಸಹೃದಯಗಮ್ಯವಾಗದಿರುವುದಕ್ಕೆ ವಾಚ್ಯಾರ್ಥ ಮಬ್ಬುಮಬ್ಬಾಗಿರುವುದೇ ಕಾರಣ. ಧ್ವನಿ ಒಗಟಲ್ಲ. ಅಲಂಕಾರಗಳನ್ನು ಒಂದೆಡೆ ಕಡಗ ಮುಂತಾದ ಆಭರಣಗಳಿಗೆ ಹೋಲಿಸಲಾಗಿದೆ :

ತಮರ್ಥಮವಲಂಬಂತೇ ಯೇಽಂಗಿನಂ ತೇ ಗುಣಾಃ ಸ್ಮೃತಾಃ
ಅಂಗಾಶ್ರಿತಾಸ್ತ್ವಲಂಕಾರಾ ಮಂತವ್ಯಾಃ ಕಟಕಾದಿವತ್ ॥ (೨-೬)

(ಆ ಮುಖ್ಯವಾದ ಸಾರಾರ್ಥವನ್ನು ಯಾವುವು ಅವಲಂಬಿಸಿಕೊಂಡಿರುವುವೋ ಅವೇ 'ಗುಣ'ಗಳೆಂದು ನಾವು ಭಾವಿಸುತ್ತೇವೆ. ಏಕೆ ಅಂಗಗಳನ್ನು ಮಾತ್ರ ಆಶ್ರಯಿಸಿಕೊಂಡಿರುವುವನ್ನು ಕಡಗವೇ ಮೊದಲಾದ ಆಭರಣಗಳಂತೆ, 'ಅಲಂಕಾರ'ಗಳೆಂದು ತಿಳಿಯಬೇಕು). ಈ ಹೋಲಿಕೆ ಅಷ್ಟೇನೂ ಸಮರ್ಪಕವಲ್ಲ ; ಅದು ಆನಂದವರ್ಧನನಿಗೂ ಗೊತ್ತು. ಎಂತಲೇ, ಅಲಂಕಾರಗಳ ಪ್ರಾಶಸ್ತ್ಯವನ್ನು ಅವನು ಬೇರೆ ಕಡೆ ಬಿತ್ತರಿಸಿದ್ದಾನೆ. ಇಲ್ಲಿ ಆನಂದವರ್ಧನನ ಇನ್ನೊಂದು ಒಳ್ಳೆಯ ಉಪಮೆಯಿದೆ :

ಆತ್ಮನೋಽನ್ಯಸ್ಯ ಸದ್ಭಾವೇ ಪೂರ್ವಸ್ಥಿತ್ಯನುಯಾಯ್ಯಪಿ
ವಸ್ತು ಭಾತಿತರಾಂ ತನ್ವ್ಯಾಃ ಶಶಿಚ್ಛಾಯಮಿವಾನನಮ್ ॥ (೪-೧೪)

(ಕಾವ್ಯವಸ್ತುವಿಗೆ ತನ್ನದೇ ಆದ ಬೇರೊಂದು ಆತ್ಮವಿದ್ದಲ್ಲಿ, ಪೂರ್ವವಸ್ತುವಿನ ಸಾಮ್ಯವಿದ್ದರೂ ಕೂಡ ಸುಂದರವಾಗಿಯೇ ಕಾಣಿಸುತ್ತದೆ–ಚಂದ್ರನ ಸಾಮ್ಯವಿರುವ ಚೆಲುವೆಯ ಮುಖವು ಮನೋಹರವಾಗಿ ಕಾಣಿಸುವಂತೆಯೇ).

ವ್ಯಂಗ್ಯಕ್ಕಿಂತ ವಾಚ್ಯವೆ ಪ್ರಧಾನವಾಗಿದ್ದಲ್ಲಿ, ಗುಣೀಭೂತ ವ್ಯಂಗ್ಯದ ಒಂದು ಪ್ರಕಾರ ಉಂಟಾಗುತ್ತದೆ. ಇದಕ್ಕೆ ಆನಂದವರ್ಧನ "ವಿವಾಹ ಪ್ರವೃತ್ತ ಭೃತ್ಯಾನುಯಾಯೀ ರಾಜವತ್" (ಮದುವೆಯಾಗುತ್ತಿರುವ ಸೇವಕನನ್ನು ಹಿಂಬಾಲಿಸುವ ದೊರೆಯಂತೆ) ಎಂಬ ಹೋಲಿಕೆ ಕೊಡುತ್ತಾನೆ. ಇದು ವ್ಯವಹಾರಜ್ಞಾನಜನ್ಯವಾಗಿ, ಬಹು ಸೊಗಸಾಗಿದೆ. ಬೇರೆ ಸಂದರ್ಭಗಳಲ್ಲಿ ದೊರೆ ದೊರೆಯೇ, ಸೇವಕ ಸೇವಕನೇ. ಆದರೆ ಸೇವಕನ ವಿವಾಹ ಸಂದರ್ಭದಲ್ಲಿ ದೊರೆ ತುಸು ಹಿಂದಿರಬೇಕು, ಕೆಳಗಿರಬೇಕು. 'ಧ್ವನ್ಯಾಲೋಕ'ದ ಇತರ ಉಪಮಾನಗಳಲ್ಲಿ ಹೇಗೊ ಹಾಗೆ ಇಲ್ಲಿ ಕೂಡ ಔಚಿತ್ಯತತ್ತ್ವದ ಪ್ರಸಕ್ತಿಯೂ ಉಂಟು.

ಈ ಕಾರಿಕೆಯಲ್ಲಿ ಬಂದಿರುವ ವಸಂತಮಾಸದ ಮರಗಳ ಹೋಲಿಕೆ ಸಮಗ್ರ ಕಾವ್ಯ ಪ್ರಪಂಚದ ಸ್ವರೂಪ, ವೈಶಿಷ್ಟ್ಯಗಳನ್ನು ಅನನ್ಯವಾಗಿ ಮನವರಿಕೆ ಮಾಡಿಕೊಡುತ್ತದೆ :

ದೃಷ್ಟಪೂರ್ವಾ ಅಪಿ ಹ್ಯರ್ಥಾಃ ಕಾವ್ಯೇ ರಸಪರಿಗ್ರಹಾತ್
ಸರ್ವೇ ನವಾ ಇವಾಭಾಂತಿ ಮಧುಮಾಸ ಇವ ದ್ರುಮಾಃ ॥ (೪-೪)

(ಪೂರ್ವಪರಿಚಿತವಾದ ಅರ್ಥಗಳೇ ಆದರೂ ರಸದ ಸಂಪರ್ಕ ಬಂದಾಗ ವಸಂತಮಾಸದಲ್ಲಿ ಕಂಗೊಳಿಸುವ ಮರಗಳಂತೆ ಎಲ್ಲವೂ ಹೊಸದಾಗಿಯೇ ಕಾಣುತ್ತವೆ). ಹಳೆಯ ಮರಗಳೇ ಮಧುಮಾಸದಲ್ಲಿ ಹೂ ತೊಟ್ಟು ಹೊಸವಾಗಿ ಕಂಗೊಳಿಸುತ್ತವೆ. ಹಾಗೆಯೆ, ಹಳೆಯ ಶಬ್ದಗಳು, ಅರ್ಥಗಳು ರಸಸಂಪರ್ಕದಿಂದ ನೂತನವಾಗಿ ಶೋಭಿಸುತ್ತವೆ. ಇದು ಪ್ರತಿಭಾಕಾರ್ಯವೂ ಹೌದು. "ಪ್ರಜ್ಞಾ ನವನವೋನ್ಮೇಷಶಾಲಿನೀ" ಎಂಬ ಭಟ್ಟತೌತನ ಉಕ್ತಿಯನ್ನು ಆನಂದವರ್ಧನನ ಹೋಲಿಕೆಗೆ ಪೂರಕವಾಗಿ ಪರಿಭಾವಿಸಬಹುದು. ಲೋಕಭಾಷೆ ಕಾವ್ಯಭಾಷೆಯಾಗಿ ಮಾರ್ಪಡುವ ಮಾಂತ್ರಿಕ ಕ್ರಿಯೆಯ ರಹಸ್ಯವನ್ನು ಆನಂದವರ್ಧನ ಯಶಸ್ವಿಯಾಗಿ ಭೇದಿಸಿ ಹೊರಗೆಡಹಿದ್ದಾನೆ.

'ಧ್ವನ್ಯಾಲೋಕ'ದ ಉಪಮೆಗಳಲ್ಲಿ ವೈವಿಧ್ಯವಿದೆ : ಪ್ರಕೃತಿ, ಮಾನವಪ್ರಕೃತಿ, ಜೀವನ, ಸಾಹಿತ್ಯ—ಎಲ್ಲ ಕಡೆಗಳಿಂದಲೂ ಅವು ಬಂದಿವೆ. ಆನಂದವರ್ಧನ ಉದ್ಧರಿಸಿರುವ ಸರಸಸುಂದರ ಲಕ್ಷ್ಯಪದ್ಯಗಳನ್ನೂ ಲಕ್ಷಿಸಿ ಹೇಳುವುದಾದರೆ, 'ಧ್ವನ್ಯಾಲೋಕ'ದಲ್ಲಿ ಶಾಸ್ತ್ರಕ್ಕಿಂತ ಮಿಗಿಲಾಗಿ ಒಂದು ಕಾವ್ಯವನ್ನೋದಿದ ಅನುಭವವಾಗುತ್ತದೆ, ಸಹೃದಯರಿಗೆ. "ರಸಸ್ಯೋಪನಿಷತ್ಪರಾ" ಪ್ರತಿಪಾದಕನಾದ ಈ ರಸಿಕ ಆಲಂಕಾರಿಕನದು ಅನ್ವರ್ಥ ನಾಮವೇ ಸರಿ.[3]

## ಅಡಿಟಿಪ್ಪಣಿ

1. ಆನಂದವರ್ಧನ ಸೂಚ್ಯವಾಗಿ ಹೇಳಿರುವುದನ್ನು ಕನ್ನಡ ಕವಿ ನೇಮಿಚಂದ್ರ ವಾಚ್ಯಗೊಳಿಸುತ್ತಾನೆ; ಅವನ 'ಲೀಲಾವತಿ'ಯ ಆ ಪದ್ಯ 'ಧ್ವನ್ಯಾಲೋಕ'ದ ಕಾರಿಕೆಗೆ ವ್ಯಾಖ್ಯಾನದಂತಿದೆ : ಪ್ರಾಸ್ತಾವಿಕವಾಗಿ ಅದನ್ನು ಇಲ್ಲಿ ಉದ್ಧರಿಸಬಹುದು :

ಲಲಿತಂ ಪ್ರತೀಯಮಾನೋ-
ಪಲಕ್ಷಿತಂ ವಾಚ್ಯಮಾದೊಡೊಪ್ಪದು ಕೃತಿ ಪೆ-
ರ್ಮೊಲೆಯಂ ಮೆಱೆದೊಡೆ ಸಲೆ ಕ-
ಣ್ಮಲರಂ ಮೆಱೆಯದೊಡೆ ಯುವತಿಯೇನೊಪ್ಪುವಳೇ (೧.೬೬)

2. ಕೆ. ಕೃಷ್ಣಮೂರ್ತಿಯವರ 'ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ'ದ (ಮೈಸೂರು, ೧೯೬೧) ಮುನ್ನುಡಿ, ಪು. ix.

3. ಈ ಲೇಖನದಲ್ಲಿ ಎತ್ತಿಕೊಟ್ಟಿರುವ 'ಧ್ವನ್ಯಾಲೋಕ'ದ ಶ್ಲೋಕಗಳ ಅನುವಾದ ಕೆ. ಕೃಷ್ಣಮೂರ್ತಿಯವರದು.

## ಎಚ್. ತಿಪ್ಪೇರುದ್ರಸ್ವಾಮಿ

ಭಾರತೀಯ ಕಾವ್ಯತತ್ತ್ವ ವಿವೇಚನೆಯಲ್ಲಿ ಮೀಮಾಂಸೆಯೇ ಪ್ರಧಾನವಾಗಿ, ವಿಮರ್ಶೆ ತೀರಾ ದೂರವಾಯಿತು – ಎಂಬ ಮಾತು ಮತ್ತೆ ಮತ್ತೆ ಕೇಳಿಬರುತ್ತದೆ. ಇದು ನಿಜವೂ ಹೌದು. ನಮ್ಮ ಕಾವ್ಯಾರ್ಥಚಿಂತನೆಯ ದೀರ್ಘ ಇತಿಹಾಸದಲ್ಲಿ ಅಲ್ಲಿ ಇಲ್ಲಿ ಬರುವ ವಿಮರ್ಶೆಯ ಹೊಳಹನ್ನು ಬಿಟ್ಟರೆ, ಉದ್ದಕ್ಕೂ ಕಾಣುವುದು ಸಿದ್ಧಾಂತಪ್ರಧಾನವಾದ ಚರ್ಚೆ, ಜಿಜ್ಞಾಸೆ, ಮಥನ ತೀರ್ಮಾನಗಳನ್ನು. ಇವುಗಳನ್ನು ಸಾಹಿತ್ಯಕೃತಿಗಳಿಗೆ ಅನ್ವಯಿಸಿ ನೋಡುವ ವಿಮರ್ಶೆ ಬೆಳೆಯಲೇ ಇಲ್ಲ. ಧ್ವನಿತತ್ತ್ವವನ್ನು ಅತ್ಯಂತ ಸೂಕ್ಷ್ಮವಾಗಿ ವಿಶ್ಲೇಷಿಸಿ ವಿವೇಚಿಸಿದ ಆನಂದವರ್ಧನನಿಗೂ ಈ ಮಾತು ಅನ್ವಯಿಸುತ್ತದೆ. ನಮ್ಮ ಕಾವ್ಯಗಳ ಉತ್ತುಂಗ ಶಿಖರಸದೃಶ ಸನ್ನಿವೇಶಗಳನ್ನು ಆರಿಸಿಕೊಂಡು ಅವುಗಳನ್ನು ವಿಮರ್ಶಿಸುವುದರ ಮೂಲಕ ಮಹಾಕವಿಯ ವಾಣಿಯಲ್ಲಿರುವ ಪ್ರತೀಯಮಾನ ಧ್ವನಿಪರಂಪರೆಯ ಸಾಧ್ಯತೆಗಳನ್ನೂ ಸಾಧನೆಗಳನ್ನೂ ಸಿದ್ಧಪಡಿಸಬಹುದಾಗಿತ್ತು. ಆದರೆ ಆ ವಿಮರ್ಶಾತ್ಮಕ ದೃಷ್ಟಿ ಅಲ್ಲಿ ಕಾಣುವುದಿಲ್ಲ. ನಮ್ಮ ಇತರ ಮೀಮಾಂಸಕರಲ್ಲಿಯೂ ಅದು ಬೆಳೆದು ಬರಲಿಲ್ಲ. ಇದಕ್ಕೆ ಅಪವಾದಾತ್ಮಕವಾದ ಒಂದೆರಡು ಹೆಸರುಗಳೆಂದರೆ ಕುಂತಕ ಮತ್ತು ಕ್ಷೇಮೇಂದ್ರ. ಅದರಲ್ಲಿಯೂ ಕುಂತಕ, ಕ್ಷೇಮೇಂದ್ರನಿಗಿಂತ ಹೆಚ್ಚು ವ್ಯಾಪಕವಾಗಿ ಹಿಂದಿನ ಕವಿಗಳ ಒಳ್ಳೆಯ ಉದಾಹರಣೆಗಳನ್ನು ಬಳಸಿಕೊಳ್ಳುತ್ತಾನೆ; ಮತ್ತು ಅದಕ್ಕೆ ಹೊಂದಿಕೊಳ್ಳುವಂತೆ ತನ್ನ ಸಿದ್ಧಾಂತದ ಸೂಕ್ಷ್ಮತೆಯನ್ನು ರೂಪಿಸಿಕೊಳ್ಳುತ್ತಾನೆ. ಆತ ಸಿದ್ಧಾಂತಪ್ರತಿಪಾದಕರಲ್ಲಿ ವಿಮರ್ಶಕ; ವಿಮರ್ಶಕರಲ್ಲಿ ಸಿದ್ಧಾಂತಪ್ರತಿಪಾದಕ. ಆದ್ದರಿಂದಲೇ ಆತನ

ಪರಿಕರಗಳೂ ಸಿದ್ಧಾಂತರೂಪವಾಗಿ ತಮ್ಮ ತಮ್ಮ ಸ್ಥಾನವನ್ನು ಸ್ಥಾಪಿಸಿಕೊಂಡಿದ್ದುವು. ಆದರೆ ಕಾವ್ಯದ ಮೂಲಸ್ವರೂಪವನ್ನು ಗಮನಿಸಿ, ಈ ಎಲ್ಲವುಗಳಲ್ಲಿ ಒಂದು ಸಮಾನ ಸೂತ್ರವನ್ನು ರೂಪಿಸಿ ಅದರದರ ಸ್ಥಾನವನ್ನು ನಿರ್ದೇಶಿಸುವ ಪ್ರಯತ್ನ ನಡೆಯಬೇಕಾಗಿತ್ತು. ಆನಂದವರ್ಧನನ ಧ್ವನಿಸಿದ್ಧಾಂತದಲ್ಲಿ ಈ ದೃಷ್ಟಿಯನ್ನು ಕಾಣುತ್ತೇವೆ. ಧ್ವನಿಗೆ ಸಂಗತವಾಗಿ ಉಳಿದ ಪರಿಕರಗಳನ್ನೆಲ್ಲಾ ಆತ ಅಲ್ಲಿ ಸಮನ್ವಯಗೊಳಿಸುತ್ತಾನೆ. ಆದರೆ ಅದನ್ನೆ ಅತಿಯಾಗಿ ಬೆಳೆಸಿದಾಗ ಅದಕ್ಕೊಂದು ಮಿತಿ ಉಂಟಾಗುತ್ತದೆ. ಕುಂತಕ ಇದನ್ನು ಗಮನಿಸಿ ಆ ಮಿತಿಯನ್ನು ನಿವಾರಿಸಿ ಕಾವ್ಯಸೌಂದರ್ಯವನ್ನು ಕಂಡುಕೊಳ್ಳುವ ಒಂದು ವ್ಯಾಪಕ ಪರಿಭಾವನೆಯನ್ನು ಪರಿಣಾಮಕಾರಿಯಾಗಿ ಪ್ರತಿಪಾದಿಸಿದ್ದಾನೆ.

ಯಾವುದು ಸುಸಂಸ್ಕೃತ ಸಹೃದಯನ ಮನಸ್ಸನ್ನು ಆಕರ್ಷಿಸುತ್ತದೆಯೋ, ಅದೇ–ಅಂತಹ ಅಭಿವ್ಯಕ್ತಿಯೇ–ಕಾವ್ಯ ಎಂಬ ದೃಷ್ಟಿ ಕುಂತಕನದು. ಧ್ವನಿಯಿಂದ ಅದು ಪರಿಣಾಮಕಾರಿಯಾಗಿ ಸಾಧ್ಯವಾಗುತ್ತದೆ ಎಂದು ಅದರ ಮಹತ್ವವನ್ನು ಆತ ಒಪ್ಪುತ್ತಾನೆ. ಆದರೆ ಅದೊಂದೇ ಕಾವ್ಯದ ಒರೆಗಲ್ಲೆಂದು ಹೇಳಲಾಗದು. ಇನ್ನೂ ಅನೇಕ ಅಂಶಗಳಿಂದ ಕಾವ್ಯತ್ವ ಸಿದ್ಧಿಸಬಹುದು. ಗುಣ, ಅಲಂಕಾರ, ಧ್ವನಿ, ರಸಗಳೂ ಅದರಲ್ಲಿ ಸೇರುತ್ತವೆ. ಇವೂ ಸೇರಿದಂತೆ ಕಾವ್ಯದ ಸಾಧ್ಯತೆಗಳನ್ನೆಲ್ಲಾ ಒಳಗೊಳ್ಳಬಲ್ಲಂತಹ ವ್ಯಾಪಕತತ್ವವೊಂದನ್ನು ಕುಂತಕ ಕಾಣಲು ಪ್ರಯತ್ನಿಸಿದ; ಮತ್ತು ಅದನ್ನು 'ವಕ್ರೋಕ್ತಿ' ಎಂದು ಕರೆದ.

'ವಕ್ರೋಕ್ತಿ' ಎಂಬ ಮಾತು ಹಳೆಯದೇ. ಭಾಮಹನಲ್ಲೇ ಅದು ಬರುತ್ತದೆ. ಉಪಮೆ, ರೂಪಕ ದೀಪಕಾದಿ ಎಲ್ಲಾ ಅಲಂಕಾರಗಳನ್ನು ನಿರ್ದೇಶಿಸುವ ಸಾಮಾನ್ಯ ಪದವನ್ನಾಗಿ ಆತ ಅದನ್ನು ಬಳಸಿದ್ದ. ಇತರ ಆಲಂಕಾರಿಕರೂ ಅದನ್ನು ಪರಿಮಿತವಾದ ಅರ್ಥದಲ್ಲಿಯೇ ಕಂಡರು. ಆದರೆ ಕುಂತಕ ಅದಕ್ಕೆ ಕೊಟ್ಟ ಅರ್ಥವೇ ಬೇರೆ. ಧ್ವನಿ ರಸ ಅಲಂಕಾರಗಳನ್ನೂ ಒಳಗೊಂಡ ಕಾವ್ಯಾಭಿವ್ಯಕ್ತಿಯ ಕಲಾತ್ಮಕ ಸೌಂದರ್ಯ–ಎಂಬ ಅರ್ಥವನ್ನು ಆತನಲ್ಲಿ ಅದು ಪಡೆಯಿತು. ಕಾವ್ಯದಲ್ಲಿ ಸುಂದರವಾದದ್ದು ಏನಿದೆಯೋ ಅದೆಲ್ಲಾ 'ವಕ್ರೋಕ್ತಿ'ಯೇ. ಅದು ಕೆಲವು ವೇಳೆ 'ಧ್ವನಿ'ಯಿಂದ ಬಂದಿರಬಹುದು; ಇನ್ನು ಕೆಲವು ವೇಳೆ ಗುಣ, ಅಲಂಕಾರ ರೀತಿಗಳಿಂದ ಸಂಭವಿಸಿರಬಹುದು. ಇದಕ್ಕೆಲ್ಲಾ ಮೂಲಕಾರಣವೇನೆಂದರೆ, 'ಕವಿಮನೋವ್ಯಾಪಾರ.' ಕವಿಯ ಮನಸ್ಸಿನ ಸೌಂದರ್ಯಾನುಭವದಿಂದ ಕಾವ್ಯಸೌಂದರ್ಯ ಸೃಷ್ಟಿಯಾಗುತ್ತದೆ. ಇದನ್ನೇ "ಕವಿಮನೋವ್ಯಾಪಾರ ವಕ್ರತೆ" ಎಂದು ಕರೆಯುತ್ತಾನೆ, ಕುಂತಕ.

'ವಕ್ರತೆ' ಎಂಬ ಮಾತು ವಿಶಿಷ್ಟವಾದ ಮತ್ತು ವ್ಯಾಪಕವಾದ ಅರ್ಥವನ್ನು ಕುಂತಕನಲ್ಲಿ ಪಡೆಯಿತು. ಕವಿ ತನ್ನ ವಿಶಿಷ್ಟ ಪ್ರತಿಭಾಶಕ್ತಿಯಿಂದ ಪಡೆಯುವ ಲೋಕೋತ್ತರ ಸೌಂದರ್ಯಾನುಭವವನ್ನು ಈ ಮಾತು ಒಳಗೊಳ್ಳುತ್ತದೆ. ಈ ಸೌಂದರ್ಯಾನುಭವದಿಂದ ದೀಪ್ತವಾದ ಕವಿಕರ್ಮವೇ ಕಾವ್ಯ. ಕೇವಲ ಪದವಿನ್ಯಾಸವಾಗಲಿ, ಅಲಂಕಾರ ರೀತಿಗಳಾಗಲಿ, ಎಷ್ಟೇ ಆಕರ್ಷಕವಾಗಿದ್ದರೂ ಕಾವ್ಯವಾಗಲಾರದು. ಕವಿಮನೋವ್ಯಾಪಾರ ವಕ್ರತೆಯಿಂದ ಅದು ಮೂಡಿಬರಬೇಕು. ಈ ವಕ್ರತೆಯಿಂದ ವಕ್ರೋಕ್ತಿ ಸಿದ್ಧವಾಗುತ್ತದೆ.

ಕವಿವ್ಯಾಪಾರ ವಕ್ರತೆಯೇ ಉಕ್ತಿವಕ್ರತೆಗೆ ಕಾರಣವಾಗುತ್ತದೆ. ಎಂದರೆ ಕವಿಯ ಅನುಭವದ ಅತಿಶಯತೆಯಿಂದ ಉಕ್ತಿವಕ್ರತೆ ಮೂಡಿಬರುತ್ತದೆ – ಎಂದು ವಕ್ರೋಕ್ತಿಯನ್ನು ಅಂತರಂಗದ ಕಡೆಗೆ ನಿರ್ದೇಶಿಸಿದ್ದಾನೆ.

ಈ ಹಿನ್ನೆಲೆಯಲ್ಲಿ ಕಾವ್ಯಾಲಂಕಾರಗಳನ್ನು ಬಹಳ ಅರ್ಥವತ್ತಾಗಿ ವಿವೇಚಿಸುತ್ತಾನೆ, ಕುಂತಕ. ವಕ್ರಕವಿವ್ಯಾಪಾರದಿಂದ ಮೂಡಿಬಂದ ಕಾವ್ಯದಲ್ಲಿ ಅಲಂಕಾರಗಳು ಸಹಜವಾಗಿಯೇ ಮೈದಳೆಯುತ್ತವೆ. ಭಾಮಹಾದಿಗಳು ಹೇಳುವಂತೆ ಕಾವ್ಯಶರೀರದ ಮೇಲೆ ತಂದು ಜೋಡಿಸಿದ ಭೂಷಣಾದಿಗಳಂತೆ ಅವು ಬರುವುದಿಲ್ಲ. ಅವು ಕಾವ್ಯದೊಡನೆ ಸಾಪಯುವ ಸಂಬಂಧವನ್ನು ಪಡೆದು ಹುಟ್ಟಿಬರುತ್ತವೆ. ವಾಸ್ತವವಾಗಿ ಅವು ಅಲಂಕಾರಗಳೇ ಅಲ್ಲ : ಕಾವ್ಯದ ಸಹಜಸ್ವರೂಪವೇ ಅದು. ನವಿಲು ಅಲಂಕರಿಸಿಕೊಂಡಿದೆ ಎಂದು ಹೇಳುವ ಮಾತೇ ಸರಿಯಲ್ಲ. ಅದು ಅಲಂಕರಿಸಿಕೊಂಡಿಲ್ಲ ; ಅದರ ಸಹಜಸೌಂದರ್ಯವೇ ಹಾಗಿದೆ. ಅದನ್ನು ನೋಡಿ ಕೆಂಬೂತವೂ ಗರಿಗಳನ್ನು ಕಟ್ಟಿಕೊಂಡರೆ ಅದು ಕೃತಕವಾದ ಅಲಂಕಾರವಾಗುತ್ತದೆ. ಬುದ್ಧಿಪೂರ್ವಕವಾಗಿ ಚಮತ್ಕಾರಕ್ಕಾಗಿ ತರುವ ಅಲಂಕಾರಗಳು ಹಾಗಾಗುತ್ತವೆ. ''ವಕ್ರಕವಿ ವ್ಯಾಪಾರ''ದಿಂದ ಅಥವಾ ''ಕವಿಮನೋವ್ಯಾಪಾರ ವಕ್ರತೆ''ಯಿಂದ ಮೂಡಿ ಬರುವ ಅಲಂಕಾರಗಳು ಸಹಜೋಕ್ತಿಗಳಾಗುತ್ತವೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಅಲಂಕಾರಗಳ ವಿಚಾರದಲ್ಲಿ ಆತ ಕೊಟ್ಟ ವಿನೂತನ ದೃಷ್ಟಿ. ಅಲಂಕಾರಗಳನ್ನು ಆತ ''ಅಭಿಧಾಪ್ರಕಾರ ವಿಶೇಷ''ಗಳೆಂದು ಹೇಳುತ್ತಾನೆ. 'ವೈಚಿತ್ರ್ಯ' ಅಥವಾ 'ವಿಚ್ಛಿತ್ತಿ'ಯಿಂದ ಕವಿಪ್ರತಿಭೆ, ಇವುಗಳನ್ನು ನಿರ್ಮಿಸುತ್ತದೆ. ಇವು ಆನಂದವರ್ಧನ ಹೇಳುವಂತೆ ಎಲ್ಲ ಸಂದರ್ಭಗಳಲ್ಲಿಯೂ 'ರಸಾಕ್ಷಿಪ್ತ'ವಾಗಿ ಧ್ವನಿಸಮನ್ವಿತವಾಗಿಯೇ ಇರಬೇಕೆಂದು ಕುಂತಕ ಹೇಳುವುದಿಲ್ಲ. ಎಷ್ಟೋ ವೇಳೆ ಯಾವುದೇ ಧ್ವನಿ ಇಲ್ಲದಿದ್ದರೂ ಕೇವಲ ವಾಗ್‌ವಿಕಲ್ಪಗಳಾಗದೆ ಸೌಂದರ್ಯಾನುಭವಕ್ಕೆ ಸಾಧನವಾಗುವುದನ್ನು ನೋಡಬಹುದು. ಮುಖ್ಯವಾಗಿ ಗಮನಿಸಬೇಕಾದುದೆಂದರೆ ಕವಿಯ ಮೂಲ ಅನುಭವದಿಂದ ಅವು ಮೂಡಿಬಂದಿರಬೇಕು. ಹೊರಗಿನಿಂದ ತಂದು ಕಟ್ಟಿದ ಕೃತಕ ಅಲಂಕಾರಗಳಾಗಬಾರದು. ಒಮ್ಮೊಮ್ಮೆ ಸಹಜ ಅಲಂಕಾರಗಳಿಗಿಂತಲೂ ಕೇವಲ ಪಾಂಡಿತ್ಯದಿಂದ ಮೂಡಿದ ಕೃತಕ ಅಲಂಕಾರಗಳು ಪ್ರಬಲವಾಗಿ ಕಾಣಬಹುದು. ಅಂತಹವು ''ಆಕಾರ ಏವ ಶೂರಾಃ'' (ಆಕಾರಮಾತ್ರದಿಂದ ಶೂರರಾಗಿ ಕಾಣುವವರು) ಎಂಬಂತೆ ಎನ್ನುತ್ತಾನೆ. ಪರಾಕ್ರಮದ ಪರೀಕ್ಷೆಯ ಸಂದರ್ಭದಲ್ಲಿ ಅವರ ಹೇಡಿತನ ಹೊರಬೀಳುತ್ತದೆ. ಹಾಗೆ ಅನೇಕ ಅಲಂಕಾರಗಳು ಹೊರನೋಟದ ಚಮತ್ಕಾರದಿಂದ ಗಮನ ಸೆಳೆದರೂ ಆಂತರಿಕ ಅನುಭವದ ಒರೆಗಲ್ಲಿನ ಮೇಲೆ ಉಜ್ಜಿದಾಗ ಅವುಗಳ ಬಣ್ಣ ಬಯಲಾಗುತ್ತದೆ.

ಆಧುನಿಕ ವಿಮರ್ಶೆಯ ಸಂದರ್ಭದಲ್ಲಿಯೂ ಕುಂತಕನ ಈ ಅಭಿಪ್ರಾಯಗಳು ತುಂಬಾ ಪ್ರಸ್ತುತವಾಗಿ ಕಾಣುತ್ತವೆ. ಆಧುನಿಕ ಕವಿಗಳು ತಮ್ಮ ಕಾವ್ಯರಚನೆಯಲ್ಲಿ ಅಂತೆಯೇ ವಿಮರ್ಶಕರು ತಮ್ಮ ವಿಶ್ಲೇಷಣೆ ವಿವೇಚನೆಗಳಲ್ಲಿ, ಅಲಂಕಾರಗಳಿಗೆ ಅಥವಾ ಕಾವ್ಯಪ್ರತಿಮೆಗಳಿಗೆ ವಿಶೇಷ ಮಹತ್ವವನ್ನು ಕೊಟ್ಟಿದ್ದಾರೆ. ''It is better to create one

poetic image instead of writing voluminous works"—ಎಂಬಂತಹ ಎಜ್ರಾ ಪೌಂಡನ ಮತ್ತು ಇತರ ಅನೇಕ ವಿಮರ್ಶಕರ ಮಾತುಗಳಲ್ಲಿ ಇದನ್ನು ಕಾಣುತ್ತೇವೆ. ಇದು ಅತಿಯಾಗಿ ಅನೇಕ ವೇಳೆ ಕುಂತಕ ಹೇಳುವಂತೆ ಕವಿಮನೋವ್ಯಾಪಾರ ವಕ್ರತೆಯಿಂದ ಮೂಡಿ ಬರುವುದಕ್ಕೆ ಬದಲಾಗಿ ಹೊರಸೋಟದ ಚಮತ್ಕಾರದಿಂದ "ಆಕಾರ ಏವ ಶೂರಾಃ" ಆಗಿ ಗಮನ ಸೆಳೆಯುತ್ತವೆ. ಕೆಲವು ವೇಳೆ ತೀರಾ ಖಾಸಗಿಪ್ರತಿಮೆಗಳು (Private images) ಅಥವಾ ಭಗ್ನಪ್ರತಿಮೆಗಳಾಗಿ ಪರಿಣಮಿಸುತ್ತವೆ. ಹೀಗೆ ಕೃತಕವಾಗಿ ಕಟ್ಟಿಕೊಂಡ ಅಥವಾ ಸಹಜವಾಗಿ ಮೂಡಿ ಬಂದ ಅಲಂಕಾರಗಳಲ್ಲಿರುವ ತಾರತಮ್ಯ ಗಳನ್ನು ವಿಮರ್ಶಕ ಗುರುತಿಸಿ ಕಾವ್ಯಾನುಭವವನ್ನು ಒರೆಗೆ ಹಚ್ಚಿ ನೋಡುವಲ್ಲಿ ಕುಂತಕನ ಪ್ರತಿಪಾದನೆ ಒಳ್ಳೆಯ ವಿಮರ್ಶೆಯ ದೃಷ್ಟಿಧೋರಣೆಗಳನ್ನು ರೂಪಿಸಿಕೊಳ್ಳಲು ಸಹಾಯಕ ವಾಗುತ್ತದೆ. ಇವರ ಜೊತೆಗೆ ಆತನೇ ಆರಿಸಿ ಕೊಡುವ ಉದಾಹರಣೆಗಳು ಮತ್ತು ಅವು ಗಳಿಗೆ ಆತ ಕೊಡುವ ವಿವರಣೆಗಳು ಒಳ್ಳೆಯ ವಿಮರ್ಶಕನಾಗಿಯೂ ಆತನನ್ನು ಎತ್ತಿ ತೋರಿಸುತ್ತವೆ; ವಿಮರ್ಶೆಯ ಸೂತ್ರಗಳನ್ನು ಸೂಚಿಸುತ್ತವೆ.

ಕುಂತಕನ ವಕ್ರೋಕ್ತಿಯ ಈ ಪರಿಕಲ್ಪನೆ ಅಲಂಕಾರಗಳ ವಿವೇಚನೆಯನ್ನು ಪೂರ್ಣ ಗೊಳಿಸಿದಂತೆ ರೀತಿಸಿದ್ಧಾಂತವನ್ನೂ ಸರಿಯಾದ ನಿಲುವಿನಲ್ಲಿ ನಿಂತು ಪರಿಶೀಲಿಸಿತು. ಆ ವಿಚಾರದಲ್ಲಿ ಕುಂತಕನ ಕೊಡುಗೆ ವಿಶಿಷ್ಟವಾದುದು. ಕೆ. ಕೃಷ್ಣಮೂರ್ತಿ ಅವರು "Studies in Indian Aesthetics and Criticism" ಎಂಬ ತಮ್ಮ ಕೃತಿಯಲ್ಲಿ ಇದನ್ನು ವಿವರವಾಗಿ ವಿವೇಚಿಸಿದ್ದಾರೆ.[1] ರೀತಿ ಮಾರ್ಗಗಳನ್ನು ಕುರಿತಂತೆ ಕುಂತಕ ಹೇಳುವ ಮಾತುಗಳು ಸಾರ್ವಕಾಲಿಕವಾದುವು ಮತ್ತು ಸರ್ವಸಮ್ಮತವಾದುವೆಂದು ಹೇಳಬಹುದು. ಕಾವ್ಯವೆನ್ನುವುದು ಭಾಷೆಯಲ್ಲಿಯೇ ಅಭಿವ್ಯಕ್ತಗೊಳ್ಳಬೇಕು. ಆಯಾ ಭಾಷೆಯ ವಿಶಿಷ್ಟ ಪದರಚನಾವಿನ್ಯಾಸವೇ ಕಾವ್ಯದ ಸಾರಸರ್ವಸ್ವ. 'ರೀತಿಯೇ ಕಾವ್ಯದ ಆತ್ಮ' ಎಂದು ವಾಮನ ಹೇಳಿದ ಮಾತು ಅದಕ್ಕೊಂದು ವಿಶಿಷ್ಟನೆಲೆಯನ್ನು ತಂದುಕೊಟ್ಟಿತು. ಅವನಿಗಿಂತ ಹಿಂದೆ ಮತ್ತು ಆತನ ಅನಂತರವೂ ರೀತಿ ಮಾರ್ಗಗಳನ್ನು ಕುರಿತ ಚರ್ಚೆ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಉದ್ದಕ್ಕೂ ನಡೆಯುತ್ತಲೇ ಬಂದಿದೆ.

ದಂಡಿ "ಇಷ್ಟಾರ್ಥ ವ್ಯವಚ್ಛಿನ್ನ ಪದಾವಲೀ" ಎಂದು ಅದನ್ನು ಹೇಳಿದರೆ, ವಾಮನ "ವಿಶಿಷ್ಟಪದರಚನಾ" ಎನ್ನುತ್ತಾನೆ. ರೀತಿ ಎನ್ನುವುದು ಕೇವಲ ಪದವಿನ್ಯಾಸವಲ್ಲ, 'ವಿಶಿಷ್ಟ' ಪದರಚನೆ. ಆ 'ವಿಶಿಷ್ಟ' ಎನ್ನುವ ಮಾತಿನಲ್ಲಿ ವಾಮನ ಕಾವ್ಯದ ಅಂತರಂಗ ವನ್ನು ಸೂಚಿಸುತ್ತಾನೆ. ಈ 'ಅಂತರಂಗ', ಪದರಚನೆಯ ಜೊತೆಜೊತೆಯಲ್ಲಿಯೇ ಬೆಳೆದು ಬರಬೇಕಾದುದು. ನಿಜವಾದ ಕಲಾಕೃತಿಯಲ್ಲಿ ರೂಪ (Form) ಮತ್ತು ವಸ್ತು (Content) ಬೇರೆಬೇರೆಯಾಗಿ ಬರುವುದಿಲ್ಲ. ಈ ಎರಡೂ ಜೊತೆಜೊತೆಯಲ್ಲಿಯೇ ಬೆಳೆಯುತ್ತಾ ಕಲಾಕೃತಿ ಸಿದ್ಧವಾಗುವುದು. ರೀತಿಯನ್ನು 'ಆತ್ಮ' ಎಂದು ಕರೆಯುವುದರಲ್ಲಿ ಈ ದೃಷ್ಟಿಯಿದೆ. ದೇಹದ ಕಣಕಣದಲ್ಲಿಯೂ ಆತ್ಮ ವ್ಯಾಪಿಸಿರುವಂತೆ, ಕಾವ್ಯದ ಆತ್ಮ ಅದರ ಅಭಿವ್ಯಕ್ತಿಯ ಒಂದೊಂದು ಸಾಲಿನಲ್ಲೂ ಇದೆ. ಅನುಭವ ಮತ್ತು ಅಭಿವ್ಯಕ್ತಿ

ಗಳೆರಡೂ ಪರಸ್ಪರ ಬೆಳೆಯುತ್ತಾ ಕೃತಿ ಪೂರ್ಣಗೊಳ್ಳುತ್ತದೆ. ಕ್ರೋಚೆಯ Intuition Expression ಸಿದ್ಧಾಂತದ ಮೂಲತತ್ತ್ವವೂ ಇದೆ. ಈ ದೃಷ್ಟಿಯಿಂದ ನೋಡಿದಾಗ ವಾಮನನ ರೀತಿಸಿದ್ಧಾಂತ ಹೊರನೋಟಕ್ಕೆ ಕಾಣುವಷ್ಟು ಸ್ಥೂಲವಾದುದಲ್ಲ. ಅದು ರಿಂದಲೇ ವಾಮನ ಹತ್ತುಗುಣಗಳನ್ನು ಶಬ್ದಗುಣ ಅರ್ಥಗುಣಗಳೆಂದು ಇಪ್ಪತ್ತು ಗುಣ ಗಳನ್ನಾಗಿ ಮಾಡಿಕೊಂಡು, ಈ ಎರಡರ ಸೂಕ್ಷ್ಮ ಸಂಬಂಧದಿಂದ 'ರೀತಿ' ಅಸ್ತಿತ್ವದಲ್ಲಿ ವಾಗುತ್ತದೆಂಬುದನ್ನು ತೋರಿಸಿಕೊಡಲು ಪ್ರಯತ್ನಿಸುತ್ತಾನೆ.

ಇಷ್ಟಾದರೂ ರೀತಿಸಿದ್ಧಾಂತದ ಬೆಳವಣಿಗೆ ಕೆಲವು ಗುಣಗಳಿಂದ ಕೂಡಿ ಶಬ್ದ ಅರ್ಥ ಗಳಿಗೆ ಸಂಬಂಧಿಸಿದ ಬಾಹ್ಯವಿವೇಚನೆಯೇ ಆಗಿ ಉಳಿಯಿತು. ಅಲಂಕಾರಗಳಂತೆ ರೀತಿಯೂ ಬಾಹ್ಯ ಪರಿಕರವಾಗಿಯೇ ಉಳಿಯಿತು. ಆದ್ದರಿಂದ ಧ್ವನಿಕಾರರು ಇದನ್ನು "ವಾಚ್ಯ ವಾಚಕ ಚಾರುತ್ವ ಹೇತು" ಎಂದು ಕರೆದರು. ಧ್ವನಿಸಿದ್ಧಾಂತದಲ್ಲಿ ಕಾವ್ಯವನ್ನು ನೋಡುವ ದೃಷ್ಟಿಯೇ ಬದಲಾಯಿತು. ಕಾವ್ಯದಲ್ಲಿ ಧ್ವನಿ ಮೂಲಕ ರಸ ಕೇಂದ್ರಬಿಂದುವಾಗಿ, ಉಳಿದುವೆಲ್ಲಾ ಅದರ ಸುತ್ತ ತಿರುಗುವ ಪರಿಕರಗಳಾದುವು. ಕುಂತಕ ಇಲ್ಲಿಂದ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಧ್ವನಿಗೂ ಕಾರಣವಾಗುವ ಕಾವ್ಯದ ಮೂಲಭೂತ ಅಂಶ ವೊಂದನ್ನು ಗುರುತಿಸುತ್ತಾನೆ. ಅದನ್ನೇ 'ವಕ್ರತೆ' ಎಂದು ಕರೆಯುತ್ತಾನೆ. ಅದಕ್ಕನುಗುಣ ವಾಗಿ ಅಲಂಕಾರಗಳ ವ್ಯಾಪ್ತಿ ಸ್ವರೂಪಗಳನ್ನು ನಿರ್ಧರಿಸಿದಂತೆ ರೀತಿಯನ್ನು ಈ ಹಿನ್ನೆಲೆ ಯಲ್ಲಿ ಪರಿಶೀಲಿಸುತ್ತಾನೆ.

ರೀತಿಯನ್ನು ವೈದರ್ಭಿ, ಗೌಡಿ ಮೊದಲಾಗಿ ಭೌಗೋಳಿಕವಾಗಿ ಹೆಸರಿಸುವುದನ್ನು ಕೈಬಿಟ್ಟು ಕವಿಮನೋಧರ್ಮಕ್ಕೆ ಇದನ್ನು ಸಂಗತಗೊಳಿಸಿದ್ದು ಕುಂತಕ ಮಾಡಿದ ಬಹಳ ಮುಖ್ಯವಾದ ಬದಲಾವಣೆ. ಕಾವ್ಯ ಎನ್ನುವುದು ಕವಿಕರ್ಮ; ಅದು ಕವಿಮನೋಧರ್ಮಕ್ಕೆ ಸಂಬಂಧಿಸಿದ್ದು ಎಂಬುದು ಈತನ ದೃಷ್ಟಿ. ಎಷ್ಟು ಜನ ಕವಿಗಳೋ ಅಷ್ಟು ಕಾವ್ಯಮಾರ್ಗ ಗಳಿವೆ ಎಂದು ಹೇಳುತ್ತಾನೆ. 'ರೀತಿ'ಯನ್ನು ಮಾರ್ಗ ಎಂದು ಕರೆಯುತ್ತಾನೆ. ಆತ ಹೇಳುವ ಈ ಮಾತುಗಳನ್ನು ನೋಡಬಹುದು : "ಯದ್ಯಪಿ ಕವಿಸ್ವಭಾವ ಭೇದ ನಿಬಂಧನತ್ವಾತ್ ಅನಂತ ಭೇದ ಭಿನ್ನತ್ವಂ ಅನಿವಾರ್ಯಂ.ತಥಾಪಿ ಪರಿಸಂಖ್ಯಾತುಂ ಅಶಕ್ಯತ್ವಾತ್ ಸಾಮಾನ್ಯೇನ ತ್ರೈವಿಧ್ಯಂ ಏವ ಉಪಪದ್ಯತೇ" (ಕವಿಸ್ವಭಾವಭೇದದಿಂದ ಕಾವ್ಯದಲ್ಲಿ ಅನಂತ ಭೇದ ಗಳು ಅನಿವಾರ್ಯವಾದರೂ ಅವುಗಳಲ್ಲಿ ಮುಖ್ಯವಾಗಿ ಮೂರನ್ನು ಗುರುತಿಸಬಹುದು—) ಎಂದು ಅವುಗಳನ್ನು ಹೀಗೆ ಹೆಸರಿಸುತ್ತಾನೆ : "ಸುಕುಮಾರ ಮಾರ್ಗ", "ವಿಚಿತ್ರಮಾರ್ಗ" ಮತ್ತು "ಮಧ್ಯಮಮಾರ್ಗ". ಈ ಮೂರರಲ್ಲಿ ಯಾವುದೇ ಒಂದು ಸರ್ವಶ್ರೇಷ್ಠವೆಂದೂ ಉಳಿದುವು ಸ್ವಲ್ಪ ಕಡಮೆಯೆಂದೂ ಭಾವಿಸಬೇಕಾಗಿಲ್ಲ. ಈ ಮೂರು ಮನೋಧರ್ಮದ ಕಾವ್ಯಗಳೂ ಶ್ರೇಷ್ಠವಾಗಿದ್ದು, ಆಹ್ಲಾದಕಾರಕವಾಗಬಲ್ಲುವು. ಅದು ಕವಿಯ ಕೌಶಲವನ್ನು ಅವಲಂಬಿಸಿದೆ. ಕವಿಗಳು ತಮ್ಮತಮ್ಮ ಮನೋಧರ್ಮಕ್ಕನುಗುಣವಾಗಿ ಕಾವ್ಯಮಾರ್ಗ ಗಳನ್ನು ರೂಪಿಸಿಕೊಳ್ಳುತ್ತಾರೆ. ಅದನ್ನೇ "ಕವಿಪ್ರಸ್ಥಾನಹೇತವಃ" ಎಂದರೆ ಕಾವ್ಯ ರಚನೆಗೆ ಮೂಲಕಾರಣವಾದ ಅಂಶಗಳೆಂದು ಪರಿಗಣಿಸುತ್ತಾನೆ.

ಕಾವ್ಯದಲ್ಲಿ ಮಾರ್ಗಗಳು ...

ಇದಕ್ಕೆ ಕಾಳಿದಾಸನ ಒಂದು ಪದ್ಯವನ್ನು ಉದಾಹರಿಸಿ, ಅದರ ಸ್ವರೂಪವನ್ನು ಸ್ಪಷ್ಟಪಡಿಸುತ್ತಾನೆ. ''ವಿಚಿತ್ರಮಾರ್ಗ'' ನಿರ್ವಹಿಸಲು ಅತಿ ಕಷ್ಟಕರವಾದದ್ದು : ''ಅತಿ ದುಸ್ಸಂಚರಾಃ.'' ಪ್ರೌಢವಾದ ಪಾಂಡಿತ್ಯದಿಂದ ಇದು ಸಾಧ್ಯವಾಗುವಂತಹದು. ''ಖಡ್ಗಧಾರಾ ಪಥೇನೇವ ಸುಭಟಾನಾಂ ಮನೋರಥಾಃ'' ಎಂದು ಇದರ ಲಕ್ಷಣವನ್ನು ಹೇಳಿದ್ದಾನೆ. ''ಖಡ್ಗಧಾರಾ ಪಥದಲ್ಲಿ ಸುಭಟರ ಮನೋರಥಗಳು ಸಂಚರಿಸುವಂತೆ'' ಎಂಬ ಮಾತು ಇದರ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ''ಹೇಮಧೂಲೀಪರಿವೃತಃ''–ಎಂದೂ ಒಂದು ಕಡೆ ಇದನ್ನು ಕರೆದಿದ್ದಾನೆ. ಚಿನ್ನದ ಧೂಳು ಆವರಿಸಿದಂತೆ ತನ್ನ ವೈಚಿತ್ರ್ಯ ಮತ್ತು ಅತಿಶಯತೆಗಳಿಂದ ಓದುಗನ ಮನ ಸೆಳೆಯುತ್ತದೆ. ಉದಾಹರಣೆಗಳಿಂದ ಇದನ್ನು ಸ್ಪಷ್ಟಪಡಿಸುತ್ತಾನೆ. ಇದು 'ಪ್ರೌಢ' ಎಂದ ಮಾತ್ರಕ್ಕೆ ಶುಷ್ಕ ಪಾಂಡಿತ್ಯದ ಫಲವಲ್ಲ. ಇಲ್ಲಿನ ಕಲಾತ್ಮಕ ಕೌಶಲ್ಯ ಕವಿ ಪ್ರತಿಭಾಸ್ಪೃಷ್ಟಿಯೇ : ಆದರೆ ಇಲ್ಲಿ ಕವಿಮನೋಧರ್ಮ ಬೇರೆ. ಕಾಳಿದಾಸನ ಮನೋಧರ್ಮ ಒಂದಾದರೆ, ಬಾಣಭಟ್ಟನ ಮನೋಧರ್ಮ ಇನ್ನೊಂದು. ಇಬ್ಬರ ಮಾರ್ಗವೂ ಪ್ರತಿಭಾ ಸಂಪನ್ನ ಎಂಬುದನ್ನು ಮರೆಯಬಾರದು. ''ಮಧ್ಯಮಮಾರ್ಗ'' ಇವೆರಡರ ಸಂಗಮ. ಸಹಜಸೌಂದರ್ಯ ಮತ್ತು ಕಲಾತ್ಮಕ ಕೌಶಲ ಎರಡೂ ಇಲ್ಲಿ ಸೇರುತ್ತವೆ. ''ಸಹಜಾಹಾರ್ಯ ಶೋಭಾತಿಶಯಶಾಲಿನೌ'' ಎಂದು ಇದನ್ನು ಕರೆದಿದ್ದಾನೆ. ಇದು ಎಲ್ಲ ಮನೋಧರ್ಮದವರಿಗೂ ಹಿಡಿಸುತ್ತದೆ : ''ನಾನಾ ರುಚಿ ಮನೋಹರಃ'' ಎಂದಿದ್ದಾನೆ.

ಈ ಮಾರ್ಗಗಳನ್ನು ಕುರಿತ ಆತನ ಆಶಯ ಸ್ಪಷ್ಟವಾಗಬೇಕಾದರೆ ಅವುಗಳಿಗೆ ಆತ ಅನ್ವಯಿಸಿ ವಿವೇಚಿಸಿರುವ ಗುಣಗಳ ವಿವರಣೆಯನ್ನು ನೋಡಬೇಕಾಗುತ್ತದೆ. ಅದರ ವಿವರವಾದ ಪ್ರತಿಪಾದನೆ ಇಲ್ಲಿ ಅಪ್ರಸ್ತುತ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಹಿಂದಿನಿಂದ ಬಂದ ಗುಣವಿವೇಚನೆಗೆ ಕುಂತಕ ಒಂದು ಹೊಸ ತಿರುವನ್ನು ಕೊಟ್ಟಿದ್ದು. ಹಿಂದಿನವರು ಹತ್ತು ಗುಣಗಳನ್ನು ಹೇಳಿ ಅದರಲ್ಲಿ ವೈದರ್ಭಿ ಹತ್ತು ಗುಣಗಳಿಂದ ಕೂಡಿದ್ದು,

ಈ ಮೂರು ಮಾರ್ಗಗಳನ್ನು ಬಹಳ ಅರ್ಥವತ್ತಾಗಿ ವಿವೇಚಿಸಿದ್ದಾನೆ. ಸುಕುಮಾರ ಮಾರ್ಗ ''ಮಾರ್ಗೇಣೋತ್ಫುಲ್ಲ ಕುಸುಮಕಾನನೇನೇವ ಷಟ್ಪದಾಃ''—ಎಂದರೆ ಕುಸುಮ ಕಾನನದಲ್ಲಿ ದುಂಬಿಗಳು ಝೇಂಕರಿಸಿದಂತೆ—ಮನೋಹರವಾಗಿ ಮನ ಸೆಳೆಯುತ್ತದೆ. ಇದಕ್ಕೆ ಕಾಳಿದಾಸನ ಒಂದು ಪದ್ಯವನ್ನು ಉದಾಹರಿಸಿ, ಅದರ ಸ್ವರೂಪವನ್ನು ಸ್ಪಷ್ಟಪಡಿಸುತ್ತಾನೆ. ''ವಿಚಿತ್ರಮಾರ್ಗ'' ನಿರ್ವಹಿಸಲು ಅತಿ ಕಷ್ಟಕರವಾದದ್ದು; ''ಅತಿ ದುಸ್ಸಂಚರಾಃ.'' ಪ್ರೌಢವಾದ ಪಾಂಡಿತ್ಯದಿಂದ ಇದು ಸಾಧ್ಯವಾಗುವಂತಹದು. ''ಖಡ್ಗಧಾರಾ ಪಥೇನೇವ ಸುಭಟಾನಾಂ ಮನೋರಥಾಃ'' ಎಂದು ಇದರ ಲಕ್ಷಣವನ್ನು ಹೇಳಿದ್ದಾನೆ. ''ಖಡ್ಗಧಾರಾ ಪಥದಲ್ಲಿ ಸುಭಟರ ಮನೋರಥಗಳು ಸಂಚರಿಸುವಂತೆ'' ಎಂಬ ಮಾತು ಇದರ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ''ಹೇಮಧೂಲೀಪರಿವೃತಃ''—ಎಂದೂ ಒಂದು ಕಡೆ ಇದನ್ನು ಕರೆದಿದ್ದಾನೆ. ಚಿನ್ನದ ಧೂಳು ಆವರಿಸಿದಂತೆ ತನ್ನ ವೈಚಿತ್ರ್ಯ ಮತ್ತು ಅತಿಶಯತೆಗಳಿಂದ ಓದುಗನ ಮನ ಸೆಳೆಯುತ್ತದೆ. ಉದಾಹರಣೆಗಳಿಂದ ಇದನ್ನು ಸ್ಪಷ್ಟಪಡಿಸುತ್ತಾನೆ. ಇದು 'ಪ್ರೌಢ' ಎಂದ ಮಾತ್ರಕ್ಕೆ ಶುಷ್ಕ ಪಾಂಡಿತ್ಯದ ಫಲವಲ್ಲ. ಇಲ್ಲಿನ ಕಲಾತ್ಮಕ ಕೌಶಲ್ಯ ಕವಿ ಪ್ರತಿಭಾಸ್ಪೃಷ್ಟಿಯೇ : ಆದರೆ ಇಲ್ಲಿ ಕವಿಮನೋಧರ್ಮ ಬೇರೆ. ಕಾಳಿದಾಸನ ಮನೋಧರ್ಮ ಒಂದಾದರೆ, ಬಾಣಭಟ್ಟನ ಮನೋಧರ್ಮ ಇನ್ನೊಂದು. ಇಬ್ಬರ ಮಾರ್ಗವೂ ಪ್ರತಿಭಾ ಸಂಪನ್ನ ಎಂಬುದನ್ನು ಮರೆಯಬಾರದು. ''ಮಧ್ಯಮಮಾರ್ಗ'' ಇವೆರಡರ ಸಂಗಮ. ಸಹಜಸೌಂದರ್ಯ ಮತ್ತು ಕಲಾತ್ಮಕ ಕೌಶಲ ಎರಡೂ ಇಲ್ಲಿ ಸೇರುತ್ತವೆ. ''ಸಹಜಾಹಾರ್ಯ ಶೋಭಾತಿಶಯಶಾಲಿನೌ'' ಎಂದು ಇದನ್ನು ಕರೆದಿದ್ದಾನೆ. ಇದು ಎಲ್ಲ ಮನೋಧರ್ಮದವರಿಗೂ ಹಿಡಿಸುತ್ತದೆ : ''ನಾನಾ ರುಚಿ ಮನೋಹರಃ'' ಎಂದಿದ್ದಾನೆ.

ಈ ಮಾರ್ಗಗಳನ್ನು ಕುರಿತ ಆತನ ಆಶಯ ಸ್ಪಷ್ಟವಾಗಬೇಕಾದರೆ ಅವುಗಳಿಗೆ ಆತ ಅನ್ವಯಿಸಿ ವಿವೇಚಿಸಿರುವ ಗುಣಗಳ ವಿವರಣೆಯನ್ನು ನೋಡಬೇಕಾಗುತ್ತದೆ. ಅದರ ವಿವರವಾದ ಪ್ರತಿಪಾದನೆ ಇಲ್ಲಿ ಅಪ್ರಸ್ತುತ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಹಿಂದಿನಿಂದ ಬಂದ ಗುಣವಿವೇಚನೆಗೆ ಕುಂತಕ ಒಂದು ಹೊಸ ತಿರುವನ್ನು ಕೊಟ್ಟದ್ದು. ಹಿಂದಿನವರು ಹತ್ತುಗುಣಗಳನ್ನು ಹೇಳಿ ಅದರಲ್ಲಿ ವೈದರ್ಭಿ ಹತ್ತು ಗುಣಗಳಿಂದ ಕೂಡಿದ್ದು, ಗೌಡಿ ಮೊದಲಾದುವು ಕೆಲವು ಗುಣಗಳನ್ನು ಮಾತ್ರ ಉಳ್ಳವು ಎಂದು ಇವುಗಳನ್ನು ವಿವರಿಸಿಕೊಂಡು ಬಂದಿದ್ದರು. ಕುಂತಕನ ದೃಷ್ಟಿ ಇದರಿಂದ ಸಂಪೂರ್ಣವಾಗಿ ಭಿನ್ನವಾದದ್ದು. ಈತನ ಪ್ರಕಾರ ಈ ಮೂರು ಮಾರ್ಗಗಳಲ್ಲಿ ಒಂದು ಹೆಚ್ಚು, ಇನ್ನೊಂದು ಕಡಿಮೆಯಲ್ಲ; ಪ್ರತಿಭೋದ್ಭವವಾದಾಗ ಎಲ್ಲವೂ ಹೆಚ್ಚೇ, ಇಲ್ಲವಾದರೆ ಎಲ್ಲವೂ ಕಳಪೆಯೇ. 'ಸುಕುಮಾರ', 'ವಿಚಿತ್ರ' ಮತ್ತು 'ಮಧ್ಯಮ'—ಈ ಮೂರು ಮಾರ್ಗಗಳು ಸಮರ್ಥವಾಗಿ ಮೂಡಿಬಂದಾಗ ಅವು ಎಲ್ಲಾ ಗುಣಗಳಿಂದಲೂ ಕೂಡಿರುತ್ತವೆ. ಆದರೆ ಈ ಗುಣಗಳ ಸ್ವರೂಪ ಆಯಾ ಮಾರ್ಗಕ್ಕೆ ಅನುಗುಣವಾಗಿ ಬೇರೆಯಾಗುತ್ತದೆ—ಎಂಬ ವಿನೂತನದೃಷ್ಟಿಯಿಂದ ಈತ ಗುಣಗಳನ್ನು ವಿವೇಚಿಸಿದ. ಅಲ್ಲದೆ ಪರಂಪರೆಯಿಂದ ಬಂದ ಹತ್ತು ಗುಣಗಳನ್ನು ಹೇಳದೆ ತನ್ನದೇ ಆದ ರೀತಿಯಲ್ಲಿ ಕೆಲವು ಗುಣಗಳನ್ನು ಹೆಸರಿಸಿದ. ಅವನು ಹೇಳುವ

ಗುಣಗಳು ಇವು : ಮಾಧುರ್ಯ, ಪ್ರಸಾದ, ಲಾವಣ್ಯ, ಅಭಿಜಾತ್ಯ, ಔಚಿತ್ಯ ಮತ್ತು ಸೌಭಾಗ್ಯ —ಹೀಗೆ ಒಟ್ಟು ಆರು ಗುಣಗಳನ್ನು ಹೇಳುತ್ತಾನೆ. ಇವುಗಳಲ್ಲಿ ಮೊದಲನೆಯ ನಾಲ್ಕು ಆಯಾ ಮಾರ್ಗಕ್ಕೆ ಅನುಗುಣವಾಗಿ ಬೇರೆ ಬೇರೆ ಸ್ವರೂಪವನ್ನು ಪಡೆಯುತ್ತವೆ ; ಕೊನೆಯ ಎರಡು, ಎಲ್ಲಾ ಮಾರ್ಗಗಳಿಗೂ ಏಕಪ್ರಕಾರವಾಗಿ ಅನ್ವಯವಾಗುತ್ತವೆ. ಇದನ್ನು ಬಹಳ ಅರ್ಥವತ್ತಾಗಿ ವಿವರಿಸಿದ್ದಾನೆ. ಕಾವ್ಯರಚನೆಯ ಎಲ್ಲ ಅಂಶಗಳನ್ನು ಒಳಗೊಳ್ಳುವಷ್ಟು ವ್ಯಾಪಕವಾಗಿ ಅದು ಬೆಳೆಯುತ್ತದೆ.

ಭೌಗೋಳಿಕ ವಿಭಜನೆಯನ್ನು ತೊಡೆದು ಹಾಕಿ ರೀತಿ ಅಥವಾ ಮಾರ್ಗಗಳನ್ನು ಕವಿಮನೋಧರ್ಮಕ್ಕೆ ನೇರವಾಗಿ ಸಂಗತಗೊಳಿಸಿದ್ದು ಈತ ಮಾಡಿದ ಬಹುಮುಖ್ಯವಾದ ಬದಲಾವಣೆ. ಕಾವ್ಯ ಎನ್ನುವುದು ಕವಿಕರ್ಮ. ಅದು ಕವಿಮನೋಧರ್ಮಕ್ಕೆ ಸಂಬಂಧಿಸಿದ್ದು—ಎಂಬ ಈತನ ಪ್ರತಿಪಾದನೆ, ರೀತಿಯನ್ನು ನೋಡುವ ಒಂದು ಹೊಸ ದೃಷ್ಟಿಯನ್ನೇ ತಂದುಕೊಟ್ಟಿತು. ಎಷ್ಟು ಜನ ಕವಿಗಳೋ ಅಷ್ಟು ಮಾರ್ಗಗಳಿವೆ ಎಂಬುದನ್ನು ತತ್ವತಃ ಒಪ್ಪಬೇಕೆಂಬ ಈತನ ದೃಷ್ಟಿ, ರೀತಿಯನ್ನು ಮಾರ್ಗದ ಕಡೆಗೆ ತಿರುಗಿಸಿದ್ದಲ್ಲದೆ ಶೈಲಿಯ ಆಳಕ್ಕೂ ಇಳಿಯಿತು. "ಶೀಲದಂತೆ ಶೈಲಿ" ಎಂಬುದಕ್ಕೆ ಬುನಾದಿಯನ್ನು ಹಾಕಿತು. ಹೀಗೆ ರೀತಿ-ಮಾರ್ಗ-ಶೈಲಿ ಇವುಗಳ ವಿಕಾಸದಲ್ಲಿ ಕುಂತಕ ಕೇಂದ್ರಬಿಂದುವಾಗಿದ್ದಾನೆ.

ಈತ ಹೇಳಿದ ಇನ್ನೊಂದು ಮುಖ್ಯವಾದ ಮಾತೆಂದರೆ, ಯಾವ ಮಾರ್ಗವೂ ತನಗೆ ತಾನೇ ಶ್ರೇಷ್ಠವಲ್ಲ—ಎಂಬುದು. ಅದುವರೆಗೂ ರೀತಿವಾದಿಗಳು ವೈದರ್ಭಿ ಸರ್ವಶ್ರೇಷ್ಠ ಎಂದು ಹೇಳಿಕೊಂಡು ಬಂದಿದ್ದರು. ಗೌಡಿಯಲ್ಲಿ ಎಲ್ಲ ಗುಣಗಳೂ ಇಲ್ಲದಿರುವುದರಿಂದ ಅದು ಅಷ್ಟು ಶ್ರೇಷ್ಠವಲ್ಲ ಎಂಬ ಭಾವನೆ ಬೆಳೆದುಬಂದಿತ್ತು. ಕುಂತಕ ಇದನ್ನು ಸ್ಪಷ್ಟವಾಗಿ ನಿರಾಕರಿಸಿದ. ಅದಕ್ಕನುಗುಣವಾಗಿ ಗುಣವಿವೇಚನೆಯನ್ನು ಮಾಡಿದ. ಎಲ್ಲ ಗುಣಗಳು ಎಲ್ಲಾ ಮಾರ್ಗಗಳಲ್ಲಿಯೂ ಇರುತ್ತವೆ. ಆದರೆ ಅವನ್ನು ಬಳಸಿಕೊಳ್ಳುವುದು ಕವಿಪ್ರತಿಭೆಗೆ ಸೇರಿದ್ದು. ಸುಕುಮಾರಮಾರ್ಗದಲ್ಲಿ ಬರೆದವರೆಲ್ಲಾ ಕಾಳಿದಾಸರಾಗುವುದಿಲ್ಲ ; ಹಾಗೆಯೇ ವಿಚಿತ್ರಮಾರ್ಗದಲ್ಲಿ ಬರೆದದ್ದೆಲ್ಲಾ ಪಾಂಡಿತ್ಯಭೂಯಿಷ್ಠವೆಂದು ತಿರಸ್ಕರಿಸಬೇಕಾಗಿಲ್ಲ. ಬಾಣಭಟ್ಟ ಗೌಡಿಯಲ್ಲಿ ಬರೆದ ಮಾತ್ರಕ್ಕೆ ಎರಡನೇ ದರ್ಜೆಯ ಕವಿ ಆಗಬೇಕಾಗಿಲ್ಲ. ಆಡಂಬರದಿಂದ ಕೂಡಿದ ಶೈಲಿ ಪಾಂಡಿತ್ಯದ ಆಧಿಕ್ಯದಿಂದ ಕಗ್ಗ ಆಗಬಹುದು ; ಹಾಗೆಯೇ ಸುಕುಮಾರಮಾರ್ಗ ಚೈತನ್ಯರಹಿತ, ನೀರಸ ನಿರೂಪಣೆಯೂ ಆಗಬಹುದು. ಕವಿಶಕ್ತಿಯನ್ನವಲಂಬಿಸಿ ಮಾರ್ಗ ಸಿದ್ಧವಾಗುತ್ತದೆಂಬುದು ಕುಂತಕ ಕೊಟ್ಟ ಬಹಳ ಒಳ್ಳೆಯ ದೃಷ್ಟಿ. ಆಧುನಿಕ ವಿಮರ್ಶೆಯ ಸಂದರ್ಭದಲ್ಲಿಯೂ ಇದು ಮುಖ್ಯವಾಗಿ ಗಮನಿಸಬೇಕಾದ ಅಂಶ.

ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಕವಿಗಳನ್ನು ಗಮನಿಸಿದಾಗ, ಸುಕುಮಾರ ಮತ್ತು ವಿಚಿತ್ರಮಾರ್ಗಗಳಿಗೆ ಉದಾಹರಣೆಯಾಗಬಹುದಾದ ಇಬ್ಬರು ಕವಿಗಳು ಎದ್ದು ಕಾಣುತ್ತಾರೆ: ಬೇಂದ್ರೆ ಮತ್ತು ಕುವೆಂಪು. ಬೇಂದ್ರೆಯವರದು ಸುಕುಮಾರಮಾರ್ಗ ;

ಕುವೆಂಪುರವರದು ವಿಚಿತ್ರ ಎಂದರೆ ಪ್ರೌಢ ಸಾಲಂಕೃತಮಾರ್ಗ. ಇದರಲ್ಲಿ ಯಾವುದು ಶ್ರೇಷ್ಠ? ಕುಂತಕ ಹೇಳುವುದು ಯಾವುದೂ ತನಗೆ ತಾನೇ ಶ್ರೇಷ್ಠವಲ್ಲ. ಆಯಾ ಮನೋಧರ್ಮ ಮತ್ತು ಅದರಿಂದ ಮೂಡಿದ ಮಾರ್ಗ ಏನನ್ನು ಸಾಧಿಸುತ್ತದೆ—ಎನ್ನುವುದರ ಮೇಲೆ ಶ್ರೇಷ್ಠತೆ ನಿಂತಿದೆ. ಒಂದೇ ಸನ್ನಿವೇಶಕ್ಕೆ ಈ ಇಬ್ಬರು ಕವಿಗಳೂ ಮಿಡಿಯುತ್ತಾರೆ. ಆದರೆ ಅವರ ಮನೋಧರ್ಮಕ್ಕನುಗುಣವಾಗಿ ಅವರ ಅನುಭವದ ನುಡಿ ಬೇರೆಯಾಗುತ್ತದೆ. "ಮೂಡಲ ಮನೆಯ ಮುತ್ತಿನ ನೀರಿನ ಎರಕಾವ ಹೊಯ್ದು" ಎಂದು ಬೇಂದ್ರೆ ಸೂರ್ಯೋದಯವನ್ನು ಕಂಡು ಹಾಡುತ್ತಾರೆ. "ರತ್ನದ ರಸದ ಕಾರಂಜಿಯು ಪುಟಪುಟನೆ ಪುಟಿದು"—ಎಂಬಂತಹ ಶಬ್ದಚಿತ್ರಗಳ ಮಾಲೆ ಅಲ್ಲಿ ಬರುತ್ತದೆ. ಅದೇ ಸೂರ್ಯೋದಯವನ್ನು ಕಂಡಾಗ ಕುವೆಂಪು ಹಾಡುವ ಮಾರ್ಗ ಬೇರೆ: "ಕುಂಕುಮಧೂಳಿಯ ದಿಕ್ತಟವೇದಿಯೊಳೋಕುಳಿಯೊಳು ಮಿಂದೇಳುವನು; ರವಿ ಮೂಡುವನು"—ಎಂದು ಹೇಳುತ್ತಾರೆ. ಇನ್ನೊಂದು ಕಡೆ ಬರುವ ಚಿತ್ರ ಹೀಗಿದೆ:

"ದಿಗುತಟದಲ್ಲಿ ತೆರೆಯುತಿತ್ತು ಹಗಲಿನಕ್ಷಿ,
ಮುಗಿಲ ಗರಿಯ ಕಾಯಿಸಿತ್ತು ಗಗನಪಕ್ಷಿ"

ಇದು ನಿಜವಾದ ವಿಮರ್ಶಕ ಅವರವರ ಮನೋಧರ್ಮದ ಮೂಲಕ ಈ ಕವಿಗಳು ಏನನ್ನು ಸಾಧಿಸಿದ್ದಾರೆಂಬುದನ್ನು ನೋಡಬೇಕೇ ಹೊರತು, ಇವರ ಹಾಗೆ ಅವರು ಬರೆಯಲಿಲ್ಲವೆಂದು ಆಕ್ಷೇಪಿಸಬಾರದು; ಅದರ ಮೇಲೆ ಕವನವನ್ನು ಅಳೆಯಬಾರದು. ಆಧುನಿಕ ವಿಮರ್ಶಕ ಅಳವಡಿಸಿಕೊಳ್ಳಬೇಕಾದ ಈ ದೃಷ್ಟಿಯನ್ನು ಕುಂತಕ ಕೊಡುತ್ತಾನೆ.

ಹೀಗೆ ಕಾವ್ಯತ್ವವನ್ನು ಅದು ಯಾವ 'ಮಾರ್ಗ'ದಲ್ಲಿದ್ದರೂ ಗುರುತಿಸುವುದಕ್ಕೆ ಸಾಧ್ಯವಾಗುವಂತಹ ಗುಣವಿವೇಚನೆಯನ್ನು ಕುಂತಕ ಕೈಕೊಂಡುದು ಮುಖ್ಯವಾದ ಅಂಶ. ಆಯಾ ಮಾರ್ಗಕ್ಕನುಗುಣವಾಗಿ ಗುಣಗಳು ರೂಪುಗೊಳ್ಳುತ್ತವೆಂಬುದು ಒಂದು ಹೊಸ ದೃಷ್ಟಿಯನ್ನೇ ತಂದುಕೊಟ್ಟಿತು. ಸಂಸ್ಕೃತಸಾಹಿತ್ಯದಲ್ಲಿ ಕಾಳಿದಾಸ ಬಾಣರು ಈ ಎರಡು ಮಾರ್ಗಗಳ ಸ್ಪಷ್ಟ ಉದಾಹರಣೆಯಾಗಿ ನಿಂತು, ತಮ್ಮ ತಮ್ಮ ಮಾರ್ಗಗಳಲ್ಲಿ ಮುಗಿಲು ಮುಟ್ಟಿದರು; ಕುಂತಕನ ಗುಣವಿವೇಚನೆಯ ಸಾರ್ಥಕತೆಗೆ ಸಾಕ್ಷಿಯಾದರು. ಇಂತಹ ಕವಿಕೃತಿಗಳಿಂದಲೇ ಕುಂತಕ ಪ್ರೇರಣೆ ಪಡೆದಿರಬೇಕು. ಪ್ರಾಚೀನ ಕನ್ನಡ ಸಾಹಿತ್ಯದ ಶ್ರೇಷ್ಠ ಕವಿಗಳಲ್ಲಿ ನಿರ್ದಿಷ್ಟವಾಗಿ ಸುಕುಮಾರ ಅಥವಾ ವಿಚಿತ್ರಮಾರ್ಗದ ಕವಿಗಳೆಂದು ಗುರುತಿಸಿ ಹೇಳುವುದು ಕಷ್ಟ. ಬಹುಶಃ ಪಂಪ, ರನ್ನ, ಷಡಕ್ಷರಿ—ಇವರನ್ನು ವಿಚಿತ್ರಮಾರ್ಗದ ಕವಿಗಳೆಂದು ಹೇಳಬಹುದು; ಹರಿಹರ ರತ್ನಾಕರರು ಸುಕುಮಾರಮಾರ್ಗದ ಕವಿಗಳು; ರಾಘವಾಂಕ ಕುಮಾರವ್ಯಾಸರು ಮಧ್ಯಮ ಮಾರ್ಗದ ಕವಿಗಳೆನ್ನಬಹುದು. ಹಿಂದೊಮ್ಮೆ ಎಸ್. ವಿ. ರಂಗಣ್ಣನವರು ರಾಘವಾಂಕನನ್ನು ಬೇರೊಂದು ಅರ್ಥದಲ್ಲಿ ಮಧ್ಯಮವರ್ಗದ ಕವಿ ಎಂದು ಕರೆದದ್ದುಂಟು. ಅದು "ಐವತ್ತಕ್ಕೆ ಮೀರದ ಐದಕ್ಕೆ ಇಳಿಯದ" ಅಂದರೆ ಅತಿ ಶ್ರೇಷ್ಠವೂ ಅಲ್ಲದ, ಅತಿ ಕಳಪೆಯೂ ಅಲ್ಲದ ಕವಿ ಎಂಬರ್ಥದಲ್ಲಿ. ಇದು ರಾಘವಾಂಕನ ಯೋಗ್ಯತೆಗೆ ಸಂಗತವಾಗುವ ಮಾತಲ್ಲ. ಆದರೆ ಕುಂತಕನ 'ಮಧ್ಯಮಮಾರ್ಗ' ಎಂಬರ್ಥ

ದಲ್ಲಿ ಇದು ರಾಘವಾಂಕನ ಮನೋಧರ್ಮವನ್ನೂ ಶೈಲಿಯನ್ನೂ ಸರಿಯಾಗಿ ನಿರ್ದೇಶಿಸಲು ಸಮರ್ಥವಾಗುತ್ತದೆ. ಕುಮಾರವ್ಯಾಸನಿಗಂತೂ ಇದು ಇನ್ನೂ ಹೆಚ್ಚಾಗಿ ಅನ್ವಯಿಸುತ್ತದೆ.

ಇದೇನೇ ಇರಲಿ, ಇಂತಹ ತೀರ್ಮಾನಗಳಲ್ಲಿ ಅಭಿಪ್ರಾಯಭೇದಗಳಿರುವುದು ಸಾಧ್ಯ. ಆದರೆ ಕುಂತಕನ ವಿವೇಚನೆಯಲ್ಲಿ ಸಂದಿಗ್ಧತೆ ಇಲ್ಲ; ನಿರ್ದಿಷ್ಟ ನಿಲವಿದೆ. ಕಾವ್ಯಪ್ರತಿಭೆ ಎಲ್ಲಿದ್ದರೂ ಅದನ್ನು ಗುರುತಿಸುವ ಕಣ್ಣಿದೆ. ಅಂತರ್ ನಿರೀಕ್ಷಣೆಯ ಸಹೃದಯತೆ, ಮೀಮಾಂಸಕನ ಖಚಿತತೆ, ವಿಮರ್ಶಕನ ಅನ್ವಯಿಕತೆ—ಈ ಮೂರೂ ಮುಪ್ಪುರಿಗೊಂಡಿವೆ, ಕುಂತಕನಲ್ಲಿ. ನಮ್ಮ ಮೀಮಾಂಸಕರಲ್ಲೆಲ್ಲಾ ಈ ಗುಣಗಳನ್ನು ಕಾಣುವುದು ಈತನೊಬ್ಬನಲ್ಲಿಯೇ. ನಮ್ಮ ಮೀಮಾಂಸಕರಲ್ಲಿ ಈತನೊಬ್ಬನೇ ನಿಜವಾದ ವಿಮರ್ಶಕ. ಆತ ಕೊಡುವ ಉದಾಹರಣೆಯ ಪದ್ಯಗಳು, ಅವುಗಳಿಗೆ ಆತ ಕೊಡುವ ವ್ಯಾಖ್ಯಾನ ಇತ್ಯಾದಿಗಳನ್ನು ನೋಡಿದರೆ, ಆತನ ವಿಮರ್ಶಕಶಕ್ತಿ ಮನದಟ್ಟಾಗುತ್ತದೆ. ಅದಕ್ಕೆ ಸಿದ್ಧಾಂತದ ಹಿನ್ನೆಲೆಯನ್ನು ಒದಗಿಸಿ ವಿಮರ್ಶೆಯ ಸ್ವರೂಪವನ್ನು ಖಚಿತಗೊಳಿಸಿದ ಶಾಸ್ತ್ರಕಾರನೂ ಆಗಿದ್ದಾನೆ. ಅನಂತರದ ಕೆಲವು ಆಲಂಕಾರಿಕರು ಆತನಲ್ಲಿ ದೋಷಗಳನ್ನು ಹುಡುಕುತ್ತಾರೆ. ಈತನ ಗುಣಗಳ ವಿವೇಚನೆ ಶಾಸ್ತ್ರೀಯವಲ್ಲವೆಂದು ಆರೋಪಿಸಿರುವುದೂ ಉಂಟು. ಆದರೆ ಕಾವ್ಯತತ್ತ್ವರಹಸ್ಯ ಕೇವಲ ಶಾಸ್ತ್ರಕ್ಕೆ ದಕ್ಕುವುದಿಲ್ಲ; ಅಂತರಿಕದೃಷ್ಟಿಯಿಂದ ಪೂರ್ಣಗೊಳ್ಳುತ್ತದೆಂಬುದನ್ನು ಆತ ಬಲ್ಲವನಾಗಿದ್ದ. ಅದನ್ನು ಆತನ ಕೃತಿಯ ಉದ್ದಕ್ಕೂ ಕಾಣಬಹುದು.

ಒಟ್ಟಿನಲ್ಲಿ ಕುಂತಕನ ಪ್ರತಿಪಾದನೆ ಕಾವ್ಯದಲ್ಲಿ ಅಲಂಕಾರ ಮತ್ತು ರೀತಿಗಳನ್ನು ಕಾಣುವ ಪೂರ್ಣದೃಷ್ಟಿಯನ್ನು ತಂದುಕೊಟ್ಟಿತು. ಅಷ್ಟೇ ಅಲ್ಲ, ಕಾವ್ಯದ ಎಲ್ಲ ಪರಿಕರಗಳ ಸ್ವರೂಪ ವ್ಯಾಪ್ತಿ ಔಚಿತ್ಯವನ್ನು ನಿರ್ದೇಶಿಸುವ ನಿರ್ದಿಷ್ಟ ನಿಲವನ್ನು ರೂಪಿಸಿತು. ಅಲಂಕಾರ ಗುಣ ರೀತಿಗಳಲ್ಲದೆ ಧ್ವನಿ ರಸಗಳೂ ಅದರಲ್ಲಿ ಸಮಾವೇಶಗೊಳ್ಳುತ್ತವೆ. ಇವೆಲ್ಲವುಗಳಿಗೂ ಮೂಲಭೂತವಾದ ಒಂದು ಅಂಶ ಕಾವ್ಯದಲ್ಲಿದೆ—ಎಂಬುದನ್ನು ಈತ ಗುರುತಿಸಿ ಅದನ್ನು ಬಹಳ ವ್ಯಾಪಕವಾದ ಅರ್ಥದಲ್ಲಿ 'ವಕ್ರತೆ' ಎಂದು ಕರೆದ. ಅದು ಕವಿ ತಾನು ಕಾಣುವ ವಿಶಿಷ್ಟವಾದ ತೀವ್ರವಾದ ಅನುಭವ, ಇದರಿಂದ ಮೂಡಿಬಂದಾಗ ಅಲಂಕಾರಾದಿಗಳು ಹೊರಗಿನಿಂದ ತಂದು ಸೇರಿಸುವ ಪರಿಕರಗಳಾಗದೆ ಅಂತರಂಗದಿಂದ ಸಹಜವಾಗಿ ಮೂಡಿಬರುವ ಸಾವಯವಸಂಬಂಧವನ್ನು ಪಡೆಯುತ್ತವೆ. ಆಧುನಿಕ ವಿಮರ್ಶಕ ಇದನ್ನು ಮೂಲಭೂತವಾಗಿ ಗಮನಿಸಬೇಕು. ಆಧುನಿಕ ಕಾವ್ಯವಿಮರ್ಶೆಯಲ್ಲಿ ಅನೇಕ ವೇಳೆ ಅಲಂಕಾರಗಳು ಅಥವಾ ಕಾವ್ಯಪ್ರತಿಮೆಗಳು ಅತಿಯಾದ ಮಹತ್ವ ಪಡೆದು ತಾವೇ ಸರ್ವಸ್ವವೋ ಎಂಬಂತೆ ವಿಜೃಂಭಿಸುತ್ತವೆ. ಇಲ್ಲಿ ಕುಂತಕನ ವಿಮರ್ಶಾಸೂತ್ರ ನೆರವಿಗೆ ಬರುತ್ತದೆ. ಕಾವ್ಯಪ್ರತಿಮೆಗಳು ಎಷ್ಟೇ ಸಮರ್ಥವಾಗಿದ್ದರೂ ಅವು ತಮಗೆ ತಾವೇ ಇಲ್ಲ; 'ಕವಿಮನೋವ್ಯಾಪಾರ ವಕ್ರತೆ'ಯ ಸಾಂಕೇತಿಕ ಸಾಕ್ಷಿಗಳಾಗಿ ಅವು ಬರಬೇಕು. ಇಲ್ಲವಾದರೆ ಕೇವಲ ಆಡಂಬರವಾಗಿ ಹುಟ್ಟಿದ ಅಲಂಕಾರಗಳಾಗದೆ ಕಟ್ಟಿದ ಅಲಂಕಾರಗಳಾಗುತ್ತವೆ. ಹೊರಗಡೆ ಅದ್ಭುತವಾಗಿ ಕಾಣುತ್ತವೆ; ಒಳಗಡೆ ಟೊಳ್ಳಾಗು

ತ್ತವೆ. "ಆಕಾರ ಏವಶೂರಾಃ" ಎಂಬಂತಾಗುತ್ತವೆ. ಕಾವ್ಯಪ್ರತಿಮೆಗಳ ದುಂದುಗಾರಿಕೆಯನ್ನು ಕಾಣುವ ನವ್ಯಕಾವ್ಯ ವಿಮರ್ಶೆಯಲ್ಲಿ ಕುಂತಕನ ಈ ಸೂತ್ರ ಒಳ್ಳೆಯ ಮಾರ್ಗದರ್ಶಕ ಶಕ್ತಿಯಾಗಬಲ್ಲುದು.

ಹಾಗೇ ಮಾರ್ಗವನ್ನು ಕುರಿತು ಆತ ಹೇಳಿದ ಮಾತುಗಳೂ ಮನನೀಯವಾದುವು. "ಕವಿಮನೋಧರ್ಮ" ಮತ್ತು "ಕವಿಮನೋವ್ಯಾಪಾರ ವಕ್ರತೆ" ಇವುಗಳ ಹಿನ್ನೆಲೆಯಲ್ಲಿ ಇವುಗಳನ್ನು ವಿವೇಚಿಸಬೇಕೆಂಬ ಮಾತು ಅರ್ಥವತ್ತಾದದ್ದು. ಇದನ್ನು ಅರಿತ ವಿಮರ್ಶಕನಲ್ಲಿ ವಸ್ತುನಿಷ್ಠತೆ ಮೂಡುತ್ತದೆ. ತನ್ನ ಅನಿಸಿಕೆಗಳನ್ನು ದೂರ ಇಟ್ಟು, ಕೇವಲ ಕಾವ್ಯಾನುಭವವನ್ನು ಕವಿಮನೋವ್ಯಾಪಾರದ ಹಿನ್ನೆಲೆಯಲ್ಲಿ ನೋಡುವ ದೃಷ್ಟಿ ಬೆಳೆಯುತ್ತದೆ. ಸಾಹಿತ್ಯ ವಿಮರ್ಶೆಗೆ ಇದೇ ಮೂಲಭೂತವಾದ ಆವಶ್ಯಕತೆ. ಕುಂತಕನ ವಿವೇಚನೆ ಇದನ್ನು ಸಾಧಿಸಿರುವುದರಿಂದಲೇ ಅದು ಇಂದಿಗೂ ಪ್ರಸ್ತುತವಾಗಿದೆ. ಅದನ್ನು ಇನ್ನೂ ಹೆಚ್ಚು ಹತ್ತಿರದಿಂದ ಸೂಕ್ಷ್ಮವಾಗಿ ನೋಡಿದಷ್ಟೂ ಸಾಹಿತ್ಯವಿಮರ್ಶೆಗೆ ಆತನ ಕೊಡುಗೆ ಏನೆಂಬುದು ಮನದಟ್ಟಾಗುತ್ತದೆ ; ಆತನ ಮಹತ್ವ ಮನವರಿಕೆಯಾಗುತ್ತದೆ. ಅಲಂಕಾರ ಮತ್ತು ರೀತಿಗಳನ್ನೇ ಮುಖ್ಯವಾಗಿ ಪರಿಗಣಿಸಿ, ಅದನ್ನು ಕಂಡುಕೊಳ್ಳುವ ಒಂದು ಕಿರು ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

**ಕೃಷ್ಣಪರಮೇಶ್ವರ ಭಟ್ಟ**

ಆನಂದವರ್ಧನನ 'ಧ್ವನ್ಯಾಲೋಕ'ದಲ್ಲಿ ವ್ಯಂಜನಪ್ರಕ್ರಿಯೆಗೆ ನಿಮಿತ್ತಗಳೆಂದು ಹೆಸರಿಸಲಾದ ವಿವಿಧ ಘಟಕಗಳಲ್ಲಿ ವರ್ಣ ಹಾಗೂ ಕಾಕು ಘಟಕಗಳ ಮರುಪರಿಶೀಲನೆ ಹಾಗೂ ವ್ಯಂಗ್ಯಾರ್ಥವಲಯದ ವಿಸ್ತರಣದ ಸಾಧ್ಯಾಸಾಧ್ಯತೆಯ ಪರಿಶೀಲನೆ ಈ ಲೇಖನದ ವಿಷಯ.

೧

ಮೊದಲಿಗೆ, ವ್ಯಂಗ್ಯಾರ್ಥವನ್ನು ಕುರಿತ ಆನಂದವರ್ಧನನ ಹೇಳಿಕೆಗಳನ್ನು, ಸದ್ಯದ ಆವಶ್ಯಕತೆಗೆ ತಕ್ಕಂತೆ ಹೀಗೆ ಸಂಗ್ರಹಿಸಿಕೊಳ್ಳಬಹುದು: (ಮಹಾಕವಿಗಳ) ಕಾವ್ಯದಲ್ಲಿ ವ್ಯಾಚ್ಯಾರ್ಥವಲ್ಲದೆ ಪ್ರತೀಯಮಾನವಾದ (ವ್ಯಂಗ್ಯವಾದ) ಇನ್ನೊಂದು ಅರ್ಥವೂ ಇರುತ್ತದೆ. ಈ ಪ್ರತೀಯಮಾನಾರ್ಥವು ಅಂಗನೆಯರ ಅವಯವಗಳ ಚೆಲುವಿಗಿಂತ ಬೇರೆಯಾದ ಲಾವಣ್ಯದಂತೆ ಪ್ರಕಾಶಿಸುತ್ತದೆ. ಈ ಅರ್ಥವು ವ್ಯಾಕರಣ, ನಿಘಂಟುಗಳ ಸಹಾಯದಿಂದ ದೊರಕುವಂಥದಲ್ಲ; ಕಾವ್ಯಾರ್ಥತತ್ತ್ವಜ್ಞರಿಗೆ ಮಾತ್ರ ತಿಳಿಯುವಂಥದು. ಇದು ಸಹೃದಯರ ಮನಸ್ಸಿನಲ್ಲಿ ಛಟ್ಟನೆ ಹೊಳೆಯುತ್ತದೆ. (ಯಾರು ಸಹೃದಯನಲ್ಲವೋ ಅವನಿಗೆ ಮಾತ್ರ ವಾಚ್ಯಾರ್ಥ-ವ್ಯಂಗ್ಯಾರ್ಥಗಳ ನಡುವೆ ಕ್ರಮ ಅನುಭವಕ್ಕೆ ಬರುವುದು, ಪೂರ್ಣಭಾಷಾಜ್ಞಾನವಿಲ್ಲದ ಅಭ್ಯಾಸಿಗೆ ಪದಾರ್ಥ-ವಾಕ್ಯಾರ್ಥಗಳ ನಡುವೆ ಕ್ರಮ ಗೋಚರವಾಗುವಂತೆ—ಲೋಚನಕಾರರ ವ್ಯಾಖ್ಯಾನ) ವಾಚ್ಯಾರ್ಥ, ವ್ಯಂಗ್ಯಾರ್ಥಗಳಲ್ಲಿ ವ್ಯಂಗ್ಯಾರ್ಥವೇ ಪ್ರಧಾನವಾಗಿದ್ದು ರಮಣೀಯವಾಗಿದ್ದರೆ ಅದು ಧ್ವನಿಯೆನಿಸಿಕೊಳ್ಳುತ್ತದೆ. ಹೀಗೆ ಧ್ವನಿತವಾದದ್ದು ವಸ್ತು, ಅಲಂಕಾರ ಇಲ್ಲವೆ ರಸವಾಗಿರಬಹುದು. ವ್ಯಂಗ್ಯಾರ್ಥವು ಕವಿಯ ಪ್ರಯತ್ನದಿಂದಾಗಿ (ಕವಿಪ್ರೌಢೋಕ್ತಿ ನಿಷ್ಪನ್ನ) ಸಾಧ್ಯವಾಗಿರಬಹುದು ಅಥವಾ ಸಂದರ್ಭಬಲದಿಂದ ತನಗೆ ತಾನೇ (ಸ್ವತಃಸಂಭವಿ) ಸಿದ್ಧವಾಗಿರಲೂಬಹುದು.

ಹೀಗೆ ಸಂಗ್ರಹಿಸಿಕೊಂಡ ವಿಚಾರಗಳಿಂದ ಆನಂದವರ್ಧನನ ಆಲೋಚನೆಗಳನ್ನು ಈ ಮುಂದಿನಂತೆ ಪುನಾರೂಪಿಸಿಕೊಳ್ಳಬಹುದು: ವಾಚ್ಯಾರ್ಥ ಹಾಗೂ ವ್ಯಂಗ್ಯಾರ್ಥಗಳು ಎರಡು ವಿಭಿನ್ನ ನೆಲೆಗಳ **(levels)** ಅರ್ಥಗಳು. ವಾಚ್ಯಾರ್ಥ ಮೂಲಕ ಸಾಧ್ಯವಾಗುವ ವ್ಯಂಗ್ಯಾರ್ಥವು ಬೌದ್ಧಿಕವಾಗಿರಬಹುದು **(cognitive)** ಅಥವಾ ರಸಾದಿ

ಗಳ ಅನುಭವವಾಗಿರಬಹುದು (noncognitive) ಅಥವಾ ಇವೆರಡೂ ಕ್ರಮವಾಗಿ ಒಂದರ ನಂತರ ಇನ್ನೊಂದು (ಸಂಲಕ್ಷ್ಯಕ್ರಮದಲ್ಲಿ) ಆಗಿರಬಹುದು. ವ್ಯಂಗ್ಯಾರ್ಥವು ಬಳಕೆಯಿಂದ ರೂಢಿಗೊಂಡ (conventional) ಅರ್ಥಕ್ಕಿಂತ ಭಿನ್ನವಾದದ್ದರಿಂದ ಅದು ನಿಘಂಟುಗಳಿಂದ ದೊರೆಯಲಾರದು. ಭಾಷಾವಿಶ್ಲೇಷಣೆಯ ಮೂಲಕ ಸಾಧ್ಯವಾಗದ್ದರಿಂದ ಅದು ವ್ಯಾಕರಣದ ಸಹಾಯದಿಂದಲೂ ದೊರೆಯಲಾರದು. 'ಥಟ್ಟನೆ ಹೊಳೆಯುತ್ತದೆ' ಎಂಬ ಮಾತು ಅದು ವಿಶ್ಲೇಷಣೆಯ ಮೂಲಕ ತಲುಪುವ ಅರ್ಥವಲ್ಲ ಎಂಬ ಅಭಿಪ್ರಾಯಕ್ಕೆ ಪೂರಕವಾಗಿದೆ. ವಾಚ್ಯ-ವ್ಯಂಗ್ಯಗಳ ನಡುವಿನ ಕ್ರಮ ಅರಿವಿಗೆ ಬರುವಂತಿರುವ ಸಂಲಕ್ಷ್ಯಕ್ರಮಧ್ವನಿಯನ್ನೂ ಪ್ರಸ್ತಾಪಿಸಿರುವುದರಿಂದ ಈ ಅವಧಿಯಲ್ಲಿ ವಿಶ್ಲೇಷಣೆಯೂ ನಡೆದಿರುವುದು ಸಾಧ್ಯ–ಅಂದರೆ ವ್ಯಂಗ್ಯಾರ್ಥವು ವಿಶ್ಲೇಷಣೆಯ ಫಲಿತವೂ ಆಗಿರುವುದು ಸಾಧ್ಯ ಎಂದು ವಾದಿಸುವುದು ಸಾಧ್ಯವಾದರೂ ಇದು ಧ್ವನ್ಯಾಲೋಕಕಾರನಿಗೆ ಸಮ್ಮತವಾಗಿರುವಂತೆ ತೋರುವುದಿಲ್ಲ. ಒಟ್ಟಿನಲ್ಲಿ ವ್ಯಂಗ್ಯಾರ್ಥದ ಮುಖ್ಯ ಲಕ್ಷಣಗಳಿವು : (ಅ) ಅದು ರೂಢಿಮೂಲವಾದ ಅರ್ಥವಲ್ಲ (ಅಥವಾ ಅನುಭವವಲ್ಲ) ; (ಆ) ಅದು ತಕ್ಷಣ ಹೊಳೆಯುವಂಥದು : ಇದರಿಂದಾಗಿ (ಇ) ಅದು ವಿಶ್ಲೇಷಣಜನ್ಯವಲ್ಲ ಅಥವಾ ನಿಯಮಗೋಚರವಾದದ್ದು (rule guided) ಅಲ್ಲ. ರೂಢಿಮೂಲವಾದ ವಾಚ್ಯಾರ್ಥವನ್ನು 'ನಿತ್ಯವಾದ' ಅಥವಾ ಸಾಮಾನ್ಯವಾಗಿ ಬದಲಾಗದ ಅರ್ಥವೆಂದು ಗ್ರಹಿಸಿಕೊಂಡರೆ (ಧ್ವನ್ಯಾಲೋಕಕಾರನ ಆಶಯ ಇದೇ ಎಂದು ನಮ್ಮ ಎಣಿಕೆ) ವ್ಯಂಗ್ಯಾರ್ಥವೆಂಬುದು ಸಂದರ್ಭಾನುಸಾರ ಸೂಚ್ಯವಾದ ಅರ್ಥವೆಂದೂ ವ್ಯಂಜಕವೆಂಬುದು ಇಂತಹ ಅರ್ಥವನ್ನು ಸೂಚಿಸಲು ಸಮರ್ಥವಾದ ಘಟಕವೆಂದೂ ಹೇಳಿದಂತಾಯಿತು.

೨

ಈಗ ಭಾಷಾಘಟಕವೊಂದಕ್ಕೂ ಅದು ಸೂಚಿಸುವ 'ಅರ್ಥ'ಕ್ಕೂ (ಅರ್ಥ = ಬೌದ್ಧಿಕ/ಅಬೌದ್ಧಿಕ ಅನುಭವ) ಇರುವ ಸಂಬಂಧವೆಂಥದು ಎಂಬುದನ್ನು ಸಂಕ್ಷೇಪವಾಗಿ ಗಮನಿಸೋಣ : ಭಾಷಾಘಟಕವೊಂದರ ಅರ್ಥ : ೧. ಸಂದರ್ಭಮುಕ್ತವಾಗಿರಬಹುದು (ಸಡಿಲವಾದ ಅರ್ಥದಲ್ಲಿ) ; ೨. ಸಂದರ್ಭನಿಷ್ಠವಾಗಿರಬಹುದು.

ಸಂದರ್ಭಮುಕ್ತವಾದ ಅರ್ಥವು (ಅ) ರೂಢಿಮೂಲಕವಾಗಿರಬಹುದು (ಉದಾ : ನಿಘಂಟಿನಲ್ಲಿಯ ಅರ್ಥ, ನಿತ್ಯಬಳಕೆಯ ಅನೇಕ ವಾಕ್ಯಗಳು ಹಾಗೂ ಕಾಕು ವಿಧಾನಗಳು) ಅಥವಾ (ಆ) ಸ್ವಭಾವಜನ್ಯವಾಗಿರಬಹುದು (ವರ್ಣಗಳಿಗೆ ಮಾತ್ರ ನಿರ್ದಿಷ್ಟಪರಿಣಾಮ ಬೀರುವ ಇಂತಹ ಗುಣವಿದೆ).

ಸಂದರ್ಭನಿಷ್ಠವಾದ ಅರ್ಥವು (ಅ) ಭಾಷಿಕಸಂದರ್ಭದಲ್ಲಿ ಸಿದ್ಧವಾದದ್ದಿರಬಹುದು ; (ಆ) ವ್ಯಾವಹಾರಿಕ ಸಂದರ್ಭದಲ್ಲಿ ಸಿದ್ಧವಾದದ್ದಿರಬಹುದು ; ಅಥವಾ (ಇ) ಸಾಂಸ್ಕೃತಿಕ ಸಂದರ್ಭದಲ್ಲಿ ಸಿದ್ಧವಾದದ್ದಿರಬಹುದು (ಸ್ಥೂಲವಾಗಿ ಹೀಗೆ ವಿಂಗಡಿಸಿಕೊಳ್ಳಲಾಗಿದೆ).

ಇವುಗಳಲ್ಲಿ ಭಾಷಾಸಂದರ್ಭವನ್ನನುಸರಿಸಿ ಸೂಚ್ಯವಾಗುವ ಅರ್ಥಗಳಿಗೆ ಈ ಕೆಲವು ಉದಾಹರಣೆಗಳನ್ನು ನೋಡಬಹುದು :

೧. ಇವನು ಕಲ್ಲುಗುಂಡಿನಂತಹ ಮನುಷ್ಯ. (ಮನುಷ್ಯ ಎಂಬುದಕ್ಕೆ ಕಲ್ಲುಗುಂಡಿನ ಕೆಲವು ಗುಣಗಳು ಆರೋಪಿತವಾಗಿವೆ).

೨. ರಾಮನೂ ಪೇಟೆಗೆ ಹೋಗುತ್ತಾನೆ (ಊ ಪ್ರತ್ಯಯದಿಂದಾಗಿ 'ಇನ್ನೂ ಯಾರೋ ಪೇಟೆಗೆ ಹೋಗುತ್ತಾರೆ' ಎಂಬುದು ಸೂಚ್ಯವಾಗಿದೆ).

೩. ಆ ಹುಡುಗ ಬಂದದ್ದು ನಮ್ಮ ಮನೆಗೆ ('ಆ ಹುಡುಗ ನಮ್ಮ ಮನೆಗೆ ಬಂದ' ಎಂಬ ಒಂದೇ ಘಟನೆಯನ್ನು ಎರಡಾಗಿ ವಿಭಜಿಸಿ, 'ಬಂದದ್ದು' ಈಗಾಗಲೇ ತಿಳಿದ ವಿಷಯವೆಂದೂ 'ನಮ್ಮ ಮನೆಗೆ' ಎಂಬುದು ಹೊಸದಾಗಿ ತಿಳಿಸಬೇಕಾದ ವಿಷಯವೆಂಬಂತೆಯೂ ಪ್ರಸ್ತಾಪಿತವಾಗಿದೆ).

೪. ಹರಿವ ನೀರಿದು. (ಇದು 'ಹರಿಯುವ ನೀರು' ಎಂಬುದು ವಿಷಯದ ಪ್ರಸ್ತಾವನೆ ಮಾತ್ರವಾಗಿದ್ದರೆ, ಪದಪಲ್ಲಟದಿಂದಾಗಿ 'ಹರಿವ' ಎಂಬುದು ಅವಧಾರಣೆ ಪಡೆದಿದೆ).

ವ್ಯಾವಹಾರಿಕ ಸಂದರ್ಭಗಳಿಗನುಗುಣವಾಗಿ ಭಿನ್ನಾರ್ಥಗಳು ನಿಷ್ಪನ್ನವಾಗುವುದನ್ನು ಈ ಕೆಳಗಿನ (ಒಂದೇ ವಾಕ್ಯ ವಿವಿಧ ಸಂದರ್ಭದಲ್ಲಿ ಬಳಕೆಯಾಗುವುದರ ಮೂಲಕ ನೀಡುವ ಅರ್ಥಗಳ) ಉದಾಹರಣೆಯ ಮೂಲಕ ಗಮನಿಸಬಹುದು :

| **ವಾಕ್ಯ** : 'ನನ್ನ ಹತ್ತಿರ ಹಣವಿಲ್ಲ' | **ವಾಕ್ಯಾರ್ಥ** |
|---|---|
| ೧. ತಂದೆ ಮಗನನ್ನು ಸಂದೇಹಿಸಿ ಪ್ರಶ್ನಿಸುತ್ತಾನೆ. | ವಾಕ್ಯದ ವಾಚ್ಯಾರ್ಥ. |
| ೨. ವ್ಯಕ್ತಿಯೊಬ್ಬ ಗೆಳೆಯನಲ್ಲಿ ಸಾಲ ಕೇಳುತ್ತಾನೆ. | 'ಹಣವಿದ್ದರೆ ಕೊಡಬಹುದಿತ್ತು'. |
| ೩. ಪುಸ್ತಕವೊಂದನ್ನು ಕೊಳ್ಳಬೇಕೆಂಬ ಹಂಬಲವಾದಾಗ | 'ಹಣ ಈಗ ಇರಬೇಕಾಗಿತ್ತು.' |
| ೪. ದರೋಡೆಕೋರನೊಬ್ಬ ಹೆದರಿಸಿದಾಗ | 'ನನಗೇನೂ ಮಾಡಬೇಡ'. ಅಥವಾ... |

ಅದೇ ವಾಕ್ಯದಿಂದ ಸೂಚ್ಯವಾದ ಅರ್ಥಗಳು ಸಂದರ್ಭಾನುಸಾರವಾಗಿ ಬೇರೆಬೇರೆಯಾಗಿರುತ್ತವೆ ಎಂಬುದು ಈ ಉದಾಹರಣೆಯಿಂದ ಸ್ಪಷ್ಟವಾಗಿದೆ.

ಭಾಷಾಘಟಕವು ಸೂಚಿಸುವ ಅರ್ಥವು ಸಂಸ್ಕೃತಿನಿಷ್ಠವಾಗಿಯೂ ಇರಬಹುದೆಂಬುದಕ್ಕೆ 'ಧ್ವನ್ಯಾಲೋಕ'ದಲ್ಲಿಯ ಈ ಲಕ್ಷ್ಯಭಾಗವೇ (ಕನ್ನಡಾನುವಾದ) ಒಂದು ಉದಾಹರಣೆ : "ದೇವರ್ಷಿಯು ಹೀಗೆ ಹೇಳುತ್ತಿರಲು ತಲೆತಗ್ಗಿಸಿ ನಿಂತ ಪಾರ್ವತಿಯು ಕೈಲಿದ್ದ ತಾವರೆಯ ದಳಗಳನ್ನು ಎಣಿಕೆ ಮಾಡಿದಳು." ಇದು ಲಜ್ಜೆಯೆಂಬ ಅರ್ಥವನ್ನು ಧ್ವನಿಸುವುದಕ್ಕೆ ಒಂದು ಉದಾಹರಣೆ. ಇಷ್ಟವಾದ ವಿಷಯವನ್ನು ಹೇಳಿದಾಗ ಸಂತೋಷವನ್ನು ಲಜ್ಜೆಯ ಮೂಲಕ ವ್ಯಕ್ತಪಡಿಸುವ ರೀತಿ ಒಂದು ಸಂಸ್ಕೃತಿಯಲ್ಲಿದ್ದಾಗ ಮೇಲಿನ ವಾಕ್ಯದಲ್ಲಿಯ

'ತಾವರೆಯ ದಳಗಳನ್ನು ಎಣಿಕೆಮಾಡಿದಳು' ಎಂಬುದು ಲಜ್ಜೆಯನ್ನು ಧ್ವನಿಸಬಹುದು ; ಬದಲಾಗಿ ಇಂತಹ ಸಂದರ್ಭದಲ್ಲಿ ಲಜ್ಜೆಯನ್ನು ವ್ಯಕ್ತಪಡಿಸದ, ಸಂತೋಷವನ್ನು ವಾಚ್ಯವಾಗಿಯೇ ತಿಳಿಸುವ ಸಂಸ್ಕೃತಿಯೊಂದರಲ್ಲಿ ಈ ಸಾಲು ಏನನ್ನೂ ಧ್ವನಿಸದೇ ಇರಬಹುದು ಅಥವಾ ಬೇರೊಂದನ್ನು ಧ್ವನಿಸಬಹುದು.

ಇನ್ನೂ ಒಂದು ಉದಾಹರಣೆಯನ್ನು ಇಲ್ಲಿ ಗಮನಿಸೋಣ : ಈ ಕೆಳಗಿನ ಜನಪದ ತ್ರಿಪದಿಯಲ್ಲಿಯ 'ತಿರುಗಿ' ಎಂಬ ಪದ ತೌರಿನ ಬಗೆಗಿನ ಅಭಿಮಾನ, ಪ್ರೀತಿ, ಅಗಲಿಕೆಯ ದುಃಖ ಮುಂತಾದವುಗಳನ್ನು ಧ್ವನಿಸುವ ಪದವೆಂಬುದು ಈಗಾಗಲೇ ವಿಮರ್ಶಿತವಾಗಿದೆ :

> ತೊಟ್ಟಿಲ ಹೊತ್ತುಕೊಂಡು ತೌರುಬಣ್ಣ ಉಟ್ಟುಕೊಂಡು
> ಅಪ್ಪ ಕೊಟ್ಟೆಮ್ಮೆ ಹೊಡಕೊಂಡು। ತಂಗ್ಯಮ್ಮ
> ತಿಟ್ಟತ್ತಿ ತಿರುಗಿ ನೋಡ್ಯಾಳು ॥

ಇದೇ ತ್ರಿಪದಿಯನ್ನೇ ಈಚೆಗೆ ಜಾರಿಗೆ ಬಂದಿರುವ 'ಹೆಣ್ಣಿಗೆ ತಂದೆಯ ಆಸ್ತಿಯಲ್ಲಿ ಸಮಾನ ಹಕ್ಕು' ಎಂಬ ಕಾನೂನಿನಿಂದ ಒದಗಬಹುದಾದ ಪರಿಸ್ಥಿತಿಯ ಹಿನ್ನೆಲೆಯಲ್ಲಿಟ್ಟು ನೋಡೋಣ. ತಂದೆಯ ಆಸ್ತಿಯಲ್ಲಿ ಪಾಲು ಕೇಳಿರುವ ಮಗಳಿಗೆ ತನಗಿರುವ ಅಲ್ಪಆಸ್ತಿಯಲ್ಲಿಯೇ ಪಾಲುಮಾಡಿ ಎಮ್ಮೆ, ಸೀರೆ, ತೊಟ್ಟಿಲುಗಳನ್ನು ಕೊಟ್ಟು, ತನ್ನ ಗಂಡು ಮಕ್ಕಳ ಕುರಿತಾದ ಚಿಂತೆ, ಹೆಣ್ಣುಮಗಳನ್ನು ಕುರಿತು ಕೋಪ ಅಸಹಾಯಕತೆಗಳಿಂದ ಕೂಡಿದ ತಂದೆ–ಇದನ್ನು ನೆನೆಸಿಕೊಂಡು ತಿಟ್ಟುಹತ್ತಿ ಇಳಿಯುತ್ತಿರುವ ಮಗಳು 'ತಿರುಗಿ', ನಿಮ್ಮೊಂದಿಗಿನ ಸಂಬಂಧ ಕಡಿಯಿತು ಎಂಬರ್ಥದಲ್ಲಿ ಕೋಪವನ್ನು ಪ್ರಕಟಿಸಿದುದನ್ನು ಕಲ್ಪಿಸಿಕೊಳ್ಳಬಹುದಾಗಿದೆ. ಈಗ ಅದೇ 'ತಿರುಗಿ' ಪದ ಬದಲಾದ ಸಾಂಸ್ಕೃತಿಕ ಸಂದರ್ಭದಲ್ಲಿ ಬೇರೊಂದನ್ನು ಧ್ವನಿಸುತ್ತದೆ.

ಈವರೆಗೆ ವಿವರಿಸಿದ ಅರ್ಥವು ವ್ಯಕ್ತಗೊಳ್ಳುವ ವಿವಿಧ ಸಾಧ್ಯತೆಗಳಲ್ಲಿ ಮೊದಲನೆಯದಾದ 'ಸಂದರ್ಭಮುಕ್ತ'ವೆನ್ನಬಹುದಾದ (ಭಾಷಾಘಟಕಗಳ) ಅರ್ಥವು ಪುನರಾವರ್ತನೆಗೊಳ್ಳುತ್ತಿರುವ ಅರ್ಥವಾಗಿರುತ್ತದೆ. ಸಂದರ್ಭನಿಷ್ಠ ಪ್ರಕಾರಗಳಲ್ಲಿ ಭಾಷಾಸಂದರ್ಭದಿಂದ ಸೂಚ್ಯವಾಗುವ ಅರ್ಥಗಳು (ಉಪಮೆ, ರೂಪಕ ಮುಂತಾದವನ್ನು ಕೆಲಮಟ್ಟಿಗೆ ಹೊರತುಪಡಿಸಿ) ಖಚಿತವಾದ ನಿಯಮಗಳಿಗೆ ಒಳಪಡುವಂಥವು. ಹಾಗೂ/ಯಾಕೆಂದರೆ ಈ ನಿಯಮಗಳನ್ನು ಅಡಗಿಸಿಕೊಂಡ ಸಂದರ್ಭ ಬಳಕೆಯಾದ ಭಾಷೆಯಲ್ಲಿಯೇ ಇರುತ್ತದೆ. ಎರಡನೆಯ ವ್ಯಾವಹಾರಿಕ ಸಂದರ್ಭವೆಂಬುದು ಸಾಪೇಕ್ಷವಾಗಿ ಅಮೂರ್ತವಾದದ್ದಾಗಿದ್ದು, ಕಾವ್ಯಭಾಷೆಯ ವಿಷಯದಲ್ಲಿ ಅದನ್ನು ಪುನಾರಚಿಸಿಕೊಳ್ಳುವ ಅಗತ್ಯವುಂಟಾಗುತ್ತದೆ. ಆದ್ದರಿಂದ ವ್ಯಾವಹಾರಿಕ ಅರ್ಥವನ್ನು (ಸೂಚ್ಯವಾದ ಅರ್ಥವನ್ನು) ಹೊರತೆಗೆಯಲು ಇರುವ ನಿಯಮಗಳೂ ತೀರ ಖಚಿತವಲ್ಲ. ಕಾವ್ಯಭಾಷೆಯ ವಿಷಯದಲ್ಲಿಯೂ ಕವಿಯ ನೇರವಾದ ಮಾತುಗಳಿಗಿಂತ ಪಾತ್ರಗಳ ಮಾತುಗಳು (ಸಂದರ್ಭದ ಹಿನ್ನೆಲೆಯಿರುವುದರಿಂದ) ಸೂಚ್ಯಾರ್ಥಗಳನ್ನು ಬೇಗನೆ ಬಿಟ್ಟುಕೊಡುತ್ತವೆ. ಮೂರನೆಯದಾಗಿ ಹೆಸರಿಸಿದ ಸಾಂಸ್ಕೃತಿಕ ಸಂದರ್ಭವೆಂಬುದು ತುಂಬ ಅಮೂರ್ತವಾದುದರಿಂದ ಈ ಹಿನ್ನೆಲೆಯಿಂದ

ವ್ಯಕ್ತವಾಗುವ ಅರ್ಥಗಳನ್ನು ನಿಯಮಗಳಿಗೆ ಒಳಪಡಿಸಿ ತೋರಿಸುವುದು ಕಷ್ಟ. ಹಾಗೂ/ ಆದ್ದರಿಂದ ಈ ಕಾರಣವಾಗಿ ವ್ಯಕ್ತವಾಗುವ ಸೂಚ್ಯಾರ್ಥಗಳ ಬಗೆಗೆ ಭಿನ್ನಾಭಿಪ್ರಾಯ ವಿರುವುದೂ ಸೂಚ್ಯಾರ್ಥಗಳು ಕಾಲದಿಂದ ಕಾಲಕ್ಕೆ ಬದಲಾಗುವುದೂ ಸಾಧ್ಯವೆಂದು ಹೇಳಬಹುದು. (ಇಲ್ಲೆಲ್ಲ ಸಂದರ್ಭನಿಷ್ಠವಾದ ಅರ್ಥಗಳನ್ನು ವ್ಯಂಗ್ಯಾರ್ಥವನ್ನದೆ ಉದ್ದೇಶಪೂರ್ವಕವಾಗಿಯೇ ಸೂಚ್ಯಾರ್ಥವೆಂದು ಕರೆಯಲಾಗಿದೆ.)

೩

ಈ ಮೇಲೆ ವಿವರಿಸಲಾದ ವಿವಿಧ ಬಗೆಯ ಅರ್ಥಗಳಲ್ಲಿ ಸಂಸ್ಕೃತಿನಿಷ್ಠವಾದ ಅರ್ಥ (ಅಥವಾ ತದನುಗುಣವಾದ ಭಾವ) ಧ್ವನ್ಯಾಲೋಕಕಾರನ ಪ್ರಕಾರ ವ್ಯಂಗ್ಯಾರ್ಥದ ಪರಿಧಿಯಲ್ಲಿ ಬರುತ್ತದೆ ಎಂದು ಹೇಳಬಹುದು. ರೂಢಿಮೂಲವಾದ ಅರ್ಥವೆಂಬುದು ವಾಚ್ಯಾರ್ಥವೆನಿಸಿಕೊಳ್ಳುತ್ತದೆ. ವ್ಯವಹಾರದಲ್ಲಿ ಸೂಚ್ಯವಾಗುವ ಅರ್ಥವೂ (ತದನುಗುಣವಾದ ಭಾವದೊಡನೆ ಸೇರಿ) ಬಹುಮಟ್ಟಿಗೆ ವ್ಯಂಗ್ಯಾರ್ಥವೆಂದೇ ಹೇಳಬಹುದು. (ಉದಾ : 'ನನ್ನ ಹತ್ತಿರ ಹಣವಿಲ್ಲ' ಎಂಬ ವಾಕ್ಯ ಕಾವ್ಯಸಂದರ್ಭವೊಂದರಲ್ಲಿ 'ಇದ್ದರೆ ಕೊಡುತ್ತಿದ್ದೆನಲ್ಲಾ' ಎಂಬ ಅಸಹಾಯಕತೆಯ ಭಾವವನ್ನು ವ್ಯಂಜಿಸುತ್ತಿರಬಹುದು.) ಆದರೆ ವ್ಯವಹಾರದ ಒಟ್ಟಾರೆ ಉದ್ದೇಶ-ಪರಿಣಾಮಗಳು ಕಾವ್ಯದಲ್ಲಿಯದಕ್ಕಿಂತ ಭಿನ್ನವಾದುದರಿಂದ ಇದನ್ನು ವ್ಯಂಗ್ಯಾರ್ಥವೆಂದು ಧ್ವನ್ಯಾಲೋಕಕಾರ ಕರೆಯಲಾರದಾಗಿದ್ದಾನೆ (ಅಂದರೆ ಅರ್ಥವು ರಮಣೀಯವಾಗಿರಬೇಕು ಎಂಬುವನ್ನು ಇಲ್ಲೆಲ್ಲ ಪೂರ್ವಪಕ್ಷವಾಗಿಟ್ಟು ಕೊಳ್ಳಬೇಕೆಂದರ್ಥ). ಭಾಷಿಕ ಸಂದರ್ಭದಲ್ಲಿ ಸೂಚ್ಯವಾಗುವ ಅರ್ಥಗಳು (ಇವೂ ಬಳಕೆಯಿಂದಾಗಿ ರೂಢಿಗೊಂಡ ಅರ್ಥಗಳೇ) ನಿಯಮಬದ್ಧವಾಗಿ ನಿಷ್ಪನ್ನವಾಗುವುದರಿಂದ ಹಾಗೂ ಈ ನಿಯಮಗಳು ಪುನರಾವರ್ತನೆಗೊಳ್ಳುತ್ತಿರುವುದರಿಂದ ವ್ಯಂಗ್ಯಾರ್ಥವೆನಿಸಿಕೊಳ್ಳಲಾರವು. ಧ್ವನ್ಯಾಲೋಕಕಾರನ ನಿಲುವು ಪರೋಕ್ಷವಾಗಿ ಇದೇ. ಈ ವಿಷಯವಾಗಿ ಮತ್ತಷ್ಟು ವಿವೇಚನೆ ಸಾಧ್ಯವಾದರೂ ಇಲ್ಲಿ ಅದು ಪ್ರಸ್ತುತವಲ್ಲ.

ಆದರೆ ಧ್ವನ್ಯಾಲೋಕಕಾರನು ವರ್ಣ ಹಾಗೂ ಕಾಕುಗಳನ್ನು ವ್ಯಂಜಕಗಳ ಪಟ್ಟಿಯಲ್ಲಿ ಸೇರಿಸಿದ್ದಾನೆ. ಮೂರನೆಯ ಉದ್ಯೋತದ ೩,೪ನೆಯ ಕಾರಿಕೆಗಳಲ್ಲಿ ಅವನು ಹೇಳಿದ ಮಾತುಗಳು ಹೀಗಿವೆ (ಅನು : ಕೆ. ಕೃಷ್ಣಮೂರ್ತಿ) : ''ಶಕಾರ, ಷಕಾರಗಳು, ರೇಫೆಯೊಡನೆ ಸಂಯುಕ್ತವಾದ ಅಕ್ಷರಗಳು, ಢಕಾರ-ಇವೆಲ್ಲವೂ ಶೃಂಗಾರರಸದಲ್ಲಿ ವಿರೋಧಿಗಳಾಗುವವು. ಆದುದರಿಂದ ಅಕ್ಷರಗಳಿಗೆ ರಸವನ್ನು ಧ್ವನಿಸುವ ಶಕ್ತಿಯುಂಟು. ಇವೇ ಅಕ್ಷರಗಳೇ ಬೀಭತ್ಸವೇ ಮೊದಲಾದ ರಸಗಳಲ್ಲಿ ಪ್ರಯುಕ್ತವಾದಾಗ ರಸಪುಷ್ಟಿಯನ್ನು ತರುತ್ತವೆ. ಆದುದರಿಂದಲೂ ಅಕ್ಷರಗಳಿಗೆ ರಸವ್ಯಂಜಕತ್ವವುಂಟು.'' ಆದರೆ ವರ್ಣದ ವ್ಯಂಜಕತ್ವವನ್ನು ಪ್ರಶ್ನಿಸುವುದು ಸಾಧ್ಯವೆಂದು ತೋರುತ್ತದೆ. ವರ್ಣಗಳು ರಸಾನುಭವದ ಸಂದರ್ಭದಲ್ಲಿ ಉಂಟುಮಾಡಬಹುದಾದ ಅನುಕೂಲಕರ ಅಥವಾ ವಿರೋಧಿಯಾದ ಪರಿಣಾಮಗಳು

ಆ ವರ್ಣಗಳ ಬಳಕೆಯ ಎಲ್ಲ (ಕಾವ್ಯ, ಕಾವ್ಯೇತರ) ಸಂದರ್ಭಗಳಲ್ಲಿಯೂ ವ್ಯಕ್ತವಾಗುತ್ತಿರುತ್ತವೆ. ವ್ಯತ್ಯಾಸವಿಷ್ಟೆ: ಉಳಿದ ಸಾಮಾನ್ಯ ಸಂದರ್ಭಗಳಲ್ಲಿ ವಿರಳವಾಗಿ ಹಾಗೂ ಅನಿಯತವಾಗಿ ಬಳಕೆಯಾಗುವುದರಿಂದಾಗಿ ಪರಿಣಾಮದ ಪ್ರಮಾಣ ಅಲ್ಪವಾಗಿರುತ್ತಿದ್ದು ಕಾವ್ಯದಲ್ಲಿ ಪುನರಾವರ್ತಿತವಾಗಿ ಹಾಗೂ ನಿಯತವಾದ ಸ್ಥಾನಗಳಲ್ಲಿ ಬಳಕೆಯಾದಾಗ (ಇವೆರಡೂ ಸಂಗತಿಗಳು ಪೂರಕವಾಗಿ ಪೊತ್ತದಲ್ಲಿ) ಗಮನಾರ್ಹ ಪರಿಣಾಮವನ್ನುಂಟು ಮಾಡಬಹುದು. ಆದರೆ ಯಾವುದೇ ವರ್ಣವಿರಲಿ. ಅದು ಪುನರಾವರ್ತನೆಯಿಂದಾಗಿ ಉಂಟುಮಾಡುವ ಪರಿಣಾಮವು ಪೂರ್ವನಿರ್ಧರಿತವೇ ಆಗಿರುತ್ತದೆ. ಉದಾಹರಣೆಗೆ, ಟ್.ಡ್ ಮೊದಲಾದ ಮೂರ್ಧನ್ಯವರ್ಣಗಳು ಯಾವಾಗಲೂ ಕಠಿಣತೆಯನ್ನೇ ಸೂಚಿಸುತ್ತವೆ; ಮ್, ಲ್ ಮುಂತಾದ ಮೃದುವರ್ಣಗಳು ಕೋಮಲತೆಯನ್ನೇ ಉಂಟುಮಾಡುತ್ತವೆ ಇತ್ಯಾದಿ. ಈ ಗುಣಗಳು ಕಾಣಿಸಿಕೊಳ್ಳುವ ಸಂದರ್ಭಕ್ಕೆ ಅನುಗುಣವಾಗಿ ಅವು ಪರವಾಗಿಯೋ ವಿರೋಧವಾಗಿಯೋ ನಿಲ್ಲುತ್ತವೆ ಎಂಬುದಿಷ್ಟೆ ಇಲ್ಲಿಯ ವಿಶೇಷ. ಹೀಗಾಗಿ ಇತರ ಅರ್ಥಯುಕ್ತ ಘಟಕಗಳಿಗೆ ಹೋಲಿಸಿದಾಗ ವರ್ಣಗಳು ಕ್ರಿಯಾಶೀಲವಲ್ಲದ **(passive)** ಘಟಕಗಳೆಂದು ಹೇಳಬೇಕು. ಕಾವ್ಯದಲ್ಲಿ ವರ್ಣಗಳು ಉಂಟುಮಾಡುವ ಪರಿಣಾಮವು ಸಂಯುಕ್ತರೂಪದ್ದು **(collective)** ಎಂದು ಮೇಲೆ ಹೇಳಲಾಯಿತಷ್ಟೆ. ಧ್ವನ್ಯಾಲೋಕಕಾರ ವ್ಯಂಗ್ಯಾರ್ಥವನ್ನು ನಿರ್ವಚಿಸಿದ್ದು ಈ ರೀತಿಯಲ್ಲಲ್ಲ. ವ್ಯಂಗ್ಯಾರ್ಥವೆಂಬುದು ಬೇರೊಂದು ನೆಲೆಯಿಂದ, ಪೂರ್ವನಿರ್ಧರಿತವಲ್ಲದ ರೀತಿಯಲ್ಲಿ **(unpredictable)** ಸೂಚ್ಯವಾದ ಅರ್ಥ ಎಂಬುದೇ ಆತನ ನಿಲುವು. ಸ್ತ್ರೀಯ ಲಾವಣ್ಯವೆಂಬುದು ಆಕೆಯ ಅವಯವಗಳ ಚೆಲುವಿಗಿಂತ ಬೇರೆಯಾದದ್ದು (ಕೇವಲ ಮೊತ್ತವಲ್ಲ) ಎಂಬ (ಕಾರಿಕೆ ೧–೪) ಮಾತಿನಿಂದಲೇ ಇದು ಸ್ಪಷ್ಟ.

ಕಾಕುವಿನ ಬಗೆಗೆ ಧ್ವನ್ಯಾಲೋಕಕಾರನ ನಿಲುವು ಸ್ವಲ್ಪ ಭಿನ್ನವಾಗಿದೆ. ವ್ಯಂಗ್ಯಾರ್ಥ ಪ್ರತೀತಿಗೆ ಕಾಕು ಸಹಾಯಕವಾಗಿ ಕೆಲಸಮಾಡುತ್ತದೆ ಮಾತ್ರ; ವ್ಯಂಗ್ಯಾರ್ಥದ ಸಾಮರ್ಥ್ಯವಿರುವುದು ವಾಕ್ಯದ ಅರ್ಥದಲ್ಲಿಯೇ. ಕಾಕುವನ್ನು ನಾವು ಸ್ವೇಚ್ಛೆಯಾಗಿ ಬಳಸುವಂತಿಲ್ಲ ಅಥವಾ ಹಾಗೆ ಬಳಸಿದಲ್ಲಿ ಅದು ವಿಶೇಷಾರ್ಥವನ್ನು ಕೊಡುವುದೂ ಇಲ್ಲ. ಇದು ಧ್ವನ್ಯಾಲೋಕಕಾರನ ನಿಲುವು. ಕಾಕುವಿನ ಬಳಕೆಯಲ್ಲಿ ಆಯ್ಕೆಗೆ **(choice)** ಅವಕಾಶವಿಲ್ಲ; ಅದು ವಾಕ್ಯಾರ್ಥದಿಂದಲೇ ನಿಯಂತ್ರಿತವಾಗಿದೆ ಎಂಬ ಇಲ್ಲಿಯ ಆಲೋಚನೆ ಸರಿಯಾಗಿಯೇ ಇದೆ. (ಕಾಕುವಿನಿಂದ ಪ್ರಕಟವಾಗುವ ವ್ಯಂಗ್ಯ ಯಾವಾಗಲೂ ಗುಣೀಭೂತವಾಗಿಯೇ ಕಾಣಿಸಿಕೊಳ್ಳುತ್ತದೆ ಎಂಬ ಲೋಚನಕಾರನ ಅಭಿಪ್ರಾಯವೂ ಇದಕ್ಕೆ ಪೂರಕವಾಗಿರುವಂತೆ ತೋರುತ್ತದೆ). ಇಷ್ಟರಮಟ್ಟಿಗೆ ಕಾಕುವಿಗೆ ವ್ಯಂಜಕಗಳ ಸಾಲಿನಲ್ಲಿ ಕೆಳಮಟ್ಟದ ಸ್ಥಾನವೇ ಸಂದಿದೆ. ಆದರೆ ಮತ್ತೆ ನಾವು ಎತ್ತಬಹುದಾದ ಪ್ರಶ್ನೆ: ಕಾಕು ವಿಧಾನಗಳು **(intonation patterns)** ಹಾಗೂ ಅವು ಸೂಚಿಸುವ ಅರ್ಥಗಳು ಅಥವಾ ಇವುಗಳ ನಡುವಿನ ಸಂಬಂಧ ಭಾಷೆಯೊಂದರಲ್ಲಿ ಪೂರ್ವನಿರ್ಧರಿತವೇ ಅಲ್ಲವೇ? ಸಾಮಾನ್ಯ ಭಾಷಾಜ್ಞಾನದ ಒಂದು ಅಂಶವೇ ಅಲ್ಲವೇ? ಕಾವ್ಯಭಾಷೆಯಲ್ಲಿ ಬಳಕೆಯಾಗುವ ನಿರ್ದಿಷ್ಟ

ಕಾಕುವೊಂದು ಅದೇ ಆಡುಭಾಷೆಯಲ್ಲಿ ಕಾಣಿಸಿಕೊಂಡಾಗಿಗಿಂತ ಭಿನ್ನವಾದ ಅರ್ಥವನ್ನು ವ್ಯಕ್ತಪಡಿಸುವುದು ಸಾಧ್ಯವೇ ? ಆನಂದವರ್ಧನ ಕೊಡುವ ಉದಾಹರಣೆ, "...ಸ್ವಸ್ಥಾ ಭವನ್ತಿ ಮಯಿ ಜೀವತಿ ಧಾರ್ತರಾಷ್ಟ್ರಾಃ"—"ನಾನು ಜೀವಿಸಿರುವಾಗಲೇ ಕೌರವರು ಸ್ವಸ್ಥವಾಗಿರುತ್ತಾರೆ !" (ಇದು ಅಸಾಧ್ಯವೆಂಬುದು ಭಾವ) ಎಂಬುದು ಇದಕ್ಕೆ ನಕಾರಾತ್ಮಕವಾಗಿ ಉತ್ತರಿಸುತ್ತದೆ. ಆನಂದವರ್ಧನನ ಹೇಳಿಕೆ ಉದಾಹರಣೆಗಳಿಂದ ಅವನು ಯಾವುದೇ ಕಾಕುವಿಲ್ಲದ ವಾಕ್ಯವೊಂದನ್ನು ಮೂಲರೂಪವಾಗಿ (**baseform**) ಕಲ್ಪಿಸಿ ಅದಕ್ಕೆ ಕಾಕು ಅನಂತರದಲ್ಲಿ ಆರೋಪಿತವಾಗುತ್ತದೆ ಎಂದು ಗ್ರಹಿಸಿಕೊಂಡಿದ್ದಾನೆ ಎಂದು ಅನುಮಾನಿಸಬೇಕೋ ಏನೋ ! ಆದರೆ ಈ ಗ್ರಹಿಕೆಯೂ (ಇದ್ದಲ್ಲಿ) ತಪ್ಪೆಂದೇ ಹೇಳಬೇಕು.

೪

ಈ ಲೇಖನದ ಕೊನೆಯ ಭಾಗವಾಗಿ, ಆಧುನಿಕ ಸಾಹಿತ್ಯವಿಮರ್ಶೆಯ ಸಂದರ್ಭದಲ್ಲಿ ವ್ಯಂಗ್ಯಾರ್ಥವಲಯವನ್ನು ಕುರಿತಂತೆ ಒಂದು ಪ್ರಶ್ನೆಯನ್ನು ಹಾಕಿಕೊಳ್ಳಬಹುದು. ಕವನವೊಂದನ್ನು (ಅಥವಾ ಕತೆ, ಕಾದಂಬರಿ) ಶೈಲಿಯ ವಿಶ್ಲೇಷಣೆಗೆ ಒಳಪಡಿಸಿ, ಅದರ ಭಾಷಾಪರಿಕರಗಳಿಂದಲೇ ಕವನದಲ್ಲಿ ವಾಚ್ಯವಾಗದ ಅರ್ಥವನ್ನು—ಕವನದ ಬಗೆಗೆ ಹಾಗೂ/ಅಥವಾ ಕವಿಯ ಮನೋಧರ್ಮದ ಬಗೆಗೆ—ಹೊರತೆಗೆಯಲು ಸಾಧ್ಯವಾಗಬಹುದು. ಉದಾಹರಣೆಗೆ, ಗಂಗಾಧರ ಚಿತ್ತಾಲರ 'ಹರಿವ ನೀರಿದು' ಕವನದ ವಾಕ್ಯರಚನೆಯನ್ನು ಗಮನಿಸಿ, ಈ ಒಂದು ಅಭಿಪ್ರಾಯವನ್ನು ತಳೆಯಬಹುದು : ಮನುಷ್ಯ ಕಾಲಪ್ರವಾಹದ ಬಾಧಕ ಕ್ರಿಯೆಗೆ ಅನಿವಾರ್ಯವಾಗಿ ಒಳಗಾಗಿದ್ದರೂ ಈ ಕಾರಣಕ್ಕಾಗಿ ಜೀವನವನ್ನು ನಿರಾಕರಿಸದೆ, ನಿಷ್ಕ್ರಿಯನಾಗದೆ, ನಿರ್ಲಿಪ್ತನಾಗಿ ಕಾಲಗರ್ಭವನ್ನು ತನ್ನ (ಪ್ರತಿ)ಕ್ರಿಯೆಗಳಿಂದ ತುಂಬುವುದು ಅಪೇಕ್ಷಣೀಯವಾದದ್ದು. (ವಿವರಗಳಿಗೆ ನೋಡಿ : 'ಹರಿವ ನೀರಿದು : ಒಂದು ಭಾಷಿಕ ವಿವೇಚನೆ' ಅಂಕಣ, ನವೆಂಬರ್–ಡಿಸೆಂಬರ್ ೮೩, ಬೆಂಗಳೂರು, ಪು. ೯–೧೬) ಕವನದ ಈ ಒಳ ಅರ್ಥ ವಾಚ್ಯವಾಗದ್ದರಿಂದ ವ್ಯಂಗ್ಯ ಎಂದೇ ಹೇಳಬೇಕು. ಆದರೆ ಲೇಖನದ ಪ್ರಾರಂಭದಲ್ಲಿ ಪಟ್ಟಿಮಾಡಲಾದ ವ್ಯಂಗ್ಯಾರ್ಥ ಲಕ್ಷಣಗಳಲ್ಲಿ ಎರಡನೆಯದು ಹಾಗೂ ಮೂರನೆಯದು ಇದು ವ್ಯಂಗ್ಯಾರ್ಥವೆಂದು ಕರೆಯಲು ಅಡ್ಡಿಯಾಗಿವೆ. ಇಲ್ಲಿ ಒಂದು ಸದ್ಯದ ಸಮಾಧಾನವನ್ನು ಹೇಳಬಹುದು. ಇಂತಹ ಒಳಅರ್ಥಗಳನ್ನು ಪಡೆಯಲು ಮೊದಮೊದಲು ವಿವರವಾದ, ಪ್ರಜ್ಞಾಪೂರ್ವಕವಾದ ವಿಶ್ಲೇಷಣೆ ಅಗತ್ಯವೆನಿಸಿದರೂ ಅಭ್ಯಾಸಬಲದಿಂದ ಮುಂದೆ ಅದು ಹೊಳೆಯುವ ಅರ್ಥವೇ ಆಗುತ್ತದೆ. (ಹೇಗಿದ್ದರೂ ಸಹೃದಯತ್ವವೆಂಬುದೂ ಕಾವ್ಯಾನುಶೀಲನದಿಂದಲೇ ಉಂಟಾಗುತ್ತದೆ ಎಂದು ಹೇಳಲಾಗಿದೆ). ಆದ್ದರಿಂದ ಈ ಅರ್ಥವನ್ನೂ ವ್ಯಂಗ್ಯಾರ್ಥವೆಂದೇ ಕರೆಯಬಹುದು. ಆದರೆ ಮಹಾಕಾವ್ಯದಂತಹ ದೀರ್ಘರಚನೆಗಳಿಗೆ ಈ ವಿವರಣೆಯನ್ನು ಹೊಂದಿಸಿಕೊಳ್ಳುವುದು ಕಷ್ಟವೇ. ವಿಶ್ಲೇಷಣೆಯೊಂದೇ ಅದಕ್ಕೆ ದಾರಿ. ಆದ್ದರಿಂದ ಇಂತಹ ಒಳ ಅರ್ಥಗಳನ್ನು ವ್ಯಂಗ್ಯಾರ್ಥವೆನ್ನಲು ಬಾರದು (ಅಥವಾ ವ್ಯಂಗ್ಯಾರ್ಥವು ವಿಶ್ಲೇಷಣಜನ್ಯವೂ

ಆಗಿರಬಹುದೆಂದು ತಿದ್ದಿಕೊಳ್ಳಬೇಕು).

ಈ ಸಂಗತಿಯನ್ನು ಇಲ್ಲಿ ಪ್ರಸ್ತಾಪಿಸಿದುದರ ಉದ್ದೇಶವಿಷ್ಟೆ: ಕಾವ್ಯದ ಓದುಗನ (ಸಹೃದಯನ) ಬಗೆಗಿನ ಕಲ್ಪನೆ ಬದಲಾಗಿದೆ ಎಂದು ಹೇಳುವುದು. ಕಾವ್ಯದ ಅರ್ಥವನ್ನು ಹುಡುಕಿ ಪಡೆಯುವ (ಜೊತೆಗೆ ಕಾವ್ಯದ ನಿಲುವನ್ನು ಪ್ರಶ್ನಿಸುವ) ಕ್ರಿಯಾಶೀಲನಾದ ಆಧುನಿಕ ಓದುಗನಿಗೆ ಬದಲಾಗಿ ಧ್ವನಿಪ್ರಸ್ಥಾನವು ಕ್ರಿಯಾಶೀಲನಲ್ಲದ (**passive**) ಸಿದ್ಧಸ್ಥಿತಿಯ ಓದುಗನನ್ನು ನಿರೀಕ್ಷಿಸುತ್ತದೆ. ಈ ವಿಷಯದಲ್ಲಿ ಧ್ವನಿಪ್ರಸ್ಥಾನವು ರಸಪ್ರಸ್ಥಾನಕ್ಕಿಂತ ಬೇರೆಯಲ್ಲ (ಇದು ಗುಣ ಅಥವಾ ದೋಷಪಸಂಬರ್ಧದಲ್ಲಿ ಈ ಮಾತನ್ನು ಹೇಳಲಾಗಿಲ್ಲ).

೧

ಸಂಸ್ಕೃತವಾಙ್ಮಯದ ವಿಭಾಗಗಳಲ್ಲಿ ಒಂದಾಗಿ ಕಾವ್ಯ ಮಹತ್ವದ ಸ್ಥಾನ ಪಡೆದಿದೆ. 'ಕವೇಃ ಕರ್ಮ ಕಾವ್ಯಂ' ಎಂದು ಅದರ ಸಾಮಾನ್ಯ ಲಕ್ಷಣವನ್ನು ಹೇಳಿದ್ದಾರೆ; ಮತ್ತು 'ಕಾವ್ಯ' ಶಬ್ದವನ್ನು ವ್ಯಾಪಕವಾಗಿ ಬಳಸಿ ಅದರಲ್ಲಿ ಗದ್ಯ, ಪದ್ಯ, ಚಂಪೂ, ನಾಟಕ ಇವನ್ನು ಸೇರಿಸಿದ್ದಾರೆ. ಒಟ್ಟಿನಲ್ಲಿ ಕಾವ್ಯ, ಸಾಹಿತ್ಯ ಇವು ಸಮಾನಪದಗಳಾಗಿ ಪ್ರಯೋಗದಲ್ಲಿರುವುದನ್ನು ಕಾಣಬಹುದು.

ವಾಲ್ಮೀಕಿರಾಮಾಯಣದಿಂದ (ಸು. ಕ್ರಿ.ಪೂ. ೩೦೦) ಕಾವ್ಯದ ಉಗಮವಾಯಿತೆಂದು ವಿದ್ವಾಂಸರ ಮತ. ಅಂದಿನಿಂದಲೂ ಕಾವ್ಯಪರಂಪರೆಯು ಸುದೀರ್ಘವಾಗಿರುವುದಲ್ಲದೆ ಸ್ವಾರಸ್ಯಪೂರ್ಣವಾಗಿಯೂ ಬೆಳೆದುಬಂದಿದೆ. ಕಾವ್ಯರಚನೆಯಲ್ಲಿ ನಿಪುಣರಾದ ಸಂಸ್ಕೃತ ಕವಿಗಳು ತಮ್ಮ ಪಾಂಡಿತ್ಯ ಪ್ರತಿಭೆಗಳಿಂದ ಸಂಸ್ಕೃತಕಾವ್ಯಕ್ಷೇತ್ರವನ್ನು ಸೃಷ್ಟಿಸಿ ವಿಸ್ತರಿಸಿ ಸರ್ವರಿಗೂ ಆನಂದದಾಯಕವಾಗುವಂತೆ ಜಗತ್ತಿನ ಮುಂದೆ ಅದನ್ನು ಇಟ್ಟಿದ್ದಾರೆ. ಕಾವ್ಯ ಹಲವಾರು ವೈಲಕ್ಷಣ್ಯಗಳಿಂದ ಕೂಡಿ, ಅಭ್ಯಾಸ ಮಾಡುವವರಲ್ಲಿ ಕುತೂಹಲವನ್ನುಂಟುಮಾಡುವ ಶಕ್ತಿಯುಳ್ಳದ್ದಾಗಿದೆ. ಅದರ ಸ್ವರೂಪ, ಪ್ರಯೋಜನ ಮುಂತಾದವುಗಳನ್ನು ಕುರಿತ ಜಿಜ್ಞಾಸೆ ವಿಮರ್ಶೆಗಳು ಕಾವ್ಯಸೃಷ್ಟಿಯ ಜೊತೆಜೊತೆಗೇ ಉದ್ಭವಿಸಿವೆ: ಅದರ ಫಲವಾಗಿ ಸಾಕಷ್ಟು ಅಭಿಪ್ರಾಯಗಳೂ ವಿಚಾರಗಳೂ ಮತಗಳೂ ಆವಿರ್ಭವಿಸಿವೆ. ವಿಮರ್ಶೆಯ ಕರ್ತೃಗಳು ಸಂಸ್ಕೃತದಲ್ಲಿ ಆಲಂಕಾರಿಕರೆನಿಸಿಕೊಂಡರು. ಕೆಲವು ಸಂದರ್ಭಗಳಲ್ಲಿ ಕವಿಗಳೇ ಆಲಂಕಾರಿಕ ವಿಮರ್ಶಕರೂ ಆಗಿರುವುದುಂಟು. ಒಟ್ಟಿನಲ್ಲಿ ಕಾವ್ಯ ವಿಮರ್ಶೆ ಪ್ರಾಚೀನ ಕಾಲದಿಂದ ನಡೆದು

ವಿವರಣೆಗಳಿಲ್ಲ. ಅನಂತರ ಬಂದ ವಿಮರ್ಶಕರು ಸ್ವತಂತ್ರಗ್ರಂಥಗಳನ್ನು ಬರೆದು ಅವುಗಳಲ್ಲಿ ಕಾವ್ಯಸ್ವರೂಪ ಪ್ರಯೋಜನಗಳನ್ನು ಕ್ರಮವಾಗಿ ಪ್ರತಿಪಾದಿಸ ತೊಡಗಿದರು. ಅಂತಹ ವಿಮರ್ಶಕರಲ್ಲಿ ಅಥವಾ ಆಲಂಕಾರಿಕರಲ್ಲಿ ಮೊತ್ತಮೊದಲನೆಯವ ನೆಂದು ಪರಿಗಣಿಸಲಾಗಿರುವ ಭಾಮಹ (ಸು. ಕ್ರಿ.ಶ. ೬೮೦) ತನ್ನ 'ಕಾವ್ಯಾಲಂಕಾರ'ವೆಂಬ ಗ್ರಂಥದಲ್ಲಿ "ಶಬ್ದಾರ್ಥೌ ಸಹಿತೌ ಕಾವ್ಯಂ" (ಶಬ್ದಾರ್ಥಗಳ ಸಂಯೋಜನೆ ಕಾವ್ಯ) ವೆಂದು ಕಾವ್ಯಲಕ್ಷಣವನ್ನು ಹೇಳಿ, ಪುರುಷಾರ್ಥಗಳ ಪ್ರಾಪ್ತಿಯೇ ಅದರ ಪ್ರಯೋಜನ ವೆಂದು ತಿಳಿಸಿದ್ದಾನೆ.[1] ಅವನ ಮತದಲ್ಲಿ ಅನುಪ್ರಾಸಾದಿ ಶಬ್ದಾಲಂಕಾರಗಳಿಂದಲೂ ಉಪಮಾ ಮುಂತಾದ ಅರ್ಥಾಲಂಕಾರಗಳಿಂದಲೂ ಕೂಡಿರುವ ಶಬ್ದಾರ್ಥಸಂಯೋಜನೆ ಕಾವ್ಯ. ಭಾಮಹನೂ, ಅವನ ತರುವಾಯ ಬಂದ ದಂಡಿಯೂ ಅಲಂಕಾರಗಳಿಗೆ ಪ್ರಾಶಸ್ತ್ಯ ಕೊಟ್ಟವರು. ದಂಡಿಯಾದರೋ ಶ್ಲೇಷ, ಪ್ರಸಾದ ಮುಂತಾದ ಹತ್ತು ಗುಣಗಳನ್ನು ಪ್ರತಿಪಾದಿಸಿ, ಗುಣಗಳನ್ನೂ ಅಲಂಕಾರಗಳೆಂದೇ ಕರೆಯುತ್ತಾನೆ ; ಅವು ವಿಶೇಷವಾದ ಅಲಂಕಾರಗಳು, ಉಪಮಾ ಮುಂತಾದವು ಸಾಮಾನ್ಯ ಅಲಂಕಾರಗಳು. ಅವನು ಗುಣಕ್ಕೂ ಅಲಂಕಾರಕ್ಕೂ ನಿರ್ದಿಷ್ಟವಾದ ವ್ಯತ್ಯಾಸವನ್ನು ಕಲ್ಪಿಸುವುದಿಲ್ಲ ಮತ್ತು 'ಗುಣ' ಪಕ್ಷಪಾತಿ. ಭಾಮಹ, ದಂಡಿ ಇವರ ಕಾವ್ಯಸ್ವರೂಪಾನ್ವೇಷಣೆಯು ಕಾವ್ಯಶರೀರದ[1] ಒಂದು ಕಲ್ಪನೆ ಯಾಗಿ ಪರಿಣಮಿಸಿದೆ.

ಅವರಿಬ್ಬರ ತರುವಾಯ ಬಂದ ಉದ್ಭಟನು ತನ್ನ 'ಕಾವ್ಯಾಲಂಕಾರಸಾರಸಂಗ್ರಹ'ದಲ್ಲಿ ಭಾಮಹನನ್ನೇ ಅನುಸರಿಸಿ ಅಲಂಕಾರಗಳನ್ನು ಪ್ರಮುಖವಾಗಿ ಪ್ರತಿಪಾದಿಸಿದ್ದಾನೆ ; ಆದರೂ ಅವುಗಳ ವಿಭಜನೆ ವಿಶ್ಲೇಷಣೆಗಳಲ್ಲಿ ಒಂದು ಹೆಜ್ಜೆ ಮುಂದಿಟ್ಟು, ಅಲಂಕಾರ ಮತದ ಅಧಿಕೃತ ವಕ್ತಾರನೆಂದು ಮನ್ನಣೆಗೆ ಪಾತ್ರನಾಗಿದ್ದಾನೆ. ಕ್ರಮೇಣ ಕಾವ್ಯತತ್ತ್ವ ವೆಂದು ಸಾಮಾನ್ಯವಾಗಿ ಅಂಗೀಕೃತವಾದ ರಸದ (ಕಾವ್ಯದಿಂದ ಲಭಿಸುವ ಆನಂದದ) ವಿಚಾರ ಅವನಿಗೆ ವೇದ್ಯವಾಗಿತ್ತೆಂಬುದರ ಸೂಚನೆ ಅವನ ಗ್ರಂಥದಲ್ಲಿ ಕಂಡುಬಂದರೂ, ಅಂತಹ ತತ್ತ್ವದ ಅನ್ವೇಷಣೆ ಪ್ರತಿಪಾದನೆಗಳ ಬಗೆಗೆ ಅವನ ಆಸಕ್ತಿ ಮಿತಿಗೊಂಡಿದೆ. ಹೀಗಾಗಿ ಮೇಲ್ಕಂಡ ಮೂವರು ಆಲಂಕಾರಿಕರೂ ಕಾವ್ಯದಲ್ಲಿ ಇರಬಹುದಾದ, ಇದ್ದ ಇನ್ನೂ ಆಳವಾದ ತತ್ತ್ವದ ಕಡೆಗೆ ಅಷ್ಟಾಗಿ ಗಮನ ಹರಿಸದೆ 'ಅಲಂಕಾರ'ಗಳ ಮೂಲಕವೇ ಕಾವ್ಯಸ್ವರೂಪವನ್ನು ವಿಶದಪಡಿಸಲು ಯತ್ನಿಸಿದರೆಂದು ಹೇಳಬಹುದಾಗಿದೆ. "ಆಕರ್ಷ ಣೀಯವಾದ ಅರ್ಥಾಭಿವ್ಯಕ್ತಿಯು ಹಾಗೂ ಅದನ್ನು ಅಲಂಕಾರಗಳಿಂದ ತೊಡಿಸುವಂತಹ ಶಬ್ದರಚನೆಯ ಸೌಲಭ್ಯಗಳಲ್ಲಿ ಅವರ ಆಸಕ್ತಿ ಕೇಂದ್ರೀಕೃತವಾಯಿತು ; ಕಾವ್ಯಚಮತ್ಕೃತಿಯ ಸೈದ್ಧಾಂತಿಕ ಆಧಾರ ಯಾವುದೇ ಆಗಿರಲಿ, ಅದು ಉಕ್ತಿವೈಚಿತ್ರ್ಯದ ವಸ್ತುನಿಷ್ಠ ಸೌಂದರ್ಯದಿಂದ ಲಭಿಸಿದರೆ ಸಾಕು"[3] ಎಂಬ ಎಸ್. ಕೆ. ದೇ ಅವರ ಮಾತುಗಳು ಅದನ್ನು ಸ್ಪಷ್ಟಪಡಿಸುತ್ತವೆ.

ಅನಂತರ ಬಂದ ಆಲಂಕಾರಿಕರೆಂದರೆ ವಾಮನ (ಸು. ಕ್ರಿ.ಶ. ೮೫೦) ಹಾಗೂ ರುದ್ರಟ (ಕ್ರಿ.ಶ. ೮೭೫). ವಾಮನ ತನ್ನ 'ಕಾವ್ಯಾಲಂಕಾರ ಸೂತ್ರವೃತ್ತಿ' ಎಂಬ ಗ್ರಂಥ

ದಲ್ಲಿ ಹಿಂದಿನ ಕಾವ್ಯಶರೀರ ಕಲ್ಪನೆಯ ಹಿನ್ನೆಲೆಯಲ್ಲಿ ಕಾವ್ಯಕ್ಕೆ 'ಆತ್ಮ'ವಿದೆಯೆಂಬುದನ್ನು ಗ್ರಹಿಸಿದ್ದಾನೆ. ಅವನ ಪ್ರಕಾರ "ರೀತಿಯೇ ಕಾವ್ಯದ ಆತ್ಮ" ("ರೀತಿರಾತ್ಮಾ ಕಾವ್ಯಸ್ಯ", I. ೬) ; ಅಂದರೆ ಕಾವ್ಯ ಅಲಂಕಾರದಿಂದ ಉಪಾದೇಯ ; ಸೌಂದರ್ಯವೇ ಅಲಂಕಾರ ; ಅಲಂಕಾರಗಳಿಂದ ಸೌಂದರ್ಯ ಉಂಟಾಗುವುದರ ಬದಲು, ಅಲಂಕಾರವೇ ಸೌಂದರ್ಯವಾಗಿ ಪರಿಣಮಿಸುತ್ತದೆ ; ಅಂತಹ ಅಲಂಕಾರ–ಸೌಂದರ್ಯಕ್ಕೆ ಸಾಧನ ಹಾಗೂ ಅದರ ಸಿದ್ಧಿಯೇ 'ರೀತಿ', ಕಾವ್ಯದ ಆತ್ಮ. ಅವನ ಪ್ರಕಾರ ವಿಶಿಷ್ಟ ಪದರಚನೆಯೇ ರೀತಿ ; ವಿಶೇಷವೆಂದರೆ ಗುಣಾತ್ಮಕವಾಗಿರತಕ್ಕದ್ದು. ದಂಡಿಯ 'ಗುಣ'ಮತವನ್ನು ವಿಸ್ತರಿಸಿ ಅವನು 'ಗುಣ'ಗಳ ಪ್ರಾಮುಖ್ಯವನ್ನು ಎತ್ತಿಹಿಡಿದು ಅವನ್ನು ರೀತಿಗೆ ಆತ್ಮಭೂತವಾಗಿಸಿದ್ದಾನೆ. "ರೀತಿಯು ಕಾವ್ಯದ ಆತ್ಮ" ಎಂಬ ಅವನ ಕಲ್ಪನೆಯಲ್ಲಿ ಅದನ್ನೇ ಕಾವ್ಯದ ಶೋಭೆ ಅಥವಾ ಸೌಂದರ್ಯವೆಂದು ಪರಿಗಣಿಸುವ ಸೂಚನೆ ಇದೆ : ಅವನ ಪ್ರಕಾರ ಗುಣಗಳು ಕಾವ್ಯಶೋಭೆ ಅಥವಾ ಸೌಂದರ್ಯದ ಸಾರಾಂಶಗಳಾಗಿರುತ್ತವೆ : ಅಲಂಕಾರಗಳು ಶೋಭಾತಿಶಯಹೇತುಗಳು ಮಾತ್ರ. ವಾಮನನ ಆ ಬಗೆಯ ಸೌಂದರ್ಯಕಲ್ಪನೆ ಗುಣಾಲಂಕಾರರೀತಿಗಳನ್ನವಲಂಬಿಸಿಕೊಂಡಿದ್ದರೂ, ಅದರಲ್ಲಿ ಮನಸ್ಸನ್ನು ರಂಜಿಸುವ ಅಂಶದ **(aesthetic aspect)**ಗ್ರಹಿಕೆ ಸ್ಪಷ್ಟವಾಗಿದೆಯೆಂದು ಹೇಳಬಹುದು.[4] 'ರೀತಿ' ಕಾವ್ಯದ ನಿಜವಾದ ಆತ್ಮವಾಗದಿದ್ದರೂ, ಆತ್ಮವೆಂಬ ಅಭಿಪ್ರಾಯವು ಮುಂದೆ ಶಬ್ದಾರ್ಥಗಳ ಆನಂದದಾಯಕ ಶಕ್ತಿಯೇ **(aesthetic power)** ನಿಜವಾದ ಆತ್ಮವೆಂಬ ಸಿದ್ಧಾಂತಕ್ಕೆ ನಾಂದಿಯಾಯಿತೆಂದು ಹೇಳಬಹುದು.

ಅನಂತರ ಬಂದ ರುದ್ರಟ (ಸು. ಕ್ರಿ.ಶ. ೮೭೫) "ನನು ಶಬ್ದಾರ್ಥೌ ಕಾವ್ಯಂ" ಎಂದು ಹೇಳಿ ಕಾವ್ಯದ ಅಲಂಕಾರಾತ್ಮಕತೆಯ ಪ್ರಾಮುಖ್ಯವನ್ನೇ ಅನುಸರಿಸಿದ್ದಾನೆ. ಅವನ ಗ್ರಂಥದಲ್ಲಿ 'ರಸ'ದ ವಿಚಾರ ಅಲ್ಪಸ್ವಲ್ಪವಾಗಿ ಕಂಡುಬಂದರೂ, ಅದು ಕಾವ್ಯಸ್ವರೂಪವಿವರಣೆಗೆ ಅನುಗುಣವಾಗಿ ವರ್ಣನಾತ್ಮಕವಾಗಿದೆಯೇ ಹೊರತು ಸೈದ್ಧಾಂತಿಕವಾಗಿಲ್ಲ. ಒಟ್ಟಿನಲ್ಲಿ ಪ್ರಾಚೀನಾಲಂಕಾರಿಕರೆನಿಸಿಕೊಂಡ ಈ ಐವರ ಕಾವ್ಯತತ್ತ್ವಾನ್ವೇಷಣದ ವಿಚಾರಸರಣಿಯಲ್ಲಿ ಗೋಚರಿಸುವ ಪ್ರಮುಖ ಅಂಶವೆಂದರೆ, ಅಲಂಕಾರೋಪೇತ ಶಬ್ದಾರ್ಥ ಸಂಯೋಜನೆಯೋ ಗುಣಗಳೋ ಗುಣಾಶ್ರಿತರೀತಿಯೋ —ಒಂದೊಂದೂ ಹೆಚ್ಚು ಕಡಮೆ ಕಾವ್ಯಶರೀರಕ್ಕೆ ಮಾತ್ರ ಅನ್ವಯಿಸತಕ್ಕದ್ದು, ಕಾವ್ಯತತ್ತ್ವವಾಗಬಲ್ಲದೆಂಬ ದೃಷ್ಟಿ. ಶಬ್ದಾರ್ಥ ಮೀಮಾಂಸೆಯನ್ನು ಅಷ್ಟಾಗಿ ಬೆಳೆಸಿಲ್ಲದ ಅವರು, ಕಾವ್ಯರಚನೆಯಲ್ಲಿ ಅವೆರಡನ್ನೂ ಮೀರಿಸಿದ ಒಂದು ಅಂಶ ಅಥವಾ ಅರ್ಥವಿರುವ ಸಾಧ್ಯತೆಯನ್ನು ಕಿಂಚಿತ್ತಾಗಿ ಗಮನಿಸಿದರೇ ಹೊರತು, ಅದರ ವಿಮರ್ಶಾತ್ಮಕ ವಿವರಣೆಯಲ್ಲಿ ತಮ್ಮನ್ನು ತೊಡಗಿಸಲಿಲ್ಲ. ಅವರ ಗ್ರಂಥಗಳ ರಚನೆಯ ಸಂದರ್ಭಗಳಲ್ಲಿ ಅವು ಬೇಕಿರಲಿಲ್ಲವೆಂದು ಹೇಳಲಾಗಿದೆ. ಒಟ್ಟಿನಲ್ಲಿ ಮುಂದೆ ಪ್ರಸ್ತಾವಕ್ಕೆ ವಿಷಯವಾದ ವ್ಯಂಜನಾವ್ಯಾಪಾರದ ದೃಷ್ಟಿಯಿಂದ ಪ್ರಾಚೀನಾಲಂಕಾರಿಕರ ಅಭಿಪ್ರಾಯಗಳ ಬಗೆಗಿನ ಮೇಲ್ಕಂಡ ಕೆಲವು ಸೂಚನೆಗಳು ಅಪ್ರಕೃತವಾಗಲಾರವು.

೧

ಪ್ರಾಚೀನಾಲಂಕಾರಿಕರ ಕಾವ್ಯಸ್ವರೂಪಪರಿಶೀಲನೆಯು ಶಬ್ದಗಳು, ಅರ್ಥಗಳು, ಅವುಗಳ ಸಂಯೋಜನೆ, ಅರ್ಥವೈಚಿತ್ರ್ಯ ಇತ್ಯಾದಿಗಳಿಗೆ ಸೀಮಿತವಾಯಿತು. ಒಂದು ಶಬ್ದಕ್ಕೆ ಒಂದು ಅರ್ಥವೆಂಬ ಶಾಸ್ತ್ರಸಮ್ಮತ ನಿಯಮವನ್ನು ಪರಂಪರಾನುಗತವಾಗಿ ಬಂದ ಕ್ರಮದಲ್ಲೇ ಅನುಸರಿಸಿದ ಅವರು ಅದೇ ಚೌಕಟ್ಟಿನಲ್ಲಿ ಕಾವ್ಯದ ಎಲ್ಲ ಶಬ್ದಾರ್ಥವೈಶಿಷ್ಟ್ಯವನ್ನು ಸಮನ್ವಯಗೊಳಿಸಿದರು. ಅಲಂಕಾರ, ಗುಣ, ರೀತಿ—ಇವುಗಳಲ್ಲಿ ಒಂದಲ್ಲ ಒಂದನ್ನು ಕಾವ್ಯದ ತಿರುಳಾಗಿ ಗ್ರಹಿಸಿ ಎಲ್ಲವನ್ನು ಸಾಮಾನ್ಯವಾಗಿ ಶಬ್ದಾರ್ಥಗಳ ಏಕೈಕ ಸಂಬಂಧದಲ್ಲಿ ವಿವರಿಸಲು ಯತ್ನಿಸಿದರು. ಶಾಸ್ತ್ರೋಕ್ತ ಹಾಗೂ ನೇರವಾದ ಒಂದು ಉದ್ದಿಷ್ಟಾರ್ಥಕ್ಕಿಂತ ಮಿಗಿಲಾದ ಅರ್ಥ ಪ್ರತೀತವಾದ ಸಂದರ್ಭಗಳಲ್ಲಿ, ಅಂತಹ ಅರ್ಥವನ್ನು ಲಕ್ಷಣೆಯಲ್ಲಿ ಸೇರಿಸುವ ಪ್ರಯತ್ನ ಮಾಡಿದರು. ಕಾವ್ಯದಲ್ಲಿನ ಭಾವಾತ್ಮಕ ಸನ್ನಿವೇಶಗಳು ಗೋಚರಿಸಿದಾಗ ಅವನ್ನು ನೇರವಾಗಿ ಬರುವ ಅರ್ಥವೇ ಎಂದು ಗ್ರಹಿಸಿ, ಅಲಂಕಾರವೆಂದೋ ಗುಣವೆಂದೋ ಗುರುತಿಸಿದರು. ಅವರ ಅಷ್ಟೆಲ್ಲ ಅಭಿನಿವೇಶಗಳು ಅತಿಸೂಕ್ಷ್ಮ ಹಾಗೂ ವ್ಯಾಪಕವಾದ ಕಾವ್ಯತತ್ತ್ವವನ್ನು ಅರಿಯಲು ಸಾಲದಾಯಿತು. ಅದರ ಬಗೆಗೆ ಇನ್ನೂ ಹೆಚ್ಚಾದ ಆಳವಾದ ಪರ್ಯಾಲೋಚನೆಯು ನಿರೀಕ್ಷಣೆಗೆ ವಿಷಯವಾಯಿತು. ಶಬ್ದಶಕ್ತಿ, ಶಬ್ದಾರ್ಥಸಂಬಂಧ, ಬುದ್ಧಿ ಭಾವಗಳನ್ನನುಸರಿಸಿ ಬಂದ ಅರ್ಥವೈವಿಧ್ಯ ಮುಂತಾದವುಗಳನ್ನು ಹಂತ ಹಂತವಾಗಿ ನಿರೂಪಿಸಬೇಕಾಯಿತು. ಅಂತಹ ಪ್ರಯತ್ನಗಳಲ್ಲಿ ಕೆಲವೆಂದರೆ : ಅಭಿಧಾ ಲಕ್ಷಣಾ ವ್ಯಂಜನಾ ಎಂಬ ಶಬ್ದವ್ಯಾಪಾರಗಳು, ವಾಚ್ಯಾರ್ಥ ಲಕ್ಷ್ಯಾರ್ಥ ವ್ಯಂಗ್ಯಾರ್ಥಗಳು ಹಾಗೂ ವಾಚಕ ಲಾಕ್ಷಣಿಕ ವ್ಯಂಜಕ ಶಬ್ದಗಳು—ಇವನ್ನು ಕುರಿತವು. ಅವೆಲ್ಲವುಗಳ ಬಗೆಗೆ ಚಿಂತನೆ ಚರ್ಚೆ ವಿವೇಚನೆ ವಿಶ್ಲೇಷಣೆಗಳನ್ನು ನಡೆಸಿ ಕಾವ್ಯತತ್ತ್ವದ ಬಗೆಗೆ ಸೂಕ್ತವಾದ ಉಪಾದೇಯವಾಗಿರುವ ನಿರ್ಣಯಗಳನ್ನೂ ಸಿದ್ಧಾಂತಗಳನ್ನೂ ನಿರೂಪಿಸಿದವರೆಂದರೆ, ರುದ್ರಟನ (ಪ್ರಾಚೀನರಲ್ಲಿ ಕೊನೆಯವನು) ತರುವಾಯ ಬಂದ ಅಲಂಕಾರಿಕರು : ಅವರನ್ನು ನವ್ಯಾಲಂಕಾರಿಕರೆಂದು ನಿರ್ದೇಶಿಸಲಾಗಿದೆ.

೨

ಸಾಮಾನ್ಯವಾಗಿ ನವ್ಯಾಲಂಕಾರಿಕರು ಧ್ವನಿಪ್ರಸ್ಥಾನಾನುಯಾಯಿಗಳಾಗಿದ್ದಾರೆ. ಅವರಲ್ಲಿ ಆನಂದವರ್ಧನನೇ (ಸು. ಕ್ರಿ.ಶ. ೯೦೦) ಮೊತ್ತಮೊದಲನೆಯವನೆಂದು ಹೇಳಬಹುದು. ಅವನು ತನ್ನ 'ಧ್ವನ್ಯಾಲೋಕ'ವೆಂಬ ಗ್ರಂಥದಲ್ಲಿ 'ಧ್ವನಿ' ಸಿದ್ಧಾಂತವನ್ನು ಯುಕ್ತಿಪುರಸ್ಸರವಾಗಿ, ಹೃದಯಂಗಮವಾಗಿ ನಿರೂಪಿಸಿ ಧ್ವನಿಕಾರ, ಧ್ವನಿಪ್ರಸ್ಥಾನಕಾರ ಎಂದು ಪ್ರಸಿದ್ಧನಾಗಿದ್ದಾನೆ. ಕಾವ್ಯತತ್ತ್ವವನ್ನು ಪ್ರತಿಪಾದಿಸಲು ಹೊರಟ ಅವನು ಮೊದಲು ಗಮನಿಸುವ ವಿಚಾರವೆಂದರೆ, ಯಾವುವು ಕಾವ್ಯವಾಗಬಲ್ಲವೋ ಅಂತಹ ಶಬ್ದಾರ್ಥಗಳಲ್ಲಿ ಅಡಗಿರುವ, ನೇರವಾಗಿ ಬರುವ ಅರ್ಥಕ್ಕಿಂತಲೂ ಮಿಗಿಲಾದ ವಿಶೇಷಾರ್ಥ. ಅದನ್ನೇ ಅವನು, ವಾಚ್ಯಾರ್ಥಕ್ಕಿಂತಲೂ ಅನ್ಯವೇ ಆಗಿರುವ ವಸ್ತು (ಅರ್ಥ) ಮಹಾಕವಿಗಳ ವಾಣಿಯಲ್ಲಿದೆ ;

ಸುವ್ಯಕ್ತ ಅವಯವಗಳಿಗಿಂತಲೂ ಅತಿರಿಕ್ತವಾದ ಅಂಗನಾಲಾವಣ್ಯದಂತೆ ಅದು ಶೋಭಿಸುತ್ತದೆ''[5] ಎಂದು ಹೇಳಿ ಆ ವಿಶೇಷಾರ್ಥದ ಅಸ್ತಿತ್ವವನ್ನು ಸ್ಪಷ್ಟಪಡಿಸುತ್ತಾನೆ: ಆ ಅರ್ಥವೇ ವ್ಯಂಗ್ಯಾರ್ಥ. ಅದು ಶಬ್ದದಿಂದಲೇ ಬರತಕ್ಕದ್ದು ; ಹಾಗೆ ಬರಬೇಕಾದರೆ ಶಬ್ದಕ್ಕೆ ಒಂದು ವಿಶಿಷ್ಟ ಕಾರ್ಯಶಕ್ತಿಯ ಆವಶ್ಯಕತೆ ಇರುವುದರಿಂದ ಅವನು ಅಂತಹ ಕಾರ್ಯಶಕ್ತಿಯ–ಆಗಲೇ ಶಾಸ್ತ್ರಸಮ್ಮತವಾದ–ಎರಡು ಮುಖಗಳಾದ ಅಭಿಧಾ ಲಕ್ಷಣಾ ಎಂಬ ವ್ಯಾಪಾರಗಳೇ ಸಾಲದೆಂದು ಸಾಧಿಸುವುದಲ್ಲದೆ, ವ್ಯಂಜನಾ ಅಥವಾ ವ್ಯಂಜಕತ್ವ ಎಂಬ ಮತ್ತೊಂದು ವ್ಯಾಪಾರದ ಅಪರಿಹಾರ್ಯತ್ವವನ್ನು ತನ್ನ ಗ್ರಂಥದಲ್ಲಿ ತೋರಿಸಿಕೊಟ್ಟಿದ್ದಾನೆ. ತನ್ನ ಗ್ರಂಥವನ್ನು ಆ ವಿಶೇಷಾರ್ಥವಿಚಾರದ ಮೂಲಕ ಪ್ರಾರಂಭಿಸಿ, ತನಗಿಂತಲೂ ಪೂರ್ವದಲ್ಲಿದ್ದ 'ಧ್ವನಿ' ಎಂಬ ಹೆಸರನ್ನೇ ಮುಂದುವರಿಸಿ 'ಧ್ವನಿ' (ಮುಂದೆ ತಾನು ವಿಸ್ತರಿಸಿ ಹೇಳುವ ವ್ಯಂಗ್ಯಾರ್ಥ) ಕಾವ್ಯದ ಆತ್ಮ (ಕಾವ್ಯಸ್ಯಾತ್ಮಾ ಧ್ವನಿಃ) ಎಂದು ಹೇಳುತ್ತಾನೆ. ಎ. ಆರ್. ಕೃಷ್ಣಶಾಸ್ತ್ರೀ ಅವರು ಹೇಳುವಂತೆ, ''ತಾನು ಪ್ರತಿಪಾದಿಸಿರುವ ಧ್ವನಿತತ್ತ್ವವು 'ಸಮಾಮ್ನಾತಪೂರ್ವ'ವೆಂದು ಹೇಳಿದರೂ ಅವನ ಧೀರಪ್ರತಿಪಾದನೆ ನೂತನಸೃಷ್ಟಿಗೇನೂ ಕಡಮೆಯದಲ್ಲ ; ಅವನ ಉಪಜ್ಞತೆಗೆ ಏನೂ ಕುಂದಿಲ್ಲ; ಅಂಥ ಪ್ರತಿಭಾವಂತನಾದ ಆಲಂಕಾರಿಕ ಸಂಸ್ಕೃತದಲ್ಲಿ ಮತ್ತೆ ಹುಟ್ಟಲಿಲ್ಲ.''[6] ಸಂಕ್ಷಿಪ್ತವಾಗಿ ಹೇಳುವುದಾದರೆ, 'ಧ್ವನಿ' ವ್ಯಾಕರಣಶಾಸ್ತ್ರದಿಂದ ಬಂದದ್ದು ; ಅದರಂತೆ ಅರ್ಥಸ್ಫುಟತತ್ತ್ವರೂಪದ ಸ್ಫೋಟಕ್ಕೆ (ವ್ಯಂಗ್ಯಕ್ಕೆ) ಆಧಾರಭೂತವಾದ ವ್ಯಂಜಕಶಬ್ದ 'ಧ್ವನಿ'.[7] ಅಂಥ ಒಂದು ಪ್ರಧಾನ ವ್ಯಾಕರಣಪ್ರಕ್ರಿಯೆಯ ಆಶ್ರಯದಲ್ಲಿ ಆನಂದವರ್ಧನಾದಿ ಆಲಂಕಾರಿಕರು ವ್ಯಂಗ್ಯರೂಪದ ವಿಶೇಷಾರ್ಥವನ್ನು ಗಮನಿಸಿ, ಅದನ್ನು ಕೊಡುವ ಶಬ್ದವನ್ನು 'ಧ್ವನಿ' ಎಂದು ಕರೆದುದಲ್ಲದೆ, ವ್ಯಂಗ್ಯಾರ್ಥವನ್ನೂ ಅವರು ಅತ್ಯವಶ್ಯವೆಂದು ಹೇಳುವ ವ್ಯಂಜನಾವ್ಯಾಪಾರವನ್ನೂ ಅವನ್ನೆಲ್ಲ ಒಳಗೊಂಡ ಕಾವ್ಯರಚನೆಯನ್ನೂ 'ಧ್ವನಿ' ಎಂದೇ ನಿರ್ದೇಶಿಸಿದ್ದಾರೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ವ್ಯಂಜನಾ ಬಗೆಗೆ ತೀ. ನಂ. ಶ್ರೀ.ಯವರು ಹೇಳುವಂತೆ[8], ''ವ್ಯಂಜನಾವೃತ್ತಿಯೆಂಬ ವ್ಯಾಪಾರ ಬೇರೆ ಇಲ್ಲವೆಂದು ಈ ಪರಿಪಂಥಿಗಳೆಲ್ಲರೂ ವಾದಿಸುತ್ತಾರೆಯೇ ಹೊರತು, 'ವ್ಯಂಗ್ಯವೆಂದು ನೀವು ಕರೆಯುವ ಅರ್ಥವೇ ನಮಗೆ ಗೋಚರವಾಗುವುದಿಲ್ಲ ; ಅದೆಲ್ಲ ಬರಿಯ ಭ್ರಾಂತಿ' ಎಂದು ಯಾರೂ ಆಕ್ಷೇಪಿಸುವಂತೆ ಕಾಣುವುದಿಲ್ಲ. ಆದಕಾರಣ ಚರ್ಚೆಯೆಲ್ಲವೂ ಆ ಅರ್ಥದ ಪ್ರತೀತವಾಗುವ ಬಗೆಯನ್ನು ಕುರಿತೇ ಹೊರತು, ಆ ಅರ್ಥದ ಅಸ್ತಿತ್ವವನ್ನು ಕುರಿತಲ್ಲ.'' ಅಂದರೆ ಕಾವ್ಯದಲ್ಲಿ ವಿಶೇಷಾರ್ಥ ಇರಬಲ್ಲದೆಂಬುದನ್ನು, ಇರುವುದನ್ನು ಯಾರೂ ನಿರಾಕರಿಸುವಂತಿಲ್ಲ : ಅದರ ಸ್ವರೂಪ ಹೇಗೇ ಇರಲಿ, ಅದು ಬರಬೇಕಾದರೆ ಆಗಲೇ ಅಂಗೀಕೃತವಾಗಿ ಬಳಕೆಯಲ್ಲಿರುವ ಅಭಿಧಾ ಲಕ್ಷಣಾ—ಇವೇ ಆಗಬಹುದಷ್ಟೆ ; ತಾರ್ಕಿಕರ ಮತಾನುಸಾರ 'ಅನುಮಾನ' ಎಂಬ ಪ್ರಮಾಣವೇ ಸಾಕು–ಇದೆಲ್ಲವನ್ನೂ ಮೀರಿ 'ವ್ಯಂಜನಾ' ಎಂಬ ವ್ಯಾಪಾರ ಇನ್ನೇಕೆ ಬೇಕು ?—ಇತ್ಯಾದಿ ಆಕ್ಷೇಪಣೆ ವಿರೋಧಗಳನ್ನು ಆನಂದವರ್ಧನಾದಿಗಳು ಎದುರಿಸಿ ಸೂಕ್ತ ಉತ್ತರಗಳ ಮೂಲಕ

ಸುವ್ಯಕ್ತ ಅವಯುವಗಳಿಗಿಂತಲೂ ಅತಿರಿಕ್ತವಾದ ಅಂಗನಾಲಾವಣ್ಯದಂತೆ ಅದು ಶೋಭಿಸುತ್ತದೆ''[5] ಎಂದು ಹೇಳಿ ಆ ವಿಶೇಷಾರ್ಥದ ಅಸ್ತಿತ್ವವನ್ನು ಸ್ಪಷ್ಟಪಡಿಸುತ್ತಾನೆ; ಆ ಅರ್ಥವೇ ವ್ಯಂಗ್ಯಾರ್ಥ. ಅದು ಶಬ್ದದಿಂದಲೇ ಬರತಕ್ಕದ್ದು ; ಹಾಗೆ ಬರಬೇಕಾದರೆ ಶಬ್ದಕ್ಕೆ ಒಂದು ವಿಶಿಷ್ಟ ಕಾರ್ಯಶಕ್ತಿಯ ಅವಶ್ಯಕತೆ ಇರುವುದರಿಂದ ಅವನು ಅಂತಹ ಕಾರ್ಯಶಕ್ತಿಯ—ಆಗಲೇ ಶಾಸ್ತ್ರಸಮ್ಮತವಾದ—ಎರಡು ಮುಖಗಳಾದ ಅಭಿಧಾ ಲಕ್ಷಣಾ ಎಂಬ ವ್ಯಾಪಾರಗಳೇ ಸಾಲದೆಂದು ಸಾಧಿಸುವುದಲ್ಲದೆ, ವ್ಯಂಜನಾ ಅಥವಾ ವ್ಯಂಜಕತ್ವ ಎಂಬ ಮತ್ತೊಂದು ವ್ಯಾಪಾರದ ಅಪರಿಹಾರ್ಯತ್ವವನ್ನು ತನ್ನ ಗ್ರಂಥದಲ್ಲಿ ತೋರಿಸಿ ಕೊಟ್ಟಿದ್ದಾನೆ. ತನ್ನ ಗ್ರಂಥವನ್ನು ಆ ವಿಶೇಷಾರ್ಥವಿಚಾರದ ಮೂಲಕ ಪ್ರಾರಂಭಿಸಿ, ತನಗಿಂತಲೂ ಪೂರ್ವದಲ್ಲಿದ್ದ 'ಧ್ವನಿ' ಎಂಬ ಹೆಸರನ್ನೇ ಮುಂದುವರಿಸಿ 'ಧ್ವನಿ' (ಮುಂದೆ ತಾನು ವಿಸ್ತರಿಸಿ ಹೇಳುವ ವ್ಯಂಗ್ಯಾರ್ಥ) ಕಾವ್ಯದ ಆತ್ಮ (ಕಾವ್ಯಸ್ಯಾತ್ಮಾ ಧ್ವನಿಃ) ಎಂದು ಹೇಳುತ್ತಾನೆ. ಎ. ಆರ್. ಕೃಷ್ಣಶಾಸ್ತ್ರೀ ಅವರು ಹೇಳುವಂತೆ, ''ತಾನು ಪ್ರತಿಪಾದಿಸಿರುವ ಧ್ವನಿತತ್ತ್ವವು 'ಸಮಾಮ್ನಾತಪೂರ್ವ'ವೆಂದು ಹೇಳಿದರೂ ಅವನ ಧೀರಪ್ರತಿಪಾದನೆ ನೂತನಸೃಷ್ಟಿಗೇನೂ ಕಡಮೆಯದಲ್ಲ ; ಅವನ ಉಪಜ್ಞತೆಗೆ ಏನೂ ಕುಂದಿಲ್ಲ; ಅಂಥ ಪ್ರತಿಭಾವಂತನಾದ ಆಲಂಕಾರಿಕ ಸಂಸ್ಕೃತದಲ್ಲಿ ಮತ್ತೆ ಹುಟ್ಟಲಿಲ್ಲ.''[6] ಸಂಕ್ಷಿಪ್ತವಾಗಿ ಹೇಳುವುದಾದರೆ, 'ಧ್ವನಿ' ವ್ಯಾಕರಣಶಾಸ್ತ್ರದಿಂದ ಬಂದದ್ದು ; ಅದರಂತೆ ಅರ್ಥಸ್ಫುಟ ತತ್ತ್ವರೂಪದ ಸ್ಫೋಟಕ್ಕೆ (ವ್ಯಂಗ್ಯಕ್ಕೆ) ಆಧಾರಭೂತವಾದ ವ್ಯಂಜಕಶಬ್ದ 'ಧ್ವನಿ'.[7] ಅಂಥ ಒಂದು ಪ್ರಧಾನ ವ್ಯಾಕರಣಪ್ರಕ್ರಿಯೆಯ ಆಶ್ರಯದಲ್ಲಿ ಆನಂದವರ್ಧನಾದಿ ಆಲಂಕಾರಿಕರು ವ್ಯಂಗ್ಯರೂಪದ ವಿಶೇಷಾರ್ಥವನ್ನು ಗಮನಿಸಿ, ಅದನ್ನು ಕೊಡುವ ಶಬ್ದವನ್ನು 'ಧ್ವನಿ' ಎಂದು ಕರೆದುದಲ್ಲದೆ, ವ್ಯಂಗ್ಯಾರ್ಥವನ್ನೂ ಅವರು ಅತ್ಯವಶ್ಯವೆಂದು ಹೇಳುವ ವ್ಯಂಜನಾವ್ಯಾಪಾರವನ್ನೂ ಅವನ್ನೆಲ್ಲ ಒಳಗೊಂಡ ಕಾವ್ಯರಚನೆಯನ್ನೂ 'ಧ್ವನಿ' ಎಂದೇ ನಿರ್ದೇಶಿಸಿದ್ದಾರೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ವ್ಯಂಜನಾ ಬಗೆಗೆ ತೀ. ನಂ. ಶ್ರೀ.ಯವರು ಹೇಳುವಂತೆ[8], ''ವ್ಯಂಜನಾವೃತ್ತಿಯೆಂಬ ವ್ಯಾಪಾರ ಬೇರೆ ಇಲ್ಲವೆಂದು ಈ ಪರಿಪಂಥಿಗಳೆಲ್ಲರೂ ವಾದಿಸುತ್ತಾರೆಯೇ ಹೊರತು, 'ವ್ಯಂಗ್ಯವೆಂದು ನೀವು ಕರೆಯುವ ಅರ್ಥವೇ ನಮಗೆ ಗೋಚರವಾಗುವುದಿಲ್ಲ : ಅದೆಲ್ಲ ಬರಿಯ ಭ್ರಾಂತಿ' ಎಂದು ಯಾರೂ ಆಕ್ಷೇಪಿಸುವಂತೆ ಕಾಣುವುದಿಲ್ಲ. ಆದಕಾರಣ ಚರ್ಚೆಯೆಲ್ಲವೂ ಆ ಅರ್ಥದ ಪ್ರತೀತವಾಗುವ ಬಗೆಯನ್ನು ಕುರಿತೇ ಹೊರತು, ಆ ಅರ್ಥದ ಅಸ್ತಿತ್ವವನ್ನು ಕುರಿತಲ್ಲ.'' ಅಂದರೆ ಕಾವ್ಯದಲ್ಲಿ ವಿಶೇಷಾರ್ಥ ಇರಬಲ್ಲದೆಂಬುದನ್ನು, ಇರುವುದನ್ನು ಯಾರೂ ನಿರಾಕರಿಸುವಂತಿಲ್ಲ : ಅದರ ಸ್ವರೂಪ ಹೇಗೇ ಇರಲಿ, ಅದು ಬರಬೇಕಾದರೆ ಆಗಲೇ ಅಂಗೀಕೃತವಾಗಿ ಬಳಕೆಯಲ್ಲಿರುವ ಅಭಿಧಾ ಲಕ್ಷಣಾ—ಇವೇ ಆಗಬಹುದಷ್ಟೆ ; ತಾರ್ಕಿಕರ ಮತಾನುಸಾರ 'ಅನುಮಾನ' ಎಂಬ ಪ್ರಮಾಣವೇ ಸಾಕು—ಇದೆಲ್ಲವನ್ನೂ ಮೀರಿ 'ವ್ಯಂಜನಾ' ಎಂಬ ವ್ಯಾಪಾರ ಇನ್ನೇಕೆ ಬೇಕು ?—ಇತ್ಯಾದಿ ಆಕ್ಷೇಪಣೆ ವಿರೋಧಗಳನ್ನು ಆನಂದವರ್ಧನಾದಿಗಳು ಎದುರಿಸಿ ಸೂಕ್ತ ಉತ್ತರಗಳ ಮೂಲಕ

ವ್ಯಂಜನಾವ್ಯಾಪಾರದ ಸಮರ್ಥನೆ ಮಾಡಿದ್ದಾರೆ; ವ್ಯಂಜನಾ ಗೆದ್ದರೆ, ವ್ಯಂಗ್ಯಾರ್ಥವೂ ಗೆದ್ದಂತೆ ಎಂಬುದು ಅವರ ದೃಷ್ಟಿ. ಹಾಗೆ ಹೇಳುವವರಲ್ಲಿ ಆನಂದವರ್ಧನ ಅಗ್ರಗಣ್ಯ. ಕೆ. ಕೃಷ್ಣಮೂರ್ತಿಯವರು ಪ್ರತಿಪಾದಿಸಿರುವಂತೆ,[9] "ಆದುದರಿಂದಲೇ ಆನಂದವರ್ಧನನು ಶಾಸ್ತ್ರೀಯವಾಗಿ ಧ್ವನಿಸಿದ್ಧಾಂತದ ಮೇಲೆ ಬರಬಹುದಾದ ಆಶಂಕೆಗಳನ್ನೆಲ್ಲ ಪೂರ್ವ ಪಕ್ಷದಲ್ಲಿ ಎತ್ತಿ, ಸರ್ವಸಮರ್ಪಕವಾಗುವಂತೆ ಸಮಾಧಾನ ಹೇಳಿ, ಧ್ವನಿಸಿದ್ಧಾಂತವನ್ನು ಸ್ಥಾಪಿಸಬೇಕಾಯಿತು." ಆ ಪ್ರಕಾರವಾಗಿ ಧ್ವನಿಸಿದ್ಧಾಂತಸ್ಥಾಪನೆಯಲ್ಲಿ ವ್ಯಂಜನಾ ವ್ಯಾಪಾರಕ್ಕೆ (ವೃತ್ತಿಗೆ) 'ಧ್ವನಿ'ಯ ಕವಚವನ್ನು ತೊಡಿಸಿ ಅದರ ಸ್ಥಾನವನ್ನು ಅವನು ಭದ್ರಪಡಿಸಿದನೆಂದು ಹೇಳಬಹುದು. ಅವನ ತರುವಾಯ ಪ್ರಾಯಃ ಧ್ವನಿ ಸ್ವಲ್ಪಮಟ್ಟಿಗೆ ಇನ್ನೂ ಸಂಶಯಗ್ರಸ್ತಸ್ಥಿತಿಯಲ್ಲಿ ಇದ್ದಿರಬಹುದಾದ ಸನ್ನಿವೇಶ ಅಲ್ಲಲ್ಲೇ ಕಂಡುಬಂದು ಅದನ್ನು ಇನ್ನೂ ಚೆನ್ನಾಗಿ ದೃಢಪಡಿಸುವ, ಆ ಕವಚವನ್ನು ಅಭೇದ್ಯವಾಗಿ ಮಾಡುವ ಹೊಣೆ ಹೊತ್ತವನು ಮಮ್ಮಟ (ಸು. ಕ್ರಿ.ಶ. ೧೧೦೫). ಅವನು ತನ್ನ 'ಕಾವ್ಯಪ್ರಕಾಶ' ವೆಂಬ ಗ್ರಂಥದಲ್ಲಿ ವ್ಯಂಜನಾವ್ಯಾಪಾರವನ್ನು ಕೆಳಕಾಣುವಂತೆ ಚಾತುರ್ಯದಿಂದ, ಯುಕ್ತಿ ಪುರಸ್ಸರವಾದಗಳಿಂದ ಸ್ಥಿರಪಡಿಸಿ ಅಂತಹ ಹೊಣೆಗಾರಿಕೆಯನ್ನು ಯಶಸ್ವಿಯಾಗಿ ನಿರ್ವ ಹಿಸಿದ್ದಾನೆಂಬುದನ್ನು ಇಲ್ಲಿ ಗಮನಿಸಬಹುದು.

೪

ಮಮ್ಮಟನ 'ಕಾವ್ಯಪ್ರಕಾಶ'ದಲ್ಲಿ ಹತ್ತು ಉಲ್ಲಾಸಗಳಿವೆ. ಕಾವ್ಯಸ್ವರೂಪಾದಿಗಳನ್ನು ನಿರೂಪಿಸುವ ನವ್ಯಮತಗಳಾದ ಧ್ವನಿ, ರಸ ಇವುಗಳಲ್ಲಿ ಅವನಿಗೆ ಪಕ್ಷಪಾತವಿದ್ದರೂ, ಪ್ರಾಚೀನವಾದ ಅಲಂಕಾರ ಗುಣ ರೀತಿಗಳ ಸ್ಥಾನಮಾನವನ್ನೂ ವಿಮರ್ಶಾತ್ಮಕತೆಯಿಂದ ಅರಿತವನಾಗಿ ಆ ಮತಗಳನ್ನೂ ತನ್ನ ಗ್ರಂಥದಲ್ಲಿ ಪ್ರತಿಪಾದಿಸಿದ್ದಾನೆ. ಅಲ್ಲದೆ ಅವಕ್ಕೂ ನವ್ಯಮತಗಳಿಗೂ ಸಮನ್ವಯವನ್ನು ತಾನು ಕೊಟ್ಟಿರುವ ಕಾವ್ಯಲಕ್ಷಣದಲ್ಲೇ[10] ತೋರಿಸಿ ರುವುದಲ್ಲದೆ, ಗ್ರಂಥದ ಉದ್ದಕ್ಕೂ ಆ ಮತಗಳನ್ನು ಪರಸ್ಪರ ಹೊಂದಿಸುವ ಕೆಲಸ ಮಾಡಿ ದ್ದಾನೆ; ಅದು ಮಮ್ಮಟನ ವಿಶಿಷ್ಟ ಸಾಧನೆಯೇ ಸರಿ.[11] ಅವನ ಗ್ರಂಥದ ಹತ್ತು ಉಲ್ಲಾಸ ಗಳಲ್ಲಿ ಮೊದಲನೆಯದು ಕಾವ್ಯಪ್ರಯೋಜನ ಮುಂತಾದ ಸಾಮಾನ್ಯ ವಿಚಾರಗಳಿಗೂ, ಎರಡನೆಯದು ಲಕ್ಷಣಾ ಎಂಬ ಶಬ್ದವೃತ್ತಿಯ ನಿರೂಪಣೆಗೂ, ಮೂರನೆಯದು ಅರ್ಥವೂ ವ್ಯಂಜಕವಾಗುವ ಬಗೆಗೂ ಅನ್ವಯಿಸುತ್ತವೆ; ನಾಲ್ಕು, ಐದು, ಆರು ಈ ಮೂರು ಉಲ್ಲಾಸ ಗಳು ಅನುಕ್ರಮವಾಗಿ ಧ್ವನಿಕಾವ್ಯ(ವ್ಯಂಗ್ಯಾರ್ಥಪ್ರಾಧಾನ್ಯವುಳ್ಳದ್ದು—ರಸ ಇತ್ಯಾದಿ ಗಳು), ಗುಣೀಭೂತವ್ಯಂಗ್ಯ (ಅದಕ್ಕೆ ಪ್ರಾಧಾನ್ಯ ವಿಲ್ಲದ್ದು) ಹಾಗೂ ವ್ಯಂಜನಾವ್ಯಾಪಾರ ಸಮರ್ಥನೆ, ಚಿತ್ರಕಾವ್ಯ (ಶಬ್ದಚಿತ್ರ ಅರ್ಥಚಿತ್ರ ವಿಷಯಗಳು)—ಇವನ್ನೊಳಗೊಂಡಿವೆ. ಏಳನೆಯದರಲ್ಲಿ ಕಾವ್ಯದೋಷಗಳು, ಎಂಟರಲ್ಲಿ ಗುಣಗಳು; ಒಂಬತ್ತು ಶಬ್ದಾಲಂಕಾರ ವಿವರಣೆಯಿಂದಲೂ ಹಾಗೂ ಹತ್ತು, ಅರ್ಥಾಲಂಕಾರಗಳ ನಿರೂಪಣೆಯಿಂದಲೂ ಕೂಡಿವೆ. ಹೀಗೆ ಒಟ್ಟು ಗ್ರಂಥದಲ್ಲಿ ಸಮಗ್ರವಾಗಿ ಪ್ರಾಚೀನರ ಮತ್ತು ನವ್ಯರ ಪ್ರಕಾರವಾದ ಕಾವ್ಯ

ಶೀತತ್ವಪಾವನತ್ವಾದಿ ವ್ಯಂಗ್ಯಾರ್ಥವನ್ನೂ ಕೊಡುತ್ತವೆ. ಅಲ್ಲಿ 'ಗಂಗೆಯಲ್ಲಿ ಹಳ್ಳಿ' ಎಂದು ಹೇಳದೆ 'ಗಂಗಾತೀರದಲ್ಲಿ ಹಳ್ಳಿ' (ಗಂಗಾತಟೇ ಘೋಷಃ) ಎಂದು ನೇರವಾಗಿ ಹೇಳಬಹುದಿತ್ತು. ಗಂಗೆಯಲ್ಲಿ ಹಳ್ಳಿ ಎಂದು ಹೇಳಿದಾಗ ಯಾವ ಪ್ರಯೋಜನರೂಪದ ಶೀತತ್ವಾದಿ ಚಮತ್ಕಾರಯುತ ಅರ್ಥಗಳು ಉದಯಿಸಬಲ್ಲವೋ. ಅಂಥ ಅರ್ಥಗಳು, ಅರ್ಥವಿಶೇಷಗಳು ಗಂಗಾತೀರದಲ್ಲಿ ಹಳ್ಳಿ ಎಂದು ನೇರವಾಗಿ ಹೇಳಿದಾಗ ಬರಲು ಶಕ್ಯವಿಲ್ಲ; ಆದ್ದರಿಂದ ಎಲ್ಲಿ ಪ್ರಯೋಜನಸಹಿತ ಲಕ್ಷಣಾವ್ಯಾಪಾರವಿದ್ದು ಪ್ರಯೋಜನರೂಪದ ಅರ್ಥ (ವ್ಯಂಗ್ಯಾರ್ಥ) ಲಭಿಸುತ್ತದೋ, ಅಂತಹ ಅರ್ಥ ಸಂಕೇತಿತವಲ್ಲದ್ದರಿಂದ ಅಭಿಧಾಗಮ್ಯವಲ್ಲ, ಮುಖ್ಯಾರ್ಥ ಬಾಧಾದಿತ್ರಯಾಭಾವದಿಂದ ಲಕ್ಷ್ಯಾರ್ಥವೂ ಅಲ್ಲ. ಅಂದಮೇಲೆ ವ್ಯಂಗ್ಯಾರ್ಥವೇ ಆಗಿರಬೇಕು ; ಹಾಗೂ ಅಲ್ಲಿ ವ್ಯಂಜನಾವ್ಯಾಪಾರವೇ ಅತ್ಯವಶ್ಯಕವಾಗಿ ಇರಬೇಕೆಂದು ಆ ವ್ಯಾಪಾರವನ್ನು ಸಮರ್ಥನೆ ಮಾಡುತ್ತಾನೆ.[13]

ಮುಂದೆ. ಅಭಿಧಾ ಮೂಲಕ ವ್ಯಂಜನಾವ್ಯಾಪಾರದ ಸಮರ್ಥನೆ :—ಲಕ್ಷಣಾವ್ಯಾಪಾರದಲ್ಲಿಯಾದರೋ ವ್ಯಂಗ್ಯಾರ್ಥ ಒಂದು ನಿರ್ದಿಷ್ಟ ಸಂಬಂಧದ. ಕ್ರಮದ ಮೂಲಕ ಬರುತ್ತದೆ: ಅಲ್ಲಿ ಆ ಅರ್ಥ ಬರುವ ಹಂತಗಳನ್ನು ಬೌದ್ಧಿಕವಾಗಿ ಗುರುತಿಸುವ ಸೌಲಭ್ಯವಿದೆ. ಆದರೆ ಅಭಿಧಾ ಸಂದರ್ಭದಲ್ಲಿ ವ್ಯಂಗ್ಯಾರ್ಥಗ್ರಹಣ ಕಾವ್ಯ ಸನ್ನಿವೇಶಗಳನ್ನೂ, ಸಹೃದಯದ ಕಲ್ಪನಾಶಕ್ತಿಯನ್ನೂ ಬಹುಮಟ್ಟಿಗೆ ಅವಲಂಬಿಸಿಕೊಂಡಿದ್ದು ಅಂತಹ ಒಂದು ಸೂಕ್ಷ್ಮನಿಯಮಕ್ಕೊಳಗಾಗಿ ಬರುತ್ತದೆ. ಅಭಿಧಾವ್ಯಾಪಾರದಿಂದ ಒಂದೇ ಒಂದು ಅರ್ಥ (ಮುಖ್ಯಾರ್ಥ)ವನ್ನು ಪಡೆಯಬಹುದೆಂಬುದು ಶಾಸ್ತ್ರಸಮ್ಮತವಾದ ವಿಚಾರ. ಆದರೆ ಕೆಲವು ಶಬ್ದಗಳಿಗೆ ನಾನಾರ್ಥಗಳಿರುವುದುಂಟು. ಆಗ ಮೊದಲು ಮುಖ್ಯಾರ್ಥವನ್ನು ಸಂಯೋಗ, ವಿಪ್ರಯೋಗ, ಸಾಹಚರ್ಯ ಮುಂತಾದ ಸಂದರ್ಭಗಳಿಂದ ನಿಯಮಿತಗೊಳಿಸಿ, ಅನಂತರ ವಾಚ್ಯವಲ್ಲದ ಅರ್ಥ ಒದಗಿ ಬಂದಾಗ, ಆ ಅರ್ಥಜ್ಞಾನ ಉಂಟು ಮಾಡುವ ಶಬ್ದವ್ಯಾಪಾರ ವ್ಯಂಜನಾ ಅಲ್ಲದೆ ಬೇರೆ ಯಾವುದೂ ಅಲ್ಲವೆಂದು[14] ಎರಡನೆಯ ಉಲ್ಲಾಸದ ಕಡೆಯಲ್ಲಿ ಅದರ ಬಗೆಗೆ ಮಮ್ಮಟನ ಸಮರ್ಥನೆ.

ಐದನೆಯ ಉಲ್ಲಾಸದಲ್ಲಿ ಕಂಡುಬರುವಂತೆ ಮಮ್ಮಟನ ವ್ಯಂಜನಾವ್ಯಾಪಾರ ಸಮರ್ಥನೆ: ಹಲವಾರು ದೃಷ್ಟಿಕೋನಗಳಿಂದ ಕೂಡಿದ ಸಮರ್ಥನೆ ಅಲ್ಲಿ ಸಾಕಷ್ಟು ನಿರ್ಣಾಯಕವಾಗಿದೆಯೆಂದು ಹೇಳಬಹುದು. ಆ ದೃಷ್ಟಿಕೋನಗಳನ್ನು ಅವುಗಳ ಸ್ವಭಾವ ಸ್ವರೂಪಗಳನ್ನನುಸರಿಸಿ ಎರಡು ವರ್ಗಗಳಾಗಿ ಮಾಡಿಕೊಂಡು ಪರಿಶೀಲಿಸಬಹುದು ; ಒಂದು, ಕಾವ್ಯಭಾಷೆಯ ವೈಲಕ್ಷಣ್ಯವನ್ನವಲಂಬಿಸಿರತಕ್ಕದ್ದು ; ಮತ್ತೊಂದು ವರ್ಗ, ಮಮ್ಮಟ ಪೂರ್ವಪಕ್ಷಗಳಾಗಿಟ್ಟುಕೊಂಡಿರುವ ಶಾಸ್ತ್ರಗಳ ಆಕ್ಷೇಪಣೆ ಇತ್ಯಾದಿಗಳಿಗೂ ಅವುಗಳ ಬಗೆಗಿನ ಸಮಾಧಾನಗಳಿಗೂ ಅನ್ವಯಿಸುವಂತಹುದು.

ಮೊದಲು ಕಾವ್ಯಭಾಷೆಯ ವೈಲಕ್ಷಣ್ಯ ಹಾಗೂ ವ್ಯಂಜನಾಸಮರ್ಥನೆ : ಧ್ವನ್ಯುಕ್ತ ಅರ್ಥವು (ವ್ಯಂಗ್ಯಾರ್ಥವು) ವಾಚ್ಯತ್ವಸಹವಾಗಿರಬಹುದು, ಇಲ್ಲವೇ ವಾಚ್ಯತ್ವಾಸಹವಾಗಿರಬಹುದು ; ಅಂದರೆ ವಾಚ್ಯವಾಗಿ ಹೇಳಬಹುದಾದದ್ದು, ವಾಚ್ಯವಾಗಿ ಹೇಳ

ಲಾಗದ್ದು. ಮೊದಲನೆಯದರಲ್ಲಿ ಅವಿಚಿತ್ರ ಅಥವಾ ವಸ್ತುವೂ ಎರಡನೆಯದರಲ್ಲಿ ಅವಿಚಿತ್ರ ಅಥವಾ ವಸ್ತು, ವಿಚಿತ್ರ (ಅಲಂಕಾರ) ಇವು ಸೇರಿವೆ; ಮತ್ತು ವಾಚ್ಯತ್ವಾಸಹದಲ್ಲಿನ ರಸ—ಹೀಗೆ ವ್ಯಂಗ್ಯಾರ್ಥದ ತ್ರಿರೂಪತ್ವದಿಂದ ಧ್ವನಿಯ ಮೂರು ಪ್ರಭೇದಗಳಾಗುತ್ತವೆ. ರಸಾದಿ ಅರ್ಥಗಳಾದರೋ ಸ್ವಪ್ನದಲ್ಲೂ ವಾಚ್ಯವಾಗಲಾರವು (ರಸಾದಿಲಕ್ಷಣಸ್ತ್ವರ್ಥಃ ಸ್ವಪ್ನೇಽಪಿ ನ ವಾಚ್ಯಃ). ಶೃಂಗಾರಾದಿ ಶಬ್ದಗಳನ್ನು ಪ್ರಯೋಗಿಸಿ ರಸದ ಅಭಿವ್ಯಕ್ತಿಯನ್ನುಂಟು ಮಾಡಬಹುದೇ ? ಸಾಧ್ಯವಿಲ್ಲ. ಏಕೆಂದರೆ ಆ ಶಬ್ದಗಳ ಪ್ರಯೋಗವಿದ್ದರೂ (ವ್ಯಂಗ್ಯಾರ್ಥಸಹಾಯಕ) ವಿಭಾವಾದಿಗಳಿಲ್ಲದಿದ್ದರೆ ರಸಪ್ರತೀತಿಯಾಗಲಾರದು; ಶೃಂಗಾರಾದಿ ಶಬ್ದಗಳ ಪ್ರಯೋಗವಿಲ್ಲದಿದ್ದರೂ ವಿಭಾವಾದಿಗಳಿದ್ದರೆ ಸಾಕು, ಅದರ ಪ್ರತೀತಿಯಾಗುತ್ತದೆ ಆದ್ದರಿಂದ ರಸ ವ್ಯಂಗ್ಯವೇ ಸರಿ; ಅಲ್ಲಿನ ಶಬ್ದವ್ಯಾಪಾರ ವ್ಯಂಜನಾ ಅಲ್ಲದೆ ಬೇರೆ ಯಾವುದೂ ಆಗಲಾರದು.

ಅರ್ಥಾಂತರ ಸಂಕ್ರಮಿತವಾಚ್ಯ (ವಾಚ್ಯಾರ್ಥವು ಬೇರೆ ಒಂದು ಅರ್ಥದಲ್ಲಿ ಪರಿಣಮಿಸತಕ್ಕದ್ದು), ಅತ್ಯಂತ ತಿರಸ್ಕೃತವಾಚ್ಯ (ವಾಚ್ಯಾರ್ಥ ಸಂಪೂರ್ಣ ನಿರಾಕೃತವಾಗಬಲ್ಲದ್ದು) ಎಂಬ ಎರಡು ಲಕ್ಷಣಾಮೂಲಧ್ವನಿಪ್ರಭೇದಗಳಲ್ಲಿ ವಸ್ತುರೂಪದ ವ್ಯಂಗ್ಯವಿರುತ್ತದೆ; ಅದಿದ್ದರೆ ಮಾತ್ರ ಅಲ್ಲಿ ಲಕ್ಷಣಾ ಕ್ರಿಯಾತ್ಮಕವಾಗಬಲ್ಲದು. ಅಲ್ಲದೆ ಶಬ್ದಶಕ್ತಿಮೂಲಧ್ವನಿಯಲ್ಲಿ (ಧ್ವನಿಗೆ ಶಬ್ದಶಕ್ತಿಮೂಲ, ಅರ್ಥಶಕ್ತಿಮೂಲ, ಉಭಯಶಕ್ತಿಮೂಲ—ಎಂಬುದಾಗಿ ಅಭಿಧಾಶ್ರಿತ ಮೂರು ವಿಧಗಳಿವೆ) ಅಭಿಧೇಯಾರ್ಥವನ್ನು ಸಂಯೋಗಾದಿಗಳಿಂದ ನಿಯಂತ್ರಿಸಿದ ಮೇಲೆ ಅನಭಿಧೇಯವಾದ ವಸ್ತು ಅಥವಾ ಅಲಂಕಾರರೂಪದ ವಿಶೇಷಾರ್ಥಗಳು ಬರುವುದುಂಟು; ಅವುಗಳ ವ್ಯಂಗ್ಯತ್ವ ಅಲ್ಲಿನ ವ್ಯಂಜನಾವ್ಯಾಪಾರಗಳ ಬಗೆಗೆ ನಿರ್ವಿವಾದವಷ್ಟೆ. ಮೀಮಾಂಸಾಶಾಸ್ತ್ರವನ್ನು ಪೂರ್ವಪಕ್ಷ ಮಾಡಿಕೊಂಡು, ಅರ್ಥಶಕ್ತಿಮೂಲದಲ್ಲೂ ವ್ಯಂಜನಾವ್ಯಾಪಾರದ ಅಪರಿಹಾರ್ಯತ್ವವನ್ನು ಮಮ್ಮಟ ತೋರಿಸಿದ್ದಾನೆ; ಅದನ್ನು ಮುಂದೆ ಪರಿಶೀಲಿಸಲಾಗಿದೆ.

ಕಾವ್ಯಭಾಷೆಯ ಸ್ವರೂಪವನ್ನು ಗಮನಿಸಿದಾಗ, 'ಕುರು ರುಚಿಂ' ಎಂಬ ಒಂದು ಉದಾಹರಣೆಯಲ್ಲಿ ಪದಗಳನ್ನು ಬದಲಿಸಿ ಓದಿದಾಗ ಬರುವ 'ರುಚಿಂ ಕುರು' ಎಂಬ ರೂಪ ಅಸಭ್ಯಾರ್ಥವನ್ನು ಕೊಡಬಲ್ಲದಾಗಿದೆ. ಅಂತಹ ಅರ್ಥ ಎಲ್ಲಿಂದ ಬರುತ್ತದೆ ? ಅದು ವಾಚ್ಯವಲ್ಲ; ಮುಖ್ಯಾರ್ಥಬಾಧಾದಿ ತ್ರಯದ ಅಭಾವದಿಂದಾಗಿ ಲಕ್ಷ್ಯವೂ ಆಗಲಾರದು; ಅಂದಮೇಲೆ ಅದು ವ್ಯಂಗ್ಯಾರ್ಥವೇ ಆಗಿದ್ದು, ಅಲ್ಲಿ ವ್ಯಂಜನಾವ್ಯಾಪಾರಕ್ಕೆ ಪ್ರಸಕ್ತಿ ಇರಲೇಬೇಕು. ಅದನ್ನು ಒಪ್ಪದಿದ್ದರೆ ಅಲ್ಲಿ ಅಸಭ್ಯಾರ್ಥವಿಲ್ಲವೆಂದು ಗ್ರಹಿಸಿ, ಆ ಬಗೆಯ ಪ್ರಯೋಗಗಳನ್ನು ತ್ಯಜಿಸಬೇಕಾಗುವುದಿಲ್ಲ. ಆದ್ದರಿಂದ ಅಂಥ ಒಂದು ದೋಷಪೂರ್ಣ ಅರ್ಥ ವ್ಯಂಜನಾವ್ಯಾಪಾರದ ಮೂಲಕವೇ ಬರತಕ್ಕದ್ದು.

ಅಲಂಕಾರಶಾಸ್ತ್ರದಲ್ಲಿ ಕಾವ್ಯದೋಷಗಳನ್ನು ನಿರೂಪಿಸುವಾಗ, ಅವನ್ನು ಅಸಾಧುತ್ವ ಮುಂತಾದ ನಿತ್ಯದೋಷಗಳೆಂದೂ, ಕಷ್ಟತ್ವಾದಿ ಅನಿತ್ಯದೋಷಗಳೆಂದೂ ವಿಭಾಗಿಸಲಾಗಿದೆ. ಆ ವಿಭಾಗವು, ವಾಚ್ಯವಾಚಕಗಳೂ ವ್ಯಂಗ್ಯವ್ಯಂಜಕಗಳೂ ಪರಸ್ಪರ ಬೇರೆ ಎಂಬ ನಿಯಮ

ವನ್ನನುಸರಿಸಿ ಬಂದಿದೆ: ವಿಭಾಗ ಸಾಕಷ್ಟು ಸಹಜವಾಗಿರುವುದರಿಂದ ಅದನ್ನು ಒಪ್ಪದೇ ಇರುವಂತಿಲ್ಲ. ಆದ್ದರಿಂದ ಅಂತಹ ವಿಭಾಗಕ್ಕೆ ಮೂಲಭೂತವಾಗಿರುವ ವ್ಯಂಜನಾ ವ್ಯಾಪಾರ ಅನಿವಾರ್ಯವಾಗುತ್ತದೆ.

ಇನ್ನು ಕವಿಪ್ರಯೋಗದ ಕೆಲವು ಶಬ್ದಗಳ ಅಯ್ಕೆಯಲ್ಲಿ ವ್ಯಂಜನಾವ್ಯಾಪಾರವನ್ನು ಗುರುತಿಸಬೇಕು. ಕಾಳಿದಾಸನ ಕುಮಾರಸಂಭವದ "ದ್ವಯಂ ಗತಂ ಸಂಪ್ರತಿ ಶೋಚ ನೀಯತಾಂ ಸಮಾಗಮಪ್ರಾರ್ಥನಯಾ ಕಪಾಲಿನಃ, ಕಲಾ ಚ ಸಾ ಕಾಂತಿಮತೀ ಕಲಾವಿದಃ ತ್ವಮಸ್ಯ ಲೋಕಸ್ಯ ಚ ನೇತ್ರಕೌಮುದೀ"—(V.೭೦) ಅಂದರೆ. "ಕಪಾಲಿಯೊಡನೆ ಸಮಾಗ ಮೇಚ್ಛೆಯಿಂದ ಕೂಡಿ ಎರಡು ವಸ್ತುಗಳು ಶೋಚನೀಯವಾಗಿವೆ; ಒಂದು ಚಂದ್ರನ ಕಲೆ; ಮತ್ತೊಂದು, ಲೋಕದ ನೇತ್ರಕೌಮುದಿಯಾಗಿರುವ ನೀನು" ಎಂದು ಹೇಳಿ ವಟು ವೇಷದ ಶಿವ ಪಾರ್ವತಿಯನ್ನು ಪರೀಕ್ಷೆ ಮಾಡುವ ಸಂದರ್ಭ; ಉದ್ದೇಶವಾದರೋ, ಶಿವನ ಬಗೆಗೆ ಅವಳಲ್ಲಿ ಜುಗುಪ್ಸೆ ಉಂಟುಮಾಡಿ ನೋಡಬೇಕೆಂಬುದು. ಅದನ್ನು ಗಮನಿಸಿ, ಜುಗುಪ್ಸಾತ್ಮಕ ಅರ್ಥಕ್ಕೆ ಅನುಗುಣವಾಗಿ 'ಕಪಾಲಿನಃ' ಎಂಬ ಶಬ್ದಪ್ರಯೋಗದಲ್ಲಿ ಔಚಿತ್ಯವಿದೆ: ಅಂಥ ಅರ್ಥ ವ್ಯಂಗ್ಯಾರ್ಥವೇ ಆಗಿದೆ; ಮತ್ತು ಅಲ್ಲಿನ ಶಬ್ದವ್ಯಾಪಾರ ವ್ಯಂಜನಾ ಎಂಬುದು ಸ್ಪಷ್ಟ. ಕವಿ 'ಪಿನಾಕಿನಃ' ಎಂಬ ಶಬ್ದವನ್ನು ಪ್ರಯೋಗಿಸಬಹು ದಿತ್ತು; ಆದರೆ ವ್ಯಂಗ್ಯಾರ್ಥಸಂದರ್ಭದ ಔಚಿತ್ಯದ ದೃಷ್ಟಿಯಿಂದ 'ಕಪಾಲಿನಃ' ಎಂಬ ಶಬ್ದವೇ ಸರಿ.

ಮುಂದೆ ವಾಚ್ಯಾರ್ಥಕ್ಕೂವ್ಯಂಗ್ಯಾರ್ಥಕ್ಕೂಹಲವಾರು ವಿಧಗಳಲ್ಲಿ ವ್ಯತ್ಯಾಸವಿದೆಯೆಂದು ಪ್ರತಿಪಾದಿಸುತ್ತಾ ಮಮ್ಮಟ ಆ ವಿಧಗಳನ್ನು ನಿರೂಪಿಸಿ ವ್ಯಂಗ್ಯಾರ್ಥದ ಅನಿವಾರ್ಯತೆ ಯನ್ನುಪ್ರದರ್ಶಿಸುವುದರ ಮೂಲಕ ವ್ಯಂಜನಾವ್ಯಾಪಾರಸಮರ್ಥನೆಯನ್ನು ಮಾಡುತ್ತಾನೆ; ಅದರ ಪ್ರಕಾರ—ಮೊದಲನೆಯದಾಗಿ ವಾಚ್ಯ–ವ್ಯಂಗ್ಯ ಇವು ಅನುಕ್ರಮವಾಗಿ ನಿಷೇಧ–ವಿಧಿ, ಸಂಶಯ–ನಿಶ್ಚಯ, ನಿಂದಾ–ಸ್ತುತಿ ಎಂಬುದಾಗಿ ಸ್ವರೂಪಭೇದದಿಂದ ಕೂಡಿವೆ; ಹಾಗೆಯೇ ಮೊದಲು–ಅನಂತರ ಹೀಗೆ ಕಾಲದ ಭೇದ, ಶಬ್ದಾಶ್ರಯತ್ವ–ಶಬ್ದೈಕದೇಶಾ ದ್ಯಾಶ್ರಯತ್ವದಿಂದ ಆಶ್ರಯದ, ವ್ಯಾಕರಣ ಕೋಶಾದಿ ಶಬ್ದಜ್ಞಾನ–ಪ್ರಕರಣವೈಶಿಷ್ಟ್ಯ ಹಾಗೂ ಪ್ರತಿಭಾನೈರ್ಮಲ್ಯದಿಂದ ನಿಮಿತ್ತದ, ಕೇವಲ ಬೋದ್ಧೃ, ಪ್ರತೀತಿ–ಸಹೃದಯ ಚಮತ್ಕೃತಿ ಇವನ್ನುಂಟುಮಾಡುವುದರಿಂದ ಕಾರ್ಯದ ಮತ್ತು ಏಕರೂಪತ್ವ–ಬಹು ರೂಪತ್ವದಿಂದ ಸಂಖ್ಯೆಯ, ಸಖೀ ಇತ್ಯಾದಿರೂಪದ ವ್ಯಕ್ತಿ–ಪ್ರಿಯತಮಾದಿ ವ್ಯಕ್ತಿಯಿಂದ ವಿಷಯದ—ಹೀಗೆ ಸ್ವರೂಪ, ಕಾಲ, ಆಶ್ರಯ, ನಿಮಿತ್ತ, ಕಾರ್ಯ, ಸಂಖ್ಯೆ, ವಿಷಯ, ಇವಿಲ್ಲವುಗಳನ್ನು ಕುರಿತಂತೆ ವಾಚ್ಯ–ವ್ಯಂಗ್ಯಗಳಿಗೆ ಭೇದ ಇರುವಲ್ಲಿ ವ್ಯಂಗ್ಯ ವನ್ನೂ, ವ್ಯಂಜನಾವ್ಯಾಪಾರವನ್ನು ಯಾರು ತಾನೆ ಅಂಗೀಕರಿಸಲಾರರು? ಅವುಗಳ ಅಸ್ತಿತ್ವ ನಿರ್ವಿವಾದ ಎಂದು ಮಮ್ಮಟನ ನಿಲುವು, ಅಂತಹ ಭೇದಗಳ ಸ್ಪಷ್ಟೀಕರಣ ಕ್ಕಾಗಿ ಮಮ್ಮಟ ಕೊಟ್ಟಿರುವ ಉದಾಹರಣೆಗಳಲ್ಲಿ ಒಂದನ್ನು (ಸಂಖ್ಯೆಗೆ ಸಂಬಂಧ ಪಟ್ಟದ್ದು) ಇಲ್ಲಿ ದಿಙ್ಮಾತ್ರರಾಗಿ ಕೊಡಲಾಗಿದೆ: — 'ಸೂರ್ಯ ಮುಳುಗಿದನು.'

(ಗತೋಽಸ್ತಮರ್ಕಃ), ಇಲ್ಲಿನ ವಾಚ್ಯಾರ್ಥವು ಅದನ್ನು ಗ್ರಹಿಸುವ ಎಲ್ಲರಿಗೂ ಒಂದೇ ರೂಪದ್ದು ; ವ್ಯಂಜನಾವ್ಯಾಪಾರದ ಮೂಲಕ ಬರುವ ವ್ಯಂಗ್ಯಾರ್ಥವಾದರೋ ಸಂದರ್ಭ, ಹೇಳಿ ಕೇಳಿ ಮಾಡುವ ಜನ ಇತ್ಯಾದಿಗಳನ್ನವಲಂಬಿಸಿ ಹಲವಾರಾಗುತ್ತವೆ—ಹೇಗೆಂದರೆ ಯುದ್ಧಭೂಮಿಯಲ್ಲಾದರೆ ಶತ್ರುವಿನ ಮೇಲೆ ಬೀಳುವ ಸಮಯ, ಪ್ರಿಯೆಯನ್ನು ಕುರಿತಂತೆ ಪ್ರಿಯತಮನೊಡನೆ ಸಮಾಗಮಕ್ಕೆ ಗಮನ, ಕಾರ್ಮಿಕರ ಬಗೆಗೆ ಕಾರ್ಯಸಮಾಪ್ತಿ, ಧಾರ್ಮಿಕನಿಗೆ ಸಂಧ್ಯಾವಿಧಿಗಳ ಆಚರಣೆ, ಅಪ್ಪನಿಗೆ ದೂರಹೋಗಬಾರದೆಂಬ ಸೂಚನೆ, ಗೋಪಾಲಕನಿಗೆ ದನಗಳನ್ನು ಮನೆಗೆ ಸೇರಿಸಬೇಕೆಂಬ ನಿರ್ದೇಶನ, ಬಿಸಿಲಿನಿಂದ ಬಳಲಿದ ಬಂಧುವನ್ನು ಕುರಿತಂತೆ ಸೆಖೆಯ ಇಂಗುವಿಕೆ, ವರ್ತಕನಿಗೆ ವಿಕ್ರೇಯವಸ್ತುರಕ್ಷಣೆ, ನಾಯಿಕೆಗೆ ಇನ್ನೂ ಪ್ರಿಯತಮ ಆಗಮಿಸದಿರುವಿಕೆ ಮುಂತಾಗಿ ವ್ಯಂಗ್ಯಾರ್ಥಗಳು ವಿಜೃಂಭಿಸುತ್ತವೆ. ಅಲ್ಲೆಲ್ಲಾ ವ್ಯಂಜನಾವ್ಯಾಪಾರಕ್ಕೆ ಪ್ರಸಕ್ತಿಯುಂಟೆಂದು ಹೇಳುವುದರ ಮೂಲಕ ಮಮ್ಮಟನಿಂದ ಅದರ ಸಮರ್ಥನೆ.

## ಪೂರ್ವಪಕ್ಷವಾಗಿ ಶಾಸ್ತ್ರಗಳು ಮತ್ತು ವ್ಯಂಜನಾವ್ಯಾಪಾರದ ಬಗೆಗೆ ಮಮ್ಮಟನ ನಿರ್ಣಯಗಳು

ಸಂಸ್ಕೃತದಲ್ಲಿ ಪ್ರಾಚೀನ ಕಾಲದಿಂದಲೂ ಶಬ್ದ, ಅರ್ಥ, ಅದರ ನಿಷ್ಪತ್ತಿ, ಶಬ್ದಾರ್ಥ ಸಂಬಂಧ, ವಾಕ್ಯ, ವಾಕ್ಯಾರ್ಥ ಮುಂತಾದ ಗಹನ ವಿಚಾರಗಳನ್ನೊಳಗೊಂಡಂತೆ ಭಾಷಾ ವಿಜ್ಞಾನ ಕ್ರಮಬದ್ಧವಾಗಿ ನಡೆದುಬಂದು, ಮುಖ್ಯವಾಗಿ ವ್ಯಾಕರಣ, ಮೀಮಾಂಸಾ, ನ್ಯಾಯ ಈ ಶಾಸ್ತ್ರಗಳಲ್ಲಿ ಅಂತಹ ವಿಚಾರಗಳನ್ನು ಕುರಿತ ಸಿದ್ಧಾಂತಗಳು ಅಮೂಲ್ಯವಾಗಿವೆ, ಅನುಸರಣೀಯವಾಗಿ ಬೆಳೆದು ಬಂದಿವೆ. ಭಾಷೆಯು ಮನುಷ್ಯನ ಆಲೋಚನೆಗಳ, ಅಭಿಪ್ರಾಯಗಳ ಬಹಿರ್ವರ್ತಿಯಾದ ನಿಷ್ಕೃಷ್ಟ ಸಾಧನವಾಗಿದೆಯೆಂದೂ ಅದನ್ನು ಅಂತಹ ಸಾಧನವಾಗಿಸಬೇಕೆಂಬುದೂ ಆ ಎಲ್ಲ ಶಾಸ್ತ್ರಕಾರರ ಗುರಿಯಾಗಿದ್ದು, ಅದಕ್ಕೆ ಅನುಗುಣವಾದ ನಿಯಮಾವಳಿಗಳನ್ನು ಅವರು ರಚಿಸಿಕೊಟ್ಟಿದ್ದಾರೆ. ಉದಾಹರಣೆಗೆ ಹೇಳುವುದಾದರೆ, ಮೀಮಾಂಸಾಶಾಸ್ತ್ರದ ಪ್ರಕಾರ ಶಬ್ದ, ಅರ್ಥ ಇವಕ್ಕಿರುವ ಸಂಬಂಧವು ಸಹಜ ಹಾಗೂ ನಿತ್ಯವೆಂಬ ವಿಚಾರ ; ಶಬ್ದದ ಅಭಿಧಾವೃತ್ತಿಯಿಂದ ಒಂದು ಅರ್ಥ ಬರಬೇಕೆಂಬ ನಿಯಮದ ಅನುಸರಣೆ ; ಒಂದಕ್ಕಿಂತ ಹೆಚ್ಚು ಅರ್ಥಗಳು ಬರುವ ಸಂದರ್ಭವಿದ್ದಲ್ಲಿ (ಏಕೆಂದರೆ ಲೋಕವ್ಯವಹಾರ ಹಾಗೂ ಮಾನಸಿಕ ಪ್ರವೃತ್ತಿಗಳು ಮುಂತಾದವನ್ನು ಅವಲಂಬಿಸಿರುವ ಭಾಷಾಸ್ವರೂಪವೇ ಅಂತಹುದು) ಅವೆಲ್ಲವನ್ನೂ ಅಭಿಧಾವ್ಯಾಪಾರಕ್ಕೆ ಒಳಪಡಿಸಬೇಕೆಂಬ ದೃಷ್ಟಿ ಇತ್ಯಾದಿಗಳು. ಭಾಷೆಯ ಒಂದು ವಿಶಿಷ್ಟಸ್ವರೂಪವನ್ನು ಗಮನಿಸಿ ಅವರು ಒಂದು ಶಬ್ದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥಗಳು ಬರುವುದರ ಅಪರಿಹಾರ್ಯತ್ವವನ್ನು ತಿಳಿದು ಹೇಗೋ 'ಲಕ್ಷಣಾ' ಎಂಬ ಎರಡನೆಯ ವ್ಯಾಪಾರವನ್ನು ತನ್ಮೂಲಕ ಬರುವ ಲಕ್ಷ್ಯಾರ್ಥವನ್ನೂ ಅಂಗೀಕರಿಸಿರುವುದುಂಟು; ಕೆಲವು ಮುಖ್ಯ ವ್ಯತ್ಯಾಸಗಳನ್ನು ಬಿಟ್ಟು, ಸಾಮಾನ್ಯವಾಗಿ ವೈಯಾಕರಣರ ಅಭಿಪ್ರಾಯವೂ ಆಗಿದೆಯೆಂದು ಹೇಳ

ಬಹುದು. ಆಲಂಕಾರಿಕರೋ ತಮ್ಮ ವ್ಯಂಜನಾವ್ಯಾಪಾರ ಸಮರ್ಥನೆಯನ್ನು ಶಾಸ್ತ್ರಸಮ್ಮತವಾಗಿದ್ದ ಅಭಿಧಾ ಲಕ್ಷಣಗಳಿಂದಲೇ ಆರಂಭಿಸಿ, ವ್ಯಂಗ್ಯಾರ್ಥ ಸಂದರ್ಭಗಳಲ್ಲಿ ಅವುಗಳ ಮಿತಿಯನ್ನು ತೋರಿಸಿದರಲ್ಲದೆ ವ್ಯಂಜನಾವ್ಯಾಪಾರದ ಅಪರಿಹಾರ್ಯತ್ವವನ್ನೂ ಪ್ರಕಾಶಕ್ಕೆ ತಂದರು ; ಶಾಸ್ತ್ರಪ್ರಕ್ರಿಯೆಗಳಿಗೆ ಅನುಗುಣವಾಗಿ ವಾದಿಸಿ ಅದರ ಸಮರ್ಥನೆ ಮಾಡಿದರು. ಮಮ್ಮಟ ಕೆಳಕಾಣುವಂತೆ ಆ ಎಲ್ಲ ಪ್ರಕ್ರಿಯಾದಿಗಳನ್ನು ಪೂರ್ವಪಕ್ಷ ಮಾಡಿಕೊಂಡು, ಸೂಕ್ತ ಸಮಾಧಾನಗಳನ್ನು ಒದಗಿಸಿದ್ದಾನೆ.

ವಾಕ್ಯಾರ್ಥವನ್ನೇ ಗುರಿಯಾಗಿ ಇಟ್ಟುಕೊಂಡಿರುವ ಮೀಮಾಂಸಾಶಾಸ್ತ್ರದ ಕೆಲವು ಮತಗಳನ್ನು ಉದ್ಧರಿಸಿ ಮಮ್ಮಟ ತನ್ನ ನಿಲುವನ್ನು ಸ್ಪಷ್ಟಪಡಿಸಿದ್ದಾನೆ ; ಅವುಗಳಲ್ಲಿ ಅಭಿಹಿತಾನ್ವಯವಾದ (ಭಾಟ್ಟಮತ) ಹಾಗು ಅನ್ವಿತಾಭಿಧಾನವಾದ (ಪ್ರಭಾಕರ ಮತ), ಇವೆರಡೂ ಮುಖ್ಯವಾಗಿವೆ.

ಮೊಲನೆಯದಾಗಿ ಅಭಿಹಿತಾನ್ವಯವಾದ—ಅಭಿದಾ ಮೂಲಕ ಬರುವ ಅರ್ಥಗಳು ಆಕ್ಷಾಂಕ್ಷಾ, ಸನ್ನಿಧಿ, ಯೋಗ್ಯತಾ ಇವುಗಳ ಮೂಲಕ ಸಂಸರ್ಗಗೊಂಡು, ಶಬ್ದದ 'ತಾತ್ಪರ್ಯ'ವೆಂಬ ವೃತ್ತಿಯಿಂದ ವಾಕ್ಯಾರ್ಥ ಲಭಿಸುತ್ತದೆಯೆಂಬುದು ಅಭಿಹಿತಾನ್ವಯವಾದ.[15] ಅದರ ಪ್ರಕಾರ, ಅಭಿಧಾವ್ಯಾಪಾರದಿಂದ ಪದಗಳ ಅರ್ಥ ಬಂದು, ಅವು ಮೇಲ್ಕಂಡಂತೆ ಸಂಸರ್ಗ ಪಡೆದು ತಾತ್ಪರ್ಯವೃತ್ತಿಯ ಮೂಲಕ ವಾಕ್ಯಾರ್ಥವನ್ನು ಕೊಡುತ್ತವೆ; ಹಾಗೂ ವಾಕ್ಯಾರ್ಥಗ್ರಹಣದಲ್ಲಿ ಅಭಿಧಾವೃತ್ತಿಗೇ ಗಣನೀಯ ಪಾತ್ರವಿದ್ದು ಎಲ್ಲ ಅರ್ಥವೂ ಅದರ ವ್ಯಾಪ್ತಿಗೆ ಒಳಪಡಬೇಕೆಂಬ ಆಶಯ. ಮಮ್ಮಟ ಹಿಂದೆ ಹೇಳಿರುವ ಅರ್ಥಶಕ್ತಿಮೂಲಧ್ವನಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮೀಮಾಂಸಕರ ಅಂತಹ ಒಂದು ಮಾರ್ಗವು ವ್ಯಂಜನಾಸಮರ್ಥನೆಗೆ ಅನುಕೂಲವೇ ಆಗಿದೆಯೆಂದು ತೋರಿಸುತ್ತಾನೆ ; ಹೇಗೆಂದರೆ ಉಕ್ತವಾಗಿರುವ ಅರ್ಥಶಕ್ತಿಮೂಲವೆಂಬ 'ಧ್ವನಿ' ಪ್ರಭೇದದಲ್ಲಿ ಮೀಮಾಂಸಕವಾದದ ಪ್ರಕಾರ ಅಭಿಧಾಪ್ರಸಕ್ತಿಯನ್ನು ಹೇಳಬೇಕಷ್ಟೆ; ಆದರೆ ಪದಗಳ ಅರ್ಥಗಳು ನೇರವಾಗಿ ವ್ಯಕ್ತಿಗೆ ಅನ್ವಯಿಸತಕ್ಕವಲ್ಲವೆಂದೂ, ಸಾಮಾನ್ಯಕ್ಕೆ ಮಾತ್ರವೆಂದೂ ಹೇಳುವ ಅಭಿಹಿತಾನ್ವಯವಾದದ ಪ್ರಕಾರ ಸಾಮಾನ್ಯರೂಪದ ಅರ್ಥಗಳು ಅಭಿಧಾವ್ಯಾಪಾರದಿಂದ ಬಂದು ಅದು ವಿರಮಿಸಬೇಕು. ಅವುಗಳ ಸಂಸರ್ಗವಾಗಬೇಕು, ಅನಂತರ ತಾತ್ಪರ್ಯ ವೃತ್ತಿಯಿಂದ ತಾತ್ಪರ್ಯಾರ್ಥ ಅಥವಾ ವಾಕ್ಯಾರ್ಥ ಬರಬೇಕು ; ಹೀಗೆ ಪದಗಳ ಅರ್ಥ ಬೇರೆ, ವಾಕ್ಯಾರ್ಥ ಬೇರೆಯಾಗಿದ್ದು, ಅಭಿಧಾವ್ಯಾಪಾರಕ್ಕೂ ವಾಕ್ಯಾರ್ಥಕ್ಕೂ ಅಂತರ ಮಾತ್ರವಲ್ಲದೆ ಮಧ್ಯವರ್ತಿಗಳಾದ ಸಂಸರ್ಗ, ತಾತ್ಪರ್ಯವೃತ್ತಿ ಇವುಗಳ ಸಹಾಯದಿಂದಲೇ ಉದ್ದಿಷ್ಟ ವಾಕ್ಯಾರ್ಥ ಬರುತ್ತದೆಯೇ ಹೊರತು ನೇರವಾಗಿ ಅಭಿಧೆಯಿಂದ ಬರಲಾರದೆಂದು ಸ್ಪಷ್ಟವಾಗುತ್ತದೆ. ಹಾಗೆ ಮಿತಿಯುಳ್ಳ ಅಭಿಧಾವ್ಯಾಪಾರವು ವ್ಯಂಗ್ಯಾರ್ಥವನ್ನು ಹೇಗೆ ಕೊಟ್ಟೀತು ? ಎಂದು ಪ್ರಶ್ನಿಸಿ ಮಮ್ಮಟ ಅಂತಹ ವಾದದಲ್ಲಿ ಹುರುಳಿಲ್ಲವೆಂದು[15] ಮನಗಾಣಿಸಿ ವ್ಯಂಜನಾ ಸಮರ್ಥನೆ ಮಾಡಿದ್ದಾನೆ.

ಎರಡನೆಯದಾಗಿ, ಅನ್ವಿತಾಭಿಧಾನವಾದ—ಅದರ ಪ್ರಕಾರ ಪದವು ಇನ್ನೊಂದು ಪದ

ದೊಡನೆ ಅನ್ವಿತವಾಗಿದ್ದು, ಅನ್ವಿತಪದಾರ್ಥಗಳೊಡನೆ (ಪದಗಳ ಅರ್ಥಗಳೊಡನೆ) ಸೇರಿ, ಅವು ಸಂಕೇತಿತ ವಾಕ್ಯಾರ್ಥವನ್ನು ಕೊಡುತ್ತವೆ; ಅಂತಹ ವಾಕ್ಯಾರ್ಥ ಸಾಮಾನ್ಯ-ವಿಶೇಷರೂಪವುಳ್ಳದ್ದು; ಅಂದರೆ ಪರಸ್ಪರಾಕಾಂಕ್ಷೆಯಿಂದ ಒಂದುಗೂಡಿದ ಪದ–ಪದಗಳ ಅರ್ಥಗಳಲ್ಲಿ ಸಂಕೇತವಿದೆಯಾದ್ದರಿಂದ ವಿಶಿಷ್ಟರೂಪದ ಅರ್ಥಗಳೇ ವಾಕ್ಯಾರ್ಥವಾಗಬಲ್ಲವೇ ಹೊರತು. ಪದಗಳ ಅರ್ಥಗಳಿಗೆ ವೈಶಿಷ್ಟ್ಯವಿಲ್ಲ; ಪದಗಳು ಪದಾರ್ಥಗಳು ಅನ್ವಿತವಾಗಿಯೇ ಸಂಕೇತಗೋಚರ ವಿಶೇಷವಾದರೂ, ಅನ್ವಿತ ಪದಾರ್ಥಗಳ ಸ್ವರೂಪಕ್ಕೆ ಅನುಗುಣವಾಗಿ ಅಲ್ಲಿ ಸಾಮಾನ್ಯದಿಂದ ಆವೃತವಾಗಿರುವ ವಿಶೇಷರೂಪದ ವ್ಯವಹಾರಯೋಗ್ಯ ವಾಕ್ಯಾರ್ಥ ಲಭಿಸುತ್ತದೆಯೆಂಬುದು ಆ ವಾದದ ಸಾರಾಂಶ. ಸಾಮಾನ್ಯ—ವಿಶೇಷರೂಪದ ಪದಾರ್ಥಗಳು ವಾಕ್ಯಾರ್ಥದಲ್ಲಿ ಸಂಕೇತಿತವೆಂದ ಮೇಲೆ, ವಿಶೇಷದ ವ್ಯಾಪ್ತಿಗೆ ಒಳಗಾಗದೆ, ವಾಕ್ಯಾರ್ಥಮಧ್ಯನಿವಿಷ್ಟವಾಗಿರುವ, ಸಂಕೇತಿತ ವಲ್ಲದ್ದರಿಂದ ವಾಚ್ಯವೆನಿಸಿಕೊಳ್ಳದ (ಅವಾಚ್ಯ) ಬರಿಯ ಪದಾರ್ಥಗಳೇ (ವಿಶೇಷವಲ್ಲದವು) ಅಭಿಧಾವ್ಯಾಪಾರದಿಂದ ನೇರವಾಗಿ (ಆ ಮತದ ಪ್ರಕಾರ) ಬರಲಾಗದ ಪರಿಸ್ಥಿತಿ ಇರುವಲ್ಲಿ, ಇನ್ನು ವ್ಯಂಗ್ಯಾರ್ಥವೂ ಆ ವ್ಯಾಪಾರದಿಂದ ಬರುತ್ತದೆಂದು ಹೇಳುವುದಾದರೂ ಹೇಗೆ ?[16] ಹಾಗೆ ಬರಲು ಸಾಧ್ಯವಿಲ್ಲವೆಂದು ತೋರಿಸಿ ವ್ಯಂಜನಾವ್ಯಾಪಾರಸಮರ್ಥನೆ ಮಾಡಿದ್ದಾನೆ. ಅಂತು, "ಅಭಿಹಿತಾನಾಂ ಪದಾರ್ಥಾನಾಂ ಅರ್ಥಾಭಿಧಾಯಿನಾಂ ವಾ ಪದಾನಾಮನ್ವಯ ಇತಿ ಯೇ ವದಂತಿ ತೇ ಅಭಿಹಿತಾನ್ವಯವಾದಿನಃ; ಮತ್ತು ಅನ್ವಿತಾನಾಮೇವ ಪದಾನಾಮಭಿಧಾನಂ ಅಥವಾ ಅನ್ವಿತಾನಾಮೇವ ಪದಾರ್ಥಾನಾಭಿಧಾನಂ ಶಬ್ದೈಃ ಇತಿ ಯೇ ವದಂತಿ ತೇ ಅನ್ವಿತಾಭಿಧಾನವಾದಿನಃ"—ಎಂದು ಹೇಳುವ ಈ ಎರಡು ಮತಗಳಲ್ಲಿ ಅನುಕ್ರಮವಾಗಿ ಅನ್ವಿತವಲ್ಲದ ಅರ್ಥವೂ ಪದಾರ್ಥ–ಪದಾರ್ಥಗಳ ಅನ್ವಿತವಾಗಿರುವಿಕೆಯೂ—ಒಂದೊಂದೂ ವಾಕ್ಯಾರ್ಥದ ದೃಷ್ಟಿಯಿಂದಲೇ ಅಭಿಧಾವ್ಯಾಪಾರದ ಬಗೆಗೆ ಮಿಂತಿಯುಳ್ಳದ್ದಾಗಿರುವುದನ್ನು ಕಾಣಬಹುದು; ಉಭಯ ಮತಗಳಲ್ಲೂ ಅನ್ವಿತ ವಿಶೇಷವೇ (ವಾಕ್ಯಾರ್ಥವೇ) ನೇರವಾಗಿ ಅಭಿಧಾವ್ಯಾಪಾರದಿಂದ ಬಾರದೆ 'ಅವಾಚ್ಯ' ವಾಗಿದ್ದು, ವಾಕ್ಯಾರ್ಥವು ಪದಾರ್ಥಗಳಿಗಿಂತ ಬೇರೆ ಎಂಬುದು ಸ್ಪಷ್ಟವಾಗುವುದಲ್ಲದೆ, ವ್ಯಂಗ್ಯಾರ್ಥಗಳ ಸಂದರ್ಭದಲ್ಲಿ ವ್ಯಂಜನಾವ್ಯಾಪಾರದ ಆವಶ್ಯಕತೆಯನ್ನು ಆ ಎರಡು ಮತಗಳಲ್ಲಿನ ಅರ್ಥವಿವೇಚನೆಯ ದೃಷ್ಟಿಯಿಂದ ಮಮ್ಮಟ ಸಾಧಿಸಿದ್ದಾನೆಂದು ಹೇಳಬಹುದು.

ಮುಂದೆ ಮತ್ತೊಂದು, ಮೀಮಾಂಸಕೈಕದೇಶಿಮತ— ಇದರ ಪ್ರಕಾರ ನೈಮಿತ್ತಿಕ, ಅಂದರೆ ಫಲರೂಪದ ಅರ್ಥಾನುಸಾರವಾಗಿ ನಿಮಿತ್ತಗಳು ಕಲ್ಪಿತವಾಗುತ್ತವೆ (ನೈಮಿತ್ತಿಕಾರ್ಥಾನುಸಾರೇಣ ನಿಮಿತ್ತಾನಿ ಕಲ್ಪ್ಯಂತೇ), ಅರ್ಥಾತ್ ಯಾವ ಅರ್ಥಬೇಕೋ ಅದಕ್ಕೆ ಅನುಗುಣವಾಗಿಯೆ ಶಬ್ದವು ಕ್ರಿಯೋನ್ಮುಖವಾಗುತ್ತದೆಂಬ ವಿಚಾರ ಇಲ್ಲಿ ಮುಖ್ಯವಾಗಿದೆ. ಹಾಗಾದರೆ ವ್ಯಂಗ್ಯಾರ್ಥವನ್ನೂ ನೈಮಿತ್ತಿಕವೆಂದು ಗ್ರಹಿಸಿ, ಆ ಅರ್ಥವನ್ನೂ ಕೊಡುವ ಶಕ್ತಿ ಸ್ವರೂಪಗಳು ಶಬ್ದಕ್ಕೇ ಇರಬಹುದಾದ್ದರಿಂದ ವ್ಯಂಜನಾ ಎಂಬ ನೂತನ ವ್ಯಾಪಾರ ಇನ್ನೇಕೆ ಬೇಕೆಂಬುದು ಆಶಯ. ಆದಕ್ಕೆ ಮಮ್ಮಟನ ಉತ್ತರವೆಂದರೆ—

ನಿಮಿತ್ತತ್ವವೆಂಬುದು ಕಾರಕತ್ವ, ಜ್ಞಾಪಕತ್ವ ಎಂಬುದಾಗಿ ಎರಡು ವಿಧಗಳುಳ್ಳದ್ದು. ಶಬ್ದವಾದರೋ ಉತ್ಪತ್ತಿ ಮಾಡುವ (ಕಾರಕ) ನಿಮಿತ್ತವಾಗಿರದೆ, ಅರ್ಥಕ್ಕೆ ಕೇವಲ ಪ್ರಕಾಶಕವಾಗಿದ್ದು ಕಾರಕತ್ವರಹಿತವಾಗಿದೆ; ಜ್ಞಾಪಕತ್ವವೆಂಬ ಹೇಳೋಣವೆಂದರೆ, ಜ್ಞಾತ ವಸ್ತುವಿದ್ದಲ್ಲಿ ಮಾತ್ರ ಅದು ಸಾಧ್ಯ; ಪ್ರಕೃತದಲ್ಲಿ ಅರ್ಥವು ಜ್ಞಾತವೇ ಆಗಿದ್ದರೂ, ಅದರ ಜ್ಞಾತತ್ವ ಸಂಕೇತವನ್ನೂ ಅನ್ವಿತತ್ವವನ್ನೂ ಅವಲಂಬಿಸಿಕೊಂಡಿರುವುದರಿಂದ ಅದನ್ನು ಜ್ಞಾಪಕತ್ವದಿಂದ ಬಂದ ಜ್ಞಾತತ್ವವಾಗಿ ಗುರುತಿಸುವುದು ಯುಕ್ತವಲ್ಲ. ಆದ್ದರಿಂದ ನಿಮಿತ್ತರೂಪದ ಶಬ್ದಕ್ಕೆ ಕಾರಕತ್ವ ಜ್ಞಾಪಕತ್ವಗಳಲ್ಲಿ ಯಾವುದೂ ಅನ್ವಯಿಸದಿರುವುದರಿಂದ ನೈಮಿತ್ತಿಕಾರ್ಥ ದೃಷ್ಟಿಯಿಂದ, ಶಬ್ದದ ನಿಮಿತ್ತತ್ವ ಅನಿಯಂತವಾಗುತ್ತದೆ;[17] ಆದ್ದರಿಂದ ವ್ಯಂಗ್ಯಾರ್ಥದ ಸಲುವಾಗಿ ಅದನ್ನು ಆಶ್ರಯಿಸಿ ಪ್ರಯೋಜನವಿಲ್ಲವೆಂದು ಸೂಚಿಸಿ ಮಮ್ಮಟ ವ್ಯಂಜನಾವ್ಯಾಪಾರವೇ ಬೇಕೆಂಬ ನಿಲುವನ್ನು ತಾಳುತ್ತಾನೆ.

ಅನಂತರ ಭಾಟ್ಟಮತೋಪಜೀವಿಗಳಾಗಿರುವ ಕೆಲವು ಮೀಮಾಂಸಕರ ಪಕ್ಷ—"ಬಾಣದಂತೆ ಇದು (ಅಭಿಧಾ) ದೀರ್ಘ ದೀರ್ಘತರವಾಗಿರುವ ವ್ಯಾಪಾರ" (ಸೋಽಯಮಿಷೋರಿವ ದೀರ್ಘ ದೀರ್ಘೋ ವ್ಯಾಪಾರಃ). ಬಲವಾಗಿ ಪ್ರಯೋಗಿಸಿದ ಬಾಣ ಹೇಗೆ ತನ್ನ ವೇಗದಿಂದ ಶತ್ರುವಿನ ಕವಚಚ್ಛೇದವನ್ನೂ ಮರ್ಮಭೇದಪ್ರಾಣಹರಣವನ್ನೂ ಮಾಡಬಲ್ಲದೋ, ಹಾಗೆ ಸುಕವಿಯೊಬ್ಬ ಪ್ರಯೋಗಿಸಿದ ಶಬ್ದವೂ ಅಭಿಧಾ ಮೂಲಕವೇ ಎಲ್ಲ ಅರ್ಥಗಳನ್ನೂ ಪಡೆಯಬಹುದೆಂಬುದು ಅಲ್ಲಿನ ವಿಚಾರ. ಮಮ್ಮಟ ಅದನ್ನು ಎದುರಿಸುವ ಕ್ರಮವೆಂದರೆ :—ಉಚ್ಚರಿತ ಶಬ್ದಗಳಿಂದ ಯಾವ ಯಾವ ಅರ್ಥಗಳು ಲಭಿಸಬಹುದೋ ಅಲ್ಲೆಲ್ಲ ಅಭಿಧಾವ್ಯಾಪಾರವೇ ಸಾಕೆನ್ನುವುದಾದರೆ, 'ಬ್ರಾಹ್ಮಣನೇ, ನಿನಗೆ ಪುತ್ರ ಹುಟ್ಟಿದ್ದಾನೆ' (ಬ್ರಾಹ್ಮಣ, ಪುತ್ರಸ್ತೇ ಜಾತಃ) ಎಂದು ಹೇಳಿದಾಗ ಪುತ್ರಜನನ ವಿಚಾರ ಮಾತ್ರವಲ್ಲದೆ ಸಂಬಂಧಪಟ್ಟವರಿಗೆ ಹರ್ಷ ಉಂಟಾಗುವುದು ಸಹಜ ; ಅಂತಹ ಹರ್ಷ ಮುಂತಾದ ಅರ್ಥಕ್ಕೆ ವಾಚ್ಯಾರ್ಥತ್ವ ಇರಲಾರದಷ್ಟೆ? ಇನ್ನು ಲಕ್ಷಣಾ ಎಲ್ಲಿಂದ ಬಂತು ? ಏಕೆಂದರೆ ಲಕ್ಷ್ಯವಾಗಿ ಯಾವ ಅರ್ಥ ಎಲ್ಲಿ ಬರುತ್ತದೋ, ಅಲ್ಲೆಲ್ಲಾ ಇಷೋರಿವ ಇತ್ಯಾದಿ ನಿಯಮದಂತೆ ಅದು ಅಭಿಧೆಯಿಂದಲೇ ಪ್ರತೀತವಾಗಬೇಕಷ್ಟೆ? ಆದ್ದರಿಂದ ಮೇಲ್ಕಂಡ ಹರ್ಷ ಇತ್ಯಾದಿ ಅರ್ಥಗಳ ಬಗೆಗೆ ಅಭಿಧಾ ಲಕ್ಷಣಾ ವ್ಯಾಪಾರಗಳ ಪ್ರಸಕ್ತಿ ಅಶಕ್ಯವಾಗಿದ್ದು, ಅಲ್ಲಿ ವ್ಯಂಜನಾವ್ಯಾಪಾರವೇ ಬೇಕು.

"ಇಷೋರಿವ" ಇತ್ಯಾದಿ ವಾದಕ್ಕೆ ಮಮ್ಮಟನ ಮತ್ತೊಂದು ಪ್ರತಿಕ್ರಿಯೆ—ಮೀಮಾಂಸಾ ಶಾಸ್ತ್ರದಲ್ಲಿ ಆ ಕೆಲವು ಅಂಗಯಾಗಗಳನ್ನು ತಿಳಿಸುವ ಸಂದರ್ಭ. ವಾಕ್ಯಾರ್ಥ ಮಾಡುವ ಕೆಲವು ಸಂದರ್ಭಗಳಲ್ಲಿ ಅವರು ಎಲ್ಲದಕ್ಕೂ ಅನ್ವಯಿಸುವ ಒಂದು ಪ್ರಮಾಣವನ್ನು ಹೇಳದೆ, ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಎಂದು ಆರು ಪ್ರಮಾಣಗಳನ್ನು ಹೇಳಿರುವುದಲ್ಲದೆ, ಅವುಗಳಲ್ಲಿ ಮುಂದೆ ಮುಂದೆ ಬರುವ ಪ್ರಮಾಣ ಹಿಂದಿನದಕ್ಕಿಂತಲೂ ದುರ್ಬಲವೆಂದು ಪ್ರತಿಪಾದಿಸಿದ್ದಾರೆ (ಶ್ರುತಿಲಿಂಗವಾಕ್ಯ ಪ್ರಕರಣಸ್ಥಾನ ಸಮಾಖ್ಯಾನಾಂ ಪರದೌರ್ಬಲ್ಯಮರ್ಥವಿಪ್ರಕರ್ಷಾತ್). ಕಾರಣವೆಂದರೆ ಮುಂದೆ ಮುಂದೆ

ಬರುವ ಆ ಪ್ರಮಾಣವು ಉದ್ದಿಷ್ಟಾರ್ಥಕ್ಕೆ ಶಬ್ದ ದೂರವಿರುವುದರ ಸೂಚಕವಾಗಿದೆ : ಅಂದರೆ ಕೆಲವು ವಾಕ್ಯಗಳ ಅರ್ಥಗಳು ನೇರವಾಗಿ ಶಬ್ದದಿಂದ ಲಭಿಸಿದರೆ, ಕೆಲವು ಶಬ್ದದಿಂದ ದೂರವಾಗಿದ್ದು ಮೇಲ್ಕಂಡ ಪ್ರಮಾಣಗಳಲ್ಲಿ ಒಂದಲ್ಲ ಒಂದರ ಸಹಾಯವನ್ನು ಅಪೇಕ್ಷಿಸಿಯೇ ವೇದ್ಯವಾಗುತ್ತವೆ. ಇಲ್ಲಿ ದಿಙ್ಮಾತ್ರವಾಗಿ ಎರಡು ಉದಾಹರಣೆಗಳನ್ನು ಕೊಡಲಾಗಿದೆ ; ಒಂದನೆಯದು, 'ದಧ್ನಾ ಜುಹುಯಾತ್' (ಮೊಸರಿನಿಂದ ಹೋಮ ಮಾಡತಕ್ಕದ್ದು)—ಅಗ್ನಿಹೋತ್ರವನ್ನು ವಿಧಿಸುವ ವಾಕ್ಯದಿಂದ ಹೋಮವು ಆಗಲೇ ವಿಧಿಸಲ್ಪಟ್ಟಿದ್ದು 'ದಧಿ' ಆ ಹೋಮಕ್ಕೆ ಅನ್ವಯಿಸುವ ಒಂದು ಅಂಗವೆಂಬುದು 'ದಧ್ನಾ' ಎಂಬ ತೃತೀಯಾರೂಪದಿಂದ ನೇರವಾಗಿ ಉಕ್ತವಾಗಿದ್ದು 'ಶ್ರುತಿ' ಎಂಬ ಪ್ರಮಾಣದಲ್ಲಿ ಸೇರಿದೆ ; ಎರಡನೆಯದು, 'ಸ್ರುವೇಣಾವದ್ಯತಿ' (ಸ್ರುವದಿಂದ ಬೇರ್ಪಡಿಸತಕ್ಕದ್ದು) ; ದ್ರವರೂಪದ ವಸ್ತುಗಳ ಬೇರ್ಪಡಿಸುವಿಕೆಯೂ ಮತ್ತು ಸ್ರುವ ಅದಕ್ಕೆ ಅಂಗವೆಂಬುದೂ ಇಲ್ಲಿ ಉದ್ದಿಷ್ಟಾರ್ಥ. ಆ ಅರ್ಥ ಅಲ್ಲಿ ನೇರವಾಗಿ ಬಾರದೆ ಇರುವುದಾಗಿ, ಸ್ರುವಕ್ಕೆ ಸಂಬಂಧಪಟ್ಟಂತೆ 'ಲಿಂಗ' (ಶಬ್ದದ ಸಾಮರ್ಥ್ಯ)ವನ್ನು ಪ್ರಮಾಣವಾಗಿಟ್ಟುಕೊಂಡು ಅದರಿಂದ ಉದ್ದಿಷ್ಟಾರ್ಥ ಪಡೆಯಲಾಗಿದೆ ; ಉಳಿದ ಪ್ರಮಾಣಗಳೂ ಅರ್ಥಬೋಧನೆಯಲ್ಲಿ ಹಾಗೆಯೇ ಸಹಾಯಕಗಳಾಗಿವೆ. ಆ ಎಲ್ಲ ಆರು ಸಂದರ್ಭಗಳಿಗೂ "ಇಷೋರಿವ" ಎಂಬ ನ್ಯಾಯವನ್ನನುಸರಿಸಿ ಮೀಮಾಂಸಕರು ಯಾವುದಾದರೂ ಒಂದೇ ಪ್ರಮಾಣದ ಮೂಲಕ ಉದ್ದಿಷ್ಟಾರ್ಥವನ್ನು ಪಡೆಯಬಹುದಾಗಿತ್ತಲ್ಲವೇ ಎಂಬುದು ಮಮ್ಮಟ ಅವರನ್ನು ಕೇಳುವ ಪ್ರಶ್ನೆ. ಉದ್ದಿಷ್ಟಾರ್ಥವನ್ನು ಪಡೆಯಲು ಅವರೇ ಶ್ರುತಿಲಿಂಗಾದಿ ಪ್ರಮಾಣ ರೂಪದ ಇತರ ಉಪಕರಣಗಳ ಸಹಾಯವನ್ನು ತಾಳುವರೆಂದ ಮೇಲೆ, ಶಬ್ದಕ್ಕೆ ದೂರವೇ ಆಗಿರುವ ವ್ಯಂಗ್ಯಾರ್ಥವನ್ನು ಕುರಿತಂತೆ ವ್ಯಂಜನಾವ್ಯಾಪಾರವನ್ನು ಒಪ್ಪಲೇಬೇಕೆಂದು ಅವನ ನಿರ್ಣಯ.

ಹಾಗೆಯೇ ಆ ಪೂರ್ವಪಕ್ಷದ ಮತ್ತೊಂದು ಯುಕ್ತಿ, "ಶಬ್ದ ಯಾವ ಅರ್ಥದ ಪರವಾಗಿದೆಯೋ, ಅದೇ ಶಬ್ದಾರ್ಥ" (ಯತ್ಪರಃ ಶಬ್ದಃ ಸ ಶಬ್ದಾರ್ಥಃ) ಎಂಬುದು. ಅಂದರೆ ಉಕ್ತಶಬ್ದಕ್ಕೆ ವಿಧೇಯಾರ್ಥದಲ್ಲಿ ತಾತ್ಪರ್ಯ (ತತ್ಪರವಾಗುವಿಕೆ)ಯೆಂದು ಹೇಳಿದಂತಾಯಿತು. ಮಮ್ಮಟನ ಪ್ರತಿವಾದ : ಉಪಾತ್ತ (ಉಚ್ಚರಿತ) ಶಬ್ದಕ್ಕೆ ಮಾತ್ರ (ಅಭಿಧೇಯವಾಗಿರುವ) ಅರ್ಥದಲ್ಲಿ ತಾತ್ಪರ್ಯವೇ ಹೊರತು, ತತ್ಕಾಲದಲ್ಲಿ ಹೇಗೋ ಗ್ರಹಿಸಲ್ಪಟ್ಟ ಅರ್ಥದಲ್ಲಿ ತಾತ್ಪರ್ಯವಿಲ್ಲ. ಹಾಗಿರುವುದಾದರೆ 'ಮೊದಲನೆಯವನು ಓಡುತ್ತಾನೆ' (ಪೂರ್ವೋ ಧಾವತಿ) ಎಂಬ ವಾಕ್ಯಕ್ಕೆ 'ಎರಡನೆಯವನು' ಎಂದು ಮುಂತಾದ ಅರ್ಥದಲ್ಲಿ (ಅಪರಾದ್ಯರ್ಥೇಽಪಿ) ಶಬ್ದಕ್ಕೆ ತತ್ಪರತೆ ಉಂಟಾದೀತು ! ಅದು ಸಾಧ್ಯವಿಲ್ಲ :

ಭೋಕ್ತವ್ಯಂ) ಎಂಬ ವಾಕ್ಯಾರ್ಥ ಸಿದ್ಧಿಸಿದಾಗ. ಅದು ಉಪಾತ್ತಶಬ್ದದಿಂದ ಬರುವ ಅರ್ಥಕ್ಕಿಂತ ಬೇರೆಯಾಗಿದ್ದು ಶಬ್ದ ಅನ್ಯತ್ರವೂ ತತ್ಪರವಾಗಿರಬಲ್ಲದೆಂದು ಮೀಮಾಂಸಕರು ಹೇಳಿ 'ಅವನ ಮನೆಯಲ್ಲಿ ಊಟ ಮಾಡಬೇಡ' ಎಂಬ ಉಪಾತ್ತಶಬ್ದದೂರವಾದ ಅರ್ಥವೂ ಅಭಿಧಾವ್ಯಾಪಾರದಿಂದಲೇ ಬರಬಲ್ಲದೆಂಬ ನಿಲುವನ್ನು ತಾಳಬಹುದು. ಅದಕ್ಕೆ ಮಮ್ಮಟನ ಉತ್ತರ: ಮೇಲೆ ಹೇಳಿದ ಎರಡು ವಾಕ್ಯಗಳಲ್ಲಿ 'ಚ'ಕಾರ ಏಕವಾಕ್ಯತಾ ಸೂಚಕ ; ಭಕ್ಷಯ ಭುಂಜಕ್ಥಾಃ ಎಂಬ ಆಖ್ಯಾತಾಂತಕ್ರಿಯಾಪದಗಳಿಂದ ಘಟಿತವಾದ ಆ ವಾಕ್ಯಗಳಿಗೆ ಅಂಗಾಂಗಿಭಾವವಿಲ್ಲವಾದರೂ, 'ವಿಷವನ್ನು ತಿನ್ನು' (ವಿಷಂ ಭಕ್ಷಯ) ಎಂಬ ವಾಕ್ಯವು ನಿಷ್ಪತ್ತಿರೂಪಸ್ವರೂಪದಿಂದ (ಕೃದ್ವಾಚ್ಯತ್ವೇನ) ಇದೆಯೆಂದು ಗ್ರಹಿಸಿ ಅದು ಒಟ್ಟಿನಲ್ಲಿ 'ಅವನ ಮನೆಯಲ್ಲಿ ಊಟ ಮಾಡಬೇಡ' ಎಂಬ ವಾಕ್ಯಕ್ಕೆ ಅಂಗಭೂತವಾಗಿದೆಯೆಂದು ಕಲ್ಪಿಸಿಕೊಳ್ಳಬೇಕು ; ಅದರಿಂದ 'ಅವನ ಮನೆಯಲ್ಲಿ ಊಟಮಾಡುವುದು ವಿಷಭಕ್ಷಣಕ್ಕಿಂತಲೂ ಕಷ್ಟ' ಎಂಬುದರ ಅರಿವು ಮೂಡಿ 'ಏನೇ ಆದರೂ ಅವನ ಮನೆಯಲ್ಲಿ ಊಟ ಮಾಡಬೇಡ' (ಸರ್ವಥಾ ಮಾಸ್ಯ ಗೃಹೇ ಭುಂಜಕ್ಥಾಃ) ಎಂಬ ಅರ್ಥವು ಉಪಾತ್ತಶಬ್ದಗಳಿಂದಲೇ ತತ್ಪರವಾಗಿ ಬರುವ ಅರ್ಥವೆಂದು ಮಮ್ಮಟ ಸ್ಪಷ್ಟಪಡಿಸುತ್ತಾನೆ.[18] ಮತ್ತು ಉಪಾತ್ತಶಬ್ದಕ್ಕೆ ಮಾತ್ರ ನಿರ್ದಿಷ್ಟವಾದ ಅರ್ಥದಲ್ಲಿ ತಾತ್ಪರ್ಯ (ತತ್ಪರತೆ) ಎಂಬ ನಿಯಮವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕೆಂದೂ, ಮೇಲ್ಕಂಡ ಉದಾಹರಣೆ ಆ ನಿಯಮಕ್ಕೆ ಒಳಗಾಗಿರುವುದೆಂದೂ ತಿಳಿಸುತ್ತಾನೆ. ಅಲ್ಲದೆ ಕಡೆಯಲ್ಲಿ, "ಯತ್ಪರಃ ಶಬ್ದಃ ಸ ಶಬ್ದಾರ್ಥಃ" ಅಂದರೆ ಶಬ್ದ ಯಾವುದರ ಪರವಾಗಿರುತ್ತದೋ ಅದೇ ಅದರ ಅರ್ಥವೆಂದು ಕೂಗುವ ಅಂತಹ ಮೀಮಾಂಸಕರು, ಆ ಉಕ್ತಿಯು ಏನನ್ನು ಉದ್ದೇಶಿಸಿದೆ ಎಂಬುದನ್ನೇ ಅರಿಯದ ಮೂರ್ಖರು (ಅತಾತ್ಪರ್ಯಜ್ಞಾಃ ತಾತ್ಪರ್ಯವಾಚೋಯುಕ್ತೇಃ ದೇವನಾಂಪ್ರಿಯಾಃ) ಎಂದು ಗೇಲಿ ಮಾಡುತ್ತಾನೆ. ಹೀಗೆ ವ್ಯಂಗ್ಯಾರ್ಥದ ಸಂದರ್ಭದಲ್ಲಿ ಉಪಾತ್ತಶಬ್ದವು ತತ್ಪರ (ವ್ಯಂಗ್ಯಾರ್ಥಪರ) ವಾಗಲು ಸಾಧ್ಯವಿಲ್ಲವೆಂದು ಸೂಚಿಸುವುದರ ಮೂಲಕ ವ್ಯಂಜನಾವ್ಯಾಪಾರದ ಆವಶ್ಯಕತೆಯನ್ನು ಮಮ್ಮಟ ಎತ್ತಿ ಹಿಡಿಯುತ್ತಾನೆ.

ವ್ಯಾಕರಣಶಾಸ್ತ್ರದ ಒಂದು ಪ್ರಕ್ರಿಯೆಯ ಬಗೆಗೆ ಮಮ್ಮಟನ ನಿಲುವು—ವೈಯಾಕರಣರ ಪ್ರಕಾರ 'ಬುದ್ಧಿಗೆ ಅಖಂಡವಾಗಿ ಗ್ರಾಹ್ಯವಾಗುವ ವಾಕ್ಯಾರ್ಥವೇ ವಾಚ್ಯವೂ ಹೌದು ; ವಾಕ್ಯವೇ ವಾಚಕ (ಅಖಂಡಬುದ್ಧಿನಿರ್ಗ್ರಾಹ್ಯೋ ವಾಕ್ಯಾರ್ಥ ಏವ ವಾಚ್ಯಃ ; ವಾಕ್ಯಮೇವ ಚ ವಾಚಕಂ). ಹಾಗೆ ಬುದ್ಧಿಗೆ ಅಖಂಡವಾಗಿ ಗೋಚರಿಸುವ ಅರ್ಥವನ್ನೇ ಅವರು ಸ್ಫೋಟತತ್ತ್ವವಾಗಿ ನಿರೂಪಿಸಿದ್ದಾರೆ: ಅವರು ಶಬ್ದಬ್ರಹ್ಮವಾದಿಗಳು. ಉದಾಹರಣೆಗಾಗಿ ಹೇಳುವುದಾದರೆ ; "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ಮಹಾವಾಕ್ಯದಲ್ಲಿ ಪದ, ಪದಗಳ, ಅರ್ಥಗಳ ಪರಸ್ಪರ ಯಾವ ವಿಭಾಗವೂ ಇಲ್ಲದೆ ಅಖಂಡವಾಗಿಯೇ ಅಖಂಡ ಬ್ರಹ್ಮ ಬೋಧಿಸಲ್ಪಡತಕ್ಕದ್ದು ; ಅಂತೆಯೇ ಆಲಂಕಾರಿಕರೂ ಹೇಳುವ ಸೂಚ್ಯಾರ್ಥವೂ (ವ್ಯಂಗ್ಯಾರ್ಥವೂ) ಏಕೆ ಅಖಂಡಬುದ್ಧಿನಿರ್ಗ್ರಾಹ್ಯವಾಗಬಾರದು ? ಎಂದು ವೈಯಾಕರ

ಣರು ಪ್ರಶ್ನಿಸಬಹುದು. ಅಂದ ಮೇಲೆ ವ್ಯಂಗ್ಯಾರ್ಥದ ಅರಿವಿಗೆ ವ್ಯಂಜನಾ ಎಂಬ ಒಂದು ವಿನೂತನ ವ್ಯಾಪಾರವಾದರೂ ಏಕೆ ಬೇಕೆಂಬುದು ಅವರ ವಾದವಷ್ಟೆ. ಅದಕ್ಕೆ ಮಮ್ಮಟನ ಉತ್ತರ—ಬ್ರಹ್ಮನ ಬಗೆಗೆ ಅದು ಸಮಂಜಸವೆನ್ನೋಣ; ಆದರೆ ಎಲ್ಲೆಲ್ಲೂ ಅದನ್ನೇ ಹೇಳಲಾದೀತೇ ? ಪ್ರಾಪಂಚಿಕವ್ಯವಹಾರದಶೆಯಲ್ಲಿ ಇರುವವರೆಗೂ ಪದಗಳ, ಅರ್ಥಗಳ ವಿಭಾಗ, ವಿವೇಚನೆಗಳು ಅನಿವಾರ್ಯವಾಗಿದ್ದು, ಅಭಿಧಾವ್ಯಾಪಾರಕ್ಕೆ ಎಟುಕದ 'ವ್ಯಂಗ್ಯಾರ್ಥ'ದ ಅರಿವಿಗೆ, ಪ್ರತೀತಿಗೆ ವ್ಯಂಜನಾವ್ಯಾಪಾರ ಅತ್ಯಗತ್ಯವೆಂಬುದು. ಆ ಬಗೆಯ ಸಮಾಧಾನದ ಮೂಲಕ ಅವನು ಅದನ್ನು ಸಮರ್ಥಿಸಿದ್ದಾನೆ.

ಇನ್ನು ನ್ಯಾಯಶಾಸ್ತ್ರದ (ತರ್ಕಶಾಸ್ತ್ರದ) ಉಲ್ಲೇಖ—ನೈಯಾಯಿಕರು, ತಾರ್ಕಿಕರು ಪ್ರಮಾಣಪ್ರವೀಣರು : ಅವರಿಗೆ ವಿಶೇಷವಾಗಿ 'ಅನುಮಾನ' ಪ್ರಮಾಣದಲ್ಲಿ ಆಸಕ್ತಿ ; ಅದರ ವ್ಯಾಪ್ತಿ ಕೂಡ ಮಿಗಿಲು. ಅವರು ಕಾವ್ಯದಲ್ಲಿ ವಿಶೇಷವಾದ ಒಂದು ಸೂಚ್ಯಾರ್ಥ (ಆಲಂಕಾರಿಕ ಮತದ ವ್ಯಂಗ್ಯಾರ್ಥ) ಅಂದರೆ ರಸಾದಿಗಳು ಬರುತ್ತವೆಂಬ ವಿಚಾರಕ್ಕೆ ಅಥವಾ ಬರುತ್ತವೆಂದು ಒಪ್ಪಿಕೊಳ್ಳುವ ಬಗೆಗೆ ವಿರೋಧಿಗಳಲ್ಲ. ಆದರೆ ಅಂಥ ಅರ್ಥ ಬರಬೇಕಾದರೆ 'ಅನುಮಾನ' ಪ್ರಮಾಣವೇ ಉಪಯುಕ್ತವಾಗಿರುವಲ್ಲಿ 'ವ್ಯಂಜನಾ' ಎಂಬ ನೂತನ ವ್ಯಾಪಾರದ ಆವಶ್ಯಕತೆಯಾದರೂ ಏನು ? ಎಂದು ಅವರ ವಾದ. ತಾರ್ಕಿಕನಾದ ಮಹಿಮಭಟ್ಟ (ಸು. ಕ್ರಿ.ಶ. ೧೦೩೦) ಅದನ್ನು ಪ್ರದರ್ಶಿಸಿ ಸಾಧಿಸುವ ಸಲುವಾಗಿ 'ವ್ಯಕ್ತಿ ವಿವೇಕ' ಎಂಬ ಗ್ರಂಥವನ್ನೇ ರಚಿಸಿ ಧ್ವನಿಸಮೇತ ವ್ಯಂಜನಾವ್ಯಾಪಾರವನ್ನು ಖಂಡಿಸಿದ್ದಾನೆ ; ಎಲ್ಲ ಧ್ವನಿಯೂ 'ಅನುಮಾನ'ದಲ್ಲೇ ಅಂತರ್ಭಾವವಾಗುತ್ತದೆಂಬುದನ್ನು ಪ್ರಕಾಶಪಡಿಸಲು ತನ್ನ ಗ್ರಂಥವನ್ನು ರಚಿಸಿದ್ದಾಗಿ ಪ್ರತಿಜ್ಞೆ ಮಾಡಿದ್ದಾನೆ.[19] ಅಂತಹ ನಿಲುವಿಗೆ ಅನುಗುಣವಾಗಿ ಅವರ ವಾದ ಹೀಗಿದೆ—ವಾಚ್ಯ (ಶಬ್ದ)ದೊಡನೆ ಕ್ರಮಬದ್ಧವಾಗಿ ಹೊಂದಿಕೊಂಡಿರದ ಯಾವ ಅರ್ಥವೂ ಪ್ರತೀತಿಗೆ ವಿಷಯವಾಗಲಾರದು. ಹಾಗೆ ಆಗುವುದೆಂದು ಒಪ್ಪಿದರೆ ಯಾವುದೋ ಶಬ್ದಕ್ಕೆ ಯಾವುದೋ ಅರ್ಥ ಬಂದು ಗೊಂದಲ ಅನಿವಾರ್ಯವಾಗುತ್ತದೆ. ವ್ಯಂಗ್ಯಾರ್ಥ ವ್ಯಂಜಕಶಬ್ದಗಳಿಗೆ ಪರಸ್ಪರ ಸಂಬಂಧವಿಲ್ಲದಿರುವುದರಿಂದ, ಅಂತಹ ಅರ್ಥವನ್ನು ತಾವು ಒಪ್ಪಿಕೊಂಡಿರುವುದರಿಂದ, ಅದಕ್ಕೂ ವಾಚಕಶಬ್ದಕ್ಕೂ ಒಂದು ತಾರ್ಕಿಕ ಸಂಬಂಧವಿರಲೇ ಬೇಕೆಂಬುವರಲ್ಲಿ ಅವರ ನಿಷ್ಠೆ : ಆದ್ದರಿಂದ ವ್ಯಂಗ್ಯ—ವ್ಯಂಜಕ ಇವುಗಳ ಸ್ಥಾನದಲ್ಲಿ ಅವರು ತಮ್ಮ ಶಾಸ್ತ್ರದಲ್ಲಿರುವಂತೆ ವಹ್ನಿ ಧೂಮಗಳ ಉದಾಹರಣೆಯನ್ನು ಸಮಾನಾಂತರವಾಗಿ ದೃಷ್ಟಿಯಲ್ಲಿಟ್ಟುಕೊಂಡು ಸೂಕ್ತ ಸಮನ್ವಯ ಮಾಡುತ್ತಾರೆ : ಹೇಗೆಂದರೆ—ವಹ್ನಿಯು ಲಿಂಗಿ, ಸಾಧ್ಯ ; ಧೂಮವು ಲಿಂಗ, ಸಾಧನ ಅಥವಾ ಹೇತು ; ಸಪಕ್ಷಸತ್ತ್ವ ವಿಪಕ್ಷವ್ಯಾವೃತ್ತಿ (ರೂಪದ ವ್ಯಾಪ್ತಿ) ಹಾಗೂ ನಿಯತಧರ್ಮಿನಿಷ್ಠತ್ವವೆಂಬ ಪಕ್ಷಧರ್ಮತಾ ಎಂಬ ತ್ರಿರೂಪಲಿಂಗದಿಂದ[20] (ಧೂಮದಿಂದ) ಲಿಂಗಿಯ (ವಹ್ನಿಯ) ಜ್ಞಾನ ಲಭಿಸುತ್ತದೆ ; ಹಾಗೆಯೇ ಕಾವ್ಯಸಂದರ್ಭಗಳಲ್ಲಿ ವಾಚಕ ಶಬ್ದವನ್ನೇ 'ಲಿಂಗ' (ಸಾಧನ ಅಥವಾ ಹೇತು)ವೆಂದೂ ವ್ಯಂಗ್ಯಾರ್ಥ ಎಂದು ಹೇಳುವ ಸೂಚ್ಯಾರ್ಥವನ್ನೇ 'ಲಿಂಗಿ' (ಸಾಧ್ಯ) ಎಂದೂ ಪರಿಗಣಿಸಿ, ಆ 'ಸಾಧನ'ದ ಮೂಲಕವೇ 'ಸಾಧ್ಯ' ರೂಪದ

ಆ ಅರ್ಥವನ್ನು ಪಡೆಯಬಹುದಷ್ಟೆ ಎಂದು ತಾರ್ಕಿಕರ ವಾದ. ವಾಚಕ ಶಬ್ದಾದಿಗಳಿಗೆ ಅಂತಹ ತಾರ್ಕಿಕಪ್ರಕ್ರಿಯೆಯು ಯುಕ್ತವಲ್ಲವೆಂದು ಹೇಳಿ ಮಮ್ಮಟ ಅದರ ಅನುಪಪನ್ನತೆಯನ್ನು ಸಕಾರಣವಾಗಿ ವಿಶದಪಡಿಸುತ್ತಾನೆ—ವಾಚಕ ಶಬ್ದಾದಿಗಳನ್ನು ತಾರ್ಕಿಕ ಲಿಂಗಾದಿಗಳೆಂದು ನಿರೂಪಿಸುವ ಯಾವ ಕಾವ್ಯಸಂದರ್ಭವೇ ಆಗಲಿ, ಅದೆಲ್ಲವೂ ಲಿಂಗ ಅಥವಾ ಹೇತುವಿಗೆ ಅನ್ವಯಿಸುವಂತೆ ತರ್ಕಪ್ರತಿಪಾದಿತ ಅನೈಕಾಂತಿಕ, ವಿರುದ್ಧ, ಅಸಿದ್ಧ ಮುಂತಾದ ದೋಷಗಳಿಂದ ಕೂಡಿರುತ್ತವೆಂಬುದನ್ನು ತೋರಿಸಿ 'ಕಥಮೇವಂ ವಿಧ್ಧಾದ್ಧೇತೋಃ ಸಾಧ್ಯಸಿದ್ಧಿಃ'? (ಅಂತಹ ದೋಷಪೂರ್ಣ ಹೇತುವಿನಿಂದ ಸಾಧ್ಯದ ಸಿದ್ಧಿ ಹೇಗೆ ತಾನೇ ಆದೀತು ?) ಎಂದು ಪ್ರಶ್ನಿಸಿ ವ್ಯಂಗ್ಯಾರ್ಥದ ಬಗೆಗೆ 'ಅನುಮಾನ' ಪ್ರಮಾಣಕ್ಕೆ ಪ್ರಸಕ್ತಿ ಅಸಂಭವವೆಂದು ಸಾಧಿಸುವುದಲ್ಲದೆ ವ್ಯಂಜನಾವ್ಯಾಪಾರದ ಆವಶ್ಯಕತೆಯನ್ನು ಸಮರ್ಥಿಸಿದ್ದಾನೆ.

ಮೇಲ್ಕಂಡ ನಿರೂಪಣೆಯಲ್ಲಿ ಮಮ್ಮಟನ ವಾದ ನಿರ್ಣಯಾದಿಗಳನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ. ಗ್ರಂಥವಿಸ್ತರಣಭಯದಿಂದ ಹೆಚ್ಚು ಸಂಖ್ಯೆಯಲ್ಲಿ ಉದಾಹರಣೆಗಳನ್ನು ಸೇರಿಸಿಲ್ಲ; ಅವು ಅವನ ಕಾವ್ಯಪ್ರಕಾಶದ ಎರಡನೆಯ ಹಾಗೂ ಐದನೆಯ ಉಲ್ಲಾಸಗಳ ಉತ್ತರಭಾಗದಲ್ಲಿ ಉಪಲಬ್ಧವಾಗಿವೆ.

೫

ಕಾವ್ಯತತ್ತ್ವಾನ್ವೇಷಣೆಯ ಪ್ರಸಂಗಗಳಲ್ಲಿ ತಮಗಿಂತಲೂ ಪೂರ್ವದಲ್ಲಿ ನಿರೂಪಿತವಾದ (ಸಮಾಮ್ನಾತಪೂರ್ವಃ) 'ಧ್ವನಿ'ಯನ್ನು—ವ್ಯಂಗ್ಯಾರ್ಥ, ವ್ಯಂಜಕಶಬ್ದ, ವ್ಯಂಜನಾವ್ಯಾಪಾರ, ತದ್ಯುಕ್ತಕಾವ್ಯ ಇವೆಲ್ಲವನ್ನೂ ಅದರಲ್ಲಿ ಐಕ್ಯಗೊಳಿಸಿ, ಎಲ್ಲ ವಿಪ್ರತಿಪತ್ತಿಗಳನ್ನೂ ಗಮನಿಸಿ ಪರಿಹರಿಸಿ—ಅದರ ಅಸ್ತಿತ್ವವನ್ನು ವಿಶೇಷವಾಗಿ ನವ್ಯಾಲಂಕಾರಿಕರು ಸ್ಪಷ್ಟಪಡಿಸಿದ್ದಾರೆ; ಹಾಗೆ ಮಾಡಿದವರಲ್ಲಿ ಆನಂದವರ್ಧನ ಅಗ್ರೇಸರ, ಅಗ್ರಗಣ್ಯ. ವ್ಯಂಗ್ಯಾರ್ಥವಾಗಿ 'ಧ್ವನಿ'ಯೇ ಆತ್ಮವೆಂದು ನಿರೂಪಿಸಿ, ಅದು ಶಬ್ದದ ಶಾಸ್ತ್ರಸಮ್ಮತ ಹಾಗೂ ಪ್ರಚಲಿತ ವ್ಯಾಪಾರಗಳಾದ ಅಭಿಧಾ, ಲಕ್ಷಣ ಇವಕ್ಕಿಂತಲೂ ಅತೀತವಾದ ವಿಶಿಷ್ಟವಾದ ವ್ಯಂಜಕತ್ವ ಅಥವಾ ವ್ಯಂಜನಾ ಎಂಬ ವ್ಯಾಪಾರದಿಂದಲೇ ಬರುತ್ತದೆಂಬುದನ್ನು ಸಾಧಿಸಿದ ಕೀರ್ತಿ ಅವನಿಗೆ ಸಲ್ಲತಕ್ಕದ್ದು; ಅಂತಹ 'ಧ್ವನಿ' ನಿಲುವಿಗೆ ಶಾಸ್ತ್ರಾದಿಗಳ ವಿರೋಧವಿತ್ತು: ವಿಶೇಷವೆಂದರೆ ಆ ವಿರೋಧವೆಲ್ಲ ಸಾಮಾನ್ಯವಾಗಿ 'ವ್ಯಂಜನಾವ್ಯಾಪಾರ'ದಲ್ಲೇ ಕೇಂದ್ರೀಕೃತವಾಯಿತು; ಏಕೆಂದರೆ ವಿರೋಧಿಗಳು ಸೂಚ್ಯವಾದ ಆ ಅರ್ಥ (ವ್ಯಂಗ್ಯಾರ್ಥ)ವನ್ನು ಹೇಗೋ ಒಪ್ಪಿಕೊಂಡರು; ಆದರೆ ಆ ಅರ್ಥದಾಯತ್ವ ಕಾರ್ಯವನ್ನು ಪ್ರಸಿದ್ಧವಲ್ಲದ ಹೊಸದಾದ 'ವ್ಯಂಜನಾ' ಎಂಬ ವ್ಯಾಪಾರಕ್ಕೆ ವಹಿಸುವ ಆಲಂಕಾರಿಕರ ದೃಷ್ಟಿ ಅವರಿಗೆ ಹಿಡಿಸದೆ, ಅದರ ಮೇಲೆ ಧಾಳಿ ನಡೆಸಿದರು; ಅದೆಲ್ಲವನ್ನೂ ಆನಂದವರ್ಧನ ಬಹುಮಟ್ಟಿಗೆ ನಿವಾರಣೆ ಮಾಡಿದನೆಂಬುದೇನೋ ನಿಜ. ಅವನ ತರುವಾಯದ ಕಾಲದಲ್ಲಿ ಅಲ್ಲಲ್ಲೇ ವಿರೋಧದ ಸುಳಿವುಗಳಿದ್ದು, ಅನಂತರ ಬಂದ

ಮಮ್ಮಟ ಅದೆಲ್ಲವನ್ನೂ ಗಮನಿಸಿ ಸೂಕ್ತ ಪರಿಹಾರಗಳನ್ನು ಒದಗಿಸಿದ್ದಾನೆ; ಪ್ರೊ. ಕೆ. ಕೃಷ್ಣಮೂರ್ತಿಯವರು ಹೇಳಿರುವಂತೆ, "ತನ್ನ ಅಧಿಕಾರವಾಣಿಯಿಂದ ವ್ಯಂಜನಾ ವ್ಯಾಪಾರದ ಅಸ್ತಿತ್ವವನ್ನು ಮತ್ತೆ ಸಮರ್ಥಿಸುವುದಕ್ಕಾಗಿ ವಿಷಯವನ್ನೆಲ್ಲ ಕೂಲಂಕಷವಾಗಿ ಚರ್ಚಿಸಿದ್ದಾನೆ";[21] ಅಲ್ಲದೆ ವಿವಿಧ ಪೂರ್ವಪಕ್ಷಗಳನ್ನು ಕಲ್ಪಿಸಿಕೊಂಡು, ಎಲ್ಲೆಲ್ಲಿ ವ್ಯಂಜನಾವ್ಯಾಪಾರಕ್ಕೆ ವಿರೋಧ ಕಂಡುಬಂದಿತೋ ಅಲ್ಲೆಲ್ಲ ಸೂಕ್ತ ಸಮಾಧಾನಗಳನ್ನು ಉಪಾದೇಯವಾಗಿರುವಂತೆ ನಿರೂಪಿಸಿದ್ದಾನೆ. ಅವನ ಆ ಎಲ್ಲ ಪ್ರಯತ್ನಗಳ ಫಲವಾಗಿ ವ್ಯಂಜನಾವ್ಯಾಪಾರಕ್ಕೆ ಸಾಮಾನ್ಯವಾಗಿ ಸರ್ವಸಮ್ಮತ ಸಮರ್ಥನೆ ದೊರೆತು 'ಧ್ವನಿ' ಸುಭದ್ರವಾಗಿ ನಿಲ್ಲುವಂತಾಯಿತು; ಮತ್ತು ಮುಂದೆ ಬಂದ ಹೆಚ್ಚು ಕಡಮೆ ಎಲ್ಲ ಆಲಂಕಾರಿಕರ ಮೇಲೆ ಅದರ ಪ್ರಭಾವ ಚಿರಸ್ಥಾಯಿಯಾಯಿತೆಂದರೆ ಅತಿಶಯೋಕ್ತಿಯಾಗಲಾರದು. ಎಸ್. ಕೆ. ದೇ ಅವರು ಹೇಳುವಂತೆ, ಅದರ ಪ್ರಾಮಾಣ್ಯವು ಆನಂತರ ಬಂದ ಎಲ್ಲ ಆಲಂಕಾರಿಕರಿಂದಲೂ ನಿಸ್ಸಂದಿಗ್ಧವಾಗಿ ಅಂಗೀಕೃತವಾಗುವಷ್ಟರ ಮಟ್ಟಿಗೆ ಸ್ಥಾಪಿತವಾಯಿತು.[22] ಅದೆಲ್ಲಕ್ಕೂ ಏಕೈಕ ಕಾರಣವೆಂದು ಹೇಳಬಹುದಾದರೆ, ಮಮ್ಮಟನ ಗಂಭೀರ, ಪ್ರೌಢ, ಮನೋಜ್ಞ ಹಾಗೂ ಪರಿಣಾಮಕಾರಿ ವ್ಯಂಜನಾವ್ಯಾಪಾರ ಸಮರ್ಥನೆ. ಅದಕ್ಕೆ ಅನುಗುಣವಾಗಿ, ಅನುಕೂಲವಾಗಿ ಅವನು ನಡೆಸಿರುವ ಎಲ್ಲ ಪರಿಶೀಲನೆ ಪ್ರಕ್ರಿಯೆಗಳು, ಯುಕ್ತಿ ಸಮಾಧಾನಗಳೇ ಮುಂತಾದವು ಅವನ 'ಕಾವ್ಯಪ್ರಕಾಶ'ದಲ್ಲಿ ಜೀವಕಳೆಯಿಂದ ತುಂಬಿ ಶೋಭಿಸುತ್ತಿರುವ ವಿಚಾರವು ಅತ್ಯಂತ ಗಮನಾರ್ಹವಾಗಿದೆ.

## ಟಿಪ್ಪಣಿ

1. ಧರ್ಮಾರ್ಥಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ.
   ಪ್ರೀತಿಂ ಕರೋತಿ ಕೀರ್ತಿಂ ಚ ಸಾಧುಕಾವ್ಯನಿಬಂಧನಂ.
   —೧.೨
2. ಯದಿ ಕಾವ್ಯಶರೀರಸ್ಯ ನ ಸ ವ್ಯಾಪಿತಯೇಷ್ಯತೇ...
   —'ಕಾವ್ಯಾಲಂಕಾರ' ; ೧–೨೩
   ಶರೀರಂ ತಾವದಿಷ್ಟಾರ್ಥವ್ಯವಚ್ಛಿನ್ನಾ ಪದಾವಲೀ.
   —'ಕಾವ್ಯಾದರ್ಶ' ; ೧–೧೦
3. "In other words, poetry consists of a verbal composition in which a definite sense must prevail, and which must be made charming by means of certain turns of expression to whieh the name poetic figure is given".
   —*History of Sanskrit Poetics* (in two Volumes) : vol II, Calcutta, 1960, p. 37.
4. ಸೌಂದರ್ಯಮಲಂಕಾರಃ, ೧–೧–೨
   ಅಲಂಕೃತಿರಲಂಕಾರಃ, ಕರಣವ್ಯುತ್ಪತ್ತ್ಯಾ ಪುನರಲಂಕಾರಶಬ್ದೋಽಯಮುಪಮಾದಿಷುವರ್ತತೇ. (ವೃತ್ತಿ).
   "ಅತ್ರ ಭಾವವ್ಯುತ್ಪತ್ತ್ಯೋರ್ವಿವಕ್ಷಿತತ್ವಾದಲಂಕಾರಶಬ್ದೋ ಭಾವಾರ್ಥಮಾಚಷ್ಟ ಇತ್ಯಾಹ ಅಲಂಕೃತಿರಲಂಕಾರ ಇತಿ"
   —ಗೋಪೇಂದ್ರ ತಿಪ್ಪಭೂಪಾಲನ ಕಾಮಧೇನು ವ್ಯಾಖ್ಯಾನ.

5. ಪ್ರತೀಯಮಾನಂ ಪುನರನ್ಯದೇವ ವಸ್ತ್ವಸ್ತಿ ವಾಣೀಷು ಮಹಾಕವೀನಾಂ, ಯತ್ತತ್ಪ್ರಸಿದ್ಧಾವಯವಾತಿರಿಕ್ತಂ ವಿಭಾತಿ ಲಾವಣ್ಯಮಿವಾಂಗನಾಸು.

—'ಧ್ವನ್ಯಾಲೋಕ' ; ೧–೪

6. ಡಾ. ಕೆ. ಕೃಷ್ಣಮೂರ್ತಿ : ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ, ಮೈಸೂರು, ೧೯೭೧ (ಮುನ್ನುಡಿ. ಪು. xii).

7. ಬುಧೈರ್ವೈಯಾಕರಣೈಃ ಪ್ರಧಾನಭೂತ ಸ್ಫೋಟರೂಪ ವ್ಯಂಗ್ಯವ್ಯಂಜಕಸ್ಯ ಶಬ್ದಸ್ಯ ಧ್ವನಿರಿತಿ ವ್ಯವಹಾರಃ ಕೃತಃ, ತತಸ್ತನ್ಮತಾನುಸಾರಿಭಿರನ್ಯೈರಪಿ ನ್ಯಗ್ಭಾವಿತವಾಚ್ಯ ವ್ಯಂಗ್ಯ ವ್ಯಂಜನಕ್ಷಮಸ್ಯ ಶಬ್ದಾರ್ಥಯುಗಲಸ್ಯ.

—ಮಮ್ಮಟ ; ಕಾವ್ಯಪ್ರಕಾಶ, ೧–೪ (ವೃತ್ತಿ)

8. 'ಭಾರತೀಯ ಕಾವ್ಯಮೀಮಾಂಸೆ' ; ಮೈಸೂರು, ೧೯೫೭, ಪು. ೩೦೯

9. ಡಾ. ಕೆ. ಕೃಷ್ಣಮೂರ್ತಿ ; 'ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ', ಪು. xxii.

10. ತದದೋಷೌ ಶಬ್ದಾರ್ಥೌ ಸಗುಣಾವನಲಂಕೃತೀ ಪುನಃ ಕ್ವಾಪಿ.—'ಕಾವ್ಯಪ್ರಕಾಶ', ೧–೩

11. "-the divergent currents of thoughts and tendencies in Sanskrit Poetics, flowing in different directions through many centuries, ultimately ran into one clear and dominant stream in the classical work of Mammata."
—S.K.De : *Some Problems of Sanskrit Poeties*, Calcutta, 1959, p. 116.

12. ಮುಖ್ಯಾರ್ಥಬಾಧೇ ತದ್ಯೋಗೇ ರೂಢಿತೋಽಥ ಪ್ರಯೋಜನಾತ್, ಅನ್ಯೋಽರ್ಥೋ ಲಕ್ಷ್ಯತೇ ಯತ್ ಸಾ ಲಕ್ಷಣಾರೋಪಿತಾ ಕ್ರಿಯಾ. —'ಕಾವ್ಯಪ್ರಕಾಶ', ೨–೯

13. ತಥಾ ಗಂಗಾತಟೇ ಘೋಷ ಇತ್ಯಾದೇಃ ಪ್ರಯೋಗಾತ್, ಯೇಷಾಂ ತಥಾ ನ ಪ್ರತಿಪತ್ತಿಸ್ತೇಷಾಂ ಪಾವನತ್ವಾದೀನಾಂ ಧರ್ಮಾಣಾಂ ತಥಾ ಪ್ರತಿಪಾದನಾತ್ಮನಃ ಪ್ರಯೋಜನಾಚ್ಚ,—ಕಾವ್ಯಪ್ರಕಾಶ, ೨–೯ನೇ ಕಾರಿಕೆಯ ಮೇಲಣ ವೃತ್ತಿ. ಪ್ರಯೋಜನಪ್ರತಿಪಿಪಾದಯಿಷಯಾ ಯತ್ರ ಲಕ್ಷಣಾಶಬ್ದಪ್ರಯೋಗಸ್ತತ್ರ ನಾನ್ಯತಃ ತತ್ಪ್ರತಿಪತ್ತಿಃ, ಅಪಿ ತು ತಸ್ಮಾದೇವ ಶಬ್ದಾತ್. ನ ಚಾತ್ರ ವ್ಯಂಜನಾದೃತೇಽನ್ಯೋ ವ್ಯಾಪಾರಃ.—ಅದೇ ೨–೧೪ರ ಮೇಲಣ ವೃತ್ತಿ. ನಾಭಿಧಾ ಸಮಯಭಾವಾತ್ ಹೇತ್ವಾಭಾಸಾನ್ನ ಲಕ್ಷಣ.—ಅದೇ. ೨–೧೫.

14. ಅನೇಕಾರ್ಥಸ್ಯ ಶಬ್ದಸ್ಯ ವಾಚಕತ್ವೇ ನಿಯಂತ್ರಿತೇ. ಸಂಯೋಗಾದ್ಯೈರವಾಚ್ಯಾರ್ಥಧೀಕೃದ್ವ್ಯಾಪೃತಿರಂಜನಂ. —ಅದೇ. ೨–೧೯

15. ಆಕಾಂಕ್ಷಾಸನ್ನಿಧಿಯೋಗ್ಯತಾವಶಾದ್ ವಕ್ಷ್ಯಮಾಣರೂಪಾಣಾಂ ಪದಾರ್ಥಾನಾಂ ಸಮನ್ವಯೇ ತಾತ್ಪರ್ಯಾರ್ಥೋ ವಿಶೇಷವಪುರಪದಾರ್ಥೋಽಪಿ ಸಮುಲ್ಲಸತೀತ್ಯಭಿಹಿತಾನ್ವಯವಾದಿನಾಂ ಮತಂ—ಅದೇ ೨–೬ನೇ ಕಾರಿಕೆಯ ಮೇಲಣ ವೃತ್ತಿ. ಅರ್ಥಶಕ್ತಿಮೂಲೇಽಪಿ ವಿಶೇಷೇ ಸಂಕೇತಃ ಕರ್ತುಂ ನ ಯುಜ್ಯತ ಇತಿ ಸಾಮಾನ್ಯರೂಪಾಣಾಂ ಪದಾರ್ಥನಾಂ...ಯೋಗ್ಯತಾಸನ್ನಿಧಿವಶಾತ್ ಪರಸ್ಪರ ಸಂಸರ್ಗೇ ಯತ್ರಾಪದಾರ್ಥೋ ವಿಶೇಷರೂಪೋ ವಾಕ್ಯಾರ್ಥಸ್ತತ್ರಾಭಿಹಿತಾನ್ವಯೇ ಕಾ ವಾರ್ತಾ ವ್ಯಂಗಸ್ಯಾಭಿಧೇಯತಾಯಾಂ.—ಅದೇ ; V. ವೃತ್ತಿ. ಪು. ೨೧೯ (ಸಂ: ಬಿ.ಓ.ಆರ್.ಐ. ೧೯೬೫)

16. ವಾಚ್ಯ ಏವ ವಾಕ್ಯಾರ್ಥ ಇತ್ಯನ್ವಿತಾಭಿಧಾನವಾದಿನಃ, ಅದೇ ೨–೬ನೇ ಕಾರಿಕೆ ಮೇಲಣ ವೃತ್ತಿ. ತೇಷಾಮಪಿ ಮತೇ ಸಾಮಾನ್ಯವಿಶೇಷರೂಪಃ ಪದಾರ್ಥಃ ಸಂಕೇತ ಇತ್ಯತಿವಿಶೇಷಭೂತೋ ವಾಕ್ಯಾರ್ಥಾಂತರ್ಗತೋಽಸಂಕೇತಿತತ್ವಾದವಾಚ್ಯ ಏವ ಯತ್ರ ಪದಾರ್ಥಃ ಪ್ರತಿಪದ್ಯತೇ ತತ್ರ ದೂರೇ, ಅರ್ಥಾಂತರಭೂತಸ್ಯ...ಚರ್ಚಾ (ವ್ಯಂಗ್ಯಾರ್ಥಸ್ಯ) —ಅದೇ. ೫ ವೃತ್ತಿ. ಪು. ೨೨೪

17. ಏವಂ ಚ ನಿಮಿತ್ತಸ್ಯ ನಿಯತನಿಮಿತ್ತತ್ವಂ ಯಾವನ್ನ ನಿಶ್ಚಿತಂ ತಾವನ್ನೈಮಿತ್ತಿಕಸ್ಯ ಪ್ರತೀತಿರೇವ ಕಥಮಿತಿ 'ನೈಮಿತ್ತಿಕಾರ್ಥಾನುಸಾರೇಣ...ಕಲ್ಪ್ಯಂತೇ' ಇತ್ಯವಿಚಾರಿತಾಭಿಧಾನಂ; 'ಕಾವ್ಯಪ್ರಕಾಶ'; ಪು. ೨೨೫

18. ನ ಚಾಖ್ಯಾತವಾಕ್ಯಯೋರ್ದ್ವಯೋರಂಗಾಂಗಿಭಾವ ಇತಿ ವಿಷಭಕ್ಷಣವಾಕ್ಯಸ್ಯ ಕೃದ್ವಾಚ್ಯೇನಾಂಗತಾ ಕಲ್ಪನೀಯೇತಿ 'ವಿಷಭಕ್ಷಣಾದಪಿ ದುಷ್ಟಮೇತದ್ ಗೃಹೇ ಭೋಜನಂ' ಇತಿ 'ಸರ್ವಥಾಮಾಸ್ಯ ಗೃಹೇ ಭುಂಜಕ್ಥಾಃ' ಇತಿ ಉಪಾತ್ತಶಬ್ದಾರ್ಥೇ ಏವ ತಾತ್ಪರ್ಯಂ—ಅದೇ; ೨೨೯

19. ಅನುಮಾನೇಽಂತರ್ಭಾವಂ ಸರ್ವಸ್ಯೈವ ಧ್ವನೇಃ ಪ್ರಕಾಶಯಿತುಂ, ವ್ಯಕ್ತಿವಿವೇಕಂ ಕುರುತೇ ಪ್ರಣಮ್ಯ ಮಹಿಮಾ ಪರಾಂ ವಾಚಂ.

20. ನನು ವಾಚ್ಯಾದಸಂಬದ್ಧಸ್ಯಾವನ್ನ ಪ್ರತೀಯತೇ ಯತಃ ಕುತಶ್ಚಿದ್ಯಸ್ಯಕಸ್ಯಚಿದರ್ಥಸ್ಯ ಪ್ರತೀತೇಃ ಪ್ರಸಂಗಾತ್. ಏವಂ ಚ ಸಂಬಂಧಾದ್ ವ್ಯಂಗ್ಯವ್ಯಂಜಕಭಾವೋಽಪ್ರತಿಬಂಧೋಽವಶ್ಯಂ ನ ಭವತೀತಿ ವ್ಯಾಪ್ತತ್ವೇನ ನಿಯತಧರ್ಮನಿಷ್ಠತ್ವೇನ ಚ ತ್ರಿರೂಪಾಲ್ಲಿಂಗಾತ್ ಲಿಂಗಿಜ್ಞಾನಂ ಯದನುಮಾನಂ ತದ್ರೂಪಃ ಪರ್ಯವಸ್ಯತಿ.—'ಕಾವ್ಯಪ್ರಕಾಶ'; ಪು. ೨೫೨

21. 'ಕನ್ನಡ ಕಾವ್ಯಪ್ರಕಾಶ'; ಶಾರದಾ ಮಂದಿರ, ಮೈಸೂರು. ೧೯೫೭, ಪು. ೮೦

22. "The success of Mammata's work was indeed so complete that the authority of the Dhvani school came to be unquestionably accepted by most later writers, and the systems which emerged after Mammata could no longer be strictly regarded as entirely independent systems"—*Some Problems of Sanskrit Poetics*: p. 116

# ಕಾಳಿದಾಸ ಮತ್ತು ಮಮ್ಮಟ

**ಎಂ. ಶಿವಕುಮಾರಸ್ವಾಮಿ**

ಸಂಸ್ಕೃತ ಕವಿಗಳಲ್ಲಿ ಕಾಳಿದಾಸನು ಗಣ್ಯಸ್ಥಾನವನ್ನು ಪಾಶ್ಚಾತ್ಯ ಪೌರಸ್ತ್ಯ ವಿಮರ್ಶಕರೆಲ್ಲರ ದೃಷ್ಟಿಯಲ್ಲಿ ಪಡೆದಿದ್ದಾನೆ. ಹಾಗೆಯೇ ಕಾವ್ಯಪ್ರಕಾಶಕಾರನಾದ ಮಮ್ಮಟನು ಆಲಂಕಾರಿಕರಲ್ಲಿ ಮುಖ್ಯಸ್ಥಾನ ಗಳಿಸಿದ್ದಾನೆ. ಮಮ್ಮಟನ ದೃಷ್ಟಿಯಲ್ಲಿ ಕಾಳಿದಾಸನ ಸ್ಥಾನ ಎಂತಹುದು, ಅವನ ಕಾವ್ಯಗಳ ಶ್ಲೋಕಗಳನ್ನು ವಿಮರ್ಶಿಸುವುದರಲ್ಲಿ ಇವನು ಯಾವ ನಿಲವನ್ನು ತಳೆದಿದ್ದಾನೆ ಎಂದು ವಿವೇಚಿಸುವುದು ಪ್ರಕೃತ ಲೇಖನದ ಉದ್ದೇಶವಾಗಿದೆ.

ಮೊದಲನೆಯದಾಗಿ ನಾವು ಗಮನಿಸಬಹುದಾದ ಅಂಶವೆಂದರೆ, ಕಾಳಿದಾಸನ ಕಾವ್ಯಗಳು ಮಮ್ಮಟನಿಗೆ ಸುಪರಿಚಿತವಾಗಿದ್ದುವೆಂಬುದು. ಕಾವ್ಯಪ್ರಕಾರದಲ್ಲಿ ಮಮ್ಮಟ ಕಾಳಿದಾಸನನ್ನು ಹೆಸರಿನಿಂದಲೇ ಉಲ್ಲೇಖಿಸಿರುವುದು ಗಮನಾರ್ಹ. ಅವನ ೨೪ ಪದ್ಯಗಳನ್ನು ಮಮ್ಮಟ ವಿಮರ್ಶೆಗಾಗಿ ಉಪಯೋಗಿಸಿಕೊಂಡಿದ್ದಾನೆ. ಇವುಗಳಲ್ಲಿ ೧೧ ಪದ್ಯಗಳನ್ನು 'ಕುಮಾರಸಂಭವ'ದಿಂದಲೂ ಆರನ್ನು 'ರಘುವಂಶ'ದಿಂದಲೂ ನಾಲ್ಕನ್ನು 'ವಿಕ್ರಮೋರ್ವಶೀಯ'ದಿಂದಲೂ, ಎರಡನ್ನು 'ಶಾಕುಂತಲ'ದಿಂದಲೂ, ಒಂದು ಪದ್ಯವನ್ನು 'ಮೇಘದೂತ'ದಿಂದಲೂ ಆರಿಸಿಕೊಂಡಿದ್ದಾನೆ. ಇನ್ನೊಂದು ಪದ್ಯ 'ವಿಕ್ರಮೋರ್ವಶೀಯ'ದ್ದೇ ಎಂದು ಕೆಲವು ವ್ಯಾಖ್ಯಾನಕಾರರು ಹೇಳಿದ್ದಾರೆ. ಆದರೆ ಆ ಪದ್ಯ(ಕ್ವಾ ಕಾರ್ಯಂ...) ಈಗ ಮುದ್ರಿತವಾದ ವಿಕ್ರಮೋರ್ವಶೀಯ ನಾಟಕದಲ್ಲಿಲ್ಲ. 'ಮಾಲವಿಕಾಗ್ನಿಮಿತ್ರ' 'ಋತುಸಂಹಾರ'ಗಳಿಂದ ಮಮ್ಮಟನು ಯಾವ ಪದ್ಯವನ್ನೂ ಸ್ವೀಕರಿಸಿಲ್ಲ.

'ಕಾವ್ಯಪ್ರಕಾಶ'ದ ಆರಂಭದಲ್ಲಿ ಕಾವ್ಯ ಪ್ರಯೋಜನವಾದ ಯಶಸ್ಸಿಗೆ ಉದಾಹರಣೆಯಾಗಿ ಮಮ್ಮಟನು ಕಾಳಿದಾಸನನ್ನೇ ಹೆಸರಿಸಿದ್ದಾನೆ. (ಕಾಲಿದಾಸಾದೀನಾಮಿವ ಯಶಃ). ಇದರಿಂದ ಮಮ್ಮಟನಿಗೆ ಕಾಳಿದಾಸನಲ್ಲಿ ಅಪರಿಮಿತವಾದ ಗೌರವಾದರಗಳು ಇದ್ದುವೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅವನು ಅಂಧಾಭಿಮಾನವನ್ನೇನೂ ತೋರಿಸಿಲ್ಲ. ಕಾಳಿದಾಸನ ಪದ್ಯಗಳಲ್ಲಿ ಯಾವುವನ್ನು ಉದಾಹರಣೆಯಾಗಿ ತೆಗೆದುಕೊಂಡಿದ್ದಾನೆಂಬುದನ್ನು ಆಲೋಚಿಸಿದರೆ ನಮಗೆ ಅವನ ವಿಮರ್ಶಕ ದೃಷ್ಟಿ ಗೋಚರವಾಗುತ್ತದೆ. ರಸಕ್ಕೆ ೨, ಗುಣೀಭೂತವ್ಯಂಗ್ಯಕ್ಕೆ ೧, ಅಲಂಕಾರಕ್ಕೆ ೩, ದೋಷಕ್ಕೆ ೧೧, ಉಳಿದ ವಿಮರ್ಶೆಗೆ ೨. ಹೀಗೆ ಕಾಳಿದಾಸನ ಪದ್ಯಗಳನ್ನು ಉದಾಹರಿಸಿದ್ದು. ದೋಷಗಳನ್ನು ಸೂಚಿಸಲು ಹೆಚ್ಚು ಉದಾಹರಣೆಗಳು ಬಂದಿವೆ ಎಂಬುದು ಆಶ್ಚರ್ಯಕರವಾದರೂ ಸತ್ಯ.

ರಸದ ಉದಾಹರಣೆ :

ತ್ವಾಮಾಲಿಖ್ಯ ಪ್ರಣಯಕುಪಿತಾಂ ಧಾತುರಾಗೈಃ ಶಿಲಾಯಾಂ
ಆತ್ಮಾನಂ ತೇ ಚರಣಪತಿತಂ ಯಾವದಿಚ್ಛಾಮಿ ಕರ್ತುಮ್
ಅಸ್ರೈಸ್ತಾವನ್ಮುಹುರುಪಚಿತೈರ್ದೃಷ್ಟಿರಾಲುಪ್ಯತೇ ಮೇ
ಕ್ರೂರಸ್ತಸ್ಮಿನ್ನಪಿ ನ ಸಹತೇ ಸಂಗಮಂ ನೌ ಕೃತಾಂತಃ॥

ಇದು 'ಮೇಘದೂತ'ದ ಉತ್ತರಾರ್ಧದ ಪದ್ಯ. ಯಕ್ಷ ಶಾಪವಿಹ್ವಲನಾಗಿ ರಾಮಗಿರಿಯಲ್ಲಿ ವಿರಹದ ದಿನಗಳನ್ನು ನೂಕುತ್ತಿದ್ದಾನೆ. ಪ್ರಿಯೆಯನ್ನು ಸಾಕ್ಷಾತ್ತಾಗಿ ಕಾಣುವುದು ಅಸಾಧ್ಯ. ಚಿತ್ರವನ್ನಾದರೂ ಬರೆದು ಅವಳನ್ನು ನೋಡೋಣ ಎಂದು ಯತ್ನಿಸುವಾಗಲೇ, ಕಣ್ಣುಗಳಲ್ಲಿ ನೀರುತುಂಬಿ ನೋಟ ಮಂಕಾಗುತ್ತದೆ. ಕ್ರೂರವಿಧಿ ಚಿತ್ರದಲ್ಲೂ ಅವರ ಸಮಾಗಮಕ್ಕೆ ಅಡ್ಡಿಮಾಡುತ್ತಿದ್ದಾನೆ. ಇಲ್ಲಿ ಯಕ್ಷ–ಯಕ್ಷಿಯರ ವಿಪ್ರಲಂಭಶೃಂಗಾರ, ಮನೋಜ್ಞವಾಗಿ ಸಹೃದಯರ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ. ಇಂತಹ ಒಳ್ಳೆಯ ಪದ್ಯವನ್ನು ಆರಿಸಿರುವುದು ಮಮ್ಮಟನ ರುಚಿಶುದ್ಧಿಗೆ ಪ್ರಮಾಣ.

ಗ್ರೀವಾಭಂಗಾಭಿರಾಮಂ ಮುಹುರನುಪತತಿ ಸ್ಯಂದನೇ ಬದ್ಧದೃಷ್ಟಿಃ
ಪಶ್ಚಾರ್ಧೇನ ಪ್ರವಿಷ್ಟಃಶರಪತನ ಭಯಾದ್ ಭೂಯಸಾ ಪೂರ್ವಕಾಯಮ್
ದರ್ಭೈರರ್ಧಾವಲೀಢೈಃ ಶ್ರಮವಿವೃತ ಮುಖಭ್ರಂಶಿಭಿಃ ಕೀರ್ಣವರ್ತ್ಮಾ
ಪಶ್ಯೋದಗ್ರಪ್ಲುತತ್ವಾದ್ ವಿಯತಿಬಹುತರಂ ಸ್ತೋಕಮುರ್ವ್ಯಾಂಪ್ರಯಾತಿ ॥

ಇದು 'ಅಭಿಜ್ಞಾನ ಶಾಕುಂತಲ'ದ ಪದ್ಯ. ರಾಜನಿಂದ ಹೆದರಿ ಕಂಗಾಲಾಗಿ ಓಡುತ್ತಿದ್ದ ಜಿಂಕೆಯ ಚಿತ್ರವನ್ನು ಕಾಳಿದಾಸ ಈ ಪದ್ಯದಲ್ಲಿ ಅಚ್ಚೊತ್ತಿದಂತೆ ತೋರಿಸಿದ್ದಾನೆ. ಇದು ಭಯಾನಕರಸಕ್ಕೆ ಉದಾಹರಣೆ.

ಕತ್ತನ್ನು ಕೊಂಕಿಸಿ ಹಿಂದೆ ಅಟ್ಟಿಸಿಕೊಂಡು ಬರುತ್ತಿದ್ದ ರಥದಲ್ಲಿ ಕಣ್ಣನ್ನು ನೆಟ್ಟಿ ಬಾಣವೆಲ್ಲಿ ತಗುಲುವುದೋ ಎಂದು ಮೈಬಗ್ಗಿಸಿ, ಅರ್ಧ ತಿಂದಿದ್ದ ದರ್ಭೆ ಬಾಯಿನಿಂದ ಉದುರಿಬೀಳುತ್ತಿರಲು, ಛಂಗನೆ ಆಕಾಶದಲ್ಲಿಯೇ ಹೆಚ್ಚಾಗಿ. ಭೂಮಿಯಲ್ಲಿ ಎಲ್ಲೋ ಒಂದು ಕ್ಷಣ, ಕಾಲನ್ನು ಸೋಂಕಿಸಿ ಹಾರುವಂತೆ ಓಡುತ್ತಿದೆ ಜಿಂಕೆ. ಈ ವರ್ಣನೆಯಲ್ಲಿ ಭಯಾನಕ ರಸ ವ್ಯಂಜನಾವ್ಯಾಪಾರದಿಯಿಂದ ಹೃದ್ಯವಾಗಿ ಅನುಭವ ಗೋಚರವಾಗುವುದು.

ಗುಣೀಭೂತವ್ಯಂಗ್ಯಕ್ಕೆ : 'ಕುಮಾರಸಂಭವ'ದ ಪದ್ಯವನ್ನು ಉದಾಹರಿಸಿದೆ. ತಪಸ್ಸಿನಲ್ಲಿ ಮಗ್ನನಾಗಿದ್ದ ಶಿವನ ಸೇವೆಗಾಗಿ ಪಾರ್ವತಿ ವಸಂತಪುಷ್ಪಗಳನ್ನೇ ಆಭರಣಗಳನ್ನಾಗಿ ಧರಿಸಿಕೊಂಡು ಆಗಮಿಸಿದ್ದಾಳೆ. ಮನ್ಮಥ ಶಿವನ ಚಿತ್ತವನ್ನು ವಿಚಲಿತಗೊಳಿಸಲು ಅಣಿಯಾಗಿ ನಿಂತು ಪುಷ್ಪಬಾಣವನ್ನು ಪ್ರಯೋಗಿಸಿದ್ದಾನೆ. ಅದರ ಪರಿಣಾಮ :

ಹರಸ್ತು ಕಿಂಚಿತ್ ಪರಿವೃತ್ತ ಧೈರ್ಯಃ
ಚಂದ್ರೋದಯಾರಂಭ ಇವಾಂಬುರಾಶಿಃ
ಉಮಾಮುಖೇ ಬಿಂಬಫಲಾಧರೋಷ್ಠೇ
ವ್ಯಾಪಾರಯಾಮಾಸ ವಿಲೋಚನಾನಿ ॥

ಎಂದರೆ: "ಯಾವಾಗಲೂ ಗಂಭೀರವಾಗಿರುವ ಸಮುದ್ರ ಚಂದ್ರೋದಯದ ವೇಳೆಯಲ್ಲಿ ಸ್ವಲ್ಪ ವಿಚಲಿತವಾಗುವಂತೆ ಸಾಕ್ಷಾತ್ ಪರಮೇಶ್ವರನೂ ಸ್ವಲ್ಪ ವಿಚಲಿತನಾಗಿ ತೊಂಡೆ ಹಣ್ಣಿನಂತಹ ತುಟಿಯಿಂದ ಶೋಭಿಸುತ್ತಿದ್ದ ಪಾರ್ವತಿಯ ಮುಖದ ಕಡೆಗೆ ಕಣ್ಣುಗಳನ್ನು ತಿರುಗಿಸಿದನು."

ಇದು ಸಂದಿಗ್ಧಪ್ರಾಧಾನ್ಯವೆಂಬ ಗುಣೀಭೂತವ್ಯಂಗ್ಯಕ್ಕೆ ಉದಾ. ಉಮೆಯ ತುಟಿಗಳನ್ನು ಚುಂಬಿಸಲು ಶಿವನು ಇಚ್ಛಿಸಿದನು ಎಂಬುದಿಲ್ಲಿ ವ್ಯಂಗ್ಯ. ಅದಕ್ಕೆ ಪ್ರಾಧಾನ್ಯವೋ ಕಣ್ಣುಗಳನ್ನು ಅವಳ ಮುಖದಲ್ಲಿ ಹರಿಸಿದನು ಎಂಬ ವಾಚ್ಯಾರ್ಥಕ್ಕೆ ಪ್ರಾಧಾನ್ಯವೋ ಎಂಬ ಸಂಶಯ ಉಳಿದು ಬಿಡುವುದರಿಂದ ಇದು ಗುಣೀಭೂತ ವ್ಯಂಗ್ಯ. ಏಕೆಂದರೆ, ಧ್ವನಿ ಎನಿಸಿಕೊಳ್ಳಲು ವ್ಯಂಗ್ಯಾರ್ಥಕ್ಕೆ ಪ್ರಾಧಾನ್ಯ ನಿಸ್ಸಂಶಯವಾಗಿ ಸಲ್ಲುವಂತಿರಬೇಕು.

ಇನ್ನು ಅಲಂಕಾರದ ಉದಾಹರಣೆ :

ಅಸ್ಯಾಃ ಸರ್ಗವಿಧೌ ಪ್ರಜಾಪತಿರಭೂಚ್ಚಂದ್ರೋ ನು ಕಾಂತಿಪ್ರದಃ
ಶೃಂಗಾರೈಕರಸಃ ಸ್ವಯಂ ನು ಮದನೋ ಮಾಸೋ ನು ಪುಷ್ಪಾಕರಃ ।
ವೇದಾಭ್ಯಾಸ ಜಡಃ ಕಥಂ ನು ವಿಷಯವ್ಯಾವೃತ್ತ ಕೌತೂಹಲಃ
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ ॥

ಇದು 'ವಿಕ್ರಮೋರ್ವಶೀಯ'ದಲ್ಲಿ ಉರ್ವಶಿಯ ಸೌಂದರ್ಯವನ್ನು ವರ್ಣಿಸಲು ಕಾಳಿದಾಸನು ಬರೆದಿರುವ ಮನೋಜ್ಞಪದ್ಯ. "ಈ ಸುಂದರಿಯ ಸೃಷ್ಟಿಯಲ್ಲಿ ಬ್ರಹ್ಮನು ಯಾರು? ಜಗತ್ತಿಗೆ ಬೆಳದಿಂಗಳನ್ನು ಚೆಲ್ಲುವ ಚಂದ್ರನೇ? ಶೃಂಗಾರರಸಕ್ಕೆ ಆಶ್ರಯನಾದ ಮನ್ಮಥನೇ? ಅಥವಾ ಸಕಲ ಕುಸುಮಗಳಿಗೆ ಗಣಿಯಂತಿರುವ ವಸಂತನೇ? ವೇದಾಭ್ಯಾಸದಿಂದ ಜಡನಾಗಿ ವಿಷಯಗಳಲ್ಲಿ ಆಸಕ್ತಿಯನ್ನು ಕಳೆದುಕೊಂಡ ಮುದಿ ಋಷಿ ಇವಳನ್ನು ಹೇಗೆ ತಾನೆ ಸೃಷ್ಟಿಸಿರಲು ಸಾಧ್ಯ?"

ಈ ಪದ್ಯದಲ್ಲಿ ಉರ್ವಶಿಯ ಸೃಷ್ಟಿಗೆ ಕಾರಣರಾದವರು ಎಂಬ ಸಂಶಯದಲ್ಲಿಯೇ ಚಮತ್ಕಾರವಿದೆ. ಆದ್ದರಿಂದ ಇದನ್ನು ಸಂದೇಹಾಲಂಕಾರಕ್ಕೆ ಉದಾಹರಿಸಿದೆ.

ಇನ್ನೊಂದು 'ರಘುವಂಶ'ದ ಆರಂಭದಲ್ಲಿರುವ ಪ್ರಸಿದ್ಧ ಶ್ಲೋಕ :

ಕ್ವ ಸೂರ್ಯಪ್ರಭವೋ ವಂಶಃ
ಕ್ವ ಚಾಲ್ಪ ವಿಷಯಾ ಮತಿಃ
ತಿತೀರ್ಷುರ್ದುಸ್ತರಂ ಮೋಹಾ
ದುಡುಪೇನಾಸ್ಮಿ ಸಾಗರಮ್ ॥

"ಸೂರ್ಯನು ಮೂಲಪುರುಷನಾದ ವಂಶವೆಲ್ಲಿ? ಸ್ವಲ್ಪ ಮಾತ್ರ ತಿಳಿದಿರುವ ನನ್ನ ಬುದ್ಧಿಯೆಲ್ಲಿ? ದಾಟಲಸಾಧ್ಯವೆನಿಸಿದ ಸಮುದ್ರವನ್ನು ಚಿಕ್ಕ ದೋಣಿಯಿಂದ ದಾಟಲು ಪ್ರಯತ್ನಿಸುವವನಾಗಿದ್ದೇನೆ."

ಇಲ್ಲಿ ದೋಣಿಯಿಂದ ಸಾಗರವನ್ನು ದಾಟಲು ಮಾಡುವ ಪ್ರಯತ್ನ ಸದೃಶ ಎಂಬ ಉಪಮೆ ತೋರುವುದರಿಂದ, ನಿದರ್ಶನಾಲಂಕಾರಕ್ಕೆ ಉದಾ. ಇದರ

ಎಂದರೆ: ''ಯಾವಾಗಲೂ ಗಂಭೀರವಾಗಿರುವ ಸಮುದ್ರ ಚಂದ್ರೋದಯದ ವೇಳೆಯಲ್ಲಿ ಸ್ವಲ್ಪ ವಿಚಲಿತವಾಗುವಂತೆ ಸಾಕ್ಷಾತ್ ಪರಮೇಶ್ವರನೂ ಸ್ವಲ್ಪ ವಿಚಲಿತನಾಗಿ ತೊಂಡೆ ಹಣ್ಣಿನಂತಹ ತುಟಿಯಿಂದ ಶೋಭಿಸುತ್ತಿದ್ದ ಪಾರ್ವತಿಯ ಮುಖದ ಕಡೆಗೆ ಕಣ್ಣುಗಳನ್ನು ತಿರುಗಿಸಿದನು.''

ಇದು ಸಂದಿಗ್ಧಪ್ರಾಧಾನ್ಯವೆಂಬ ಗುಣೀಭೂತವ್ಯಂಗ್ಯಕ್ಕೆ ಉದಾ. ಉಮೆಯ ತುಟಿಗಳನ್ನು ಚುಂಬಿಸಲು ಶಿವನು ಇಚ್ಛಿಸಿದನು ಎಂಬುದಿಲ್ಲಿ ವ್ಯಂಗ್ಯ. ಅದಕ್ಕೆ ಪ್ರಾಧಾನ್ಯವೋ ಕಣ್ಣುಗಳನ್ನು ಅವಳ ಮುಖದಲ್ಲಿ ಹರಿಸಿದನು ಎಂಬ ವಾಚ್ಯಾರ್ಥಕ್ಕೆ ಪ್ರಾಧಾನ್ಯವೋ ಎಂಬ ಸಂಶಯ ಉಳಿದು ಬಿಡುವುದರಿಂದ ಇದು ಗುಣೀಭೂತ ವ್ಯಂಗ್ಯ. ಏಕೆಂದರೆ, ಧ್ವನಿ ಎನಿಸಿಕೊಳ್ಳಲು ವ್ಯಂಗ್ಯಾರ್ಥಕ್ಕೆ ಪ್ರಾಧಾನ್ಯ ನಿಸ್ಸಂಶಯವಾಗಿ ಸಲ್ಲುವಂತಿರಬೇಕು.

ಇನ್ನು ಅಲಂಕಾರದ ಉದಾಹರಣೆ :

> ಅಸ್ಯಾಃ ಸರ್ಗವಿಧೌ ಪ್ರಜಾಪತಿರಭೂಚ್ಚಂದ್ರೋ ನು ಕಾಂತಿಪ್ರದಃ
> ಶೃಂಗಾರೈಕರಸಃ ಸ್ವಯಂ ನು ಮದನೋ ಮಾಸೋ ನು ಪುಷ್ಪಾಕರಃ ।
> ವೇದಾಭ್ಯಾಸ ಜಡಃ ಕಥಂ ನು ವಿಷಯವ್ಯಾವೃತ್ತ ಕೌತೂಹಲಃ
> ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ ॥

ಇದು 'ವಿಕ್ರಮೋರ್ವಶೀಯ'ದಲ್ಲಿ ಉರ್ವಶಿಯ ಸೌಂದರ್ಯವನ್ನು ವರ್ಣಿಸಲು ಕಾಳಿದಾಸನು ಬರೆದಿರುವ ಮನೋಜ್ಞಪದ್ಯ. ''ಈ ಸುಂದರಿಯ ಸೃಷ್ಟಿಯಲ್ಲಿ ಬ್ರಹ್ಮನು ಯಾರು ? ಜಗತ್ತಿಗೆ ಬೆಳದಿಂಗಳನ್ನು ಚೆಲ್ಲುವ ಚಂದ್ರನೇ ? ಶೃಂಗಾರರಸಕ್ಕೆ ಆಶ್ರಯನಾದ ಮನ್ಮಥನೇ ? ಅಥವಾ ಸಕಲ ಕುಸುಮಗಳಿಗೆ ಗಣಿಯಂತಿರುವ ವಸಂತನೇ ? ವೇದಾಭ್ಯಾಸದಿಂದ ಜಡನಾಗಿ ವಿಷಯಗಳಲ್ಲಿ ಆಸಕ್ತಿಯನ್ನು ಕಳೆದುಕೊಂಡ ಮುದಿ ಋಷಿ ಇವಳನ್ನು ಹೇಗೆ ತಾನೆ ಸೃಷ್ಟಿಸಿರಲು ಸಾಧ್ಯ ?''

ಈ ಪದ್ಯದಲ್ಲಿ ಉರ್ವಶಿಯ ಸೃಷ್ಟಿಗೆ ಕಾರಣರಾದವರು ಎಂಬ ಸಂಶಯದಲ್ಲಿಯೇ ಚಮತ್ಕಾರವಿದೆ. ಆದ್ದರಿಂದ ಇದನ್ನು ಸಂದೇಹಾಲಂಕಾರಕ್ಕೆ ಉದಾಹರಿಸಿದೆ.

ಇನ್ನೊಂದು 'ರಘುವಂಶ'ದ ಆರಂಭದಲ್ಲಿರುವ ಪ್ರಸಿದ್ಧ ಶ್ಲೋಕ :

> ಕ್ವಸೂರ್ಯಪ್ರಭವೋ ವಂಶಃ
> ಕ್ವ ಚಾಲ್ಪ ವಿಷಯಾ ಮತಿಃ
> ತಿತೀರ್ಷುರ್ದುಸ್ತರಂ ಮೋಹಾ
> ದುಡುಪೇನಾಸ್ಮಿ ಸಾಗರಮ್ ॥

''ಸೂರ್ಯನು ಮೂಲಪುರುಷನಾದ ವಂಶವೆಲ್ಲಿ ? ಸ್ವಲ್ಪ ಮಾತ್ರ ತಿಳಿದಿರುವ ನನ್ನ ಬುದ್ಧಿಯೆಲ್ಲಿ ? ದಾಟಲಸಾಧ್ಯವೆನಿಸಿದ ಸಮುದ್ರವನ್ನು ಚಿಕ್ಕ ದೋಣಿಯಿಂದ ದಾಟಲು ಪ್ರಯತ್ನಿಸುವವನಾಗಿದ್ದೇನೆ.''

ಇಲ್ಲಿ ದೋಣಿಯಿಂದ ಸಾಗರವನ್ನು ದಾಟಲು ಮಾಡುವ ಪ್ರಯತ್ನ ಸದೃಶ ಎಂಬ ಉಪಮೆ ತೋರುವುದರಿಂದ, ನಿದರ್ಶನಾಲಂಕಾರಕ್ಕೆ ಉದಾ. ಇದರ ಪೂರ್ವಾರ್ಧದಲ್ಲಿ

ಪರಸ್ಪರ ಅನನುರೂಪಗಳಾದ ವಸ್ತುಗಳೆರಡನ್ನು ಕೂಡಿಸಿರುವುದರಿಂದ ವಿಷಮಾಲಂಕಾರಕ್ಕೂ ಇದು ಉದಾಹರಣೆಯಾಗಬಹುದು.

'ರಘುವಂಶ'ದಿಂದಲೇ ಅಲಂಕಾರದ ಇನ್ನೊಂದು ಉದಾಹರಣೆ :

> ಗೃಹಿಣೀ ಸಚಿವಃ ಸಖೀಮಿಥಃ
> ಪ್ರಿಯಶಿಷ್ಯಾ ಲಲಿತೇ ಕಲಾವಿಧೌ
> ಕರುಣಾ ವಿಮುಖೇನ ಮೃತ್ಯುನಾ
> ಹರತಾ ತ್ವಾಂ ಬತ ಕಿಂ ನ ಮೇ ಹೃತಮ್॥

''ಇಂದುಮತಿ ಅಕಸ್ಮಿಕವಾಗಿ ಮರಣ ಹೊಂದಿದಾಗ ಅಜಮಹಾರಾಜನು ಮಾಡುವ ವಿಲಾಪದಲ್ಲಿ ಇದೊಂದು ಪದ್ಯ. 'ಇಂದುಮತಿ ಅಜನಿಗೆ ಕೇವಲ ಗೃಹಿಣಿಯಲ್ಲ. ಅವಳೇ ಮಂತ್ರಿ : ಅವಳೇ ಸಖಿ : ಅವಳೇ ಪ್ರಿಯಶಿಷ್ಯೆ. ಕರುಣಾಹೀನನಾದ ಮೃತ್ಯು ಅವಳೊಬ್ಬಳನ್ನು ಒಯ್ದಾಗ, ಅವನ ಸರ್ವಸ್ವವನ್ನೂ ಒಯ್ದಂತಾಯಿತು.''

ಈ ಪದ್ಯವನ್ನು ಮಮ್ಮಟ ವಿಶೇಷಾಲಂಕಾರದ ಉದಾಹರಣೆಯಾಗಿ ತೆಗೆದುಕೊಂಡಿದ್ದಾನೆ. ಒಂದು ಕೆಲಸವನ್ನು ಮಾಡಲು ಹೊರಟಾಗ ಅದೇ ಪ್ರಯತ್ನದಿಂದ ಅಶಕ್ಯವಾದ ಹೆಚ್ಚಿನ ಕೆಲಸವನ್ನು ಮಾಡಿದಂತೆ ವರ್ಣಿಸಿದರೆ ಅಲ್ಲಿ ವಿಶೇಷಾಲಂಕಾರ. ಪತ್ನಿಯನ್ನು ಒಯ್ಯಲು ಮೃತ್ಯು ಮಾಡಿದ ಪ್ರಯತ್ನ ಅಜನ ಗೃಹಿಣಿ, ಸಖಿ, ಶಿಷ್ಯೆ ಎಲ್ಲರನ್ನೂ ಒಯ್ಯುವುದರಲ್ಲಿ ಸಫಲವಾಯಿತು ಎಂದು ಇಲ್ಲಿ ಆಶಯ.

ಈಗ ದೋಷಗಳಿಗೆ ಉದಾಹರಣೆ :

> ಅತಿಥಿಂ ನಾಮ ಕಾಕುತ್ಸ್ಥಾತ್ ಪುತ್ರಮಾಪ ಕುಮುದ್ವತೀ ।
> ಪಶ್ಚಿಮಾದ್ಯಾಮಿನೀ ಯಾಮಾತ್ ಪ್ರಸಾದಮಿವ ಚೇತನಾ ॥

ಇದೂ 'ರಘುವಂಶ'ದ ಪದ್ಯ. ರಾತ್ರಿಯ ಕೊನೆಯ ಯಾಮದಿಂದ ಚೇತನವು ಪ್ರಸನ್ನತೆಯನ್ನು ಪಡೆಯುವಂತೆ, ಕುಶನಿಂದ ಕುಮುದ್ವತಿ ಅತಿಥಿಯೆಂಬ ಮಗನನ್ನು ಪಡೆದಳು. ಈ ಪದ್ಯದಲ್ಲಿ ಸಹೃದಯರಿಗೆ ಯಾವ ದೋಷವೂ ತೋರುವುದಿಲ್ಲ. ಆದರೆ ಮಮ್ಮಟನಿಗೆ ಇಲ್ಲಿಯ ಉಪಮೆಯಲ್ಲಿ ಕಾಲಭೇದವೆಂಬ ದೋಷ ಕಂಡಿದೆ. ಏಕೆಂದರೆ ಉಪಮಾನದಲ್ಲಿ **'ಚೇತನಾ ಪ್ರಸಾದಂ ಆಪ'** ಎನ್ನುವುದು ಅಸಂಗತವಾಗುತ್ತದೆ. ನಿತ್ಯವೂ ಅದು ನಡೆಯುವ ಘಟನೆಯಾದ್ದರಿಂದ. **'ಆಪ'** ಎಂಬ ಭೂತಕಾಲದ ಕ್ರಿಯಾಪದವನ್ನು **'ಆಪ್ನೋತಿ'** ಎಂದು ವರ್ತಮಾನಕ್ಕೆ ಹೊಂದಿಸಿಕೊಳ್ಳಬೇಕಾಗುವುದೆನ್ನುವುದೇ ಮಮ್ಮಟನ ಆಕ್ಷೇಪ.

> ಗಾಹಂತಾಂ ಮಹಿಷಾ ನಿಪಾನ ಸಲಿಲಂ ಶೃಂಗೈರ್ಮುಹುಸ್ತಾಡಿತಂ
> ಛಾಯಾಬದ್ಧ ಕದಂಬಕಂ ಮೃಗಕುಲಂ ರೋಮಂಥಮಭ್ಯಸ್ಯತು ।
> ವಿಶ್ರಬ್ಧೈಃ ಕ್ರಿಯತಾಂ ವರಾಹಪತಿಭಿರ್ಮುಸ್ತಾಕ್ಷತಿಃ ಪಲ್ವಲೇ
> ವಿಶ್ರಾಂತಿಂ ಲಭತಾಂ ಇದಂ ಚ ಶಿಥಿಲಜ್ಯಾಬಂಧಮಸ್ಮದ್ಧನುಃ ॥

ಇದು 'ಶಾಕುಂತಲ'ದ ಪದ್ಯ. ಬೇಟೆಗೆ ಹೋಗುವುದು ಬೇಡವೆಂದು ತೀರ್ಮಾನಿಸಿ ದುಷ್ಯಂತನು ಹೀಗೆ ಹೇಳಿದ್ದಾನೆ : ''ಕಾಡೆಮ್ಮೆಗಳು ಕೋಡುಗಳಿಂದ ನೀರನ್ನು ಚೆಲ್ಲಾಡಿ

ಮಮ್ಮಟನು ಇಲ್ಲಿ ಕಾರಕ ಕ್ರಮಭಂಗವೆಂಬ ದೋಷವನ್ನು ಕಂಡಿದ್ದಾನೆ. ಇಲ್ಲಿರುವ ನಾಲ್ಕು ವಾಕ್ಯಗಳಲ್ಲಿ. ಮೂರರಲ್ಲಿ ಕರ್ತರಿಪ್ರಯೋಗವಿದೆ : ಮೂರನೆಯದರಲ್ಲಿ ಮಾತ್ರ ಕರ್ಮಣಿಯಿರುವುದು ಕ್ರಮಭಂಗದ ಕಾರಣವಾಗಿದೆ. ಕಾಳಿದಾಸನ ಅಜಾಗರೂಕತೆ ಇಲ್ಲಿ ಸ್ಪಷ್ಟ.

> ತದ್‌ಗಚ್ಛ ಸಿದ್ಧ್ಯೈ ಕುರು ದೇವಕಾರ್ಯಮರ್ಥೋಽಯಮರ್ಥಾಂತರಭಾವ್ಯ ಏವ ।
> ಅಪೇಕ್ಷತೇ ಪ್ರತ್ಯಯಮಂಗಲಮಂಗಲಬ್ಧ್ಯೈ ಬೀಜಾಂಕುರಃ ಪ್ರಾಗುದಯಾದಿವಾಂಭಃ॥

ಇದು 'ಕುಮಾರಸಂಭವ'ದ ಮೂರನೆಯ ಸರ್ಗದಲ್ಲಿರುವ ಪದ್ಯ : ಶಿವನ ತಪೋಭಂಗಕ್ಕಾಗಿ ಮನ್ಮಥನನ್ನು ಉತ್ತೇಜಿಸಿ ಕಳುಹಿಸುವ ಇಂದ್ರನ ಮಾತು. ಇಲ್ಲಿ 'ಸಿದ್ಧ್ಯೈ', ಲಬ್ಧ್ಯೈ' ಎಂಬ ಪದಗಳ ಅಂಶಗಳು (ಪ್ರತ್ಯಯಾಂಶಗಳು) ಶ್ರುತಿಕಟು ಎಂದು ಮಮ್ಮಟನ ಟೀಕೆ.

> ತೇ ಹಿಮಾಲಯ ಮಾಮಂತ್ರ್ಯ ಪುನಃಪ್ರೇಕ್ಷ್ಯ ಚ ಶೂಲಿನಮ್
> ಸಿದ್ಧಂ ಚಾಸ್ಮೈ ನಿವೇದ್ಯಾರ್ಥಂ ತದ್ವಿಸೃಷ್ಟಾಃ ಖಮುದ್ಯಯುಃ ॥

ಇದು 'ಕುಮಾರಸಂಭವ'ದ ಆರನೆಯ ಸರ್ಗದಲ್ಲಿರುವ ಪದ್ಯ. ಸಪ್ತರ್ಷಿಗಳು ಹಿಮಾಲಯನಿಂದ ಬೀಳ್ಕೊಂಡು, ಮತ್ತೆ ಶಿವನನ್ನು ಕಂಡು, ತಮ್ಮ ಕಾರ್ಯ ಸಫಲವಾಗಿದೆಯೆಂದು ಅವನಿಗೆ ತಿಳಿಸಿ, ಅವನ ಅನುಮತಿಯನ್ನು ಪಡೆದು, ಆಕಾಶಕ್ಕೆ ತೆರಳಿದರು ಎಂದು ಇದರ ತಾತ್ಪರ್ಯ. ಇಲ್ಲಿ ಸರ್ವನಾಮ ಕ್ರಮಭಂಗವೆಂಬ ದೋಷವನ್ನು ಹೇಳಿದೆ. ಮೂರನೆಯ ಪಾದದಲ್ಲಿ 'ಅಸ್ಮೈ' ಎಂದು 'ಇದಂ' ಶಬ್ದವನ್ನು ಉಪಯೋಗಿಸಿ, ನಾಲ್ಕನೆಯ ಪಾದದಲ್ಲಿ ತಚ್ಛಬ್ದದಿಂದ ಅದೇ ಶಿವನನ್ನು ಪರಾಮರ್ಶಿಸಿರುವುದು ದೋಷಕ್ಕೆ ಕಾರಣ.

> ದಿವಾಕರಾದ್ರಕ್ಷತಿ ಯೋ ಗುಹಾಸು
> ಲೀನಂ ದಿವಾ ಭೀತಮಿವಾಂಧಕಾರಮ್ ।
> ಕ್ಷುದ್ರೇಽಪಿ ನೂನಂ ಶರಣಂಪ್ರಪನ್ನೇ
> ಮಮತ್ವಮುಚ್ಚೈಃ ಶಿರಸಾಮತೀವ ॥

ಇದು 'ಕುಮಾರಸಂಭವ'ದ ಒಂದನೆಯ ಸರ್ಗದಲ್ಲಿ ಹಿಮಾಲಯದ ವರ್ಣನೆಯ ಸಂದರ್ಭದಲ್ಲಿ ಬಂದಿದೆ. ''ಹಿಮಾಲಯನು ಹಗಲಿಗೆ ಹೆದರಿದಂತೆ ಕಾಣುವ ಕತ್ತಲೆಯನ್ನು ತನ್ನ ಗುಹೆಗಳಲ್ಲಿ ರಕ್ಷಿಸಿದ್ದಾನೆ ; ಶರಣಾಗತನಾದವನು ಕ್ಷುದ್ರನಾದರೂ ಅವನಲ್ಲಿ ಮಹಾವ್ಯಕ್ತಿಗಳಿಗೆ ಮಮತೆ ಇರುತ್ತದೆಯಲ್ಲವೇ''—ಇದು ಈ ಪದ್ಯದ ತಾತ್ಪರ್ಯ.

ಅರ್ಥಾಂತರನ್ಯಾಸಾಲಂಕಾರವನ್ನು ಬಳಸಿರುವುದು ವ್ಯರ್ಥ. ಇದು ಅನುಚಿತಾರ್ಥವೆಂಬ ದೋಷವೆಂದು ಮಮ್ಮಟ ಟೀಕಿಸಿದ್ದಾನೆ. ಈ ಪದ್ಯದಲ್ಲಿ ದೋಷೋಲ್ಲೇಖ ಮಾಡಿರುವುದು ಅಷ್ಟು ಸರಿಯೆನಿಸುವುದಿಲ್ಲ. ದಿವಾಭೀತ ಶಬ್ದಕ್ಕೆ ಗೂಬೆ ಎಂಬ ಅರ್ಥವೂ ಇರುವುದರಿಂದ, ಅಚೇತನವಾದ ತಮಸ್ಸು ಚೇತನದಂತೆ ಭಾಸಮಾನವಾಗಿ, ಅದಕ್ಕೆ ರಕ್ಷಣೆ ಕೊಡುವ ಅರ್ಥತೋರುತ್ತದೆ. ಗುಹೆಗಳಲ್ಲಿ ಸ್ವಾಭಾವಿಕವಾಗಿ ಇರುವ ಕತ್ತಲೆಯನ್ನು ಶರಣಾಗತನಂತೆ ಭಾವಿಸಿ ಕವಿಯು ಅರ್ಥಗಳನ್ನು ಸೇರಿಸಿರುವುದು ಸಹೃದಯ ಚಮತ್ಕಾರಕವಾಗಿರುವುದರಿಂದ ಪದ್ಯ ಹೃದ್ಯವಾಗಿಯೇ ಇದೆ.

ಮಹೀಭೃತಃ ಪುತ್ರವತೋಽಪಿ ದೃಷ್ಟಿಃ
ತಸ್ಮಿನ್ನಪತ್ಯೇ ನ ಜಗಾಮ ತೃಪ್ತಿಮ್ ।
ಅನಂತಪುಷ್ಪಸ್ಯ ಮಧೋರ್ಹಿ ಚೂತೇ
ದ್ವಿರೇಫಮಾಲಾ ಸವಿಶೇಷಸಂಗಾ॥

ಇದೂ 'ಕುಮಾರಸಂಭವ' ಒಂದನೆಯ ಸರ್ಗದ ಪದ್ಯ. ''ಬೇರೆ ಮಕ್ಕಳಿದ್ದರೂ ಹಿಮಾಲಯನ ದೃಷ್ಟಿ ಆ ಒಂದು ಮಗುವಿನಲ್ಲಿ (ಪಾರ್ವತಿಯಲ್ಲಿ) ಎಷ್ಟು ನೋಡಿದರೂ ತೃಪ್ತಿಯನ್ನು ಹೊಂದಲಿಲ್ಲ. ಲೆಕ್ಕವಿಲ್ಲದಷ್ಟು ಹೂಗಳು ವಸಂತಮಾಸದಲ್ಲಿ ಅರಳಿದ್ದರೂ ದುಂಬಿಗಳು ಮಾವಿನ ಮರದಲ್ಲಿ ತಾನೆ ಹೆಚ್ಚಿನ ಒಲವನ್ನು ತೋರಿಸುವುದು ?'' ಇದು ಪರ್ಯಾಯಕ್ರಮ ಭಂಗವೆಂಬ ದೋಷಕ್ಕೆ ಉದಾ. ಮೊದಲು ಪುತ್ರಶಬ್ದವನ್ನೂ ಅನಂತರ ಅದೇ ಅರ್ಥಕ್ಕೆ ಅಪತ್ಯಶಬ್ದವನ್ನೂ ಉಪಯೋಗಿಸಿದೆ.

ಮೃದುಪವನವಿಭಿನ್ನೋ ಮತ್ಪ್ರಿಯಾಯಾ ವಿನಾಶಾದ್
ಘನರುಚಿರ ಕಲಾಪೋ ನಿಸ್ಸಪತ್ನೋಽದ್ಯ ಜಾತಃ ।
ರತಿವಿಗಲಿತ ಬಂಧೇ ಕೇಶಪಾಶೇ ಸುಕೇಶ್ಯಾಃ
ಸತಿ ಕುಸುಮಸನಾಥೇ ಕಂ ಹರೇದೇಷ ಬರ್ಹೀ ॥

ಇದು 'ವಿಕ್ರಮೋರ್ವಶೀಯ'ದ ಪದ್ಯ ; ''ಬೀಸುವ ಗಾಳಿಯಿಂದ ಕೆದರಿದ ಗರಿಗಳನ್ನುಳ್ಳ ನವಿಲು ಇಂದು ತನ್ನ ಪ್ರಿಯೆ ಇಲ್ಲದ ಕಾರಣ ಪ್ರತಿಸ್ಪರ್ಧಿ ಇಲ್ಲದ್ದಾಗಿದೆ. ಹೂವನ್ನು ಮುಡಿದ ನನ್ನಪ್ರಿಯೆಯು ಕೇಶಕಲಾಪ ಇಲ್ಲಿ ಶೋಭಿಸುತ್ತಿದ್ದರೆ, ಈ ನವಿಲು ಯಾರನ್ನು ತಾನೆ ಆಕರ್ಷಿಸಲು ಶಕ್ತವಾಗುತ್ತಿತ್ತು ?''

ಎದುರಿಗೆ ಕಾಣದಿರುವಿಕೆ ಎಂಬ ಅರ್ಥದಲ್ಲಿ 'ವಿನಾಶ' ಎಂಬ ಶಬ್ದವನ್ನು ಇಲ್ಲಿ ಬಳಸಲಾಗಿದೆ. ವಿನಾಶ ಮೃತ್ಯುವನ್ನು ಸೂಚಿಸುವುದರಿಂದ, ಇಲ್ಲಿ 'ಅಮಂಗಳ ವ್ಯಂಜಕ ಅಶ್ಲೀಲ' ಎಂದು ದೋಷವನ್ನು ಸೂಚಿಸಿದೆ.

ಯಶ್ಚಾಪ್ಸರೋ ವಿಭ್ರಮ ಮಂಡನಾನಾಂ
ಸಂಪಾದಯಿತ್ರೀಂ ಶಿಖರೈರ್ಬಿಭರ್ತಿ ।
ಬಲಾಹಕಚ್ಛೇದ ವಿಭಕ್ತರಾಗಾಮ್
ಅಕಾಲಸಂಧ್ಯಾಮಿವ ಧಾತುಮತ್ತಾಮ್ ॥

'ಕುಮಾರಸಂಭವ'ದ ಒಂದನೆಯ ಸರ್ಗದ ಪದ್ಯ : "ಹಿಮಾಲಯನಲ್ಲಿ ನಾನಾವರ್ಣದ ಧಾತುಗಳಿವೆ. ಮೋಡಗಳ ಮೂಲಕ ಬರುವ ಸೂರ್ಯಕಿರಣಗಳು ತಾಗಿ ಅವು ವಿವಿಧ ಬಣ್ಣಗಳಿಂದ ಶೋಭಿಸಿ ಅಕಾಲದಲ್ಲೂ ಸಂಧ್ಯೆಯನ್ನು ತೋರಿಸುತ್ತವೆ. ಈ ಧಾತುಗಳು ಅಪ್ಸರೆಯರ ಮುಖಾಲಂಕರಣಕ್ಕೆ ಸಾಮಗ್ರಿಗಳಾಗುತ್ತವೆ". ಇದು ತಾತ್ಪರ್ಯ.

ಇಲ್ಲಿ ಮತ್ತಾ ಶಬ್ದವು ಕ್ಷೀಬಾರ್ಥದಲ್ಲಿ ನಿಹತಾರ್ಥವೆಂದು ಮಮ್ಮಟನ ಗ್ರಹಿಕೆ. ಆದರೆ, ಆ ಅರ್ಥ ಕವಿಗೆ ವಿವಕ್ಷಿತವೇ ಅಲ್ಲ. "ಧಾತವಃ ಅಸ್ಮಿನ್ ಸಂತೀತಿ ಧಾತುಮಾನ್, ತಸ್ಯ ಭಾವಃ ಧಾತು ಯತ್ತಾ" ಎಂಬ ಅಭಿಪ್ರಾಯ ಇಲ್ಲಿ ವಿವಕ್ಷಿತ. ದೋಷಕ್ಕೆ ಇಲ್ಲಿ ಆಸ್ಪದ ವಿಲ್ಲ.

ರಾಮಮನ್ಮಥ ಶರೇಣ ತಾಡಿತಾ
ದುಸ್ಸಹೇನ ಹೃದಯೇ ನಿಶಾಚರೀ ।
ಗಂಧವದ್ರುಧಿರ ಚಂದನೋಕ್ಷಿತಾ
ಜೀವಿತೇಶವಸತಿಂ ಜಗಾಮ ಸಾ ॥

ಇದು 'ರಘುವಂಶ'ದ ೧೧ನೆಯ ಸರ್ಗದಲ್ಲಿರುವ ಪದ್ಯ. ತಾಟಕಾವಧೆಯ ಪ್ರಸಂಗದ ವರ್ಣನೆ. "ಇಲ್ಲಿ ರಾಮನ ಬಾಣದ ಏಟಿನಿಂದ ಎದೆಯಲ್ಲಿ ಹೊಡೆತ ತಿಂದ ತಾಟಕೆ ದುರ್ಗಂಧಮಯವಾದ ರಕ್ತದಿಂದ ಮೈಯನ್ನೆಲ್ಲಾ ತೋಯಿಸಿಕೊಂಡು ಯಮನ ಪಟ್ಟಣಕ್ಕೆ ಪ್ರಯಾಣ ಮಾಡಿದಳು ಎಂಬ ಪ್ರಸ್ತುತಾರ್ಥವು ತೋರುವಾಗಲೇ, ರಾಮಮನ್ಮಥ ಎಂಬ ರೂಪಕದ ಮಹಿಮೆಯಿಂದ ಮನ್ಮಥಬಾಣಾವಿದ್ಧಳಾದ ತಾಟಕೆ ಹೃದಯದಲ್ಲಿ ಗಾಸಿಗೊಂಡು ಮೈಗೆಲ್ಲಾ ಚಂದನವನ್ನು ಬಳಿದುಕೊಂಡು ತನ್ನ ಪ್ರಾಣನಾಥನ ಮನೆಗೆ ತೆರಳಿದಳು ಎಂಬ ಶೃಂಗಾರಮಯ ಅರ್ಥವೂ ತೋರುತ್ತದೆ.

ಇಲ್ಲಿ ಅಮತಪರಾರ್ಥ ಎಂಬ ದೋಷವನ್ನು ಮಮ್ಮಟ ಉಲ್ಲೇಖಿಸಿದ್ದಾನೆ. ಪ್ರಕೃತಾರ್ಥ ಬೀಭತ್ಸರಸಪರ್ಯವಸಾಯಿ ; ಅದರ ಜೊತೆ ತೋರಿಬರುವ ಅಪ್ರಕೃತಾರ್ಥ ಶೃಂಗಾರರೂಪದಲ್ಲಿದೆ. "ಅತ್ರ ಪ್ರಕೃತೇ ರಸೇ ವಿರುದ್ಧಸ್ಯ ಶೃಂಗಾರಸ್ಯ ವ್ಯಂಜಕೋ ಪರೋsರ್ಥ"—ಎಂದು ಮಮ್ಮಟನು ದೋಷವನ್ನು ವಿವರಿಸಿದ್ದಾನೆ.

ವಪುರ್ವಿರೂಪಾಕ್ಷಮಲಕ್ಷ್ಯಜನ್ಮತಾ
ದಿಗಂಬರತ್ವೇನ ನಿವೇದಿತಂ ವಸು ।
ವರೇಷು ಯದ್ಬಾಲ ಮೃಗಾಕ್ಷಿ ಮೃಗ್ಯತೇ
ತದಸ್ತಿ ಕಿಂ ವ್ಯಸ್ತಮಪಿ ತ್ರಿಲೋಚನೇ ॥

ಇದು 'ಕುಮಾರಸಂಭವ'ದ ಐದನೆಯ ಸರ್ಗದಲ್ಲಿರುವ ಪದ್ಯ. "ಬ್ರಹ್ಮಚಾರಿಯ ವೇಷದಲ್ಲಿ ಬಂದ ಶಿವನು ಪಾರ್ವತಿಯ ಎದುರಿನಲ್ಲಿ ಶಿವನ ದೋಷಗಳನ್ನು ಎತ್ತಿಹೇಳುವ ಸಂದರ್ಭ. ಎಳೆಯ ಎರಳೆಯ ಕಣ್ಣುಗಳನ್ನುಳ್ಳ ಸುಂದರಿ, ವರನಲ್ಲಿ ಹುಡುಕುವ ಗುಣಗಳಲ್ಲಿ ಒಂದಾದರೂ ಶಿವನಲ್ಲಿದೆಯೇ ? ಅವನ ಶರೀರವನ್ನು ನೋಡಿದರೆ, ಮುಕ್ಕಣ್ಣ. ಜೊತೆಗೆ ಅವನು ಹುಟ್ಟಿದುದೆಲ್ಲೋ ತಿಳಿಯದು. ಅವನ ಐಶ್ವರ್ಯಕ್ಕೆ ದಿಗಂಬರತ್ವವೇ ಸಾಕ್ಷಿ. ಇಂಥ

ಶಿವನನ್ನೇಕೆ ಬಯಸುವೆ ?'' ಎಂದು ಇದರ ತಾತ್ಪರ್ಯ. ಇಲ್ಲಿ ಮಮ್ಮಟನು 'ಅವಿಮೃಷ್ಟ ವಿಧೇಯಾಂಶ' ಎಂಬ ದೋಷವನ್ನು ಹೇಳಿದ್ದಾನೆ. ಶಿವನ ಹುಟ್ಟು ತಿಳಿದಿಲ್ಲ ಎಂಬುದು ಸ್ಪಷ್ಟವಾಗಬೇಕಾದರೆ, ನಿಷೇಧವು ಸ್ವತಂತ್ರವಾಗಿ ತೋರಬೇಕು. ಇದನ್ನು ಪರಿಹರಿಸಲು ''ಅಲಕ್ಷಿತಾಜನಿಃ'' ಎಂದು ಸಮಾಸರಹಿತವಾದ ಪಾಠವನ್ನಿಟ್ಟುಕೊಳ್ಳಬೇಕೆಂದು ಮಮ್ಮಟನ ವಾದ.

ನ್ಯಸ್ತಾಂ ನಿತಂಬಾದವರೋಪಯಂತೀ
ಪುನಃ ಪುನಃ ಕೇಸರದಾಮಕಾಂಚೀಮ್ ।
ನ್ಯಾಸೀಕೃತಾಂ ಸ್ಥಾನವಿದಾ ಸ್ಮರೇಣ
ದ್ವಿತೀಯ ಮೌರ್ವೀಮಿವ ಕಾರ್ಮುಕಸ್ಯ ॥

'ಕುಮಾರಸಂಭವ'ದ ಮೂರನೆಯ ಸರ್ಗದಲ್ಲಿನ ಪದ್ಯವಿದು. ಶಿವಪೂಜೆಗಾಗಿ ಆಗಮಿಸಿದ ಪಾರ್ವತಿಯ ವರ್ಣನೆ. ''ನಡುವಿನಿಂದ ಮತ್ತೆ ಮತ್ತೆ ಜಾರಿಹೋಗುತ್ತಿದ್ದ ಒಡ್ಯಾಣವನ್ನು ಪಾರ್ವತಿ ಹಿಡಿದುಕೊಂಡು ಮತ್ತೆ ಕಟ್ಟಿಕೊಳ್ಳುತ್ತಿದ್ದಳು. ಆ ಒಡ್ಯಾಣವು ಮನ್ಮಥನು ನ್ಯಾಸವಾಗಿಟ್ಟಿದ್ದ ಎರಡನೆಯ ಹದೆಯಂತಿತ್ತು''—ಎಂದು ಇದರ ಅಭಿಪ್ರಾಯ. ಇಲ್ಲಿ ''ದ್ವಿತೀಯ ಮೌರ್ವೀಂ'' ಎಂದು ಸಮಾಸವನ್ನು ಮಾಡಿರುವುದರಿಂದ, 'ಅವಿಮೃಷ್ಟವಿಧೇಯಾಂಶ' ಎಂಬ ದೋಷ. 'ಮೌರ್ವೀಂ ದ್ವಿತೀಯಾಂ' ಎಂದು ಅಸಮಸ್ತವಾಗಿ ಹೇಳಿದರೆ ದೋಷಪರಿಹಾರವಾಗುವುದೆಂದು ಮಮ್ಮಟನ ಸೂಕ್ಷ್ಮ ವಿಮರ್ಶೆ.

ಇವಲ್ಲದೆ ಬೇರೆವಿಷಯಗಳ ಪ್ರತಿಪಾದನೆಗೆ ಮಮ್ಮಟ 'ಕಾವ್ಯ ಪ್ರಕಾಶ'ದಲ್ಲಿ ಏಳು ಪದ್ಯಗಳನ್ನು ಕಾಳಿದಾಸನ ಕೃತಿಗಳಿಂದ ಆರಿಸಿಕೊಂಡಿದ್ದಾನೆ.

ಕ್ರೋಧಂ ಪ್ರಭೋ ಸಂಹರ ಸಂಹರೇತಿ
ಯಾವದ್ಗಿರಃ ಖೇ ಮರುತಾಂ ಚರಂತಿ ।
ತಾವತ್ಸ ವಹ್ನಿರ್ಭವನೇತ್ರಜನ್ಮಾ
ಭಸ್ಮಾವಶೇಷಂ ಮದನಂ ಚಕಾರ ॥

ಇದು 'ಕುಮಾರಸಂಭವ'ದ ಪದ್ಯ. ''ಸ್ವಾಮಿ, ಕೋಪವನ್ನು ಉಪಸಂಹರಿಸು ಎಂದು ಆಕಾಶದಲ್ಲಿ ದೇವತೆಗಳು ಕೂಗಿಕೊಳ್ಳುತ್ತಿರುವಷ್ಟರಲ್ಲಿ ಶಿವನ ಮೂರನೆಯ ಕಣ್ಣಿನಿಂದ ಹೊಮ್ಮಿದ ಅಗ್ನಿಯು ಮನ್ಮಥನನ್ನು ಬೂದಿಮಾಡಿತು'' ಎಂದಿದರ ಅರ್ಥ. ಇದು ಪ್ರಕೃತ್ಯೌಚಿತ್ಯಕ್ಕೆ ಉದಾಹರಣೆ. ಮಾನುಷ ಪ್ರಕೃತಿಗೆ ಇದು ವಿರುದ್ಧ. ಆದರೆ ಪರಶಿವನು ದೇವತೆಯಾದ್ದರಿಂದ, ಅವನ ಕಣ್ಣಿಂದ ವಹ್ನಿಜ್ವಾಲೆ ಹೊಮ್ಮುವುದು ದೇವತಾಪ್ರಕೃತಿಗೆ ಉಚಿತವಾಗಿದೆ.

ಚಂದ್ರಂ ಗತಾ ಪದ್ಮಗುಣಾನ್ನ ಭುಂಕ್ತೇ
ಪದ್ಮಾಶ್ರಿತಾ ಚಾಂದ್ರಮಸೀಮಭಿಖ್ಯಾಮ್

ಉಮಾಮುಖಂ ತು ಪ್ರತಿಪದ್ಯ ಲೋಲಾ
ದ್ವಿಸಂಶ್ರಯಾಂ ಪ್ರೀತಿಮವಾಪ ಲಕ್ಷ್ಮೀಃ ॥

"ಕಾಂತಿ (ಲಕ್ಷ್ಮೀ)ಯು ಚಂದ್ರನಲ್ಲಿದ್ದಾಗ, ಪದ್ಮದ ಗುಣಗಳಾದ ಸೌರಭಾದಿಗಳನ್ನು ಪಡೆಯುವುದಿಲ್ಲ. ಹಾಗೆಯೇ ಪದ್ಮದಲ್ಲಿದ್ದಾಗ ಚಂದ್ರಗತವಾದ ವೈಶಿಷ್ಟ್ಯವಿಲ್ಲ. ಆ ಕಾಂತಿ ಲಕ್ಷ್ಮಿಯು ಉಮೆಯ ಮುಖವನ್ನಾಶ್ರಯಿಸಿದಾಗ, ಚಂದ್ರ–ಪದ್ಮಗಳೆರಡರ ಗುಣವೂ ಅವಳಿಗೆ ದೊರೆಯಿತು". ಈ ಪದ್ಯದಲ್ಲಿ ಲಕ್ಷ್ಮಿಯು ಚಂದ್ರನಲ್ಲಿದ್ದಾಗ ಪದ್ಮದ ಗುಣಗಳನ್ನು ಹೊಂದುವುದಿಲ್ಲ, ಇತ್ಯಾದಿಗಳಿಗೆ ಯಾವ ಕಾರಣವನ್ನೂ ಕವಿ ನೀಡಿಲ್ಲ. ಆದರೂ 'ನಿರ್ಹೇತು' ಎಂಬ ದೋಷಕ್ಕೆ ಇಲ್ಲ ಆಸ್ಪದವಿಲ್ಲ—ಎಂದು ಮಮ್ಮಟನ ಅಭಿಪ್ರಾಯ. ಏಕೆಂದರೆ ಇದು ಲೋಕಪ್ರಸಿದ್ಧವಾದ ವಿಷಯ. ಚಂದ್ರನು ಹೊಳೆಯುವಾಗ ಪದ್ಮ ಅರಳಿರುವುದಿಲ್ಲ. ಪದ್ಮ ಅರಳಿರುವಾಗ, ಎಂದರೆ ಹಗಲಿನಲ್ಲಿ ಚಂದ್ರನು ಹೊಳೆಯುವುದಿಲ್ಲ.

ಜುಗೋಪಾತ್ಮಾನಮತ್ರಸ್ತೋ ಭೇಜೇ ಧರ್ಮಮನಾತುರಃ ।
ಅಗೃಧ್ನುರಾದದೇ ಸೋಽರ್ಥಾನಸಕ್ತಃ ಸುಖಮನ್ವಭೂತ್ ॥

ಇದು 'ರಘುವಂಶ'ದ ಒಂದನೆಯ ಸರ್ಗದಲ್ಲಿರುವ ಪದ್ಯ. "ದಿಲೀಪ ಮಹಾರಾಜನು ಭೀತಿ ಇಲ್ಲದಿದ್ದರೂ ಆತ್ಮರಕ್ಷಣೆಯನ್ನು ಮಾಡಿಕೊಳ್ಳುತ್ತಿದ್ದನು. ಆಪತ್ತಿಗೆ ಸಿಕ್ಕಿ ಹಾಕಿಕೊಳ್ಳದಿದ್ದರೂ ಧರ್ಮವನ್ನಾಶ್ರಯಿಸಿದ್ದನು. ಆಸೆಪಡದೆ ಹಣವನ್ನು ಸಂಪಾದಿಸಿದನು ; ಆಸಕ್ತನಾಗದೆ ಸುಖಗಳನ್ನನುಭವಿಸಿದನು."

ಈ ಪದ್ಯದಲ್ಲಿ ಅತ್ರಸ್ತಃ, ಅನಾತುರಃ, ಅಗೃಧ್ನುಃ, ಅಸಕ್ತಃ ಎಂದು ನಞ್ ಸಮಾಸವನ್ನು ಮಾಡಿದ್ದರೂ ಅವಿಮೃಷ್ಟ ವಿಧೇಯಾಂಶ ಎಂಬ ದೋಷವಿಲ್ಲ ಎಂದು ಪ್ರತಿಪಾದಿಸಲು ಮಮ್ಮಟನು ಇದನ್ನು ಉದಾಹರಿಸಿದ್ದಾನೆ. ಏಕೆಂದರೆ ಇಲ್ಲಿ ಅತ್ರಸ್ತತ್ವವನ್ನು ಅನುವಾದ್ಯವಾಗಿ ಮಾಡಿಕೊಂಡು ಜುಗೋಪ ಎಂಬ ಕ್ರಿಯೆಯನ್ನು ವಿಧಾನಮಾಡಲಾಗಿದೆ.

ಜ್ಯಾಬಂಧ ನಿಷ್ಪಂದಭುಜೇನ ಯಸ್ಯ
ವಿನಿಃ ಶ್ವಸದ್ವಕ್ತ್ರಪರಂಪರೇಣ ।
ಕಾರಾಗೃಹೇ ನಿರ್ಜಿತವಾಸವೇನ
ಲಂಕೇಶ್ವರೇಣೋಷಿತ ಮಾಪ್ರಸಾದತ್ ॥

'ರಘುವಂಶ'ದ ಆರನೆಯ ಸರ್ಗದಲ್ಲಿನ ಪದ್ಯ. "ಇಂದ್ರನನ್ನು ಗೆದ್ದಿದ್ದ, ಹತ್ತುತಲೆಗಳ ರಾವಣನು ಕಾರ್ತವೀರ್ಯಾರ್ಜುನನ ಕೈಗೆ ಸಿಕ್ಕಿಹಾಕಿಕೊಂಡು ಬಿಲ್ಲಿನ ಹೆದೆಯಿಂದ ಕಟ್ಟಲ್ಪಟ್ಟು ಅಲುಗಾಡಲೂ ಸಾಧ್ಯವಿಲ್ಲದೆ ನಿಟ್ಟುಸಿರುಬಿಡುತ್ತಾ, ಕಾರಾಗೃಹದಲ್ಲಿ ಕಾರ್ತವೀರ್ಯನು ಪ್ರಸನ್ನನಾಗುವವರೆಗೂ ಬಿದ್ದಿದ್ದನು". ಎಂದು ಇದರ ತಾತ್ಪರ್ಯ.

ಇಲ್ಲಿ 'ಜ್ಯಾ' ಎಂಬ ಪದವನ್ನು ಧನುಸ್ ಶಬ್ದವಿಲ್ಲದೆ ಕಾಳಿದಾಸನು ಬಳಸಿದ್ದಾನೆ. ಇದು ಉಚಿತ. ಏಕೆಂದರೆ ಇಲ್ಲಿ ಹೆದೆಗೆ ಧನುಸ್ಸಿನಲ್ಲಿ ಆರೋಪಿತತ್ವವು ವಿವಕ್ಷಿತವಲ್ಲ.

ಹಾಗೆ ವಿವಕ್ಷೆಯಿದ್ದಾಗ ಮಾತ್ರ 'ಧನುಜ್ಯಾ' ಪದಸಮುಚ್ಚಯವನ್ನು ಬಳಸಬೇಕೆಂದು ಅಭಿಪ್ರಾಯ. ಇಲ್ಲಿ ಮಮ್ಮಟನ ವಿಮರ್ಶೆ.

ತಿಷ್ಠೇತ್ ಕೋಪವಶಾತ್ ಪ್ರಭಾವಪಿಹಿತಾ ದೀರ್ಘಂ ನ ಸಾ ಕುಪ್ಯತಿ
ಸ್ವರ್ಗಾಯೋತ್ಪತಿತಾ ಭವೇನ್ಮಯಿ ಪುನರ್ಭಾವಾರ್ದ್ರಮಾಸ್ಯಾಮನಃ ।
ತಾಂ ಹರ್ತುಂ ವಿಬುಧ ದ್ವಿಷೋಽಪಿ ನ ಚ ಮೇ ಶಕ್ತಾಃ ಪುರೋವರ್ತಿನೀಂ
ಸಾ ಚಾತ್ಯಂತ ಮಗೋಚರಂ ನಯನಯೋರ್ಯಾತೇತಿ ಕೋಽಯಂ ವಿಧಿಃ ॥

ವಿಕ್ರಮೋರ್ವಶೀಯದಲ್ಲಿನ ಪುರೂರವನ ಮಾತು : ಉರ್ವಶಿ ಕೋಪಗೊಂಡು ತನ್ನ ಪ್ರಭಾವದಿಂದಲೇ ಕಣ್ಮರೆಯಾಗಿರಬೇಕು. ಆದರೆ ಅವಳು ಹೆಚ್ಚು ಹೊತ್ತು ಕೋಪ ಮಾಡಿಕೊಳ್ಳುವವಳಲ್ಲ. ಸ್ವರ್ಗಕ್ಕೆ ಹಾರಿ ಹೋಗಿರಬಹುದು ; ಆದರೆ ಅವಳ ಮನಸ್ಸು ನನ್ನಲ್ಲಿ ತುಂಬಾ ಸ್ನೇಹಮಯವಾಗಿದೆ. ನಾನಿರುವಾಗ ಅವಳನ್ನು ಕದ್ದೊಯ್ಯಲು ರಾಕ್ಷಸರಿಗೂ ಸಾಧ್ಯವಿಲ್ಲ. ಆದರೂ ಅವಳು ನನ್ನ ಕಣ್ಣಿಗೆ ಗೋಚರವಾಗುತ್ತಿಲ್ಲ. ಇದೇನು ? ಇಲ್ಲಿ ಸಾಮಾನ್ಯನಿಯಮದಂತೆ ನೋಡಿದಾಗ, ಒಂದು ಸಂಭವವನ್ನು ಹೇಳಿ "ನೈತತ್" (ಇದು ಸಾಧ್ಯವಿಲ್ಲ) ಎಂಬ ಮಾತನ್ನೂ ಹೇಳಿ ಅನಂತರ ಅದರ ಕಾರಣವನ್ನು ಹೇಳಬೇಕು. ಕಾಳಿದಾಸ ಹಾಗೆ ಮಾಡಿಲ್ಲ. ಎರಡನೆಯ ವಾಕ್ಯದಿಂದಲೇ ಮೊದಲನೆಯ ವಾಕ್ಯದ ನಿಷೇಧ ಸ್ವತಃ ಸಿದ್ಧವಾಗುವುದಲ್ಲವೇ ? ಆದ್ದರಿಂದ ಇಲ್ಲಿ ಗುಣವೂ ಇಲ್ಲ, ದೋಷವೂ ಇಲ್ಲ ಎಂಬುದಕ್ಕೆ ಮಮ್ಮಟನು ಈ ಪದ್ಯವನ್ನು ಉದಾಹರಿಸಿದ್ದಾನೆ.

ದ್ವಯಂ ಗತಂ ಸಂಪ್ರತಿ ಶೋಚನೀಯತಾಂ
ಸಮಾಗಮಃ ಪ್ರಾರ್ಥನಯಾ ಕಪಾಲಿನಃ ।
ಕಲಾ ಚ ಸಾ ಕಾಂತಿಮತೀ ಕಲಾವತಃ
ತ್ವಮಸ್ಯ ಲೋಕಸ್ಯ ಚ ನೇತ್ರಕೌಮುದೀ ॥

ಈ ಪದ್ಯವನ್ನು ಮಮ್ಮಟ ಎರಡು ಬಾರಿ ಉದಾಹರಿಸಿದ್ದಾನೆ. ಒಂದುಸಲ ದೋಷಕ್ಕೆ— ಅಕ್ರಮಃ, ಅವಿದ್ಯಮಾನಃ, ಕ್ರಮೋ ಯತ್ರ. ಚಕಾರವು 'ತ್ವಮ್' ಎಂಬುದರ ಮುಂದೆಯೇ ಬರಬೇಕಾಗಿತ್ತೆಂದು ಮಮ್ಮಟನ ಅಭಿಪ್ರಾಯ. ಮತ್ತೊಂದು ಸಲ, ಪ್ರಸಿದ್ಧಾರ್ಥಕವಾದ ತಚ್ಛಬ್ದವು ಯಚ್ಛಬ್ದೋಪಾದಾನವನ್ನು ಅಪೇಕ್ಷಿಸುವುದಿಲ್ಲ ಎಂಬುದನ್ನು ಪ್ರತಿಪಾದಿಸಲು ಈಪದ್ಯವನ್ನು ಉದಾಹರಿಸಿದ್ದಾನೆ. "ಸಾ ಕಾಂತಿಮತೀ ಕಲಾವತಃ ಕಲಾ" ಎಂಬಲ್ಲಿ ಯಚ್ಛಬ್ದೋಪಾದಾನವಿಲ್ಲದಿರುವುದನ್ನು ಮಮ್ಮಟ ಸಮರ್ಥಿಸಿದ್ದಾನೆ.

ನವಜಲಧರಃ ಸನ್ನದ್ಧೋಽಯಂ ನ ದೃಪ್ತನಿಶಾಚರಃ
ಸುರಧನುರಿದಂ ದೂರಾಕೃಷ್ಟಂ ನ ತಸ್ಯ ಶರಾಸನಮ್
ಅಯಮಪಿ ಪಟುರ್ಧಾರಾಸಾರೋ ನ ಬಾಣಪರಂಪರಾ
ಕನಕ ನಿಕಷಸ್ನಿಗ್ಧಾ ವಿದ್ಯುತ್ ಪ್ರಿಯಾ ನ ಮಮೋರ್ವಶೀ ॥

ವಿಕ್ರಮೋರ್ವಶೀಯ'ದ ನಾಲ್ಕನೆಯ ಅಂಕದಲ್ಲಿನ ಪದ್ಯವಿದು. ಇಲ್ಲಿ ವಿಜೃಂಭಿಸುತ್ತಿರುವುದು ಹೊಸಮೋಡ, ದರ್ಪದಿಂದ ಕೂಡಿದ ರಾಕ್ಷಸನಲ್ಲ; ಇದು ಕಾಮನಬಿಲ್ಲು, ರಾಕ್ಷಸನು ಹೆದೆಯೇರಿಸಿರುವ ಧನುಸ್ಸಲ್ಲ; ಇದು ಜೋರಾಗಿ ಬೀಳುತ್ತಿರುವ ಮಳೆಯ ಧಾರೆ, ಬಾಣಪರಂಪರೆಯಲ್ಲ; ಚಿನ್ನದ ಒರೆಗಲ್ಲಿನಂತೆ ಕಾಣುತ್ತಿರುವುದು ಮಿಂಚು. ನನ್ನ ಪ್ರಿಯೆ ಉರ್ವಶಿಯಲ್ಲ''—ಎಂದು ಇದರ ತಾತ್ಪರ್ಯ.

ಇಲ್ಲಿ ನಿಷೇಧಾರ್ಥಕವಾದ ನಕಾರವನ್ನು ಸಮಾಸಮಾಡದೆ ಸ್ವತಂತ್ರವಾಗಿ ಬಳಸಿರುವುದು ಉಚಿತವಾಗಿ 'ಅವಿಮೃಷ್ಟ ವಿಧೇಯಾಂಶ' ಎಂಬ ದೋಷಕ್ಕೆ ಪ್ರತ್ಯುದಾಹರಣೆಯಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ, ಕಾಳಿದಾಸನನ್ನೂ ಹೀಗೆ ವಿಮರ್ಶಿಸಿರುವ ಮಮ್ಮಟನು ಒಬ್ಬ ಆಲಂಕಾರಿಕನಾಗಿ ನಿಷ್ಪಕ್ಷಪಾತ ವಿಮರ್ಶಕನಾಗಿದ್ದಾನೆ.

Scanned by CamScanner

ಪ್ರಸ್ತುತ ಲೇಖನವು ಕಾರಿಕೆ ಮತ್ತು ವೃತ್ತಿಗಳಿಂದ ಕೂಡಿದ ಪ್ರಾಚೀನ ಭಾರತೀಯ ಸಂಪ್ರದಾಯದ ಪ್ರದರ್ಶಕ ಪ್ರಯತ್ನ. ಕಂದ-ಶ್ಲೋಕಗಳಲ್ಲಿರುವ ಕಾರಿಕೆ/ಪರಿಕರ ಶ್ಲೋಕಗಳು ಹಳಗನ್ನಡವಾದರೆ, ವೃತ್ತಿ ಹೊಸಗನ್ನಡದ್ದು. ಕಳೆದುಹೋದ ಪರಂಪರೆಯ ಪುನರ್ನಿರೂಪಣವೇ ಈ ಬಗೆಯ ವಿನ್ಯಾಸಕ್ಕೆ ಕಾರಣ.

ಕವಿಯ ಕರ್ಮವೇ ಕಾವ್ಯವೆಂಬ ವಿಶಾಲಾರ್ಥದಲ್ಲಿಯೇ ಭಾರತೀಯ ಸಾಹಿತ್ಯಪರಂಪರೆ ಬೆಳೆದುಬಂದಿದೆ. ಗದ್ಯ-ಪದ್ಯಮಯವಾಗಿಯೂ, ಶ್ರವ್ಯ–ದೃಶ್ಯಮಯವಾಗಿಯೂ, ಮಿಶ್ರ ಮಾರ್ಗದಲ್ಲಿಯೂ, ಸಂಕೀರ್ಣ ರೀತಿಯಲ್ಲಿಯೂ ಸೃಷ್ಟಿಯಾದ ಸಮಸ್ತವಾಙ್ಮಯವು ಮೂಲಭೂತವಾಗಿ ಶಬ್ದಾರ್ಥಗಳ ಸಹಿತತೆಯಿಂದ ಆದದ್ದು.[1] ಈ ಬಗೆಯ ಸಹಿತತೆಯನ್ನು ಕುರಿತದ್ದೇ ಸಾಹಿತ್ಯ ಅಥವಾ ಕಾವ್ಯಮೀಮಾಂಸಾಶಾಸ್ತ್ರವೆಂದು ಚಿರಂತನಾಭಿಪ್ರಾಯ.[2] ಮತ್ತೊಂದು ರೀತಿಯಿಂದ ನೋಡಿದರೆ ಈ ಬಗೆಯ ಸಹಿತತೆಯೇ (ಅರ್ಥತಃ ಸಹಿತವೆಂಬ ಭಾವವೇ) ಕಾವ್ಯವಾದುದರಿಂದ ಸಾಹಿತ್ಯವೆಂದರ ವಿಶಿಷ್ಟಾರ್ಥದಲ್ಲಿ ದಶವಿಧಸಹಿತತೆಯಿರುವ ವಾಙ್ಮಯವೆಂದು ಡಿ.ವಿ.ಜಿ. ಯವರ ಅಭಿಪ್ರಾಯ.[3] ಇವುಗಳು ಹೇಗೇ ಇರಲಿ, ಶಬ್ದಾರ್ಥಗಳ ವಿಶಿಷ್ಟಸಂಯೋಗವೇ ಕಾವ್ಯವೆಂದು ಸಾಮಾನ್ಯ ತಾತ್ಪರ್ಯ. ಇದನ್ನು ಮತ್ತೂ ಸೂಕ್ಷ್ಮವಾಗಿ ವಿಮರ್ಶಿಸಿದರೆ ಅರ್ಥವು ವಾಚ್ಯವಲ್ಲದೆ ಸದಾ ಅಭಿಪ್ರೇತವೂ ವ್ಯಂಗ್ಯವೂ ಆದಕಾರಣ ರಮಣೀಯಾರ್ಥಪ್ರತಿಪಾದಕ ಶಬ್ದವೇ ಕಾವ್ಯವೆಂಬ ಲಕ್ಷಣ ಸ್ಫುರಿಸುವುದಕ್ಕೆ ಯಾವ ವಿಪ್ರತಿಪತ್ತಿಯೂ ಇಲ್ಲ. ತತ್ತ್ವತಃ ಶಬ್ದಾರ್ಥಗಳು ಅಭಿನ್ನವಾದರೂ ಲಾಕ್ಷಣಿಕ ಸೌಕರ್ಯಕ್ಕಾಗಿ ಅವುಗಳ ಪಾರ್ಥಕ್ಯವೆಂದು ಹೇಳಬಹುದು. ಈ ಎಲ್ಲ ವಿಚಾರಗಳಲ್ಲಿಯೂ ಶಬ್ದಾರ್ಥಗಳನ್ನು ಕೇವಲ **'Word and Meaning'** ಎಂಬ ಸಂಕುಚಿತಾರ್ಥದಲ್ಲಲ್ಲದೆ **'Form and Content'** ಎಂಬ ವಿಶಾಲಾರ್ಥದಲ್ಲಿಯೂ ಗ್ರಹಿಸಬೇಕೆಂಬುದು ಈಗಾಗಲೇ ವಿದಿತ ವಿಚಾರ.[4]

ಪ್ರಕೃತ ಪ್ರಬಂಧದಲ್ಲಿ ಈ ಬಗೆಯ ವಿಶಾಲಾರ್ಥವನ್ನೂ, ಕಾವ್ಯಲಕ್ಷಣವನ್ನೂ ಮನಸ್ಸಿನಲ್ಲಿರಿಸಿಕೊಂಡು ಶಬ್ದಾರ್ಥಗಳ ವಿಶಿಷ್ಟೋಪಬೃಂಹಿತವಿಚಾರವಾಗಿ ವರ್ಣನೀತಿನೃತ್ತಗಳನ್ನು ವಿವೇಚಿಸಲಾಗಿದೆ :

... ಘಟನಾಸಮುಚ್ಚಯಃ ;
ಅರ್ಥಾತ್ ವಸ್ತುವಿನ ವಿಶಿಷ್ಟ ಸಂನಿವೇಶ ವಿನ್ಯಾಸವೇ ಇತಿವೃತ್ತ. ಇದನ್ನು **Plot** ಎನ್ನ ಬಹುದು). ಅಂತೆಯೇ ಕಾವ್ಯದಲ್ಲಿ ವರ್ಣನೆ ಮತ್ತು ಇತಿವೃತ್ತಗಳ ಪಾಕವಿರುತ್ತದೆ. (ಈ ಸಂದರ್ಭದಲ್ಲಿ ಕಾವ್ಯವೆಂದರೆ ಗದ್ಯ-ಪದ್ಯ-ಮಿಶ್ರಾತ್ಮಕವಾದ ಯಾವುದೇ 'ವಸ್ತುಕ'ವೆಂದು ಸ್ವೀಕರಿಸಬಹುದು. ವಸ್ತುತಃ ಶ್ರವ್ಯಕಾವ್ಯಗಳಲ್ಲಿ **Plot** ಅನ್ನು ವೃತ್ತವೆಂದೂ ದೃಶ್ಯಕಾವ್ಯ ಗಳಲ್ಲಿದು ಇತಿವೃತ್ತವೆಂದೂ ವಿವಕ್ಷಿತ. (ಕಾವ್ಯಮಾತ್ರಸ್ಯಾನಭಿನೇಯಸ್ಯ ತಾವದ್ವೃತ್ತ ಮಾತ್ರಂ ಶರೀರಂ, ನಟನೀಯಸ್ಯ ತ್ವಭಿನೇಯರೂಪಸ್ಯ ಇತಿ ಏವಂ ಪ್ರಕಾರತಯಾ ಯದುಪಸ್ಕೃತಂ ವೃತ್ತಂ, ಅತ ಏವೇತಿ ವೃತ್ತಶಬ್ದವಾಚ್ಯಂ ತದ್ವಸ್ತುಶರೀರಂ...... 'ಅಭಿನವಭಾರತೀ.'. **IXX-1** ವ್ಯಾಖ್ಯಾ). ಪ್ರಸ್ತುತ ಕೇವಲ ವೃತ್ತವೆಂಬ ಶಬ್ದವು ಈ ಅರ್ಥದಲ್ಲಿ ಅಪ್ರಸಿದ್ಧವೂ ಛಂದೋವಿಶೇಷವೆಂಬ ಅನ್ವರ್ಥಪ್ರಚುರವೂ ಆದ ಕಾರಣ. ಇಲ್ಲಿ 'ಇತಿವೃತ್ತ'ವನ್ನು ಶ್ರವ್ಯಕಾವ್ಯಕ್ಕೂ ಅನ್ವಯಿಸಲಾಗಿದೆ).

ಈ ಕಾರಿಕೆಯಲ್ಲಿ ಗಮನಿಸಬೇಕಾದ ಮತ್ತೆರಡು ಅಂಶಗಳು ಹೃದ್ಭಾವ ಮತ್ತು ಚಿದ್ಭಾವಗಳ ಪರಿಧಿಗೆ ಬರುವ, ಹಾಗೂ ಉಕ್ತಿವಕ್ರತೆ ಮತ್ತು ವಸ್ತುವಕ್ರತೆಗಳ ವಿವೇಚನೆಗೆ ಒಳಗಾಗುವ ವರ್ಣನೇತಿವೃತ್ತ ಮೀಮಾಂಸೆಯಾಗಿವೆ. ಇವುಗಳನ್ನು ವಿಶದವಾಗಿ ಚರ್ಚಿಸಿದ ಹೊರತು ನಿಚ್ಚಳವಾದ ಕಲ್ಪನೆಯನ್ನು ತರಲಸಾಧ್ಯವಾದರೂ, ಸದ್ಯದಲ್ಲಿ ಸಂಕ್ಷೇಪಿಸಿ ಹೀಗೆನ್ನಬಹುದು :

ವರ್ಣನೆಯು ಹೆಚ್ಚಾಗಿ ಅಲೋಕಸಾಮಾನ್ಯವಾದ ಅಭಿವ್ಯಕ್ತಿ. ಇದರಲ್ಲಿ ಕಲ್ಪಕಶಕ್ತಿ (**Fancy**) ಜತೆಗೂಡಿ ಅರ್ಥಾಲಂಕಾರಗಳನ್ನುಂಟುಮಾಡುತ್ತದೆ. ಉಕ್ತಿವೈಚಿತ್ರ್ಯವು ಮುಖ್ಯವಾಗಿ ವರ್ಣನೆಯೇ. ಅಂತೆಯೇ ಇದು ಶುಷ್ಕವಾದ ಬುದ್ಧಿವ್ಯಾಪಾರವನ್ನು ಬಿದು ಮುಖ್ಯವಾಗಿ ವರ್ಣನೆಯೇ. ಅಂತೆಯೇ ಇದು ಶುಷ್ಕವಾದ ಬುದ್ಧಿವ್ಯಾಪಾರವನ್ನು ಬಿಡು ಹೃದಯಸಂವಾದಕ್ಕೆ ... ಒತ್ತು ಕೊಡುತ್ತದೆ. ಹೀಗಾಗಿ ಇದರ ಕೆಲವಟ್ಟಿಗೆ ಇತಿ

ಕವಿಯನ್ನು ಕುರಿತು ಹೇಳುವಾಗ 'ವರ್ಣನಾನಿಪುಣಃ ಕವಿಃ' ಎನ್ನಿಸುತ್ತಾನೆ. (ಇಂಥ ವರ್ಣನೆಯ ಜೀವಾತುವು ಪ್ರತಿಭೆಯೆಂದೂ, ಆ ಪ್ರತಿಭೆಯು ನವನವೋನ್ಮೇಷ ಶಾಲಿನಿಯಾದ ಪ್ರಜ್ಞೆಯೆಂದೂ ಅಲ್ಲಿಯೇ ತಿಳಿಸುವಾಗ 'ಪ್ರಜ್ಞಾ ತ್ರೈಕಾಲಿಕೀ ಮತಾ' ಎಂಬ ಕಾವ್ಯಪ್ರಕಾಶಸಂಪ್ರದಾಯ ಪ್ರಕಾಶಿಸಿಯ ಪ್ರಕಾರ ಪ್ರಜ್ಞೆಯ ಚಿದ್ವ್ಯಾಪ ವಿವಕ್ಷಿತವೇ ಆದರೂ ಸದ್ಯದಲ್ಲಿ ವರ್ಣನೆಯನ್ನು ಪ್ರಧಾನವಾಗಿ ಹೃದಯವ್ಯಾಪಾರವೆನ್ನಬಹುದು. ವರ್ಣನೆಯಲ್ಲಿ ಬೌದ್ಧಿಕಾಂಶ ಬಲಿತಾಗ ಅದು 'ಚಿತ್ರ' 'ದುಷ್ಕರ' ಎಂದು ದುಷ್ಟವೆನಿಸುವುದಲ್ಲದೆ ಪ್ರಹೇಲಿಕಾಪ್ರಾಯವೆಂಬ ನಿಂದೆಗೂ ಒಳಗಾಗುತ್ತದೆ. ಇಂಥ ವರ್ಣನೆಗಳ ಕಾರ್ತಕ್ಯವನ್ನು ಮನಗಂಡಾಗ ಅಷ್ಟಾದಶ ವರ್ಣನಾದಿ ಸ್ವಾರಸ್ಯಭೂಮಿಗಳೂ ಹೇಗೆ ಬರಡಾದುವೆಂದು ತಿಳಿಯದಿರದು). ಇಷ್ಟೇ ಅಲ್ಲದೆ,

> ನಾನೃಷಿಃ ಕವಿರಿತ್ಯುಕ್ತಂ ಋಷಿಶ್ಚ ಕಿಲ ದರ್ಶನಾತ್ ।
> ವಿಚಿತ್ರಭಾವಧರ್ಮಾಂಶ ತತ್ತ್ವಪ್ರಖ್ಯಾ ಚ ದರ್ಶನಂ ॥
>
> ಸ ತತ್ತ್ವದರ್ಶನಾದೇವ ಶಾಸ್ತ್ರೇಷು ಪಠಿತಃ ಕವಿಃ ।
> ದರ್ಶನಾದ್ವರ್ಣನಾಚ್ಚಾಥ ರೂಢಾ ಲೋಕೇ ಕವಿಶ್ರುತಿಃ ॥
>
> ತಥಾಹಿ ದರ್ಶನೇ ಸ್ವಚ್ಛೇ ನಿತ್ಯೇಽಪ್ಯಾದಿಕವೇರ್ಮುನೇಃ ।
> ನೋದಿತಾ ಕವಿತಾ ಲೋಕೇ ಯಾವಜ್ಜಾತಾ ನ ವರ್ಣನಾ ॥

ಇಲ್ಲಿ 'ದರ್ಶನ'ವನ್ನೇ 'ಅರ್ಥ'ವೆಂದೂ (ಅರ್ಥವು ರಸಾದಿಗಳೆಂದು ವಿಖ್ಯಾತ. ಇದೇ 'ವಿಚಿತ್ರಭಾವಧರ್ಮಾಂಶ ತತ್ತ್ವಪ್ರಖ್ಯೆ') 'ವರ್ಣನೆ'ಯನ್ನೇ 'ಶಬ್ದ'ವೆಂದೂ ಸುಲಭವಾಗಿ ಮನದಟ್ಟು ಮಾಡಿಕೊಂಡಾಗ, ಇಡಿಯ ಕಾವ್ಯದ, ಕವಿ-ಸಹೃದಯ ಸಂಬಂಧದ ಸಮಗ್ರ ಸ್ವರೂಪ ತಿಳಿಯದಿರದು. ಹೀಗೆ ಹೇಳುವಾಗ ವರ್ಣನೆ ಹೊರಬಾರದ ಹೊರತು ಲೋಕದಲ್ಲಿ ಕವಿ–ಕವಿತೆಗಳ ಅಭಿಜ್ಞಾನವಿಲ್ಲವೆಂಬುದು ಗಮನಾರ್ಹ (ಎಂಥ ವಸ್ತು ಇತಿವೃತ್ತಗಳೂ ವರ್ಣನಾಪುಷ್ಟವಾಗಿ ಬಂದ ಹೊರತು ಕಾವ್ಯವೆನಿಸಲಾರವು) ಇದಲ್ಲದೆ 'ಕವೃ ವರ್ಣೇ' ಎಂಬ ಧಾತುಪಾಠದಿಂದಲೂ 'ಕವಿ' ಎಂಬ ಶಬ್ದವು ವರ್ಣನೆಗೇ ಸಂಬಂಧಿಸಿದ್ದೆನ್ನಬಹುದು. ಇನ್ನು ಇತಿವೃತ್ತವಾದರೋ ಹೆಚ್ಚಾಗಿ ಬುದ್ಧಿಗ್ರಾಹ್ಯವಾದದ್ದು, ಅಂತೆಯೇ ಕೆಲವೊಮ್ಮೆ ಸ್ಥೂಲವೂ ಹೌದು. ಆದುದರಿಂದಲೇ ಇದನ್ನು ಶರೀರವೆಂದೂ ಹೇಳುತ್ತಾರೆ. ಇದರ ಬೌದ್ಧಿಕಸ್ವರೂಪವೇ ಇದಕ್ಕೆ ಚಿಾಚಿತ್ಯವನ್ನಿತ್ತಿದೆಯೆಂದರೂ ತಪ್ಪಾಗಲಾರದು. ಕಥಾಸಂವಿಧಾನ—ಘಟನಾವಿನ್ಯಾಸವು ಪ್ರಧಾನವಾದ ಇತಿವೃತ್ತವನ್ನು ನಾಟ್ಯಕ್ಕೆ ನಮ್ಮ ಲಾಕ್ಷಣಿಕರು ಹೆಚ್ಚಾಗಿ ಅನ್ವಯಿಸಿದ್ದುದಕ್ಕೆ ಕಾರಣವಿಲ್ಲದಿಲ್ಲ. ಆದರೆ ಆನಂದವರ್ಧನಾದಿಗಳಿಂದ ಪುನರುಜ್ಜೀವನಗೊಂಡ ಕಾವ್ಯ-ನಾಟಕ ಮೂಲಭೂತವಿಮರ್ಶೆಯನ್ನವಲಂಬಿಸಿ ಈಗ ಸಮರ್ಥವಾಗಿ ಇತಿವೃತ್ತದ ವಿಶೇಷಗಳನ್ನು ಎಲ್ಲ ಕವಿಕರ್ಮದಲ್ಲೂ ಅಳವಡಿಸಬಹುದು. ಈ ಮೂಲಭೂತಪ್ರಜ್ಞೆ ಎಂದೂ ನಮ್ಮ ಲಾಕ್ಷಣಿಕರಿಂದ ವಿಸ್ಮೃತವಾಗಿಲ್ಲವೆನ್ನುವುದಕ್ಕೆ ಭಾಮಹಾದಿಗಳು ಮಹಾಕಾವ್ಯಲಕ್ಷಣಾವಸರದಲ್ಲಿ ಪಂಚಸಂಧಿಗಳನ್ನು

ಪ್ರಸ್ತಾವಿಸುವುದೇ ಸಾಕ್ಷಿ. ಪ್ರಸ್ತುತ ನಾಟ್ಯಶಾಸ್ತ್ರದಲ್ಲಿ ಬರುವ ಇತಿವೃತ್ತ ವಿಚಾರವನ್ನು ಗಮನಿಸೋಣ :

ಇತಿವೃತ್ತಂ ತು ನಾಟ್ಯಸ್ಯ ಶರೀರಂ ಪರಿಕೀರ್ತಿತಂ ।
ಪಂಚಭಿಸ್ಸಂಧಿಭಿಸ್ತಸ್ಯ ವಿಭಾಗಃ ಸಂಪ್ರಕಲ್ಪಿತಃ ॥ (IXX-I)

ಇದನ್ನು ವಿವರಿಸುತ್ತಾ ಅಭಿನವಗುಪ್ತರು ''ಇತಿವೃತ್ತಶಬ್ದವಾಚ್ಯಂ ತದ್ವಸ್ತು ಶರೀರಂ. ರಸಾಃ ಪುನರಾತ್ಮಾ ಶರೀರಾವಿರ್ಭಾವಕಾಃ ಅತ ಏವಾರ್ಥ ನಿರ್ಮಾಪಕತ್ವಾತ್. ಅರ್ಥತಾದಾತ್ಮ್ಯಾತ್. ಅರ್ಥರೂಪತಾಧ್ಯಾಸಾತ್. ಅರ್ಥಜ್ಞಾನ ನಿವೇಶಿತತ್ವಾತ್. ಅರ್ಥೋಪರಂಜಕತ್ವಾತ್. ಅರ್ಥನಿಮಿತ್ತಾತ್ ವಾ ಇತಿವೃತ್ತಾರ್ಥೈಕ ಯೋಗಕ್ಷೇಮತ್ವಂ ವಾಗಾತ್ಮನಾ ಶಬ್ದಾನಾಮಿತಿ" ಎನ್ನುವಾಗ ಇತಿವೃತ್ತದ 'ಅರ್ಥಸ್ವರೂಪ'ವೂ 'ಅರ್ಥಾಶ್ರಯ'ವೂ. 'ಅರ್ಥಾಧ್ಯಾಸ'ವೂ ಸ್ಪಷ್ಟವಾಗುತ್ತದೆ. ಇದರೊಟ್ಟಿಗೆ ಅಭಿನವಗುಪ್ತರೇ ಪುನಃ ''ವಾಚಿ ಯತ್ನಸ್ತು ಕರ್ತವ್ಯೋ ನಾಟ್ಯಸ್ಯೈಷಾ ತನುಃ ಸ್ಮೃತಾ॥'' (XIV-2) ಎಂಬ ಭರತೋಕ್ತಿಯನ್ನು ವ್ಯಾಖ್ಯಾನಿಸುತ್ತಾ ''ಇತಿ ಪೂರ್ವಮುಕ್ತಂ. ಇಹ ವೃತ್ತಂ ಶರೀರಮಿತಿ ದರ್ಶಿತಮಿತ್ಯವಿರೋಧಃ । ಸ ತು ಕಥಂ ಪ್ರಕಾರವೈಚಿತ್ರ್ಯೇ ಇತ್ಯಾಶಂಕ್ಯಾಹ ಪಂಚಸಂಧಿಭಿರಿತಿ'' ಎಂದು ಪುನಃ ಖಚಿತಪಡಿಸುತ್ತಾರೆ.

ಇದಲ್ಲದೆ ಇತಿವೃತ್ತವನ್ನು ಬೌದ್ಧಿಕ ಅಥವಾ ಚಿದ್ಭಾವವೆನ್ನುವುದಕ್ಕೆ ಕಾರಣ ಅದರ ಸ್ವರೂಪವನ್ನು ಸಂಕ್ಷೇಪಿಸಿಯಾಗಲಿ, ವರ್ಧಿಸಿಯಾಗಲಿ, ಯಾವುದೇ ಮಾತಿನಿಂದ ಕಥಿಸಬಹುದು (ಇದು ಕೇವಲ ಇತಿವೃತ್ತವಿವರಣಾವಸರದಲ್ಲಿ ಮಾತ್ರ. ಅಂದರೆ ಉದಾಹರಣೆಗೆ ಶಾಕುಂತಲದ ಇತಿವೃತ್ತವನ್ನು ತೋರಿದ ಮಾತಿನಲ್ಲಿ ಹೇಳಿದರೂ ಅದರ ವಸ್ತುವಿನ್ಯಾಸ ಮಹತ್ತ್ವ ತಿಳಿಯುತ್ತದೆ.). ಆದರೆ ವರ್ಣನೆ ಹಾಗಲ್ಲ. ಅದನ್ನು ಅನ್ಯವಾಕ್ಯಕಾರದಿಂದ ತಿಳಿಸಿದಲ್ಲಿ ಅದರ ಅಭಿಪ್ರಾಯವೇ ಬೇರೆಯಾಗುತ್ತದೆ. ಇವುಗಳನ್ನು ಪರಿಭಾವಿಸಿದಾಗ ಭೋಜನು ತಿಳಿಸುವ ಶಬ್ದರಸ–ಅರ್ಥರಸಗಳು ವಸ್ತುತಃ ವರ್ಣನೆ ಮತ್ತು ಇತಿವೃತ್ತದ ಸ್ವಾರಸ್ಯವನ್ನು ಕುರಿತಂತೆಯೂ ವಿಶಾಲಾರ್ಥದಲ್ಲಿ ಪ್ರತೀಯಮಾನವಾಗಬಹುದೆಂದೂ ಅನಿಸದಿರದು. ಇನ್ನೂ ಇದಂತೆ ಉಕ್ತಿವಕ್ರತೆ ಮತ್ತು ವಸ್ತುವಕ್ರತೆಗಳನ್ನು ಗಮನಿಸಬಹುದು. ಕುಂತಕನು ವಾಚ್ಯವಾಗಿ ತನ್ನ ವಕ್ರೋಕ್ತಿಜೀವಿತದಲ್ಲಿ ಈ ಎರಡು ಪ್ರಕಾರಗಳನ್ನು ಹೇಳದಿದ್ದರೂ ಪದವಕ್ರತೆ, ವಾಕ್ಯವಕ್ರತೆ ಮೊದಲಾದುವುಗಳೆಲ್ಲವೂ ಉಕ್ತಿವಕ್ರತೆಗೇ ಬಂದು ಸೇರುತ್ತವೆ. ವಸ್ತುತಃ ವಕ್ರೋಕ್ತಿಯೇ ಇದು. ಇನ್ನು ವಸ್ತುವಕ್ರತೆಯನ್ನು ಇತಿವೃತ್ತದಲ್ಲಿ ಅಂತರ್ಗತವಾಗುವ ಪ್ರಕರಣ ವಕ್ರತೆ, ಪ್ರಬಂಧ ವಕ್ರತೆಗಳಲ್ಲಿ ಕಾಣಬಹುದು. ಇವುಗಳ ವಿವರಣೆ ಮುಂದೆ ಬರಲಿದೆ. ಸದ್ಯಕ್ಕೆ ಕಾವ್ಯವೊಂದರ ಹೃದ್ಭಾವ–ಚಿದ್ಭಾವಗಳು ಶಬ್ದಾರ್ಥಗಳನ್ನು ಆಶ್ರಯಿಸಿದ ಉಕ್ತಿ-ವಸ್ತುವಕ್ರತಾ ಪರಿಸ್ಪಂದ ಸುಂದರ ಸಂದರ್ಭಗಳಾಗಿ ವರ್ಣನೆ-ಇತಿವೃತ್ತಗಳಲ್ಲಿ ಪರ್ಯವಸಿಸುತ್ತವೆನ್ನಬಹುದು.

ಕಾರ್ಯಕಾರಣ ಸಂಬಂಧಪ್ರಬುದ್ಧಂ ವೃತ್ತಮೊಪ್ಪುಗುಂ
ಧಾರ್ಯಂ ವರ್ಣನೆ ತಾನಕ್ಕುಂ ಚಮತ್ಕಲ್ಪನೆಯೊಳ್ಪಿನಿಂ ॥೨॥

ಇತಿವೃತ್ತವು ಬೌದ್ಧಿಕವಾದ ಕಾರಣ ಕಾರ್ಯಕಾರಣಸಂಬಂಧಗಳಿಂದಲೇ, ಘಟನೆಗಳ ಪರಸ್ಪರ ಸಂಭಾವ್ಯ ಸೌಷ್ಠವದಿಂದಲೇ ಮೈದಾಳುತ್ತದೆ. ಆದರೆ ಇಲ್ಲಿ ವಕ್ರತೆಯಿಲ್ಲದಿದ್ದಲ್ಲಿ ರುಚಿಯಿರುವುದಿಲ್ಲ. ಈ ವಿಚಾರವನ್ನು ವಾಮನನು 'ದಂಡನೀತೇರ್ನಯಾಪನಯಯೋಃ' ಮತ್ತು 'ಇತಿವೃತ್ತಕುಟಿಲತ್ವಂ ಚ ತತಃ' ಎಂಬ ಸೂತ್ರಗಳಲ್ಲಿ (ಕಾವ್ಯಾಲಂಕಾರಸೂತ್ರ ವೃತ್ತಿ I-೩-೯,೧೦) ಹೇಳುವಾಗ ಇದೇ ಆಶಯವನ್ನು ಹೊಂದಿದ್ದಾನೆ. ಕುಂತಕನೂ ಸಹ ವಕ್ರೋಕ್ತಿಜೀವಿತದಲ್ಲಿ (IV-೯) ಜಲಕ್ರೀಡಾದಿ ವರ್ಣನೆಗಳು ಕಥೋಪಯೋಗಿ ಯಾಗಬೇಕೆನ್ನುತ್ತಾ ರಘುವಂಶದ ಹದಿನಾರನೆಯ ಸರ್ಗವನ್ನು ಉಲ್ಲೇಖಿಸುವಾಗ ಆತನು ಕೇವಲ ವರ್ಣನಾಸ್ಪದ ಕಥಾನಕಕ್ಕಿಂತ ವಕ್ರಮಾರ್ಗವಿಶಿಷ್ಟ ಕಥಾನಕವನ್ನೂ ತತ್ಪರಿ ಪೋಷಕ ವರ್ಣನೆಯನ್ನೂ ಮೆಚ್ಚಿದ್ದನೆಂದು ತಿಳಿಯುತ್ತದೆ. ವಾಮನನ ವ್ಯಾಖ್ಯಾತೃ ವೇಮಭೂಪಾಲನು ಈ ಮುನ್ನ ಉದಾಹರಿಸಿದ ಸೂತ್ರಗಳನ್ನು ವಿವರಿಸುವಾಗ "ಇತಿ ಹಾಸಾದಿರಿತಿವೃತ್ತಂ । ಕಾವ್ಯಶರೀರಂ ತಸ್ಯ ಕುಟಿಲತ್ವಂ" ಎನ್ನುವ ಮಾತೂ ಕಾವ್ಯಶರೀರ ವಾದ ಕಥಾವಿಸ್ತರದ ವೈದಗ್ಧ್ಯವನ್ನು ವ್ಯಂಜಿಸುತ್ತದೆ.

ಕಾವ್ಯಶರೀರವು ಇತಿವೃತ್ತವೆಂದು ಭರತ-ವಾಮನಾದ್ಯರಿಂದ ಅಂಗೀಕೃತವಾದ ರೂಪಕ ವನ್ನೇ ಮುಂದುವರಿಸಿದರೆ ಕಾವ್ಯಶರೀರದ ಸೌಂದರ್ಯವೇ ಅಲಂಕಾರವೆಂದೂ (ಈ ಸೌಂದರ್ಯವು ಕೇವಲ ಶರೀರಮಾತ್ರ ವಿಶ್ರಾಂತವಲ್ಲವೆಂದು ವಿಸ್ತರಿಸಿದಾಗ ರಸಾದಿಯೂ ಅಲಂಕಾರವೇ ಆಗಬಹುದು. ಆದರೆ ಈ ವಾದದಲ್ಲಿ ಕಾವ್ಯಾತ್ಮವಾದ ರಸಾದಿಯನ್ನು ಗುಣಿಯೆಂದಾಗಲಿ, ನಿರ್ಗುಣಿಯೆಂದಾಗಲಿ ವಿವಿಧ ದರ್ಶನಾನುಸಾರವಾಗಿ ಭಾವಿಸಿದಾಗ ತೊಡಕು ಬರುತ್ತದೆ. ಸೌಂದರ್ಯವೊಂದು ವರೌಲ್ಯ-ಗುಣವಾದ ಕಾರಣ ಅದು ವಾಚಕ ವಾಗುವುದೇ ಎಂಬ ಸಂದೇಹ. ಪ್ರಸ್ತುತ ಈ ಚರ್ಚೆಯನ್ನು ಬದಿಗಿರಿಸಿ ಅಲಂಕಾರವನ್ನು ವಾಗ್ವಿಕಲ್ಪವೆಂದು ಭಾವಿಸಿ ಮುಂದುವರಿಯಬಹುದು) ಅಲಂಕಾರಗಳು ಕಾವ್ಯಶರೀರ ಶೋಭಾಕರ ಧರ್ಮ (ಕಾವ್ಯಾದರ್ಶ II-೧)ಗಳೆಂದೂ ತಿಳಿಯುತ್ತದೆ. ಆದುದರಿಂದಲೇ ಅಲಂಕಾರಗಳು ಧಾರ್ಯವೆಂದು ಸ್ಥೂಲವಾಗಿ ಹೇಳಬಹುದು. ಅಲಂಕಾರವಾದರೋ ವರ್ಣನಾಶ್ರಿತ. ಅಲಂಕಾರಗಳು ಅಲಂಕಾರಗಳೆನಿಸುವುದು ಅವುಗಳ ಕಲ್ಪನೆಯ ಚಮತ್ಕಾರ ದಿಂದಲೇ. ಇತಿವೃತ್ತದ ಬೇಡಿಕೆಯನ್ನನುಸರಿಸಿ, ರಮಣೀಯತೆಯಿಂದ ಕೂಡಿ, ಔಚಿತ್ಯ ಪರಿಧಿಯಲ್ಲಿ ನಿರ್ಮಿಸಿದ ವೈದಗ್ಧ್ಯಭಂಗೀ ಭಣಿತಿಯೇ ಅಲಂಕಾರ. ಇದಿಲ್ಲದೆ ಎಲ್ಲ ಅಲಂಕೃತಿ ಯತ್ನವೂ ವಿಕೃತಿಯೇ. ಇದೇ ಧ್ವನಿಕಾರನ ಮತ.

> ರಸಭಾವಾದಿತಾತ್ಪರ್ಯಮಾಶ್ರಿತ್ಯ ವಿನಿವೇಶನಂ ।
> ಅಲಂಕೃತೀನಾಂ ಸರ್ವಾಸಾಮಲಂಕಾರತ್ವಸಾಧನಂ ॥ (ಧ್ವನ್ಯಾ. II-೫)

ಲೋಕೋತ್ತರಾಹ್ಲಾದಜನಕತ್ವವೇ ಚಮತ್ಕಾರ. ಇದು ಜಗನ್ನಾಥ, ವಿಶ್ವೇಶ್ವರಾದ್ಯ ರಿಗೂ ಸಂಮತವಾದದ್ದು. ಒಟ್ಟಿನಲ್ಲಿ ವರ್ಣನೇತಿವೃತ್ತಗಳು ಪರಸ್ಪರ ಅನುರೂಪ ವಾಗಿರಬೇಕು.

ಇತಿವೃತ್ತಮಲಂಕಾರ್ಯಂ
ಹಿತವರ್ಣನೆ ತಾನಲಂಕೃತಿಯೆನಲ್ಕುಭಯಂ
ಸ್ಮೃತಲೋಕನಾಟ್ಯಧರ್ಮಾ
ವೃತಮುಂ ವಕ್ರ-ಸ್ವಭಾವ ವಿವೃತಿಸಮುಚಿತಂ ॥೩॥

ಆದುದರಿಂದಲೇ ಇತಿವೃತ್ತವು ಅಲಂಕಾರ್ಯ ; ವರ್ಣನೆ ಅಲಂಕಾರ. (ಪಂಚಸಂಧೀತ್ಯಾದಿಗಳ ಇತಿವೃತ್ತವಿಸ್ತರವನ್ನೂ, ನಾನಾ ಸಂಚಾರಿ-ಸಾತ್ತ್ವಿಕಭಾವ ನಿರೂಪಕ ವರ್ಣನ ವಿಲಾಸವನ್ನೂ ರೂಪಕಗಳಲ್ಲಿ ಗಮನಿಸಿದಾಗ ಈ ತಥ್ಯ ಮತ್ತಷ್ಟು ಸ್ಪಷ್ಟ). ಭರತ ಮುನಿಯು ತಿಳಿಸುವ ನಾಟ್ಯಧರ್ಮಿ ಮತ್ತು ಲೋಕಧರ್ಮಿಗಳನ್ನೂ ಇಲ್ಲಿ ಗಮನಿಸಿ ಹೊಂದಿಸಬಹುದು. ಲೋಕಕ್ಕೆ ಸಮೀಪವಾದ, ಕಾರ್ಯಕಾರಣ ಭಾವಬದ್ಧವೂ ನೈಸರ್ಗಿಕವೂ ಆದದ್ದು ಲೋಕಧರ್ಮಿಯಾದರೆ ಲೋಕೋತ್ತರವೂ ಕಲ್ಪನಾಶಿಲ್ಪಿತವೂ ಪರಿಷ್ಕೃತಿಸಂಸ್ಕೃತವೂ ಆದದ್ದು ನಾಟ್ಯಧರ್ಮಿ. (ಲೋಕಧರ್ಮಿಯನ್ನು **Casual mannerisms** ಎಂದೂ ನಾಟ್ಯಧರ್ಮಿಯನ್ನು **Stylised mannerisms** ಎಂದೂ ಆಂಗ್ಲ ರಂಗಪರಿಭಾಷೆಯಲ್ಲಿ ಹೇಳಬಹುದು). ಆದರೆ ಉಭಯತ್ರ ಅನ್ಯೋನ್ಯ ಸಾದೃಶ್ಯಾಂಶಗಳು ಅಲ್ಪಸ್ವಲ್ಪ ಇರುವುದನ್ನು ಮರೆಯಲಾಗದು. ಇಲ್ಲಿ ಪುನಃ ಲೋಕಧರ್ಮಿಯ ಸ್ವಭಾವೋಕ್ತಿ ವಿಶೇಷತೆಯನ್ನೂ ನಾಟ್ಯಧರ್ಮಿಯ ವಕ್ರೋಕ್ತಿವಿಶೇಷತೆಯನ್ನೂ ಮನಗಾಣಬೇಕು. ವಸ್ತುತಃ ಲೋಕಧರ್ಮಿಯಾಗಲಿ ನಾಟ್ಯಧರ್ಮಿಯಾಗಲಿ ಲೋಕಕ್ಕಿಂತ ಭಿನ್ನವೇ. ಎಂಥ ಲೋಕಧರ್ಮಿಯೂ ಲೋಕದ ಯಥಾತಥಾ ಪ್ರದರ್ಶನವಲ್ಲ : ಅದು ಯಥಾವತ್‌ಪ್ರದರ್ಶನವಷ್ಟೆ (ಹಾಗೆಯೇ 'ಎಂಬಂಥ' ಪ್ರದರ್ಶನ). ಆದುದರಿಂದಲೇ ಲೋಕಧರ್ಮಿಯ ಪ್ರಕಾರ 'ಅವಸ್ಥಾನುಕೃತಿರ್ನಾಟ್ಯಂ' ಎಂಬ ಧನಂಜಯೋಕ್ತಿ ಸಲ್ಲುತ್ತದೆ. 'ಅನುಕರಣ'ವು ಲೋಕಧರ್ಮಿಯಾದರೆ, ನಾಟ್ಯಧರ್ಮಿ 'ಅನುಕೀರ್ತನ.' (ತ್ರೈಲೋಕ್ಯಸ್ಯ ಸರ್ವಸ್ಯ ನಾಟ್ಯಂ ಭಾವಾನುಕೀರ್ತನಂ—ಭರತ) ಆದುದರಿಂದಲೇ ಉಭಯತ್ರ ಲೋಕದಲ್ಲಿ ಕಾಣದ ಸೊಗಸಿರುವುದು. ಉದಾಹರಣೆಗೆ ಹೇಳುವುದಾದರೆ, ಶಾಕುಂತಲದ ಇತಿವೃತ್ತವು ಲೋಕಧರ್ಮಿಯೆಂದರೆ ಶಾಪಪ್ರಸಂಗ. ಆಶ್ರಮದ ವನದೇವತೆಗಳಿಂದ ಅಲಂಕಾರಪ್ರದಾನವೇ ಮೊದಲಾದ ಪ್ರಾಸಂಗಿಕ ವೃತ್ತಾಂತಗಳು ಲೋಕೇತರವಾದರೂ ಅವಸ್ಥಾನುಕೃತಿಯ ಪರಿಧಿಗೆ ಬಂದಾಗ ರಮ್ಯವಾಗುತ್ತವೆ, ವಿಶ್ವಸನೀಯವೆನಿಸುತ್ತವೆ. ಇದೇ ನಾಟ್ಯಧರ್ಮಿ. ಆದರೆ ಅಲ್ಲಿಯ ವಿವಿಧ ವರ್ಣನೆಗಳು ಮತ್ತು ತನ್ನಿರೂಪಣವು ಆ ಸಂನಿವೇಶದಲ್ಲಿ ಅನುಕೀರ್ತನೆಯೆನಿಸುತ್ತವೆ. ಒಟ್ಟಾರೆ ಹೇಳುವುದಾದರೆ ಇತಿವೃತ್ತವು ಸ್ವಭಾವ ಮತ್ತು ಅಲಂಕಾರ್ಯ ; ವರ್ಣನೆಯು ವಕ್ರ ಮತ್ತು ಅಲಂಕಾರ.

ಧೀಪಾರಮ್ಯಂ ವರ್ಣನೆ
ಗಾಪನ್ನಿಸೆ ಚಿತ್ರಮಕ್ಕುಮುಕ್ತಿ ಕೃತಕತಾ
ರೂಪಂ ; ಹೃಚ್ಛಬಲತೆ ಸಂ-
ವ್ಯಾಪಿಸೆ ವೃತ್ತಂ ವಿಚಿತ್ರಶಿಥಿಲಮದೆನಿಕುಂ ॥೪॥

ಇಲ್ಲಿ ವಿಶೇಷವಾಗಿ ಉಲ್ಲಿಖಿತಾಂಶವು ಈ ಮೊದಲೇ ಚರ್ಚೆಗೆ ಬಂದ ಕಾವ್ಯದ ಹೃದ್ಯ ಚಿದ್ಭಾವಗಳನ್ನು ಕುರಿತದ್ದಾಗಿದೆ. ಬುದ್ಧಿ ವಿಲಾಸವು ಇತಿವೃತ್ತ ನಿರೂಪಣೆಯಲ್ಲಿ ಅನುಕರಣ ರೂಪದಲ್ಲಿ ಕಲಾನ್ಯಾಯವನ್ನು ಮರೆಯದೆ ಸಾಗಬೇಕು. ಹಾರ್ದಭಾವವು ವರ್ಣನೆಗಳಲ್ಲಿ 'ಅನುಕೀರ್ತನ' ರೂಪದಿಂದ, ಅತ್ಯತಿಶಯೋಕ್ತಿ–ಅಸಂಭಾವ್ಯೋಕ್ತಿಗಳ ಎಲ್ಲೆ ಬಾರದೆ ತುಂಬಿಕೊಳ್ಳಬೇಕು. ಇದಕ್ಕೆ ಎರವಾದಲ್ಲಿ ಅತಿಬೌದ್ಧಿಕ ಕಾವ್ಯವು ದುರೂಹ್ಯವೂ ಶುಷ್ಕವೂ ಆದ ಚಿತ್ರವಾಗುತ್ತದೆ. ಅತಿಭಾವಶಬಲ ಇತಿವೃತ್ತವಿರುವ ಕೃತಿ ಶಿಥಿಲವೂ ಅಸಹಜವೂ ಪಂಕಿಲವೂ ಆಗುತ್ತದೆ. (ಪ್ರಸ್ತುತ ಕನ್ನಡ ಸಾಹಿತ್ಯದ ನವ್ಯಮಾರ್ಗವೂ ನವೋದಯ ಮಾರ್ಗವೂ ಈ ಬಗೆಯ ಅತಿಕರಣದೋಷಗಳಿಂದಾಗಿ ಹಲವೆಡೆಗಳಲ್ಲಿ ಸೋಲುತ್ತವೆಂಬುದನ್ನು ಯಾರಾದರೂ ಗಮನಿಸಿ ತಿಳಿಯಬಹುದು.) ಇಂಥ ಕಡೆಗಳಲ್ಲಿ ರಸದ ಪರಮೋಪನಿಷತ್ತಾದ ಔಚಿತ್ಯವನ್ನೇ ನೆಚ್ಚಿ ನಡೆಯಬೇಕು.

ಈ ಸಂದರ್ಭದಲ್ಲಿ ಸ್ವಭಾವಕ್ಕೂ ಸ್ವಭಾವೋಕ್ತಿಗೂ ಇರುವ ವ್ಯತ್ಯಾಸದ ಬಗೆಗೊಂದು ಮಾತು. ಕುಂತಕನ ಮತದಂತೆ ಸ್ವಭಾವೋಕ್ತಿ ಅಲಂಕಾರವಲ್ಲ. ಅದು ಅಲಂಕಾರ್ಯ. ಆದರೆ ಪ್ರಕೃತದಲ್ಲಿ ನನ್ನ ಮತ ಹೀಗಲ್ಲ. ಸ್ವಭಾವವು ಅಲಂಕಾರ್ಯ. ಆದರೆ ಸ್ವಭಾವೋಕ್ತಿಯು ಅಲಂಕಾರ. ಉಕ್ತಿವೈಚಿತ್ರ್ಯವೆಲ್ಲ ಅಲಂಕಾರವಾದಕಾರಣ ಸಂನಿವೇಶ ಸ್ವಭಾವವನ್ನಾಧಾರಿಸಿದ ಉಕ್ತಿಯೂ ಅಲ್ಲಿ ಪ್ರತಿಭಾಪರಿಸ್ಪಂದವಿದ್ದಲ್ಲಿ, ಸೂಕ್ಷ್ಮವೂ ಲೋಕಸಾಮಾನ್ಯಕ್ಕೆ ಅಗೋಚರವೂ ಆದ ಬಗೆಯಿಂದ ವ್ಯಕ್ತವಾದಲ್ಲಿ ಅಲಂಕಾರವೇ ಎನಿಸುತ್ತದೆ. ಸ್ವಭಾವವು ಪಾದಗಳಾದರೆ ಸ್ವಭಾವೋಕ್ತಿ ನಡಿಗೆ, ವಕ್ರೋಕ್ತಿ ನೃತ್ಯ. ಇಲ್ಲಿ ಅಲಂಕಾರ್ಯ ಪಾದವೇ ಹೊರತು ನಡಿಗೆಯಲ್ಲ. ಎಲ್ಲ ನಡಿಗೆಗಳೂ ಸುಂದರವಾಗಿಲ್ಲದಿರಬಹುದು. ಆದರೆ ವಿಶಿಷ್ಟ ಜನರ ನಡಿಗೆ ಸುಂದರ. ಆ ವಿಶಿಷ್ಟಜನತ್ವವೇ ಕವಿಪ್ರತಿಭೆ. ಇಷ್ಟುಮಾತ್ರವಲ್ಲದೆ ಇತಿವೃತ್ತವನ್ನು ಸ್ವಭಾವವೆಂದೊಡನೆಯೇ ಅದು ವಕ್ರತಾಶೂನ್ಯವೆಂದು ಚಂಡಿಸಲಾಗದು. ಇಲ್ಲಿ ಇತಿವೃತ್ತ-ವರ್ಣನೆಗಳ ಸ್ವಭಾವ-ವಕ್ರತೆಗಳು ಸಾಪೇಕ್ಷ ಎಂಬ ಮಾತು ಅವಿಸ್ಮಾರ್ಯ.

ವ್ಯವಹಾರದೊಳರ್ಥರಹಿತ
ರವಮಿರ್ಪವೊಲಿರ್ಕುಮಲ್ತೆ ವರ್ಣನಮಾತ್ರಂ ।
ಕವನಮಿತಿವೃತ್ತರಹಿತಂ
ಕವಿ ಮೇಣ್ ತತ್ಕರ್ತೃವೆಂದೆನಲದುಪಚಾರಂ ॥ ೫ ॥

ಇತಿವೃತ್ತ ನಿರಪೇಕ್ಷವಾಗಿ ಕವಿತೆಯಿರಬಹುದೆಂದೂ ಅಷ್ಟೇಕೆ, ಕವಿತೆಯೆಂದಿಗೂ ನಿರಿತಿವೃತ್ತವೆಂದೂ ಅಭಿಪ್ರಾಯಗಳುಂಟು. ಪೂರ್ವಾಪರವಿವಕ್ಷಾನಿರಪೇಕ್ಷವಾದ ಮುಕ್ತಕಗಳಂತೂ ಸುಪ್ರಸಿದ್ಧ. ಇವುಗಳನ್ನು ಕಂಡು ಇಲ್ಲಿಯ ಪರಿಶುದ್ಧ ವರ್ಣನೆಗೆ ಸೊಬಗು ಅಮರುಕಾದಿಗಳ ಮುಕ್ತಕಗಳ ಸೌಂದರ್ಯ ಪ್ರಶಂಸೆಯನ್ನು ಆನಂದವರ್ಧನಾದಿಗಳು ಮುಕ್ತಕಂಠದಿಂದ ಮಾಡಿದ್ದಾರೆ. ಇದರಿಂದಾಗಿ ಇತಿವೃತ್ತವು ಉಪಜೀವಿಯೆಂದೂ ವರ್ಣನೆಯು ಉಪಜೀವ್ಯವೆಂದೂ ಭಾಸವಾಗಬಹುದು. ಇಷ್ಟುಮಾತ್ರವಲ್ಲದೆ ಈ ವಿಚಾರಕ್ಕೆ ಉಪಷ್ಟಂಭಕವಾಗಿ ಅರ್ಥವಿರದ ಶಬ್ದಗಳುಂಟಾದರೂ ಶಬ್ದವಿಲ್ಲದ ಅರ್ಥ

ವಿಲ್ಲವೆಂಬ ವಾದವನ್ನೂ ಮುಂದಿಡಬಹುದು ಹೀಗಾಗಿಯೇ ಕವಿಶಬ್ದದ ನಿಷ್ಪತ್ತಿಯು ಈ ಮೊದಲೇ ಹೇಳಿದಂತೆ ವರ್ಣನಮೂಲವಾದದ್ದೆಂದು ಸಿದ್ಧಾಂತಿಸಲೂ ಬಹುದು. ಆದರೆ ಸ್ವಲ್ಪ ಆಳವಾಗಿ ಪರಿಭಾವಿಸಿದಾಗ ಅರ್ಥನಿರಪೇಕ್ಷಶಬ್ದವೆಂಬುದಾಗಲಿ, ಇತಿವೃತ್ತ ನಿರಪೇಕ್ಷವರ್ಣನೆಯಾಗಲಿ ಕೇವಲ ವ್ಯಾವಹಾರಿಕವಾಗಿ ಸಾಧ್ಯ: ಪರಮಾರ್ಥತಃ ಸ್ವಯಂ ಅನುಭವಕ್ಕೇ ವೇದ್ಯವಾಗುವಂತೆ ಕಂಡಾಗಲೂ ಅಸಾಧ್ಯವೆಂಬುದು ತಿಳಿಯದಿರದು. ಎಂಥ ಮುಕ್ತಕವಾದರೂ ವಸ್ತುರಹಿತವಾಗುವುದಿಲ್ಲ. ವಸ್ತುವನ್ನದು ವರ್ಣಿಸದಿದ್ದರೂ ವಿವಕ್ಷಿತವಾಗುವುದಂತೂ ನಿಸ್ಸಂಶಯ. ವಸ್ತುವೆಂದಮೇಲೆ ಅದರ ವ್ಯಾಪ್ತಿಗನುಸಾರವಾಗಿ ಹಿರಿದೋ ಕಿರಿದೋ ಆದ ಸಂನಿವೇಶವಿಶೇಷವಿರುತ್ತದೆ. ಆದರೆಇದನ್ನೇ ಇತಿವೃತ್ತವೆನ್ನಲು ಸಾಧ್ಯವೇ? ನಿಜ: ಅತ್ಯಲ್ಪವಾದ ಘಟನಾಭಾಸವನ್ನೇ ಇತಿವೃತ್ತವೆನ್ನುವುದು ಸರಿಯಲ್ಲ. ಆದರೆ ಆ ಕವಿತೆ ಚರ್ವಣಾಸ್ಪದವಾದಾಗ ಅದಕ್ಕೊಂದು ಸಂನಿವೇಶಸ್ವಾರಸ್ಯ ಬಂದೇಬರುತ್ತದೆ. ಇದನ್ನು ಚಾಟುಪದ್ಯಗಳಲ್ಲಿಯೂ ಅನ್ಯಾಪದೇಶಗಳಲ್ಲಿಯೂ ರಸನಿರ್ಭರವಾದ ತದಿತರ ಮುಕ್ತಕಗಳಲ್ಲಿಯೂ, ಅಷ್ಟೇಕೆ, ನೀತಿಬೋಧಕವೂ ನಿದರ್ಶನಾತ್ಮಕವೂ ಆದ ಅನೇಕ ಬಿಡಿ ಪದ್ಯಗಳಲ್ಲಿ ಕಾಣಬಹುದು. ಸಹೃದಯ ಹೃದಯವು ತಾನೇತಾನಾಗಿ ಏತಾದೃಗ್ವಿಚಾರಗಳಲ್ಲಿ ಆಲಂಬನ ಭಿತ್ತಿಯಾಗಿ ಸಂದರ್ಭಗಳನ್ನು ಉದ್ಬೋಧಿಸಿಕೊಳ್ಳುತ್ತದೆ. ಈಗ ಮತ್ತೊಂದು ಪ್ರಶ್ನೆ ಬರುತ್ತದೆ; ಇತಿವೃತ್ತವು ಹೀಗೆ ಕೆಲವೊಮ್ಮೆ ಸಹೃದಯನಿಂದಲೂ ಉದ್ಬುದ್ಧವಾಗಿ ಆಸ್ವಾದ್ಯವಾಗುತ್ತದೆಂದು ಹೇಳುವ ಪಕ್ಷದಲ್ಲಿ ಇತಿವೃತ್ತದ ಕಾವ್ಯಶರೀರತ್ವಾಭಿಧಾನವು ಹೋಗಿ ಅದು ಕಾವ್ಯಬಹಿರ್ಭೂತವಾಗುವುದಲ್ಲಾ ಎಂದು! ಇದಕ್ಕಿಷ್ಟೇ ಸಮಾಧಾನ. ಇತಿವೃತ್ತವು ಕಾವ್ಯಶರೀರವೆಂಬುದು ಸತ್ಯ. ಆದರೆ ಅದು 'ಅರ್ಥ'ವೂ ಹೌದು. ಕಾವ್ಯದಲ್ಲಿ 'ಪರಮ-ಅರ್ಥ'ವು ರಸವೇ ತಾನೆ! ಅದು ಕಾವ್ಯದಲ್ಲಿಲ್ಲ, ಸಹೃದಯನಲ್ಲಿ ಮಾತ್ರ ನಿಷ್ಪನ್ನವಾಗುತ್ತದೆಂದು ಪ್ರಸಿದ್ಧವಷ್ಟೆ; ಇದು ಮಾತ್ರವಲ್ಲದೆ ಕಾವ್ಯಾಸ್ವಾದವು ಅನುಭವ ವಿಶೇಷ. ಅದೇ ರಸ; ಮತ್ತದು ಅಭಿಪ್ರೇತವೂ ವ್ಯಕ್ತವೂ ಆದದ್ದೇ ಹೊರತು ವಾಚ್ಯವಲ್ಲ ಎನ್ನುವಾಗ ರಸದ ಚರಮಸ್ಥಿತಿ ಸಹೃದಯನಲ್ಲೆಂಬುದು ಸರಿ ತಾನೆ! (ಈ ಎಲ್ಲ ಬಗೆಯ ಜಿಜ್ಞಾಸೆಗಳಲ್ಲಿಯೂ ಮುಖ್ಯಾಂಶವಾಗಿ ಸದಾ ನೆನಪಿನಲ್ಲಿರಿಸಿಕೊಂಡಿರಬೇಕಾದ ವಿಷಯವು ರಸಾನುಭವದ ಅನಿರ್ವಚನೀಯತೆ. ಬ್ರಹ್ಮಾನಂದಸಹೋದರನಾದ ರಸಾನಂದ ಯಾವುದೇ ವಿವರಣೆಗಳಿಂದಲೂ ಪರೋಕ್ಷವಾಗಿ ನೇತ್ಯಾತ್ಮಕವಾಗಿ ವೇದ್ಯವಾಗಲೆಳಸಬಹುದೇ ಹೊರತು ಇತ್ಯಾತ್ಮಕವಾಗಿ ನಿರ್ವಚಿಸಲಾಗದು. ಆದುದರಿಂದ ನಾವು ಎಷ್ಟೇ ಪ್ರಪಂಚಿಸಿದರೂ ಮೂಲಭೂತಾಂಶಗಳಾದ ವಾಗರ್ಥ-ರಸ-ಭಾವ-ವರ್ಣನ-ವಸ್ತ್ವಿತ್ಯಾದಿಗಳು ಪರಿಪೂರ್ಣವಾಗಿ ತಾರ್ಕಿಕ ಪರಿಶೋಧನೆಗೆ ದೊರಕಲಾರವು, ಹಾಗಿದ್ದೂ ಇವುಗಳ ಸಂಶೋಧನವನ್ನು ವೇದಾಂತಿಗಳು ಬ್ರಹ್ಮ-ಜಗತ್ತು-ಜೀವಾದಿಗಳಿಗೆ ಸಂಬಂಧಿಸಿದಂತೆ ಚರ್ಚಿಸುವಂತೆ ನಡಸಬೇಕಾಗಿದೆ. ಅಲಂಕಾರಶಾಸ್ತ್ರವೂ ಸಹ ಇತರ ಶಾಸ್ತ್ರಗಳಂತೆಯೇ ಕೇವಲ 'ಜ್ಞಾಪಕ'ವೇ ಹೊರತು 'ಕಾರಕ'ವಲ್ಲ.) ಸದ್ಯಕ್ಕೆ ತಾತ್ಪರ್ಯವನ್ನು ತಿಳಿಸುವುದಾದರೆ ಪರಮಾರ್ಥತಃ ಇತಿವೃತ್ತವರ್ಣನೆಗಳೆರಡೂ ಅವಿಭಾಜ್ಯ. (ಈ ಮೊದಲೇ

ಹೇಳಿದಂತೆ ಇತಿವೃತ್ತವು 'ದರ್ಶನಾಂಶ' ವರ್ಣನೆಯು ತದಭಿವ್ಯಕ್ತಿ.) ಹೀಗಾಗಿ ಕವಿಯನ್ನು 'ವರ್ಣನಾನಿಪುಣಃ' ಎಂದರೆ ಅದು ಉಪಚಾರವಷ್ಟೇ ಹೊರತು ಪರಿಪೂರ್ಣವಲ್ಲ. 'ಇದಲ್ಲದೆ 'ಕವಿರ್ಮನೀಷೀ ಪರಿಭೂಃ' (ಈಶಾವಾಸ್ಯ–೮) 'ಕವಿಃ ಕ್ರಾಂತದರ್ಶೀ ಸರ್ವದೃಕ್' (ಈಶಾವಾಸ್ಯ–೮ ಶಾಂಕರಭಾಷ್ಯ) 'ಕವಯೋಽಪ್ಯತ್ರ ಮೋಹಿತಾಃ' (ಭಗವದ್ಗೀತಾ iv –೧) 'ಕವಯೋ ಮೇಧಾವಿನಃ' (ಗೀತಾ iv 16 ; ಶಾಂಕರಭಾಷ್ಯ) 'ಕವಿಂ ಪುರಾಣಮನುಶಾಸಿತಾರಂ' (ಗೀತಾ viii-9) 'ಕವಿಂ ಕ್ರಾಂತದರ್ಶಿನಂ ಸರ್ವಜ್ಞಂ' (ಅದೇ, ಶಾಂಕರಭಾಷ್ಯ) ಇತ್ಯಾದಿ ವಾಕ್ಯಗಳಿಂದಲೂ ; ಮತ್ತು ಭಟ್ಟತೌತನೇ ಹೇಳುವಂತೆ 'ಸತತ್ತ್ವದರ್ಶನಾದೇವ ಶಾಸ್ತ್ರೇಷುಪಠಿತಃ ಕವಿಃ' ಎಂದಿರುವುದರಿಂದಲೂ ಕೇವಲ ಕವಿಗೆ ವರ್ಣನಾನೈಪುಣ್ಯವೆಂಬುದೊಂದು ಮುಖವಾದರೆ ದರ್ಶನವೂ, ತದಂತರ್ಗತ ರಸೇತಿವೃತ್ತವಸ್ತು ಸಾಕ್ಷಾತ್ಕಾರವೂ ಮತ್ತೊಂದು ಮುಖ. ಇವುಗಳ ಸಾಕಲ್ಯವೇ ಸತ್ಕಾವ್ಯ ಮತ್ತಿದರ ಸಾಫಲ್ಯದಿಂದಲೇ ಸತ್ಕವಿತ್ವ.

ಈಗ ಇತಿವೃತ್ತಕ್ಕೂ ವರ್ಣನೆಗೂ ಇರುವ ಸಂಬಂಧವನ್ನು ಕಾವ್ಯನಿರ್ಮಿತಿಯಂತೆಯೇ ಕಲೆಯೆಂದೆನ್ನಿಸಿರುವ ಚಿತ್ರಲೇಖನ ದೃಷ್ಟಾಂತದಿಂದ ಮತ್ತೂ ಸ್ಪಷ್ಟವಾಗಿ, ಅಂತೆಯೇ ವ್ಯವಹಾರಯೋಗ್ಯವಾಗಿ (ಅರ್ಥಾತಃ 'ಮುಷ್ಟಿಗ್ರಾಹ್ಯವಾಗಿ') ತಿಳಿಯಬಹುದು.

ವರ್ಣನೆ ವರ್ಣಸಮಾನಂ
ಪೂರ್ಣಂ ವೃತ್ತಂ ಸಮಸ್ತರೇಖಾಪ್ರಖ್ಯಂ ।
ಪರ್ಣಂ ವರ್ಣನೆಯಿತಿವೃ
ತ್ತಾರ್ಣವಮದು ಶಾಖೆಯಂತೆ ಪಾರಸ್ಪರ್ಯಂ ॥ ೬ ॥

ಭಾರತೀಯ ಚಿತ್ರಕಲಾ ವಿಚಾರವು ವಿಷ್ಣುಧರ್ಮೋತ್ತರ, ಮಾನಸೋಲ್ಲಾಸ, ಶಿವತತ್ತ್ವರತ್ನಾಕರಾದಿಗಳಲ್ಲಿ ನಿರೂಪಿತವಾಗಿರುವಂತೆ ಹಲವು ವಿಶೇಷಾಂಶಗಳಿಂದ ಕೂಡಿದುದು. ಅಂತೆಯೇ ಚಿತ್ರಪಟವಿನ್ಯಾಸದಲ್ಲಿ ರೇಖೆ, ವರ್ತನೆ, ಭೂಷಣ, ವರ್ಣ ಮೊದಲಾದ ಹಲವು ಘಟಕಗಳುಂಟು. ಇವುಗಳನ್ನು ಮೆಚ್ಚುವವರೂ ಹಲವರು.

ರೇಖಾಂಪ್ರಶಂಸಂತ್ಯಾಚಾರ್ಯಾ ವರ್ತನಾಂ ಚ ವಿಚಕ್ಷಣಾಃ ।
ಸ್ತ್ರೀಯೋ ಭೂಷಣಮಿಚ್ಛಂತಿ ವರ್ಣಾಢ್ಯಮಿತರೇ ಜನಾಃ ॥

ರೇಖೆಗಳನ್ನು ಅತಿಪ್ರೌಢರು ಮಾತ್ರ ಆಸ್ವಾದಿಸಬಲ್ಲರು ; ವರ್ತನೆಯನ್ನು (ವೃತ್ತ-ವೃತ್ತಿ ಸಂಬಂಧಿತವಾದ ವಿಶಿಷ್ಟ ವಿನ್ಯಾಸ. ಇದನ್ನು ಆಧುನಿಕ ಚಿತ್ರಕಲಾಪರಿಭಾಷೆಯಲ್ಲಿ **(Strokes)** ಎನ್ನಬಹುದು.) ವಿಚಕ್ಷಣೆಯುಳ್ಳವರು ; ಸ್ತ್ರೀಯರು (ಇಲ್ಲಿ ಸ್ತ್ರೀಯರೆಂದರೆ ಸ್ತ್ರೈಣಭಾವವುಳ್ಳ, ಅಲಂಕೃತಿಪ್ರಿಯತೆಯನ್ನುಳ್ಳ ಜನರೆಂದು ತಾತ್ಪರ್ಯ.) ಚಿತ್ರದ ಬಿಡಿಘಟಕಗಳಾದ ಕುಸುರಿಕೆಲಸವನ್ನು ಮೆಚ್ಚುತ್ತಾರೆ. ಆದರೆ ಲೋಕಸಾಮಾನ್ಯನಿಗೆ ಬಣ್ಣಗಳ ಬೆಡಗೇ ಬಲು ಮೆಚ್ಚು.

ಈ ಮೇಲ್ಕಂಡ ವಿಚಾರವನ್ನು ಪ್ರಸ್ತುತಾಂಶಕ್ಕೆ ಅನ್ವಯಿಸಿದರೆ ವರ್ಣನೆಯು 'ವರ್ಣ'

ದಂತೆಯೂ, ಇತಿವೃತ್ತವು 'ರೇಖಾಸಮೂಹ'ದಂತೆಯೂ ಆಗುತ್ತದೆ. ಪ್ರಧಾನೇತಿವೃತ್ತದ ಪತಾಕಾಪ್ರಕರೀಪ್ರಕರಣಾದಿಗಳ ವಕ್ರತೆಯು 'ವರ್ತನೆ'ಯ ಪರಿಧಿಗೂ ವರ್ಣನೆಯ ವಕ್ರ ವಾಕ್ಯವಿನ್ಯಸ್ತವಿವಿಧಾಲಂಕಾರ ವಿಶೇಷವು 'ಭೂಷಣ'ದ ವ್ಯಾಪ್ತಿಗೂ ಬರುತ್ತವೆ. ಅಂತೆಯೇ ವಿದಗ್ಧರೂ ರಸಸಿದ್ಧರೂ ಆದವರಿಗೆ ಎಂಥ ಪ್ರಬಂಧದಲ್ಲಿಯೂ ಪ್ರಧಾನವಾಗಿ ಗೋಚರವಾಗುವುದೂ, ಸ್ತುತ್ಯರ್ಹವೆನ್ನಿಸುವುದೂ ಕಾವ್ಯದ 'ಅರ್ಥ' (ಅಂದರೆ ಪರಮಾರ್ಥತಃ ರಸ). ಇದು ಅಂಗಿರಸ, ಅಂಗರಸ, ಪ್ರಬಂಧ-ಪ್ರಕರಣಧ್ವನಿ, ಪ್ರಬಂಧ-ಪ್ರಕರಣ ವಕ್ರತೆ, ಪ್ರಬಂಧೌಚಿತ್ಯ, ಇತಿವೃತ್ತದ ಸರ್ವಸಂಧಿಸೌಂದರ್ಯವೇ ಮೊದಲಾದ ಮೂಲ ಭೂತವಿಚಾರ. ಆದರೆ ಸಾಮಾನ್ಯಜನತೆಗೂ, ಚಮತ್ಕಾರಪ್ರಿಯರಿಗೂ ಈ ಬಗೆಯ 'ಇಡಿತನ'ಕ್ಕಿಂತ ಸುಲಭವಾಗಿ 'ಬಿಡಿತನ' ವೇದ್ಯವಾಗುವ ಕಾರಣ ಅಷ್ಟಾದಶವರ್ಣನೆಗಳು, ಚಾಟುಸಂಭಾಷಣೆಗಳು, ಬಹುಬುದ್ಧಿ ಭಾರವಾಗದ ಚಿತ್ರವಿಶೇಷಗಳು ರುಚಿಸುತ್ತವೆ.

ಹೀಗೆ ಹೇಳುತ್ತಾ ನಾನು ಅಲಂಕೃತಿಪ್ರಸ್ಥಾನವನ್ನಾಗಲಿ, ತದಾಸ್ವಾದಕರನ್ನಾಗಲಿ, ತದ್ವಿಮರ್ಶಕರನ್ನಾಗಲಿ ಅವಗಣಿಸುತ್ತಿಲ್ಲ. ಮಹಾಕೃತಿಗಳಲ್ಲಿ ಇತಿವೃತ್ತದ ಮಹತ್ತ್ವ ಕೆಲ ವೊಮ್ಮೆ (ಅಂಗಿರಸವನ್ನು ನಿರ್ಣಯಿಸುವಂಥ ಪ್ರಧಾನ ತತ್ತ್ವ) ಪರಿಣತರೂ ಮರೆಯ ಬಹುದು. ಆದರೆ ಎದ್ದು ಕಾಣುವ ವರ್ಣನಾದಿಗಳಂತಲ್ಲವೆಂಬುದೇ ತಾತ್ಪರ್ಯ. ಆನಂದ ವರ್ಧನನು ಮಾ ನಿಷಾದ...ದಲ್ಲಿಯೂ, ಅತಿಕ್ರಾಂತಸುಖಾಃ...ಎಂಬಲ್ಲಿಯೂ ಶ್ರೀಮ ದ್ರಾಮಾಯಣ-ಮಹಾಭಾರತಗಳ ಜೀವನಾಡಿ ಹಿಡಿದು ಅವುಗಳ ಅಂಗಿರಸಗಳು ಕರುಣ ಶಾಂತಗಳೆಂದು ಸ್ಥಾಪಿಸುವ ಸಂದರ್ಭವನ್ನು ಗಮನಿಸಿದಾಗ ಇತಿವೃತ್ತಮಹತ್ತ್ವವು ಹೇಗೆ ಕೇವಲ ಪ್ರೌಢವೇದ್ಯವೆಂದರಿವಾಗುತ್ತದೆ. ಆದರೆ ಕ್ಷೇಮೇಂದ್ರನು ರಾಮಾಯಣವು ಶಾಂತ ದಲ್ಲಿ ತಾತ್ಪರ್ಯವುಳ್ಳದ್ದೆಂದುದೂ, ಭವಭೂತಿಯು ಪೂರ್ವರಾಮಚಾರಿತ್ರ್ಯದ ವೀರ ತಾತ್ಪರ್ಯವನ್ನು ಹೇಳುವುದೂ ಗಮನಕ್ಕೆ ಬಂದಾಗ ಇತಿವೃತ್ತಮೀಮಾಂಸೆಯ ಜಟಿಲತೆ ಅನುಭವಕ್ಕೆ ಬರುತ್ತದೆ. ಇತಿವೃತ್ತವು ರೇಖಾಚಿತ್ರದಂತೆ ಎಲ್ಲ ಸಂದರ್ಭಗಳಿಗೂ ಆಸ್ಪದ ಕೊಟ್ಟು ವಸ್ತುವನ್ನು ನಿರ್ವಹಿಸಿದರೆ ವರ್ಣನೆಯು ಆ ಎಲ್ಲ ಕಡೆಯಲ್ಲಿಯೂ ಹದವರಿತು ಬಗೆಬಗೆಯ ರಾಗಗಳಿಂದ ಮೈದುಂಬುವಂತೆ ವರ್ಣಲೇಪಮಾಡುತ್ತದೆ. ಆದರೆ ಇಲ್ಲಿ ಚೋದ್ಯವಾದರೂ ಅವಿಸ್ಮಾರ್ಯವಾದ ವಿಚಾರವೊಂದು ಬಹುಮುಖ್ಯವಾಗಿದೆ. ಅದೇ ನೆಂದರೆ ವಸ್ತುವನ್ನು ನಾವು ಪಟದಂತೆಯೂ ಕವಿಯು ಕರ್ಮವನ್ನು ಒಟ್ಟಾಗಿ ಚಿತ್ರ ದಂತೆಯೂ ಭಾವಿಸಿದಾಗ ಇತಿವೃತ್ತ-ವರ್ಣನೆಗಳೆರಡೂ ವಸ್ತ್ವಾಶ್ರಿತವೆಂದು ಸ್ಪಷ್ಟವಾಗು ತ್ತದೆ. ಅಲ್ಲದೆ ವರ್ಣನೆಯೂ ವಸ್ತುವಿನ ಸಂಪರ್ಕಕ್ಕೆ ಬಂದಾಗ ಅಂದರೆ ಬಣ್ಣವು ಭಿತ್ತಿಗೆ ಲಿಪ್ತವಾದಾಗ ಅದರ ಕೇವಲ ವರ್ಣನತ್ವ/ವರ್ಣತ್ವವೊಂದೇ ಅಲ್ಲದೆ ಸ್ವಲ್ಪಮಟ್ಟಿಗೆ ಇತಿ ವೃತ್ತತ್ವ/ರೇಖಾವರ್ತನತ್ವ ಕೂಡಾ ಬರುತ್ತದೆ! ಇದು ಅನುಭವಸಿದ್ಧ. (ಬಣ್ಣವನ್ನು ಕುಂಚದಿಂದ ಲೇಪಿಸುವಾಗ ರೇಖಾ-ವರ್ತನಾತ್ಮಕವಾಗಿಯೇ ಆರಂಭಿಸಬೇಕಲ್ಲವೇ!) ಅಂತೆಯೇ ಇತಿವೃತ್ತವೂ ವಸ್ತು ಸನ್ನಿಕೃಷ್ಟವಾದಾಗ, ಅಂದರೆ ರೇಖೆಗಳು ಭಿತ್ತಿಯಲ್ಲಿ ಲಿಖಿತವಾದಾಗ ಇತಿವೃತ್ತ ರೇಖಾಸಮೂಹಕ್ಕೆ ಅದರ ಕೇವಲ ಇತಿವೃತ್ತತ್ವ/ರೇಖಾತ್ವ

ಮಾತ್ರವಲ್ಲದೆ ವರ್ಣನತ್ವ/ವರ್ಣತ್ವವೂ ಅಷ್ಟಿಷ್ಟು ಸಂದಾಯವಾಗುತ್ತದೆ! (ರೇಖೆಗಳಲ್ಲ ಭಿತ್ತಿಯಲ್ಲಿ ಲಿಖಿತವಾದಾಗ ರೇಖೆಗಳು ಭಿತ್ತಿಯಿಂದ ವಿಭಿನ್ನವಾದ ವರ್ಣವನ್ನು ಹೊಂದಿದ್ದಾಗಲಲ್ಲವೇ ಆ ರೇಖೆಗಳು ಸ್ಫುಟವಾಗುವುದು!) ಇದೂ ಸಹ ನಿಜಾನುಭವವೇದ್ಯ; ಲೋಕದಲ್ಲಿ ಸುವ್ಯಕ್ತ. ಆದುದರಿಂದಲೇ ಇತಿವೃತ್ತ ಶೂನ್ಯವರ್ಣನೆಯಾಗಲಿ, ವರ್ಣನಾಶೂನ್ಯೇತಿವೃತ್ತವಾಗಲಿ ಸಾರತಃ ಅಸಾಧ್ಯ. ಈ ಪರಸ್ಪರಾಲಂಬನತ್ವವನ್ನೇ ಕಾರಿಕೆಯ ವೃಕ್ಷದೃಷ್ಟಾಂತ ಪ್ರತ್ಯಕ್ಷೀಕರಿಸಿದೆ. ಇತಿವೃತ್ತವು ಮರದ ಶಾಖೋಪಶಾಖೆಗಳು (ಇಲ್ಲಿ ಶಾಖಾದಿಗಳ ರೇಖಾತ್ವ ಗಮನಾರ್ಹ). ವರ್ಣನೆ ಅದರ ಎಲೆಗಳು (ಇಲ್ಲಿ ಎಲೆಗಳ ವರ್ಣತ್ವವೂ ವೇದ್ಯ). ಎರಡೂ ಪರಸ್ಪರ ಪೋಷಕ.

ಈಗ ಚಿತ್ರಕಲೆಯ ಮೂಲಕ ಇತಿವೃತ್ತಾದಿಗಳಲ್ಲಿ ತಿಳಿದುಕೊಳ್ಳಬಹುದಾದ ಮತ್ತೆ ಕೆಲವಂಶಗಳನ್ನು ಗಮನಿಸೋಣ.

ಕೆಲವು ಚಿತ್ರಗಳಲ್ಲಿ ವರ್ಣವೇ ಮೇಳವೇ ಪ್ರಧಾನವಾಗಿರುತ್ತದೆ. ಮತ್ತೆ ಕೆಲವು ರೇಖಾವಿನ್ಯಾಸವಿಲಸಿತವಾಗಿ ಎದ್ದು ಕಾಣುತ್ತವೆ. ಅಂತೆಯೇ ಸಾಹಿತ್ಯದಲ್ಲಿಯೂ ವರ್ಣನಾಪ್ರಧಾನವಾದ, ಇತಿವೃತ್ತಪ್ರಧಾನವಾದ ಕೃತಿಗಳಿರುತ್ತವೆ. ಕೆಲವು ಮಹಾಕೃತಿಗಳು ಉಭಯಪ್ರಧಾನವಾಗಿ ಕಣ್ಮನ ತಣಿಸುತ್ತವೆ. ಈ ಬಗೆಯ ಉಭಯಸಂಮಿಲನವೇ ವಸ್ತುಕಗಳ ಹೆಗ್ಗಳಿಕೆ. ಇದನ್ನು ಗಮನಿಸಿಯೇ ವಾಮನನು ವರ್ಣಚಿತ್ರಗಳಲ್ಲಿ (ರೇಖಾವಿನ್ಯಾಸಕ್ಕೆ ಬಣ್ಣದ ಬೆಡಗನ್ನಿತ್ತ ಸಮಗ್ರತಾಸ್ಫುಟ ಚಿತ್ರ) ಕಂಡುಬರುವ ಸಾಕಲ್ಯವೇ ರೂಪಕಗಳಲ್ಲಿಯೂ ಉಂಟೆಂದು ಅರಿತು 'ಸಂದರ್ಭೇಷು ದಶರೂಪಕಂ ಶ್ರೇಯಃ' 'ತದ್ಧಿ ಚಿತ್ರಂ ಚಿತ್ರಪಟವದ್ವಿಶೇಷಸಾಕಲ್ಯಾತ್' (ಕಾವ್ಯಾಲಂಕಾರ ಸೂತ್ರ I–೩ ೩೦, ೩೧) ಎಂದ. ರೂಪಕಗಳಲ್ಲಿ ಪಂಚಸಂಧ್ಯಾತ್ಮಕವಾದ ವಸ್ತುಸಂವಿಧಾನ–ಅರ್ಥಾತ್ ಇತಿವೃತ್ತ ವಿಶೇಷ—ಮುಖ್ಯವಾಗಿ ವರ್ಣನೆಗಳೂ ಸಮುಚಿತವಾಗಿ ಸರ್ವತ್ರ ಸಾಮಗ್ರ್ಯವಿರುವುದರಿಂದ ಶಬ್ದಾರ್ಥ ಸೌಂದರ್ಯವಿಲ್ಲಿ ರಮ್ಯವೆಂದು ತಿಳಿಯುತ್ತದೆ. (ಶಬ್ದಾರ್ಥಗಳೆಂದರೆ ಪರಮದೃಷ್ಟಿಯಿಂದ ರಸ ಮತ್ತು ರಸವ್ಯಂಜಕೋಕ್ತಿಸರ್ವಸ್ವವೆಂದು ಇಲ್ಲಿ ಆರಂಭದಿಂದಲೂ ಪ್ರತಿಪಾದಿತವಾಗುತ್ತಿರುವ ವಿಚಾರವನ್ನು ವಾಮನನೂ ಧ್ವನಿಸಿದ್ದಾನೆ. ಅಭಿನವಗುಪ್ತರೂ ಸಹ ಇತಿವೃತ್ತ (ವಸ್ತ್ವಾಶ್ರಿತಸಂವಿಧಾನಮೂಲ ರಸ ಮತ್ತು ವರ್ಣನೆಗಳೇ ಶಬ್ದಾರ್ಥವೆಂದು ಭಾವಿಸಿದ್ದಂತೆಯೂ ತಿಳಿಯಬಹುದು.— 'ಕಾವ್ಯಾರ್ಥಾಃ ರಸಾಃ ...ವರ್ಣನೀಯಂ, ಶಬ್ದನೀಯಂ ಕವೇಃ ಕರ್ಮ' ಅಭಿನವಭಾರತೀ' **XVI**–೧ ವ್ಯಾಖ್ಯಾ) ಕಾಮಧೇನುವ್ಯಾಖ್ಯಾನವೂ ಈ ಸೂತ್ರಗಳನ್ನು ವಿವರಿಸುತ್ತಾ 'ವಿಶೇಷಾಣಾಂ ಭಾಷಾಭೇದಾದಿರೂಪಾಣಾಂ ಕಥಾಖ್ಯಾಯಿಕಾನಾಂ ಮಹಾಕಾವ್ಯಭೇದಾನಾಂ ಅಸ್ಮಾದೇವ ವಸ್ತುವಿನ್ಯಾಸಕಲ್ಪನಮಿತಿ' ಎಂದು ತಿಳಿಸುವಾಗ ಪುನಃ ಇತಿವೃತ್ತಗತಾರ್ಥ ಮತ್ತು ವರ್ಣನಾಶ್ರಿತಶಬ್ದಗಳ ಸಾಕಲ್ಯವೇ ಶ್ರೇಯಸ್ಕರವೆಂದು ಬಗೆದಿರುವುದು ಸ್ಪಷ್ಟ. ಇದಲ್ಲದೆ ಆದಿಯಿಂದಲೂ ಕವಿಗಳಿಗೆ ಮುಕ್ತಕಗಳಲ್ಲೆಷ್ಟು ಪ್ರೀತಿಯಿದ್ದರೂ

ವಿಮರ್ಶಕರಲ್ಲಿ ಇವುಗಳಲ್ಲೆಷ್ಟು ಆಸಕ್ತಿಯಿದ್ದರೂ ವಸ್ತುಕವೇ ಉತ್ತಮೋತ್ತಮವೆಂಬ ಸಮರ್ಪಕ ನಿರ್ಣಯವೂ ಧ್ವನಿತವಾಗುತ್ತದೆ.

ನಿರಂತರ ರಸೋದ್ಗಾರಗರ್ಭ ಸಂದರ್ಭನಿರ್ಭರಾಃ ।
ಗಿರಃ ಕವೀನಾಂ ಸ್ಥಾಸ್ಯಂತಿ ನ ಕಥಾಮಾತ್ರಮಾಶ್ರಿತಾಃ ॥
(ವಕ್ರೋಕ್ತಿಜೀವಿತ iv ಋನೇ ಕಾರಿಕಾನಂತರ)

ಅಮರುಕ ಕವೇರೇಕಃ ಶ್ಲೋಕಃ ಪ್ರಬಂಧ ಶತಾಯತೇ ।
ಅಸ್ತು ವಸ್ತುನಿ ಮಾ ವಾ ಭೂತ್ ಕವಿವಾಚಿ ಸ್ಥಿತೋ ರಸಃ ।

ಮುಕ್ತಕೇಷು ಪ್ರಬಂಧೇಷ್ವಿವ ರಸಬಂಧಾಭಿನಿವೇಶನಃ ಕವಯೋಽವರ್ತಂತೇ। ಯಥಾ ಹ್ಯಮರುಕಸ್ಯ ಕವೇರ್ಮುಕ್ತಾಃ ಶೃಂಗಾರ ರಸಸ್ಯಂದಿನಃ ಪ್ರಬಂಧಾಯಮಾನಾಃ ಪ್ರಸಿದ್ಧಾ ಏವ॥ (ಧ್ವನ್ಯಾ-III-7)

ಈ ರೀತಿಯ ಅಭಿಪ್ರಾಯಗಳಿದ್ದರೂ ಉಭಯ ಸೌಂದರ್ಯವೇ ಮಿಗಿಲೆಂಬುದನ್ನು ಯಾರೂ ಮರೆತಿಲ್ಲ.

ಅಲ್ಲದೆ ಕೇವಲೇತಿವೃತ್ತೀಯವೂ, ಕೇವಲವರ್ಣನೀಯವೂ ಆದ ಸಂದರ್ಭಗಳು ಪ್ರಿಯವಾದರೂ (ಪ್ರೇಯಃಪರವಾದರೂ) ಎರಡೂ ಇದ್ದಲ್ಲಿಯೇ ಶ್ರೇಯಸ್ಸೆಂಬುದನ್ನು ಮರೆಯಲಾಗದು. ಅಂತೆಯೇ ಆನಂದವರ್ಧನಾದಿಗಳು ಇದನ್ನು ಪರಮಪುರುಷಾರ್ಥ ಸಂಸ್ಪರ್ಶಿಯೆಂದು ಎತ್ತಿ ಹಿಡಿಯುತ್ತಾರೆ (ಮಹಾಕಾವ್ಯರೂಪಃ ಪುರುಷಾರ್ಥಫಲಃ ಸಮಸ್ತವಸ್ತುವರ್ಣನಾಪ್ರಬಂಧಃ ಸರ್ಗಬಂಧಃ . . . .). ಈ ಸಂದರ್ಭದಲ್ಲಿ ಸಮಸ್ತವಸ್ತು ವರ್ಣನಾಪ್ರಬಂಧವೆಂಬ ಮಾತು ಬಹು ಮುಖ್ಯ. ಹೀಗೆಯೇ ಮುಕ್ತಕಾದಿಗಳ ಏಕದೇಶೀಯತೆಯನ್ನು ತೋರಿಸಿ ಗ್ರಥನಕೌಶಲದ ಕಾವ್ಯವೇ ಉತ್ತಮವೆಂದೂ ಹಲವರು ನುಡಿದಿದ್ದಾರೆ (ಕಾವ್ಯಂ ಗ್ರಥನ ಕೌಶಲಾತ್—ರಸಾರ್ಣವಸುಧಾಕರ (I. ೨೪೨) ಇದನ್ನೇ ವಾಮನನೂ ನಿಬದ್ಧ ಮತ್ತು ಅನಿಬದ್ಧಗಳೆಂಬ ಎರಡು ರೂಪದ ಕಾವ್ಯಬಂಧಗಳನ್ನು ಚರ್ಚಿಸುತ್ತಾ 'ಕ್ರಮಸಿದ್ಧಿಸ್ತಯೋಸ್ಸ್ರಗುತ್ತಂಸವತ್' ಎಂದು (I-೩-೨೭, ೨೮) ಪ್ರತಿಪಾದಿಸುತ್ತಾ, ಕೆಳಗಿನ ಶ್ಲೋಕವನ್ನೂ ಉಲ್ಲೇಖಿಸುತ್ತಾನೆ.

ಅಸಂಕಲಿತರೂಪಾಣಾಂ ಕಾವ್ಯಾನಾಂ ನಾಸ್ತಿ ಚಾರುತಾ।
ನ ಪ್ರತ್ಯೇಕಂ ಪ್ರಕಾಶಂತೇ ತೈಜಸಾಃ ಪರಮಾಣವಃ॥

ಇದಲ್ಲದೆ ಮುಕ್ತಕ, ಕುಲಕ, ಸಂಘಾತಕಾದಿಗಳಲ್ಲಿ ಅನೇಕ ಜನ ಶ್ರೇಷ್ಠಕವಿಗಳಿದ್ದರೂ ಗ್ರಥನಕೌಶಲದ ವಸ್ತುನಿರ್ವಹಣ ವರ್ಣನಾವೈಶದ್ಯವೇ ಮಹಾಕವಿಗಳ ಆದರ್ಶವೆಂಬರ್ಥದ ಮಾತು ವಿಖ್ಯಾತವಾಗಿಯೇ ಬಹ್ವತ್ರ ಪ್ರಸ್ಫುಟವಾಗಿದೆ.

ಚಿತ್ರಲೇಖನದಲ್ಲಿ ಸಾದೃಶ್ಯಲೇಖನವು ವಿದ್ಧವೆಂದೂ, ಸಾದೃಶ್ಯಾತೀತವಾದದ್ದು ಅವಿದ್ಧವೆಂದೂ ರಸಸ್ಫುರಿತವಾದದ್ದು ರಸಚಿತ್ರವೆಂದೂ ಪ್ರಭೇದಗಳಿರುವುದಕ್ಕೂ, ಕವಿತಾವಿಭಾಗಗಳಿಗೂ ಒಳ್ಳೆಯ ಹೋಲಿಕೆಯುಂಟು. ಇದಲ್ಲದೆ ರೂಪಭೇದ, ಪ್ರಮಾಣ,

ಲಾವಣ್ಯ, ಭಾವಯೋಜನೆ, ಸಾದೃಶ್ಯ ಮತ್ತು ವರ್ಣಿಕಾಭಂಗಗಳೆಂಬ ಷಡಂಗಗಳಿಂದ ಕೂಡಿದ ಚಿತ್ರದಂತೆಯೇ ಕಾವ್ಯದಲ್ಲಿಯೂ ಪ್ರಕರಣಭೇದ, ಸಂಧಿ–ಸಂಧ್ಯಂಗಾದಿ ಪ್ರಮಾಣ, ವ್ಯಷ್ಟಿ–ಸಮಷ್ಟಿಲಾವಣ್ಯ, ರಸ–ಭಾವ ಸಂಯೋಜನೆ, ಸ್ವಭಾವೋಕ್ತಿ ರುಚಿರತೆ, ವಕ್ರೋಕ್ತಿವೈಚಿತ್ರ್ಯಗಳು ಕ್ರಮವಾಗಿ ಇತಿವೃತ್ತ–ವರ್ಣನೆಗಳ ರಸಪಾಕವೆಂದು ತಿಳಿದುಬರುತ್ತದೆ.

ಭಾವಿಕಮೆಂಬ ಗುಣಂ ಸಂ
ಭಾವಿತಮಾ ಭಾಮಹಾದ್ಯರಿಂದಮದೆಂದುಂ ।
ಶ್ರೀವಿಲಸಿತೇತಿವೃತ್ತ
ವ್ಯಾವರ್ಣನೆಯಲ್ಲದನ್ಯಮಲ್ಲಂ ನೋಡಲ್ ॥

ಭಾವಿಕತ್ವವನ್ನು ಕುರಿತಂತೆ ಭಾಮಹಾದ್ಯರು ಬಹು ಮನನೀಯೋಕ್ತಿಗಳನ್ನಾಡಿದ್ದಾರೆ.

ಭಾವಿಕತ್ವಮಿತಿ ಪ್ರಾಹುಃ ಪ್ರಬಂಧ ವಿಷಯಂ ಗುಣಂ ।
ಪ್ರತ್ಯಕ್ಷಾ ಇವ ದೃಶ್ಯಂತೇ ಯತ್ರಾರ್ಥಾಭೂತಭಾವಿನಃ ॥ (ಕಾವ್ಯಾಲಂ. III-53)

ಇಲ್ಲಿ ಭಾವಿಕವೆಂಬುದು ಅಲಂಕಾರ (ಸಂಕುಚಿತಾರ್ಥದಲ್ಲಿ) ಮಾತ್ರವಾಗಿ ಉಳಿಯದೆ ಪ್ರಬಂಧವಿಷಯದ ಗುಣವಾಗಿದೆ (ಅರ್ಥಾತಃ ಪ್ರಕೃಷ್ಟಬಂಧ ಗುಣತ್ವವೆನಿಸಿದೆ). ಅಂದರೆ ಸಂವಿಧಾನ ಚಾತುರ್ಯವೇ ಇದರಲ್ಲಡಗಿದೆ. ಹಾಗಾಗಿಯೇ ನಾನಾವಿಧದ (ಭೂತ–ಭವಿಷ್ಯತ್ಸಂಬಂಧಿತ) ಘಟನೆಗಳ ನಿರೂಪಣೆಯೂ ಇದರಿಂದಾಗಿ ವರ್ತಮಾನದ್ದೆಂಬಂತೆ ತೋರುತ್ತದೆ. ಮೂಲತಃ ಕಾವ್ಯದ ಪರಮಸ್ವಾರಸ್ಯ ಭೂಮಿಯೇ ಘಟನೆಗಳ ಕಾಲಪರಿಚ್ಛೇದವನ್ನು ಮೀರಿ ನಮಗೆ ಆಸ್ವಾದ್ಯವಾಗಿ ಕಣ್ಣಿಗೆ ಕಟ್ಟುವಂತೆ ಆಗುವುದರಲ್ಲಿದೆ. ಆದರೆ ಮುಖ್ಯವಾದಂಶವೊಂದನ್ನು ಮರೆಯಬಾರದು. ಅದೇನೆಂದರೆ ಕಣ್ಣಿಗೆ ಕಟ್ಟಿದಂತೆ ಕಾಣಬೇಕೇಹೊರತು ವಾಸ್ತವವೇ ಆಗಬಾರದು! ಹಾಗಾದಾಗ ಅದರಲ್ಲಿ ಸಾಧಾರಣೀಕರಣಯೋಗ್ಯತಾಟಸ್ಥವು ಸಿದ್ಧಿಸದು. ಸೋದಾಹರಣವಾಗಿ ಹೇಳುವುದಾದರೆ ವಿದ್ಯುಚ್ಛಾಪವು (Electric Arc)ಸ್ಫುರಿಸಲು ವಿದ್ಯುದ್ಧ್ರುವ (Electrode)ಗಳೆರಡರ ನಡುವೆ ನಿಗದಿತವಾದ ದೂರವೇ ಇರಬೇಕು. ಅವು ದೂರವಾಗಿದ್ದರೂ ವಿದ್ಯುತ್ಪ್ರವಹಣವಿಲ್ಲ. ಹತ್ತಿರವಾದರೂ ಸ್ಫುರಣವಿಲ್ಲ. ಆದುದರಿಂದಲೇ ಸಂನಿವೇಶಗಳು ತದ್ವತ್–ತತ್ಸದೃಶವಾಗಿರಬೇಕು : 'ಪ್ರತ್ಯಕ್ಷಾ ಇವ' ಭಾಸವಾಗಬೇಕು. ಕವಿಯು ತನ್ನ ದೇಶ–ಕಾಲಗಳನ್ನು ಮೀರಿ ಕಂಡ ದರ್ಶನವು ಸಹೃದಯನಿಗೆ ವರ್ಣನಾಪಥದಿಂದ ವ್ಯಕ್ತವಾಗಬೇಕು.

ಈ ಸಂದರ್ಭದಲ್ಲಿ ಕಾವ್ಯದ ಭೂತ-ಭಾವಿ ಘಟನಾನಿರೂಪಣೆಯೂ ಆಸ್ವಾದ ಸಂದರ್ಭದಲ್ಲಿ ವರ್ತಮಾನವಾಗುವ ವಿಶೇಷತೆಯನ್ನೂ, ಏತಾದೃಗ್ರಸಾಸ್ವಾದ ಮಹಾನುಭೂತಿಯ ವಾರ್ತಮಾನಿಕವಿಶೇಷತ

... ತಿಳಿಸುತ್ತಾನೆ.

ಅವಿದ್ಯಾ ಬೀಜವಿಧ್ವಂಸಾದಯುಪೂರ್ವೇಣ ಚಕ್ಷುಷಾ ।
ಕಾಲೌ ಭೂತಭವಿಷ್ಯಂತೌ ವರ್ತಮಾನಮವೀವಿಶತ್ ॥ (ಅನರ್ಘ. II-34)

ಇಲ್ಲಿದೆ ಮುಂದೆ ಭಾಮಹನೇ ವಿವರಿಸುತ್ತಾ ಚಿತ್ರೋದಾತ್ತಾದ್ಭುತಾರ್ಥತ್ವ ಮತ್ತು ಕಥೆಯ ಸ್ವಭಿನೀತತೆ ಹಾಗೂ ಶಬ್ದಾನಾಕುಲತೆಯನ್ನು ಭಾವಿಕದಲ್ಲಿ ಸೇರಿಸುವಾಗ ಇದು ಕೇವಲ ಇತಿವೃತ್ತವನ್ನು ಮಾತ್ರವಲ್ಲದೆ ಅದರ ಸರ್ವಾಂಗಸಾಮಂಜಸ್ಯ—ಪಾರಿಪೂರ್ಣರಸಭಾವ ನೈರಂತರ್ಯಗಳನ್ನೂ, ವರ್ಣನ ಸತ್ತ್ವವನ್ನೂ ವ್ಯಂಜಿಸುತ್ತಾನೆಂಬುದು ಸ್ಪಷ್ಟ. ಆದುದರಿಂದಲೇ ಇದು 'ಶ್ರೀವಿಲಸಿತವಾದ ಇತಿವೃತ್ತ'ವೆಂದು ಕಾರಿಕೆಯಲ್ಲಿ ಹೇಳಲಾಗಿದೆ. ಚಿತ್ರತೆ, ಉದಾತ್ತತೆ ಮತ್ತು ಅದ್ಭುತಾರ್ಥತ್ವಗಳೆಲ್ಲವೂ ಸಾತ್ತ್ವತೀವೃತ್ತಿಪರಿಪುಷ್ಟವಾದ ಚಮತ್ಕಾರವಿಶ್ರಾಂತವಿಶೇಷಗಳೆಂದು ಗಣಿಸಬಹುದು. ಭಾವಿಕದ ಬಗೆಗೆ ಉದ್ಭಟನ ವಿವರಣೆಗಳು ಭಾಮಹನ ಮಾತುಗಳಿಗಿಂತ ಅವರವಾಗಿದ್ದರೂ ಪ್ರತೀಹಾರೇಂದುರಾಜನ ವ್ಯಾಖ್ಯೆಯು ಸರ್ವಗ್ರಾಸಿಯಾಗಿದೆ. ಆದರೆ ಇದರಂತೆ ಕಂಡಾಗ ಭಾವಿಕತ್ವವು ಸಮಸ್ತಕಾವ್ಯದ ರಸಾನುಭೂತಿ ಸರ್ವಸ್ವವೇ ಆಗುತ್ತದೆ. ಇಂಥ ಹಿನ್ನೆಲೆಯಲ್ಲಿ ಭಾವಿಕತ್ವವು ಇತಿವೃತ್ತವನ್ನು 'ಕಾವ್ಯಾರ್ಥ'ವೆಂದು ತಾತ್ತ್ವಿಕವಾಗಿ ಗ್ರಹಿಸಿದಾಗ ಮಾತ್ರ ಹೊಂದುತ್ತದೆ. ಇಲ್ಲೊಂದು ಸಂದೇಹವೂ ಬರಬಹುದು ; ಇತಿವೃತ್ತ ಮತ್ತು ವರ್ಣನೆಗಳೆರಡೂ ಸೇರಿಯೇ ಭಾವಿಕದಲ್ಲಿ ಪ್ರಬಂಧಗುಣವೆಂದು ವಿವಕ್ಷಿತವಾಗಿರುವಾಗ ಕೇವಲೇತಿವೃತ್ತಕ್ಕೆ ಸೀಮಿತಗೊಳಿಸಬಹುದೇ—ಎಂದು. ಇಲ್ಲಿ ಮುಖ್ಯವಾಗಿ ನಾವು ಗಮನಿಸಬೇಕಾದುದು ವರ್ಣನೆಯ 'ಶಬ್ದತ್ವ' ಮತ್ತು ಇತಿವೃತ್ತದ 'ಅರ್ಥತ್ವ'ಗಳನ್ನು. ಶಬ್ದಗಳ ಅನಾಕುಲತೆಯೆಂದುಭ ಏಮನೇ ಹೇಳುವ ಮಾತು ವರ್ಣನೆಗೆ ಸೇರುವ ವಿಚಾರವಲ್ಲವೇ ಎಂಬ ಆಕ್ಷೇಪವೂ ಸಾಧ್ಯ. ಆದರೆ ಈ ಅನಾಕುಲತೆಯು ಇತಿವೃತ್ತವನ್ನು ನಿರೂಪಿಸುವ ಶಬ್ದಗ್ರಾಮವನ್ನು ಕುರಿತದ್ದೆಂದು ಇಲ್ಲಿ ಸೂಚಿಸಬಹುದಾಗಿದೆ. ಹಾಗೆಂದ ಮಾತ್ರಕ್ಕೆ ವರ್ಣನೆಯನ್ನು ಕೈಬಿಟ್ಟಂತಲ್ಲ. ಕಾರಿಕೆಯಲ್ಲಿ 'ಶ್ರೀವಿಲಸಿತೇತಿವೃತ್ತ' ಎಂಬುದು ಮಾತ್ರವಲ್ಲದೆ 'ವ್ಯಾವರ್ಣನೆ' ಎಂದೂ ಮಾಡಿದೆ. ಇದು ಇತಿವೃತ್ತವನ್ನೂ, ಅದರ ರಮಣೀಯತೆಯನ್ನು ಸ್ಫುಟಗೊಳಿಸುವಂಥ ವಾಗ್ವ್ಯವಸಾಯವನ್ನೂ ಒಳಗೊಂಡಂತೆಯೇ ಸಮಸ್ತವಸ್ತುನಿರ್ವಹಣಕ್ಷಮವಾದ ಸುಂದರ ಶಬ್ದವ್ಯಾಪಾರವಾಗಿದೆ. ಆದುದರಿಂದ ಇಲ್ಲಿ ವ್ಯಷ್ಟಿವರ್ಣನೆಗಿಂತ ಹೆಚ್ಚಾಗಿ ಕಾವ್ಯದ ಸಮಗ್ರಸ್ವರೂಪದಲ್ಲಿರುವ ಸಮಷ್ಟಿವರ್ಣನೆಯೇ ವಿವಕ್ಷಿತವಾಗಿದೆ. ಆದುದರಿಂದ ಭಾವಿಕತ್ವವು ಅನಾಕುಲಶಬ್ದಗ್ರಾಮಘಟಿತವೂ, ಚಿತ್ರೋದಾತ್ತಾದ್ಭುತಾರ್ಥಸನ್ನಿಕೃಷ್ಟಸಂವಿಧಾನಸಂಪನ್ನವೂ ಆದ ಕೃತಿಯ ಆಸ್ವಾದ್ಯಗುಣವೆಂದರೆ ಸರಿಯಾದೀತು. ದಂಡಿಯ ಅಭಿಪ್ರಾಯವೂ ಇದಕ್ಕೆ ಪೋಷಕ.

ತದ್ಭಾವಿಕಮಿತಿ ಪ್ರಾಹುಃ ಪ್ರಬಂಧವಿಷಯಂ ಗುಣಂ ।
ಭಾವಃ ಕವೇರ...

ಪರಸ್ಪರೋಪಕಾರಿತ್ವಂ ಸರ್ವೇಷಾಂ ವಸ್ತುಪರ್ವಣಾಂ ।
ವಿಶೇಷಣಾನಾಂ ವ್ಯರ್ಥಾನಾಮಕ್ರಿಯಾ ಸ್ಥಾನವರ್ಣನಾ ॥
ವ್ಯಕ್ತಿರುಕ್ತಿಕ್ರಮಬಲಾದ್ಗಭೀರಸ್ಯಾಪಿ ವಸ್ತುನಃ ।
ಭಾವಾಯತ್ತಮಿದಂ ಸರ್ವಮಿತಿ ತದ್ಭಾವಿಕಂ ವಿದುಃ ॥

(ಕಾವ್ಯಾದರ್ಶ II-೩೬೪, ೫, ೬)

ಈ ಮಾತುಗಳಲ್ಲಿ ಭಾವಿಕತ್ವವು ಇತಿವೃತ್ತ-ವರ್ಣನೆಗಳೆರಡರ ರಸಪಾಕದಿಂದ ಉಂಟಾದ ಆಸ್ವಾದ್ಯಪರಿಣಾಮಗುಣವೆಂದು ಸ್ಫುರಿಸಿದರೂ ಪ್ರಬಂಧವಿಷಯ, ವಸ್ತುಪರ್ವಗಳೆಲ್ಲವುಗಳ ಪರಸ್ಪರೋಪಕಾರಿತ್ವ, ಮತ್ತಿವುಗಳಿಗೆ ಪೂರಕವಾಗಿ ; ಅಂದರೆ ಇತಿವೃತ್ತವು ವಿಶೇಷ್ಯವಾದರೆ ವರ್ಣನಾದಿಗಳು ಸಾರ್ಥಕವಿಶೇಷಣಗಳಾಗಿ ಬರುವಂಥ ಔಚಿತ್ಯ, ಮತ್ತಿವೆಲ್ಲಕ್ಕೂ ಕಲಶಪ್ರಾಯವಾಗಿ ಗಂಭೀರವಸ್ತುವರ್ಣನೆಗೆ ಬೇಕಾದ ಉಕ್ತಿವಿಶೇಷವೇ ಮೊದಲಾದ ಸಮಸ್ತವೆಂದು ನಿಚ್ಚಳವಾಗಿಯೇ ತಿಳಿಯುತ್ತದೆ. ಇದಲ್ಲದೆ ದಂಡಿಯು ಕಡೆಗೆ.

ಯಚ್ಚ ಸಂಧ್ಯಂಗವೃತ್ತ್ಯಂಗ ಲಕ್ಷಣಾದ್ಯಾಗಮಾಂತರೇ ।
ವ್ಯಾವರ್ಣಿತಮಿದಂ ಚೇಷ್ಟಮಲಂಕಾರತಯೈವ ನಃ ॥ (II-೩೬೭)

ಎಂದು ಹೇಳುವಾಗ ಇತಿವೃತ್ತವೂ ಅಲಂಕಾರವೇ ಎಂಬಂಥ ನಿಲುವಿಗೆ ಬಂದಂತೆ ಭಾಸವಾಗಬಹುದು. ಆದರೆ ಇಲ್ಲಿ ವಸ್ತುಮೂಲವಾದ ಸಂವಿಧಾನದ ಅಂಗೋಪಾಂಗಗಳೆನಿಸಿದ ಸಂಧ್ಯಂಗಾದಿಗಳೂ ವೃತ್ತ್ಯಂಗಾದಿಗಳೂ ಅಲಂಕಾರ್ಯವಾದ ಇತಿವೃತ್ತಕ್ಕೆ ಅಲಂಕಾರಗಳೆಂದು ಗ್ರಹಿಸಿದಾಗ ವಿರೋಧಪರಿಹಾರ ಶಕ್ಯ. ರಸಾದಿಯೂ ಕಾವ್ಯದ ಆಸ್ವಾದ್ಯರೂಪವೆನಿಸಿದ 'ಆನಂದ'ದ ದೃಷ್ಟಿಯಿಂದ ಕಂಡಾಗ ಅಲಂಕಾರವೆಂಬ ಮಟ್ಟಕ್ಕೂ ವಾದಿಸುವ ಸಾಧ್ಯತೆಗಳಿರುವಾಗ ಇಂಥ ವಿಚಾರಗಳನ್ನು ನಿರ್ಣಯಿಸಲು ಶ್ರಮಿಸಬೇಕಿಲ್ಲ. (ನಿರುಪಾಧಿಕವಾದ ಆನಂದಕ್ಕೆ ರಸಾದಿಗಳು ಉಪಾಧಿಗಳಾದುವೆಂದಲ್ಲಿ ಸಹಜವಾಗಿಯೇ ಆನಂದವನ್ನಾಶ್ರಯಿಸಿದ ರಸಾದಿಗಳು ಅಲಂಕಾರವೆನಿಸುತ್ತವೆನ್ನಬೇಕು. ಆದರೆ ಆನಂದವು ಸ್ವತಃ ಸಂಪೂರ್ಣ, ಸುಂದರವೆಂದಾಗ ರಸಾದಿಗಳು ಅಲಂಕೃತಿಗಳಾದಾಗ ಅದಕ್ಕೆ ಅನಾವಶ್ಯಕ ಭಾರವಲ್ಲವೇ ಎಂಬ ವಾದವೂ ಸಾಧ್ಯ. ಆದರೆ ವ್ಯವಹಾರದಲ್ಲಿ ಬ್ರಹ್ಮಾನಂದ, ರಸಾನಂದಾದಿ ರೂಪಗಳುಂಟಲ್ಲಾ ಎಂದು ಪ್ರತಿವಾದವನ್ನೂ ಆರಂಭಿಸಬಹುದು) ಆದುದರಿಂದ ದಂಡಿಯ ಮತವು ಭಾಮಹನ ಅಭಿಪ್ರಾಯಕ್ಕಿಂತಲೂ ಹೆಚ್ಚು ಕಂಠೋಕ್ತವಾಗಿ ವರ್ಣನಾಂಶವನ್ನೂ ಇತಿವೃತ್ತ ಮಹತ್ತ್ವದೊಡನೆ ಸಮಷ್ಟಿಯಾಗಿಸಿ ಭಾವಿಕತ್ವವನ್ನು ನಿರೂಪಿಸುತ್ತದೆನ್ನಬಹುದು. ಜಯದೇವನು ಇಂಥ ಭಾವಿಕತ್ವಸ್ಥಿತಿಯನ್ನು ಸಂಕ್ಷೇಪವಾಗಿಯಾದರೂ ಅತ್ಯಂತ ಪರಿಣಾಮಕಾರಿಯಾಗಿ ಇಂತು ಸೂತ್ರಿಸಿದ್ದಾನೆ :

ದೇಶಾತ್ಮ ವಿಪ್ರಕೃಷ್ಟಸ್ಯ ದರ್ಶನಂ ಭಾವಿಕಚ್ಛವಿಃ ॥ (ಚಂದ್ರಾಲೋಕ V-೧೧೪)

ಆದರೂ ರುಯ್ಯಕಾದಿಗಳೂ ಸೇರಿದಂತೆ ಅನೇಕ ಅರ್ವಾಚೀನರು ಭಾವಿಕತ್ವವನ್ನು ಕೇವಲ ಅರ್ಥಾಲಂಕಾರಗಳಲ್ಲೊಂದೆಂದು ಏಕದೇಶೀಯವಾಗಿ ಗಣಿಸಿದ್ದು ಅಷ್ಟು ಸರಿಯಲ್ಲ.

...ಅನುಭೂತಿಗುಣಸಂಬಂಧಿತವಾದದ್ದು.[5] ಅಲ್ಲದೆ ಭಾವಿಕವೆಂಬುದು ಸಾಮಾನ್ಯವಾದ ಅಲಂಕಾರವೆಂದೂ, ಭಾವಿಕತ್ವವೆಂಬುದು ಇಡಿಯ ಪ್ರಬಂಧಗುಣಸಂಬಂಧಿತವೆಂದೂ ಹೇಳುವುದು ಸರಿಯಾಗದು. ಏಕೆಂದರೆ ಭಾಮಹದಂಡಿ ಇಬ್ಬರೂ ಭಾವಿಕತ್ವ-ಭಾವಿಕಗಳೆರಡನ್ನೂ ಸಮಾನಾರ್ಥದಲ್ಲಿಯೇ ಬಳಸಿದ್ದಾರೆ. ಹೀಗಲ್ಲದೆ ಭಾವಿಕವು ಸಾಮಾನ್ಯಾಲಂಕಾರವೆಂದೂ, ಭಾವಿಕತ್ವವು ತದ್ವ್ಯಂಜನೆಯಿಂದ ಉಂಟಾಗುವ ವಿಶಾಲಪರಿಣಾಮವೆಂದೂ ಹೇಳುವ ಪಕ್ಷದಲ್ಲಿ ಪ್ರತಿಯೊಂದು ಅಲಂಕಾರವೂ ಇದೇ ರೀತಿಯಲ್ಲಿ ವ್ಯಾಪಕಾರ್ಥದಲ್ಲಿ ಬಳಕೆಗೆ ಬರಲು ಸಾಧ್ಯ. (ರೂಪಕತ್ವ, ಕಾವ್ಯಲಿಂಗತ್ವ, ಶ್ಲೇಷತ್ವ, ಅನನ್ವಯತ್ವ...ಇತ್ಯಾದಿ) ಈ ರೀತಿಯ ವಿಸ್ತರಣವು ಪರಮಾರ್ಥದಲ್ಲಿ ಸರಿಯಾಗಬಹುದಾದರೂ ಪ್ರಕೃತಚರ್ಚೆಗಳಲ್ಲಿ ಸವಿಯಾಗದು. ಇಷ್ಟು ಜಿಜ್ಞಾಸೆಯಿದ್ದರೂ ರುಯ್ಯಕಭಟ್ಟಗೋಪಾಲಾದಿಗಳು ಭಾವಿಕತ್ವದ ವ್ಯಾಪ್ತಿಯನ್ನು ಹೇಳಿಯೂ ಭಾವಿಕವನ್ನು ಸಂಕೋಚಗೊಳಿಸಿದ್ದಾರೆ. (ಆದರೆ 'ನವ್ಯ'ರಲ್ಲೊಬ್ಬನಾದ ಹೇಮಚಂದ್ರನು 'ಭಾವಿಕಂತು ಭೂತಭಾವಿ ಪದಾರ್ಥಪ್ರತ್ಯಕ್ಷೀಕಾರಾತ್ಮಕಮಭಿನೇಯಪ್ರಬಂಧ ಏವ ಭವತಿ। ಯದ್ಯಪಿ ಮುಕ್ತಕಾದಾವಪಿ ದೃಶ್ಯತೇ, ತಥಾಪಿನ ತತ್ಸ್ವದತೇ।' ಎಂದಿದ್ದಾನೆ. ಕಾವ್ಯಾನುಶಾಸನ ; ಕಾವ್ಯಮಾಲಾ, ೧೯೩೪, ಪು. ೨೯೩) 'ಭಾವಶ್ಚ ಭಾವನಾ ಪುನಶ್ಚೇತಸಿ ವಿನಿವೇಶನಮಾದರಪ್ರತ್ಯಯೇನ ಹೃದಯೇ ಧಾರ್ಯಮಾಣತ್ವಂ ಯತ್ರಯೋಗಿನಾಮಿವ ಕಾವ್ಯವೇದಿನಾಂ ಅಭಿಯೋಗಃ' ಎಂದು ತಾತ್ತ್ವಿಕವಾಗಿ ನುಡಿದರೂ ಅದು ಪ್ರಯೋಗದಲ್ಲಿ ಬಂದಿಲ್ಲ. ಒಟ್ಟಾರೆ ಹೇಳುವುದಾದರೆ ಭಾವಿಕತ್ವವು ಪ್ರಬಂಧ ಗುಣ. ಹೀಗಾಗಿ ಅದು ಪ್ರಬಂಧಧ್ವನಿ, ಪ್ರಬಂಧ ವಕ್ರತೆಗಳಂತೆಯೇ 'ಪ್ರಬಂಧಾಲಂಕಾರ'ವೆಂದೂ ಕರೆಯಲ್ಪಡಬಹುದಾದ ಮೌಲಿಕತತ್ತ್ವವೆಂದು ಎಚ್. ತಿಪ್ಪೇರುದ್ರಸ್ವಾಮಿಯವರು ತರ್ಕಿಸುವುದು ಸಾಧು.[6] ಇದು ಮತ್ತೆ ಪ್ರಬಂಧಧ್ವನಿ–ಪ್ರಬಂಧವಕ್ರತೆಗಳ ಇತಿವೃತ್ತಪ್ರಧಾನವಿವಕ್ಷೆಯನ್ನೇ ಧ್ವನಿಸುತ್ತದೆ. ಆದುದರಿಂದ ಭಾವಿಕತ್ವವು ಶ್ರೀವಿಲಸಿತೇತಿವೃತ್ತವ್ಯಾವರ್ಣನೆಯೆಂಬ ಕವಿತಾಸಮಷ್ಟಿಯ ನಿರ್ವಹಣ ಗುಣವೇ ಆಗಿರುವುದು ಮತ್ತೆ ಮತ್ತೆ ಸ್ಪಷ್ಟವಾಗುತ್ತದೆ.

ಇತಿವೃತ್ತೋಚಿತಂ ಪಾತ್ರಂ ಪಾತ್ರೋಚಿತ ಸುವರ್ಣನಂ ।
ಕೃತಿಲಕ್ಷ್ಯಂ ರಸೋದಾರಂ ಶಬ್ದಾರ್ಥಂ ವರ್ಣನೋಚಿತಂ ॥

ಸಂವಿಧಾನವಿಶೇಷತ್ವಸ್ಪಂದ ಸೌಂದರ್ಯ_ಬಂಧುರಂ ।
ಸಂವಿದಾನಂದ ಸಂದರ್ಭಂ ವೃತ್ತಂ ಸಂಘರ್ಷಣೋದ್ಭವಂ ॥

ಮಹೋನ್ನತೇತಿವೃತ್ತಾಸ್ಥಿಶ್ರಿತವರ್ಣನ ವಿಗ್ರಹಂ ।
ಮಹಾಕವಿಗಳೊಳ್ ಸಲ್ಗುಂ ರಸಧ್ವನ್ಯಾತ್ಮಬಂಧುರಂ ॥

ಈಗ ವರ್ಣನೆ-ಇತಿವೃತ್ತಗಳ ಶಬ್ದಾರ್ಥೀಯ ಸಂಕೇತವನ್ನೂ, ಅವುಗಳ ಪರಸ್ಪರ ಮಹತ್ತ್ವವನ್ನೂ ; ಅಂತೆಯೇ ಅಲಂಕ...

ಚಿದ್ಭಾವ ವಿಶೇಷತೆಯನ್ನೂ ; ಮಿಗಿಲಾಗಿ ಅವುಗಳ ಕಿಂಚಿತ್ಸಾಪೇಕ್ಷಭಾವವನ್ನೂ ತಿಳಿದು ಸಂಕಲಿತವಾದ ತತ್ಸೌಂದರ್ಯವನ್ನು ಪ್ರಾಬಂಧಿಕವಾದ ಭಾವಿಕತ್ವವೆಂದೂ ಅರಿತದ್ದಾಯಿತು. ಹಾಗಾದರೆ ವರ್ಣನೆ–ಇತಿವೃತ್ತಗಳ ವಿನಿಯೋಗವಿಧಾನವೇನು ? ಅದು ಔಚಿತ್ಯಪರ್ಯವಸಿತ. ಇದನ್ನೇ ಪ್ರಸ್ತುತ ಪರಿಕರ ಶ್ಲೋಕದಲ್ಲಿ ತಿಳಿಸಿರುವುದಾಗಿದೆ. ಇತಿವೃತ್ತದ ಹರಹನ್ನು ಕುರಿತಂತೆ ನಾಟ್ಯಶಾಸ್ತ್ರ ಸುಸ್ಪಷ್ಟವಾಗಿ ಹೇಳುತ್ತಾ ಆಧಿಕಾರಿಕ, ಪ್ರಾಸಂಗಿಕಾದಿ ವಿಭಾಗಸೌಲಭ್ಯಗಳನ್ನೂ ಗುರುತಿಸಿದೆ.

ಆಧಿಕಾರಿಕಮೇಕಂ ಸ್ಯಾತ್ಪ್ರಾಸಂಗಿಕಮಥಾಪರಂ ॥
ಕಾರಣಾತ್ಫಲಯೋಗಸ್ಯ ವೃತ್ತಂ ಸ್ಯಾದಾಧಿಕಾರಿಕಂ ।
ತಸ್ಯೋಪಕರಣಾರ್ಥಂ ತು ಕೀರ್ತ್ಯತೇ ಹ್ಯಾನುಷಂಗಿಕಂ ॥
ಕವೇಃ ಪ್ರಯತ್ನಾನ್ನೇತೄಣಾಂ ಯುಕ್ತಾನಾಂ ವಿಧ್ಯುಪಾಶ್ರಯಾತ್ ।
ಕಲ್ಪ್ಯತೇಹಿ ಫಲಪ್ರಾಪ್ತಿಃ ಸಮುತ್ಕರ್ಷಾತ್ಫಲಸ್ಯ ಚ ॥ (IXX–೨, ೪, ೫)

ಇದರ ಮೇಲಿನ ಅಭಿನವಗುಪ್ತೀಯ ವ್ಯಾಖ್ಯೆಯೂ ಮನನೀಯ. "ಆಧಿಕಾರಿಕಂ ನಾಮ ಯಸ್ಮಿನ್ನಿತಿವೃತ್ತಂ ಫಲಸಂಬಂಧಂ ಕರೋತಿ ಸ ಕವಿನಾ ವರ್ಣನೋಪಾಯಾರೋಹಮಾನೀತಃ ತತ್ಸಮರ್ಥಾಚರಣೇನ ಪ್ರಯುಜ್ಯತೇ । ಕವಿರ್ಯತ್ಫಲಮುತ್ಕರ್ಷೇಣ ವಿವಕ್ಷತಿ ತತ್ಪ್ರಧಾನಂ ಫಲಂ...ತದುಚಿತ ನಾಯಕಗ್ರಹಣೇನ ಕವಿಃ ಪ್ರವರ್ತಮಾನೋ ನ ಸ್ವೇಚ್ಛಯಾಪ್ರವೃತ್ತೋ ಭವತಿ ।"

ಇದಲ್ಲದೆ ಭರತಮುನಿ ಮತ್ತೂ ಮುಂದುವರೆದು ಕೇವಲ ಮಹದ್ವಸ್ತುವೊಂದನ್ನು ಗ್ರಹಿಸಿದರೆ ಮಾತ್ರ ಸಾಲದು, ಅದರ ನಿರ್ವಹಣೆಯೂ ಮಹಾರೀತಿಯಲ್ಲಿ ಸಾಗಬೇಕೆಂದು ಸೂಚಿಸುತ್ತಾ ಸಂಧಿ-ಸಂಧ್ಯಂಗವೇ ಮೊದಲಾದ ಸಮಸ್ತೇತಿವೃತ್ತಸಂಬಂಧಿತವಿಚಾರಾಭಿನಿವೇಶವನ್ನು ವಿಶದೀಕರಿಸುತ್ತಾನೆ.

ಸಂಧೀನಾಂ ಯಾನಿ ವೃತ್ತಾನಿ ಪ್ರದೇಶೇಷ್ವನುಪೂರ್ವಶಃ ।
ಸ್ವಸಂಪದ್ಗುಣಯುಕ್ತಾನಿ ತಾನ್ಯಂಗಾನ್ಯುಪಧಾರಯೇತ್ ॥

ಇಷ್ಟಾರ್ಥಸ್ಯ ರಚನಾ ವೃತ್ತಾಂತಸ್ಯಾನುಪಕ್ಷಯಃ ।
ರಾಗಪ್ರಾಪ್ತಿಃ ಪ್ರಯೋಗಸ್ಯ ಗುಹ್ಯಾನಾಂ ಚೈವ ಗೂಹನಂ ॥

ಆಶ್ಚರ್ಯವದಭಿಖ್ಯಾನಂ ಪ್ರಕಾಶಾನಾಂ ಪ್ರಕಾಶನಂ ।
ಅಂಗಾನಾಂ ಷಡ್ವಿಧಂ ಹ್ಯೇತದ್ದೃಷ್ಟಂ ಶಾಸ್ತ್ರೇಪ್ರಯೋಜನಂ ॥

ಉದಾತ್ತಮಪಿ ಯತ್ಕಾವ್ಯಂ ಸ್ಯಾದಂಗೇ ಪರಿವರ್ಜಿತಂ ।
ಹೀನತ್ವಾದ್ಧಿ ಪ್ರಯೋಗಸ್ಯ ನ ಸತಾಂ ರಂಜಯೇನ್ಮನಃ ॥

ಕಾವ್ಯಂ ಯದಪಿಹೀನಾರ್ಥಂ ಸಮ್ಯಗಂಗೈಸ್ಸಮನ್ವಿತಂ ।
ದೀಪ್ತತ್ವಾತ್ತು ಪ್ರಯೋಗಸ್ಯ ಶೋಭಮೇತಿ ನ ಸಂಶಯಃ ॥ (IXX–೫೦ ೧, ೨, ೪, ೫)

ಚಿದ್ಭಾವ ವಿಶೇಷತೆಯನ್ನೂ ; ಮಿಗಿಲಾಗಿ ಅವುಗಳ ಕಿಂಚಿತ್ಸಾಪೇಕ್ಷಭಾವವನ್ನೂ ತಿಳಿದು ಸಂಕಲಿತವಾದ ತತ್ಸೌಂದರ್ಯವನ್ನು ಪ್ರಾಬಂಧಿಕವಾದ ಭಾವಿಕತ್ವವೆಂದೂ ಅರಿತದ್ದಾಯಿತು. ಹಾಗಾದರೆ ವರ್ಣನೆ–ಇತಿವೃತ್ತಗಳ ವಿನಿಯೋಗವಿಧಾನವೇನು ? ಅದು ಔಚಿತ್ಯಪರ್ಯವಸಿತ. ಇದನ್ನೇ ಪ್ರಸ್ತುತ ಪರಿಕರ ಶ್ಲೋಕದಲ್ಲಿ ತಿಳಿಸಿರುವುದಾಗಿದೆ. ಇತಿವೃತ್ತದ ಹರಹನ್ನು ಕುರಿತಂತೆ ನಾಟ್ಯಶಾಸ್ತ್ರ ಸುಸ್ಪಷ್ಟವಾಗಿ ಹೇಳುತ್ತಾ ಆಧಿಕಾರಿಕ, ಪ್ರಾಸಂಗಿಕಾದಿ ವಿಭಾಗಸೌಲಭ್ಯಗಳನ್ನೂ ಗುರುತಿಸಿದೆ.

ಆಧಿಕಾರಿಕಮೇಕಂ ಸ್ಯಾತ್ಪ್ರಾಸಂಗಿಕಮಥಾಪರಂ ॥
ಕಾರಣಾತ್ಫಲಯೋಗಸ್ಯ ವೃತ್ತಂ ಸ್ಯಾದಾಧಿಕಾರಿಕಂ ।
ತಸ್ಯೋಪಕರಣಾರ್ಥಂ ತು ಕೀರ್ತ್ಯತೇ ಹ್ಯಾನುಷಂಗಿಕಂ ॥
ಕವೇಃ ಪ್ರಯತ್ನಾನ್ನೇತೃಣಾಂ ಯುಕ್ತಾನಾಂ ವಿಧ್ಯಪಾಶ್ರಯಾತ್ ।
ಕಲ್ಪ್ಯತೇಹಿ ಫಲಪ್ರಾಪ್ತಿಃ ಸಮುತ್ಕರ್ಷಾತ್ಫಲಸ್ಯ ಚ ॥ (IXX–೨, ೮, ೫)

ಇದರ ಮೇಲಿನ ಅಭಿನವಗುಪ್ತೀಯ ವ್ಯಾಖ್ಯೆಯೂ ಮನನೀಯ. "ಆಧಿಕಾರಿಕಂ ನಾಮ ಯಸ್ಮಿನ್ನಿತಿವೃತ್ತಂ ಫಲಸಂಬಂಧಂ ಕರೋತಿ ಸ ಕವಿನಾ ವರ್ಣನೋಪಾಯಾರೋಹಮಾನೀತಃ ತತ್ಸಮರ್ಥಾಚರಣೇನ ಪ್ರಯುಜ್ಯತೇ । ಕವಿರ್ಯತ್ಫಲಮುತ್ಕರ್ಷೇಣ ವಿವಕ್ಷತಿ ತತ್ಪ್ರಧಾನಂ ಫಲಂ...ತದುಚಿತ ನಾಯಕಗ್ರಹಣೇನ ಕವಿಃ ಪ್ರವರ್ತಮಾನೋ ನ ಸ್ವೇಚ್ಛಯಾಪ್ರವೃತ್ತೋ ಭವತಿ ।"

ಇದಲ್ಲದೆ ಭರತಮುನಿ ಮತ್ತೂ ಮುಂದುವರೆದು ಕೇವಲ ಮಹದ್ವಸ್ತುವೊಂದನ್ನು ಗ್ರಹಿಸಿದರೆ ಮಾತ್ರ ಸಾಲದು, ಅದರ ನಿರ್ವಹಣೆಯೂ ಮಹಾರೀತಿಯಲ್ಲಿ ಸಾಗಬೇಕೆಂದು ಸೂಚಿಸುತ್ತಾ ಸಂಧಿ-ಸಂಧ್ಯಂಗವೇ ಮೊದಲಾದ ಸಮಸ್ತೇತಿವೃತ್ತಸಂಬಂಧಿತವಿಚಾರಾಭಿನಿವೇಶವನ್ನು ವಿಶದೀಕರಿಸುತ್ತಾನೆ.

ಸಂಧೀನಾಂ ಯಾನಿ ವೃತ್ತಾನಿ ಪ್ರದೇಶೇಷ್ವನುಪೂರ್ವಶಃ ।
ಸ್ವಸಂಪದ್ಗುಣಯುಕ್ತಾನಿ ತಾನ್ಯಂಗಾನ್ಯುಪಧಾರಯೇತ್ ॥

ಇಷ್ಟಾರ್ಥಸ್ಯ ರಚನಾ ವೃತ್ತಾಂತಸ್ಯಾನುಪಕ್ಷಯಃ ।
ರಾಗಪ್ರಾಪ್ತಿಃ ಪ್ರಯೋಗಸ್ಯ ಗುಹ್ಯಾನಾಂ ಚೈವ ಗೂಹನಂ ॥

ಆಶ್ಚರ್ಯವದಭಿಖ್ಯಾನಂ ಪ್ರಕಾಶಾನಾಂ ಪ್ರಕಾಶನಂ ।
ಅಂಗಾನಾಂ ಷಡ್ವಿಧ್ಯೈತದ್ದೃಷ್ಟಂ ಶಾಸ್ತ್ರೇಪ್ರಯೋಜನಂ ॥

ಉದಾತ್ತಮಪಿ ಯತ್ಕಾವ್ಯಂ ಸ್ಯಾದಂಗೇ ಪರಿವರ್ಜಿತಂ ।
ಹೀನತ್ವಾದ್ಧಿ ಪ್ರಯೋಗಸ್ಯ ನ ಸತಾಂ ರಂಜಯೇನ್ಮನಃ ॥

ಕಾವ್ಯಂ ಯದಪಿಹೀನಾರ್ಥಂ ಸಮ್ಯಗಂಗೈಸ್ಸಮನ್ವಿತಂ ।
ದೀಪ್ತತ್ವಾತ್ತು ಪ್ರಯೋಗಸ್ಯ ಶೋಭಮೇತಿ ನ ಸಂಶಯಃ ॥ (IXX–೫೦ ೧, ೨, ೪, ೫)

"ಉದಾತ್ತಮಪೀತಿ—ಲಕ್ಷಣಗುಣಾಲಂಕೃತಿಯುಕ್ತಮಿತ್ಯರ್ಥಃ । ಹೀನಾರ್ಥಮಿತಿ—ಸ್ವಲ್ಪಮಪಿ ಪ್ರಯೋಜನಂ ಪ್ರಹಸನನಿದರ್ಶನಕಥಾಖ್ಯಾಯಿಕಾದಿ । ಪ್ರಯೋಗಃಪ್ರಯುಕ್ತಿಸ್ತತ್ಪ್ರಾಂಗಂ ಪ್ರಯೋಗಂ ರಂಜನಾತಿಶಯೋ ವ್ಯುತ್ಪತ್ತ್ಯತಿಶಯಶ್ಚ ತದುಭಯಂ ತತ್ರ ಕಾವ್ಯೇ ದೀಪ್ತಂ ಸ್ಫುಟಮಿತ್ಯರ್ಥಃ ।" (ಅಭಿನವ ಭಾರತೀ)

ಈ ಕಾರಣದಿಂದಲೇ ವಸ್ತುನಿರ್ವಹಣಗಳೆರಡೂ ಮುಖ್ಯವಾಗುತ್ತವೆ. ಮಹಾಪುರುಷ ಸಂಶ್ರಯದಿಂದಲಾಗಲಿ, ಪ್ರಣಯಿಗಳಲ್ಲಿ ದಾಕ್ಷಿಣ್ಯದಿಂದಾಗಲಿ ಕೇವಲ ಮೂಲವಸ್ತು ಮಹಿಮೆಯನ್ನು ಮನದಲ್ಲಿರಿಸಿಕೊಂಡು ಪ್ರಕೃತಿಕಾವ್ಯದ ನಿರ್ವಹಣಸೌಂದರ್ಯದಲ್ಲಿ ಅವಜ್ಞೆಮಾಡುವುದೂ ಕಾಲಾಯಸದಿಂದ ನಿರ್ಮಿಸಿದ ಕಂಠಿಕೆ ಕಾಂಚನಮಾಲೆಯಂತಾಗುವುದೇ ಎಂದು ಬರಿಯ ವಸ್ತುಮಹತ್ತ್ವಮಾತ್ರವಿಶ್ರಾಂತಚಿತ್ತರಾಗುವುದೂ ಸಲ್ಲದು. ಹಾಗೆಯೇ ವಸ್ತುವೇನೇ ಇರಲಿ ಕವಿಯ ನಿರ್ವಹಣೆಯೇ ದೊಡ್ಡದೆಂದೂ, ರಸವು ಕಥಾಮಾತ್ರಾಶ್ರಿತವಲ್ಲವೆನ್ನುವುದೂ ಅಸಾಧು. ಕಾಂಚನದಲ್ಲಿ ಕಮನೀಯಶಿಲ್ಪವನ್ನು ಸಾಧಿಸಬೇಕು. ಕನಕಕುಸುಮಕ್ಕೆ ಪರಿಮಳವನ್ನುಂಟುಮಾಡಬೇಕು. ಇದಕ್ಕಾಗಿಯೇ ವಸ್ತುವಿಗೆ ತಕ್ಕ ಸಂವಿಧಾನ, ಸಂವಿಧಾನಕ್ಕೆ ತಕ್ಕ ಪ್ರಕೃತಿಗಳು, ಪ್ರಕೃತ್ಯುಚಿತವಾದ ವರ್ಣನೆಗಳು, ವರ್ಣನೋಚಿತವಾದ ವಾಗ್ಗುಂಫನ ಅತ್ಯಗತ್ಯ.

ಸಂವಿಧಾನವು ನಿರ್ವಿಶೇಷವೂ, ಇತಿವೃತ್ತವು ನಿಸ್ಸಂಘರ್ಷವೂ ಆಗಿರಬಾರದು. ಸಂಘರ್ಷವೆಂಬ ಮಾತು ಪ್ರಾಚ್ಯಭಾರತೀಯ ಕಾವ್ಯಮೀಮಾಂಸೆಯಲ್ಲಿ ಪ್ರಸಿದ್ಧವೆಂಬಂತೆ ವ್ಯಾಪ್ತಿಯಲ್ಲಿಲ್ಲದಿದ್ದರೂ ಕಥಾಪುರೋಭಿವೃದ್ಧಿಗೂ ವಿವಿಧ ಪಾತ್ರ(ಪ್ರಕೃತಿ)ಪೋಷಣೆಗೂ ಅವಶ್ಯವೆಂಬುದು ಸುವಿದಿತ. ಶ್ರೀಮದ್ರಾಮಾಯಣ, ಮಹಾಭಾರತಾದಿಗಳ ಧರ್ಮಾಧರ್ಮ–ಸದಸತ್ಸಂಘರ್ಷವು ಲೋಕವಿಖ್ಯಾತ. ಪ್ರತಿಯೊಂದು ಮಹಾಕಾವ್ಯವೂ ಮಂತ್ರ, ದೂತ, ಪ್ರಯಾಣ, ಆಜಿ, ನಾಯಕಾಭ್ಯುದಯಾನ್ವಿತವಾಗಿರಬೇಕೆಂದಾಗ ಆಜಿ (ಯುದ್ಧ) ಎಂಬುದು ಕೇವಲ ಬಾಹ್ಯವಲ್ಲ ಅಂತರಂಗಿಕವೂ ಹೌದೆಂಬುದನ್ನು ಹಲವು ಕೃತಿಗಳಲ್ಲಿ ಕಾಣಬಹುದು. (ಉದಾ : 'ನೈಷಧೀಯಚರಿತ'ದಲ್ಲಿ ನಳನಿಗೆ ಬಂದ ಸಂದಿಗ್ಧ; ತನ್ನ ಪ್ರಿಯೆಗೆ ತಾನೇ ದೇವತೆಗಳ ಪರವಾಗಿ ಪ್ರಣಯಸಂದೇಶವನ್ನು ತಲಪಿಸುವ ದೌತ್ಯ ಕರ್ಮತ್ವ) ರಘುವಂಶದ ದಿಲೀಪನ ಗುರುಭಕ್ತಿ, ಸ್ವಾತ್ಮರಕ್ಷಣೆಗಳ ನಡುವಣ ಸಂಘರ್ಷ, ರಘುವಿನ ಪಿತೃಭಕ್ತಿ–ದೇವಭಕ್ತಿಗಳ ತುಮುಲ, ಶಿವ–ಪಾರ್ವತಿಯರು ದೈಹಿಕಾಕರ್ಷಣೆಯನ್ನು ಮೀರಿ ಸಂಯಮ ವಹಿಸುವ ಕಾಮ–ತಪಸ್ಸುಗಳ ದ್ವಂದ್ವವೇ ಮೊದಲಾದ ಅನೇಕ ಸಂದರ್ಭಗಳು ಸುಪ್ರಸಿದ್ಧ. ದೃಶ್ಯಕಾವ್ಯಗಳಲ್ಲಂತೂ ಅನೇಕತ್ರ ಇದು ವೇದ್ಯ. ಆದರೆ ಈಚೆಗಷ್ಟೇ ಈ ಬಗೆಯ ಸಂಘರ್ಷವನ್ನು ಹೊಸ ಅಂಶವೆಂಬಂತೆ ಪ್ರತಿಪಾದಿಸಲಾಗುತ್ತಿದೆ. ಸಂಘರ್ಷ **(Conflict)** ವಿಲ್ಲದ ಕೃತಿಗಳ ಪಟ್ಟಿಗೆ ಇಡಿಯ ಪ್ರಾಚೀನ ಸಾಹಿತ್ಯವನ್ನು ಸೇರಿಸಿ ಅವುಗಳನ್ನು ಕಡೆಗಣಿಸಲಾಗುತ್ತಿದೆ. ಅಷ್ಟೇ ಅಲ್ಲದೆ ವಿಶೇಷತೆಯನ್ನು ಸಂಪೂರ್ಣವಾಗಿ ಕಡೆಗಣಿಸಿ ಪ್ರಕೃತಿಗಳನ್ನು ಚಪ್ಪಟೆಯನ್ನಾಗಿಸತೊಡಗಿದ್ದಾರೆ! ವರ್ಣನೆಯು ಹೇಗೆ ಪಾತ್ರೌಚಿತ್ಯವನ್ನು ಮೀರಿದರೆ ವಿಡಂಬನೆಯಾಗುತ್ತದೋ ಹಾಗೆಯೇ

ವಿಶೇಷತೆ-ಸಂಘರ್ಷಣೆಗಳಿಲ್ಲದ ಇತಿವೃತ್ತವೂ ವ್ಯರ್ಥ. ಅನೇಕ ಸಂದರ್ಭಗಳಲ್ಲಿ ಈ ಪದವಿಲ್ಲದಿದ್ದಾಗ ಬರುವುದೆಲ್ಲ ಶ್ಲೋಕವಲ್ಲ, ಶೋಕವೇ! ಈ ಪಾಕವನ್ನು ಜಗನ್ನಾಥಪಾಠಕ್ ಎಂಬ ಆಧುನಿಕ ಸಂಸ್ಕೃತಕವಿ ಹೀಗೆ ವರ್ಣಿಸಿದ್ದಾರೆ.

ಕಿಯದ್ವಾರಂ ಕ್ರೌಂಚಾ ಇಹ ನ ನಿಹತಾ ವ್ಯಾಧವಿಶಿಖೈ
ಪರಂ ಕಾವ್ಯಂ ರಾಮಾಯಣಮಿದಮಿಹೈಕಂ ಸಮುದಿತಂ।
ಸ ಕಾಲಃ ಸಃ ಕರ್ತಾ ಸ ಚ ಹೃದಯವಾನ್ ಸಾ ಚ ಕವಿತಾ
ಸಮೇತ್ಯ ದ್ಯೋತಂತೇ ಯದಿ ಫಲತಿ ವಾಣೀವಿಲಸಿತಂ ॥[7]

(ಜಗದೊಳದೆಷ್ಟು ಬಾರಿ ಗೆಣೆಕೊಂಚೆಗಳಂ ಕೊಲಲಿಲ್ಲ ಲುಬ್ಧಕಾ
ಶುಗಚಯಮಾದೊಡೇಂ ಜನಿಸಿತೊರ್ಮೆಯೆ ಪೆರ್ಮೆಯ ರಾಮಕಾವ್ಯಮಾ
ಯುಗಮದು ಚಿತ್ತಮಃ ಕರುಣೆಮೇಣದು ಮಾನವದೇವತಾತ್ಮಮಾ
ಸೊಗಮದು ಕಾಣ್ಕೆ ವಾಣಿಯದದಿಲ್ಲದೆ ಸಲ್ವುದೆ ಜೀವನೋತ್ಕ್ರಮಂ?)

ಪಾತ್ರ (ಪ್ರಕೃತಿಯೆಂದು ಶ್ರವ್ಯಕಾವ್ಯಗಳಲ್ಲಿಯೂ, ಭೂಮಿಕೆಯೆಂದು ದೃಶ್ಯಕಾವ್ಯಗಳಲ್ಲಿಯೂ ವ್ಯವಹೃತವಾದದ್ದು)ಗಳ ವೈಶಿಷ್ಟ್ಯವು ಹೆಚ್ಚಾದಷ್ಟೂ ಸಂಘರ್ಷವು ತೀವ್ರವೂ, ವಿಸ್ತೃತವೂ, ಉನ್ನತವೂ, ಸರ್ವಗ್ರಾಸಿಯೂ, ದೇಶಕಾಲಪರಿಚ್ಛೇದರಾಹಿತ್ಯ ಶಕ್ತಿಸಂಪನ್ನವೂ ಆಗುತ್ತದೆ. ಆಗ ಈ ಬಗೆಯ ಪಾತ್ರದಿಂದ ಪ್ರತೀತವಾಗುವ ಭಾವಗಳು ಸಲೀಲವಾಗಿ ಸಾಧಾರಣೀಕೃತವಾಗಿ ರಸವು ಸ್ಫುರಿಸುವುದು. ಇದು ಕವಿದರ್ಶನವನ್ನು ಸಹೃದಯದರ್ಶನವನ್ನಾಗಿಸುತ್ತದೆ. ಇಂಥ ದರ್ಶನವು ಮಹೇತಿವೃತ್ತ-ಮಹಾವರ್ಗಸಂಪನ್ನವೂ ಆಗಿರುತ್ತದೆ. (ಈ ವಿಶೇಷತಾರಹಸ್ಯವನ್ನರಿತವರಾದುದರಿಂದಲೇ ಪ್ರಾಚ್ಯರು ವಿಶಿಷ್ಟವ್ಯಕ್ತಿಗಳನ್ನು ಇತಿವೃತ್ತದಲ್ಲಿ ಆಯ್ದುಕೊಂಡರು. ಇದನ್ನು ಕಂಡುಕೊಳ್ಳದೆ ಕೇವಲ ಧಾರ್ಮಿಕ, ರಾಜಕೀಯ ಕಾರಣಗಳಿಗಾಗಿ ದೇವಾಂಶಸಂಭೂತರ, ರಾಜರುಗಳ ಕಥೆಗಳನ್ನು ರಚಿಸಿದ ಪೂರ್ವಕವಿಗಳು ಕವಿಗಳೇ ಅಲ್ಲ. ಅವರು ಸಾಮಾನ್ಯ ಜನಪರ-ಸಹಾನುಭೂತಿಯುಳ್ಳವರೇ ಅಲ್ಲ ಎಂದು ನಿಂದಿಸುವುದು ಅನಭಿಜ್ಞತೆಯ ಕುರುಹು. ಎಂಥ ಕ್ಷುದ್ರವಸ್ತುವಾಗಲಿ ವಿಶಿಷ್ಟವಾಗಿ ಕವಿಗೆ ಕಂಡಾಗಲೇ ಕಾವ್ಯವು ಉತ್ತಮವಾಗುತ್ತದೆ. ಕವಿಯ ಕಣ್ಣಿಗೂ ನಿರ್ವಿಶೇಷವಾದ ವಸ್ತುವು ನೀರಸವೇ ಆಗುತ್ತದೆ.

ಉದಾಹರಣೆಯಿಂದ ಹೇಳುವುದಾದರೆ ಮಹಾಭಾರತದಲ್ಲಿ ಅಭಿಮನ್ಯುವಿನ ಸಾವು ಅತ್ಯಂತ ಹೃದಯಸ್ಪರ್ಶಿಯಾದದ್ದು. ಅದಕ್ಕೆ ಕಾರಣ ಆತನ ವಿದ್ಯಾವಯೋರೂಪ ಶೌರ್ಯಸ್ಥೈರ್ಯಾದಿಗಳೂ, ಅಸಹಾಯವಾದ ಅವಕ್ರವಿಕ್ರಮವೂ, ನೂತನ ಪರಿಣಯಪ್ರಾಪ್ತಸತ್ಕಾಂತಾಸೌಭಾಗ್ಯವೂ ಅಲ್ಲದೆ ಶ್ರೀಕೃಷ್ಣ-ಅರ್ಜುನ-ಧರ್ಮಜ-ಭೀಮಾದಿಗಳ ನೇಪಥ್ಯವಿರುವುದೂ ಆಗಿದೆ. ಮಹಾಭಾರತಯುದ್ಧದಲ್ಲಿ ಹದಿನೆಂಟು ಅಕ್ಷೌಹಿಣೀಸೈನ್ಯ ನಾಶವಾಯಿತು. ಅಲ್ಲದೆ ಅದೆಷ್ಟೋ ರಾಜಕುಮಾರರು ಮಡಿದರು. ದುರ್ಯೋಧನ, ಕರ್ಣಭೀಷ್ಮಾದಿಗಳ ಪುತ್ರರೂ ಗತಿಸಿದರು. ಇಷ್ಟಿದ್ದೂ ವ್ಯಾಸರ ಪ್ರಕಾರ ಅಭಿಮನ್ಯುವಿನ ಸಾವೇ ಸಹೃದಯರನ್ನು ತೀವ್ರವಾಗಿ ತಟ್ಟುತ್ತದೆ. ಇದಕ್ಕೆ ಕಾರಣ

ಆತನ ವಿಶೇಷತೆಯೇ. ಯಾರೋ ಒಬ್ಬ ಅನಾಮಧೇಯ ಸೈನಿಕನ ಸಾವು ಮಹಾಭಾರತದಲ್ಲಿ ಹೀಗೆ ಪರಿಣಮಿಸದು. ಇದರಿಂದಾಗಿ ಅಭಿಮನ್ಯುವಿನ ಪ್ರಾಣ ಅಮೂಲ್ಯವೆಂದೂ ಸೈನಿಕಪ್ರಾಣವು ಕ್ಷುದ್ರವೆಂದೂ ನಿಗಮನವಲ್ಲ. ಆ ಸೈನಿಕನ ಪ್ರಾಣಹಾನಿಯು ಸಹೃದಯನ ಮನಸ್ಸನ್ನು ತಟ್ಟುವಷ್ಟು ತೀವ್ರವಾಗಿಲ್ಲ; ಅದಕ್ಕೆ ಕಾರಣ ಆ ಸಂನಿವೇಶದ ನಿರ್ವಿಶೇಷತೆ ಎಂದಷ್ಟೇ ತಾತ್ಪರ್ಯ. ಒಂದು ವೇಳೆ ಕವಿಯು ಆ ಸೈನಿಕನಲ್ಲಿಯೂ ವಿಶೇಷತೆಯನ್ನು ಸಮರ್ಥವಾಗಿ, ಉಚಿತವಾಗಿ ಮೂಡಿಸಿದರೆ ಮಾತ್ರ ರಸಪ್ರತೀತಿಯಾಗುತ್ತದೆ. ಆದರೆ ಈ ಸಾಹಸವು ಸರ್ವತ್ರ ಸಾಧ್ಯವಾಗದು. ಬಹುತೇಕ ಈ ಬಗೆಯ ಅಸ್ಥಾನೋದಾತ್ತೀಕರಣವು ವಿಡಂಬನೆಯೇ ಆದೀತು. ಏಕೆಂದರೆ ಎಲ್ಲರ ಬದುಕಿನಲ್ಲಿಯೂ ಲೋಕೋತ್ತರ ಸಂಘರ್ಷವಿರುವುದಿಲ್ಲ. ಇಲ್ಲಿ ಲೋಕೋತ್ತರವೆಂಬ ಶಬ್ದ ಬಹುಮುಖ್ಯ. ಇದು 'ಲೋಕೋತ್ತರ'ವೇ ಹೊರತು 'ಲೋಕಬಾಹ್ಯ'ವಲ್ಲ! ಶ್ರೀರಾಮನಿಗೆ ರಾಜ್ಯವು ದಶರಥನಿಂದ ಬರಬೇಕಾದದ್ದು ಲೋಕರೂಢಿ. ಕೈಕೇಯಿಯ ಹಠವೂ ಅಷ್ಟೇ. ಆದರೆ ರಾಜ್ಯಪ್ರಾಪ್ತಿಗೆ ಧಕ್ಕೆ ಬಂದಾದ ಶ್ರೀರಾಮನು ನಡೆದುಕೊಂಡರೀತಿಯೂ, ಬಂದ ರಾಜ್ಯವನ್ನು ಭರತನು ತಿರಸ್ಕರಿಸಿದ್ದೂ ಲೋಕೋತ್ತರ. ಹಾಗೆಂದು ಶ್ರೀರಾಮನು ದ್ವಂದ್ವಭಾವಗಳಿಲ್ಲದವನೇನಲ್ಲ. ತನ್ನ ರಾಜ್ಯತ್ಯಾಗದ ಬಗೆಗೂ ಸ್ವಲ್ಪ ದುಃಖವಿದ್ದಂತೆ ಆತನಿಂದಲೇ ತಿಳಿಯುತ್ತದೆ (ಅಯೋಧ್ಯಾಕಾಂಡ, ಸರ್ಗ ೫೩). ಸೀತಾಪರಿತ್ಯಾಗವೂ ಹೀಗೆಯೇ ಲೋಕೋತ್ತರ. ಇದನ್ನು ಸೀಮಿತವಾಗಿ ಅಂದರೆ ವ್ಯಕ್ತಿನಿಷ್ಠವಾಗಿ ಕಂಡು ಶ್ರೀರಾಮನು ಕ್ರೂರಿ, ಸೀತೆಗೆ ದ್ರೋಹಮಾಡಿದವನೆಂದು ಕಥೆ-ಕಾದಂಬರಿ-ಕವಿತೆಗಳನ್ನು ರಚಿಸುವುದು ರಾಮನ ಚಾರಿತ್ರ್ಯದಿಂದಲೇ ದೂರವಾಗಿ ವಿರಸವಾಗುತ್ತದೆ. ಇಂಥ ಸಂದರ್ಭವನ್ನು ಭವಭೂತಿ ಕಂಡ ಪರಿಯೇ ಸಾಧು. ಎಲ್ಲರ ಮನೆಯಲ್ಲಿಯೂ ಎಲ್ಲ ದಿನಗಳಲ್ಲಿಯೂ ಔತಣದೂಟ ಇರುವುದಿಲ್ಲವಷ್ಟೇ; ಹಾಗೆಂದು ಬರಿಯ ಊಟಕ್ಕೆ ತಿರಸ್ಕಾರವಿಲ್ಲ. ಅದನ್ನೂ ವಿಶೇಷರುಚಿಯಿಂದ ಮಾಡಿದಾಗ ಮಾತ್ರ ಸ್ವಾರಸ್ಯವಿರುತ್ತದೆ. ಇದನ್ನು ಮತ್ತೂ ಸ್ಪಷ್ಟವಾಗಿ ಹೇಳಬೇಕಾದರೆ ಭೀಮಾರ್ಜುನರಿಬ್ಬರೂ ಒಂದೇ ಮನೆಯಲ್ಲಿ ಹುಟ್ಟಿಬೆಳೆದು ಒಂದೇ ಪರಿಸರದ ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ವಿದ್ಯಾವಿಶೇಷಶಕ್ತಿಸಂಪನ್ನರು. ಆದರೆ ಯುದ್ಧಕ್ಕೆ ಮುನ್ನ ಅರ್ಜುನನಿಗೆ ಬಂದ 'ಧರ್ಮಕರ್ಮಸಂಮೂಢತ್ವ'ದ ಸಂಘರ್ಷ ಭೀಮನಿಗುಂಟಾಗಲಿಲ್ಲ. ಆದುದರಿಂದಲೇ ಭಗವದ್ಗೀತೆ ಅರ್ಜುನನಿಗೆ ಉಪದಿಷ್ಟವಾಯಿತು. ಮತ್ತೊಂದು ಉದಾಹರಣೆಯನ್ನು ಕೊಡುವುದಾದರೆ ಸಾಮಾನ್ಯವ್ಯಾಧಬಾಲನಾದ ಏಕಲವ್ಯನ ಬದುಕಿನಲ್ಲಿ ಗುರುದಕ್ಷಿಣೆ-ಜೀವಿತಸರ್ವಸ್ವಸಾಧನೆಗಳ ನಡುವೆ ಸಂಘರ್ಷವು ಬಂದು ಅದು ಲೋಕೋತ್ತರವಾದ ಧೀರತ್ವದಲ್ಲಿ ಪರ್ಯವಸಿಸಿದ ಕಾರಣ ಆತನ ಕಥಾನಕವು ರಸಪರಿಸ್ಪಂದಬಂಧುರವಾಯಿತು.

ಶ್ರೀಮದ್ವಾಲ್ಮೀಕಿರಾಮಾಯಣದ ಸೀತೆಗೆ ಬದುಕಿನಲ್ಲಿ ...

ರಾಮಾಯಣ ಕವಿಗೆ ಕಾಣದೇ (ಅಥವಾ ಕಂಡರೂ ಸಂವಿಧಾನಸೀಮಿತತೆಯಿಂದಾಗಿ ಚಿತ್ರಿಸಲಾಗದೆ) ಹೋದ ಕಾರಣದಿಂದಾಗಿ ಊರ್ಮಿಳಾಪಾತ್ರ ಎದ್ದು ಕಾಣಲಿಲ್ಲ. ಇದನ್ನು ಕವಿ ರವೀಂದ್ರರು ಕಾವ್ಯದಲ್ಲಿ ಅನಾದರವೆನ್ನುವುದು ಅಪ್ರಬುದ್ಧವೂ ಅಸಂಬದ್ಧವೂ ಆದ ತರ್ಕ. ಕಾವ್ಯದಲ್ಲಿ ಸರ್ವಪಾತ್ರಗಳಿಗೂ ಪ್ರಾಧಾನ್ಯ ಬಾರದು. ಬಂದಲ್ಲಿ ಅದು ಕಾವ್ಯವೂ ಆಗದು. ಕವಿಯು 'ಕ್ರಾನಿಕಲ್' ಬರೆಯಲು ಹೊರಟಿಲ್ಲ. ಈ ದಾರಿ ಹಿಡಿದು ಊರ್ಮಿಳೆಯನ್ನು ಉದಾತ್ತೀಕರಿಸಲು ಹಲವರು ಹೊರಟರು (ಮೈಥಿಲೀಶರಣಗುಪ್ತ, ಕುವೆಂಪು ಇತ್ಯಾದಿ). ಇವರು ತಮ್ಮ ಕೃತಿಗಳಲ್ಲಿ ಸಫಲವಾಗಿದ್ದಲ್ಲಿ ಅದಕ್ಕೆ ಕಾರಣ ವಾಲ್ಮೀಕಿಯು ಊರ್ಮಿಳೆಯ ಬದುಕಿನಲ್ಲಿ ಚಿತ್ರಿಸದೆಬಿಟ್ಟ ಸಂಘರ್ಷವನ್ನು ಚಿತ್ರಿಸಿದುದರಿಂದಲೇ ಆಗಿದೆ. ಆದರೂ ಈ ವಾದವನ್ನು ಮುಂದುವರೆಸಿದರೆ 'ಸಾಕೇತ್' ಕಾವ್ಯದಲ್ಲಿ ಮಾಂಡವಿ-ಶ್ರುತಕೀರ್ತಿಯರು ಅನಾದೃತರಾಗಿದ್ದಾರೆಂದು ಚಂಡಿಸಬಹುದು! ಕೈಕೇಯಿ ಉದ್ಧಾರವಾದಳು ಸರಿ; ಸುಮಿತ್ರೆಯ ಬಾಳೇನು? ಪತ್ರಲೇಖೆಯು ಮೇಲೇರಿದರೆ ಅನಸೂಯಾ ಪ್ರಿಯಂವದೆಯರ ಕಥೆಯೇನು? ಒಟ್ಟಿನಲ್ಲಿ ಹೇಳುವುದಾದರೆ ಪ್ರಸ್ತುತ ಸಾಹಿತ್ಯದಲ್ಲಿ ಜನಸಾಮಾನ್ಯನ ಚಿತ್ರಣವೆಂದೂ, ವಾಸ್ತವವಾದವೆಂದೂ, ವಸ್ತುನಿಷ್ಠ ನಿರೂಪಣೆಯೆಂದೂ, ಮಣ್ಣಿನ ಬದುಕಿಗೆ ಹತ್ತಿರವೆಂದೂ, ನಿಜಾನುಭವಪ್ರೇರಿತಾಭಿವ್ಯಕ್ತಿಯೆಂದೂ ಹೇಳಲ್ಪಡುವ ರಚನೆಗಳು ತಮ್ಮಲ್ಲಿ ವಕ್ರತೆ (ಈ ರೀತಿಯ ವಿಶೇಷತ್ವಪರಿಪುಷ್ಟಸಂಘರ್ಷ)ಯಿದ್ದಲ್ಲಿ ಮಾತ್ರ ಉಳಿಯುವುವೇ ಹೊರತು ಅನ್ಯಥಾ ಅಲ್ಲ. ಈ ಬಗೆಯ ಸೀಮಿತತೆಗಳಿಂದಾಗಿ ಸಾಹಿತ್ಯದ ಆಳ–ಅಗಲಗಳು ಕಡಮೆಯಾಗಿ ತೀರ ಜಾಳಾಗುತ್ತದೆ. ತನ್ನದಲ್ಲದ ಅನುಭವವನ್ನೂ ತನ್ನದನ್ನಾಗಿಸಿಕೊಂಡು ಅನುಭೂತಿಯಿಂದ ವರ್ಣಿಸಲ್ಪಡುವ ವಕ್ರತಾವಿಶಿಷ್ಟೇತಿವೃತ್ತವೇ ಅತ್ಯುತ್ತಮ. ಎಂಥ ವಸ್ತುವಿನಲ್ಲೂ ವಿಶೇಷತೆಯನ್ನು ಪ್ರೌಢಕವಿಪ್ರತಿಭೆಯು ತರಬಲ್ಲುದಾದರೂ ಅದನ್ನು ಒಂದು ಮಟ್ಟಕ್ಕಿಂತ ಹೆಚ್ಚು ಎತ್ತರಿಸಲಾಗದು. ಪೂರ್ಣದೃಷ್ಟಿಗೆ ವಿಶ್ವದ ಯಾವ ಘಟನೆಯೂ ಅಲ್ಪವಲ್ಲ, ಮಹತ್ತಲ್ಲ ಎಂಬ ನಿಲುವು ಆತ್ಯಂತಿಕವಾಗಿ ಸರಿಯೆಂಬುದು ನಿರ್ವಿವಾದವಾದರೂ ಸಾಹಿತ್ಯರಸಾಸ್ವಾದವು ಅನುಭವವಾದಂತೆ ಸಾಹಿತ್ಯರಚನೆ ಕೇವಲ ಅನುಭವದ ಕಾರಕಸ್ತರವಲ್ಲ; ಅದು ಜ್ಞಾಪಕಸ್ತರವೂ ಹೌದು. ಹೀಗಾಗಿ ರಸಾನುಭವದ ಮೀಟುಗೋಲಾದ ವಾಗರ್ಥ ವ್ಯವಸಾಯವು ಒಂದು ಬೌದ್ಧಿಕ ವ್ಯಾಪಾರವೆಂಬುದನ್ನು ಅದರ ಹಾರ್ದಿಕನೇಪಥ್ಯದೊಂದಿಗೇ ಒಪ್ಪಿಕೊಳ್ಳಬೇಕು. ಸಾಹಿತ್ಯಸೃಷ್ಟಿಯು ಬೌದ್ಧಿಕ—ಹಾರ್ದಿಕ, ಮತ್ತು ಭಾವಿಕ ಸಂಕೀರ್ಣ ಸಂದರ್ಭದಲ್ಲಿ ಮನೋವ್ಯಾಪಾರವೂ ಪ್ರಧಾನವಷ್ಟೆ. ಈ ಎಲ್ಲ ಆತ್ಮೇತರ ವ್ಯಾಪಾರಗಳೂ ದ್ವಂದ್ವನಿಬದ್ಧವಾದ ಕಾರಣ ತರತಮಗಳು ಸದಾ ಅನಿವಾರ್ಯ. ಆದುದರಿಂದಲೇ ರಸಾನಂದದಲ್ಲಿ ಭೇದಗಳಿಲ್ಲ

ಸಮರ್ಥವಾಗಿ ಕಂಡರಿಸಬಹುದು. ಅಲ್ಪವನ್ನು ಭೂಮಕ್ಕೆ ಕವಿಚೇತನವು ಏರಿಸುವಾಗ ಸ್ವಲ್ಪ ತಪ್ಪಿದರೂ ಅದು ವಿಡಂಬನೆಯಾದೀತು. 'ಶ್ರೀರಾಮಾಯಣದರ್ಶನದ'ಲ್ಲಿ ತೃಣ ಸುಂದರಿಯ ಮೂಗುತಿಯ ಮುತ್ತುಪನಿಯಂತೆ ಮಿರುಮಿರುಗಿಮೆರೆಯುವ ಹಿಮಬಿಂದು ವನ್ನು ಅತ್ಯದ್ಭುತವಾಗಿ ಚಿತ್ರಿಸಲಾಗಿದೆ. ಇದು ಕವಿಯೇ ಆದಿಯಲ್ಲಿ ಪ್ರಮಾಣಿಸಿದಂತೆ ಅಲ್ಪವನ್ನೂ ಮಹತ್ತಿಗೆ ಸರಿಸಾಟಿಯಾಗಿ ವ್ಯಕ್ತೀಕರಿಸುವ ಯತ್ನ. ಆದರೆ ಇಲ್ಲಿ ಆ ಹಿಮ ಬಿಂದುವೇ ಒಂದು ಮಹಾಕೃತಿಯ ನಾಯಕನಾಗುವುದು ಸಾಧ್ಯವಿಲ್ಲದ ಮಾತೆಂದು ಗಮ ನಿಸಬೇಕು. ಒಂದು ವೇಳೆ ಅದನ್ನು ಮಾಡಬೇಕಾದಲ್ಲಿ (ಅದು ಸಾಧ್ಯವಿದ್ದಲ್ಲಿ!) ಅದಕ್ಕೆ ಅನೇಕ ಹಿಮಬಿಂದುತ್ವೇತರ ಗುಣಗಳ ಅಧ್ಯಾಸಮಾಡಬೇಕಾಗುತ್ತದೆ. ಈ ಅವಸರದಲ್ಲಿ ಅದರ ಮೂಲಹಿಮಬಿಂದುತ್ವವೇ ಸಂಪೂರ್ಣವಾಗಿ ಮರೆ/ನಷ್ಟವಾಗುತ್ತದೆ! ಪಾತ್ರದ ಮೂಲಪ್ರಕೃತಿಯನ್ನೇ ನುಂಗುವ ಉದಾತ್ತೀಕರಣಕ್ಕಿಂತ ದೊಡ್ಡ ಚೋದ್ಯ ಮತ್ತೇ ನುಂಟು? ಇದಲ್ಲದೆ ಎಷ್ಟೇ ಅಧ್ಯಾರೋಪವಾದರೂ ಅದು ಮಾನವತಾಪ್ರೇರಿತ ವಾದದ್ದು. ಇದನ್ನು ಸಂಭವನೀಯವೆಂಬಂತೆ ಮಾಡಬೇಕು. ಉದಾತ್ತೀಕರಣ ಅಥವಾ ಈ ಬಗೆಯ ಅತಿಶಯೀಕರಣವೇ ಎಲ್ಲ ಕಾವ್ಯಾಲಂಕಾರಮೂಲವೆಂಬ ಮಹಿಮಭಟ್ಟನ ನಿಲುವೇ ಈ ತೆರನಾದದ್ದು.[8] (ಅಪಕರ್ಷವನ್ನೂ ಮಾಡಬೇಕಾಗುತ್ತದೆಂದೂ ಮಹಿಮಭಟ್ಟನ ಹೇಳಿಕೆ. ಇದೂ ಸತ್ಯವೇ. ಉತ್ಕರ್ಷ ಅಪಕರ್ಷಗಳಿಲ್ಲದೆ ಕವಿತೆಯೇ ಇಲ್ಲ. ಆದುದರಿಂದಲೇ ಅತಿಶಯೋಕ್ತಿಯೇ ಕಾವ್ಯದ ಮೂಲವೆಂದು ಅನೇಕ ಆಲಂಕಾರಿಕರ ಮತ. ನ್ಯೂನೋಕ್ತಿ ಯನ್ನೂ ಸೇರಿಸಿಕೊಳ್ಳಬಹುದು. ಕವಿಪ್ರತಿಭಾಕ್ಷಿಸಮೀಕ್ಷಿತವಾದ ಎಲ್ಲವೂ ಅನುಕೀರ್ತನ ಅನುಕರಣಗಳಿಗೆ ಒಳಗಾಗುತ್ತವೆ. ಅಂತೆಯೇ ಸ್ವಭಾವೋಕ್ತಿಯೂ ಅಲಂಕಾರವೆಂದೆನಿಸಿ ಕೊಳ್ಳುತ್ತದೆ. ಇವೆಲ್ಲ ಈ ಮೊದಲೇ ಪ್ರಪಂಚಿತವಾದ ಕಾರಣ ಇಲ್ಲಿ ವಿಸ್ತರಣ ಬೇಕಿಲ್ಲ) ರಸವು ರಸಾಭಾಸಕ್ಕಿಳಿಯದಿರಲು ಮಾನವತಾವಾದವನ್ನೇ ಆಲಂಕಾರಿಕರು ಪ್ರಧಾನವಾಗಿ ಹೇಳಿದ್ದಾರೆ. ಇದನ್ನು ಎಷ್ಟರಮಟ್ಟಿಗೆ ಸಮರ್ಥವಾಗಿ ಅಳವಡಿಸಿಕೊಳ್ಳಲಾಗುವಂತೆ ಇತಿವೃತ್ತ–ವರ್ಣನೆಗಳು ರೂಪಗೊಳ್ಳುವುವೋ ಕೃತಿ ಅಷ್ಟರ ಮಟ್ಟಿಗೆ ಸಫಲವಾಗು ತ್ತದೆ. ವಿಶೇಷತೆ ಅಥವಾ ಅಪರಿಚಿತಾಂಶ ಮತ್ತು ಸಂಘರ್ಷ ಅಥವಾ ಪರಿಚಿತಾಂಶಗಳ ಹೃದ್ಯ ಸಂಯೋಗವೇ ಕವಿತೆಯ ಯಶಸ್ಸಿನ ಹಾದಿ. (ವಿಶೇಷತೆ ಅಪರಿಚಿತಾಂಶವೆಂದರೆ ಅದು ಆದರ್ಶ ಸ್ತರದ್ದೆಂದೂ ಅರ್ಥೈಸಿಕೊಳ್ಳಬಹುದು. ಸಂಘರ್ಷ ಪರಿಚಿತಾಂಶವೆಂದರೆ ಅದು ವಾಸ್ತವ ಸ್ತರದ್ದೆಂದಾಗಬಹುದು. ಇಲ್ಲಿ ವಿಶೇಷತೆ–ಸಂಘರ್ಷಗಳ ಮೂಲದ್ರವ್ಯ ಸ್ವರೂಪವನ್ನಷ್ಟೇ ಗಮನಿಸುತ್ತಿದ್ದೇವೆ. ಇದನ್ನು ಸೋದಾಹರಣವಾಗಿ ಹೇಳುವುದಾದರೆ ಶ್ರೀರಾಮನ ಸತ್ಯವಾಕ್ಯ, ಧರ್ಮದಲ್ಲಿ ಅಚಂಚಲ ನಿಷ್ಠೆ, ಉದಾರತೆಯೇ ಮೊದಲಾದುವು ಗಳು ವಿಶೇಷಗುಣಗಳು. ಇವು ಆತನ ಸ್ಮಿತಭಾಷಿತ್ವ, ಪೂರ್ವಭಾಷಿತ್ವ, ಗಾಂಭೀರ್ಯ ಮೊದಲಾದ ಕಿಂಚಿತ್ಸಾಮಾನ್ಯ (!)ವೆನ್ನಬಹುದಾದ ಗುಣಗಳೊಡನೆ ಬಂದು ಬೆಳೆದುವು ಗಳು. ಆದರೆ ಆತನಿಗೆ ಬಂದ ಪತ್ನೀಪರಿತ್ಯಾಗ, ಶಂಬೂಕವಧ, ವಾಲಿವಧಾದಿ ಸಂದರ್ಭ ಗಳ ಧರ್ಮಾಧರ್ಮ ಸಂಘರ್ಷ ಪ್ರತಿಯೊಬ್ಬನ ಬಾಳಿನ ಧರ್ಮಾಧರ್ಮ ತುಮುಲದ

ಪ್ರತೀಕಗಳೇ. ಆದಾಗ್ಯೂ ಆತನ ವಿಶೇಷತೆಯು ಹಿನ್ನೆಲೆಯಲ್ಲಿ ಈ ವಾಸ್ತವ ಸಂಘರ್ಷ ಅದ್ಭುತವಾಗಿ, ಮಹತ್ತ್ವಾಗುತ್ತದೆ. ಇದಕ್ಕೆ ಕಾರಣ ಅವನು ತನ್ನ ಗುಣವಿಶೇಷತೆಗಳ ಬಲ ದಿಂದ ಈ ಸಂಘರ್ಷವನ್ನೆದುರಿಸಿದ ಪರಿಯೇ ಆಗಿದೆ. ಇಂತು ಇವೆರಡೂ ಪೂರಕ) ಇದನ್ನು ಡಿ.ವಿ.ಜಿ.ಯವರೂ ಸೂಚಿಸಿದ್ದಾರೆ.[9] ಅಲ್ಲದೆ ವೈಚಿತ್ರ್ಯ (uuiqueness) ಮತ್ತು ಸಂಭವನೀಯತೆ (**possibility**) ಗಳ ಅಂತರವನ್ನು ಹಿತವಾಗಿ ಕಾಯ್ದುಕೊಂಡಿರುವ ಅಗತ್ಯವೂ ಉಂಟು. ಇವುಗಳನ್ನೆಲ್ಲ ಗಮನಿಸಿದಾಗ ಅಲ್ಪೇತಿವೃತ್ತದಲ್ಲಿ ಯಾವುದೇ ವಸ್ತು ವನ್ನು ಕುರಿತಂತಾದರೂ ಅಮೋಘವರ್ಣನೆ ಸಾಧ್ಯ : ಹೃದ್ಯ. ಆದರೆ ಯಾವುದೇ ವಸ್ತು ವನ್ನೂ ಮಹೇತಿವೃತ್ತವಾಗಿ ರೂಪಿಸಿಕೊಂಡು ವರ್ಣಿಸಿದಾಗ ಅದು ಸಾಧ್ಯವಾದರೂ (?) ಹೃದ್ಯವಾಗದು. ಕೃತಿಯಲ್ಲಿ ಮಹದ್ವಸ್ತು–ಸಂವಿಧಾನಗಳೊಡನೆ ಮೇಳವಿಸುವಂಥ ಪಾತ್ರದ ಸಮುಚಿತ ವಿಶೇಷತೆ ಹೆಚ್ಚಾಗಿದ್ದಾಗ ಯಾವ ಸಂಘರ್ಷವಾದರೂ ಅಂಥ ಸಂದರ್ಭಕ್ಕೆ ತಕ್ಕಂತೆ ಮಹತ್ತ್ವದ್ದಾಗಬೇಕು. ಇದರ ಪರಿಣಾಮ ಒಟ್ಟಂದದ ತೀವ್ರತೆ. ಈ ತೀವ್ರತೆಯ ಪರಿಮಾಣವೇ ಸಾಧಾರಣೀಕರಣವನ್ನು ಅತ್ಯುತ್ಕಟವಾಗಿ ಸಾಧಿಸುತ್ತದೆ. ಇದರ ಫಲವೇ ರಸಾನುಭೂತಿ. ಬದುಕನ್ನು ಆಳವಾಗಿ ಕಲಕಿ ಪರಿಶೋಧಿಸಿ ಸಾಂತ್ವನವೀಯುವ ಕೃತಿಗೆ ಈ ಹರಹು ಬೇಕೇ ಬೇಕು. ಈ ತೀವ್ರತೆ, ಉತ್ಕಟತೆಗಳೇ ಭವ್ಯತೆಗೆ ಹೇತು. ಭವ್ಯತೆಯು ಸಹೃದಯನ ಅವಿದ್ಯಾಪುಷ್ಟಾಹಂಕಾರವನ್ನು ಕಳೆದು ಕ್ಲೈಬ್ಯವನ್ನು ದೂರೀಕರಿಸುತ್ತದೆ. ಇಂಥ ಸಂದರ್ಭವನ್ನು ಶ್ರೀಮನ್ಮಹಾಭಾರತದ ಗೀತೋಪದೇಶದಲ್ಲಿ ಕಾಣಬಹುದು. ಅರ್ಜುನನು ಅತಿವಿಶಿಷ್ಟ ಶಕ್ತಿಸಂಪನ್ನನಾದವನು. ಆತನಿಗೆ ಬಂದ ಸಂದರ್ಭವು ದಾಯಾದ ಕಲಹ. ಇದು ಯಾವ ಸಾಮಾನ್ಯವ್ಯಕ್ತಿಗೂ ಬರಬಹುದಾದದ್ದು. ಯುದ್ಧಕ್ಕೇ ಸಿದ್ಧವಿರು ವಾಗ, ತನಗೆ ಸರ್ವಶಸ್ತ್ರಾಸ್ತ್ರಗಳ ಬಲವಿದ್ದು ವೈರಿನಾಶ ಸಾಧ್ಯವಿರುವಾಗ (ಈ ಅಸಹಾಯ ವಿಕ್ರಮತೆಯು ಮೊದಲೇ ಉತ್ತರಗೋಗ್ರಹಣ ಕಾಲದಲ್ಲಿ ಪ್ರದರ್ಶಿತವೂ ಆಗಿದೆ!) ಧರ್ಮಕರ್ಮಸಂಮೂಢತ್ವಕ್ಕೆ ಒಳಗಾದ ! ಶಕ್ತಿಯಿದ್ದೂ ಅದನ್ನು ಬಳಸಲು ಅಂಜಿದ ಮಹಾವೀರನಿಗೂ ವಿಲಕ್ಷಣ ಸ್ಥಿತಿ ಬಂದಿತು ! ಆದರೆ ಈ ಸಂಘರ್ಷ ಆತನ ಸದ್ಗುಣಗಳಿಂ ದಾಗಿ ಬಂದದ್ದು ! ಮೊದಲ ಸಂಘರ್ಷ ಯಾವುದೇ ಲೋಕಸಹಜ ಸಂದರ್ಭ. ಈಗ ಲಾದರೋ ಸುಸಂಸ್ಕೃತನೂ, ವಿಚಾರಶೀಲನೂ ಆದ ಮಾನವನಿಗೆ ಬರುವ ವಿಶಿಷ್ಟ ತೊಳ ಲಾಟ ! ಇದು ಇಡಿಯ ಸಂನ್ನಿವೇಶಕ್ಕೇ ಹೊಸತಿರುವು ಕೊಟ್ಟಿತು. ಇಂಥ ಕಾಲದಲ್ಲಿ ಶಕ್ತನಿದ್ದೂ ಪರಾಙ್ಮುಖನಾದ ಮಹಾವೀರಮಾನವನಿಗೆ, ರಣರಂಗದ ಅತ್ಯುತ್ಸಾಹದ ನಡುವೆಯೂ ಕುಗ್ಗಿದವನಿಗೆ ತಿಳಿವನ್ನೂ, ಸ್ಫೂರ್ತಿ-ಕರ್ತವ್ಯಪ್ರಜ್ಞೆಗಳನ್ನೂ ಕೊಡಲು ಶ್ರೀಕೃಷ್ಣನಂಥ ಅತಿಮಾನವನೆನ್ನಬಹುದಾದ, ಪುರುಷೋತ್ತಮ–ಲೀಲಾವಿಭೂತಿ ಎನಿಸಿದ್ದ ನಿರ್ದಿಷ್ಟವಾದ ಯೋಗೇಶ್ವರನು ಸುದೀರ್ಘವಾದ (ಸುಮಾರು ೭೦೦ ಶ್ಲೋಕಗಳ !) ಉಪದೇಶವನ್ನು ಮಾಡಬೇಕಾಯಿತು ! ಇಂಥ ವಿಶೇಷತೆ–ಸಂಘರ್ಷಗಳ ಆಳ–ಅಗಲಗಳಿಲ್ಲ ದಿದ್ದಾಗಲೂ ಈ ಬಗೆಯ ಉಪದೇಶವನ್ನು ತಂದರೆ ಅದು ಅಪಹಾಸ್ಯಾಸ್ಪದ ತಾನೆ ! ಬೆಂಗಳೂರಿನಲ್ಲಿ ಕೆಲಸಕ್ಕೆ ಸೇರುವುದೇ ? ಅಥವಾ ಮುಂಬಯಿ ಸರಿಯೇ ಎಂದು ತೊಳ

ಲಾಡುತ್ತಾ, ಇರ್ಕಲದಲ್ಲಿಯ ಒಂದೆರಡು ನೂರು ರೂಪಾಯಿಗಳ ಸಂಬಳದ ವ್ಯತ್ಯಾಸ, ನೆಲೆ-ಬೆಲೆಗಳ ತೊಳಲಾಟವನ್ನು ಮುಂದಿಟ್ಟವನಿಗೆ ಯಾರೊಬ್ಬನಾದರೂ ವಿವೇಕಿ ನಾಲ್ಕು ವ್ಯಾವಹಾರಿಕ ಹಿತೋಕ್ತಿಗಳನ್ನಾಡಿ ದಾರಿತೋರಿದರೆ ಸಾಕು ; ಇದಕ್ಕೆ ಭಗವದ್ಗೀತೆ ಬೇಕೇ ?

ತಾತ್ಪರ್ಯದಿಂದ ಹೇಳಬೇಕಾದರೆ ಸಮಾಜವು ಕ್ಲೀಬ ಸಾಮಾನ್ಯತೆಗೆ ಒಳಪಟ್ಟಾಗ ವಿಶಿಷ್ಟವ್ಯಕ್ತಿತ್ವದ ಅರಿವಾಗದು. ಖ್ಯಾತ ವ್ಯಂಗ್ಯಚಿತ್ರಕಾರರಾದ ಆರ್. ಕೆ. ಲಕ್ಷ್ಮಣ್ ಒಮ್ಮೆ ವ್ಯಂಗ್ಯಚಿತ್ರದ ಭವಿಷ್ಯವನ್ನು ವಿಶ್ಲೇಷಿಸುತ್ತಾ ವ್ಯಕ್ತಿವಿಶೇಷತೆ (ಬಾಹ್ಯಾಭ್ಯಂತರವಾದದ್ದು) ಇಲ್ಲದ ಇಂದಿನ ರಾಜಕೀಯ ಪಟುಗಳನ್ನೂ, ಅವರ ಶುಷ್ಕ ಸಾಧಾರಣತೆಯನ್ನು ಕಂಡಾಗ, ಈ ಕ್ಲೀಬಸಮತೆಯಿಂದಾಗಿ ಅಚಿರದಲ್ಲಿಯೇ ರಾಜಕೀಯ ವ್ಯಂಗ್ಯಚಿತ್ರಣ ಸತ್ತು ಹೋಗುತ್ತದೆಂದಿದ್ದರು. ಗಾಂಧಿ, ಚರ್ಚಿಲ್ಲರಂಥ ವಿಶಿಷ್ಟವ್ಯಕ್ತಿಗಳಿಂದಲೇ ಈ ಕ್ಷೇತ್ರವೂ ಬದುಕಿತ್ತೆಂದೂ ಹೇಳಿದ್ದರು. ಅಂಥ ಭಿತ್ತಿ-ಇತಿವೃತ್ತಗಳಿಲ್ಲದೆ ಮಾಡುವ ವಾಗ್ವ್ಯಾಪಾರವು ವಿಡಂಬನೆ, ನೀರಸ ನಿರೂಪಣೆ ಮತ್ತು ಸಿನಿಕತನವಲ್ಲದೆ ಬೇರೇನೂ ಅಲ್ಲ. ಇದನ್ನು ಗಮನಿಸಿದಾಗ ಇಂದಿನ ಸಮಾಜ ಪರಿಸರದಲ್ಲಿ ಕಥಾನಾಯಕತ್ವವನ್ನು ಹೊಂದುವ ಅರ್ಹತೆ ಯಾರಿಗೂ ಇಲ್ಲವೆಂದೆನ್ನಿಸುತ್ತದೆ. ಎಲ್ಲ ಕಾಲದಲ್ಲಿಯೂ ಒಂದಲ್ಲ ಒಂದು ಸಂದರ್ಭ ದಲ್ಲಿ ಇಂಥದ್ದೇ ಪರಿಸ್ಥಿತಿಗಳಿರಲಿಲ್ಲವೇ ಎಂದು ಆಕ್ಷೇಪಿಸಬಹುದು. ಇದು ಸರಿಯೇ. ಆದರೆ ಈ ಕ್ಲೇಶವನ್ನು ಬಲ್ಲವರಾದುದರಿಂದಲೇ ಸಮಕಾಲೀನ ಸಾಹಿತ್ಯಕ್ಕೆ ಸಮ ಕಾಲೀನ ಸಂದರ್ಭ-ವ್ಯಕ್ತಿವಿಶೇಷಗಳೇ ಬೇಕೆಂದು ಚಂಡಿಸದೆ ಚಿರಂತನರು 'ರಸದೂರ'ಕ್ಕೆ ಪೋಷಕವಾಗುವ, ಸಮಕಾಲಿಕಸ್ಪಂದವನ್ನುತರುವ ವಿಶಿಷ್ಟಗುಣಗಣ್ಯರಾದ ನಾಯಕರನ್ನು ಯಾವುದೇ ಕಾಲ-ದೇಶ-ಸಮಾಜಗಳಿಂದಲಾದರೂ ತಂದು ನಿರ್ವಹಿಸಿ ಕೃತಕೃತ್ಯರಾದರು. ಎಲ್ಲ ರಘುವಂಶರಾಜರಿಗೂ ರಾಮನಿಗಿದ್ದ ವಿಶಿಷ್ಟತೆಯಿಲ್ಲದುದರಿಂದಲೇ ರಾಮನು ವಾಲ್ಮೀಕಿಮಹರ್ಷಿಗಳಿಂದ ಸ್ವೀಕೃತನಾದ. ಹೀಗಾಗಿ ಕೇವಲ ನೃಪತ್ವ, ದೇವತ್ವ, ಬ್ರಾಹ್ಮತ್ವಾದಿಗಳೇ ಮುಖ್ಯವಲ್ಲ. ಸಾಧಾರಣ ಧರ್ಮಗಳೊಡನೆ ವಿಶೇಷ ಧರ್ಮಗಳಿರಲೇ ಬೇಕು. ಆದರೆ ಸಾಧಾರಣಧರ್ಮಗಳು ವಿಸ್ತಾರವಾದ ಭಿತ್ತಿಯನ್ನೊದಗಿಸುವ ಕಾರಣ (ನೃಪತ್ವವು ಒಂದು ರಾಷ್ಟ್ರದ ಆಗು-ಹೋಗುಗಳನ್ನು ಪ್ರತಿನಿಧಿಸುವಂತೆ) ಉಭಯ ಧರ್ಮಗಳೂ ಕವಿಗಳಿಗೆ ಆದೃತವಾದವು.) ಭಾರತೀಯ ಕಾವ್ಯಮೀಮಾಂಸಾದೃಷ್ಟಿಯಿಂದ ನೋಡಿದಾಗ ರಸವು ನಾಯಕಾಶ್ರಿತ; ಅಲ್ಲದೆ 'ನಾಯಕಸ್ಯ ಕವೇಃ ಶ್ರೋತುಸ್ಸಮಾ ನೋಽನು ಭವಃ ಸ್ಮೃತಃ' ಎಂಬ ತೌತನ ಅಭಿಪ್ರಾಯವನ್ನೂ ಪರಿಶೀಲಿಸಿದಾಗ ಸಹೃದಯ ನಿಗೆ ಇಂದಿನ ಸಾಹಿತ್ಯ (ಎಂದರೆ 'ನಾಯಕ'ಗುಣರಹಿತನನ್ನು ನಾಯಕನನ್ನಾಗಿ ಹೊಂದಿದ ಅಥವಾ ನಾಯಕನೇ ಇರದ ರಚನೆ) ರಸಶೂನ್ಯವೆಂದೇ ಆಗುತ್ತದೆ. ಯಾಂತ್ರಿಕವಾಗು ತ್ತಿರುವ ಸಮಾಜದಲ್ಲಿ ನಾಯಕರಾಹಿತ್ಯವೇ ಸಾಹಿತ್ಯದ ದಿಕ್ಕನ್ನು ಸೂಚಿಸುತ್ತದೆಂದೂ ಆಕ್ಷೇಪಿಸಬಹುದು. ಅಲ್ಲದೆ ಇದು ಸಾಹಿತ್ಯದ ವಿಶಿಷ್ಟ ಪ್ರಕಾರವೆಂದೂ ಸಾಧಿಸಬಹುದು ; ಮತ್ತು ಸಾಹಿತ್ಯದ ನಿರಂತರ ಪ್ರವರ್ಧಮಾನ ಗುಣದ್ಯೋತಕವೂ ಇದಾಗಿದೆಯೆನ್ನ ಬಹುದು. ಆದಾಗ್ಯೂ ರಸವಿಲ್ಲದ್ದು ಸಾಹಿತ್ಯವೇ ? ಆಹ್ಲಾದವನ್ನೂ, ಉತ್ಕರ್ಷವನ್ನೂ

ಕವಿತೆಗೆ ಹೆಚ್ಚಿನ ಆದರಣೆಯಿಲ್ಲದೆ ಲೋಕಸಾಮಾನ್ಯರಿಂದ ತಿರಸ್ಕೃತವಾಗುತ್ತಿರುವುದಕ್ಕೂ ಇದು ಮುಖ್ಯಕಾರಣವೆನ್ನಬಹುದು. ಇತಿವೃತ್ತವು ಸ್ಪಷ್ಟತೆಯನ್ನೂ, ಔಚಿತ್ಯವನ್ನೂ ಕೊಡುವ ಕಾರಣ ಅದು ಕವಿತೆಯನ್ನು ವಾಚ್ಯವಾಗಿಸುತ್ತದೆಂದು ವಿಷಯಿರಿಸಿ ವಸ್ತುವನ್ನೂ ಪರಿತ್ಯಜಿಸುವಂತಾಯಿತು. ಭಾವಗೀತವೇ ಪರಿಶುದ್ಧ ಕಾವ್ಯವೆಂದು ಕಥನಾತ್ಮಕ ರಚನೆಗಳನ್ನು ಕೀಳ್ಗರೆಯಲಾಯಿತು. ಕವಿತೆಯು ವ್ಯಂಜನಾವ್ಯಾಪಾರಶಾಲಿನಿಯೆಂದು ಅತಿರೇಕಿಸುತ್ತಾ, ಪ್ರಹೇಲಿಕಾತ್ಮಕವೂ, ಗೂಢಚಿತ್ರಾತ್ಮಕವೂ ಆದ ರಚನೆಗಳನ್ನು ವಾಕ್ಯಸಂಹಿತಾನಿರಪೇಕ್ಷವಾಗಿಯೂ ರೂಪಿಸಲಾಯಿತು. ವರ್ಣನೆಯಲ್ಲಿಯೂ ವಾಚ್ಯವಾದ ಅಲಂಕಾರವಿಶೇಷಗಳಿಂದಲೇ ವ್ಯಂಗ್ಯವಾಗುವ ರಸಾದಿಗಳನ್ನು ವ್ಯಕ್ತೀಕರಿಸಬೇಕೆಂಬ ಆನಂದವರ್ಧನಾದಿಗಳ ಎಚ್ಚರಿಕೆಯನ್ನು ವಿಸ್ಮರಿಸಿ ವಿಕೃತಿಸಲಾಯಿತು. ಇದಲ್ಲದೆ ಮತ್ತೊಂದು ಅತಿರೇಕವೆಂಬಂತೆ ಭಾವಗಳ ರೂಕ್ಷತೆಯನ್ನು ಶಮನಿಸಿ ಚಿತ್ತವಿಶ್ರಾಂತಿಯನ್ನು ಕೊಡುವಂತೆ ಮಾಡುವುದಕ್ಕೆ ಬದಲಾಗಿ ಹಸಿಹಸಿಯಾಗಿ ಅವುಗಳನ್ನು ಯಥಾ–ತಥಾ ನಿರೂಪಿಸುವ (ಸ್ವಭಾವವಾಗಿ ಉಳಿದು ಸ್ವಭಾವೋಕ್ತಿಯೂ ಆಗದ) ತಾಮಸೋದ್ರೇಕ ರಚನೆಗಳು ನರದೌರ್ಬಲ್ಯವನ್ನಲ್ಲದೆ ಮತ್ತೇನನ್ನೂ ಮಾಡವು. ಇಂಥ ರಚನೆಗಳನ್ನು

ಸತ್ತ್ವೋದ್ರೇಕಾದಖಂಡ ಸ್ವಪ್ರಕಾಶಾನಂದ ಚಿನ್ಮಯಃ ।
ವೇದ್ಯಾಂತರ ಸ್ಪರ್ಶಶೂನ್ಯೋ ಬ್ರಹ್ಮಾಸ್ವಾದ ಸಹೋದರಃ ॥
ಲೋಕೋತ್ತರ ಚಮತ್ಕಾರ ಪ್ರಾಣಾಃ ಕೈಶ್ಚಿತ್ಪ್ರಮಾತೃಭಿಃ ।
ಸ್ವಾಕಾರವದಭಿನ್ನತ್ವಂ ನಾಯಮಾಸ್ವಾದ್ಯತೇ ರಸಃ ॥

(ಸಾಹಿತ್ಯದರ್ಪಣ III–2,3)

ಎಂಬಸ್ತರದಲ್ಲಿ ಪರಿಭಾವಿಸುವುದಂತೂ ಊಹಾತೀತ. ಇದರ ಜೊತೆಗೆ ಕಥೆ-ಕಾದಂಬರಿಯೇ ಮೊದಲಾದ ಸೃಜನಶೀಲಗದ್ಯಪ್ರಕಾರದಲ್ಲಿ ರಮ್ಯ ವರ್ಣನರಾಹಿತ್ಯ (ಅಥವಾ ಕೆಲವೊಮ್ಮೆ ಇತಿವೃತ್ತರಾಹಿತ್ಯ)ವನ್ನೂ ಕಾಣಬಹುದು. ಉಕ್ತಿಚಮತ್ಕಾರವೇ ವರ್ಣನೆಗೆ ಜೀವಾತು. ಇದಿಲ್ಲದ ಇತಿವೃತ್ತ ಸಪ್ಪೆ. (ನಮ್ಮ ಹಿಂದಿನ ಕವಿಗಳ ಕೃತಿಗಳು ಇತಿವೃತ್ತ-ವರ್ಣನೆಗಳೆರಡೂ ಇದ್ದಕಾರಣ ಅವುಗಳಿಗೆ ವಿಭಿನ್ನ ರುಚಿಯ ಜನಗಳೂ ಸ್ಪಂದಿಸಿದರು. ಇಂದೂ ಇಂಥ ಕೃತಿಗಳಿಗೆ ಜನಾದರಣೆ ಉಂಟು. ಇದನ್ನು ನಮ್ಮ ಎಲ್ಲ ಆಲಂಕಾರಿಕರೂ, ಮಹಾಕವಿಗಳೂ ಒಪ್ಪಿ ಎತ್ತಿಹಿಡಿದಿದ್ದಾರೆ. ನೋಡಿ : **Essays in Sanskrit Criticism, K. KrishnaMoorthy, Dharavad, 1974,** ಪು. 240). ಇತಿವೃತ್ತದಲ್ಲಿ ಸಂವಿಧಾನ ಚಮತ್ಕಾರವೆಷ್ಟಿದ್ದರೂ ಅದಕ್ಕೆ ಕಾಂತಿ ಉಕ್ತಿಸೌಂದರ್ಯದಿಂದ. ಇದೇ ಅಲಂಕಾರ. ಹೀಗಾಗಿ (ಪ್ರಕೃತ ರಚನೆಗಳು ವರ್ಣನೆ–ಇತಿವೃತ್ತಗಳ ವಾಗಾರ್ಥಾತ್ಮಕವೂ, ಅಲಂಕೃತ್ಯಾಲಂಕಾರ್ಯಾತ್ಮಕವೂ ಆದ ಭಾವಿಕತ್ವವನ್ನು ಪರಿತ್ಯಜಿಸಿದ ಕಾರಣ ಸಾಂಖ್ಯತತ್ತ್ವದ ಪ್ರಕೃತಿ-ಪುರುಷರಂತೆ ಕುಂಟು-ಕುರುಡು ಆಗಿದೆ. ಈ ಸಂದರ್ಭದಲ್ಲಿ ನಾನಾ ವಿಧವಾದ ನಿಷ್ಪ್ರಯೋಜಕ ಉಪಾಧಿಗಳನ್ನು ಸಾಹಿತ್ಯಕ್ಕೆ ಕಲ್ಪಿಸುತ್ತಾ (ರಮ್ಯ, ನವ್ಯ,

ಬಂಡಾಯ ಇತ್ಯಾದಿ) ಸಾಹಿತ್ಯದ ಮೂಲತತ್ತ್ವ ಮತ್ತು ಉದ್ದೇಶಗಳನ್ನೇ ಮರೆತಿರುವುದು ಶೋಚ್ಯ. 'ಸ್ವಾದು ಪರಾಙ್ಮುಖತ್ವ' 'ಭೋದ್ಧೃ–ನಿಯೋಗಭಾಕ್ತ್ವ' ಮೊದಲಾದ ವಿಷವಲಯದಲ್ಲಿ ರಸೇತರೋಪಾಧಿಗಳು ಆರನೆಯ ಬೆರಳಿನಂತೆ ನಿಷ್ಪ್ರಯೋಜಕವೂ, ವಿಕೃತವೂ ಆದ ಭಾರ. ಆದುದರಿಂದ ನಾವು ಪುನಃ ಭಾರತೀಯಕಾವ್ಯಮೀಮಾಂಸೆಯ ಮೂಲಪರಿಕಲ್ಪನೆಗಳಾದ ಶಬ್ದ-ಅರ್ಥ, ವರ್ಣನೆ-ಇತಿವೃತ್ತ, ಧ್ವನಿ-ರಸ, ಅಲಂಕಾರ–ಅಲಂಕಾರ್ಯಗಳತ್ತ ಮತ್ತೆ ತಿರುಗಬೇಕಾಗಿದೆ.[10]

ಶಕ್ತಿಶುಕ್ತಿಭವಂ ಭಕ್ತಿಕಾಂತಿತಂ ವ್ಯಕ್ತಿವಿದ್ಧಮೀ ।
ಸೂಕ್ತಿಮುಕ್ತಾಫಲಂ ಸ್ಯೂತ್ಯಂ ವೃತ್ತಸೂತ್ರಸಮಾದೃತಂ ॥

## ಟಿಪ್ಪಣಿಗಳು

1. 'ಶಬ್ದಾರ್ಥೌಸಹಿತಂ ಕಾವ್ಯಂ' ಭಾಮಹನ ಕಾವ್ಯಾಲಂಕಾರ (I–16)
2. ಈ ವಿಚಾರದಲ್ಲಿ ವಿಶೇಷ ಮಾಹಿತಿಗಾಗಿ **Sanskrit Learning through Ages**, ಸಂ. ಜಿ. ಮರುಳಸಿದ್ಧಯ್ಯ ಮತ್ತು ಎಚ್.ಎಲ್.ಎಸ್. ಭಾರತಿ O.R.I. ಪ್ರಕಟನೆ, ೧೯೭೦—ಈ ಗ್ರಂಥದಲ್ಲಿರುವ ಕೆ. ಕೃಷ್ಣಮೂರ್ತಿಯವರ ಲೇಖನ 'What is Sāhitya' ಪು. ೫೫ ನೋಡಬಹುದು.
3. 'ಸಹಿತತೆಯಿಂದ ಸಾಹಿತ್ಯ'—''ಕಾವ್ಯಸ್ವಾರಸ್ಯ'' ; ಡಿ. ವಿ. ಜಿ. ಕೃತಿಶ್ರೇಣಿ–I, ಪು. ೩೮೨–೩೮೬, ೧೯೮೭.
4. ಇದರ ಬಗೆಗೆ ಹೆಚ್ಚಿನ ಬೆಳಕುಬೀರುವ ಸಂಶೋಧನೆ ಕೆ. ಕೃಷ್ಣಮೂರ್ತಿಯವರದ್ದಾಗಿದೆ. ನೋಡಿ ; **Indian Literary Theories—A Reappraisal, Meharchand Lachhmandas, New Delhi, 1985.**
5. ನೋಡಿ ; **Some Concepts in Alankara Sāshra by V. Ragavan, Adyar Library and Research Centre, 1973. pp. 131 to 146.**
6. 'ತೌಲನಿಕ ಕಾವ್ಯಮೀಮಾಂಸೆ'—ಎಚ್. ತಿಪ್ಪೇರುದ್ರಸ್ವಾಮಿ ; ಡಿ.ವಿ.ಕೆ. ಮೂರ್ತಿ, ಮೈಸೂರು ೧೯೯೦, ಪುಟ. ೩೦೩.
7. 'ವಾಣೀವಿಲಸಿತಂ'—ಗಂಗಾನಾಥ ಝಾ ಸಂಸ್ಕೃತ ವಿದ್ಯಾಪೀಠಗ್ರಂಥಮಾಲಾ, ರಾಷ್ಟ್ರೀಯ ಸಂಸ್ಕೃತ ಸಂಸ್ಥಾನಂ, ನವದೆಹಲಿ, ಸಂ. ಕಿಶೋರನಾಥ ಝಾ ಮತ್ತು ಜಗನ್ನಾಥ ಪಾಠಕ್, ೧೯೭೮.
8. ವ್ಯಕ್ತಿವಿವೇಕ—ಮಹಿಮಭಟ್ಟ, ಚೌಖಂಬ ಸಂಸ್ಕೃತ ಸೀರೀಸ್, ವಾರಣಾಸಿ. ೧೯೩೬, ಪು. ೨೧೮.
9. ಸಾಹಿತ್ಯ ಶಕ್ತಿ, ಡಿ.ವಿ.ಜಿ., ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೬೬, ಪು. ೨೩. (ಇಂಥ ಅಭಿಪ್ರಾಯವನ್ನೇ ಸೇಡಿಯಾಪು ಕೃಷ್ಣಭಟ್ಟರೂ ಹೊಂದಿರುವುದು ಈಚೆಗೆ ತಿಳಿಯಿತು.)
10. ಈ ದೃಷ್ಟಿಯಿಂದ ಸಾಹಿತ್ಯವನ್ನು ವಿವೇಚಿಸಿ ವರ್ಣನೇತಿವೃತ್ತಗಳ ಮತ್ತಿತರ ಮೂಲಭೂತಾಂಶಗಳ ಬಗೆಗೆ ಹಲವರು ಈಗಾಗಲೇ ದೇಶಭಾಷೆಗಳಲ್ಲಿ ತಮ್ಮ ವಿಚಾರಗಳನ್ನು ಮಂಡಿಸಿರಬಹುದು. ಆದರೆ ಪ್ರಕೃತ ಲೇಖಕನ ಕಣ್ಣಿಗೆ ಬಿದ್ದ ಇಂಥ ಸ್ತುತ್ಯರ್ಹಪ್ರಯತ್ನ ತೆಲುಗಿನ ವಿಮರ್ಶಕರೂ, ಕವಿವಿದ್ವಾಂಸರೂ ಆದ ಕಾಳೂರಿ ಹನುಮಂತರಾವ್ ಅವರದು. ಇವರ 'ಸಾಹಿತೀಜಗತಿ' (೧೯೭೦) ಮತ್ತು ವಾಙ್ಮಯ 'ಸಮಾಲೋಚನಮು' (೧೯೭೨) ಎಂಬ ಗ್ರಂಥಗಳು ಉಲ್ಲೇಖ್ಯ.

ಹೀಗೆ ಇವರೆಲ್ಲ ಉಬ್ಬರಿಸುತ್ತಿರುವಾಗ ಕಡೆಯವಳಾದ ಕಾರ್ಡೀಲಿಯಾ ತನ್ನಷ್ಟಕ್ಕೆ ಹೇಳಿಕೊಳ್ಳುತ್ತಾಳೆ: "ಕಾರ್ಡೀಲಿಯಾ ! ನೀನೇನ ಕೊಡಬಲ್ಲೆ ? ಪ್ರೀತಿಸಿ ಸುಮ್ಮನಿರು !" "ಬಡಪಾಯಿ ಕಾರ್ಡೀಲಿಯಾ ! ಆದರೂ ಹಾಗಲ್ಲ ; ನಾ ಬಲ್ಲೆ ನನ್ನ ನಾಲಿಗೆಗಿಂತ ನನ್ನ ಪ್ರೀತಿ ಶ್ರೀಮಂತ !" ಎಂದು. ಈಗ ಇವಳ ಸರದಿ ; ತಂದೆ ಲಿಯರ್ ತುಂಬಾ ನಿರೀಕ್ಷಿಸಿಕೊಂಡು ಅವಳನ್ನು ಕೇಳುತ್ತಾನೆ ; "...ಮಗಳೆ ! ನಿನಗೆ, ನಿನ್ನ ವಂಶಕ್ಕೆ ಚಿರವಾಗಿ ಬರಲಿ ಈ ನಮ್ಮ ಸುಂದರ ರಾಜ್ಯದ ತೃತೀಯ ಭಾಗ...ನೀ ಏನ ಹೇಳಬಲ್ಲೆ, ನಿಮ್ಮ ಅಕ್ಕಂದಿರಿಗಿಂತ ಹೆಚ್ಚು ಸಮೃದ್ಧವಾದುದನ್ನು ಗಿಟ್ಟಿಸಿಕೊಳ್ಳುವಂಥ ಏನನ್ನು ನುಡಿಯಬಲ್ಲೆ ?" ಪಾಪ, ಅವನ ಸ್ವಭಾವವನ್ನು ತಿಳಿಯದ, ಸುಳ್ಳು ಆಡದ ಆ ಕನ್ಯೆ ಹೇಳುತ್ತಾಳೆ : "ಏನೊಂದೂ ಇಲ್ಲ, ಪ್ರಭು !" "ಏನೊಂದು ಇಲ್ಲವಾ ?" "ಏನೊಂದೂ ಇಲ್ಲ !" "ಏನೊಂದೂ ಇಲ್ಲದುದಕ್ಕೆ ಏನೊಂದೂ ಇಲ್ಲ ! ಮತ್ತೆ ಮಾತಾಡು !" "ಅಸುಖಿ ನಾ, ನನ್ನ ಹೃದಯವನ್ನು ನಾಲಗೆಗೆ ಸೇದಲಾರೆ ; ಪ್ರಭುವನ್ನು ಪ್ರೀತಿಸಬೇಕಾದಷ್ಟು ಪ್ರೀತಿಸುವೆ. ಹೆಚ್ಚು–ಕುಂದಿಲ್ಲ." ಈ ಮಾತನ್ನು ದೊರೆ ನಿರೀಕ್ಷಿಸಿರಲಿಲ್ಲ. ತುಂಬಾ ಪ್ರೀತಿಭಾಷಣವನ್ನು ಬಯಸಿದ್ದ ಅವನಿಗೆ ಹತಾಶೆ. ಅದಕ್ಕೂ ಮಿಗಿಲು, ಅವಳ ನೇರ ಮಾತು ಅವಿನಯವಾಗಿ ತೋರಿಬಂದು ಕೆರಳುತ್ತಾನೆ : "ಏನು ? ಏನು ಕಾರ್ಡೀಲಿಯಾ ! ಕೊಂಚ ನಿನ್ನ ನಾಲಿಗೆ ತಿದ್ದಿಕೋ. ನಿನ್ನ ಭಾಗ್ಯವನ್ನೆಲ್ಲ ಹಾಳುಗೆಡವಿಕೊಂಡೀಯೆ !" ಇದಕ್ಕವಳದು ನೇರ ಉತ್ತರ : "ದಯಾಳು ಪ್ರಭು ! ನೀವು ನನ್ನನ್ನು ಪಡೆದಿರುವಿರಿ, ಹೊರೆದಿರುವಿರಿ, ಮುದ್ದಿಸಿರುವಿರಿ ; ಅದನ್ನೆಲ್ಲ ತಗುವಂತೆ ತಮಗೆ ಒಪ್ಪಿಸುವೆ. ಆಜ್ಞೆ ಪಾಲಿಸುವೆ, ಪ್ರೀತಿಸುವೆ, ತುಂಬಾ ಗೌರವಿಸುವೆ. ನನ್ನಕ್ಕಂದಿರಿಗೇಕೆ ಬೇಕು ಗಂಡಂದಿರು, ಅವರು ನಿಮ್ಮನ್ನು ಸಂಪೂರ್ಣ ಪ್ರೀತಿಸುವುದಾದರೆ ? ನಾನು ಮದುವೆಯಾದರೆ ಆಗ ಆ ಪ್ರಭು ನನ್ನ ಕೈ ಹಿಡಿದು "ತನ್ನೊಡನೆ ನನ್ನ ಅರ್ಧ ಪ್ರೀತಿಯನ್ನೂ ಕಾಳಜಿಯನ್ನೂ ಸೇವೆಯನ್ನೂ ಕೊಂಡೊಯ್ಯುತ್ತಾನೆ. ನನ್ನ ಪ್ರೀತಿಯನ್ನೆಲ್ಲ ಇಡಿಯಾಗಿ ನನ್ನ ಅಪ್ಪಾಜಿಯಲ್ಲೆ ಇಡಲೆಂದೆ ನಾನು ನನ್ನಕ್ಕಂದಿರಂತೆ ಮದುವೆ ಆಗುವುದೇ ಇಲ್ಲ." ಇದೂ ಕೂಡ ಲಿಯರ್ ದೊರೆಗೆ ಆ ಮಗಳ ಹೃದಯವನ್ನು ತೆರೆದು ತೋರಲಾಗಲಿಲ್ಲ. ಅದಕ್ಕೆ ಅವನು : "ಹೀಗಾಗುವುದೇ ನಿನ್ನ ಮನಸ್ಸೆ ?" "ಹೌದು, ನನ್ನ ದಯಾಳು ಪ್ರಭು." ಪಾಪ, ಇದು ಅವನಿಗೆ ಗಡಸಾಗಿಯೇ ತೋರುತ್ತದೆ : "ಇಷ್ಟು ಎಳಸು, ಆದರಿಷ್ಟು ಗಡುಸು !" ಆದರವಳು ತನ್ನ ಸತ್ಯಕ್ಕೆ ಬೆಲೆತೆರಬೇಕಾಗುತ್ತದೆ. "ನಿನ್ನ ಸತ್ಯವೆ ನಿನ್ನ ಬಳುವಳಿ. ಪವಿತ್ರ ಸೂರ್ಯತೇಜಸ್ಸಿನ ಮೇಲಾಣೆ ! ರಾತ್ರಿಯ ಮೇಲಾಣೆ ! ನಮ್ಮ ಉಳಿವಳಿವುಗಳನ್ನು ನಡೆಸಿರುವ ನಕ್ಷತ್ರಮಂಡಲದ ಮೇಲಾಣೆ ! ಈ ಕ್ಷಣ ನಾ ನನ್ನ ಎಲ್ಲ ರಕ್ತ ಸಂಬಂಧ ಋಣಾನುಬಂಧಗಳನ್ನು ಕಡಿದುಕೊಳ್ಳುತ್ತಿರುವೆ. ನನಗಿನ್ನು ನೀನು ತೀರಾ ಆಗಂತುಕೆ, ಅನಾಗರಿಕ ದಸ್ಯು ಇಲ್ಲವೆ ತನ್ನ ಸಂತಾನವನ್ನೆ ಅಟ್ಟುಂಡು ತನ್ನ ಹಸಿವೆಯನ್ನು ನೀಗಿಸಿಕೊಳ್ಳುವವ ಇನ್ನು ಮೇಲೆ ನನ್ನೆದೆಗೆ ನೆರೆಹೊರೆಯವನಾಗಿದ್ದುಕೊಳ್ಳುತ್ತಾನೆ : ಎಂದೊ ಒಮ್ಮೆ ಮಗಳಾಗಿದ್ದ ನಿನ್ನಂತಿರುತ್ತಾನೆ."

ಹೀಗೆ ದೊರೆ ಲಿಯರ್ ತನ್ನ ಮುದ್ದು ಮಗಳ ಶುದ್ಧ ಪ್ರೀತಿಯನ್ನು ತಪ್ಪು ತಿಳಿದು ಕೊಂಡು ಅವಳ ಸಂಬಂಧವನ್ನು ಕಡಿದುಕೊಳ್ಳುತ್ತಾನೆ. ಅವನ ಅವಿವೇಕವನ್ನು ದುಡುಕನ್ನು ತಡೆಯಬಂದ ಪ್ರಾಮಾಣಿಕ ಕೆಂಟ್‌ನನ್ನೂ ಗಡೀಪಾರುಮಾಡುತ್ತಾನೆ. ಏಕೆ? ಅವನೇ ಹೇಳುವಂತೆ ಅವನಿಗೆ ಕಾರ್ಡೀಲಿಯಾ ಮಿತಮಾತು ಗರ್ವವಾಗಿ ತೋರುತ್ತದೆ. 'Let pride, which she calls plainness, marry her.'' ಉಳಿದಿಬ್ಬರು ಮಕ್ಕಳ ರಬ್ಬುರಬ್ಬು ಮಾತುಗಳೆ ಅಪ್ಯಾಯನವಾಗಿ ಸತ್ಯಭ್ರಮೆಯನ್ನು ಮೂಡಿಸುತ್ತವೆ. ಆದರೆ ಅವನು ಸತ್ಯವನ್ನು ಅರಿಯುವುದಕ್ಕೆ ತಿಂಗಳೂ ಬೇಕಾಗಲಿಲ್ಲ. ಮೊದಲಿಬ್ಬರೂ ಅವನನ್ನು ಮನೆಯಿಂದ ಅಟ್ಟಿದಾಗ, ಅವನ ರಕ್ಷೆಗೆ ಬಂದ ಕಾರ್ಡೀಲಿಯಾ ಅಕ್ಕಂದಿರ ಕೈಸೆರೆಯಾಗುತ್ತಾಳೆ. ತಂದೆಯೊಡನೆ ಸೆರೆಮನೆಗೆ ತೆರಳುವಾಗ ಅವಳಾಡುವ ಈ ಮಾತುಗಳು ಮನನೀಯ: ''We are not the first who, with best meaning have incurred the worst.'' ಶ್ರೇಷ್ಠೋದ್ದೇಶಗಳು ಅಪಾರ್ಥಗೊಂಡು ದುರಂತವಾಗುವುದು ಇದೇ ಮೊದಲಲ್ಲ. ಅಂಥ ದುರಂತಕ್ಕೆಗುರಿಯಾದವರಲ್ಲಿ ತಾನೇ ಮೊದಲಿಗಳು ಎಂದು ಆಕೆ ಹೇಳಲಿಲ್ಲ. ಅದವಳ ಮಹೋನ್ನತಿ, ಹಾಗೂ, ಕವಿಯ ಇಂಗಿತವಾದರೂ ಈ ದುರಂತ ಅನಾದಿಯಾದದ್ದು ಅನಂತಕಾಲವೂ ಪುನರ್ಭವಿಸುತ್ತ ಹೋಗತಕ್ಕದು, ಎಂಬುದಾಗಿರಬಹುದು. ಸತ್ಯ ಅನಾವರಣಗೊಳ್ಳುವುದು ಅವರು ಸೆರೆಗೊಂಡು ಸಾವಿನ ಹತ್ತಿರಕ್ಕೆ ತೀಲಿಯದಂತೆ ತೆರಳುವಾಗ.

ಸಂವಹನ ದೋಷ ದುರಂತದ ಅಂಚನ್ನು ಮುಟ್ಟಿಸಿದರೂ ದುರಂತದಲ್ಲೆ ಪರ್ಯವಸಾನ ಆಗಬೇಕಿಲ್ಲ. ಇಂಥ ಉದಾಹರಣೆಯನ್ನೂ ಕೊಡಬಹುದು. ಭಾಸನ 'ಸ್ವಪ್ನವಾಸವದತ್ತ' ನಾಟಕದ ಒಂದು ಸನ್ನಿವೇಶವನ್ನಿಲ್ಲಿ ನೆನೆದುಕೊಳ್ಳಬಹುದು. ರಾಜ ಉದಯನ 'ಅಳಿದ' ವಾಸವದತ್ತೆಯನ್ನು ನೆನೆದುಕೊಳ್ಳುತ್ತಾನೆ. ರಾಜಕುಮಾರಿ ಪದ್ಮಾವತಿಯನ್ನು ಮದುವೆಗೊಂಡ ಮೇಲೂ, ಕಥೆ ಹೇಳುತ್ತೇನೆಂದು ಉಜ್ಜಯಿನಿಯ ಹೆಸರನ್ನು ವಿದೂಷಕ ಹೇಳಿದೊಡನೆಯೇ ಉದಯನನಿಗೆ ಬರುವ ನೆನಪಾದರೂ ಆ ತನ್ನ ಪ್ರಿಯೆ ವಾಸವದತ್ತೆಯದು. ಅದೂ ಎಂಥ ಪ್ರಸಂಗ? ತನ್ನನ್ನು ಮಗನಂತೆ ನಡೆಸಿಕೊಂಡ ಅವಂತಿ ರಾಜರಾಣಿಯರ ಪ್ರೀತಿಯ ಮಗಳಿಗೆ ವೀಣೆ ಹೇಳಿಕೊಡಲು ನೇಮಕಗೊಂಡ ಉದಯನ ಆ ಕನ್ಯೆ ವಾಸವದತ್ತೆಯನ್ನು ಒಲಿದು ಅಪಹರಿಸಿಕೊಂಡು ಹೋಗುತ್ತಾನೆ. ಅವನನ್ನು ಆಕೆಯೂ ಒಲಿದಿದ್ದರೂ ಹಾಗೆ ಕದ್ದು ಹೋಗುವಾಗ ತನ್ನ ಸ್ವಜನರನ್ನು ನೆನೆದು ಅವಳಿಗೆ ಅಳು ದಾರಿಯಲ್ಲಿ ಬರುತ್ತದೆ. ಕಣ್ಣಂಚಿನಲ್ಲಿ ಉಕ್ಕಿಬಂದ ಆ 'ಬಾಷ್ಪ'ವನ್ನು, ತನ್ನ ಎದೆಯಮೇಲೆ ಸುರಿದ ಆ ಕಂಬನಿಗಳನ್ನು ಅವನು ಆಗ ನೆನೆಯುತ್ತಾನೆ.[1] ವಾಸವದತ್ತೆಯನ್ನು 'ಕಳೆದುಕೊಂಡಮೇಲೆ' ಅವಳ ಆ ಕಣ್ಣೀರನ್ನು ನೆನೆದುಕೊಳ್ಳುವ ರಾಜ—ಅದೂ ಮತ್ತೊಬ್ಬ ಸುಂದರಿ ರಾಜಕುವರಿಯನ್ನು ಕೈಹಿಡಿದ ಮೊದಲ ದಿನಗಳಲ್ಲಿ ನೆನೆದುಕೊಳ್ಳುವವನು—ನಿಜಕ್ಕೂ ಆ ಘಟನೆ ನಡೆದಾಗ ಅಷ್ಟಾಗಿ ಗಮನಿಸಿದಂತೆ ತೋರದು. ಪ್ರಣಯ ರಭಸದಲ್ಲಿದ್ದ ಅವನಿಗೆ ಅದು ಗಣನೀಯವಾಗದಿರಬಹುದು. ಆ ತನ್ನ ಪ್ರೇಯಸಿಯ ತಂದೆತಾಯಿಗಳಾದರೂ ತಮ್ಮಿಬ್ಬರ ಮದುವೆ

ಯನ್ನು ಯೋಜಿಸಿದ್ದರು. ಪ್ರಣಯಾತುರದಲ್ಲಿ ಅವನಿಗೆ ಅದು ತಿಳಿಯಲಿಲ್ಲ. ಆಶ್ರಯ ಕೊಟ್ಟವರನ್ನು ವಂಚಿಸಿದ ಎಂಬ ನೀತಿಪಾಠವಲ್ಲ ಮುಖ್ಯ; ಅವರ ಇಂಗಿತವನ್ನೊ ತಿಳಿಯದಾದ ಎಂಬುದು ಮುಖ್ಯ. ಹಾಗಿದ್ದಾಗ ಅವನಿಗೆ ತನ್ನ ಪ್ರೇಯಸಿ ದಾರಿಯಲ್ಲಿ ಕರೆದ ಕಂಬನಿ—ಅದೂ ಕಣ್ಣಂಚಿನಲ್ಲಿ ಮಿಡಿದ ಹನಿ—ಗಮನಕ್ಕೆ ಬರುವುದಾದರೂ ಅತಿಶ ಯೋಕ್ತಿಯಾದೀತು. ಆದರೆ ಅವಳನ್ನು 'ಕಳೆದುಕೊಂಡ' ದುಃಖದಲ್ಲಿ ಮಾಗಿದ್ದಾಗ ಅದು ಮನಸಿನಲ್ಲಿ ಸುಳಿಯುತ್ತದೆ. ಅಂದು ಮಿಡಿದ ಕಂಬನಿ ಇಂದು ಸಂವಹನಗೊಳ್ಳು ತ್ತದೆ.

ಇದೇ ಚಿತ್ರದಿಂದ ಪ್ರೇರಿತವಾಗಿದ್ದಿರಬಹುದಾದ ಕಾಳಿದಾಸನ 'ಶಾಕುಂತಲ' ನಾಟಕದ ಮತ್ತೂ ಗಾಢ ಪರಿಣಾಮದ ಚಿತ್ರವನ್ನಿಲ್ಲಿ ಉದ್ಧರಿಸಬಹುದು. ತಾನು ಗಾಂಧರ್ವ ವಿವಾಹಗೊಂಡು 'ಶಾಪಕಾರಣ'ದಿಂದಾಗಿ ಮರೆತುಬಿಟ್ಟ ಶಕುಂತಲೆ ಋಷ್ಯಾಶ್ರಮದಿಂದ ತನ್ನನ್ನು ಸೇರಲು ಬಂದಾಗ ದುಷ್ಯಂತ ಅವಳನ್ನು ಸ್ವೀಕರಿಸಲು ಹೆದರುತ್ತಾನೆ. ಅವಳೊ ಡನೆ ಮುನಿಕುಮಾರರಿಬ್ಬರು, ಹಿರಿಯೆ ಗೌತಮಿ ಬಂದಿದ್ದರೂ ಅವನಿಗೆ ತಾನವಳನ್ನು ಕೈಹಿಡಿದ ನೆನಪೇ ಆಗುವುದಿಲ್ಲ. ಅಭಿಜ್ಞಾನವನ್ನು ತೋರಲು ಪ್ರಯತ್ನಿಸಿದ ಶಕುಂತಲೆ ದುಷ್ಯಂತ ತನಗಿತ್ತಿದ್ದ ಉಂಗುರವನ್ನು ಕಳೆದುಕೊಂಡಿರುತ್ತಾಳೆ. ಅದರಿಂದ ಹತಾಶಳಾಗು ತ್ತಾಳೆ. ಆಗ ರಾಜ ಹೇಳುತ್ತಾನೆ, ಹೆಂಗಸರು ತುಂಬಾ ಜಾಣೆಯರು—ಮುಂಗಟ್ಟಬಲ್ಲರು, ಎಂದು. ವಿಧಿವಂಚಿತ ಶಕುಂತಲೆ ಜಿಂಕೆಯ ಮರಿಯ ಪ್ರಸಂಗವನ್ನು ಹೇಳುತ್ತಾಳೆ—ತಾನು ಸಾಕಿದ್ದ ಚಿಬ್ಬಲಿ ಜಿಂಕೆಮರಿಗೆ ದೊನ್ನೆಯಲ್ಲಿ ರಾಜ ನೀರುಣಿಸಲು ಹೋದಾಗ ಅದು ಬಾರದಿದ್ದುದನ್ನು, ತಾನು ನೀಡಲು ಅದು ಕುಡಿದುದನ್ನೂ ತಿಳಿಸುತ್ತಾಳೆ. ಹೇಗೂ ತಿರಸ್ಕೃತಳಾದ ಶಕುಂತಲೆಯನ್ನು ಎಲ್ಲರೂ ತೊರೆದಾಗ ರಾಜಪುರೋಹಿತ ಆಕೆಗೆ ಆಶ್ರಯ ನೀಡುತ್ತಾನೆ. ಸಾಧುಜನರ ಭವಿಷ್ಯವಾಣಿಯಂತೆ ಚಕ್ರವರ್ತಿಲಕ್ಷಣಗಳಿರುವ ಮಗನು ರಾಜನಿಗೆ ಹುಟ್ಟುತ್ತಾನೆಂದೂ ಅದರಂತೇನಾದರೂ ಗರ್ಭಿಣಿ ಶಕುಂತಲೆ ಹಡೆಯಲಿರುವ ಮಗು ಇದ್ದಲ್ಲಿ ಆಕೆಯನ್ನು ಸ್ವೀಕರಿಸಬಹುದೆಂದೂ, ಇಲ್ಲದಿದ್ದರೆ ಆಕೆಯನ್ನು ಆಶ್ರಮಕ್ಕೆ ಕಳಿಸುವುದೆಂದೂ ಸಲಹೆ ನೀಡುತ್ತಾನೆ. ಆ ಪುರೋಹಿತನನ್ನು ಹಿಂಬಾಲಿಸುತ್ತ ಹೋದ ಶಕುಂತಲೆ ಗೋಳಿಡುತ್ತಾಳೆ, 'ಭೂದೇವಿ ಬಾಯಿತೆಗೆದು ನುಂಗಿಕೋ', ಎಂದು. ಇಷ್ಟಾ ದರೂ ನೆನಪಾಗದ ರಾಜನಿಗೆ ಚಿಂತೆ, ಹಾಗಿರುವಾಗ ಹೇಗೋ ಬೆಸ್ತನೊಬ್ಬನ ಮೂಲಕ ದೊರೆತ ಉಂಗುರದಿಂದ ದುಷ್ಯಂತನಿಗೆ ಶಕುಂತಲೆಯ ನೆನಪಾಗಿ ಅವನು ಪರಿತಪಿಸತೊಡ ಗುತ್ತಾನೆ. ಅವನ ಪಶ್ಚಾತ್ತಾಪಕ್ಕೆ ಮೊದಲು ಕಾರಣವಾದುದಾದರೂ ಅರ್ಥಪೂರ್ಣ ವಾದುದು. ತನ್ನಿಂದ ತಿರಸ್ಕೃತೆಯಾದ ಶಕುಂತಲೆ ಗುರುಶಿಷ್ಯನಿಂದ ಧಿಕ್ಕಾರಗೊಂಡು ಕಂಬನಿದುಂಬಿ ತನ್ನತ್ತ ಬೀರಿದನೋಟ—ಆ 'ಬಾಷ್ಪಪ್ರಕರ ಕಲುಷ'ವಾದ ಅವಳ ನೋಟ —ಕ್ರೂರಿಯಾದ ತನ್ನನ್ನು ವಿಷಶಲ್ಯದಂತೆ ಸುಡುತ್ತಿದೆ ಎನ್ನುತ್ತಾನೆ.[2] ಈ ನೋಟ ಅವನಿಗೆ ಅಂದು ಅವಳನ್ನು ಪ್ರತ್ಯಕ್ಷವಾಗಿ ನೋಡಿದಾಗ ಕಂಡಿತ್ತೆ? ಸಂವಹನಗೊಂಡಿತ್ತೆ? ಇದಕ್ಕಿಂತಲೂ ಅರ್ಥವತ್ತಾದ, ಸೌಮ್ಯವಾದ ಚಿತ್ರವೊಂದು ಇದೇ 'ಶಾಕುಂತಲ ನಾಟಕ'ದ

ಆರನೆಯ ಅಂಕದಲ್ಲಿ ಬರುತ್ತದೆ. ದುಷ್ಯಂತ ಶಕುಂತಲೆ ಮತ್ತು ಆಕೆಯ ಸಖಿಯರಿರುವ ಚಿತ್ರಪಟವನ್ನು ನೋಡುತ್ತ ಪರಿತಪಿಸುತ್ತಾನೆ. ಆ ಚಿತ್ರಪಟದಲ್ಲಿನ್ನೂ ಬರೆಯಬೇಕಾದ ಸಂಗತಿಯಿದೆ ಎನ್ನುತ್ತಾನೆ. ಅದನ್ನು ಕೇಳಿದ ವಿದೂಷಕ 'ಏನು ಗಡ್ಡದ ಋಷಿಗಳನ್ನು ಬರೆಯಬೇಕಾ' ಎನ್ನುತ್ತಾನೆ. ಅದಕ್ಕೆ ರಾಜ ತುಂಬಾ ಸುಂದರ ಅಂಶಗಳನ್ನು ತಿಳಿಸುತ್ತಾನೆ. ಹಂಸದ ಜೋಡಿ ಲೀನವಾಗಿರುವ ಮರಳದಂಡೆಯ ಮಾಲಿನೀನದಿಯನ್ನೂ, ಮಲಗಿರುವ ಜಿಂಕೆಗಳಿರುವ ಗೌರೀಗುರುಪಾವನಾವಾಸದ ತಪ್ಪಲನ್ನೂ, ಒದ್ದೆ ನಾರುಡೆ ತೂಗಿಬಿಟ್ಟ ಮರದಡಿ ಮಲಗಿರುವ ಗಂಡು ಕೃಷ್ಣಸಾರಂಗಮೃಗದ ಕೋಡಿನ ತುದಿಯಿಂದ ತನ್ನ ಕಣ್ಣಿನವೆಯನ್ನು ತುರಿಸಿಕೊಳ್ಳುತ್ತಿರುವ ಅದರ ಹೆಣ್ಣಿನ ಚಿತ್ರವನ್ನೂ ಬರೆಯಬೇಕಂತೆ. ಮೊದಲ ಅಂಕದ ದುಷ್ಯಂತ ಶಕುಂತಲೆಯಷ್ಟನ್ನು ಪ್ರೀತಿಸಿದ. ಅವಳ ಜೊತೆ ಕಣ್ಣಾರಿರುವುದೂ ಅವನಿಗೆ ವಿಷಮ—ಮಲ್ಲಿಗೆಯ ಮಾಲೆ ಎಕ್ಕದ ಗಿಡದ ಮೇಲಿದ್ದಂತೆ. ಶಾಪಾನಂತರ ಪಶ್ಚಾತ್ತಾಪದಗ್ಧನಿಗೊ ಹಾಗಲ್ಲ. ಶಕುಂತಲೆಯನ್ನು ಆವರಣದೊಡನೆ ಪ್ರೀತಿಸುತ್ತಾನೆ. ಹಾಗಾಗಿ ಅವೆಲ್ಲ ಅರ್ಥಸಾಂಗತ್ಯ ಪಡೆದುಕೊಳ್ಳುತ್ತವೆ. ಅವುಗಳು ಆಗ ಸಂವಹನಶೀಲವಾಗುತ್ತವೆ.

ಶ್ರೀ ಕುವೆಂಪು ಅವರ 'ಶ್ರೀ ರಾಮಾಯಣದರ್ಶನ'ದಲ್ಲಿ ಬರುವ ಬೇರೊಂದು ಬಗೆಯ ಪ್ರಸಂಗವನ್ನೀಗ ಗಮನಿಸಬಹುದು. ಕುವೆಂಪು ಅವರ ರಾವಣ ಕೇವಲ ಕಾಮಿಯಲ್ಲ. ಇಂದ್ರಾದಿ ದಿಕ್ಪಾಲರನ್ನೆಲ್ಲ ಗೆದ್ದವನಾದ ಅವನನ್ನು ಕಾಮಭೋಗ ಅರಸಿಕೊಂಡು ಬಂತು. ಪಾತಿವ್ರತ್ಯದ ಮೇಲಿದ್ದ ಗೌರವವೆಲ್ಲ ತೊಳೆದು ಹೋಗುವಂತಾಯಿತು. ಹೀಗಾದಾಗ ಅವನಿಗೆ ತನ್ನನ್ನು ಒಲಿಯದವರೇ ಇಲ್ಲ, ಪತಿವ್ರತೆಯರೂ ಇಲ್ಲ ಎಂಬ ಅಹಂ ಸಂಭ್ರಮ ಮೂಡುತ್ತದೆ. ಇಂದ್ರವಿಜಯಿಯಾದವನು. ಸಕಲ ಕಾಮಿನೀವಿಜಯಿಯಾಗಹೋಗುತ್ತಾನೆ. ಅವನಲ್ಲಿ ಅಪ್ರತಿಹತ ಅಹಂಕಾರದೊಡನೆ ಅನಲಭ್ಯವಾದ ಕಾಮಭೋಗವೂ ಕೂಡಿಕೊಂಡು ಭೀಷಣಪಾಕವೊಂದು ರೂಪುಗೊಂಡಿರುತ್ತದೆ. ಪತಿವ್ರತೆಯರೆನಿಸಿಕೊಂಡ ಋಷಿಪತ್ನಿಯರೂ ಅವನ ಭೋಗವಾಗಿ ಬಂದುದರಿಂದಾಗಿ ಅವನು ಲೋಕದಲ್ಲಿ ಪಾತಿವ್ರತ್ಯವೇ ಇಲ್ಲವೆಂದು ನಿರ್ಧಾರಗೊಳ್ಳುತ್ತಾನೆ. ಹೀಗಿರುವಾಗ ಸೀತೆಯನ್ನು ಅಪಹರಿಸಿ ತರುತ್ತಾನೆ. ಆಕೆಯೂ ತನ್ನ ರೂಪ ಬಲ ವೈಭವ ಭೋಗಗಳಿಗೆ ಒಲಿದು ಕರಗಬಹುದೆಂದುಕೊಂಡಿರುವಾಗ ಶ್ರೀರಾಮಸೇನೆ ದಾಳಿಯಿಕ್ಕುತ್ತದೆ. ಸೀತೆಯ ತಪೋನೈಷ್ಠುರ್ಯ ಅವನಿಗೆ ಹೊಸ ಅನುಭವವಾಗುತ್ತದೆ. ಯುದ್ಧದಲ್ಲಿ ತನ್ನವರೆಲ್ಲ ಅಳಿದು ತನ್ನ ಮೂಲಬಲ ಮಾತ್ರಉಳಿದು ತಾನೊಂಟಿಯಾಗುತ್ತಾನೆ. ತಮ್ಮ ಕುಂಭಕರ್ಣ, ಮಗ ಇಂದ್ರಜಿತ್ ಮತ್ತು ಋಷಿಪತ್ನಿ ಧ್ಯಾನಮಾಲಿನಿಯಲ್ಲಿ ಪಡೆದಿದ್ದ ಅತಿಕಾಯ ಹಾಗೂ ಆ ಉಪಪತ್ನಿ— ಎಲ್ಲ ಅಳಿದಿರುತ್ತಾರೆ. ಇಂದ್ರಜಿತ್ತು ಸತಿ ತಾರಾಕ್ಷಿ ಚಿತೆಯೇರ ಹೋಗಿರುತ್ತಾಳೆ. ಅವಳಿಗೆ ವಂಶರಕ್ಷಣೆಯ ಹೊಣೆಯನ್ನು ಮನದಟ್ಟುಮಾಡಿ ಮೊಮ್ಮಗ ವಜ್ರಾರಿಯನ್ನು ಹರಸಿ ಕೈಗಿತ್ತು ಏಕಾಂಗಿಯಾಗಿ ಯುದ್ಧಕ್ಕೆ ಅವನು ತೆರಳುತ್ತಾನೆ. ಹಾಗೆ ಹೋಗುವಾಗ ಮತ್ತೊಮ್ಮೆ ಪರೀಕ್ಷಿಸಿ ನೋಡುವುದಾಗಿ ಸೀತಾದೇವಿಯ

ಎಲೆವನೆಯುತ್ತ ತೆರೆಯುತ್ತಾನೆ. ಆದರೆ ಅವನಲ್ಲಿ ಕಾಣುವುದು ಆಕೆಯ ಕುಟೀಯನ್ನಲ್ಲ : ನೆಲೆಯಿದ್ದ ಪರ್ಣಕುಟಿಯ ನಡುವೆ ಕುಳಿತಿದ್ದ ರಣಚಂಡಿಯನ್ನು : ರುಂಡಮಾಲಾಧರೆಯಾದ ಅವಳ ಕೊರಳಲ್ಲಿ ಕುಂಭಕರ್ಣನ ತಲೆಯೂ ತನ್ನ ತಲೆಯೂ ರಾರಾಜಿಸುತ್ತದೆ. ಈ ಭಯಾನಕ ಚಿತ್ರವನ್ನು ಕಾಣುವ ಒಂದು ನಿಮಿಷ ಮುನ್ನ ಅವನು ಕಂಡ ಆ ತಪೋವನದ ವಿವರಣವಾದರೂ ಅಪೂರ್ವವಾಗಿತ್ತು. ಎಷ್ಟೋ ಬಾರಿ ಅವನು ಆ ಅಶೋಕವನವನ್ನು ನೋಡಿದ್ದ. ಆದರೆ ಈ ಕಡೆಯ ಬಾರಿ ಕಂಡಾಗ ಅವನಿಗೆ ಕಂಡುಬಂದದ್ದು ವಿಶೇಷವಾದುದು. ಸೀತಾವಿಷಯಕವಾದ ಅವನ ಭಯಂಕರ ಕಾಮ ಮಾಗುತ್ತ ಬಂದಿತ್ತು. ಹಾಗಾಗಿ ಅವನ ಕಣ್ಣುಪಾಟಿಯೂ ಸರಿಯುತ್ತಿತ್ತು. ಅಂತಹ ಘಳಿಗೆಯಲ್ಲಿ ಆ ತಪೋವನ ಹೇಗೆ ಕಂಡಿತು ?

"ಮತ್ತೊಮ್ಮೆ ನೋಳ್ಪೆನಾಕೆಯ ಹೃದಯದಾಳಮಂ,
ಮತ್ತಂ ಪರೀಕ್ಷಿಸುವೆನಾಕೆಯ ಪತಿವ್ರತಾ
ಸತ್ತ್ವಮಂ', ಎಂಬ ನೆವಮಂ ಕಾರಣಂಗೆತ್ತು,
ಮಾಯೆಯಿಕ್ಕಿದ ಮೂಗದಾರದ ನಿಶಾಚರಂ
ಸ್ವಾತಂತ್ರ್ಯ ವಿಭ್ರಮೆಯ ವಿಧಿತಂತ್ರ ಪಶುವಿನೊಲ್
ತಿರುಗಿದನಶೋಕವನಿಕಾ ಯಾಗಮಂಟಪದ
ಭೋಗಯೂಪದ ಬಳಿಯ ಶಾದ್ವಲ ಸದೃಶ ಸತೀ
ರೂಪದರ್ಶನಕೆ. ಪೋದುದೆ ತಡಂ ಸೀತಾ
ಕುಟೀರಮಿರ್ದ್ದೆಳ್ತರದ ತಾಣಕೆ, ಅದೇನಾಯ್ತೊ ?
ತುಂಬಿದುದು ಶಮೆ ರಾಕ್ಷಸಾತ್ಮಮಂ. ಯುದ್ಧಮಂ
ಮರೆತ ಚೇತನಕೊದಗಿದುದು ಶುದ್ಧಬುದ್ಧಿಯ
ಮನಶ್ಶಾಂತಿ. ಕೇಳಿದುದು ಕಿವಿಗೆ. ಬಹುಕಾಲದಿಂ
ತಾನಾಲಿಸದ ಪಕ್ಷಿಯಿಂಚರಂ । ಕಂಡುದು
ಕಡಲ್‌ನೀಲಿ ! ತನ್ನ ತಿಳಿಯಾಳದಿಂ, ಕದಡುಬಗೆ
ತಿಳಿವಂತೆ, ಬಾನ್ ತೊಳೆದುದಾತ್ಮಮಂ । ಸಾಹಸಕೆ
ಬೇರೆದಾರಿಗಳಿರುವುದನು ತೋರುವೋಲಂತೆ
ಮೆರೆದುದು ದಿಗಂತವಿಶ್ರಾಂತ, ಗಿರಿಕಂದರ
ತರಂಗಿತ, ವನಶ್ರೇಣಿ ! ನಿಡುವೊಳ್ತುನಿಮಿಷಾರಿ
ತನ್ನ ಸಿರಿಯಂ ನಗುವ ಲೋಕ ಸೌಂದರ್ಯಮಂ
ನೋಡಿದನು ನಿರ್ನಿಮೇಷಂ. ಮತ್ತಮೆಳ್ಚರ್ತು,
ಸುಯ್ದು, ತನ್ನಂತಾನೆ ಪರಿಹಾಸಗೈವಂತೆ !
'ನಿಚ್ಚಮುಂ ಕಣ್ಣೆಸಮುದ್ರ ಸಾನ್ನಿಧ್ಯಮಿರೆ ;
ನಿತ್ಯಂ ನಭೋ ಶುಭಾಶೀರ್ವಾದ ಹಸ್ತಮಿರೆ
ನೆತ್ತಿಯೊಳ್ ; ಸುತ್ತುಂ ವನಾದ್ರಿಗಳ್ ಸ್ನೇಹಮಂ
ಧೈರ್ಯಮಂ ನೀಡುತಿರೆ, ಧೃತಿಗಮೃತ ದೀಕ್ಷೆಯೋಲ್ ;
ರಾಮಜತಿ ತಾನಿರ್ಕೆ. ಸಾಮಾನ್ಯೆಯಾದೊಡಂ

ಪತಿತೆಯಪ್ಪಳೆ ಪೇಳ್ ಪತಿವ್ರತಾನಿಷ್ಠೆಯಿಂ
ಜಾಣ್ಮರುಳೆ. ಓ ಕೋಣಪಕಿರೀಟಿ ?''

ಪ್ರಕೃತಿಯ ಅಭಿವ್ಯಕ್ತಿಗಳಾದ ಸೂರ್ಯೋದಯಾಸ್ತಗಳು, ಚಂದ್ರಚಂದ್ರಿಕೆಗಳು, ನೀಲಾಕಾಶನಗ್ನಪ್ರಶಾಂತಿ, ವರ್ಷಭೈರವತೆ, ಕಾಮನಬಿಲ್ಲ ಮೋಹಕತೆ, ವಸಂತೋಲ್ಲಾಸ, ಶಾರದಹಾಸ, ತುಂಗೋನ್ನತ ಪರ್ವತ ಪಂಕ್ತಿಗಳು, ನದೀನದಗತಿವಿಲಾಸ, ಸಮುದ್ರಾಟ್ಟಹಾಸ, ಜಂಝಾವಾತರುದ್ರಹಾಸ, ಬಳ್ಳಿಗಳ ಬಳುಕು, ನಾನಾ ಸುಮಧುರ ಪುಷ್ಪಸಂಪತ್ತು ತೆರೆಯುವ ಹೊಸ ಅನುಭವ, ಬಗೆಬಗೆಯ ಹಣ್ಣುಗಳ ರುಚಿ ನೀಡುವ ಪುಷ್ಟಿ—ಎಲ್ಲ ಅನಾದಿಕಾಲದಿಂದಲೂ ಹೀಗೇ ಇರಬೇಕು. ಅವುಗಳ ಅಭಿವ್ಯಕ್ತಿಯಲ್ಲಿ ಕೊರೆಯಿಲ್ಲ. ಪ್ರಕೃತಿಯ ಶ್ರೀಮಂತಿಕೆಯಲ್ಲಿ ಕೊರೆಕರೆ ಇಲ್ಲವಾಗಿ, ಅದರೆ ಅವು ಯಾವಾಗ ನಮ್ಮ ಅನುಭವವಾಗುತ್ತವೆ. ಯಾವಾಗ ಅವುಗಳ ಮಂದಾಮಂದವಾದ ಸ್ಪಂದಕ್ಕೆ-ಅಲ್ಲ, ಶ್ರವಣಾತೀತ ಕಲಕಂಠಕರೆಗೆ-ನಮ್ಮ ಇಂದ್ರಿಯಗಳ ಬಾಗಿಲು ತೆರೆಯುತ್ತದೆ, ಯಾವಾಗ ನಮ್ಮ ಎದೆಯಲ್ಲಿ ಅವುಗಳಿಗೆ ಎಡೆ ದೊರೆಯುತ್ತದೆ, ಆಗ ಮಾತ್ರವೇ ಅವುಗಳ ನಮ್ಮತ್ತಣ ಸಂವಹನ ಕೃತಾರ್ಥವಾಗುತ್ತದೆ. ಈ ಸಂವಾದದಿಂದ ಮಾತ್ರವೇ ಉಭಯತ್ರರ ಹೃದಯವ್ಯಾಪಾರ ನಡೆಯುವುದು. ರಾವಣನ ಚಿತ್ತದ್ವಾರಗಳು ತೆರೆದುಕೊಂಡಾಗ ಅದುವರೆಗೂ ಅವನಿಗೆ ಗೋಚರಿಸದಿದ್ದ ಪ್ರಕೃತಿವೈಭವಗಳು ಕಾಣಿಸಿಕೊಳ್ಳುತ್ತವೆ. ಅವನನ್ನು ಅವು ಅನ್ಯಲೋಕ ವಿಜಯದತ್ತ ಕರೆಯುತ್ತವೆ. ಆಗ ಅದಕ್ಕೆ ಪೂರ್ವಸಿದ್ಧತೆಯಾಗಿ ಅವನ ಧೂಮಿಷ್ಠಹೃದಯ ನಿರ್ಧೂಮ ನಿಷ್ಕಾಮವಾಗತೊಡಗಿರುತ್ತದೆ; ಮನೋವಿಕಾರ ತಿಳಿಯತೊಡಗಿರುತ್ತದೆ. ಇದಕ್ಕೆ ಸಾಕ್ಷಿಯಾಗಿ ರಾವಣನದೇ ಮತ್ತೊಂದು ಅನುಭವವನ್ನು 'ಶ್ರೀ ರಾಮಾಯಣದರ್ಶನ'ದಿಂದ ಉಲ್ಲೇಖಿಸಬಹುದು. ಅದು ರಾವಣನ ಕಡೆಯದಿನದ ಬೆಳಗು. ಅವನು ಕಂಡ ಚಿತ್ರ. (ಅಂದರೆ, ಮೇಲೆ ಉದ್ಧರಿಸಿದ ಘಟನೆ ನಡೆದ ಮಾರನೆಯ ದಿನದ ಅನುಭವ.) ಶ್ರೀರಾಮನನ್ನು ತಾನೊಬ್ಬನೆ ಯುದ್ಧದಲ್ಲಿ ಎದುರುಗೊಂಡು ಅವನನ್ನು ಗೆದ್ದು, ತನ್ನನ್ನು ಗೆದ್ದಿರುವ-ಸೋಲಿಸಿರುವ-ಸೀತೆಗೆ ಕಾಣಿಕೆಯಾಗಿ ಒಪ್ಪಿಸಬೇಕೆಂಬ ಅಹಂಭಲದ ರಾವಣ ತನ್ನ ಆರಾಧ್ಯದೇವತೆಯ ಉಪಾಸನೆಯಲ್ಲಿದ್ದಾಗ ಒಂದು ಧ್ಯಾನಸುಷುಪ್ತಿಜನ್ಯವಾದ ಸ್ವಪ್ನವನ್ನು ಕಂಡಿರುತ್ತಾನೆ. ಅವನಿಗೆ ಅವನ ಊರ್ಧ್ವಮನಸ್ಸಿನ ಮಾತ್ರವಲ್ಲ, ತಳಮನಸ್ಸಿನ ದರ್ಶನವಾಗುತ್ತದೆ. ರಾಮನನ್ನು ಗೆಲ್ಲುವ, ಸೀತೆ ತನ್ನನ್ನು ಚುಂಬಿಸಬೇಕೆನ್ನುವ, ಅವನ ಆಸೆ ಈಡೇರುವ ಸ್ವಾಪ್ನಿಕ ಆಶ್ವಾಸನೆ ಹಾಗೂ ದರ್ಶನ ಅವನಿಗೆ ದೊರೆಯುತ್ತದೆ. ಅದೆಲ್ಲ ಮರುಜನ್ಮದಲ್ಲಿ ತಾನೂ ಕುಂಭಕರ್ಣನೂ ಲವಕುಶರಾಗಿ ಪರಿಣಾಮಗೊಂಡು ಹುಟ್ಟಿದಾಗ ಮಾತ್ರ. ಈ ದರ್ಶನಲಾಭಕ್ಕೆ ಪೂರ್ವವೇದಿಯಾಗಿ ಅವನು ಮತ್ತೊಂದು ಸ್ವಪ್ನ ಕಂಡಿರುತ್ತಾನೆ. ಪಾಳುಗುಡಿಯ ಶಿವಲಿಂಗಪೀಠದ ಮೇಲೆ ತನ್ನ ಮುಂಗಾಲಿಟ್ಟು ನರ್ತಿಸುತ್ತ ಕೆನೆಯುತ್ತಿರುವ ಬೃಹದಶ್ವದ ನಿಗುರಿದ ಶಿಶ್ನವನ್ನು ಬೃಹದ್ಖಡ್ಗವೊಂದು ಕತ್ತರಿಸಿ ರಕ್ತಪ್ರವಾಹವಾಗುವುದು: ಆ ಪ್ರವಾಹವನ್ನು ದಾಟಲು ರಾವಣ ದೋಣಿಯೊಂದನ್ನೇರಿ ದಡಸೇರಲೆಳಸುವುದು; ಆದರೆ

ಪತಿತೆಯುಪ್ಪಳಿ ಪೇಳ್ ಪತಿವ್ರತಾನಿಷ್ಠೆಯಿಂ
ಜಾಣ್ಮರುಳೆ. ಓ ಕೋಣಪಕಿರೀಟಿ ?''

ಪ್ರಕೃತಿಯ ಅಭಿವ್ಯಕ್ತಿಗಳಾದ ಸೂರ್ಯೋದಯಾಸ್ತಗಳು, ಚಂದ್ರಚಂದ್ರಿಕೆಗಳು, ನೀಲಾಕಾಶನಗ್ನಪ್ರಶಾಂತಿ, ವರ್ಷಭೈರವತೆ, ಕಾಮನಬಿಲ್ಲ ಮೋಹಕತೆ, ವಸಂತೋಲ್ಲಾಸ, ಶಾರದಹಾಸ, ತುಂಗೋನ್ನತ ಪರ್ವತ ಪಂಕ್ತಿಗಳು, ನದೀನದಗತಿವಿಲಾಸ, ಸಮುದ್ರಾಟ್ಟಹಾಸ, ಜಂಝಾವಾತರುದ್ರಹಾಸ, ಬಳ್ಳಿಗಳ ಬಳುಕು, ನಾನಾ ಸುಮಧುರ ಪುಷ್ಪಸಂಪತ್ತು ತೆರೆಯುವ ಹೊಸ ಅನುಭವ, ಬಗೆಬಗೆಯ ಹಣ್ಣುಗಳ ರುಚಿ ನೀಡುವ ಪುಷ್ಟಿ—ಎಲ್ಲ ಅನಾದಿಕಾಲದಿಂದಲೂ ಹೀಗೇ ಇರಬೇಕು. ಅವುಗಳ ಅಭಿವ್ಯಕ್ತಿಯಲ್ಲಿ ಕೊರೆಯಿಲ್ಲ. ಪ್ರಕೃತಿಯ ಶ್ರೀಮಂತಿಕೆಯಲ್ಲಿ ಕೊರೆಕರೆ ಇಲ್ಲವಾಗಿ, ಆದರೆ ಅವು ಯಾವಾಗ ನಮ್ಮ ಅನುಭವವಾಗುತ್ತವೆ. ಯಾವಾಗ ಅವುಗಳ ಮಂದಾಮಂದವಾದ ಸ್ಪಂದಕ್ಕೆ-ಅಲ್ಲ, ಶ್ರವಣಾತೀತ ಕಲಕಂಠಕರೆಗೆ-ನಮ್ಮ ಇಂದ್ರಿಯಗಳ ಬಾಗಿಲು ತೆರೆಯುತ್ತದೆ, ಯಾವಾಗ ನಮ್ಮ ಎದೆಯಲ್ಲಿ ಅವುಗಳಿಗೆ ಎಡೆ ದೊರೆಯುತ್ತದೆ, ಆಗ ಮಾತ್ರವೇ ಅವುಗಳ ನಮ್ಮತ್ತಣ ಸಂವಹನ ಕೃತಾರ್ಥವಾಗುತ್ತದೆ. ಈ ಸಂವಾದದಿಂದ ಮಾತ್ರವೇ ಉಭಯತ್ರರ ಹೃದಯವ್ಯಾಪಾರ ನಡೆಯುವುದು. ರಾವಣನ ಚಿತ್ತದ್ವಾರಗಳು ತೆರೆದುಕೊಂಡಾಗ ಅದುವರೆಗೂ ಅವನಿಗೆ ಗೋಚರಿಸದಿದ್ದ ಪ್ರಕೃತಿವೈಭವಗಳು ಕಾಣಿಸಿಕೊಳ್ಳುತ್ತವೆ. ಅವನನ್ನು ಅವು ಅನ್ಯಲೋಕ ವಿಜಯದತ್ತ ಕರೆಯುತ್ತವೆ. ಆಗ ಅದಕ್ಕೆ ಪೂರ್ವಸಿದ್ಧತೆಯಾಗಿ ಅವನ ಧೂಮಿಷ್ಠಹೃದಯ ನಿರ್ಧೂಮ ನಿಷ್ಕಾಮವಾಗತೊಡಗಿರುತ್ತದೆ: ಮನೋವಿಕಾರ ತಿಳಿಯತೊಡಗಿರುತ್ತದೆ. ಇದಕ್ಕೆ ಸಾಕ್ಷಿಯಾಗಿ ರಾವಣನದೇ ಮತ್ತೊಂದು ಅನುಭವವನ್ನು 'ಶ್ರೀ ರಾಮಾಯಣದರ್ಶನ'ದಿಂದ ಉಲ್ಲೇಖಿಸಬಹುದು. ಅದು ರಾವಣನ ಕಡೆಯದಿನದ ಬೆಳಗು. ಅವನು ಕಂಡ ಚಿತ್ರ. (ಅಂದರೆ, ಮೇಲೆ ಉದ್ಧರಿಸಿದ ಘಟನೆ ನಡೆದ ಮಾರನೆಯ ದಿನದ ಅನುಭವ.) ಶ್ರೀರಾಮನನ್ನು ತಾನೊಬ್ಬನೆ ಯುದ್ಧದಲ್ಲಿ ಎದುರುಗೊಂಡು ಅವನನ್ನು ಗೆದ್ದು, ತನ್ನನ್ನು ಗೆದ್ದಿರುವ-ಸೋಲಿಸಿರುವ-ಸೀತೆಗೆ ಕಾಣಿಕೆಯಾಗಿ ಒಪ್ಪಿಸಬೇಕೆಂಬ ಅಹಂಭಲದ ರಾವಣ ತನ್ನ ಆರಾಧ್ಯದೇವತೆಯ ಉಪಾಸನೆಯಲ್ಲಿದ್ದಾಗ ಒಂದು ಧ್ಯಾನಸುಷುಪ್ತಿಜನ್ಯವಾದ ಸ್ವಪ್ನವನ್ನು ಕಂಡಿರುತ್ತಾನೆ. ಅವನಿಗೆ ಅವನ ಊರ್ಧ್ವಮನಸ್ಸಿನ ಮಾತ್ರವಲ್ಲ, ತಳಮನಸ್ಸಿನ ದರ್ಶನವಾಗುತ್ತದೆ. ರಾಮನನ್ನು ಗೆಲ್ಲುವ, ಸೀತೆ ತನ್ನನ್ನು ಚುಂಬಿಸಬೇಕೆನ್ನುವ, ಅವನ ಆಸೆ ಈಡೇರುವ ಸ್ವಾಪ್ನಿಕ ಆಶ್ವಾಸನೆ ಹಾಗೂ ದರ್ಶನ ಅವನಿಗೆ ದೊರೆಯುತ್ತದೆ. ಅದೆಲ್ಲ ಮರುಜನ್ಮದಲ್ಲಿ ತಾನೂ ಕುಂಭಕರ್ಣನೂ ಲವಕುಶರಾಗಿ ಪರಿಣಾಮಗೊಂಡು ಹುಟ್ಟಿದಾಗ ಮಾತ್ರ. ಈ ದರ್ಶನಲಾಭಕ್ಕೆ ಪೂರ್ವವೇದಿಯಾಗಿ ಅವನು ಮತ್ತೊಂದು ಸ್ವಪ್ನ ಕಂಡಿರುತ್ತಾನೆ. ಪಾಳುಗುಡಿಯ ಶಿವಲಿಂಗಪೀಠದ ಮೇಲೆ ತನ್ನ ಮುಂಗಾಲಿಟ್ಟು ನರ್ತಿಸುತ್ತ ಕೆನೆಯುತ್ತಿರುವ ಬೃಹದಶ್ವದ ನಿಗುರಿದ ಶಿಶ್ನವನ್ನು ಬೃಹದ್ಬಡ್ಗವೊಂದು ಕತ್ತರಿಸಿ ರಕ್ತಪ್ರವಾಹವಾಗುವುದು: ಆ ಪ್ರವಾಹವನ್ನು ದಾಟಲು ರಾವಣ ದೋಣಿಯೊಂದನ್ನೇರಿ ದಡಸೇರಲೆಳಸುವುದು; ಆದರೆ

ಕತ್ತರಿಸಲ್ಪಟ್ಟ ಅಶ್ವರುಂಡ ಕುಪ್ಪಳಿಸುತ್ತ ಬಂದು ಅವನ ದೋಣಿಯನ್ನು ರುಳಿಸಿ ಮುಳು ಗಿಸುವುದು: ಹಾಗೆ ಮುಳುಗಿ ಮೇಲೆದ್ದಾಗ ರಾವಣ ತನ್ನ ತಮ್ಮನೊಡನೆ ಮಗುವಾಗಿ ದಡ ಸೇರುವುದು: ಆ ದಡದಲ್ಲಿದ್ದ ಪರ್ಣಶಾಲೆಯಲ್ಲಿದ್ದ ತಾಯಿ ಅವರನ್ನೆತ್ತಿ ಮುತ್ತಿಡುವುದು: ಆಕೆಯ ಸೀತೆಯಾಗಿರುವುದು; ಅದನ್ನು ಕಂಡು ಬೆಬ್ಬಳಿಸಿ ಕಿರುಚುತ್ತ ಎದ್ದಾಗ ಮಂಡೋದರಿಯನ್ನು ಕಾಣುವುದು—ಇದೆಲ್ಲವನ್ನೂ ರಾವಣ ಕಂಡಿರುತ್ತಾನೆ; ತನ್ನ ಆತ್ಮದ ಪಾರಿಣಾಮಿಕ ಅವಸ್ಥಾ ಚಿತ್ರವನ್ನು ತಿಳಿದೂ ತಿಳಿಯದೆ ಸ್ವಾಪ್ನಿಕವಾಗಿ ಕಂಡಿರುತ್ತಾನೆ. ಇದ ನ್ನೆಲ್ಲ ತನ್ನ ಸತಿಗೆ ತಿಳಿಸಿ, ತನ್ನ ಆ ಮನಃಪರಿಣಾಮವನ್ನು ಯಾರಿಗೂ ತಿಳಿಸಬೇಡೆಂದು ಕೇಳಿಕೊಂಡು ಹಾಗೂ ಅವಳ ಶುಭಪ್ರಾರ್ಥನೆಯನ್ನು ಕೊಂಡು ಯುದ್ಧಕ್ಕೆ ಹೊರಡು ತ್ತಾನೆ ರಾವಣ. ಆಗ ಅವನು ಕಂಡ ಬೆಳಗು ಹೀಗಿತ್ತು:

"ನೇಸರನ್ನೆಗಮುದಯ ದಿಗುರೇಖೆಯಂ ಬರೆದು
ಕತ್ತಿಬಿಡಿಸಿದನಿರುಳಿನಂಬರದಂಚಲದಿ, ಕಾಣ್,
ಉಷಾಗಮನಕೊತ್ತಿದೊಸಗೆಯ ತೋರಣಂಬೋಲ್.
ತ್ರಿಕೂಟಾದ್ರಿ ಶಿಖರಮಂದಿರದೆಳ್ತರದೊಳಿರ್ದ
ದಶಕಂಠನಾ ದಿವ್ಯದೃಶ್ಯಾವತರಣಮಂ
ನಿಡುವೊಳ್ತು ನೋಡಿದನ್. ತನಗೆ ತಾನೆಂದನ್:
'ಇದೇನಿಂದು ಪಿಂತೆಗಳೆನಗೆ ಪೊಳ್ತರೆಯಿಂತು
ಸೊಗಸಿತಿಲ್ಲನೆ ಸೊಬಗು ನನ್ನಂತರಾತ್ಮಮಂ
ಬೆಳಗುತಿದೆ? ಜೇನ್ಮಳೆಯ ಕರೆಯುತಿದೆ! ಪಾಲ್‌ಪೊನಲ್
ನಾಳನಾಳದಿ ಪರಿಸುತಿರ್ಪುದಮೃತತ್ವಮಂ,
ಶಾಂತಿಯಂ, ವೀರ್ಯಮಂ, ಶಕ್ತಿಯಂ, ತೇಜಮಂ,
ನಿಧನ ನಿಧುವನ ಪದದ ಮಧುರ ಚೈತನ್ಯಮಂ!"

ಈಗಿಲ್ಲಿ ಉದ್ಧರಿಸಿದ 'ಶ್ರೀರಾಮಾಯಣದರ್ಶನ' ಭಾಗಗಳಲ್ಲಿ ಕಂಡುಬರುವ ಸಂವಹನ ಸಮಸ್ಯೆ ಏನು ಎಂದು ಮತ್ತೆ ಒತ್ತಿ ಹೇಳಬೇಕಿಲ್ಲ. ಸದಾ ತನ್ನ ನಾನಾ ಸೌಂದರ್ಯಭಂಗಿಯನ್ನು ತೋರುತ್ತಿರುವ ಪ್ರಕೃತಿ ನಮ್ಮನ್ನು ಮುಟ್ಟದಿರುವುದಕ್ಕೆ ಕಾರಣ ಪ್ರಕೃತಿಯ ಅಭಿವ್ಯಕ್ತಿಯ ದೋಷವಲ್ಲ. ನಮ್ಮ ಚಿತ್ತಸ್ವಾಸ್ಥ್ಯ, ಚಿತ್ತಸಾಮರ್ಥ್ಯಗಳ ಲೋಪದೋಷ. ಹಾಗೆಯೆ ಷೇಕ್ಸ್‌ಪಿಯರ್ ಕವಿಯ ಲಿಯರ್, ಕಾಳಿದಾಸನ ದುಷ್ಯಂತ, ಭಾಸನ ಉದಯನ ತಾವು ಹಿಂದೆ ಕಾಣಲಾಗದಿದ್ದ ಹೊಸ ಅರ್ಥವನ್ನು ಕಂಡುಕೊಳ್ಳುವ ಹೊತ್ತಿಗೆ ಅವರೂ ಮಾಗಿರುತ್ತಾರೆ. ಅರ್ಥ ಹೊಳೆಸಲಾಗದಿದ್ದ ಚಿತ್ರಗಳು, ಅಸಂಗತವಾಗಿ ತೋರಿದ್ದ ವಿವರ ಗಳು ಆಗ ಅರ್ಥಪೂರ್ಣವಾಗಿ ಸಾವಯವ ಸುಂದರವಾಗಿ ಕಾಣತೊಡಗುತ್ತವೆ. ಆದರೆ ಅಷ್ಟಾಗಬೇಕಾದರೆ ಅವರ ಜೀವನದಿಯಲ್ಲಿ ಎಷ್ಟು ನೀರು ಹರಿದಿರಬೇಕು. ಆ ನದಿಯಾ ದರೂ ಎಷ್ಟುದೂರ ಹರಿದಿರಬೇಕು. ಭಗವಾನ್ ಬುದ್ಧ, ಜೈನ ಕೇವಲಿಗಳು, ತೀರ್ಥಂಕರರು ತಮ್ಮ ಕಡೆಯ ಜನ್ಮಗಳಲ್ಲಿ ಕಾಣುವ ಕರಗಿದ ಒಂದು ಮೋಡವೊ, ಕಾಮನಬಿಲ್ಲೊ, ಹೊಳೆವ ಒಂದು ನರೆಗೂದಲೊ ಅವರಿಗೆ ನಿರ್ವೇದವನ್ನು ಸಂವಹಿಸುತ್ತವೆ. ಬುದ್ಧ ಕಂಡ

ರೋಗಿಯ, ವೃದ್ಧನ, ಸತ್ತವನ ದೃಶ್ಯಜೀವನದ ಬೇರೊಂದು ಅರ್ಥವನ್ನು ಸಂವಹಿಸುತ್ತದೆ. ಆದರೆ ಅವರು ಆ ಸ್ಥಿತಿಗೆ ಬರಲು ಎಷ್ಟೆಲ್ಲ ಜನ್ಮಜನ್ಮಾಂತರ ಪರ್ಯಟನದ ಪಾಡು ಪಡಬೇಕಾಗುತ್ತದೆ. ನೀಲಾಂಜನೆಯ ನೃತ್ಯದಲ್ಲಾದ ನಿಜನರ್ತಕಿಯ ಸಾವನ್ನು 'ಇತರರು ಗಮನಿಸದಂತೆ ದೇವೇಂದ್ರ ಮತ್ತೊಬ್ಬ ಪ್ರತಿನೀಲಾಂಜನೆಯನ್ನು ತತ್‌ಕ್ಷಣವೇ ಸೃಷ್ಟಿಸಿ ನರ್ತನ ಮುಂದುವರಿಸುವುದು ಮತ್ತಾವ ಸಭಾಸದರಿಗೂ ತಿಳಿಯದಾದರೂ ಚರಮದೇಹಿಯಾದ ವೃಷಭನಾಥನಿಗೆ ಅದು ತಿಳಿದು ಅವನಲ್ಲಿ ವೈರಾಗ್ಯ ಮೂಡುತ್ತದೆ. ಇದೇ ಜೀವ ತನ್ನ ಲಲಿತಾಂಗ ಜನ್ಮದಲ್ಲಿ ಸ್ವರ್ಗದಲ್ಲಿ ತನ್ನ ಪ್ರಿಯೆ ಸ್ವಯಂಪ್ರಭೆಯೊಡನಿರುವಾಗ ತಾನು ಸ್ವರ್ಗಚ್ಯುತನಾಗುವುದನ್ನು ಆರು ತಿಂಗಳ ಮುಂದೆ ತಿಳಿದಾಗ ಪಡುವ ದುಃಖವಾದರೂ ತೀವ್ರತರವಾದುದು ; ಸಾಮಾನ್ಯ ಮಾನವಸಹಜವಾದುದು : "ದೇವನಂದನದ ಗಿಡಮರಗಳೆ ! ರತ್ನಖಚಿತವಾದ ನೆಲೆಗಟ್ಟಿರುವ ವಿಮಾನಗಳ ಶಯ್ಯಾಗೃಹಗಳೆ ! ಕಡೆಗಣ್‌ನೋಟದ ಕೇಳಿಯ ಚಂಚಲಾಕ್ಷಿಯರೆ ! ಯಮ ಬಿಡದೆ ರಭಸದಿಂದ ಸೆಳೆದೊಯ್ಯುತ್ತಿದ್ದಾಗ ನೀವೆಲ್ಲ ಸುಮ್ಮನೆ ಉಪೇಕ್ಷೆಯಿಂದ ನೋಡುತ್ತ ನಿಂತಿರುವಿರೆ ? ಸಂತೋಷದ ತುತ್ತತುದಿಯನ್ನು ಮುಟ್ಟಿ, ಸುರತಾಮೃತಪಾನದಿಂದ ತಣಿದು, ಅಕ್ಕರೆಯಿಂದ ಅಂಟಿಕೊಂಡಂತೆ ತೆಕ್ಕೆಗೊಂಡು, ಮೆಯ್ಯೆರಡಾದರೂ ಪ್ರಾಣವೊಂದೇ ಎಂದು ಪ್ರತಿಜ್ಞೆಗೊಂಡಂತೆ ಕೂಡಿಕೊಂಡು—ಪ್ರೀತಿಸಿ—ನಿನ್ನೊಡನೆ ಭೋಗಿಸಲು ಎದೆಗೊಡದೆ ನನ್ನನ್ನು ಸೆಳೆದೊಯ್ಯುತ್ತಿರುವ ಯಮನೆಂಬ ಭೂತನನ್ನು ತಡೆಯಬಾರದೆ. ಹೇಳು. ಪ್ರಿಯೆ ಸ್ವಯಂಪ್ರಭೆ!"* ಎಂದೆಲ್ಲ ಗೋಳಿಡುತ್ತಾನೆ. ತಣ್ಣನೆ ತೋರುವ ಹುಣ್ಣಿಮೆಯ ಬೆಳುದಿಂಗಳು ಚಂದ್ರಮಂಡಲದಲ್ಲಿ ಕುದಿ ಹಗಲ ಬಿಸಿಲು ; ಸಿಹಿಬೆಲ್ಲ ಕುದಿದು ಪಾಕಗೊಂಡು ಬಂದಿರುವ ಕಬ್ಬಿನ ರಸ ; ಪಚ್ಚೆ, ಗೋಮೇದಿಕಾದಿ ನವರತ್ನಗಳು ಜ್ವಾಲಾಮುಖಿಯ ಲಾವಾಗ್ನಿಯ ಹರಳುಗಳು. "ಪಕ್ವಕ್ಕಲ್ಲದೆ ಪರಿಣಾಮ ತೋರದು." ಜಗತ್ತಿನಲ್ಲಿ ನಿತ್ಯವೂ ಭೂಮಿಮೇಲೆ ಬೀಳುತ್ತಿರುವ ವಸ್ತುವನ್ನು ಆದಿಮಾನವನ ಕಾಲದಿಂದ ಎಷ್ಟು ಜನ ನೋಡುತ್ತ ಬಂದಿಲ್ಲ ? ಆದರೆ, ಬಿದ್ದ ಸೇಬಿನ ಹಣ್ಣು ನ್ಯೂಟನ್ನನಿಗೆ ಮಾತ್ರ ಒಂದು ಘನಸತ್ಯವನ್ನು ಸಂವಹಿಸಿತು. ಘನಸತ್ಯಗಳ ಗೂಢ ರಹಸ್ಯಗಳೇನೊ ಆಯ್ಕೆಯಾದ ಕೆಲವರಲ್ಲಿ ಮಾತ್ರ ಸಂವಹನಗೊಳ್ಳುತ್ತವೆ. ಘಟ್ಟಗಳ ಮೇಲೆ ಬಯಲು ನಾಡುಗಳ ಮೇಲೆ ತೇಲಿ ಹೋಗುವ ಮೋಡ

---

* "ಸುರತರು ನಂದನಂಗಳಿರ. ರತ್ನಪಿನದ್ಧ ವಿಮಾನ ಕುಟ್ಟಿಮಾಂ
ತರ ಸುರತಾಲಯಂಗಳಿರ, ಚಾರುವಿಲೋಲ ಕಟಾಕ್ಷಪಾತ ಸುಂ
ದರ ಪರಿವಾರ ದೇವಿಯರಿರಾ—ಕಡಿಕೆಯ್ದು ಕೃತಾಂತನಿಂತು ನಿರ್
ನೆರಮೆಟಿದುಯ್ಯೆ—ಬಾರಿಸದೆ, ಕೆಮ್ಮನುಪೇಕ್ಷಿಸಿ ನೋಡುತಿರ್ಪರೇ ?

ಸಂತಸದಂತನೆಯ್ದಿ, ಸುರತಾಮೃತದೊಳ್ ತಣಿದಟ್ಟಜೊಳ್ ಚಿಗಿ
ಲ್ತಂತಿರೆ ಪತ್ತಿ, ಮೆಯ್ಗಳೆರಡಾದೊಡಮೇನಸು ಒಂದೆ ಪೂಣ್ದುದೆಂ
ಬಂತಿರೆ ಕೂರ್ತು, ನಿನ್ನೊಡನೆ ಭೋಗಿಸಲೀಯದೆ ಕೆಮ್ಮನೆನ್ನನು
ಯ್ವಂತಕನೆಂಬ ಬೂತನೆಲೆ ಬಾರಿಸಲಾಗದೆ ಪೇಟ್ ಸ್ವಯಂಪ್ರಭೆ ?"

—ಆದಿಪುರಾಣ : ಪಂಪ. ಆಶ್ವಾಸ ೩, ಪದ್ಯ ೪, ೫.

ಗಳು ಅಲ್ಲಲ್ಲಿ ಅಷ್ಟಷ್ಟು ಸಂಪ್ರೋಕ್ಷಣೆ ಮಾಡಿದರೂ ತಮ್ಮ ಭಾರವನ್ನೆಲ್ಲಾ ಇಳುಕಿಕೊಳ್ಳುವುದು ಹಿಮಗಿರಿಯ ತೊಡೆಯ ಮೇಲೆಯೆ. ಸಾಮಾನ್ಯ ಸತ್ಯಗಳೂ ಅರ್ಥಗಳೂ—ಅವು ಬಹುತೇಕ ಜನರನ್ನೆ ಉದ್ದೇಶಿಸಿದ್ದರೂ. ಅವರಿಗೂ ಅವುಗಳು ಸಂವಹನಗೊಳ್ಳುವುದು ಖಾತ್ರಿಯೇನೂ ಅಲ್ಲ, ಖಾಯಂ ಕೂಡಾ ಅಲ್ಲ. ಹಾಗೆ, ಸಂವಹನದ ಲಾಭವಾಗಲು ಅವರ ಸಿದ್ಧತೆ ಆಗಿರಬೇಕು. "ತಲ್ಲಣಿಸದಿರು ತಾಳು ಕಂಡ್ಯಾ ಮನವೆ" ಹಾಡು ಎಷ್ಟು ಬಾರಿ ಕೇಳಿದಾಗಲೂ ಅರ್ಥ ಬಿಟ್ಟುಕೊಂಡಿಲ್ಲದಿರಬಹುದು. ಆದರೆ ಜೀವನ ದುರ್ಭರವೆನಿಸಿದ ದುರಂತ ಘಳಿಗೆಯಲ್ಲಿ—ನನಗಾರೂ ಇಲ್ಲ, ನಾನು ಒಂಟಿ ಎಂದು ಹತಾಶವಾದ ಕ್ಷಣದಲ್ಲಿ—ಈ ಹಾಡು ನೆನಪಿಗೆ ಬಂದಾಗ, ದುರಂತ ತಪ್ಪಿಸಿದಾಗ ಅದಕ್ಕೊದಗುವ ಸಂವಹನ ಅಪೂರ್ವ.

ಖಚಿತ ಸಂವಹನಕ್ಕೆ ಭೋಕ್ತೃವಿನ ಸಿದ್ಧತೆಯ ಅಗತ್ಯವನ್ನು ಭಗವಾನ್ ಕ್ರಿಸ್ತನ ಸಾಮತಿಯೊಂದು ಸ್ಪಷ್ಟಪಡಿಸುತ್ತದೆ. ರೈತನೊಬ್ಬ ಕಾಳನ್ನು ಬಿತ್ತುತ್ತ ಹೋದ. ಕೆಲವು ಹಾದಿಯ ಮೇಲೆ ಬಿದ್ದವು ; ಅವುಗಳನ್ನು ಹಕ್ಕಿಗಳು ಆಯ್ದುಕೊಂಡು ಹೋದವು. ಕೆಲವು ಬಂಡೆ ಮೇಲಣ ತೆಳು ಮಣ್ಣಮೇಲೆ ಬಿದ್ದುವು ; ಅವು ಮೊಳೆತು ಆಳವಾಗಿ ಬೇರು ಚಾಚುವ ಮುನ್ನವೆ ಒಣಗಿದವು. ಮತ್ತೆ ಕೆಲವು ಮುಳ್ಳುಕಂಟೆಯ ಮೇಲೆ ಬಿದ್ದುಕೊಂಡವು ; ಅವು ಬೆಳೆದರೂ ಫಲಕೊಡಲಾಗಲಿಲ್ಲ. ಎಲ್ಲೋ ಕೆಲವು ಮಾತ್ರ ಹದ ನೆಲದ ಮೇಲೆ ಬಿದ್ದು ಚೆನ್ನಾಗಿ ಬೆಳೆದು ಒಳ್ಳೆಯ ಫಲವಿತ್ತುವು—ಈ ಸಾಮತಿಯಲ್ಲಿ ಬಿತ್ತುವ ಕಾಳೆಲ್ಲ ಒಂದೇ ಗುಣಮಟ್ಟದವಾಗಿರುತ್ತವೆ. ಫಲಮಾತ್ರ ಬೇರೆ ಬೇರೆ ಆಯಿತು. ಪ್ರವಾದಿ ಹೇಳುವ ಮಾತಿನ ಗತಿಯೂ ಅಷ್ಟೇ ಎಂಬುದು ಇಂಗಿತ. ಹೀಗಿರುವಾಗ ಕವಿಯ ಮಾತಿನ ಪಾಡೇನೂ ಉತ್ತಮವಾಗಿರಲಾರದು.

ಈಗ ಸಂವಹನದಲ್ಲಿ ವಕ್ತೃವಿನ ಪಾತ್ರವೇನೆಂಬುದನ್ನು ನೋಡಬಹುದು. ತನ್ನ ಬಳಿಗೆ ಬಂದ ಕಿಸಾಗೋತಮಿಗೆ ಬುದ್ಧ ಹೇಗೆ ಬೋಧೆ ನೀಡಿದ, ಹಾಗೂ ಮೆಗ್ದಲೀನ ಮೇರಿಯನ್ನು ಕ್ರಿಸ್ತ ಹೇಗೆ ಕಾಪಾಡಿದ ಎಂಬುದನ್ನು ನೋಡಿದರೆ ವೇದ್ಯವಾಗುತ್ತದೆ. ಸಾವಿನ ಬಗೆಗೆ ಭಾಷಣ ನೀಡದೆ ಅದರ ಸರ್ವವ್ಯಾಪಕತೆಯನ್ನೂ ಅದಮ್ಯ ಅನಿವಾರ್ಯತೆಯನ್ನೂ ಕಿಸಾಗೋತಮಿಗೆ ಮನದಟ್ಟುಮಾಡಿಕೊಡುವ ಸಹಜವಾದ ವಕ್ರವಲ್ಲದ ಸಕರುಣರೀತಿ ಬುದ್ಧನನ್ನು ಯಶಸ್ವಿಯಾಗಿ ಮಾಡುತ್ತದೆ ಎಂಬುದೇನೊ ಸರಿ. ಆದರೆ ಅದೇ ಮಾರ್ಗವನ್ನು ಕಡಿಮೆ ಸತ್ತ್ವದ ವ್ಯಕ್ತಿ ಅನುಸರಿಸಿದ್ದರೆ ? ಕೊಲೆಗಡುಕರ ಕಲ್ಲೇಟಿನಿಂದ ಮೇರಿಯನ್ನು ಪಾರುಮಾಡಿದ ಕ್ರಿಸ್ತ ಆ ಎಲ್ಲ ಗಲಭೆಕೋರರನ್ನೂ ನಿರ್ವಹಿಸಿದ ರೀತಿಯನ್ನು ಸಾಮಾನ್ಯನೊಬ್ಬ ಪ್ರಯೋಗಿಸಿದ್ದರೆ ? "ಹೊಡೆದು ಕೊಲ್ಲಿ ! ಆದರೆ ಯಾವ ಪಾಪವೂ ಮಾಡದವರು ಮಾತ್ರವೆ ಕಲ್ಲಿಟ್ಟು ಆಕೆಯನ್ನು ಕೊಲ್ಲಿ !" ಎಂದ ಸಕರುಣಧೀರ ತೇಜೋವಾಣಿಗೆ ಅವರೆಲ್ಲ ನಿರಸ್ತ್ರರಾಗುತ್ತಾರೆ. ಸಾಮಾನ್ಯನು ಆ ಸಾಹಸ ಮಾಡಿದ್ದರೆ ಮೇರಿಯೊಡನೆ ತಾನೂ ಸಾಯುತ್ತಿದ್ದ. ಸಂವಹನಗೊಳ್ಳಬೇಕಾದ ಅನುಭವ–ಅಭಿಪ್ರಾಯ–ಬೋಧೆ–ಆದೇಶ ಆ ತುದಿಮುಟ್ಟಲು ಮೂಲದಲ್ಲೆ ರೋಗಿಷ್ಠವಾಗಿರಬಾರದು. ಅವು

ಸಶಕ್ತವಾಗಿದ್ದೂ ಮಾಧ್ಯಮ ಸರಿಯಲ್ಲದಾಗ, ಗಮ್ಯಸ್ಥಾನ ಯೋಗ್ಯವಾಗಿಲ್ಲದಿದ್ದರೆ ಆಗಲೂ ಸಂವಹನ ಫಲಕಾರಿಯಾಗುವುದಿಲ್ಲ. "ತನ್ನ ಊರಿನಲ್ಲಿ ಯಾರೂ ಪ್ರವಾದಿಯಲ್ಲ" ಎಂದು ಕ್ರಿಸ್ತ ಹೇಳುವ ಮಾತಿನ ಧ್ವನಿಯಾದರೂ ಇದೇ ಆಗಿರಬೇಕು. ಎಂಥ ವೈದ್ಯನಾದರೂ ಎಲ್ಲ ರೋಗಗಳನ್ನೂ ಗುಣಪಡಿಸಲಾರ; ಒಂದೇ ಔಷಧಿಯು ಎಲ್ಲರನ್ನೂ ವಾಸಿ ಮಾಡಲಾರ. ಒಬ್ಬನಿಗಾದ ವೈದ್ಯ ಮತ್ತೊಬ್ಬನಿಗೆ ಒಗ್ಗದಿರಬಹುದು; ಒಗ್ಗಿದರೂ ವೈದ್ಯನಲ್ಲಿ ವಿಶ್ವಾಸ ಮೂಡದೆ ಹೋಗಬಹುದು. ಹಾಗಾಗಿ ನಮ್ಮ ಮಾತುಗಳೂ ಸಂವಹನಗೊಳ್ಳದೆ ವ್ಯರ್ಥವಾಗುತ್ತವೆ.

ವಿದ್ಯುತ್ತನ್ನು ಎಲ್ಲ ವಸ್ತುಗಳೂ ಸಂವಹಿಸುವುದಿಲ್ಲ. ಹಾಗೆ ಸಂವಹಿಸುವ ವಸ್ತುಗಳೂ ಎಲ್ಲ ಒಂದೆ ರೀತಿಯವಾಗಿರುವುದಿಲ್ಲ. ಅತ್ಯಂತ ಕಡಿಮೆ ನಿರೋಧವಿರುವ ವಸ್ತುವನ್ನು ಮಾತ್ರವೆ ಸಂವಹನ ಸಾಧನವಾಗಿ ಬಳಸಿಕೊಳ್ಳಬೇಕಾಗುತ್ತದೆ. ಆದರೂ ಗಮ್ಯದಲ್ಲಿ ಸ್ವಿಚ್‌ಹಾಕಿಲ್ಲದಿದ್ದರೆ ಆ ತುದಿಗೆ ವಿದ್ಯುತ್ತು ಮುಟ್ಟುವುದೇ ಇಲ್ಲ. ಭೌತಪ್ರಪಂಚದಲ್ಲಿ ಈ ಸಂವಹನ ಕಾರಣಾದಿಗಳನ್ನೆಲ್ಲ ಪತ್ತೆಹಚ್ಚಿ ಅದನ್ನು ಕೋಷ್ಟಕದಲ್ಲಿ ವಿವರಿಸಬಹುದು. ಆದರೆ ಮನಸ್ಸಿನ ಪ್ರಪಂಚದಲ್ಲಿ ಇದನ್ನು ತಿಳಿಯುವುದು ಸುಲಭವಲ್ಲ. ಅಷ್ಟೇ ಏಕೆ ಪ್ರಾಣಿಪ್ರಪಂಚದಲ್ಲೂ ಕಷ್ಟವೇ ಸರಿ. ಗಾಡಿಯ ಎತ್ತುಗಳು, ಜಟಕಾಕುದುರೆ ಎಲ್ಲ ಚಾಲಕರಿಗೂ ಸಮಾನವಾಗಿ ಸ್ಪಂದಿಸುತ್ತವೆಂದು ಹೇಳಬರುವುದಿಲ್ಲ. ನಾನೆ ಹುಡುಗನಾಗಿದ್ದಾಗ ನಮ್ಮ ಗಾಡಿಯನ್ನು ನಡೆಸಲು ಕುಳಿತಾಗ ಇದನ್ನು ಕಂಡಿರುವೆ. ಎಷ್ಟೇ ಮಾಡಿದರೂ ತಮ್ಮ ಮಂದಗತಿಯನ್ನು ಬಿಡದ ಎತ್ತುಗಳು ಚಾಲಕನೆ ಕುಳಿತು 'ಅಚ, ಅಚ' ಎಂದು ಅವುಗಳ ಬೆನ್ನಮೇಲೆ ಬೆರಳಿಟ್ಟೊಡನೆಯೆ ಅವು ದೌಡಾಯಿಸಿದ್ದನ್ನು ಹಲವುಬಾರಿ ಕಂಡಿದ್ದೇನೆ. ಕೆಲವರು ಕುಳಿತಾಗ, ಅವರು ಬಾಲ ತಿರುಚಿ ಚಾಟಿಯಿಂದ ಬಾರಿಸಿದರೂ ಮಂದಗತಿ ಬಿಡದ ಎತ್ತುಗಳೆ ಕೆಲವೇ ಚಾಲಕರ ದನಿಕೇಳಿದೊಡನೆಯೆ ಬೆನ್ನಮೇಲೆ ಬೆರಳು ತಾಕಿದೊಡನೆಯೆ ಚಟುಲಗತಿಯಿಂದ ಸಾಗುವುದಿರಲಿ; ಮನೆಯ ಸಾಕಿದ ಹಸುಗಳು ಹಾಲುಕರೆಯಲು ಹೋಗುವ ಎಲ್ಲರಿಗೂ ಸ್ಪಂದಿಸದುದನ್ನೂ, ತಮಗೆ ಒಗ್ಗುವ ಮನೆಯೊಡತಿಯೊ ಮನೆಕೆಲಸದವನೊ ಕರೆಯಲು ಹೋದಾಗ ಮಾತ್ರ ತಂಟೆಮಾಡದೆ ಸೊರುವುಬಿಡುವುದನ್ನೂ, ದಂಡಿಹಾಲುಕೊಡುವುದನ್ನೂ ನೋಡಿರುವೆ. ಉಳಿದವರನ್ನು ಹತ್ತಿರವೆ ಕೂಡದ ಹಸು, ಹಾಲು ಕೊಟ್ಟರೂ ಒದೆದೊ ತಿವಿದೋ ಧಿಕ್ಕರಿಸುವುದನ್ನೂ ತನಗೊಗ್ಗಿದವರ ದನಿಕೇಳಿ ಸಾಧುವಾಗಿ ವರ್ತಿಸುವುದನ್ನೂ ಕಂಡಿರುವೆ.

ಮನುಷ್ಯ ಪ್ರಪಂಚಕ್ಕೆ ಬರುವುದಾದರೆ ಇನ್ನೂ ವೈಚಿತ್ರ್ಯ ಕಂಡೀತು. ಪರಮಹಂಸರ ಕಥೆಯೊಂದರಲ್ಲಿ ಬರುವ ಮೀನು ಮಾರುವ ಹೆಂಗಸಿಗೆ ಹೂವಾಡಿಗರ ಮನೆಯಲ್ಲಿ ನಿದ್ದೆಯೆ ಬರಲಿಲ್ಲ. ತನ್ನ ಮೀನು ಬುಟ್ಟಿಯೊಳಕ್ಕೆ ನೀರು ಚಿಮುಕಿಸಿ ಮೂಸಿಕೊಂಡಾಗಷ್ಟೇ ನಿದ್ದೆ ಬಂತಾಕೆಗೆ. ಇದೇನೋ ಒಂದು ರೀತಿ ಯಶೋಧರನ ಮಂಚದಲ್ಲಿ ಮಲಗಿದ್ದ ಅಮೃತಮತಿಗೆ ಮಾವುತನ ಹಾಡು ಕತಕದ ಬೀಜವಾಗಿ ಪರಿಣಮಿಸಿತು. ಅಷ್ಟಾವಂಕನಲ್ಲಿ ಸೌಂದರ್ಯವನ್ನು ಕಂಡಿತು; ಸುಂದರ ಯಶೋಧರನಲ್ಲಿ ಅಸಹ್ಯಪಟ್ಟಿತು. ಏನಿದಕ್ಕೆ ಕಾರಣ? ಅತೃಪ್ತ

ಕಾಣುವುದು. ಅದರ ಯಶಸ್ವಿ...
ಬೇರೆ ಮತದವರಿಗೆ ಮತ್ತೊಂದು ಮತದ ಪೂಜಾವಸ್ತುಗಳು, ಪೂಜಾವಿಧಿಗಳು, ಪೂಜ್ಯ ವಸ್ತುಗಳು ಏಕೆ ತಿರಸ್ಕಾರ್ಯವೂ ದ್ವೇಷಕಾರಕವೂ ಆಗುತ್ತವೆ. ಬಾಬರಿಮಸೀದಿ ಮತವಳಿ ಹಿಂದೂಗಳಿಗೆ ನಾಶಯೋಗ್ಯವಾಗಿ ತೋರುತ್ತದೆ. ಹಿಂದೂಗಳ ವರಾಹಾವತಾರ ಮುಸ್ಲಿಮ ರಿಗೆ ಸಹ್ಯವಾಗುವುದಿಲ್ಲ. ಹೊಸ ಭಕ್ತರ ಹೃದಯವನ್ನು ಮುಟ್ಟಿದ ಕ್ರಿಸ್ತನ ಮಾತುಗಳು ಅವನ ಧರ್ಮದವರೇ ಆದ ಯಹೂದಿಗಳಿಗೆ ವಧಾರ್ಹವಾಗಿ ತೋರಿದವು. ಯಹೂದಿಗಳು ಹಿಟ್ಲರನಿಗೆ ಸಮೂಲನಿರ್ನಾಮಕ್ಕೆ ಯೋಗ್ಯರಾಗಿ ಕಂಡುಬಂದರು. ವೈದಿಕರ ಯಜ್ಞಗಳು ಬುದ್ಧ ಮಹಾವೀರರಿಗೆ ವಿಪನ್ನವೆನಿಸಿದವು. ನಿರಾಕಾರ ಪೂಜಕನಿಗೆ ಸುಂದರ ದೇವರಪ್ರತಿಮೆ ಗಳೂ ಒಡೆದುಹಾಕಬೇಕಾದುವುಗಳಾಗಿಯೊ ನಿರರ್ಥಕಗಳಾಗಿಯೊ ಕಂಡುಬಂದಾವು. ಸುಂದರವಾದ ಈ ಶರೀರ ಮರಣಾನಂತರದ ಘಳಿಗೆಯಲ್ಲಿ ಪ್ರೀತಿಸಿದ್ದವರಲ್ಲೂ ಜುಗುಪ್ಸೆ ಯನ್ನು ತರುತ್ತದೆ, ವಿಸರ್ಜನಯೋಗ್ಯವಾಗಿ ತೋರುತ್ತದೆ. ಅಳಿದ ಪ್ರೀತಿಯ ಘಳಿಗೆಯಲ್ಲಿ ಪ್ರಿಯರುಗಳೇ ದ್ವೇಷಹುಟ್ಟಿಸುತ್ತಾರೆ.

ಪೂಜಾರ್ಹವಾಗಿದ್ದ ಲೆನಿನ್, ಮಾರ್ಕ್ಸ್‌ರ ಪ್ರತಿಮೆಗಳು ಕಮ್ಯುನಿಸಮ್ ಅವಸಾನದ ಪ್ರಾರಂಭದ ಘಳಿಗೆಯಲ್ಲಿ ವಿಸರ್ಜನೀಯವಾದುವು ; ಏಕೆ ? ಹಸಿದ ಘಳಿಗೆಯಲ್ಲಿ ಅಮೃತವಾಗಿ ತೋರಿದ್ದ ಉಣಿಸು ಉಂಡು ಉಬ್ಬರಿಸಿದ ಕೂಡಲೆ ಓಕರಿಕೆಯ ವಸ್ತು ವಾಗುತ್ತದೆ. ತುಂಬಾ ಪ್ರೀತಿಸುವ ಹಾಲನ್ನು ಅತಿಯಾಗಿ ಕುಡಿದು ಆರೋಗ್ಯಕೆಡಿಸಿಕೊಂಡ ವ್ಯಕ್ತಿ ಆಮೇಲೆ ಅದರ ಬಗೆಗೇ ಅರುಚಿಯನ್ನೊ ದ್ವೇಷವನ್ನೊ ಬೆಳೆಸಿಕೊಂಡಿರುವು ದುಂಟು. ಏಕೆ ? ಸಂವಹನ ಎಲ್ಲಿದೆ ? ಒಂದೇ ವಸ್ತು, ಹಲವರಿಗೆ ಹಲವು ಭಾವವನ್ನು ತಂದೀತು : ತುಂಬಾಸುಂದರವಾದ ಗುಲಾಬಿ ಒಗ್ಗದ ವಸ್ತುವಾಗಿ ಉಬ್ಬಸ ತರುತ್ತದೆ. ಗೋಪಿಯರಿಗೆ ಪರಮಪ್ರಿಯನಾದ, ಭಕ್ತರಿಗೆ ಭಗವಂತನಾದ ಕೃಷ್ಣ ಅದೇ ಘಳಿಗೆಯಲ್ಲಿ ಕಂಸಾದಿಗಳಿಗೆ ಅಸಹನೀಯವಾಗಿದ್ದ. ಎಲ್ಲರಲ್ಲೂ ಒಂದೇ ಭಾವವನ್ನೇಕೆ ಹುಟ್ಟಿಸಲಿಲ್ಲ ? ಅಥವಾ ಆಗಲಿಲ್ಲ ? ಆದುದರಿಂದ ಅಭಿವ್ಯಕ್ತಿ ತಾನೆಷ್ಟೆ ಸುಂದರವೂ ಸಮರ್ಪಕವೂ ಆಗಿ ದ್ದರೂ ಅದು ಮೂಡಿಸುವ ಅನುಭವ ಒಂದೇ ಆಗಿರಲಾರದು. ಅದು ಅವರವರ ಸಂಸ್ಕಾರ ಎಂದು ಸುಮ್ಮನಾಗಬಹುದು. ಒಂದು ವಸ್ತು ಒಬ್ಬನೇ ವ್ಯಕ್ತಿಗೆ ಒಮ್ಮೆ ಕಂಡಂತೆ ಮತ್ತೊಮ್ಮೆ ಕಂಡಿತೆನ ಬರುವುದಿಲ್ಲ. ಸೂರ್ಯ ಚಂದ್ರೋದಯಾಸ್ತಗಳು ಕಂಡಾಗ

ಬಾರಿ ಅವರ ಶ್ರುತಿಶುದ್ಧಿಗೆ, ಇನ್ನೊಮ್ಮೆ ಲಯಕ್ಕೆ, ಮಗದೊಮ್ಮೆ ಸಾಹಿತ್ಯದ ಸೌಂದರ್ಯಕ್ಕೆ ಮಾರುಹೋಗುವಂತಾಗಿರುತ್ತದೆ. ಇದೇ ರೀತಿ ಒಳ್ಳೆಯ ಕಾವ್ಯದ ಸಂವಹನ ಸ್ತರಗಳು ನಾನಾ ಓದಿಗೆ ನಾನಾರೀತಿಯವೂ ಆಗುವುದು ಸಾಧ್ಯ.

ಈ ಸಂವಹನದ ವೈಚಿತ್ರ್ಯ ಅಸಂಖ್ಯ. ಶ್ರೇಷ್ಠ ಕಾವ್ಯದ ಮಾತಿರಲಿ, ಸಂಗೀತ ಚಿತ್ರಕಲೆ ನರ್ತನ ಶಿಲ್ಪಗಳ ವಿಷಯವಾದರೂ ಇಷ್ಟೆ. ಶ್ರೇಷ್ಠಕವಿಯಾದವನಲ್ಲಿ ಶ್ರೇಷ್ಠ ಸಂಗೀತವೊ ಚಿತ್ರಕಲೆಯೊ ಅಷ್ಟೇ ಮಟ್ಟದ ಸಂವಹನ ಕಂಡುಕೊಳ್ಳುತ್ತದೆಂದು ಹೇಳಬರದು. ಒಂದು ಮಾರ್ಗದ ವರಿಷ್ಠನಿಗೆ ಮತ್ತೊಂದು ಮಾರ್ಗದ ಶ್ರೇಷ್ಠ ಕೃತಿ ಅಷ್ಟೇ ಅರ್ಥಪೂರ್ಣವಾಗಿ ತೋರದಿರಬಹುದು. ಷೇಕ್ಸ್‌ಪಿಯರ್ ಮಹಾಕವಿಯನ್ನು ನಲವತ್ತು ಬಾರಿ ಆಸಕ್ತಿಯಿಂದ ಓದಿದರೂ ಅವನನ್ನು ಮೆಚ್ಚಿಕೊಳ್ಳಲಾಗಿಲ್ಲ ಎಂದು ಟಾಲ್‌ಸ್ಟಾಯ್‌ನಂಥ ಮಹಾ ಕಾದಂಬರಿಕಾರ ಉದ್ಗರಿಸಿದ. ಗಾಂಧೀಜಿಯವರು ಕ್ರಾಂತಿಕಾರಕ ಕೈಯಂತ್ರವೆಂದುಕೊಂಡ ಚರಕವನ್ನು ಟಾಗೂರರು ಹಾಸ್ಯಮಾಡುತ್ತಾರೆ. ತಮ್ಮ ಆಶ್ರಮದ ಗೋಡೆಗಳ ಮೇಲೆ ಚಿತ್ರಗಳೇಕಿರಬೇಕು, ಪ್ರಕೃತಿಯೇ ಗಿಡ ಮರ ನದಿ ಪರ್ವತಗಳನ್ನು ಸುತ್ತಲೂ ಹರಡಿರುವಾಗ ಎನ್ನುತ್ತಾರೆ ಗಾಂಧೀಜಿ ಅವರು. ಅಷ್ಟೇ ಅಲ್ಲ, ಗೇರುಸೊಪ್ಪೆಯ ಜಲಪಾತವನ್ನು ನೋಡಲೆಂದು ಯಾರೋ ಅವರಿಗೆ ಆಹ್ವಾನ ನೀಡಿದಾಗ, ಅವರಾಡಿದ ಮಾತಾದರೂ ಆತಿಶಯವಾದುದು. ಮಳೆಯ ದಿನಗಳಲ್ಲಿ ಬಾನೆತ್ತರದಿಂದ ಧಾರಿಡುವ ಮಳೆನೀರಿನಲ್ಲಿ ಆ ಜಲಪ್ರಪಾತ ಕಂಡಿರುವೆ ಎಂದರಂತೆ.

ಬೇರೆ ಒಂದು ಬಗೆಯನ್ನೂ ಇಲ್ಲಿ ಗಮನಿಸಬಹುದು. ವ್ಯಾಸರ ಭಾರತವನ್ನು ಭಕ್ತಿಯಿಂದ ಕನ್ನಡದಲ್ಲಿ ಮರುಹುಟ್ಟಿಸುವಾಗ ಪಂಪಕುಮಾರವ್ಯಾಸರು ಹೇಗದನ್ನು ಮಾರ್ಪಡಿಸಿಕೊಂಡಿದ್ದಾರೆ ಎಂಬುದನ್ನು ಗಮನಿಸಿದಾಗ ಅವರ ರುಚಿ–ಅಭಿರುಚಿ, ಪ್ರತಿಭಾ ಸಾಮರ್ಥ್ಯವನ್ನು ಕಾಣಬಹುದಾದರೂ, ಆ ಮೂಲ ಮಹಾಕಾವ್ಯ ಅವರಲ್ಲಿ ಹೇಗೆ ಸಂವಹನಗೊಂಡಿತೆಂಬುದನ್ನೂ ತಿಳಿಯಬಹುದಾಗಿದೆ. ಪಂಪನ 'ಹಿತಮಿತ ವಚನ' ರನ್ನನಿಗೆ 'ಗೂಡಾರದ ಕವಿಯ'ಮಾತಾಗಿ ತೋರಿದ್ದರಿಂದಲೋ ಏನೊ ಅವನಲ್ಲಿ ಇವನ ಭಾವಗಳೂ ಕಲ್ಪನೆಗಳೂ ಹೆದ್ದನಿಯನ್ನು ಪಡೆದುಕೊಳ್ಳುತ್ತವೆ. ಹಾಗಾಗಿ ಅವನು ಹೆಚ್ಚು ಯಶಸ್ವಿಯಾದ ಸಂವಹನ ಪಡೆದುಕೊಂಡ. ವಾಸ್ತವವಾಗಿ ಅವನು ಪಂಪಕವಿಯ 'ಸಾಮಂತ ಚೂಡಾಮಣಿ'ಯಾದರೂ ಕವಿಚಕ್ರವರ್ತಿಯ ಸಂವಹನವನ್ನೆ ಪಡೆದುಕೊಳ್ಳುತ್ತಾನೆ. ವ್ಯಾಸರ ವಿಸ್ತಾರವನ್ನು ಸಮಸ್ತ ಸಂಗ್ರಹವಾಗಿ ತರುವಾಗ ಪಂಪ ಕೆಲವೊಂದು ನಷ್ಟಗಳನ್ನು ಅನುಭವಿಸಿರುವುದಕ್ಕೆ ಕಾರಣವುಂಟು. 'ಆರುತಿಂಗಳಲ್ಲಿ' ಬರೆಯಬೇಕೆಂಬ ವ್ರತ, ಅರಿಕೇಸರಿಯನ್ನು ಅರ್ಜುನನೊಡನೆ ಸಮೀಕರಿಸಿ ಪಟ್ಟ ಪಾಡು, ಜೈನಧರ್ಮೀಯನಾಗಿ ಅವನಿಗಿದ್ದ ಅಂತರ—ಇವುಗಳ ಜೊತೆಗೆ ಅವನ ಕಾಲದ ಜೀವನ ದೃಷ್ಟಿ, ರಾಜಾಸ್ಥಾನದ ಭದ್ರಾವರಣಗಳೆಲ್ಲ ಕಾರಣಗಳಾಗಿ ಸೇರಿಕೊಳ್ಳುತ್ತವೆ. ಇದರ ಆಚೆಗೆ ಅವನ ಹಾಗೂ ವ್ಯಾಸರ ಪ್ರತಿಭೆ ಮನೋಧರ್ಮ ಜೀವನ ದರ್ಶನ ಲೋಕಾನುಭವಗಳ ಅಂತರವೂ ಕೂಡಿಕೊಳ್ಳುತ್ತವೆ. ಇವೆಲ್ಲದರಿಂದಾಗಿ ವ್ಯಾಸಭಾರತ ಅವನಿಗೆ ಎಷ್ಟರ ಮಟ್ಟಿಗೆ, ಹೇಗೆ ಸಂವಹನಗೊಂಡಿತು ಎಂದೂ ತಿಳಿಯಬಹುದು.[4] ಒಂದೇ

ವಸ್ತುವನ್ನು ಕುರಿತು ಕಾವ್ಯ ನಿರ್ಮಿಸುವ ಕವಿಗಳನ್ನು ವಿವೇಚಿಸುವಾಗ. ಹಾಗೂ ಪ್ರತಿಭಾವಂತ ಪ್ರಬಲ ಕವಿಯ ಪ್ರಭಾವಕ್ಕೆ ಒಳಗಾಗುವ ಇತರ ಕವಿಗಳ ಸಾಮರ್ಥ್ಯ ವಿವೇಚಿಸುವಾಗ ಈ ಸಂವಹನದ ದೃಷ್ಟಿಯಿಂದಲೂ ನೋಡಬರುತ್ತದೆ. ಕುಮಾರವ್ಯಾಸನ ಭಾರತದ ಪ್ರಭಾವದಲ್ಲಿನ್ನು ಕೊಂಡೆ. ಆ ಕಾವ್ಯದ ಒಂದು ಪ್ರಸಂಗವಾದ 'ಕಿರಾತಾರ್ಜುನ' ಪ್ರಸಂಗವನ್ನು ಆಧರಿಸಿ ಶಬರಶಂಕರವಿಲಾಸ ಎಂಬ ಕಾವ್ಯವನ್ನು ರಚಿಸುವ ಷಡಕ್ಷರ ಕವಿಯ ಸಾಮರ್ಥ್ಯವನ್ನೂ, ಅವನಿಗಾದ ಕುಮಾರವ್ಯಾಸ ಭಾರತದ ಸಂವಹನ ರೀತಿಯನ್ನೂ ತಿಳಿಯಲು ಅವುಗಳ ಯಾವಾದರೂ ಎರಡು ಸಮಾನ ಭಾವನಿರೂಪಣೆ ಮಾಡುವ ಪದ್ಯಗಳನ್ನು ಪರೀಕ್ಷಿಸಿ ನೋಡಬಹುದು. ಈ ಸಂವಹನ ಸಮಸ್ಯೆಯನ್ನು ತಿಳಿಯಲು ಮತ್ತೂ ಒಂದು ವಿವೇಚನೆ ಮಾಡಬಹುದು. ಕುಮಾರವ್ಯಾಸ–ಷಡಕ್ಷರ ಕವಿಗಳಿಬ್ಬರ ಇಂಥ ಎರಡು ಪದ್ಯಗಳ ಪ್ರಾಯೋಗಿಕ ವಿಮರ್ಶೆ ಮಾಡುವಾಗ ಶುದ್ಧ ಚಾರಿತ್ರ್ಯದ ಘನವಿದ್ವಾಂಸರೂ ಹೇಗೆ ಆಂಶಿಕವಾಗುತ್ತಾರೆ ಎಂಬುದನ್ನು ನೋಡಿದಾಗ ಈ ಸಂವಹನದ ಸಮಸ್ಯೆ ಮತ್ತೂ ಕ್ಲಿಷ್ಟವಾಗಿ ಕಂಡುಬರುತ್ತದೆ.

ಮಹಾಕಾವ್ಯಗಳಲ್ಲೂ ಯಾವುದು ಯಾರಿಗೆ ಯಾವಾಗ ಏಕೆ ಸಂವಹನಗೊಳ್ಳುತ್ತದೆಯೊ ಹೇಳಬರುವುದಿಲ್ಲ. ಅದಕ್ಕಾಗಿಯೆ ದೊಡ್ಡ ಕೃತಿಗಳು ವೈವಿಧ್ಯಪೂರ್ಣ ವೈಪುಲ್ಯದಿಂದ ಕೂಡಿರುತ್ತವೆ. ಪಾತ್ರಸ್ವಭಾವಗಳ, ಉಕ್ತಿವೈಚಿತ್ರ್ಯದ, ಅಲಂಕಾರ ರೀತಿ ವಕ್ರೋಕ್ತಿ ರಸ ಧ್ವನಿಗಳ ವೈವಿಧ್ಯದಿಂದ ಪುಷ್ಕಲವಾಗಿರುತ್ತವೆ. ಪ್ರತಿಭಾವಂತ ಕವಿಗಳು ತಮಗೆ ಇಷ್ಟವಿಲ್ಲದಿದ್ದರೂ ಯಮಕ ಶ್ಲೇಷೆಗಳನ್ನೂ, ವೇಶ್ಯಾವಾಟ ಚಿತ್ರಣವನ್ನೂ ಸುಲಭ ಸಂವಹನ ಸಿಗಲೆಂದೊ ಏನೊ ತಮ್ಮ ಕಾವ್ಯದಲ್ಲಿ ತಂದಿರಲೂಬಹುದು. ಹೊಯ್ಸಳ ದೇವಾಲಯಗಳ ಒಳಗೂ ಹೊರಗೂ ಎಷ್ಟೊಂದು ಬಗೆಯ ಶಿಲ್ಪ ಶ್ರೇಣಿಯುಂಟು! ಪಕ್ಷಿ ಪ್ರಾಣಿಗಳ, ಪ್ರಣಯ ವಿಲಾಸಿಗಳ, ರಾಮಾಯಣ ಭಾರತ ಭಾಗವತಗಳ, ಶೃಂಗಾರಮಯ ಶಿಲಾಬಾಲಿಕೆಯರ ನಾನಾ ಸ್ತರದ ಶಿಲ್ಪಗಳನ್ನು ನೀಡಿರುವುದುಂಟು. ಇದರ ಜೊತೆಗೆ ಕಂಭಗಳಲ್ಲಿ ಸಂಗೀತ, ಕಡಲೆ ಕಾಳಿನ ಗಾತ್ರದ ಕೆತ್ತನೆಯಲ್ಲಿ ಆಂಜನೇಯನ ಶಿಲ್ಪ, ಮೇಲಿಂದ ತೂಗುಬಿಟ್ಟ ಕಲ್ಲಿನ ಸರಪಳಿ, ನೇತಾಡುವ ಭಾರಿ ಕೆತ್ತನೆಯ ಕಂಭ—ಹೀಗೆಷ್ಟೊ ವೈಚಿತ್ರ್ಯವಿರುವ ಕೆತ್ತನೆಗಳನ್ನು ನೀಡಿರುತ್ತಾರೆ. ಇವೆಲ್ಲವುಗಳ ಕೇಂದ್ರದಲ್ಲಿ ಇಷ್ಟದೈವದ ಪ್ರತಿಮೆ ಇರುತ್ತದೆ. ಇದೆಲ್ಲ ಏಕೆ ? ಎಲ್ಲ ಸ್ತರದ ವೀಕ್ಷಕರನ್ನೂ ಸೆಳೆದುಕೊಳ್ಳುವ ಆಶೆ ; ಯಾವುದಾದರೂ ಕಾರಣದಿಂದಾದರೂ ಜನ ದೇವಪೂಜೆಯತ್ತ ಗಮನಹರಿಸಲಿ ಎಂಬ ಆಸೆ, ಈ ಎಲ್ಲ ಸಂವಹನ ತಂತ್ರವನ್ನೂ ಬಳಸುತ್ತದೆ. ಗಿಡಮರಬಳ್ಳಿಗಳು ತಮ್ಮ ಸಂತಾನವನ್ನು ಕಾಪಾಡಿಕೊಳ್ಳಲು ಹಾಗೂ ಪ್ರಸಾರ ಮಾಡಲು ಎಷ್ಟೆಲ್ಲ ತಂತ್ರ ಬಳಸುವುದಿಲ್ಲ. ರುಚಿಕರ ಹಣ್ಣನ್ನು ಕೊಟ್ಟು ಅದರೊಳಗಿನ ಬೀಜವನ್ನು ಗಟ್ಟಿ ಓಟೆಯಾಗಿರಿಸಿ ಹರಡುತ್ತದೆ ; ಮುಳ್ಳಾಗಿ ಚುಚ್ಚಿಕೊಂಡು ಹರಡುತ್ತದೆ, ಎಕ್ಕ ಬೂರುಗದ ಬೀಜಗಳಂತೆ ಗಾಳಿಯಲ್ಲಿ ಹಾರುತ್ತ ಹೋಗುತ್ತದೆ : ಹಕ್ಕಿಗಳ ಕೊಕ್ಕಿಗಂಟಿಕೊಂಡು ಹೋಗಿ ಹರಡಿಕೊಳ್ಳುತ್ತದೆ—ಹೀಗೆ ಸಾವಿರ ರೀತಿಯಿಂದ ತಮ್ಮನ್ನು ಪ್ರಸರಿಸಿಕೊಂಡು ಸಂತಾನವನ್ನು ನಿತ್ಯಗೊಳಿಸಿ

ಕೊಳ್ಳುತ್ತಾವೆ. ಇದರ ಜೊತೆಗೆ ಕಾವ್ಯಫಲವನ್ನು ಹೇಳುವಾಗ ಅನೇಕ ರೋಚಕವಾದ ಲಾಭಗಳನ್ನೂ ಹೇಳುತ್ತಾರೆ ಕವಿಗಳು. ಕುಮಾರವ್ಯಾಸನಂಥವರು ಯಜ್ಞಯಾಗಫಲಗಳ ಕನ್ಯಾದಿ ಗೋದಾನ ಫಲಗಳ ಲಾಭವನ್ನು ಹೇಳಿದರೆ ಪಂಪ ಕವಿಯಾದರೂ ಆಕರ್ಷಕ ಲಾಭವನ್ನು —'ಇಷ್ಟಾಂಗನಾ ಸುರತಿ'ಯನ್ನು—ತನ್ನ ಭಾರತಕಾವ್ಯದ ಕಡೆಯ ಪದ್ಯದಲ್ಲಿ ಘೋಷಿಸುತ್ತಾನೆ. ಕಾವ್ಯಗಳ ಮಾತೇಕೆ, ದಾನಶಾಸನಗಳ ಕಡೆಯಲ್ಲಿ ಘೋಷಿಸುವ ದಾನ ರಕ್ಷೆಯ ಫಲವನ್ನೂ ಅದಕ್ಕೆ ತಪ್ಪಿದರೆ ಒದಗುವ ಕಷ್ಟವನ್ನೂ ನೋಡಿದರೆ ತಿಳಿಯುತ್ತದೆ ಈ ಸಂವಹನ ತಂತ್ರದ ಬಳಕೆಯ ವಿಧಾನ. ದರ್ಗಾ ನಿರ್ಮಾಣಕ್ಕಾಗಿ ಹೈದರಾಲಿಗೆ ಕೃಷ್ಣ ರಾಜ ಒಡೆಯರು ಮಾರುವ ಗ್ರಾಮ ಶಾಸನದ ಕಡೆಯಲ್ಲಿ ಶಾಸನ ಸಂರಕ್ಷಣೆಯ ಫಲ ವನ್ನು ಉಲ್ಲೇಖಿಸಿರುವುದನ್ನು ನೋಡಬೇಕು. ದರಗಾಕ್ಕಾಗಿ ಮಾರಿರುವ (ದಾನ ಕೊಟ್ಟಿ ರುವ) ಗ್ರಾಮಕ್ಕೆ ಬೇರಾರಾದರೂ ಅಡಿ ಚಾಚಿದರೆ, ಕಾಶಿಯಲ್ಲಿ ಗೋಹತ್ಯೆ ಮಾಡಿದ ಪಾಪ, ಮೆಕ್ಕಾದಲ್ಲಿ ಹಂದಿ ಚರ್ವಣೆ ಮಾಡಿದ ದೋಷ ಬರುತ್ತದೆಂದು ಹೇಳುತ್ತದೆ! ಕಾರಣ, ಶಾಸನಭಂಗ ಮಾಡುವವರು ಮುಸ್ಲಿಮರಾದರೆ ಗೋಹತ್ಯೆಯ ಮಾತು ಅವರಿಗೆ ಕೇಡೇನನ್ನೂ ಸಂವಹಿಸದ್ದರಿಂದ ಮೆಕ್ಕಾ ಹಂದಿಯ ಮಾತನ್ನು ಬಳಸಲಾಗಿದೆ.

ಸಾಮಾನ್ಯ ಕವಿಗಳು ತಮ್ಮ ಕಾವ್ಯಕ್ಕೆ ಸಂವಹನ ಲಭಿಸಲೆಂದು ಪ್ರಸಿದ್ಧ ಕವಿಗಳ ಋಷಿ ಸಂತರ ಹೆಸರಿನಲ್ಲಿ ಅವುಗಳನ್ನು ತೇಲಿಬಿಡುತ್ತಿದ್ದುದುಂಟು. ವ್ಯಾಸರ ಹೆಸರಿನಲ್ಲೆಷ್ಟು ಕೃತಿ ಗಳಿಲ್ಲ ? ನಾರದಾದಿ ಋಷಿಗಳ ಹೆಸರಿನಲ್ಲೆಷ್ಟು ಕೃತಿಗಳಿಲ್ಲ ? ಶಂಕರಾಚಾರ್ಯರ ಮಡಿಲಿ ಗೆಷ್ಟು ಕೃತಿಗಳು ಬಿದ್ದಿಲ್ಲ ? ಕುಮಾರವ್ಯಾಸನಂಥ ಪ್ರಸಿದ್ಧ ಕವಿಯ ಕಾವ್ಯದಲ್ಲಿ, ಬಸವ ಅಲ್ಲಮ ಅಕ್ಕರಂತಹ ಮಹಾಶರಣರ ವಚನಗಳ ನಡುವೆ ಎಷ್ಟು ಸಾಮಾನ್ಯರ ರಚನೆಗಳು ಸೇರಿಲ್ಲ ? ನಗರಗಳಿಗೆ ನೀರುಣಿಸುವ ದೊಡ್ಡ ನದಿ ಅವುಗಳು ಹರಿಯಬಿಡುವ ಮಾಲಿನ್ಯ ವನ್ನು ಹೊತ್ತು ಸಾಗಬೇಕಾಗುತ್ತದೆ. ಪ್ರಸಿದ್ಧರ ಹೆಸರಿನಲ್ಲಿ ಸಾಮಾನ್ಯಸತ್ತ್ವ ತೇಲುತ್ತದೆ. ಇದಕ್ಕೆ ಕಾರಣ ಆ ಪ್ರಸಿದ್ಧರ ಹೆಸರಿಗಿರುವ ಸಂವಹನ ಶಕ್ತಿ. ಎಂಥದೇ ಸುಂದರವಾದ ಕಾವ್ಯಪಂಕ್ತಿಯನ್ನೂ ಸಾಮಾನ್ಯನದೆಂದು ತಿಳಿದು ಕೇಳಿದಾಗ ಅದು ನಮಗೆ ಮುಟ್ಟುವ ರೀತಿಯೆ ಬೇರೆ. ಅದನ್ನೇ ಪ್ರಸಿದ್ಧ ಕವಿಯದೆಂದು ಉದ್ಧರಿಸಿದಾಗ ಅದಕ್ಕೆ ಲಭಿಸುವ ಸಂವಹನ ಸಾಮರ್ಥ್ಯವೆ ಬೇರೆ. ನಮ್ಮ ಮನಸ್ಸು ಮೊದಲೆ ಒಂದು ಅನುಕೂಲಕರ ಶ್ರುತಿಗೆ ಸೇರಿ ಏನನ್ನೂ ಗೌರವದಿಂದ ಸ್ವಾಗತಿಸುವ ಮೋಡಿಗೆ ಒಳಗಾಗಿರುತ್ತದೆ. ಇದೇ ಕಾರಣ ದಿಂದ ಸಾಮಾನ್ಯ ಕೃತಿಗಳೆಷ್ಟೋ ಋಷಿಗರ್ಭ ಸೇರಿದವು. ಇದು ಹೋಗಲಿ ; ದೊಡ್ಡ ಕವಿ ಗಳಾದರೂ ನಾನಾ ರುಚಿದಾಯಿಯಾದ ಅಂಶಗಳನ್ನು ತಮ್ಮ ಕಾವ್ಯಗಳಲ್ಲಿಟ್ಟಿರುವುದರ ಜೊತೆಗೆ ಆ ತಮ್ಮ ಕಾವ್ಯವಸ್ತುವಿನ ಆಯ್ಕೆಯಲ್ಲೆ ಎಚ್ಚರ ತೋರುತ್ತಾರೆ; ಸುಲಭ ಸಂವಹನ ವಿರುವ ವಸ್ತುವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ತಮ್ಮ ಮನೋಧರ್ಮ—ಸಾಮರ್ಥ್ಯಕ್ಕೆ ಒಗ್ಗು ವಂಥ ವಸ್ತುವನ್ನು ಆಯ್ಕೆ ಮಾಡುವಾಗಲೂ, ಅದು ತಮ್ಮ ಯುಗದ ರುಚಿಗೆ ಪ್ರಿಯವಾದುದೂ ಆಗಿರುವಂತೆ ನೋಡಿಕೊಳ್ಳುತ್ತಾರೆ. ರಾಮಾಯಣ, ಮಹಾಭಾರತ, ಭಾಗವತ, ಶಿವಕಥೆ, ಶರಣಚರಿತೆಗಳು ಬಹು ಜನಪ್ರಿಯ ವಸ್ತುಗಳಾಗಿರುತ್ತವೆ. ಸರ್ವ

ಕೊಳ್ಳುತ್ತಾವೆ. ಇವರ ಜೊತೆಗೆ ಕಾವ್ಯಫಲವನ್ನು ಹೇಳುವಾಗ ಅನೇಕ ರೋಚಕವಾದ ಲಾಭಗಳನ್ನೂ ಹೇಳುತ್ತಾರೆ ಕವಿಗಳು. ಕುಮಾರವ್ಯಾಸಸಂಥವರು ಯಜ್ಞಯಾಗಫಲಗಳ ಕನ್ಯಾದಿ ಗೋದಾನ ಫಲಗಳ ಲಾಭವನ್ನು ಹೇಳಿದರೆ ಪಂಪ ಕವಿಯಾದರೂ ಆಕರ್ಷಕ ಲಾಭವನ್ನು —'ಇಷ್ಟಾಂಗನಾ ಸುರತಿ'ಯನ್ನು—ತನ್ನ ಭಾರತಕಾವ್ಯದ. ಕಡೆಯ ಪದ್ಯದಲ್ಲಿ ಘೋಷಿಸುತ್ತಾನೆ. ಕಾವ್ಯಗಳ ಮಾತೇಕೆ, ದಾನಶಾಸನಗಳ ಕಡೆಯಲ್ಲಿ ಘೋಷಿಸುವ ದಾನ ರಕ್ಷೆಯ ಫಲವನ್ನೂ ಅದಕ್ಕೆ ತಪ್ಪಿದರೆ ಒದಗುವ ಕಷ್ಟವನ್ನೂ ನೋಡಿದರೆ ತಿಳಿಯುತ್ತದೆ ಈ ಸಂವಹನ ತಂತ್ರದ ಬಳಕೆಯ ವಿಧಾನ. ದರ್ಗಾ ನಿರ್ಮಾಣಕ್ಕಾಗಿ ಹೈದರಾಲಿಗೆ ಕೃಷ್ಣ ರಾಜ ಒಡೆಯರು ಮಾರುವ ಗ್ರಾಮ ಶಾಸನದ ಕಡೆಯಲ್ಲಿ ಶಾಸನ ಸಂರಕ್ಷಣೆಯ ಫಲ ವನ್ನು ಉಲ್ಲೇಖಿಸಿರುವುದನ್ನು ನೋಡಬೇಕು. ದರಗಾಕ್ಕಾಗಿ ಮಾರಿರುವ (ದಾನ ಕೊಟ್ಟಿ ರುವ) ಗ್ರಾಮಕ್ಕೆ ಬೇರಾರಾದರೂ ಅಡಿ ಚಾಚಿದರೆ, ಕಾಶಿಯಲ್ಲಿ ಗೋಹತ್ಯೆ ಮಾಡಿದ ಪಾಪ, ಮಕ್ಕಾದಲ್ಲಿ ಹಂದಿ ಚರ್ವಣೆ ಮಾಡಿದ ದೋಷ ಬರುತ್ತದೆಂದು ಹೇಳುತ್ತದೆ! ಕಾರಣ, ಶಾಸನಭಂಗ ಮಾಡುವವರು ಮುಸ್ಲಿಮರಾದರೆ ಗೋಹತ್ಯೆಯ ಮಾತು ಅವರಿಗೆ ಕೇಡೇನನ್ನೂ ಸಂವಹಿಸದ್ದರಿಂದ ಮಕ್ಕಾ ಹಂದಿಯ ಮಾತನ್ನು ಬಳಸಲಾಗಿದೆ.

ಸಾಮಾನ್ಯ ಕವಿಗಳು ತಮ್ಮ ಕಾವ್ಯಕ್ಕೆ ಸಂವಹನ ಲಭಿಸಲೆಂದು ಪ್ರಸಿದ್ಧ ಕವಿಗಳ ಋಷಿ ಸಂತರ ಹೆಸರಿನಲ್ಲಿ ಅವುಗಳನ್ನು ತೇಲಿಬಿಡುತ್ತಿದ್ದುದುಂಟು. ವ್ಯಾಸರ ಹೆಸರಿನಲ್ಲೆಷ್ಟು ಕೃತಿ ಗಳಿಲ್ಲ ? ನಾರದಾದಿ ಋಷಿಗಳ ಹೆಸರಿನಲ್ಲೆಷ್ಟು ಕೃತಿಗಳಿಲ್ಲ ? ಶಂಕರಾಚಾರ್ಯರ ಮಡಿಲಿ ಗೆಷ್ಟು ಕೃತಿಗಳು ಬಿದ್ದಿಲ್ಲ ? ಕುಮಾರವ್ಯಾಸಸಂಥ ಪ್ರಸಿದ್ಧ ಕವಿಯ ಕಾವ್ಯದಲ್ಲಿ, ಬಸವ ಅಲ್ಲಮ ಅಕ್ಕರಂತಹ ಮಹಾಶರಣರ ವಚನಗಳ ನಡುವೆ ಎಷ್ಟು ಸಾಮಾನ್ಯರ ರಚನೆಗಳು ಸೇರಿಲ್ಲ ? ನಗರಗಳಿಗೆ ನೀರುಣಿಸುವ ದೊಡ್ಡನದಿ ಅವುಗಳು ಹರಿಯಬಿಡುವ ಮಾಲಿನ್ಯ ವನ್ನು ಹೊತ್ತುಸಾಗಬೇಕಾಗುತ್ತದೆ. ಪ್ರಸಿದ್ಧರ ಹೆಸರಿನಲ್ಲಿ ಸಾಮಾನ್ಯಸತ್ತ್ವ ತೇಲುತ್ತದೆ. ಇದಕ್ಕೆ ಕಾರಣ ಆ ಪ್ರಸಿದ್ಧರ ಹೆಸರಿಗಿರುವ ಸಂವಹನ ಶಕ್ತಿ. ಎಂಥದೇ ಸುಂದರವಾದ ಕಾವ್ಯಪಂಕ್ತಿಯನ್ನೂ ಸಾಮಾನ್ಯನದೆಂದು ತಿಳಿದು ಕೇಳಿದಾಗ ಅದು ನಮಗೆ ಮುಟ್ಟುವ ರೀತಿಯೆ ಬೇರೆ. ಅದನ್ನೇ ಪ್ರಸಿದ್ಧ ಕವಿಯದೆಂದು ಉದ್ಧರಿಸಿದಾಗ ಅದಕ್ಕೆ ಲಭಿಸುವ ಸಂವಹನ ಸಾಮರ್ಥ್ಯವೆ ಬೇರೆ. ನಮ್ಮ ಮನಸ್ಸು ಮೊದಲೆ ಒಂದು ಅನುಕೂಲಕರ ಶ್ರುತಿಗೆ ಸೇರಿ ಏನನ್ನೂ ಗೌರವದಿಂದ ಸ್ವಾಗತಿಸುವ ಮೋಡಿಗೆ ಒಳಗಾಗಿರುತ್ತದೆ. ಇದೇ ಕಾರಣ ದಿಂದ ಸಾಮಾನ್ಯ ಕೃತಿಗಳೆಷ್ಟೋ ಋಷಿಗರ್ಭ ಸೇರಿದವು. ಇದು ಹೋಗಲಿ ; ದೊಡ್ಡ ಕವಿ ಗಳಾದರೂ ನಾನಾ ರುಚಿದಾಯಿಯಾದ ಅಂಶಗಳನ್ನು ತಮ್ಮ ಕಾವ್ಯಗಳಲ್ಲಿಟ್ಟಿರುವುದರ ಜೊತೆಗೆ ಆ ತಮ್ಮ ಕಾವ್ಯವಸ್ತುವಿನ ಆಯ್ಕೆಯಲ್ಲೆ ಎಚ್ಚರ ತೋರುತ್ತಾರೆ; ಸುಲಭ ಸಂವಹನ ವಿರುವ ವಸ್ತುವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ತಮ್ಮ ಮನೋಧರ್ಮ—ಸಾಮರ್ಥ್ಯಕ್ಕೆ ಒಗ್ಗುವಂಥ ವಸ್ತುವನ್ನು ಆಯ್ಕೆ ಮಾಡುವಾಗಲೂ, ಅದು ತಮ್ಮ ಯುಗದ ರುಚಿಗೆ ಪ್ರಿಯವಾದುದೂ ಆಗಿರುವಂತೆ ನೋಡಿಕೊಳ್ಳುತ್ತಾರೆ. ರಾಮಾಯಣ, ಮಹಾಭಾರತ, ಭಾಗವತ, ಶಿವಕಥೆ, ಶರಣಚರಿತೆಗಳು ಬಹು ಜನಪ್ರಿಯ ವಸ್ತುಗಳಾಗಿರುತ್ತವೆ. ಸರ್ವ

ಜನಪ್ರಿಯ ಎಂದು ಹೇಳಬರದಾದರೂ ಈ ಕೃತಿಗಳಲ್ಲಿ ನಿರೋಧಕಾಂಶ ಕಡಿಮೆ. ವಿದ್ಯುದ್ ಪ್ರವಹಕ್ಕೆ ವಿದ್ಯುನ್ನಿರೋಧಕವಲ್ಲದ ವಾಹಕವನ್ನು ಆಯ್ಕೆ ಮಾಡುವಂತೆ ಈ ವಸ್ತು ವಿನ ಆಯ್ಕೆಯೂ ಇರುತ್ತದೆ. ಮಿಗಿಲಾಗಿ ತನ್ನ ಸ್ವಭಾವಕ್ಕೆ ಒಗ್ಗದ ವಸ್ತುವಿನ ಆಯ್ಕೆ ಯಾದರುತೂ ಕವಿಪ್ರತಿಭೆ ಸಂವಹನ ನಿರೋಧಕದೊಡನೆ ಹೋರಾಡಬೇಕಾಗುತ್ತದೆ. ಕುಮಾರವ್ಯಾಸ ಭಾರತ ಕಥೆಯ ಬದಲು ರಾಮಾಯಣ ವಸ್ತುವನ್ನು ಆರಿಸಿಕೊಂಡಿದ್ದ ರಂತೂ ಈ ಕ್ಲೇಶ ಅನುಭವಿಸಬೇಕಾಗಿತ್ತು. ಕುಮಾರವ್ಯಾಸನ ಸ್ವಭಾವಕ್ಕೆ ಭಾರತ ಒಗ್ಗಿ ದಷ್ಟು ಖಂಡಿತಾ ರಾಮಾಯಣವಸ್ತು ಒಗ್ಗುವುದಿಲ್ಲ. ಸೀತಾರಾಮಭರತರ ಚಿತ್ರಣಕ್ಕಿಂತ ಅವನಿಗೆ ಕೃಷ್ಣಾರ್ಜುನ ಭೀಮ ದ್ರೌಪದಿಯರ ಪಾತ್ರ ಚಿತ್ರಣ ಸುಲಭ. "ತಿಣುಕಿದನು ಫಣಿರಾಯ ರಾಮಾಯಣದ ಕಥೆಗಳ (ಕವಿಗಳ) ಭಾರದಲಿ" ಎಂಬ ಅವನ ಮಾತಿಗೆ ಆಧಾರವೇನು? ಅವನಿಗಿಂತ ಹಿಂದೆ ಎಷ್ಟು ರಾಮಾಯಣಗಳು ಕನ್ನಡದಲ್ಲಿದ್ದವು? ಭಾರತ ಕಾವ್ಯಗಳೆಷ್ಟಿದ್ದವು? ನಾಗಚಂದ್ರನ ಜೈನ ರಾಮಾಯಣ ಒಂದನ್ನು ಬಿಟ್ಟರೆ ರಾಮಾಯಣವಿರಲಿಲ್ಲ. ಆದರೆ ಪಂಪಭಾರತ, ರನ್ನನ ಗದಾಯುದ್ಧಗಳು ಭಾರತ ಕಥೆ ಯಾಗಿ ಸವಾಲಾಗಿ ನಿಂತಿದ್ದವು. ಕುಮಾರವ್ಯಾಸ ಭಾರತವನ್ನು ಆಯ್ಕೆ ಮಾಡಿಕೊಂಡು ತನ್ನ ಮನೋಧರ್ಮ ಸ್ವಭಾವಗಳ ಸಾಮರ್ಥ್ಯದ ಸಂವಹನಕ್ಕೆ ಅನುಕೂಲವಾದ ವಸ್ತು ವನ್ನು ಆಯ್ಕೆಮಾಡಿಕೊಂಡ. ಹಾಗೆಯೇ ಪಂಪನಾದರೂ ತನ್ನ ಮಹಾಕಾವ್ಯಪ್ರತಿಭೆಯ ಸಂವಹನಕ್ಕೆ ಅನುಕೂಲವಾದ ಆದಿ ಪುರಾಣ, ಮಹಾಭಾರತಗಳನ್ನು ಆಯ್ಕೆ ಮಾಡಿ ಕೊಂಡ. ಆದಿಪುರಾಣದ ಕಾವ್ಯಸಾಮರ್ಥ್ಯ ಅಜಿತಪುರಾಣ ಯಶೋಧರ ಚರಿತಗಳಿಗಿಂತ ವಿಪುಲ. ಹಾಗೂ, ಮಹಾಭಾರತದ ಬದಲು ತನ್ನ ಸಮೀಪಕಾಲದ ಸಂಸ್ಕೃತ ಕವಿಗಳಂತೆ ಖಂಡಕಾವ್ಯಗಳನ್ನೆ ಮಹಾಕಾವ್ಯಗಾತ್ರಕ್ಕೆ ಬೆಳೆಸಹೋಗಿದ್ದರೆ ಏನಾಗುತ್ತಿತ್ತು? ಅಥವಾ ಪ್ರಸಿದ್ಧ ಸಂಸ್ಕೃತ ನಾಟಕಗಳ ವಸ್ತುವಾದ ಹನ್ನೊಂದನೆಯ ಹೆಂಡತಿಯಾಗಿ ಚೆಲುವೆ ಹೆಣ್ಣನ್ನು ಮದುವೆಯಾಗುವ ರಾಜನ ಪ್ರಣಯವನ್ನು ವೈಭವೀಕರಿಸಿ ಬರೆದಿದ್ದರೆ? ಅವನ ದೈತ್ಯಪ್ರತಿಭೆ ಏನಾಗುತ್ತಿತ್ತು? ಕನ್ನಡ ಕಾವ್ಯದ ಪ್ರಾರಂಭ ಆಗ ಎಂಥ ಗುಡ್ಡದ ಗಂಗೋತ್ರಿಯಾಗುತ್ತಿತ್ತು! ಮಿಗಿಲಾಗಿ ಅವನ ವಿಪುಲಸತ್ತ್ವದ ಸಂವಹನವಾಗುತ್ತಿತ್ತೆ? ಗೊಮ್ಮಟಶಿಲ್ಪ ಕಡೆಯ ಬೇಕಾದ ಶಿಲ್ಪಿ ಸಣ್ಣ ಬಂಡೆಯನ್ನೊ, ಮೆದುಗಲ್ಲನ್ನೊ ಕಡೆಯಲು ಕೈಗೆತ್ತಿಕೊಂಡಂತಾಗುತ್ತಿತ್ತು.

ಸಂವಹನದ ಸಮಸ್ಯೆ ಕಾವ್ಯಾದಿಕಲೆಗಳಿಗೆ ಮಾತ್ರವೇ ಅಲ್ಲ, ತತ್ತ್ವ ಧರ್ಮಾದಿಗಳಿಗೂ ಸೇರಿದೆ. ಮಿಗಿಲಾಗಿ ಜೀವನವ್ಯಾಪಾರವನ್ನೆಲ್ಲ ವ್ಯಾಪಿಸಿಕೊಂಡಿದೆ. ಮಾಧ್ಯಮ ಕನ್ನಡ ವಾದರೆ ಶಿಕ್ಷಣದಲ್ಲಿ ಸಂವಹನ ಸುಲಭವಾಗುತ್ತದೆ ಎನ್ನುವ ಮಾತು ಜೀವನದ ಇತರ ವ್ಯಾಪಾರದಲ್ಲಿಯೂ ಅಷ್ಟೆ ಸರಿಯೆಂದು ಹೇಳಬರುವುದಿಲ್ಲ. ಮಾತಾಡದೆ ಸಂವಹನ ಗೊಳ್ಳುವ, ಹರುಕು ಹರುಕು ಅನ್ಯಭಾಷೆಯಲ್ಲಿ ಸಂವಹನಗೊಳ್ಳುವ ಭಾವಗಳೂ ಶ್ರುತಿ ತಪ್ಪಿದ ಘಳಿಗೆಯಲ್ಲಿ ನಮ್ಮ ಭಾಷೆಯಲ್ಲೆ ಎಷ್ಟೆಲ್ಲ ಶೋಷಿಸಿಕೊಂಡರೂ ಅಪಾರ್ಥವಾಗು ವುದು ತಪ್ಪದು; ಉಳಿಕಿದ ಸಂವಹನದ ನಡೆ ಕುಂಟುತ್ತದೆ. ಮೂಕರೊಡನೆ ಸಂಸಾರ

ಗಳು ಶಸ್ತ್ರಿತಿ ಕೆಡದೆ ಇರಬಹುದು. ಅದಕ್ಕೆ ವಿರುದ್ಧವಾಗಿ ಒಂದೇ ಭಾಷೆಯನ್ನು ಬಲ್ಲ ಜನ ತಪ್ಪು ಅರ್ಥಕ್ಕೀಡಾಗುವುದೂ ಉಂಟು. ಸೀತಾದೇವಿಯನ್ನು ರಾವಣ ಕದ್ದುಕೊಂಡು ಹೋದ ಮೇಲೆ ದಂಪತಿಗಳ ನಡುವೆ ಸಾಗರದ ಅಭ್ಯಂತರವಿರುತ್ತದೆ. ಅದಕ್ಕೆ ಸೇತು ಕಟ್ಟುವುದು ಕಷ್ಟವಾಗಲಿಲ್ಲ. ಆದರೆ ಜನಾಪವಾದವನ್ನು ಗೂಢಚಾರರಿಂದ ಕೇಳಿದಾಕ್ಷಣ ರಾಮಸೀತೆಯರ ನಡುವೆ ಅರಮನೆಯೊಳಗೇ ಅನುಲ್ಲಂಘ್ಯವಾದ ಅಪಾರ ಸಾಗರ ಉದ್ಭವಿಸುತ್ತದೆ. ಎಲ್ಲ ಸಂವಹನವೂ ಏಕಪಕ್ಷೀಯವಾಗಿ ಮುರಿದು ಹೋಯಿತು. ದಡಗಳನ್ನು ಬಂಧಿಸುವ ಸೇತುವೆಗೆ ಅಪಾಯ ತಗುಲದಿದ್ದರೂ ದಡವೇ ಕುಸಿದು ದೂರ ಸರಿದಂತಾಯಿತು: ಬಂದರಿನ ಕಟ್ಟೆ ನೀರೊಳಗೆ ಕುಸಿದಂತಾಯಿತು. ಇದು ಜೀವನದಲ್ಲಿ ಅಸಹಜವಲ್ಲ. ಕಡೆಯಲ್ಲಿ ಕಾರ್ಡಿನಲಿಯ ಹೇಳಿದ ದಿವ್ಯವಾದ ಮಾತು, "We are not the first who, with best meaning have incurred the worst" ಎಂಬ ಮಾತು, ಜೀವನದಿಂದ ಹರಳುಗಟ್ಟಿಕೊಂಡಿರುವಂಥ ಮುತ್ತು. ಈ ಸಂವಹನ ಸಮಸ್ಯೆ ಇತ್ತೀಚಿನದಲ್ಲ. ಸಂವಹನವಿಲ್ಲದೆ ತೊಳಲಿದವರು, ಅಪಾರ್ಥವಾದವರು, ಅಲಕ್ಷ್ಯವಾದ ಕಾವ್ಯಗಳು ಯಾವಾಗಲೂ ಇದ್ದೇ ಇರುತ್ತವೆ. ಪ್ರೀತಿಯಿದ್ದ ಕಡೆಗೆ ಸಂವಹನ ಸಮಸ್ಯೆಯಲ್ಲ; ಅದು ತಪ್ಪಿದ ಕಡೆಯಲ್ಲಿ ಧ್ವನಿ ರಸಪೂರ್ಣವಾದ ಕಾವ್ಯವಾದರೂ, ಸುರಸುಂದರಿಯಾದರೂ ಒಥೆಲೋ ಪ್ರೀತಿ ಕಳೆದುಕೊಂಡ ಡೆಸ್ಡಿಮೋನಾ ಆಗುವುದು ಸಾಧ್ಯ. ಆದ್ದರಿಂದ ಪ್ರೀತಿ ಯಾವುದರಿಂದ ಉಂಟಾಗುತ್ತದೆ, ಲಭ್ಯವಾಗುತ್ತದೆ. ಉಳಿದುಕೊಳ್ಳುತ್ತದೆ? ಕಾವ್ಯ ಯಾರಿಗೆ ಏಕೆ ಹಿಡಿಸುತ್ತದೆ ? ಅಲಂಕಾರ, ರೀತಿ, ಗುಣ, ವಕ್ರೋಕ್ತಿ, ಧ್ವನಿ, ರಸಗಳಲ್ಲಿ ಯಾವುದಿದ್ದರೆ ಸಾರ್ಥಕವಾದ ಸಂವಹನ ಪಡೆದುಕೊಳ್ಳುತ್ತದೆ ? ತುಂಬಾ ಬುದ್ಧಿಯವರಿರುವ, ಸಾಕ್ಷೀಪ್ರಜ್ಞೆಯು ವಿಮರ್ಶಕರಿರುವ ಈ ಕಾಲದಲ್ಲೂ ಸಂವಹನ ಸಫಲವಾದ ಕಾವ್ಯದ ಪ್ರಧಾನ ಸತ್ತ್ವ ಯಾವುದೆಂದು ಹೇಳುವಲ್ಲಿ ನಿರ್ದುಷ್ಟರಾಗಿದ್ದೇವೆಂದು ಹೇಳಬರುವುದಿಲ್ಲ. ಅಭಿವ್ಯಕ್ತಿ ಕವಿಗೆ ಸೇರಿದುದು. ಸಂವಹನ ಕವಿಸಹೃದಯರಿಬ್ಬರಿಗೂ ಸಂಬಂಧಿಸಿದುದು. ಸೇತು ರಚನೆಯಾಗಲು ಎರಡು ದಡಗಳೂ ಸೇತುಬಂಧನಕ್ಕೆ ಸಿದ್ಧವಾಗಬೇಕು. ಬದ್ಧವಾಗಬೇಕು. ನೆಯ್ಗೆಯ ಕರ್ಮದಂತೆ ಇದು. ಹಾಸಿನೆಳೆಗಳ ಒಳಗೆ ಹೊಕ್ಕಿನೆಳೆ ಸೇರಿಕೊಳ್ಳಬೇಕು.ಅಣಿ ಏಳದೆ, ಹಾಸಿನೆಳೆ ದಾರಿಕೊಡದೆ ಹೊಕ್ಕಿನೆಳೆಯಿರುವ ಲಾಳಿಸಾಗಲಾರದು. ಈ ನೆಯ್ಗೆಯ ಕರ್ಮದಲ್ಲಿ ಎಳೆಗಳು ಕೀಳದಂತೆ 'ಪಿಲ್ಲಿ' ಬೀಳದಂತೆ ಎಚ್ಚರವಿರಬೇಕು. ಹಾಸು ಹೊಕ್ಕುಗಳ ಎಳೆಗಳು ಬೇರೆ ಬೇರೆಯ ಗಾತ್ರದ, ಜಾತಿಯ ಬಣ್ಣದವಾಗಿರಬಾರದೆಂದೇನೂ ಅಲ್ಲ. ಆದರೆ ಬೇರೆ ಗಾತ್ರದ, ಶಕ್ತಿಯ, ತಂತುವಿನ ಎಳೆಗಳು ನೆಯ್ಗೆಯಲ್ಲಿ ಹೊಂದಿದರೂ ಬಟ್ಟೆ ಬಳಸತೊಡಗಿದಾಗ ತಾವು ಬೇರೆ ಬೇರೆ ಎಂಬುದನ್ನು ತೋರಿಸಿಕೊಳ್ಳುತ್ತವೆ. ಯಾವುದೇ ಶ್ರೇಷ್ಠ ಕಾವ್ಯದ ಸಂವಹನವೂ ಸಾರ್ವತ್ರಿಕ ಸಾಫಲ್ಯ ಪಡೆದುಕೊಂಡಿರುತ್ತದೆಂದು ಹೇಳಬರದು. ಅಭಿವ್ಯಕ್ತಿ ಕಾವ್ಯಕರ್ಮದೊಡನೆ ಮುಗಿಯುತ್ತದೆ. ಕವಿ ತನ್ನ ಕಾವ್ಯ ಬಿಟ್ಟು ಹೋಗುತ್ತಾನೆ. ಕಾವ್ಯವಿರುವತನಕ ಅದರ ಸಂವಹನ ಸಮಸ್ಯೆ ಇದ್ದೇ ಇರುತ್ತದೆ. ಹೊಸ ಹೊಸ ರೀತಿಯಲ್ಲಿ ಅದು ತನ್ನ ಸಾಫಲ್ಯ ಕಂಡುಕೊಳ್ಳುತ್ತಿರಲೆ ಬೇಕಾಗುತ್ತದೆ.

F2 KHN



* * *

ಸಂವಹನ ಕ್ಲೇಶಕ್ಕೆ ಕಾರಣವೇನು ತಿಳಿಯಲಾಗದೆ ತೊಳಲುವ ಮನಸ್ಸು ಅಂತರ್ಮುಖಿಯಾಗಬಯಸುವುದುಂಟು. ಆ ಕುರಿತ ಕವನವೊಂದನ್ನು ಇಲ್ಲಿ ಕೊಟ್ಟಿದೆ.

ನನ್ನ ನುಡಿ ನಿಮಗೆಲ್ಲ ವೇದ್ಯವಾಗದದೇಕೆ ?
ನಿಮ್ಮೊಲವು ನನಗೆ ಸಾಧ್ಯವಾಗದದೇಕೆ ?
ನನ್ನ ಸಂಭಾಷಣಗಳೆಲ್ಲ ಬರಿಯ ಭಾಷಣಗಳೇ ? ಇಲ್ಲ, ಸ್ವಗತಗಳೆ ?
ನನ್ನ ನಾಭೀಮೂಲದಿಂದೆದ್ದ ನುಡಿ ಕೂಡ ನಿಮ್ಮ ತಟ್ಟವೆ ?
ನಿಮ್ಮ ಮನದಾಳಗಳ ಬೇರುಗಳ ತೋಯಿಸುವ ಪಾತನೀರಿನ ಮಾತ,
ಕೊಂಬೆರೆಂಬೆಗಳ ಎಲೆಗಿಣ್ಣುಗಳ ಅಭ್ಯಂಜಿಸುವ ನವರಾತ್ರಿ
ಜಡಿಮಳೆಯ ಮುಗಿಲೆಣ್ಣೆಮಜ್ಜನದ ಮಾತ ನಾನೆಂದು ನುಡಿವೆ ?
ನಿಮ್ಮ ಕೊಂಬೆಗಳ ಉಡಕಚ್ಚಿರುವ ಚಿತ್ರಮಯ ಬಂದಳಿಕೆಗಳ
ಹಿಡಿದಲುಗಿಸುವ, ಕಿತ್ತಾಚೆಗೊಗೆವ
ಜಂಝಾವಾತ ಮಾತ ನಾನೆಂದು ನುಡಿವೆ ?
ನಿಮ್ಮ ಬಂಡೆಗಲ್ಲಡಿಯ ತಿಳಿಜಲವ ಪುಟಿದುಕ್ಕಿಸುವ
ಬೈರಿಗೆಯನುಡಿಯ ನಾನೆಂತು ನುಡಿವೆ ?
ನಿಮ್ಮ ಮೆರವಣಿಗೆ ಮನದೋಣಿಗಳ ಕತ್ತಲೋವರಿಗಳಾಚೆಗಿನ
ತೆರೆವಣಿಗೆಗಳ ಸರಿಸಬಲ್ಲುದೆ ನನ್ನ ಮಾತು ?
ನಿಮ್ಮೊಳಗ ಸಿಕ್ಕುಗಳ ಮನದ ಬಿಕ್ಕುಗಳ ಎದೆಯ ಉಕ್ಕುಗಳ
ನನ್ನ ನುಡಿ ಹೆಕ್ಕಬಹುದೆ ? ಒಕ್ಕಬಹುದೆ ? ತಕ್ಕೈಸಬಹುದೆ ?
ನಿಮ್ಮ ಮನದೊಳ ಹಾಸಿನಲಿ ಹೊಕ್ಕಾಗಿ ನೆಯ್ಗೆಗೊಂಡು
ಸೀರೆ ಪತ್ತಲ ಪಂಚೆ ಬಚಬಾನಿಯಾಗನೇಕೆ ?
ಆಣಿಯೇಳದೆಯೆ ಲಾಳಿ ಬೀಸಿರುವೆನೇನು ?
ಲಾಳಿ ಹಾರುತಿದೆ ಹಾಸಿನೆಳೆಗಳ ಮೇಲೆ ;
ಸಾಕು ಗೋಜಲು ನೆಯ್ಗೆ : ನನ್ನ ನುಡಿ ಮೊದಲು ತನ್ನ ತಳಸೋಸಿ
ಬೆಳಕ ಹಾಸಿ, ಒಳಮುದವ ಹಸೆಗೇರಿಸದೆ
ಮೊದಲು ತನ್ನೊಳಗ ಕೊರೆದು ಒಳಜಲವ
ಮೇಲುಕ್ಕಿಸದೆ ಹೊರಗೆ ಕೊರವಾಸೆ ಏಕೆ ?
ಮಣ್ಣೊಳಾತ್ಮಾಹುತಿಸದೆಯೆ ಬೀಜ ಮರವ ಹಡೆಯಬಹುದೆ ?
ನನ್ನ ನಾ ತೋಡಿಕೊಳುವೆ, ಹಾಡಿಕೊಳುವೆ :
ಹಾಡುತ್ತ ತಳಮನದ ಒಳಜಲದ ಜನದ ಅಧಿಮನದ
ತಿಳಿಸರಸಿಯಲಿ ನಾ ಕೂಡಿಕೊಳುವೆ ;
ಶಿವಜಟೆಯ ಕ್ಷೀರ ಸಾಗರದಲ್ಲಿ ಮೂಡಿಕೊಳುವೆ !

—**'ನನ್ನ ನುಡಿ' : ''ಒಂದೆ ಸೂರಡಿಯಲ್ಲಿ'' ಪುಟ : ೧೯೯**

## ಟಿಪ್ಪಣಿಗಳು

1. ಸಪ್ನವಾಸವದತ್ತ ನಾಟಕದ ಐದನೆಯ ಅಂಕದಲ್ಲಿ ಉದಯನ ಹೇಳುವ ಮಾತು ಹೀಗಿದೆ :
ಸ್ಮರಾಮ್ಯವಂತ್ಯಾಧಿಪತೇಃ ಸುತಯಾಃ
ಪ್ರಸ್ಥಾನ ಕಾಲೇ ಸ್ವಜನಂ ಸ್ಮರಂತ್ಯಾಃ ।

*   *   *

ಸಂವಹನ ಕ್ಲೇಶಕ್ಕೆ ಕಾರಣವೇನು ತಿಳಿಯಲಾಗದೆ ತೊಳಲುವ ಮನಸ್ಸು, ಅಂತರ್ಮುಖಿಯಾಗುಯಸುವುದುಂಟು. ಆ ಕುರಿತ ಕವನವೊಂದನ್ನು ಇಲ್ಲಿ ಕೊಟ್ಟಿದೆ.

ನನ್ನ ನುಡಿ ನಿಮಗೆಲ್ಲ ವೇದ್ಯವಾಗದದೇಕೆ ?
ನಿಮ್ಮೊಲವು ನನಗೆ ಸಾಧ್ಯವಾಗದದೇಕೆ ?
ನನ್ನ ಸಂಭಾಷಣಗಳೆಲ್ಲ ಬರಿಯ ಭಾಷಣಗಳೇ ? ಇಲ್ಲ, ಸ್ವಗತಗಳೆ ?
ನನ್ನ ನಾಭೀಮೂಲದಿಂದೆದ್ದ ನುಡಿ ಕೂಡ ನಿಮ್ಮ ತಟ್ಟವೆ ?
ನಿಮ್ಮ ಮನದಾಳಗಳ ಬೇರುಗಳ ತೋಯಿಸುವ ಪಾತಾಳನೀರಿನ ಮಾತ,
ಕೊಂಬೆರೆಂಬೆಗಳ ಎಲೆಗಣ್ಣುಗಳ ಅಭ್ಯಂಜಿಸುವ ನವರಾತ್ರಿ
ಜಡಿಮಳೆಯ ಮುಗಿಲೆಣ್ಣೆಮಜ್ಜನದ ಮಾತ ನಾನೆಂದು ನುಡಿವೆ ?
ನಿಮ್ಮ ಕೊಂಬೆಗಳ ಉಡಕಚ್ಚಿರುವ ಚಿತ್ರಮಯ ಬಂದಳಿಕೆಗಳ
ಹಿಡಿದಲುಗಿಸುವ, ಕಿತ್ತಾಚೆಗೊಗೆವ
ಜಂಝಾವಾತ ಮಾತ ನಾನೆಂದು ನುಡಿವೆ ?
ನಿಮ್ಮ ಬಂಡೆಗಲ್ಲಡಿಯ ತಿಳಿಜಲವ ಪುಟಿದುಕ್ಕಿಸುವ
ಬೈರಿಗೆಯನುಡಿಯ ನಾನೆಂತು ನುಡಿವೆ ?
ನಿಮ್ಮ ಮೆರವಣಿಗೆ ಮನದೋಣಿಗಳ ಕತ್ತಲೋವರಿಗಳಾಚೆಗಿನ
ತೆರವಣಿಗೆಗಳ ಸರಿಸಬಲ್ಲುದೆ ನನ್ನ ಮಾತು ?
ನಿಮ್ಮೊಳಗ ಸಿಕ್ಕುಗಳ ಮನದ ಬಿಕ್ಕುಗಳ ಎದೆಯ ಉಕ್ಕುಗಳ
ನನ್ನ ನುಡಿ ಹೆಕ್ಕಬಹುದೆ ? ಒಕ್ಕಬಹುದೆ ? ತಕ್ಕೈಸಬಹುದೆ ?
ನಿಮ್ಮ ಮನದೊಳ ಹಾಸಿನಲಿ ಹೊಕ್ಕಾಗಿ ನೆಯ್ಗೆಗೊಂಡು
ಸೀರೆ ಪತ್ತಲ ಪಂಚೆ ಬಚ್ಚಟಾನಿಯಾಗನೇಕೆ ?
ಆಣೆಯೇಳದೆಯೆ ಲಾಳಿ ಬೀಸಿರುವೆನೇನು ?
ಲಾಳಿ ಹಾರುತಿದೆ ಹಾಸಿನೆಳೆಗಳ ಮೇಲೆ :
ಸಾಕು ಗೋಜಲು ನೆಯ್ಗೆ : ನನ್ನ ನುಡಿ ಮೊದಲು ತನ್ನ ತಳಸೋಸಿ
ಬೆಳಕ ಹಾಸಿ, ಒಳಮುದವ ಹಸೆಗೇರಿಸದೆ
ಮೊದಲು ತನ್ನೊಳಗ ಕೊರೆದು ಒಳಜಲವ
ಮೇಲುಕ್ಕಿಸದೆ ಹೊರಗೆ ಕೊರವಾಸೆ ಏಕೆ ?
ಮಣ್ಣೊಳಾತ್ಮಾಹುತಿಸದೆಯೆ ಬೀಜ ಮರವ ಪಡೆಯಬಹುದೆ ?
ನನ್ನ ನಾ ತೋಡಿಕೊಳುವೆ, ಹಾಡಿಕೊಳುವೆ :
ಹಾಡುತ್ತ ತಳಮನದ ಒಳಜಲದ ಜನದ ಅಧಿಮನದ
ತಿಳಿಸರಸಿಯಲಿ ನಾ ಕೂಡಿಕೊಳುವೆ ;
ಶಿವಜಟೆಯ ಕ್ಷೀರ ಸಾಗರದಲ್ಲಿ ಮೂಡಿಕೊಳುವೆ !

—'ನನ್ನ ನುಡಿ' : "ಒಂದೆ ಸೂರಡಿಯಲ್ಲಿ" ಪುಟ : ೧೧೯

## ಟಿಪ್ಪಣಿಗಳು

1. ಸ್ವಪ್ನವಾಸವದತ್ತ ನಾಟಕದ ಐದನೆಯ ಅಂಕದಲ್ಲಿ ಉದಯನ ಹೇಳುವ ಮಾತು ಹೀಗಿದೆ :

ಸ್ಮರಾಮ್ಯವಂತ್ಯಾಧಿಪತೇಃ ಸುತಯಾಃ
ಪ್ರಸ್ಥಾನ ಕಾಲೇ ಸ್ವಜನಂ ಸ್ಮರಂತ್ಯಾಃ ।

ಬಾಷ್ಪಂ ಪ್ರವೃತ್ತಂ ನಯನಾಂತ ಲಗ್ನಂ
ಸ್ನೇಹಾನ್ಮಮೈವೋರಸಿ ಪಾತಯಂತ್ಯಾಃ ॥

ನೆನೆಯುತಿರುವೆನು ಆ ಅವಂತಿಯ ದೊರೆಯ ಕುವರಿಯನೀಗಳು
ನನ್ನ ಜತೆಯೊಳು ಬರುವ ಸಮಯದೆ ತನ್ನ ಬಂಧುವ ನೆನೆದಳು
ಸ್ನೇಹಭರದೊಳು ಕಣ್ಣ ಕೊನೆಯೊಳು ನೀರು ತುಂಬಿದುದಾಗಳು
ಅಪ್ಪಿ ಭರದೊಳು ಕಣ್ಣನೀರನು ಸುರುವಿದಳು ಎನ್ನೆದೆಯೊಳು

(ಅನು : ಪ್ರೊ. ಎಸ್. ವಿ. ಪರಮೇಶ್ವರಭಟ್ಟರು)

2. ಕಾಳಿದಾಸನ 'ಶಾಕುಂತಲ' ನಾಟಕದ ಆರನೆಯ ಅಂಕದಲ್ಲಿ ದುಷ್ಯಂತ ಹೇಳುವ ಮಾತುಗಳು ಹೀಗಿವೆ :

ಇತಃ ಪ್ರತ್ಯಾದಿಷ್ಟಾ ಸ್ವಜನಮನುಗಂತುಂ ವ್ಯವಸಿತಾ
ಸ್ಥಿತಾ ತಿಷ್ಠೇತ್ಯುಚ್ಚೈರ್ವದತಿ ಗುರುಶಿಷ್ಯೇ ಗುರುಸಮೇ
ಪುನರ್ದೃಷ್ಟಿಂ ಬಾಷ್ಪಪ್ರಕರ ಕಲುಷಾಮರ್ಪಿತವತೀ
ಮಯಿಕ್ರೂರೇ ಯತ್ತತ್ಸವಿಷಮಿವ ಶಲ್ಯಂ ದಹತಿ ಮಾಮ್ ॥

(ಶಾಕುಂತಲ : ಅಂಕ ೬, ಪದ್ಯ ೯)

ಎನ್ನಿಂ ತಿರಸ್ಕೃತಳು ತನ್ನವರ ಬಳಿ ಸಲಲು
ನಿಲ್ಲೆಂದು ಗುರುಸಮನು ಗುರುಶಿಷ್ಯನಾರುತಿರಲು
ಕ್ರೂರನೆನ್ನೊಳು ನಟ್ಟ ಬಾಷ್ಪಮಲಿನಾಲೋಕ
ವಿಷಶಲ್ಯದಂತೆವೋಲೆದೆಯನಿರದಿರಿಯುತಿಹುದು ।

(ಅನು : ಪ್ರೊ. ಎಸ್. ವಿ. ಪರಮೇಶ್ವರಭಟ್ಟರು)

3. ಕಾರ್ಯಾ ಸೈಕತಲೀನ ಹಂಸಮಿಥುನಾ ಸ್ರೋತೋವಹಾ ಮಾಲಿನೀ
ಪಾದಾಸ್ತಾಮಭಿತೋ ನಿಷಣ್ಣಹರಿಣಾ ಗೌರೀಗುರೋಃಪಾವನಾಃ ।
ಶಾಖಾಲಂಬಿತ ವಲ್ಕಲಸ್ಯ ಚ ತರೋರ್ ನಿರ್ಮಾತುಮಿಚ್ಛಾಮ್ಯಧಃ
ಶೃಂಗೇ ಕೃಷ್ಣಮೃಗಸ್ಯ ವಾಮನಯನಂ ಕಂಡೂಯಮಾನಾಂ ಮೃಗೀಂ ॥

(ಶಾಕುಂತಲ : ಅಂಕ ೬, ಪದ್ಯ ೧೭)

ಮರಲೊಳಗಾಡುವಂಚೆಗಳಿನೊಪ್ಪುವ ಮಾಲಿನಿಯಂ ಮೃಗಾಳಿ ಪ
ಟ್ಟಿರೆ ಕರವೊಪ್ಪುತಿರ್ಪ ತುಹಿನಾದ್ರಿಯ ತಪ್ಪಲನಾರ್ದ್ರ ವಲ್ಕ ಬಂ
ಧುರ ತರುಮೂಲದೊಳ್ ಹರಿಣಶೃಂಗದೆ ತನ್ನಯ ವಾಮನೇತ್ರಮಂ
ತುರಿಸುತಮಿರ್ಪ ಪೆಣ್ಮೆಗಮುಮಂ ಬರೆಯಲ್ಕಿದರಲ್ಲಿ ವಾಂಛಿಪೆಂ ।

(ಅನು : ಬಸವಪ್ಪಶಾಸ್ತ್ರಿಗಳು)

4. ನೋಡಬಹುದು : 'ಪಂಪಭಾರತದ ವಸ್ತುವಿನ್ಯಾಸ : ವ್ಯಾಸ ಭಾರತದ ದೃಷ್ಟಿಯಲ್ಲಿ' 'ಪರಂಪರೆ' ಗ್ರಂಥದಲ್ಲಿ.

5. ಕಿರಾತವೇಷದ ಶಿವನ ಮೇಲೆ ಅರ್ಜುನ ಮಾಡಿದ ಬಾಣದ ಧಾಳಿಯ ನಿರರ್ಥಕತೆಯನ್ನು ಕುಮಾರ ವ್ಯಾಸ ಷಡಕ್ಷರಿ ಇಬ್ಬರೂ ಹೀಗೆ ವರ್ಣಿಸುತ್ತಾರೆ :

ಬಾಷ್ಪಂ ಪ್ರವೃತ್ತಂ ನಯನಾಂತ ಲಗ್ನಂ
ಸ್ನೇಹಾನ್ಮಮೈವೋರಸಿ ಪಾತಯಂತ್ಯಾಃ ॥

ನೆನೆಯುತಿರುವೆನು ಆ ಅವಂತಿಯ ದೊರೆಯ ಕುವರಿಯನೀಗಳು
ನನ್ನ ಜತೆಯೊಳು ಬರುವ ಸಮಯದೆ ತನ್ನ ಬಂಧುವ ನೆನೆದಳು
ಸ್ನೇಹಭರದೊಳು ಕಣ್ಣ ಕೊನೆಯೊಳು ನೀರು ತುಂಬಿದುದಾಗಳು
ಅಪ್ಪಿ ಭರದೊಳು ಕಣ್ಣನೀರನು ಸುರುವಿದಳು ಎನ್ನೆದೆಯೊಳು

(ಅನು : ಪ್ರೊ. ಎಸ್. ವಿ. ಪರಮೇಶ್ವರಭಟ್ಟರು)

2. ಕಾಳಿದಾಸನ 'ಶಾಕುಂತಲ' ನಾಟಕದ ಆರನೆಯ ಅಂಕದಲ್ಲಿ ದುಷ್ಯಂತ ಹೇಳುವ ಮಾತುಗಳು ಹೀಗಿವೆ :

ಇತಃ ಪ್ರತ್ಯಾದಿಷ್ಟಾ ಸ್ವಜನಮನುಗಂತುಂ ವ್ಯವಸಿತಾ
ಸ್ಥಿತಾ ತಿಷ್ಠೇತ್ಯುಚ್ಚೈರ್ವದತಿ ಗುರುಶಿಷ್ಯೇ ಗುರುಸಮೇ
ಪುನರ್ದೃಷ್ಟಿಂ ಬಾಷ್ಪಪ್ರಕರ ಕಲುಷಾಮರ್ಪಿತವತೀ
ಮಯಿಕ್ರೂರೇ ಯತ್ತತ್ಸವಿಷಮಿವ ಶಲ್ಯಂ ದಹತಿ ಮಾಮ್ ॥

(ಶಾಕುಂತಲ : ಅಂಕ ೬, ಪದ್ಯ ೯)

ಎನ್ನಿಂ ತಿರಸ್ಕೃತಳು ತನ್ನವರ ಬಳಿ ಸಲಲು
ನಿಲ್ಲೆಂದು ಗುರುಸಮನು ಗುರುಶಿಷ್ಯನಾರುತಿರಲು
ಕ್ರೂರನೆನ್ನೊಳು ನಟ್ಟ ಬಾಷ್ಪಮಲಿನಾಲೋಕ
ವಿಷಶಲ್ಯದಂತೆವೋಲೆದೆಯನಿರದಿರಿಯುತಿಹುದು ।

(ಅನು : ಪ್ರೊ. ಎಸ್. ವಿ. ಪರಮೇಶ್ವರಭಟ್ಟರು)

3. ಕಾರ್ಯಾ ಸೈಕತಲೀನ ಹಂಸಮಿಥುನಾ ಸ್ರೋತೋವಹಾ ಮಾಲಿನೀ
ಪಾದಾಸ್ತಾಮಭಿತೋ ನಿಷಣ್ಣಹರಿಣಾ ಗೌರೀಗುರೋಃಪಾವನಾಃ ।
ಶಾಖಾಲಂಬಿತ ವಲ್ಕಲಸ್ಯ ಚ ತರೋರ್ ನಿರ್ಮಾತುಮಿಚ್ಛಾಮ್ಯಧಃ
ಶೃಂಗೇ ಕೃಷ್ಣಮೃಗಸ್ಯ ವಾಮನಯನಂ ಕಂಡೂಯಮಾನಾಂ ಮೃಗೀಂ ॥

(ಶಾಕುಂತಲ : ಅಂಕ ೬, ಪದ್ಯ ೧೭)

ಮರಲೊಳಗಾಡುವಂಚೆಗಳಿನೊಪ್ಪುವ ಮಾಲಿನಿಯಂ ಮೃಗಾಳಿ ಪ
ಟ್ಟಿರೆ ಕರಮೊಪ್ಪುತಿರ್ಪ ತುಹಿನಾದ್ರಿಯ ತಪ್ಪಲನಾರ್ದ್ರ ವಲ್ಕ ಬಂ
ಧುರ ತಸುಮೂಲದೊಳ್ ಹರಿಣಶೃಂಗದೆ ತನ್ನಯ ವಾಮನೇತ್ರಮಂ
ತುರಿಸುತಮಿರ್ಪ ಪೆಣ್ಮೃಗಮುಮಂ ಬರೆಯಲ್ಕಿದರಲ್ಲಿ ವಾಂಛಿಪೆಂ ।

(ಅನು : ಬಸವಪ್ಪಶಾಸ್ತ್ರಿಗಳು)

4. ನೋಡಬಹುದು : 'ಪಂಪಭಾರತದ ವಸ್ತುವಿನ್ಯಾಸ : ವ್ಯಾಸ ಭಾರತದ ದೃಷ್ಟಿಯಲ್ಲಿ' 'ಪರಂಪರೆ' ಗ್ರಂಥದಲ್ಲಿ.

5. ಕಿರಾತವೇಷದ ಶಿವನ ಮೇಲೆ ಅರ್ಜುನ ಮಾಡಿದ ಬಾಣದ ಧಾಳಿಯ ನಿರರ್ಥಕತೆಯನ್ನು ಕುಮಾರ ವ್ಯಾಸ ಷಡಕ್ಷರಿ ಇಬ್ಬರೂ ಹೀಗೆ ವರ್ಣಿಸುತ್ತಾರೆ :

ಮಂಜು ಮುಸುಕಿದೊಡೇನು ಪರ್ವತವಂಜುವುದೆ ? ಹಾಲಾಹಲವ ನೊಣ
ನೆಂಜಲಿಸುವುದೆ ? ವಡಬಶಿಖಿ ನೆನೆವುದೆ ತುಷಾರದಲಿ ?
ಕಂಜನಾಳದೆ ಕಟ್ಟುವಡೆವುದೆ ಕುಂಜರನು ? ನರಶರದ ಜೋಡಿನ
ಜುಂಜುವೊಳೆಯಲಿ ಜಾಹ್ನವೀಧರ ಜಾಜುವನೆಯೆಂದ.

—ಕುಮಾರವ್ಯಾಸ ಭಾರತ : ಅರಣ್ಯ ಪರ್ವ, ಸಂಧಿ : ೬, ಪದ್ಯ : ೧೧

ಮಂಜಿನ ಪುಂಜಮೊತ್ತರಿಸಿ ಮುತ್ತಿಮುಸುಂಕೆ ಭಯಾರ್ತಿಗೊಳ್ವನೇ
ಕಂಜಸಖಂ ? ಪತಂಗತತಿ ಪಾಯ್ದೊಡೆ ಬೆರ್ಚುಗುಮೇ ದವಾಗ್ನಿ ? ವಾ
ತಂ ಜವದಿಂ ಪಳಂಚೆ ಗಿರಿ ಕಂಪನವಾಂಪುದೆ ? ಪಾಂಡುಪುತ್ರನಾ
ತಂ ಜಡಿದೊತ್ತೆ ಜಾಜ್ ಪೆಜಸಾರ್ವನೆ ಧೀರ ಧನಂಜಯಾಂಬಕಂ ?

—ಷಡಕ್ಷರಿ ಕವಿಯ ಶಬರಶಂಕರವಿಲಾಸ, ಚತುರ್ಥಾಶ್ವಾಸ, ಪದ್ಯ : ೪೪

ಈ ಎರಡೂ ಚಿತ್ರಗಳನ್ನು ಪಕ್ಕದಲ್ಲಿಟ್ಟು ನೋಡಿದಾಗ ಕುಮಾರವ್ಯಾಸ ಪ್ರಭಾವದಲ್ಲಿ ಷಡಕ್ಷರಿಯ ಚಿತ್ರಣ ಸಾಗಿರುವುದನ್ನು ಕಾಣುತ್ತೇವೆ. ಈ ಬಗೆಗೆ ಪ್ರೊ. ಶಿ. ಶಿ. ಬಸವನಾಳ್ ಅವರಂಥ ಶ್ರೇಷ್ಠ ವಿದ್ವಾಂಸರು ಯಾವ ವಿಶ್ಲೇಷಣ ಮಾಡುತ್ತಾರೆ, ಮೌಲ್ಯ ನೀಡುತ್ತಾರೆ ಎಂಬುದನ್ನು ಮೊದಲು ಗಮನಿಸಬಹುದು: "ಮಂಜು ಪರ್ವತವನ್ನು ಮುಸುಕಬಹುದು. ಸೂರ್ಯನನ್ನೂ ಮುಸುಕಬಹುದು. ಅದಕ್ಕೆ ಪರ್ವತವು ಬೆದರಲಿಕ್ಕಿಲ್ಲ. ಆದರೆ ಅದನ್ನು ಬೆದರಿಸುವ ಶಕ್ತಿ ಪರ್ವತಕ್ಕಿಲ್ಲ. ಸೂರ್ಯನಿಗೆ ಇದೆ. ಹಾಲಾಹಲವನ್ನು ನೊಣ ಎಂಜಲಿಸುವುದೆಂದು ಹೇಳುವುದರಿಂದ ಹಾಲಾಹಲದ ಭೀಕರತೆಯನ್ನು ಹೇಳಿದಂತಾಯಿತೋ ? ನೊಣದ ಜಾಣ್ಮೆಯನ್ನು ವರ್ಣಿಸಿದಂತಾಯಿತೋ ? ಹೀಗೆ ಹಲವು ಸಂದೇಹಗಳಿಗೆ ಎಡೆಗುಡದೆ ಹೆಚ್ಚು ಬಲವತ್ತರವಾದ ಉದಾಹರಣೆಗಳನ್ನು ಕೊಟ್ಟು ಷಡಕ್ಷರದೇವನು ಕುಮಾರವ್ಯಾಸನ ಭಾವನೆಯಲ್ಲಿಯೇ ಮಾರ್ಪಾಡು ಮಾಡಿ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾನೆ. (ಪೀಠಿಕೆ : ಮಹಾಕವಿ ಷಡಕ್ಷರದೇವಕೃತಂ ಶಬರಶಂಕರವಿಲಾಸಂ—ಸಂ : ಪ್ರೊ. ಶಿ. ಶಿ. ಬಸವನಾಳ್, ಪುಟ ೨೭, ಮುದ್ರಣ : ೧೯೩೫)

ಈ ಕುಶಲ ವಿಮರ್ಶೆಯು ಗಮನಿಸಿದೆ ಬಿಟ್ಟ, ಷಡಕ್ಷರಿ ಕವಿಯೂ ಬಿಟ್ಟು ಬಿಟ್ಟ ಕುಮಾರವ್ಯಾಸನ ಶ್ರೇಷ್ಠರೂಪಕವನ್ನು ವಿವೇಚನೆಗೆ ತೆಗೆದುಕೊಳ್ಳಬೇಕು. "ನರಶರದ ಜೋಡಿನ ಜುಂಜು ಹೊಳೆಯಲಿ ಜಾಹ್ನವೀಧರ ಜಾಜುವನೆ ?" ಇದು ಕುಮಾರವ್ಯಾಸನ ಛಾಪಿರುವ ರೂಪಕ ; ಮೊದಲೆಲ್ಲ ಒಂದೊಂದೇ ರನ್ ಮಾಡುತ್ತಿದ್ದವನು ಓವರ್ ಕೊನೆಯಲ್ಲಿ—ಆರನೆ ಪಂಕ್ತಿಯಲ್ಲಿ—ಸಿಕ್ಸರ್ ಅಥವಾ ಬೌಂಡರಿ ಬಾರಿಸುವ ಅವನ ಪದ್ಧತಿಯ ರೀತಿಯಿದು. ಅರ್ಜುನನ ಬಾಣಸಾರವೇನಿದ್ದರು ಜಿನುಗುಹೊಳೆ. ಅದರಲ್ಲಿ, ಲೋಕೋತ್ತರವಾದ ಗಂಗೆಯನ್ನೇ ಜಡೆಯಲ್ಲಿ ಧರಿಸಿಕೊಂಡಿರುವ ಜಾಹ್ನವೀಧರ ಜಾರುತ್ತಾನೆಯೋ ? ಲೀಲಾರ್ಥವಾಗಿ ಶಿವ ಯುದ್ಧ ಮಾಡುತ್ತಿದ್ದಾನೆ, ಅರ್ಜುನನನ್ನು ಹರಸಲು ಬಂದಿದ್ದಾನೆ. "ಶಂಭು ಶಿಷ್ಯಗೆ ಪರಿವಿಡಿಯ ತೋರಿಸುವೊಲಿದ್ದನು" ಈ ಶಿವ. "ಮೆಲುನಗೆಯಲರ್ಜುನನ ಚಾಪವ ಸೆಳೆದುಕೊಂಡನು, ತನ್ನ ಭಕ್ತನ ಬೆಳವಿಗೆಯ ಮಾಡಿದನು." ಅವನು ತನ್ನ ಪ್ರತಾಪವನ್ನು ತೋರಲಲ್ಲ, 'ಹಣೆಗಣ್ಣು ತೆರೆದು ನೋಡೆಯಲಲ್ಲ'. ಕುಮಾರವ್ಯಾಸನಿಗೆ ಈ ಶಿವಲೀಲೆ ಕೇವಲ 'ಶಬರಶಂಕರವಿಲಾಸ' ವಲ್ಲ. ಭಕ್ತ ಭಗವಂತನ ಮುಖಾಮುಖಿ, ತನ್ಮೂಲಕ ಭಕ್ತಿಯ ಗೆಲುವು ಭಗವಂತನ ಒಲವು—ಇದೇ ಮುಖ್ಯ. ಇದು ಒಂದಾದರೆ, ಮತ್ತೊಂದು ಈ ಇಬ್ಬರೂ ಕವಿಗಳು ಈ ಚಿತ್ರಣದಲ್ಲಿ ನೀಡಿರುವ ಚಿತ್ರಗಳ ವಿವೇಚನೆಯ ಆಗತ್ಯ. ಕುಮಾರವ್ಯಾಸನ "ಮಂಜು ಮುಸುಕಿದೊಡೇನು" ಎಂಬ ಚಿತ್ರದಲ್ಲಿ ಶಿವನ ಸ್ಥಾಣುತ್ವದ ದರ್ಶನವಿದೆ. ಸೂರ್ಯ ಮಂಜುಗಳಲ್ಲಿ ಸ್ಪರ್ಧೆಯಿದೆ; ಆದರೆ ಪರ್ವತ ಮಂಜುಗಳಲ್ಲಿ ತಾಳ್ಮೆಯಿದೆ. ಹಿಮಗಿರಿಗೆ ಹಿಮವಾಗಲಿ ಮಂಜಾಗಲಿ ಅಲಂಕಾರ, ಭಾರವಲ್ಲ. ಸ್ಥಾಣುಪರ್ವತದ ಅಂತಸ್ಥವಾದ ಶಾಖದಿಂದಲೆ ಆ ಮಂಜು ಕರಗೀತು. ಆದರೆ ಷಡಕ್ಷರಿಗೆ ಇದು ತುಂಬಾ ಜಡವಾಗಿ ಕಂಡಿರಬೇಕು.

ಮಂಜು ಮುಸುಕಿದೊಡೇನು ಪರ್ವತವಂಜುವುದೆ ? ಹಾಲಾಹಲದ ಹೊಗೆ
ನಂಜಲಿಸುವುದೆ ? ಪಡಬಿಸಿಲು ಗೆಲಿವುದೆ ತುಷಾರದಲಿ ?
ಕಂಜನಾಳದೆ ಕಟ್ಟುವಡೆವುದೆ ಕುಂಜರನು ? ನರಶರದ ಜೋಡಿನ
ಜುಂಜುವೊಳೆಯಲಿ ಜಾಹ್ನವೀಧರ ಜಾಜುವನೆಲೆಂದ.

—ಕುಮಾರವ್ಯಾಸ ಭಾರತ : ಅರಣ್ಯ ಪರ್ವ, ಸಂಧಿ : ೬, ಪದ್ಯ : ೧೧

ಮಂಜಿನ ಪುಂಜಮೊತ್ತರಿಸಿ ಮುತ್ತಿಮುಸುಂಕೆ ಭಯಮಾರ್ಗಗೊಳ್ವನೇ
ಕಂಜಸುಮಂ ? ಪತಂಗತತಿ ಪಾಯ್ದೊಡೆ ಬೆರ್ಚುಗುಮೋ ದವಾಗ್ನಿ ? ಪಾ
ತಂ ಜವದಿಂ ಪಳಂಚೆ ಗಿರಿ ಕಂಪಿಸವಾಂಪುದೆ ? ಪಾಂಡುಪುತ್ರನಾ
ತಂ ಜಡಿದೊತ್ತೆ, ಜಾಜು ಪೇಸಾರ್ವನೆ ಧೀರ ಧನಂಜಯಾಂಬುಕಂ ?

—ಷಡಕ್ಷರಿ ಕವಿಯ ಶಬರಶಂಕರವಿಲಾಸ, ಚತುರ್ಥಾಶ್ವಾಸ, ಪದ್ಯ : ೪೪

ಈ ಎರಡೂ ಚಿತ್ರಗಳನ್ನು ಪಕ್ಕದಲ್ಲಿಟ್ಟು ನೋಡಿದಾಗ ಕುಮಾರವ್ಯಾಸ ಪ್ರಭಾವದಲ್ಲಿ ಷಡಕ್ಷರಿಯ ಚಿತ್ರಣ ಸಾಗಿರುವುದನ್ನು ಕಾಣುತ್ತೇವೆ. ಈ ಬಗೆಗೆ ಪ್ರೊ. ಶಿ. ಶಿ. ಬಸವನಾಳ್ ಅವರಂಥ ಶ್ರೇಷ್ಠ ವಿದ್ವಾಂಸರು ಯಾವ ವಿಶ್ಲೇಷಣ ಮಾಡುತ್ತಾರೆ, ಮೌಲ್ಯ ನೀಡುತ್ತಾರೆ ಎಂಬುದನ್ನು ಮೊದಲು ಗಮನಿಸಬಹುದು : ''ಮಂಜು ಪರ್ವತವನ್ನು ಮುಸುಕಬಹುದು. ಸೂರ್ಯನನ್ನೂ ಮುಸುಕಬಹುದು. ಆದಕ್ಕೆ ಪರ್ವತವು ಬೆದರಲಿಕ್ಕಿಲ್ಲ, ಆದರೆ ಅದನ್ನು ಬೆದರಿಸುವ ಶಕ್ತಿ ಪರ್ವತಕ್ಕಿಲ್ಲ. ಸೂರ್ಯನಿಗೆ ಇದೆ. ಹಾಲಾಹಲವನ್ನು ನೊಣ ಎಂಜಲಿಸುವುದೆಂದು ಹೇಳುವುದರಿಂದ ಹಾಲಾಹಲದ ಭೀಕರತೆಯನ್ನು ಹೇಳಿದಂತಾಯಿತೋ ? ನೊಣದ ಜಾಣ್ಮೆಯನ್ನು ವರ್ಣಿಸಿದಂತಾಯಿತೋ ? ಹೀಗೆ ಹಲವು ಸಂದೇಹಗಳಿಗೆ ಎಡೆಗುಡದೆ ಹೆಚ್ಚು ಬಲವತ್ತರವಾದ ಉದಾಹರಣೆಗಳನ್ನು ಕೊಟ್ಟು ಷಡಕ್ಷರದೇವನು ಕುಮಾರವ್ಯಾಸನ ಭಾವನೆಯಲ್ಲಿಯೆ ಮಾರ್ಪಾಡು ಮಾಡಿ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾನೆ. (ಪೀಠಿಕೆ : ಮಹಾಕವಿ ಷಡಕ್ಷರದೇವಕೃತಂ ಶಬರಶಂಕರವಿಲಾಸಂ—ಸಂ : ಪ್ರೊ. ಶಿ. ಶಿ. ಬಸವನಾಳ್, ಪುಟ ೨೭. ಮುದ್ರಣ : ೧೯೩೯)

ಈ ಕುಶಲ ವಿಮರ್ಶೆಯು ಗಮನಿಸಿದೆ ಬಿಟ್ಟ, ಷಡಕ್ಷರಿ ಕವಿಯೂ ಬಿಟ್ಟು ಬಿಟ್ಟ ಕುಮಾರವ್ಯಾಸನ ಶ್ರೇಷ್ಠರೂಪಕವನ್ನು ವಿವೇಚನೆಗೆ ತೆಗೆದುಕೊಳ್ಳಬೇಕು. ''ನರಶರದ ಜೋಡಿನ ಜುಂಜು ಹೊಳೆಯಲಿ ಜಾಹ್ನವೀಧರ ಜಾಜುವನೆ ?'' ಇದು ಕುಮಾರವ್ಯಾಸನ ಛಾಪಿರುವ ರೂಪಕ ; ಮೊದಲೆಲ್ಲ ಒಂದೊಂದೇ ರನ್ ಮಾಡುತ್ತಿದ್ದವನು ಓವರ್ ಕೊನೆಯಲ್ಲಿ—ಆರನೆ ಪಂಕ್ತಿಯಲ್ಲಿ—ಸಿಕ್ಸರ್ ಅಥವಾ ಬೌಂಡರಿ ಬಾರಿಸುವ ಅವನ ಪದ್ಧತಿಯ ರೀತಿಯಿದು. ಅರ್ಜುನನ ಬಾಣಸಾರವೇನಿದ್ದರು ಜೇನುಗುಪೊಳೆ. ಅದರಲ್ಲಿ, ಲೋಕೋತ್ತರವಾದ ಗಂಗೆಯನ್ನೇ ಜಡೆಯಲ್ಲಿ ಧರಿಸಿಕೊಂಡಿರುವ ಜಾಹ್ನವೀಧರ ಜಾರುತ್ತಾನೆಯೋ ? ಲೀಲಾರ್ಥವಾಗಿ ಶಿವ ಯುದ್ಧ ಮಾಡುತ್ತಿದ್ದಾನೆ, ಅರ್ಜುನನನ್ನು ಹರಸಲು ಬಂದಿದ್ದಾನೆ. ''ಶಂಭು ಶಿಷ್ಯಗೆ ಪರಿವಿಡಿಯ ತೋರಿಸುವ್ತೊಲಿದ್ದನು'' ಈ ಶಿವ. ''ಮೆಲುನಗೆಯಲರ್ಜುನನ ಚಾಪವ ಸೆಳೆದುಕೊಂಡನು, ತನ್ನ ಭಕ್ತನ ಬೆಳವಿಗೆಯ ಮಾಡಿದನು.'' ಅವನು ತನ್ನ ಪ್ರತಾಪವನ್ನು ತೋರಲಿಲ್ಲ. 'ಹಣೆಗಣ್ಣು ತೆರೆದು ನೋಣೆಯಲಿಲ್ಲ'. ಕುಮಾರವ್ಯಾಸನಿಗೆ ಈ ಶಿವಲೀಲೆ ಕೇವಲ 'ಶಬರಶಂಕರವಿಲಾಸ'ವಲ್ಲ. ಭಕ್ತ ಭಗವಂತನ ಮುಖಾಮುಖಿ, ತನ್ಮೂಲಕ ಭಕ್ತಿಯ ಗೆಲುವು ಭಗವಂತನ ಒಲವು—ಇದೇ ಮುಖ್ಯ. ಇದು ಒಂದಾದರೆ, ಮತ್ತೊಂದು ಈ ಇಬ್ಬರೂ ಕವಿಗಳು ಈ ಚಿತ್ರಣದಲ್ಲಿ ನೀಡಿರುವ ಚಿತ್ರಗಳ ವಿವೇಚನೆಯ ಅಗತ್ಯ. ಕುಮಾರವ್ಯಾಸನ ''ಮಂಜು ಮುಸುಕಿದೊಡೇನು'' ಎಂಬ ಚಿತ್ರದಲ್ಲಿ ಶಿವನ ಸ್ಥಾಣುತ್ವದ ದರ್ಶನವಿದೆ. ಸೂರ್ಯ ಮಂಜುಗಳಲ್ಲಿ ಸ್ಪರ್ಧೆಯಿದೆ; ಆದರೆ ಪರ್ವತ ಮಂಜುಗಳಲ್ಲಿ ತಾಳ್ಮೆಯಿದೆ. ಹಿಮಗಿರಿಗೆ ಹಿಮವಾಗಲಿ ಮಂಜಾಗಲಿ ಅಲಂಕಾರ, ಭಾರವಲ್ಲ. ಸ್ಥಾಣುಪರ್ವತದ ಅಂತಸ್ಥವಾದ ಶಾಖದಿಂದಲೆ ಆ ಮಂಜು ಕರಗೀತು. ಆದರೆ ಷಡಕ್ಷರಿಗೆ ಇದು ತುಂಬಾ ಜಡವಾಗಿ ಕಂಡಿರಬೇಕು.

ಅದ್ದರಿಂದಲೇ ಪ್ರಖರ ಸೂರ್ಯನನ್ನು ಕರೆತರುತ್ತಾನೆ. ಈ ಸೂರ್ಯನಿಗೆ ಬಳಸುವ ಪರ್ಯಾಯ ಪದವೇನು? 'ಕಂಜಸಖ' ಎಂದು! ಅಂದರೆ, ತಾವರೆಯ ಗೆಳೆಯ ಸೂರ್ಯ ಎಂದು. ವಿದ್ವತ್ತಿಗೆ ಮೆಚ್ಚಬೇಕು. ತಾವರೆಯ ಗೆಳೆಯ ಮಂಜನ್ನು ಕಂಡಂಜುವುದಿಲ್ಲ, ಆದರೆ ತಾವರೆ ಮಂಜಿಗೆ ಅಂಜುತ್ತದೆ. ಮಂಜು, ಪುಂಜ, ಕಂಜ ಎಂಬ ಪದಗಳ ನಾದಕ್ಕೆ ವಶವಾಗಿ ಕವಿ ಅರ್ಥೌಚಿತ್ಯವನ್ನು ಅಷ್ಟಾಗಿ ಗಮನಿಸಹೋಗಿಲ್ಲ.

6. ಇಷ್ಟಾದರೂ ಕುಮಾರವ್ಯಾಸ ಷಡಕ್ಷರಿಗೆ ಸಮ, ಪ್ರಥಮ ದರ್ಜೆಯ ಕವಿಯೆನಿಸುವುದಿಲ್ಲ ಪ್ರೊ. ಬಸವನಾಳರಿಗೆ. ಅವರ ನಿಶ್ಚಿತಾರ್ಥ ಹೀಗಿದೆ: ''ಹೀಗೆ ಆಳವಾಗಿ ವಿವೇಚಿಸುವುದರಿಂದ ಕರ್ಣಾಟಕ ಭಾರತಕ್ಕೂ ಶಬರಶಂಕರವಿಲಾಸಕ್ಕೂ ಇರುವ ಸಾಮ್ಯ-ಹೋಲಿಕೆಗಳು ಹೊರಮೆಯ್ಯ ಹೋಲಿಕೆಗಳೆಂದು ಹೇಳಬಹುದೇ ಹೊರತು ಒಳದಿರುಳಿನವಲ್ಲ. ಈಗಿನ ಕಾಲದಲ್ಲಿ ಕುಮಾರವ್ಯಾಸನ ಸರಣಿಯೇ ಹೆಚ್ಚು ಚಿತ್ತಾಕರ್ಷಕವಾದುದೆಂದು ಹೇಳುವವರು ಹಲವರಿರಬಹುದು; ಅವರೊಡನೆ ನಮ್ಮ ಕದನವಿಲ್ಲ. ಆದರೆ ಈ ಇಬ್ಬರು ಕವಿಗಳು ಬೇರೆ ಬೇರೆ ವರ್ಗಕ್ಕೆ ಸೇರಿದವರೆಂದು ತಿಳಿದರೆ ಸಾಕು.'' (ಪೀಠಿಕೆ, ಪುಟ ೨೫, ಅದೇ) ಈ ಮಾತುಗಳನ್ನು ಒಪ್ಪಬಹುದು!

7. ವೇದಪಾರಾಯಣದ ಫಲ ಗಂಗಾದಿ ತೀರ್ಥಸ್ನಾನಫಲ ಕೃ
ಚ್ಛ್ರಾದಿ ತಪಸಿನಫಲವು ಜ್ಯೋತಿಷ್ಟೋಮಯಾಗ ಫಲ
ಮೇದಿನಿಯನೊಲಿದಿತ್ತ ಫಲ ವಸ್ತ್ರಾದಿ ಕನ್ಯಾದಾನ ಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ

—ಕುಮಾರವ್ಯಾಸ ಭಾರತ : ಸಂಧಿ ೧, ಪದ್ಯ ೧೯

ಹೇಮ ಖುರ ಶಂಗಾಭರಣದಲಿ ಕಾಮಧೇನು ಸಹಸ್ರ ಕಪಿಲೆಯ
ಸೋಮಸೂರ್ಯಗ್ರಹಣದಲಿ ಸುರನದಿಯ ತೀರದಲಿ
ಶ್ರೀ ಮುಕುಂದಾರ್ಪಣವೆನಿಸಿ ಶತಭೂಮಿದೇವರಿಗಿತ್ತ ಫಲವಹು
ದೀ ಮಹಾಭಾರತದೊಳೊಂದಕ್ಷರವ ಕೇಳ್ದರಿಗೆ

ಅದೇ, ಪದ್ಯ ೨೦

ಈ ಪುಣ್ಯಫಲವನ್ನು ಪಟ್ಟಿಮಾಡುವುದು ಕಾವ್ಯಗಳಲ್ಲಿ ಮಾತ್ರವೇ ಅಲ್ಲ, ಸ್ತೋತ್ರ ಸಹಸ್ರನಾಮಾದಿಗಳ ಪಠಣದಿಂದ ಬರುತ್ತದೆಂದೂ ಅವುಗಳ ಮೊದಲಲ್ಲೊ ಕಡೆಯಲ್ಲೊ ಉಲ್ಲೇಖಿಸುವುದುಂಟು. ಇದು ಸಾಲದೆಂದು ಕುಮಾರವ್ಯಾಸ ''ಅರಸುಗಳಿಗಿದುವೀರ...'' ಪದ್ಯದಲ್ಲಿ ಯಾವ ಯಾವ ವರ್ಗದವರಿಗೆ ತನ್ನ ಕಾವ್ಯ ಏನೇನು ಕೊಡಬಲ್ಲದೆಂಬುದನ್ನು ಹೇಳುವ ಇದೇ ಕೆಲಸ ಮಾಡುತ್ತಾನೆ. ಇತರ ಹಲವು ಕವಿಗಳು ತಮ್ಮ ಕಾವ್ಯದಲ್ಲಿ ತಮ್ಮ ಹಿಂದಿನ ಪ್ರಸಿದ್ಧ ಕವಿಗಳ, ತಾವು ಗುರುತಿಸಿದ ವಿಶಿಷ್ಟ ಗುಣಗಳು ತುಂಬಿವೆಯೆಂದು ಹೇಳುವುದಾದರೂ ಇದೇ ಕಾರಣದಿಂದ :

8. ಪುದಿದಿರೆ ರಾಗಮುರ್ಕೆ ಪೊಸವೇಟದಲಂಪುಗಳೆಲ್ಲಮೋದಿದ
ರ್ಗಿದಜಿನುಯಾಯಿಗಳ್ಗೆಸೆವುದಾರ ಗುಣಂ ಸಕಳಾವನೀಶ್ವರ
ರ್ಗದಟಿನಳುರ್ಕೆ ಭೃತ್ಯನಿವಹಕ್ಕೆ ಚದುರ್ ಗಣಿಕಾಜನಕ್ಕೆ ಕುಂ
ದದೆ ನೆಲಸಿರ್ಕೆಯೀ ಮಹಿತಳಕ್ಕೆ ಮದೀಯ ಕೃತಿಪ್ರಬಂಧದಿಂ ।

—ಪಂಪಭಾರತ : ಆಶ್ವಾಸ ೧೪, ಪದ್ಯ ೬೩

ಕರಮುಟ್ಕಿರ್ತು ಸಮಸ್ತ ಭಾರತ ಕಥಾ ಸಂಬಂಧಮಂ ಬಾಚಿಸಲ್
ಬರೆಯಲ್ ಕೇಳಲೊಡರ್ಚುವಂಗಮಿದಱಿಂ ತನ್ನಿಷ್ಟವಪ್ಪನ್ನಮು
ತ್ತರಮುಕ್ಕುಂ ಧೃತಿ ತುಷ್ಟಿಪುಷ್ಟಿವಿಭವಂ ಸೌಭಾಗ್ಯಮಿಷ್ಟಾಂಗನಾ
ಸುರತಂ ಕಾಂತಿಯುಗಂತಿ ಶಾಂತಿ ವಿಭವಂ ಭದ್ರಂ ಶುಭಂ ಮಂಗಳಂ ।

—ಅದೇ, ಪದ್ಯ ೬೫

9. ಶಾಸನಗಳ ಕಡೆಯಲ್ಲಿ ಶಾಸನ ರಕ್ಷಣೆಯ ಫಲವನ್ನೂ ಅದಕ್ಕೆ ತಪ್ಪಿದರೆ ಒದಗುವ ಶಿಕ್ಷೆಯನ್ನೂ ಬಗೆಬಗೆಯಾಗಿ ಚಿತ್ರಿಸುತ್ತಾರೆ. ಯಾವುದಾದರೂ ಭಯ-ಲೋಭ ತಮ್ಮ ದಾನವನ್ನು ಕಾಪಾಡಲೆಂಬುದು ಆಶಯ. ಅದನ್ನು ಸಂವಹಿಸುವ ವಿಧಾನ ರೋಚಕ. ಜನ ತಮ್ಮ ಬೈಗುಳಗಳಲ್ಲಿ ಬಳಸುವ ನಾನಾ ಪ್ರಚೋದಕ ಅಂಶಗಳಲ್ಲಿ ಯಾವುದಾದರೂ ತಮ್ಮ ಅಸ್ವಸ್ಥತೆಯನ್ನು ಉದ್ದಿಷ್ಟ ವ್ಯಕ್ತಿಗೆ ಸಂವಹಿಸಲೆಂಬುದೇ ಆಗಿರುತ್ತದೆ. ಕೆಲವು ವಿದೇಶೀ ಪಾರಂಗತ ವೈದ್ಯರು ಕೊಡುವ ಔಷಧ ಮಾಲೆಯಿದ್ದಂತೆ—ಯಾವೊಂದಾದರೂ ಕೆಂದಲೆಂಬ ಆಶಯ ಹೊತ್ತದ್ದಾಗಿರುತ್ತದೆ.

ಕನ್ನಡ ನವೋದಯ ಕಾವ್ಯದ ಉತ್ಕರ್ಷಕ್ಕೆ ಕವಿಗಳ ಸೃಜನಶೀಲತೆ ಕಾರಣವಾಗಿರುವಂತೆಯೇ ಕಾವ್ಯಮೀಮಾಂಸೆಯ ತಾತ್ತ್ವಿಕ ನೆಲೆಯೂ ತಳಹದಿಯಾಗಿದೆ. ಹೊಸಕಾವ್ಯದ ಪುನರುಜ್ಜೀವನಕ್ಕೆ ಕಾರಣಕರ್ತರಾದ ಕವಿಗಳು ಕಾವ್ಯದ ಸ್ವರೂಪ, ಅದರ ಸೃಷ್ಟಿಕಾರ್ಯದ ಬಗೆಗೆ ತಾಳಿದ ಒಲವು ನಿಲುವುಗಳು ಅವರ ಸಾಹಿತ್ಯಮೀಮಾಂಸೆಯ ವಿಚಾರಗಳಲ್ಲಿ ಕಾಣಲು ದೊರೆಯುವಂತೆಯೇ ಕವಿತೆಗಳಲ್ಲೂ ಮೈದಾಳಿದ ಬಗೆಯನ್ನು ನಾವು ಗುರುತಿಸಬಹುದು. ಕಾವ್ಯದ ಸೃಷ್ಟಿವಿಧಾನ, ಕಾವ್ಯಕ್ಕೂ ಸಹೃದಯನಿಗೂ ಇರುವ ಸಂಬಂಧ, ಕವಿಕರ್ಮ, ಕಾವ್ಯಪ್ರಯೋಜನ ಹೀಗೆ ಕಾವ್ಯವಿಚಾರ ಕುರಿತಾದ ಗಂಭೀರವಾದ ಆಲೋಚನೆಯನ್ನು ಕವಿತೆಗಳ ಮೂಲಕ ಅಭಿವ್ಯಕ್ತಿಸಿದ ವಿಶಿಷ್ಟಪರಂಪರೆ ಕನ್ನಡ ನವೋದಯ ಕವಿಗಳ ಕವಿತೆಗಳಲ್ಲಿ ಅಂತಸ್ಥವಾಗಿದೆ.

ಕವಿತೆಗಳಲ್ಲಿ ಕಾವ್ಯಮೀಮಾಂಸೆ ಎನ್ನುವದು ಒಂದು ರೀತಿಯಲ್ಲಿ 'ಸೀಮೋಲ್ಲಂಘನ' ಎನ್ನಬಹುದು. ಕವಿ ತಾನೇ ಕವಿತೆಗಳನ್ನು ಬರೆದು ಅದರ ಸೃಷ್ಟಿವಿಧಾನದ ಬಗೆಗೆ ತನ್ನ ಕಾವ್ಯಚರ್ಚೆಯನ್ನು, ಮನಸ್ಸಿನ ಮಂಥನವನ್ನು, ಪುನಃ ಕವಿತೆಗಳ ಮೂಲಕವೇ ಪ್ರಕಟಿಸುವದು ಕಾವ್ಯಪ್ರಪಂಚದಲ್ಲಿ ಮಹತ್ತ್ವಪೂರ್ಣವಾಗುತ್ತದೆ. ಇಂಥ ಕಾವ್ಯಮೀಮಾಂಸೆಯ ಕವಿತೆಗಳನ್ನು ಪರಿಭಾವಿಸಿದಾಗ ಆ ಕವಿಯ ಕಾವ್ಯಧೋರಣೆಯನ್ನು, ಕಾವ್ಯತತ್ತ್ವಪರಂಪರೆಯ ಪ್ರಜ್ಞೆಯನ್ನು ಅರ್ಥೈಸಲು ಸಾಧ್ಯವಾಗುತ್ತದೆ. ಕಾವ್ಯಸೃಷ್ಟಿ ಕವಿಗೆ ಅರ್ಥಪೂರ್ಣ ಕ್ರಿಯೆಯಾಗಿರುವದರಿಂದ ಅವನ ಕವಿತೆ ಹಾಗೂ ಕಾವ್ಯಮೀಮಾಂಸೆಯ ವಿಚಾರದ ಸಂಬಂಧವನ್ನು. ಕ್ರಿಯೆ ಪ್ರತಿಕ್ರಿಯೆಗಳ ನಡುವಿನ ವ್ಯತ್ಯಾಸವನ್ನು, ಅರಿಯಬಹುದಾಗಿದೆ.

ಕನ್ನಡದಲ್ಲಿ ಕಾವ್ಯತತ್ತ್ವ ಹಾಗೂ ಕಾವ್ಯಮೀಮಾಂಸೆ ಪ್ರಾಚೀನ ಕಾವ್ಯಪರಂಪರೆಯಲ್ಲಿ ಸಮೃದ್ಧವಾಗಿರುವದನ್ನು ನಾವು ಕಾಣಬಹುದು.[1] ಭಾರತೀಯ ಕಾವ್ಯಮೀಮಾಂಸೆಯ ಆಳವಾದ ತಿಳಿವಳಿಕೆಯಿಂದ ಕನ್ನಡ ಕವಿಗಳು ಶ್ರೇಷ್ಠಕಾವ್ಯದ ತಾತ್ತ್ವಿಕ ನೆಲೆಗಳನ್ನು ತಮ್ಮ ಕಾವ್ಯದಲ್ಲಿ ಚರ್ಚಿಸಿದ್ದು ಕಂಡುಬರುತ್ತದೆ. ನವೋದಯ ಕನ್ನಡ ಕವಿಗಳಿಗೆ ಪ್ರಬಲ ಪ್ರೇರಣೆ ಪಾಶ್ಚಾತ್ಯ ಸಾಹಿತ್ಯಮೀಮಾಂಸೆಯಿಂದ ಪಡೆದುಕೊಳ್ಳಲು ಸಾಧ್ಯವಾಗಿರುವದಾ

ವರೂ ಭಾರತೀಯ ಕಾವ್ಯಮೀಮಾಂಸೆಯ ಹಿನ್ನೆಲೆ ಸಮೃದ್ಧವಾಗಿರುವದನ್ನು ನಾವು ಗಮನಿಸಬಹುದು. ಇದರಿಂದ ಸಹಜವಾಗಿಯೇ ನವೋದಯ ಕವಿಗಳು ತಮ್ಮ ಕವಿತೆಗಳಲ್ಲಿ ವ್ಯಾಪಕವಾದ ಕಾವ್ಯಚರ್ಚೆಯನ್ನು ನಡೆಸಲು ಸಾಧ್ಯವಾಗಿದೆ. ನವೋದಯ ಸಾಹಿತ್ಯದ ಆಚಾರ್ಯಪುರುಷರಾದ ಬಿ. ಎಂ. ಶ್ರೀಕಂಠಯ್ಯನವರ 'ಶಂಕ್ರಗೀತೆ'ಯಲ್ಲಿ ಬರುವ 'ಋತವೊಂದೆ ಗೆಲ್ಲುವುದು, ಅನೃತವಲ್ತು' ಎಂಬ ಮಾತಿನಲ್ಲಿಯೇ ಶ್ರೇಷ್ಠವಾದ ಕಾವ್ಯದ ಅಂತಃಸತ್ವವನ್ನು ಕಾಣಬಹುದು. ರೊಮ್ಯಾಂಟಿಕ್ ಕಾವ್ಯತತ್ತ್ವದಿಂದ ಪ್ರೇರಿತರಾದ 'ಶ್ರೀ'ಯವರು ಹಾಗೂ ಅವರ ಶಿಷ್ಯವರ್ಗದವರು ಪಾಶ್ಚಾತ್ಯಕಾವ್ಯವಿಚಾರಧಾರೆಯನ್ನು ಕನ್ನಡದಲ್ಲಿ ತಂದದ್ದು ಹೊಸಕಾವ್ಯದ ಬೆಳೆವಣಿಗೆಯಲ್ಲಿ ಪ್ರಮುಖ ಹೆಜ್ಜೆಯಾಗಿದೆ. ಮಾಸ್ತಿಯವರು ತಮ್ಮ 'ಸಾಹಿತ್ಯ' ಗ್ರಂಥದಲ್ಲಿ ನಡೆಸಿದ ಕಾವ್ಯಮೀಮಾಂಸೆಯ ಚರ್ಚೆಯನ್ನು ತಮ್ಮ ಕವಿತೆಗಳಲ್ಲೂ ಅಭಿವ್ಯಕ್ತಗೊಳಿಸಿದ್ದಾರೆ. ''ಕವಿಯ ಅನುಭವವು ತೀವ್ರತರವಾಗಿರುತ್ತದೆ. ಅವನ ಮನಸ್ಸಿನಲ್ಲಿ ಉಂಟಾಗುವ ತೀವ್ರಪ್ರತಿಕ್ರಿಯೆಯೇ ಭಾವಾವೇಶ. ಇದು ಅವನ ಆತ್ಮವನ್ನು ಪಸರಿಸುತ್ತದೆ. ಪಾತ್ರೆಯನ್ನು ತುಂಬಿದ ಮೇಲೆ ಹೊರಗೆ ಹರಿಯುವ ರಸದಂತೆ ಕಾವ್ಯರಸವು ಕವಿಯ ಹೃದಯವನ್ನು ತುಂಬಿದ ಮೇಲೆಯೇ ಕಾವ್ಯವಾಗಿ ಪರಿಣಾಮವನ್ನು ಹೊಂದುವುದು. ಭಾವಗಳು ಕವಿಯ ಮನಸ್ಸನ್ನು ತೀರ ತುಂಬಿದಾಗ ಅವು ತಾನಾಗಿ ಹೊರಗೆ ಬರುವುವು.''[2] ತಮ್ಮ 'ಅರುಣ'ದಲ್ಲಿ 'ಭಾವವಿಲ್ಲದ ಕವಿತೆ ಜೀವವಿಲ್ಲದ ದೇಹ' ಎಂದು ಭಾವಗೀತೆಯ ಲಕ್ಷಣವನ್ನು ಅವರು ವಿದಿತಪಡಿಸಿದ್ದಾರೆ. ಮಾಸ್ತಿಯವರ ದೃಷ್ಟಿಯಲ್ಲಿ ಕಾವ್ಯ ಎನ್ನುವದು 'ದೇವದೇವನ ಮಾಯೆ' ಎಂಬ ಮಾತು 'ಬಿನ್ನಹ'ದ ಕವಿತೆಯಲ್ಲಿ ಅಭಿವ್ಯಕ್ತವಾಗಿದೆ.

ಡಿ. ವಿ. ಜಿ.ಯವರು ತಮ್ಮ 'ನಿವೇದನ'ದಲ್ಲಿ ''ರವಿಗೆ ಬೆಳಕ, ಭುವಿಗೆ ಬಲವ, ಜವವ ವಾಯುಗೀವ ತೆರದಿ, ಕವಿಯ ವಚನಕವನೆ ಸರಸಭಾವವೀವನು'' ಎಂದು ಹೇಳುವಲ್ಲಿ ಕವಿಯ ಮಾತಿಗೆ ಸರಸ ಭಾವವನ್ನು ಕೊಡುವವನು ದೇವನೆಂದೂ ಅವನಲ್ಲಿ ಭಕ್ತಿಯಿಂದ ಮೊರೆಯಿಟ್ಟಾಗ ಕವಿಗೆ ವಾಣಿ ಸಿದ್ಧಿಸುವದೆಂದೂ ತಿಳಿಯುತ್ತದೆ. ''ಕಾವ್ಯಸೌಂದರ್ಯದರ್ಶನವು—ರಸಾನುಭವವು—ವೈಯಕ್ತಿಕ ಸಾಕ್ಷ್ಯವುಳ್ಳದ್ದು: ಅದು ಪ್ರತಿ ಮನುಷ್ಯನಿಗೂ ಅವನ ಮನೋಧರ್ಮ ಸಂಸ್ಕಾರಗಳಿಗನುಗುಣವಾಗಿರುತ್ತದೆ.''[3] ಎಂಬ ವಿಚಾರಧಾರೆಯೂ ಡಿ.ವಿ.ಜಿ.ಯವರದಾಗಿದೆ. ಕುವೆಂಪು ಅವರು ಕನ್ನಡ ಕಾವ್ಯಮೀಮಾಂಸೆಗೆ ನೀಡಿದ ಕೊಡುಗೆ ಅದ್ವಿತೀಯವಾದದ್ದು. ಅವರು 'ಕಾವ್ಯವಿಹಾರ' ಮೊದಲಾದ ಗ್ರಂಥಗಳಲ್ಲಿ ಕನ್ನಡಕ್ಕೆ ನೂತನವಾದ ಕಾವ್ಯಮೀಮಾಂಸೆಯ ವಿಚಾರಧಾರೆಯನ್ನು ಒದಗಿಸಿಕೊಟ್ಟಿದ್ದಲ್ಲದೆ, ತಮ್ಮ ಕವಿತೆ ಹಾಗೂ ಮಹಾಕಾವ್ಯದಲ್ಲಿಯೂ ಪ್ರಕಟಪಡಿಸಿದ್ದಾರೆ. 'ಕಾವ್ಯದರ್ಶನ'ಕ್ಕೂ 'ಆತ್ಮದರ್ಶನ'ಕ್ಕೂ ಇರುವ ಸಾಮೀಪ್ಯವನ್ನು ಮನಗಂಡು, ತಮ್ಮ ಕವಿಸಹಜವಾಣಿಯಿಂದಲೇ 'ಕವಿನಿರ್ಮಿತಿ', 'ರಸ', 'ಅಲಂಕಾರ', 'ಭವ್ಯತೆ', 'ಪ್ರಕೃತಿಸೌಂದರ್ಯ' ಮುಂತಾದವುಗಳ ಆಳದಲ್ಲಿ ಹುದುಗಿರುವ ತತ್ತ್ವಗಳನ್ನು ಹೊಸ ಪರಿಯಿಂದ ವಿವರಿಸಿರುವ ಯಶಸ್ಸು ಕುವೆಂಪು ಅವರದು. ಪ್ರಾಚ್ಯಪಾಶ್ಚಾತ್ಯ ಕಾವ್ಯತತ್ತ್ವಗಳ ಒಂದು ಸುರುಚಿರ ಹಾಗೂ

ಅಲೌಕಿಕತೆ, ಸಾಹಿತ್ಯದಲ್ಲಿ ಪ್ರತಿಮೆ, ಭೂಮಾನುಭೂತಿ, ಭವ್ಯತಾನುಭವಮೀಮಾಂಸೆ ಹಾಗೂ ಕವಿಕೃತಿಯ ಅನನ್ಯಪರತಂತ್ರತೆ ಈ ವಿವೇಚನೆಗಳಲ್ಲಿ ಕುವೆಂಪು ಅವರ ಕಾವ್ಯ ತತ್ತ್ವವಿಚಾರಧಾರೆ ಚೆಲ್ಲವರಿದಿದೆ. ಕುವೆಂಪು ಕವಿಹೃದಯವನ್ನು ವರ್ಣಿಸುವ ಕವಿತೆಯ ಸಾಲುಗಳು ಈ ಕೆಳಗಿನಂತಿವೆ :

ಕವಿಯ ಹೃದಯವೊಂದು ವೀಣೆ
ಲೋಕವದನು ಮಿಡಿವುದು
ವ್ಯಕ್ತಿತನವೆ ಕವಿಗೆ ಇಲ್ಲ :
ಅವನು ಇಲ್ಲ ಅಥವಾ ಎಲ್ಲ
ಎಂತೊ ನಾಡಿನೊಡಲ ನಾಡಿ
ಎಂತುಟಾಸೆಯಿಹುದೊ ನೋಡಿ
ಎಂತೊ ಜನದ ಮೂಕವಾಣಿ
ಅಂತೆ ತಂತಿ ನುಡಿವುದು.[5]

ಕವಿಗೆ ವ್ಯಕ್ತಿತನವೆ ಇಲ್ಲ, ಅವನ ಹೃದಯವೀಣೆಯಾಗಿ ಲೋಕಸಂಗತಿಯನ್ನು ಮಿಡಿದು ಜನದ ಮೂಕವಾಣಿಗೆ ಶ್ರುತಿಯಾಗುವ ವಿಧಾನವನ್ನು ಇಲ್ಲಿ ಅವರು ಅರ್ಥಪೂರ್ಣವಾಗಿ ಹೇಳಿದ್ದಾರೆ.

ಕವಿ ಭಾವಸಮಾಧಿಯಲ್ಲಿ ತಲ್ಲೀನನಾಗಿ ರಸಾನುಭೂತಿಯ ಮಹಾಸ್ರೋತವನ್ನಾಗಿ ಕಾವ್ಯವನ್ನು ಸೃಷ್ಟಿಸುತ್ತಾನೆ. ಕುವೆಂಪು ಅವರ ದೃಷ್ಟಿಯಲ್ಲಿ ಕವಿ ಕಾವ್ಯಯೋಗದಲ್ಲಿ ತನ್ಮಯನಾಗಿರುವಾಗಲೆ ಶ್ರೇಷ್ಠಕಾವ್ಯ ಹುಟ್ಟಿಕೊಳ್ಳುತ್ತದೆ. 'ಶ್ರೀರಾಮಾಯಣದರ್ಶನ'ದಲ್ಲಿ ಅವರು ಹೇಳುವ ಮಾತುಗಳಿವು :

ವಾಲ್ಮೀಕಿ
ತಮಸೆಯಿಂ ತನ್ನೆಲೆವನೆಗೆ ಮರಳ್ದು ಧ್ಯಾನದೊಳ್
ಮುಳುಗಿರಲ್ ಮಿಂಚಿತಯ್ ಕಾವ್ಯ ದಿವ್ಯಪ್ರಜ್ಞೆ,
ನವನವೋನ್ಮೇಷಶಾಲಿನಿ, ನಿತ್ಯತಾಪ್ರತಿಭೆ,
ಹೊಮ್ಮಿತಾ ದರ್ಶನಂ ಬಗೆಗಣ್ಗೆ ; ಚಿಮ್ಮಿದತ್ತೀವರ್ಣನಂ ನಾಲಗೆಗೆ...[6]

ದರ್ಶನ, ಚಿಂತನ ಅಥವಾ ಧ್ಯಾನ, ಅನಂತರ ವರ್ಣನ, ಇದು ಭಾವ ಸಾಮಾನ್ಯವಾಗಿ ರಸವನ್ನು ವ್ಯಂಜಿಸುವ ರಸರಸಾಯನ ವಿಧಾನ[7] ಎಂಬುದು ಕುವೆಂಪು ದೃಷ್ಟಿಯಾಗಿದೆ. ಪ್ರಕೃತಿಯಲ್ಲಿ ಪರಮಾತ್ಮನ ಆರಾಧನೆ ಮಾಡುವ ಕವಿಗೆ ''ರಸಾನುಭೂತಿಯ ರಸಪಥವಲ್ಲದೆ ಸತ್ಯಕೆ ಗತಿಯಿಲ್ಲ.[8]'' ''ಜಡವೆಂಬುದು ಬರಿ ಸುಳ್ಳಿದು, ಚೇತನದ ನಟನೆಯು ಲೀಲೆ'' ಎಂಬಲ್ಲಿಯೂ ಕವಿಯು ಅನನ್ಯಪರತಂತ್ರತೆಯ ದೃಷ್ಟಿಕೋನವನ್ನು ಕಾಣಬಹುದು.

ಅಂಬಿಕಾತನಯದತ್ತ...

ಸಮರಸ ಸಮನ್ವಯವೇ ಕುವೆಂಪು ಅವರ ಕಾವ್ಯಮೀಮಾಂಸೆಯಾಗಿದೆ.[4] ರಸಾನುಭವದ ಅಲೌಕಿಕತೆ, ಸಾಹಿತ್ಯದಲ್ಲಿ ಪ್ರತಿಮೆ, ಭೂಮಾನುಭೂತಿ, ಭವ್ಯತಾನುಭವಮೀಮಾಂಸೆ ಹಾಗೂ ಕವಿಕೃತಿಯ ಅನನ್ಯಪರತಂತ್ರತೆ ಈ ವಿವೇಚನೆಗಳಲ್ಲಿ ಕುವೆಂಪು ಅವರ ಕಾವ್ಯತತ್ತ್ವವಿಚಾರಧಾರೆ ಚೆಲ್ಲವರಿದಿದೆ. ಕುವೆಂಪು ಕವಿಹೃದಯವನ್ನು ವರ್ಣಿಸುವ ಕವಿತೆಯ ಸಾಲುಗಳು ಈ ಕೆಳಗಿನಂತಿವೆ :

ಕವಿಯ ಹೃದಯವೊಂದು ವೀಣೆ
ಲೋಕವದನು ಮಿಡಿವುದು
ವ್ಯಕ್ತಿತನವೆ ಕವಿಗೆ ಇಲ್ಲ ;
ಅವನು ಇಲ್ಲ ಅಥವಾ ಎಲ್ಲ
ಎಂತೊ ನಾಡಿನೊಡಲ ನಾಡಿ
ಎಂತುಟಾಸೆಯಿಹುದೊ ನೋಡಿ
ಎಂತೊ ಜನದ ಮೂಕವಾಣಿ
ಅಂತೆ ತಂತಿ ನುಡಿವುದು.[5]

ಕವಿಗೆ ವ್ಯಕ್ತಿತನವ ಇಲ್ಲ, ಅವನ ಹೃದಯವೀಣೆಯಾಗಿ ಲೋಕಸಂಗತಿಯನ್ನು ಮಿಡಿದು ಜನದ ಮೂಕವಾಣಿಗೆ ಶ್ರುತಿಯಾಗುವ ವಿಧಾನವನ್ನು ಇಲ್ಲಿ ಅವರು ಅರ್ಥಪೂರ್ಣವಾಗಿ ಹೇಳಿದ್ದಾರೆ.

ಕವಿ ಭಾವಸಮಾಧಿಯಲ್ಲಿ ತಲ್ಲೀನನಾಗಿ ರಸಾನುಭೂತಿಯ ಮಹಾಸ್ರೋತವನ್ನಾಗಿ ಕಾವ್ಯವನ್ನು ಸೃಷ್ಟಿಸುತ್ತಾನೆ. ಕುವೆಂಪು ಅವರ ದೃಷ್ಟಿಯಲ್ಲಿ ಕವಿ ಕಾವ್ಯಯೋಗದಲ್ಲಿ ತನ್ಮಯನಾಗಿರುವಾಗಲೆ ಶ್ರೇಷ್ಠಕಾವ್ಯ ಹುಟ್ಟಿಕೊಳ್ಳುತ್ತದೆ. 'ಶ್ರೀರಾಮಾಯಣದರ್ಶನ'ದಲ್ಲಿ ಅವರು ಹೇಳುವ ಮಾತುಗಳಿವು ;

ವಾಲ್ಮೀಕಿ
ತಮಸೆಯಿಂ ತನ್ನೆಲೆವನೆಗೆ ಮರಳ್ದು ಧ್ಯಾನದೊಳ್
ಮುಳುಗಿರಲ್ ಮಿಂಚಿತಯ್ ಕಾವ್ಯ ದಿವ್ಯಪ್ರಜ್ಞೆ
ನವನವೋನ್ಮೇಷಶಾಲಿನಿ, ನಿತ್ಯತಾಪ್ರತಿಭೆ,
ಹೊಮ್ಮಿತಾ ದರ್ಶನಂ ಬಗೆಗಣ್ಗೆ ; ಚಿಮ್ಮಿದತ್ತೀವರ್ಣನಂ ನಾಲಗೆಗೆ...[6]

ದರ್ಶನ, ಚಿಂತನ ಅಥವಾ ಧ್ಯಾನ, ಅನಂತರ ವರ್ಣನ, ಇದು ಭಾವ ಸಾಮಾನ್ಯವಾಗಿ ರಸವನ್ನು ವ್ಯಂಜಿಸುವ ರಸರಸಾಯನ ವಿಧಾನ[7] ಎಂಬುದು ಕುವೆಂಪು ದೃಷ್ಟಿಯಾಗಿದೆ. ಪ್ರಕೃತಿಯಲ್ಲಿ ಪರಮಾತ್ಮನ ಆರಾಧನೆ ಮಾಡುವ ಕವಿಗೆ "ರಸಾನುಭೂತಿಯ ರಸಪಥವಲ್ಲದೆ ಸತ್ಯಕೆ ಗತಿಯಿಲ್ಲ.[8]" "ಜಡವೆಂಬುದು ಬರಿ ಸುಳ್ಳಿದು, ಚೇತನದ ನಟನೆಯ ಲೀಲೆ" ಎಂಬಲ್ಲಿಯೂ ಕವಿಯ ಅನನ್ಯಪರತಂತ್ರತೆಯ ದೃಷ್ಟಿಕೋನವನ್ನು ಕಾಣಬಹುದು.

ಅಂಬಿಕಾತನಯದತ್ತರು ಕಾವ್ಯಮೀಮಾಂಸೆಯ ಅನೇಕ ಕವನಗಳನ್ನು ರಚಿಸಿದ್ದಾರೆ. 'ಸಾಹಿತ್ಯದ ವಿರಾಟ್‌ಸ್ವರೂಪ'ದಲ್ಲಿ ಸಾಹಿತ್ಯಮೀಮಾಂಸೆಯ ವ್ಯಾಪಕ ಚಿಂತನ ಭೂಮಿಕೆಯನ್ನು ಕನ್ನಡಲೋಕಕ್ಕೆ ನೀಡಿದ ಬೇಂದ್ರೆಯವರು, ಕಾವ್ಯದ್ರಷ್ಟಾರರಾಗಿ ಕವಿ

ಕಾವ್ಯ ಚಿಂತನೆಯನ್ನು ಕವಿತೆಗಳ ಮೂಲಕ ಅಭಿವ್ಯಕ್ತಿಸಿದ ರೀತಿ ಅನ್ಯಾದೃಶವಾದುದು. ಅವರು ಕಾವ್ಯಗಾರುಡಿಗರಾಗಿ ನವೋದಯಕಾವ್ಯದಲ್ಲಿ ಮಿಂಚಿನ ಹೊಳೆ ಹರಿಸಿದವರು. ಪ್ರಾಚ್ಯ-ಪಾಶ್ಚಾತ್ಯಗಳ, ಭೂತ-ವರ್ತಮಾನಗಳ, ಪರಿಮಿತಿಗಳನ್ನೆಲ್ಲಾ ಮೀರಿ ನಿಂತು ಸಾರ್ವದೇಶಿಕವೂ ಸಾರ್ವಕಾಲಿಕವೂ ಸಾರ್ವಭೌಮಿಕವೂ ಆದ ಸಾಹಿತ್ಯತತ್ತ್ವವನ್ನು ಸೋದಾಹರಣವಾಗಿ, ಸಪರಿಕರವಾಗಿ ವಿವರಿಸುವ ಕಾರ್ಯವನ್ನು ಬೇಂದ್ರೆ ಅವರು ಮಾಡಿದುದು ಸರ್ವಶ್ರುತವಾಗಿದೆ.[9] ಕಾವ್ಯದ ಸೃಷ್ಟಿವಿಧಾನದ ಬಗೆಗೆ ನಿರಂತರವಾಗಿ ಚಿಂತನ ಮಂಥನ ಮಾಡುವದೇ ಬೇಂದ್ರೆಯವರ ಕವಿವ್ಯಕ್ತಿತ್ವದ ಭಾಗವಾಗಿರುವದರಿಂದ ಅವರ ಕವಿತೆಗಳಲ್ಲಿ ಕಾವ್ಯಮೀಮಾಂಸೆ ವ್ಯಾಪ್ತವಾಗಿವೆ. "ಹಕ್ಕಿಗೆ ಗರಿ ಇದ್ದಂತೆ ಕವಿಗೆ ಕವನ" ಎಂದು ಭಾವಿಸುವ ಬೇಂದ್ರೆಯವರು—ಕವಿ ಯಾರು ಎಂಬುದನ್ನು

ನುಡಿದು ಬೇಸತ್ತಾಗ
ದುಡಿದುಡಿದು ಸತ್ತಾಗ
ಜನಕ ಹಿಗ್ಗೀನ ಹಾಡು ನೀಡಾವ[10]

ಎಂದು ಮಾರ್ಮಿಕವಾಗಿ ಹೇಳಿದ್ದಾರೆ. ಲೋಕದ ಜನ ತಮ್ಮ ದೈನಂದಿನ ಕಾರ್ಯಗಳಲ್ಲಿ ದುಡಿದು ಸೋತಾಗ ಅವರಿಗೆ ಹಿಗ್ಗಿನ ಹಾಡು ನೀಡಿ ಆನಂದ ತರುವ ಕಾರ್ಯ ಕವಿಯಿಂದಾಗುವದೆಂಬ ಬೇಂದ್ರೆಯವರ ಮಾತು ಬಹಳ ಮುಖ್ಯವಾದುದು. ಕಾವ್ಯಕ್ಕೂ ಕವಿಗೂ ಜನ್ಮಜನ್ಮಾಂತರದ ನಂಟು ಇದೆ : ಕವಿ ಬರೆದ ಕಾವ್ಯ ಕವಿಯಲ್ಲೇ ಮುಕ್ತಾಯವಾಗಬಾರದು. ಅದು ರಸಿಕನನ್ನು ಜಾಗೃತಗೊಳಿಸಿ ಮುದಗೊಳಿಸಬೇಕು.

ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ ನಿನಗೆ
ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯು ಹಣಿಸು ನನಗೆ[11]

ಕಾವ್ಯವಿರುವದು ಸಹೃದಯನಿಗಾಗಿ. ಕವಿ ತನ್ನ ವೈಯಕ್ತಿಕ ಜೀವನದಲ್ಲಿ ನೋವನ್ನು ನುಂಗಿ ನಗೆ ಚಿಮ್ಮಿಸಬೇಕು.

ಪಟ್ಟ ಪಾಡೆಲ್ಲವೂ ಹುಟ್ಟುಹಾಡಾಗುತ
ರಸವಾಗಿ ಹೊಸವಾಗಿ ಹರಿಯುತಿವೆ[12]

ಎಂದು 'ಸಖಿಗೀತ'ದಲ್ಲಿ ಬೇಂದ್ರೆಯವರು ಹೇಳಿದಹಾಗೆ ಕವಿ ಪಟ್ಟಪಾಡನ್ನೆಲ್ಲಾ ಹಾಡನ್ನಾಗಿ ಮಾಡುವ ವಿಶಿಷ್ಟಪ್ರತಿಭೆಯನ್ನು ಪ್ರಕಟಿಸಬೇಕು. ನಿಜವಾದ ಕಾವ್ಯ ಕವಿಯ ಆಳವಾದ ಅನುಭವ ಸಂವೇದನೆಗಳ ಅಭಿವ್ಯಕ್ತಿಯಾಗಿರಬೇಕೆಂಬ ಆಶಯವನ್ನು ಇದು ಧ್ವನಿಸುತ್ತದೆ. ಶ್ರೇಷ್ಠವಾದ ಕವಿತೆ "ಓಂಕಾರದ ಶಂಖನಾದಕಿಂತ ಕಿಂಚಿದೂನಾ"[13] ಎಂಬ ಬೇಂದ್ರೆಯವರ ಮಾತು ನಮ್ಮ ಆಲಂಕಾರಿಕರು ಹೇಳಿದ ಕಾವ್ಯಾನಂದವು ಬ್ರಹ್ಮಾನಂದದ

ಸೋದರ ಎಂಬುದನ್ನು ನೆನಪಿಸುತ್ತದೆ. 'ಭಾವಗೀತೆ'ಯ ಲಕ್ಷಣವನ್ನು ತಿಳಿಸುವ ಬೇಂದ್ರೆಯವರ ಕವಿತೆಯ ಸಾಲುಗಳಿವು :

ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ
ಮಸೆದ ಗಾಳಿ ಪಕ್ಕಪಡೆಯುತಿತ್ತು, ಸಹಜಪ್ರಾಸಾ
ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸಾ
ಮಾತು ಮಾತು ಮಥಿಸಿ ಬಂದ ನಾದದ ನವನೀತಾ
ಹಿಗ್ಗ ಬೀರಿ ಹಿಗ್ಗುತಿತ್ತು ತನ್ನ ತಾನೆ ಪ್ರೀತಾ
ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ[14]

ಭಾವಗೀತೆಯ ಭಾವೋತ್ಕಟತೆಯನ್ನೂ ಕಲ್ಪನಾವಿಲಾಸವನ್ನೂ ಸ್ಫೂರ್ತಿಯ ಸ್ಪಂದನವನ್ನೂ ಮಿಂಚಿ ಮಾಯವಾಗುವ ಮಂದಹಾಸವನ್ನೂ ಸೆರೆಹಿಡಿದು ನಿಲ್ಲಿಸುವ ಕವಿಪ್ರತಿಭೆಯ ಸ್ವರೂಪವನ್ನು ಬೇಂದ್ರೆಯವರು ಸ್ಫಟಿಕಸ್ಪಷ್ಟವಾಗಿ ಈ ಕವಿತೆಯಲ್ಲಿ ಸೆರೆಹಿಡಿದಿದ್ದಾರೆ. ಕವಿ ತನ್ನ ಮನದಾಳದಲ್ಲಿ ಅನುಭವಿಸಿದ ಭಾವನೆಗಳೆಲ್ಲಾ ಕಾವ್ಯರೂಪ ಪಡೆಯುತ್ತವೆಂದು ಹೇಳಲಾಗದು.

ಹಾಸಾದ ಮಿಂಚಿನಿಂದ
ಜೀಸಿದ್ದ ಸೆರಗಿನಿಂದ
ಸೆಳೆದಂತೆ ಎರಡು ನೂಲು
ಉಳಿದಾವ ನಾಕು ಸಾಲು[15]

ಬೇಂದ್ರೆಯವರು ಹೇಳಿದ ಈ ನಾಕು ಸಾಲಿನ ಕವಿತೆಯೇ ದಿಟವಾಗಿ ನಮಗೆ ಅನಂತದರ್ಶವನ್ನು ತರುವಂಥದಾಗಿರುತ್ತದೆ. ಬೇಂದ್ರೆಯವರ ಕಾವ್ಯಮೀಮಾಂಸೆ ಸೌಂದರ್ಯಮೀಮಾಂಸೆಯ ಅಂತರ್ದರ್ಶನವನ್ನೂ ಮಾಡಿಸುವುದುಂಟು.

ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ
ಕಣ್ಣಿಗು ಕಣ್ಣಾಗಿ ಒಳಗಿಹುದು
ರೂಪಲಾವಣ್ಯಕ್ಕೆ ಅಳಿಯಲು ಬಾರದು[16]

ಚತುರ್ಮುಖಿ ಸೌಂದರ್ಯದ ಉಪಾಸಕರಾದ ಬೇಂದ್ರೆ ಸೌಂದರ್ಯದರ್ಶನದ ನೂತನ ಚಿಂತನ ಭೂಮಿಕೆಯನ್ನು ಒದಗಿಸಿದ್ದಾರೆ. ಅವರ ಕಾವ್ಯಮೀಮಾಂಸೆಯಲ್ಲಿ ಪ್ರೀತಿಮೀಮಾಂಸೆಯೂ ಬೆರೆತಿದೆ.

ರಸವೆ ಜನನ
ವಿರಸ ಮರಣ
ಸಮರಸವೇ ಜೀವನ[17]

ಎಂಬ ಕವಿದೃಷ್ಟಿ ಕಾವ್ಯದ ಪರಮೋನ್ನತ ತತ್ತ್ವವಾಗಿರುವುದು ಮಹತ್ತ್ವಪೂರ್ಣ.

ಬೇಂದ್ರೆಯವರ ಕಾವ್ಯಚಿಂತನದಲ್ಲಿ ಕವಿ-ರಸಿಕರ ಅನ್ಯೋನ್ಯಸಂಬಂಧವನ್ನು ಉಳಿಸಿಕೊಂಡು ಬರುವ ಪ್ರಯತ್ನ ಎದ್ದು ಕಾಣುವಂತಹುದು. ಅವರ ದೃಷ್ಟಿಯಲ್ಲಿ ಕವಿಯಂತೆ ರಸಿಕನೂ ಸೃಷ್ಟಿಕಾರ್ಯದಲ್ಲಿ ಪಾಲುಗೊಳ್ಳುತ್ತಾನೆ. ಕವಿತೆ ಕಮಲವಾದರೆ, ರಸಿಕ ಭೃಂಗ:[18]

ಕವನಕೋಶದೀ ಕಮಲಗರ್ಭದಲಿ
ಪರಾಗವೊರಗಿಹುದು
ನಿನ್ನ ಮುಖಸ್ಪರ್ಶವೂ ಸಾಕು ; ಹೊಸ
ಸೃಷ್ಟಿಯೆ ಬರಬಹುದು[19]

ಬೇಂದ್ರೆಯವರ ದೃಷ್ಟಿಯಲ್ಲಿ ಕಾವ್ಯ ಜೀವ-ಜೀವಗಳ ಸಂಪರ್ಕದ ಭಾಷೆ. ಕಾವ್ಯ ಅಮೃತಕ್ಕೆ ಹಾರುವ ಗರುಡ. ಅವನ ಗರಿಯಲ್ಲಿಯೂ ಶರಣಾಗುವ ಶರ–ಭಾವ ಇರುವದು[20] ಎಂಬ ವಿಚಾರವು ಸೃಜನಾತ್ಮಕವಾಗಿಯೂ ಅವರ ಕವಿತೆಗಳಲ್ಲೂ ಪ್ರಕಟವಾಗಿರುವದನ್ನು ಕಂಡು ನಾವು ಬೆರಗಾಗುತ್ತೇವೆ. ಹೀಗೆ ಕವಿ ಸಹೃದಯರ ನಂಟನ್ನು, ಕಾವ್ಯ ರಸಲಹರಿಯಾಗಿ, ಗಂಧರ್ವರ ನಾಡಿನ ಅಮೃತಗಾನವಾಗಿಸುವ ಬಗೆಯನ್ನು ಅವರು ಧ್ವನಿಪೂರ್ಣವಾಗಿ ತಮ್ಮ ಅನೇಕ ಕವಿತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಜಾನಪದಕಾವ್ಯ ಜೀವನದ ಸತ್ವಸೊಗಸುಗಳನ್ನೂ ಆನಂದ ತತ್ತ್ವವನ್ನೂ ತಮ್ಮ ಸೃಜನಾತ್ಮಕ ಸಂವೇದನೆಯಾಗಿಸಿಕೊಂಡು ವಿವೇಚಿಸಿದ ರೀತಿ ನವೋದಯ ಕಾವ್ಯತತ್ತ್ವಕ್ಕೆ ವಿಶಿಷ್ಟ ಆಯಾಮವನ್ನು ಒದಗಿಸಿದೆ.

ಕನ್ನಡ ನವೋದಯಕಾವ್ಯದಲ್ಲಿ ಚಿಂತನಪರ ಕವಿಯಾಗಿರುವ ಪು.ತಿ.ನ. ಅವರು ರಸನಿಷ್ಠ ಪರಂಪರೆಯಲ್ಲಿ ಕಾವ್ಯ ರಚಿಸಿದವರಾಗಿದ್ದಾರೆ. ಅವರು 'ನನ್ನ ಹಾಡು' ಕವಿತೆಯಲ್ಲಿ

ಎದೆಯದುಗುಡವೆಲ್ಲವಳಿದು
ಕಣ್ಣನೀರು ಬತ್ತಿಹೋಗಿ
ಕರೆ ಆದೊಂದು ಮಾತ್ರ ನಿಲ್ಲೆ
ನನ್ನ ಹಾಡು ಬಿರಿವುದು[21]

ಎಂದಿದ್ದಾರೆ. ಕಾವ್ಯ ಸಹಜ ಸ್ಫೂರ್ತಿಯ ಫಲವಾಗಿ ಚಿಮ್ಮುವಾಗ ಹೃದಯದ ಭಾವಗಳನ್ನು ಶೃತಿಗೊಳಿಸುವದನ್ನು ವ್ಯಕ್ತಪಡಿಸಿದ್ದಾರೆ. 'ಜಗ ಚೆಲುವೆನ್ನುವ ಬಗೆಯನುರಣನೆ/ವಿಶ್ವಾತ್ಮನ ನಿರ್ಹೇತುಕ ಕರುಣೆ' ಎಂದ ಪು.ತಿ.ನ. ಅವರು ಕಾವ್ಯದ ಮೂಲಕ ಒದಗಿಬರುವ ಸೌಂದರ್ಯ ಸಾಕ್ಷಾತ್ಕಾರವನ್ನು ಬಹಳ ಮಾರ್ಮಿಕವಾಗಿ ತಿಳಿಸಿದ್ದಾರೆ. ಪು.ತಿ.ನ ಅವರು ಬರೆದ 'ರಸಸರಸ್ವತಿ'ಯಲ್ಲೂ ಅವರ ಕಾವ್ಯಮೀಮಾಂಸೆಯ ಗಾಢಚಿಂತನೆಯಿದೆ.

ಜಿ. ಎಸ್. ಶಿವರುದ್ರಪ್ಪನವರು ಕಾವ್ಯಮೀಮಾಂಸೆಯ ಚಿಂತನಶೀಲತೆಯನ್ನು ನಿರಂತರವಾಗಿ ನಡೆಸುತ್ತಲಿದ್ದಾರೆ. ಅವರ ಕಾವ್ಯತತ್ವಜಿಜ್ಞಾಸೆ ಅನೇಕ ಕವಿತೆಗಳಲ್ಲಿ ಕಾವ್ಯಶಿಲ್ಪ ಪಡೆದಿದೆ. ಈ ದೃಷ್ಟಿಯಿಂದ ಅವರ ಕಾವ್ಯಮೀಮಾಂಸೆಯ ಕವನಗಳನ್ನು ಪರಿಶೀಲಿಸಬಹುದು. 'ಕಾವ್ಯಕೃಪೆ'[22] ಕವಿತೆಯು ಕವಿಯ ಅಂತರಂಗ ಕಾವ್ಯಾಗಮನಕ್ಕಾಗಿ ಸತತವಾಗಿ ಪುಟಿಯುತ್ತಿರುವದನ್ನು ತಿಳಿಸುತ್ತದೆ. ಹೃದಯಾಂತರಾಳದಲ್ಲಿ ಹೊಮ್ಮುವ ನೋವನ್ನು, ಶ್ರೀಮಂತವಾದ ಅನುಭವಸಾರವನ್ನು, ಸಾಂತವಾದ ಭಾಷೆಯಲ್ಲಿ ಪ್ರಕಟಿಸುವ ಕವಿಕಾರ್ಯ ಬಹುದೊಡ್ಡದು. ಜಗದ ಶ್ರೀಮಂತಿಕೆಯನ್ನು ಅಂತರಂಗದ ಅನಂತ ಧೀಮಂತಲೋಕದಲ್ಲಿ ತನ್ನದಾಗಿಸುತ್ತ ಸಾಗುವ ಕವಿಯ ಕಾವ್ಯ ಲೋಕಸಂಗತಿಯನ್ನು

ಮಿಡಿಯುತ್ತದೆ. ಅದಕ್ಕಾಗಿಯೇ ಕಾವ್ಯಕೃಪೆಗೆ ಕವಿಹೃದಯ ಸದಾ ಮಣಿದಿದೆ ಎಂದು ಅವರು ಭಾವಿಸಿದ್ದಾರೆ. 'ಕಾವ್ಯಮಾರ್ಗ'[23] ಎಂಬ ಕವಿತೆಯಲ್ಲಿ ಕಾವ್ಯ ನಿತ್ಯನಿರಂತರ ನಿತ್ಯನೂತನವಾದದ್ದರಿಂದ, ''ಕಾವ್ಯಕೆ ಶಾಸ್ತ್ರವೇಕೆ ?'' ಎಂಬುದು ಕವಿಪ್ರಶ್ನೆಯಾಗಿದೆ.

ಹಾಡುಹಳೆಯದಾದರೇನು
ಭಾವ ನವನವೀನ
ಎದೆಯ ಭಾವ ಹೊಮ್ಮುವುದಕೆ
ಭಾಷೆ ಒಂದು ಸಾಧನ[24]

ಎದೆ ತುಂಬಿದ ಹಾಡನ್ನು ಕೇಳುವ ಆಸೆ ಸಹೃದಯನಿಗಿರುವಾಗ ಕವಿ ತನ್ನ ಮನದುಂಬಿ ಹೃದಯ ತೆರೆದು ಹಾಡುವ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಾನೆ. ''ಹಾಡುಪಕ್ಕಿಗೆ ಬೇಕೆ ಬಿರುದು ಸನ್ಮಾನ ?''[25] ಎಂದು ಪ್ರಶ್ನಿಸಿದ ಶಿವರುದ್ರಪ್ಪನವರು, ಕವಿಗೆ ''ಕವಿತೆಯ ಮೂಲಕ ಸಹೃದಯನನ್ನು ಸಂತೋಷಪಡಿಸುವದೇ ತೃಪ್ತಿಯಾಗಿರುತ್ತದೆ, ಯಾರು ಕಿವಿ ಮುಚ್ಚಿದರೂ ತನಗೆ ಚಿಂತೆಯಿಲ್ಲದೆ ಹಾಡುವದು ಕವಿಯ ಕೆಲಸ'' ಎಂಬ ಆಶಯವನ್ನು 'ತೃಪ್ತಿ' ಕವಿತೆಯಲಿ ವ್ಯಕ್ತಮಾಡಿದ್ದಾರೆ. ಇದು ಭಾರತೀಯ ಕಾವ್ಯಮೀಮಾಂಸೆಯಲ್ಲಿ ಹೇಳಿದ 'ಕಾವ್ಯಂ ಸಹೃದಯಂ ಆನಂದಾಯ' ಹಾಗೂ 'ಕಾವ್ಯಂ ಸ್ವಾಂತಸ್ಸುಖಾಯ' ಎಂಬುದನ್ನು ಸ್ಮರಣೆಗೆ ತಂದುಕೊಡುತ್ತದೆ[26] 'ಕವಿಯ ಮನಸು' ಎಂಬ ಕವಿತೆಯಲ್ಲಿ

ಪ್ರಕೃತಿಯಂತೆ ಕವಿಯ ಮನಸು
ವಿಪುಲರೂಪಧಾರಿಣಿ
ಬೊಮ್ಮನೆದೆಯ ಕನಸಿನಂತೆ
ಕೋಟಿಕಲ್ಪಗಾಮಿನಿ[27]

ಎಂದು ಕವಿಕಾರ್ಯವನ್ನು ವಿದಿತಪಡಿಸಿದ್ದಾರೆ. ನಿಸರ್ಗದ ಸೌಂದರ್ಯೋಪಾಸನೆಯೂ ಕವಿಗೆ ಮುಖ್ಯವೆಂಬ ಆಶಯವು 'ಪ್ರಕೃತಿ–ಕವಿ' ಕವಿತೆಯಲ್ಲಿ ಕಾಣುತ್ತದೆ. ಶಿವನ ಜಡೆಯಿಂದ ಗಂಗೆ ಬುವಿಗೆ ಇಳಿದು ಬಂದಂತೆ ಪ್ರಕೃತಿ ಕವಿಯ ಹತ್ತಿರ ಬಂದಿದೆ. ನಿಸರ್ಗದ ನೂರಾರು ಭಾವ ಕಾವ್ಯರೂಪ ಪಡೆದಿವೆ. ಋತುಗಾನದಲ್ಲಿ ನೂರು ಬಗೆಯ ಅಚ್ಚರಿಗಳ ರಸಕೋಶ ನಿರ್ಮಿಸಿದೆ. ಹೀಗೆ ಕವಿ ಸೌಂದರ್ಯಪ್ರಪಂಚದಲ್ಲಿ ನಿಸರ್ಗದೊಡನೆ ತಾದಾತ್ಮ್ಯ ಹೊಂದುವ ಬಗೆಯನ್ನು ವಿಶದಪಡಿಸಲಾಗಿದೆ. 'ಕಾವ್ಯಕೆ ನಮನ'[28] ಎಂಬ ಕವಿತೆಯಲ್ಲಿ ಕಾವ್ಯದ ಅನಂತವೈಭವಕ್ಕೆ ಕವಿ ಶರಣು ಹೇಳಿದ್ದಾರೆ. ಕಾವ್ಯ ಸ್ಫೂರ್ತಿಯ ಫಲ, ಕನಸು ನನಸಾದಂತೆ ಕಾವ್ಯಸ್ಫೂರ್ತಿ ಚಿಮ್ಮಿದೆ, ಮಂದಾರದ ಸುಗಂಧ ಹರಡಿದಂತೆ ಆನಂದದ ಸೌಂದರ್ಯಬಿಂದು ಕಾವ್ಯದ ಮೂಲಕ ಬಂದಿಳಿದಿದೆ, ಕಾವ್ಯದಿಂದಾಗಿಯೇ ಕವಿ ಜಗದೊಲವನ್ನು ಪಡೆಯುತ್ತಾನೆ. ಅದಕ್ಕಾಗಿಯೇ 'ಕಾವ್ಯಕೆ ನಮನ'—ಎಂದಿದ್ದಾರೆ.

ಕವಿಗೂ ಸಹೃದಯನಿಗೂ ಇರುವ ಸಂಬಂಧದಂತೆ ಕವಿಗೂ ಕಾವ್ಯಕ್ಕೂ ಇರುವ ಸಂಬಂಧ ಅವ್ಯಾಜವಾದದ್ದು, ದೈವಾಯತ್ತವಾದ ಪ್ರತಿಭೆ ಕವಿ–ಕಾವ್ಯಗಳ ನಂಟಿಗೆ ಕಾರಣವಾಗುತ್ತದೆ. ಈ ಪ್ರತಿಭೆ ಬೆಳಕಿದ್ದಂತೆ. ಇದರಿಂದಲೇ ಕಾವ್ಯದ ಸೃಜನಕ್ರಿಯೆ ನಿರಂತರ

ವಾಗುತ್ತದೆಂಬ ಆಶಯವನ್ನು 'ಕವಿಕಾವ್ಯಕೆ' ಎಂಬ ಕವಿತೆಯಲ್ಲಿ ಅವರು ಹೇಳಿದ್ದಾರೆ.

'ಕವಿತೆಗೆ' ಎಂಬುದರಲ್ಲಿ ಕಾವ್ಯಸ್ಫೂರ್ತಿಯ ಆಶಯದ ವಿಚಾರವೇ ಪ್ರಧಾನವಾಗಿದೆ.

ಇಲ್ಲ ಇನ್ನು ಬರೆಯಲಾರೆ
ತೆರೆಯಲಾರೆ ಹೃದಯವ
ಇನ್ನೇತಕೆ ನಿನ್ನ ಹಂಗು
ಕಾವ್ಯಸ್ಫೂರ್ತಿ ಚಂಚಲೆ[29]

ಕಾವ್ಯಸ್ಫೂರ್ತಿ ಸದಾ ಚಂಚಲೆಯೆಂಬುದು ಕವಿಯ ಭಾವ. ತಾನು ಹೃದಯ ತೆರೆದು ಬರೆಯಲಾರ. ಏಕೆಂದರೆ ಮಿಂಚಿನ ಕ್ಷಣಗಳನ್ನು ಹಿಡಿದಿಡಲಾಗುವುದಿಲ್ಲ, ಬೂದಿಯಲ್ಲಿ ಬಿದ್ದ ಕಿಡಿಗಳನ್ನು ಹುಡುಕಲಾಗುವುದಿಲ್ಲ. ಇದು ಇಲ್ಲಿಯ ಆಶಯ. ''ಸ್ಫೂರ್ತಿ ಪ್ರತಿಭೆ''[30] ಎಂಬ ಎರಡು ಸಾಲಿನ ಕವಿತೆಯಲ್ಲಿ ಅವೆರಡರ ಸಾವಯವ ಸಂಬಂಧದಿಂದ ಉಂಟಾಗುವ ಕಾವ್ಯದ ಅಮೃತಧಾರೆಯನ್ನು ಸುಂದರಪ್ರತಿಮೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

ಸ್ಫೂರ್ತಿಯ ಕರು ಬಾಯಿಕ್ಕಲು ಪ್ರತಿಭೆಯ ಕೆಚ್ಚಲಿಗೆ
ಶಬ್ದಾರ್ಥದ ಹಾಲಿಳಿವುದು ಕವಿ ಪಾತ್ರೆಯ ಒಳಗೆ

ಸ್ಫೂರ್ತಿಯನ್ನು ಕರುವಿಗೂ ಪ್ರತಿಭೆಯನ್ನು ಕೆಚ್ಚಲಿಗೂ ಪ್ರತಿಮಿಸಿ ಕಾವ್ಯಧಾರೆ ಹಾಲಿನ ಅಮೃತಸಿಂಚನದಂತೆ ಸುರಿಯುವುದನ್ನು ಮನೋಜ್ಞವಾಗಿ ಬಣ್ಣಿಸಲಾಗಿದೆ. 'ಪ್ರತಿಭೆ–ಪಾಂಡಿತ್ಯ'[31] ಕವಿತೆಯಲ್ಲಿ ಅವೆರಡೂ ನಳ–ಋತುಪರ್ಣರ ಸಂಬಂಧದಂತೆ ವಿಶಿಷ್ಟಶಕ್ತಿ ವಿಶೇಷಗಳಾಗಿದ್ದು, ಅವೆರಡೂ ಸಹೃದಯನನ್ನು ಸದಾ ಬೆರಗುಗೊಳಿಸುತ್ತಿರುತ್ತವೆಂದು ತಿಳಿಸಲಾಗಿದೆ.

ಈ ಮನೆಯಲ್ಲಿ ನನಗೆ ಒಂದಿಷ್ಟು ಜಾಗಕೊಡಿ
ನಾನೊಬ್ಬ ಕವಿ. ನನಗೆ ಬೇಕಾದದ್ದು ಹೃದಯ
ವಿರುವಂಥ ಐದೋ ಆರೋ ಕಿವಿ[32]

ಎನ್ನುವಲ್ಲಿಯೂ ಕವಿ–ಸಹೃದಯರ ನಂಟನ್ನು ವಿಶದಪಡಿಸಲಾಗಿದೆ. 'ಕವಿ ಕವಿತೆ ರಚಿಸುವುದು ಸುಮ್ಮನಿರಲಾರದ್ದಕ್ಕೆ. ತನ್ನ ಸಂವೇದನೆ ಕ್ರಿಯೆ ಪ್ರತಿಕ್ರಿಯೆ ದಾಖಲಿಸುವುದಕ್ಕೆ' ನಿಂತ ನೀರಾಗದೆ ಹರಿಯುವುದಕ್ಕೆ ಎಂಬ ಆಶಯವನ್ನು ಶಿವರುದ್ರಪ್ಪನವರು 'ನಾನೇಕೆ ಬರೆಯುತ್ತೇನೆ' ಕವಿತೆಯಲ್ಲಿ ಹೇಳಿದ್ದಾರೆ.[33] ಕವಿ ತನ್ನ ಅಂತರಿಕ ನೋವನ್ನು ನುಂಗಿ, ಸಾಮಾಜಿಕ ಸ್ಪಂದನಕ್ಕೆ ವಾಣಿಯಾಗಬೇಕೆಂಬ ವಿಚಾರವನ್ನು ಪ್ರತಿಪಾದಿಸಿದ ಶಿವರುದ್ರಪ್ಪನವರು 'ಬನ್ನಿ ನನ್ನ ಹೃದಯಕೆ'[34] ಎಂಬ ಕವಿತೆಯಲ್ಲಿ ಸಾಮಾಜಿಕನನ್ನು ಕವಿಯ ಅಂತರಂಗಕ್ಕೆ ಕರೆತಂದು ಅವನ ವೇದನೆಯ ಮಿಡಿತವನ್ನು ಕಾವ್ಯವಾಗಿಸುವ ವಿಚಾರವನ್ನು ಒತ್ತಿ ಹೇಳಿದ್ದಾರೆ. ಹೀಗೆ ಭಾವವಿಹಾರಿಯಾದ ಕವಿ ಸಾಮಾಜಿಕ ಸ್ಪಂದನದ ವಾಣಿಯಾಗಬೇಕೆಂಬ ಅಂಶವನ್ನು ಹೇಳಿದ ಶಿವರುದ್ರಪ್ಪನವರು ಜೀವನವನ್ನು ಪ್ರೀತಿಸಿದಂತೆ ಕಾವ್ಯಸೃಷ್ಟಿಯ ಬಗೆಗೆ ಕವಿತೆಗಳ ಮೂಲಕ ನಿರಂತರ ಚಿಂತನ–ಮಂಥನ ನಡೆಸಿದ್ದಾರೆ.

ವಾಗುತ್ತದೆಂಬ ಆಶಯವನ್ನು 'ಕವಿಕಾವ್ಯಕೆ' ಎಂಬ ಕವಿತೆಯಲ್ಲಿ ಅವರು ಹೇಳಿದ್ದಾರೆ.

'ಕವಿತೆಗೆ' ಎಂಬುದರಲ್ಲಿ ಕಾವ್ಯಸ್ಫೂರ್ತಿಯ ಆಶಯದ ವಿಚಾರವೇ ಪ್ರಧಾನವಾಗಿದೆ.

ಇಲ್ಲ ಇನ್ನು ಬರೆಯಲಾರೆ
ತೆರೆಯಲಾರೆ ಹೃದಯವ
ಇನ್ನೇತಕೆ ನಿನ್ನ ಹಂಗು
ಕಾವ್ಯಸ್ಫೂರ್ತಿ ಚಂಚಲೆ[29]

ಕಾವ್ಯಸ್ಫೂರ್ತಿ ಸದಾ ಚಂಚಲೆಯೆಂಬುದು ಕವಿಯ ಭಾವ. ತಾನು ಹೃದಯ ತೆರೆದು ಬರೆಯಲಾರ. ಏಕೆಂದರೆ ಮಿಂಚಿನ ಕ್ಷಣಗಳನ್ನು ಹಿಡಿದಿಡಲಾಗುವುದಿಲ್ಲ, ಬೂದಿಯಲ್ಲಿ ಬಿದ್ದ ಕಿಡಿಗಳನ್ನು ಹುಡುಕಲಾಗುವುದಿಲ್ಲ. ಇದು ಇಲ್ಲಿಯ ಆಶಯ. "ಸ್ಫೂರ್ತಿ ಪ್ರತಿಭೆ"[30] ಎಂಬ ಎರಡು ಸಾಲಿನ ಕವಿತೆಯಲ್ಲಿ ಅವೆರಡರ ಸಾವಯವ ಸಂಬಂಧದಿಂದ ಉಂಟಾಗುವ ಕಾವ್ಯದ ಅಮೃತಧಾರೆಯನ್ನು ಸುಂದರಪ್ರತಿಮೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

ಸ್ಫೂರ್ತಿಯ ಕರು ಬಾಯಿಕ್ಕಲು ಪ್ರತಿಭೆಯ ಕೆಚ್ಚಲಿಗೆ
ಶಬ್ದಾರ್ಥದ ಹಾಲಿಳಿವುದು ಕವಿ ಪಾತ್ರೆಯ ಒಳಗೆ

ಸ್ಫೂರ್ತಿಯನ್ನು ಕರುವಿಗೂ ಪ್ರತಿಭೆಯನ್ನು ಕೆಚ್ಚಲಿಗೂ ಪ್ರತಿಮಿಸಿ ಕಾವ್ಯಧಾರೆ ಹಾಲಿನ ಅಮೃತಸಿಂಚನದಂತೆ ಸುರಿಯುವುದನ್ನು ಮನೋಜ್ಞವಾಗಿ ಬಣ್ಣಿಸಲಾಗಿದೆ. 'ಪ್ರತಿಭೆ–ಪಾಂಡಿತ್ಯ'[31] ಕವಿತೆಯಲ್ಲಿ ಅವೆರಡೂ ನಳ–ಋತುಪರ್ಣರ ಸಂಬಂಧದಂತೆ ವಿಶಿಷ್ಟಶಕ್ತಿ ವಿಶೇಷಗಳಾಗಿದ್ದು, ಅವೆರಡೂ ಸಹೃದಯನನ್ನು ಸದಾ ಬೆರಗುಗೊಳಿಸುತ್ತಿರುತ್ತವೆಂದು ತಿಳಿಸಲಾಗಿದೆ.

ಈ ಮನೆಯಲ್ಲಿ ನನಗೆ ಒಂದಿಷ್ಟು ಜಾಗಕೊಡಿ
ನಾನೊಬ್ಬ ಕವಿ. ನನಗೆ ಬೇಕಾದದ್ದು ಹೃದಯ
ವಿರುವಂಥ ಐದೋ ಆರೋ ಕಿವಿ[32]

ಎನ್ನುವಲ್ಲಿಯೂ ಕವಿ–ಸಹೃದಯರ ನಂಟನ್ನು ವಿಶದಪಡಿಸಲಾಗಿದೆ. 'ಕವಿ ಕವಿತೆ ರಚಿಸುವುದು ಸುಮ್ಮನಿರಲಾರದ್ದಕ್ಕೆ. ತನ್ನ ಸಂವೇದನೆ ಕ್ರಿಯೆ ಪ್ರತಿಕ್ರಿಯೆ ದಾಖಲಿಸುವುದಕ್ಕೆ' ನಿಂತ ನೀರಾಗದೆ ಹರಿಯುವುದಕ್ಕೆ ಎಂಬ ಆಶಯವನ್ನು ಶಿವರುದ್ರಪ್ಪನವರು 'ನಾನೇಕೆ ಬರೆಯುತ್ತೇನೆ' ಕವಿತೆಯಲ್ಲಿ ಹೇಳಿದ್ದಾರೆ.[33] ಕವಿ ತನ್ನ ಅಂತರಿಕ ನೋವನ್ನು ನುಂಗಿ, ಸಾಮಾಜಿಕ ಸ್ಪಂದನಕ್ಕೆ ವಾಣಿಯಾಗಬೇಕೆಂಬ ವಿಚಾರವನ್ನು ಪ್ರತಿಪಾದಿಸಿದ ಶಿವರುದ್ರಪ್ಪನವರು 'ಬನ್ನಿ ನನ್ನ ಹೃದಯಕೆ'[34] ಎಂಬ ಕವಿತೆಯಲ್ಲಿ ಸಾಮಾಜಿಕನನ್ನು ಕವಿಯ ಅಂತರಂಗಕ್ಕೆ ಕರೆತಂದು ಅವನ ವೇದನೆಯ ಮಿಡಿತವನ್ನು ಕಾವ್ಯವಾಗಿಸುವ ವಿಚಾರವನ್ನು ಒತ್ತಿ ಹೇಳಿದ್ದಾರೆ. ಹೀಗೆ ಭಾವವಿಹಾರಿಯಾದ ಕವಿ ಸಾಮಾಜಿಕ ಸ್ಪಂದನದ ವಾಣಿಯಾಗಬೇಕೆಂಬ ಅಂಶವನ್ನು ಹೇಳಿದ ಶಿವರುದ್ರಪ್ಪನವರು ಜೀವನವನ್ನು ಪ್ರೀತಿಸಿದಂತೆ ಕಾವ್ಯಸೃಷ್ಟಿಯ ಬಗೆಗೆ ಕವಿತೆಗಳ ಮೂಲಕ ನಿರಂತರ ಚಿಂತನ–ಮಂಥನ ನಡೆಸಿದ್ದಾರೆ.

ಚೆನ್ನವೀರಕಣವಿಯವರು ಕಾವ್ಯದ ಸೃಜನಕ್ರಿಯೆಯಲ್ಲಿ ನಿರಂತರವಾಗಿ ಶ್ರಮಿಸಿದವರು. ಕಾವ್ಯದ ಸೃಷ್ಟಿವಿಧಾನದ ಬಗೆಗೆ ತಮ್ಮ ವಿಮರ್ಶನ ಪ್ರಬಂಧಗಳಲ್ಲೂ ಕವಿತೆಗಳಲ್ಲೂ ಚರ್ಚಿಸಿದ್ದಾರೆ. ಕಣವಿಯವರ 'ಸ್ಫೂರ್ತಿ' ಕವಿತೆ ಕಾವ್ಯಮೀಮಾಂಸೆಯ ದೃಷ್ಟಿಯಿಂದ ಬಹಳ ಮುಖ್ಯವಾದುದು. ಪ್ರತಿಭೆಯ ಅಂತಃಶಕ್ತಿಯೇ ಸ್ಫೂರ್ತಿಯೆಂಬುದು ಅವರ ಸ್ಪಷ್ಟವಿಚಾರ.

ಅರಿವಿನಾಳದ ಭಾವ ಕಲ್ಪನೆಯುದಾತ್ತತೆಗೆ
ಜೀವದುಸಿರಾಡಿಸುವ ಸ್ಫೂರ್ತಿಕನ್ಯೆ!
ನಿನ್ನ ದರ್ಶನಫಲಕೆ ಸ್ಪರ್ಶನದ ಚೇತನೆಗೆ
ದೇಹ ರೋಮಾಂಚಿತವು ಎದೆಯ ರನ್ನೆ![35]

ಬಳ್ಳಿಯಲಿ ಹೂ ಅರಳಿದಂತೆ, ಹೃದಯವೀಣೆಯ ನಿನಾದದಂತೆ ಮೂಡಿಬರುವ ಕವಿತೆಗೆ ಸ್ಫೂರ್ತಿಯು ಹಾಡಿನೊಡತಿಯಾದುದನ್ನು ಕವಿ ಕಣವಿ ವರ್ಣಿಸಿದ್ದಾರೆ. ಕಾವ್ಯದ ಮೂಲಕ ಕವಿ ಸತ್ಯಶಿವಸೌಂದರ್ಯಗಳ ದರ್ಶನವನ್ನು ಒದಗಿಸುತ್ತಾನೆಂಬ ಮಾತನ್ನೂ ಕಣವಿಯವರು ಇನ್ನೊಂದು ಕವಿತೆಯಲ್ಲಿ ವಿದಿತಪಡಿಸಿದ್ದಾರೆ. ಕೆಲವರು ಸಮಕಾಲೀನ ಕವಿಗಳನ್ನು ಕುರಿತ ಕಣವಿಯವರ ಸುನೀತಗಳು ಕವಿಪರಂಪರೆಯ ಬಗೆಗಿನ ಕವಿಯ ಆದರವನ್ನೂ ಪ್ರೀತಿ ನಿಷ್ಠೆಗಳನ್ನೂ ವ್ಯಕ್ತಪಡಿಸುತ್ತವೆ.

ನವೋದಯ ಕವಿಗಳ ಕವಿತೆಗಳಲ್ಲಿ ಕಾವ್ಯಮೀಮಾಂಸೆಯ ಚಿಂತನೆ ವಿಸ್ತಾರವಾಗಿ ಪ್ರಕಟವಾಗಿದೆ. ಮುಖ್ಯವಾಗಿ ಭಾರತೀಯ ಹಾಗೂ ಪಾಶ್ಚಾತ್ಯ ಕಾವ್ಯತತ್ತ್ವವಿಚಾರಗಳ ಸಮನ್ವಯವನ್ನು ಸಾಧಿಸುವಲ್ಲಿ ಕವಿಗಳು ಆಶಿಸಿರುವುದನ್ನು ನಾವು ಕಾಣಬಹುದು. ಭಾರತೀಯ ಕಾವ್ಯಮೀಮಾಂಸೆಯ ತಿರುಳಾದ ಕಾವ್ಯದ ರಸೋನ್ನತಿಯ ವಿಚಾರವನ್ನು ನವೋದಯ ಕವಿಗಳು ಅರ್ಥಪೂರ್ಣವಾಗಿ ಪ್ರತಿಪಾದಿಸಿದ್ದಾರೆ. ಈ ರಸ ಸಂಪ್ರದಾಯವು ನವೋದಯ ಕಾವ್ಯಪರಂಪರೆಯ ಪ್ರಮುಖ ಲಕ್ಷಣವಾಗಿರುವುದನ್ನು ನಾವು ಗುರುತಿಸಬಹುದು. ಪಾಶ್ಚಾತ್ಯ ವಿಚಾರಧಾರೆಯಲ್ಲಿ ಬರುವ ಸ್ಫೂರ್ತಿ (Inspiration) ತತ್ತ್ವ ನವೋದಯ ಕವಿಗಳ ಚಿಂತನದಲ್ಲಿ ಚೆಲ್ಲವರಿದಿದೆ. ಬೇಂದ್ರೆಯವರು ಹೇಳಿದ ಹಾಗೆ,

ನೂರು ಮರ ನೂರು ಸ್ವರ
ಒಂದೊಂದು ಅತಿಮಧುರ
ಬಂಧವಿರದ ಬಂಧುರ
ಸ್ವಚ್ಛಂದ ಸುಂದರ

ಎಂಬ ಮಾತಿನಂತೆ, ನವೋದಯಕಾವ್ಯ ನಿರ್ಬಂಧದಿಂದ ಸ್ವಚ್ಛಂದತೆಯತ್ತ ವಿಹರಿಸಿದ್ದನ್ನು ನಾವು ಕಾಣುತ್ತೇವೆ . ಭಾವಲೋಕದ ವಿಹಾರಯಾತ್ರೆ ಕೈಕೊಂಡ ಕವಿ ಕಂಡ ಸೌಂದರ್ಯದರ್ಶನ ಕಾವ್ಯದಲ್ಲಿ ಮೂರ್ತಸ್ವರೂಪ ಪಡೆದಿದೆ. ಕಾವ್ಯಮೀಮಾಂಸೆಯಲ್ಲಿ ಸೌಂದರ್ಯಮೀಮಾಂಸೆಯೂ ಸೇರಿ ವಿಶಿಷ್ಟತೆ ಪಡೆದುಕೊಂಡದ್ದನ್ನು ಕಾಣಬಹುದು. ಕವಿಯ ಅನನ್ಯ ಪರತಂತ್ರತೆಯನ್ನೂ ವ್ಯಕ್ತಿವಿಶಿಷ್ಟತೆಯನ್ನೂ ನವೋದಯ ಕಾವ್ಯ

ಮೀಮಾಂಸೆ ವಿದಿತಪಡಿಸುತ್ತದೆ. ಕಾವ್ಯಕ್ಕೂ ಸಹೃದಯನಿಗೂ ಇರುವ ಸಂಬಂಧವನ್ನು ನವೋದಯ ಕವಿಗಳು ಮತ್ತೆಮತ್ತೆ ಸ್ಥಿರಪಡಿಸುವ ಧ್ವನಿಯನ್ನು ಎತ್ತರಿಸಿದ್ದಾರೆ. ಕಾವ್ಯಭಾಷೆ ಭಾವೋಪಯೋಗಿಯಾಗಿರುವಂತೆ ಲೋಕೋಪಯೋಗಿಯಾಗಬೇಕೆಂದೂ ಆಶಿಸಲಾಗಿದೆ. ನವೋದಯಕಾವ್ಯ ಜನಜೀವನದ ಅನುಭವಕ್ಕೆ ಮೂಕವೇದನೆಗೆ ಶ್ರುತಿಯಾಗಬೇಕೆಂಬ ಲವಲವಿಕೆಯ ಮಾತು ಕಾವ್ಯಮೀಮಾಂಸೆಯ ಕವಿತೆಗಳಲ್ಲಿದೆ. ಭಾರತೀಯ ದರ್ಶನಸಾರವಾದ ಸತ್ಯ, ಶಿವ, ಸುಂದರ ಎಂಬುದನ್ನು ಸಾಕಾರಗೊಳಿಸುವದೇ ನವೋದಯ ಕವಿಗಳ ಪ್ರಮುಖ ಧ್ಯೇಯವಾಗಿತ್ತೆಂಬ ಅಂಶವು ಗಮನಾರ್ಹವಾದುದು.

## ಅಡಿಟಿಪ್ಪಣಿ

1. ಕೆ. ಕೃಷ್ಣಮೂರ್ತಿ : 'ಕನ್ನಡದಲ್ಲಿ ಕಾವ್ಯತತ್ತ್ವ', 'ರಸೋಲ್ಲಾಸ' ಪರಿಶೀಲಿಸಿ.
2. ಪು. ೮೪–೮೫
3. ಡಿ.ವಿ.ಜಿ : 'ಜೀವನ ಸೌಂದರ್ಯ ಮತ್ತು ಸಾಹಿತ್ಯ', ಪುಟ ೩೪
4. ಕೆ. ಕೃಷ್ಣಮೂರ್ತಿ : ಕುವೆಂಪು ಕಾವ್ಯಮೀಮಾಂಸೆ, 'ಗಂಗೋತ್ರಿ', ಪುಟ ೫೨೧
5. 'ಕೋಗಿಲೆ ಮತ್ತು ಸೋವಿಯತ್ ರಷ್ಯ', ಪುಟ ೮೬
6. 'ಶ್ರೀರಾಮಾಯಣದರ್ಶನಂ', ಪಂಕ್ತಿ ೪೭–೫೨
7. ಪ್ರಭುಶಂಕರ : 'ಕನ್ನಡದಲ್ಲಿ ಭಾವಗೀತೆ', ಪುಟ ೧೭
8. ಕುವೆಂಪು : 'ಪಕ್ಷಿಕಾಶಿ', ಪುಟ ೧೨
9. ಕೆ. ಕೃಷ್ಣಮೂರ್ತಿ : ಸಾಹಿತ್ಯ ವಿಮರ್ಶಕ ಬೇಂದ್ರೆ, 'ಇಳಿದು ಬಾ ತಾಯಿ', ಪುಟ ೬೪
10. 'ಸಖಿಗೀತ', ಪುಟ ೪೭
11. 'ನಾದಲೀಲೆ'
12. 'ಸಖಿಗೀತ' ಪುಟ ೭
13. ನಾದಲೀಲೆ, ಪುಟ ೮೪
14. 'ಭಾವಗೀತೆ' ಗರಿ
15. 'ಗಂಗಾವತರಣ' ಪುಟ ೧೯
16. 'ಸಖಿಗೀತ'
17. ಮೂರ್ತಿ ಮತ್ತು ಕಾಮಕಸ್ತೂರಿ, ಪುಟ ೨೮
18. ಜಿ. ಎಸ್. ಆಮೂರ : 'ಬೇಂದ್ರೆಯವರ ಕಾವ್ಯದಲ್ಲಿ ಪ್ರಜ್ಞೆ ಮತ್ತು ಪ್ರಯೋಗ' ; 'ಆಧುನಿಕ ಕನ್ನಡ ಕಾವ್ಯ' ಪುಟ ೧೭
19. ಪರಾಗ, ಸಖಿಗೀತ
20. ಸಾಹಿತ್ಯದ ವಿರಾಟ್‌ಸ್ವರೂಪ, ಪುಟ. ೮೪
21. ನನ್ನ ಹಾಡು, 'ಹಣತೆ'
22. ಸಮಗ್ರಕಾವ್ಯ, ಪುಟ ೨೬–೨೭
23. ಅದೇ, ಪುಟ ೫೬
24. ಅದೇ, ಪುಟ ೫೭
25. ಅದೇ, ಪುಟ ೬೨

ಮೀಮಾಂಸೆ ವಿದಿತಪಡಿಸುತ್ತದೆ. ಕಾವ್ಯಕ್ಕೂ ಸಹೃದಯನಿಗೂ ಇರುವ ಸಂಬಂಧವನ್ನು ನವೋದಯ ಕವಿಗಳು ಮತ್ತೆಮತ್ತೆ ಸ್ಥಿರಪಡಿಸುವ ಧ್ವನಿಯನ್ನು ಎತ್ತರಿಸಿದ್ದಾರೆ. ಕಾವ್ಯಭಾಷೆ ಭಾವೋಪಯೋಗಿಯಾಗಿರುವಂತೆ ಲೋಕೋಪಯೋಗಿಯಾಗಬೇಕೆಂದೂ ಆಶಿಸಲಾಗಿದೆ. ನವೋದಯಕಾವ್ಯ ಜನಜೀವನದ ಅನುಭವಕ್ಕೆ ಮೂಕವೇದನೆಗೆ ಶ್ರುತಿಯಾಗಬೇಕೆಂಬ ಲವಲವಿಕೆಯ ಮಾತು ಕಾವ್ಯಮೀಮಾಂಸೆಯ ಕವಿತೆಗಳಲ್ಲಿದೆ. ಭಾರತೀಯ ದರ್ಶನಸಾರವಾದ ಸತ್ಯ, ಶಿವ, ಸುಂದರ ಎಂಬುದನ್ನು ಸಾಕಾರಗೊಳಿಸುವದೇ ನವೋದಯ ಕವಿಗಳ ಪ್ರಮುಖ ಧ್ಯೇಯವಾಗಿತ್ತೆಂಬ ಅಂಶವು ಗಮನಾರ್ಹವಾದುದು.

## ಅಡಿಟಿಪ್ಪಣಿ

1. ಕೆ. ಕೃಷ್ಣಮೂರ್ತಿ : 'ಕನ್ನಡದಲ್ಲಿ ಕಾವ್ಯತತ್ತ್ವ', 'ರಸೋಲ್ಲಾಸ' ಪರಿಶೀಲಿಸಿ.
2. ಪು. ೮೪–೮೫
3. ಡಿ.ವಿ.ಜಿ : 'ಜೀವನ ಸೌಂದರ್ಯ ಮತ್ತು ಸಾಹಿತ್ಯ', ಪುಟ ೩೪
4. ಕೆ. ಕೃಷ್ಣಮೂರ್ತಿ : ಕುವೆಂಪು ಕಾವ್ಯಮೀಮಾಂಸೆ, 'ಗಂಗೋತ್ರಿ', ಪುಟ ೫೨೧
5. 'ಕೋಗಿಲೆ ಮತ್ತು ಸೋವಿಯತ್ ರಷ್ಯ', ಪುಟ ೮೬
6. 'ಶ್ರೀರಾಮಾಯಣದರ್ಶನಂ', ಪಂಕ್ತಿ ೪೭–೫೨
7. ಪ್ರಭುಶಂಕರ : 'ಕನ್ನಡದಲ್ಲಿ ಭಾವಗೀತೆ', ಪುಟ ೧೭
8. ಕುವೆಂಪು : 'ಪಕ್ಷಿಕಾಶಿ', ಪುಟ ೧೨
9. ಕೆ. ಕೃಷ್ಣಮೂರ್ತಿ : ಸಾಹಿತ್ಯ ವಿಮರ್ಶಕ ಬೇಂದ್ರೆ, 'ಇಳಿದು ಬಾ ತಾಯಿ', ಪುಟ ೬೪
10. 'ಸಖಿಗೀತ', ಪುಟ ೪೭
11. 'ನಾದಲೀಲೆ'
12. 'ಸಖಿಗೀತ' ಪುಟ ೭
13. ನಾದಲೀಲೆ, ಪುಟ ೮೪
14. 'ಭಾವಗೀತೆ' ಗರಿ
15. 'ಗಂಗಾವತರಣ' ಪುಟ ೧೯
16. 'ಸಖಿಗೀತ'
17. ಮೂರ್ತಿ ಮತ್ತು ಕಾಮಕಸ್ತೂರಿ, ಪುಟ ೨೮
18. ಜಿ. ಎಸ್. ಆಮೂರ : 'ಬೇಂದ್ರೆಯವರ ಕಾವ್ಯದಲ್ಲಿ ಪ್ರಜ್ಞೆ ಮತ್ತು ಪ್ರಯೋಗ' : 'ಆಧುನಿಕ ಕನ್ನಡ ಕಾವ್ಯ' ಪುಟ ೧೭
19. ಪರಾಗ, ಸಖಿಗೀತ
20. ಸಾಹಿತ್ಯದ ವಿರಾಟ್‌ಸ್ವರೂಪ, ಪುಟ. ೮೪
21. ನನ್ನ ಹಾಡು, 'ಹಣತೆ'
22. ಸಮಗ್ರಕಾವ್ಯ, ಪುಟ ೨೬–೨೭
23. ಅದೇ, ಪುಟ ೫೬
24. ಅದೇ, ಪುಟ ೫೭
25. ಅದೇ, ಪುಟ ೬೨

26. ಜಿ. ಎಂ. ಹೆಗಡೆ : ಶಿವರುದ್ರಪ್ಪನವರ ಕವಿತೆಗಳಲ್ಲಿ ಕಾವ್ಯಮೀಮಾಂಸೆ. ಕರ್ನಾಟಕ ಭಾರತಿ, ೨೪–೧, ಪುಟ ೫೫–೬೪
27. ಸಮಗ್ರಕಾವ್ಯ, ಪುಟ ೬೯, ೭೦. ೭೧. ೭೨
28. ಅದೇ, ಪುಟ ೧೦೭
29. ಅದೇ, ಪುಟ ೨೪೯
30. ಅದೇ, ಪುಟ ೩೪೯
31. ಅದೇ, ಪುಟ ೪೬೭
32. ಅದೇ, ಪುಟ ೩೧೩
33. ಅದೇ, ಪುಟ ೪೫೦
34. ಅದೇ, ಪುಟ ೪೬೬
35. ಹೊಂಬೆಳಕು. 'ಸಮಗ್ರಕಾವ್ಯ'

# ಕನ್ನಡದಲ್ಲಿ ಆಧುನಿಕ ಕಾವ್ಯದೋಷಗಳು

ಟಿ. ಕೇಶವ ಭಟ್ಟ

ಮಾನವನಲ್ಲಿ ಮಾನವತೆಯನ್ನು ನೆಲೆಗೊಳಿಸುವ ಕಲಾತ್ಮಕಸಾಧನವೇ ಸಾಹಿತ್ಯ. ಅದು ಹೇಗೆಂಬುದನ್ನು ತಿಳಿಯಲು ಮಾನವತೆಯ ಲಕ್ಷಣವನ್ನು ಲಕ್ಷಿಸಬೇಕಾಗುತ್ತದೆ. ಭರ್ತೃಹರಿಯ ನೀತಿ ಅದನ್ನು ಹೀಗೆನ್ನುತ್ತದೆ :

ಯೇಷಾಂ ನ ವಿದ್ಯಾ ನ ತಪೋ ನ ದಾನಂ
ಜ್ಞಾನಂ ನ ಶೀಲಂ ನ ಗುಣಂ ನ ಧರ್ಮಃ
ತೇ ಮರ್ತ್ಯಲೋಕೇ ಭುವಿ ಭಾರಭೂತಾಃ
ಮಾನುಷ್ಯರೂಪೇಣ ಮೃಗಾಶ್ಚರಂತಿ॥

ಎಂದರೆ ''ಯಾರಲ್ಲಿ ವಿದ್ಯೆ, ತಪಸ್ಸು, ದಾನ, ಜ್ಞಾನ, ಶೀಲ, ಗುಣ, ಧರ್ಮ ಎಂಬಿವು ಇಲ್ಲವೋ ಅವರು ಮನುಷ್ಯಲೋಕದಲ್ಲಿ ಭೂಭಾರಕರು : ಮನುಷ್ಯರೂಪದಲ್ಲಿ ಮೃಗಗಳಾಗಿ ವರ್ತಿಸುತ್ತಾರೆ.'' ಇಲ್ಲಿ ಹೇಳಿದ ಮಾನವೀಯ ಸದ್ಗುಣಗಳನ್ನು ಸಾಹಿತ್ಯಜ್ಞಾನದಿಂದ ಪಡೆಯಬಹುದು. ಇತರ ಶಾಸ್ತ್ರವಿದ್ಯೆಗಳನ್ನು ಎಷ್ಟೇ ಕಲಿತಿರಲಿ, ಸಾಹಿತ್ಯವಿದ್ಯೆಯನ್ನು ಅರಿಯದ ಮಾನವರ ಸಮೂಹ ಸಮಾಜವೇ ಅಲ್ಲ ; ಅದು ಸಮಜ (ಅಂದರೆ, ಪ್ರಾಣಿಸಮೂಹ) ಎಂತಲೂ ಒಂದು ಸುಭಾಷಿತವಿದೆ :

ಸಾಹಿತ್ಯವಿದ್ಯಾ ವಿಹೀನಾನಾಂ ಸರ್ವಶಾಸ್ತ್ರವಿದಾಮಪಿ
ಸಮಾಜಂ ಪರಿಪಶ್ಯಂತಿ ಸಮಜಂ ಬುದ್ಧಿಶಾಲಿನಃ॥

ಅಂತಹ ಸಾಹಿತ್ಯದಲ್ಲಿ ಮೇಲಾದುದು, ಪರಿಷ್ಕಾರವುಳ್ಳದು, ಕವಿಕೌಶಲಪೂರ್ಣವಾಗಿ ಹೃದ್ಯವಾದುದು ಕಾವ್ಯ; ಅದರಲ್ಲಿಯೂ ಪದ್ಯಕಾವ್ಯ. ಪದ್ಯಕಾವ್ಯದಲ್ಲಿ ಮಹಾಕಾವ್ಯ, ಖಂಡಕಾವ್ಯ, ಮುಕ್ತಕ (ಬಿಡಿಪದ್ಯ), ಕವನ, ಪದ, ಹಾಡು ಮುಂತಾದ ಪ್ರಭೇದಗಳಿವೆ. ಇನ್ನೊಂದೆಡೆ ಜಾನಪದ ಪ್ರಕಾರಗಳೂ ಇವೆ.

ಕಾವ್ಯಗಳು ನಮ್ಮ ದೇಶದಲ್ಲಿ ವೇದಕಾಲದಿಂದಲೇ ನಿರ್ಮಾಣವಾಗುತ್ತ ಬಂದಿವೆ. ಪ್ರಕೃತ ನಮಗಿಲ್ಲಿ ಕನ್ನಡಕಾವ್ಯ ಲಕ್ಷ್ಯಾರ್ಹ. ಅದು ಆದಿಕವಿ ಪಂಪನಿಂದ (೧೦ನೆಯ ಶತಮಾನ) ಪ್ರಾರಂಭಗೊಂಡಿದೆ. ರೂಪಾಂತರವೇನೇ ಇರಲಿ, ಆಧುನಿಕ ಕಾಲದಲ್ಲಿಯೂ ಕಾವ್ಯರಚನೆಯಾಗುತ್ತಿದೆ.

ಯಾವ ಕಾಲದ ಕಾವ್ಯವೇ ಆಗಿರಲಿ, ಅದು ದೋಷರಹಿತವಾಗಿ, ಗುಣಾತಿಶಯದಿಂದ ಕೂಡಿ ಜೀವನದ ಪ್ರತಿಬಿಂಬವಾಗಿರುವುದರೊಂದಿಗೆ ಜೀವನಮಾರ್ಗದರ್ಶಕವಾಗಿ ಇರಬೇಕಾದುದು ಅಪೇಕ್ಷಣೀಯ. ದೋಷರಹಿತವಾಗಿ, ಎನ್ನುವಾಗ ಕಾವ್ಯದೋಷಗಳಾವುವು ಎಂಬ ಅರಿವು ಇರಬೇಕಲ್ಲವೆ ? ಕಾವ್ಯದಲ್ಲಿ ಮುಖ್ಯವಾಗಿ ಅದರ ರಚನೆಯಲ್ಲಿ, ದೋಷವಿಲ್ಲದ ಮಾತ್ರಕ್ಕೆ ಗುಣಭೂಯಿಷ್ಠವಾಯ್ತೆಂದು ಭಾವಿಸುವಂತಿಲ್ಲ. ಕಾವ್ಯದಲ್ಲಿ ಶಬ್ದಗುಣ, ಅರ್ಥಗುಣ, ರೀತಿ, ರಸಾಲಂಕಾರಗಳುಳ್ಳ ಕಾವ್ಯಸ್ವರೂಪ ಎಂತಹುದೆಂಬುದನ್ನು ಸಂಸ್ಕೃತದಲ್ಲಿ, ಕನ್ನಡದಲ್ಲಿ ಲಾಕ್ಷಣಿಕರು ವಿವರವಾಗಿ ತಿಳಿಸಿರುತ್ತಾರೆ. ಕಾವ್ಯವು ಗುಣಯುಕ್ತವಾಗಿ ಕಂಗೊಳಿಸಬೇಕಾದರೆ ಅದರ ಪೂರ್ವಾವಶ್ಯಕತೆಯೇ ದೋಷರಾಹಿತ್ಯ. ಆದುದರಿಂದ ಕವಿತೆಗೆ ಕಾವ್ಯದೋಷಜ್ಞಾನವೇ ಮೊದಲ ಮೆಟ್ಟಿಲು. ಕಾವ್ಯದೋಷಪರಿಜ್ಞಾನಬೋಧನೆ ಕೂಡ ಅರೋಚಿಗಳಿಗಲ್ಲದೆ, ಸತೃಣಾಭ್ಯವಹಾರಿಗಳಿಗಲ್ಲ.[1]

ವಾಸ್ತವವಾಗಿ ಕಾವ್ಯದೋಷಗಳಾವುವು ? ಏಕೆ ಅವು ದೋಷಗಳು ? ಎಂಬ ಅರಿವುಳ್ಳವನೇ ಕವಿ ; ಪಂಡಿತನು. ಅಮರಕೋಶದಲ್ಲಿ 'ಪಂಡಿತ' ಎಂಬರ್ಥದಲ್ಲಿ ಇಪ್ಪತ್ತೆರಡು ಪರ್ಯಾಯಶಬ್ದಗಳಿವೆ. ಅವುಗಳಲ್ಲಿ 'ದೋಷಜ್ಞ' ಎಂಬುದೊಂದು. ಲೋಕದಲ್ಲಿ ಸಾಮಾನ್ಯವಾಗಿ ಕೃತಿದೋಷಗಳನ್ನು ಕಾಣುವ ಸಹೃದಯರನ್ನು ಅವಗಣಿಸಲಾಗುತ್ತಿದೆ. ಇಲ್ಲದ ಗುಣಗಳನ್ನೇ ಆರೋಪಿಸಿ, 'ಭಲೇ' ಎಂದು ಮೆಚ್ಚಿ ಕೊಂಡಾಡುವವರನ್ನು ಮೆಚ್ಚಲಾಗುತ್ತಿದೆ. ಅಲ್ಲದೆ, ಹಾಗೆನ್ನುವಂತೆ ಪ್ರೇರಿಸಲಾಗುತ್ತಿದೆ. ಇದು ವಿವೇಕದ ಕೊರತೆಯ ಲಕ್ಷಣ.

ಪ್ರಕೃತ ಲೇಖನಕ್ಕೆ 'ಆಧುನಿಕ ಕಾವ್ಯದೋಷಗಳು' ಎಂಬುದೇ ವಿಷಯವಾದರೂ ಆಧುನಿಕವು ಪ್ರಾಚೀನದ ನೆಲಗಟ್ಟುಳ್ಳುದಾದ್ದರಿಂದ ಪ್ರಾಚೀನ ಲಾಕ್ಷಣಿಕರು ಪ್ರತಿಪಾದಿಸಿದ ಕಾವ್ಯದೋಷಗಳೂ ಲಕ್ಷ್ಯಾರ್ಹವಾಗುತ್ತವೆ ; ಗಣನೆಗೆ ಒಡಂಬಡುತ್ತವೆಯೆಂದು ತಿಳಿಯಬೇಕು. ಪ್ರಾಚೀನರಲ್ಲಿ ಕಾವ್ಯದೋಷದರ್ಶನದ ಬಗೆಗೆ ಇಂದಿನವರಷ್ಟು ಅಸಹನೆ ಅಥವಾ ತುಚ್ಛೀಕಾರವಿರಲಿಲ್ಲವೆಂಬುದು ಸ್ಪಷ್ಟವಿದೆ, ದೋಷಕ್ಕೆ 'ಅವಗುಣ' ಎಂಬುದು ಇನ್ನೊಂದು ಹೆಸರು. ಕಾವ್ಯದಲ್ಲಿ ಅವಗುಣ ಸ್ವಲ್ಪವೂ ಇರಕೂಡದು ; ಅದು ಇದ್ದರೆ ಕಣ್ಣಿಗೆ ಕಸ ಬಿದ್ದ ಹಾಗೆ ಎಂದಿರುವ 'ಕವಿರಾಜಮಾರ್ಗ'ದ ಮಾತಿದು :

ಅವಗುಣಮಿನಿತಾದೊಡಮಾ। ಕವಿತಾಬಂಧಮನಶೇಷಮಂ ದೂಷಿಸುಗುಂ।
ಸುವಿಳಾಸಲೋಲಲೋಚನ। ವಿವರಮನೆಡೆವೆತ್ತ ಕಸದವೋಲನವರತಂ॥ (೧–೪೩)

ಈ ಅಭಿಪ್ರಾಯವನ್ನೆ ಮನದಲ್ಲಿ ದೃಢಮಾಡಿಕೊಂಡ ಪ್ರಾಚೀನ ಕನ್ನಡ ಕವಿಗಳು ಕಾವ್ಯರಚನೆ ಮಾಡಿ, ಅದನ್ನು ಸಮಕಾಲೀನ ಪರಿಣತ ಸಹೃದಯ ವಿದ್ವಾಂಸರಿಂದ ತಿದ್ದಿಸುತ್ತಿದ್ದರೆಂಬುದಕ್ಕೆ ಹಲವು ಕಾವ್ಯೋದಾಹರಣಗಳಿವೆ. ಕವಿ ರನ್ನನು (೧೦ನೆಯ ಶತಮಾನ) ತನ್ನ 'ಸಾಹಸಭೀಮವಿಜಯ' ಕಾವ್ಯವನ್ನು ತಿದ್ದಿಸಿದ ಸಂಗತಿಯನ್ನು ಹೀಗೆಂದಿದ್ದಾನೆ :

ವನರುಹಭವನೆನಿಸಿದ ದಂ। ಡನಾಯಕಂ ಕೇಶಿ ತಿರ್ದೆ ಪೇಟ್ದಂ ಕವಿರ।
ನ್ನನ ಪೇಟ್ದ ಕೃತಿ ಯಶಃಶ್ರೀ। ವನಿತೆಗಲಂಕೃತಿಯೆನಿಪ್ಪುದೊಂದಚ್ಚರಿಯೇ॥ (೧–೫೧)

ರನ್ನನ ಕಾಲದಲ್ಲಿ ಪ್ರತಿಭೆ ಪಾಂಡಿತ್ಯ ಕವಿತಾಪರಿಣತಿಗಳಲ್ಲಿ ಬ್ರಹ್ಮದೇವನಿಗೆ ಎಣೆಯಾಗಿಯೂ ಸೇನಾಪತಿಯಾಗಿಯೂ ಇದ್ದಂತಹ ಕೇಶಿ (ಕೇಶವ) ಎಂಬಾತನು ತಿದ್ದಿದುದಾಗಿ ರನ್ನನು ಅಭಿಮಾನದಿಂದಲೇ ಹೇಳಿಕೊಂಡಿದ್ದಾನಲ್ಲವೆ ? ದುರ್ಗಸಿಂಹನು (೧೧ನೆಯ ಶ.) ತನ್ನ 'ಕರ್ಣಾಟಕ ಪಂಚತಂತ್ರ' ಕಾವ್ಯವನ್ನು ತಿದ್ದಿಸಿದ ಸಂಗತಿ ಹೀಗಿದೆ :

ಕವಿ ಗಮಕಿ ವಾದಿ ವಾಗ್ಮಿ। ಪ್ರವರಂ ಶ್ರೀಮಾದಿರಾಜ ಮುನಿಪುಂಗವರು ।
ತ್ಸವದಿಂ ತಿರ್ದಿದರೆನೆ ಭೂ। ಭುವನದೊಳಿದನ್ನೆದೆ ಕೊಂಡುಕೊನೆಯದರೊಳರೇ ॥ (ಪದ್ಯ ೨೮)

ಉದ್ದಾಮ ಕವಿ ರುದ್ರಭಟ್ಟನು ತನ್ನ 'ಜಗನ್ನಾಥವಿಜಯ' ಕಾವ್ಯವನ್ನು ರಸಿಕರಿಂದ ತಿದ್ದಿಸಿದನಂತೆ ;

ಪೊಸತೆನೆ ಪೇಟ್ವ ತಿರ್ದುವಜಿವೆನ್ನೊಳಿ ಸನ್ನಿದಮಾದೊಡಂ ಕರಂ
ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ರಮಂತೆ ತಿ
ರ್ದಿಸುವುದೆನಲ್ ನಯಂ ಬೆಳಗೆ ಕನ್ನಡಿ ಸೋದಿಸೆ ಪೊನ್ ವಿರಾಜಿಪಂ
ತೆಸೆದು ಬಟಿಕ್ಕೆಚಮತ್ಕೃತಿಯಂ ಧರೆಗುಂಟುಮಾಡುಗುಂ ॥ (೧–೧೫)

ಲೋಕಕ್ಕೆ ಹೊಸತೆನಿಸುವಂತೆ ಕಾವ್ಯರಚಿಸುವ, ತಿದ್ದುವಷ್ಟರ ಮಟ್ಟಿನ ಶಾಸ್ತ್ರಜ್ಞಾನ ತನಗಿದ್ದರೂ ಕಾವ್ಯರಸಿಕರಾದ ವಿದ್ವಾಂಸರಿಂದ ತಿದ್ದಿಸದಿದ್ದರೆ ತನಗೆ ನೆಮ್ಮದಿಯಿಲ್ಲವೆಂದಿರುವ ಕವಿಯ ಉದಾತ್ತಗುಣ ಸಾಮಾನ್ಯವೆ ? ತಿದ್ದಿಸುವುದೇ ತನ್ನ ನಯಗುಣವಾಗಿದ್ದು ಅದರ ಪರಿಣಾಮವಾಗಿ ಸ್ವಚ್ಛಗೊಳಿಸಿದಾಗ ಕನ್ನಡಿ, ಶುದ್ಧಪಡಿಸಿದಾಗ ಚಿನ್ನ ಶೋಭಾಯಮಾನವಾಗುವಂತೆ ಶೋಭಿಸುತ್ತ ತನ್ನ ಕಾವ್ಯವು ಲೋಕಕ್ಕೆ ಚಮತ್ಕಾರವನ್ನುಂಟುಮಾಡುವುದೆಂದು ಹೇಳಿ ಎಲ್ಲ ಕಾಲದ ಕವಿಗಳಿಗೆ ಹೀಗೆ ಕಿವಿಮಾತನ್ನು ಆಡಿದ್ದಾನೆ. ಅಚ್ಚಗನ್ನಡದ ಕವಿ ಆಂಡಯ್ಯನು (೧೨೩೫) ತನ್ನ 'ಕಬ್ಬಿಗರ ಕಾವ'ವು ''ತಪ್ಪೊಂದುಂ ತಲೆದೋರದಂತೆ ಪಲರೆಲ್ಲರ್ ತಿರ್ದಿದೀ ಕಬ್ಬಂ ಎಂತಪ್ಪಂಗಂ ಪೊಸ ಮುತ್ತಿನ ಎಕ್ಕಸರದಂತೆ ಎಂದುಂ ಕೊರಲ್ಗೊಳ್ಳದೇ'' (ಪದ್ಯ ೫) ಎಂದಿದ್ದಾನೆ.

ಇಂತಹ ತಿದ್ದುಪಡಿ ಆಧುನಿಕ ಕಾವ್ಯಗಳಿಗೆ ಕೂಡ ಅವಶ್ಯವೆನಿಸುವುದಿಲ್ಲವೆ ? ಅಂತಹ ತಿದ್ದುವಿಕೆ ಇಲ್ಲದಿರುವುದರಿಂದಲೇ ಆಧುನಿಕ ಕಾವ್ಯಗಳು, ಕವಿತೆಗಳು ದೋಷಬಾಹುಳ್ಯದಿಂದ ಕೊಳೆಮುತ್ತಿಕೊಂಡಂತಿವೆ ಎನಿಸುವುದಿಲ್ಲವೇ ?

ಗ್ರಾಮ್ಯ ಇಲ್ಲವೆ ಜಾನಪದವೆನಿಸುವ ಸಾಹಿತ್ಯ ಹೇಗೇ ಇರಲಿ, ಮಾರ್ಗಸಾಹಿತ್ಯವಂತೂ ಶುದ್ಧಭಾಷೆಗೂ ನಿರ್ದೋಷರಚನೆಗೂ ಗುಣೋತ್ಕರ್ಷತೆಗೂ ನೆಲೆಯಾಗಿರಬೇಕಾದುದು ನಿಸ್ಸಂಶಯ. ಹಿಂದೆ ಉದಾಹರಿಸಿದ ಕವಿರಾಜಮಾರ್ಗೋಕ್ತಿಯಂತೆಯೇ ಸಂಸ್ಕೃತಲಾಕ್ಷಣಿಕರು ದೋಷರಹಿತರಚನೆಗೆ ಮಹತ್ವಕೊಟ್ಟಿರುತ್ತಾರೆ.

ಭಾಮಹನ (೬ನೆಯ ಶತಮಾನ) 'ಕಾವ್ಯಾಲಂಕಾರ' ಎಂಬ ಲಾಕ್ಷಣಿಕ ಗ್ರಂಥದ ಉಲ್ಲೇಖವಿದು :

ಸರ್ವಥಾ ಪದಮಪ್ಯೇಕಂ ನ ನಿಗದ್ಯಮವದ್ಯವತ್
ವಿಲಕ್ಷಣಾ ಹಿ ಕಾವ್ಯೇನ ದುಃಸುತೇನೇವ ನಿಂದ್ಯತೇ ॥ (೧–೧೧)

ಎಂದರೆ, ''ದೋಷಯುಕ್ತವಾಗಿ ಒಂದೇ ಒಂದು ಪದವನ್ನೂ ಹೇಳಬಾರದು. ಕೆಟ್ಟ ಮಗನಿಂದ ತಂದೆಗೆ ಅಪಕೀರ್ತಿ ಬರುವ ಹಾಗೆ ದೋಷಯುಕ್ತವಾದ ಕಾವ್ಯದಿಂದ ಕವಿಗೆ ಬೈಗುಳುಂಟಾಗುತ್ತದೆ.''

ಇದೇ ಅಭಿಪ್ರಾಯವನ್ನು ನಾಗವರ್ಮನು (೧೦೪೨) 'ಕಾವ್ಯಾವಲೋಕನ'ದಲ್ಲಿ ಹೀಗೆಂದಿರುವನು :

ಕೃತಿಸತಿಯ ಮೆಯ್ಯೊಳೆಳ್ಳನಿ । ತು ತಾನದೊಂದಱಿಯೆ ದೋಷಮಾಗೆ ತದಾವ।
ರ್ಜಿತಮಪ್ಪ ಕೀರ್ತಿಯುಂ ನಿಂ। ದಿತಮಕ್ಕುಂ ದರ್ಪಣಾರ್ಪಿತಚ್ಛಾಯೆಯವೋಲ್ ॥ (೨–೫)

ಎಂದರೆ, ಕಾವ್ಯಾಂಗನೆಯ ಮೈಯಲ್ಲಿ ಒಂದೆಳ್ಳಿನಷ್ಟು ದೋಷವಿದ್ದರೂ ಕನ್ನಡಿಗೆ ಸೇರಿಕೊಂಡ ಕೊಳೆಯಂತೆ, ಕೀರ್ತಿಗೆ ಹಾನಿಕರವಾಗುವುದು. ಹಾಗೆ ದೋಷ ಬಾರದಿರಬೇಕಾದರೆ ಕವಿಗೆ ಚೆನ್ನಾದ ಶಾಸ್ತ್ರಜ್ಞಾನವಿರಬೇಕು. ಅದನ್ನು ಭಾಮಹನು ಹೇಳಿರುವುದು ಹೀಗೆ :

ಶಬ್ದಶ್ಛಂದೋಽಭಿಧಾನಾರ್ಥಾ ಇತಿಹಾಸಾಶ್ರಯಾಃ ಕಥಾಃ
ಲೋಕೋ ಯುಕ್ತಿಃ ಕಲಾಶ್ಚೇತಿ ಮಂತವ್ಯಾಃ ಕಾವ್ಯಹೇತವಃ (೧–೯)

ವ್ಯಾಕರಣ, ಛಂದಸ್ಸು, ಶಬ್ದಕೋಶಗಳು, ಇತಿಹಾಸ (ಪುರಾಣ) ಕಥೆಗಳು, ಲೋಕವ್ಯವಹಾರಜ್ಞಾನ, ತರ್ಕ, ಕಲೆಗಳು—ಇವು ಕಾವ್ಯರಚನೆಗೆ ಕಾರಣಗಳೆಂದು ತಿಳಿಯಬೇಕು ಎಂದಿಲ್ಲಿ ಹೇಳಿದೆ. ಈ ಎಲ್ಲ ಶಾಸ್ತ್ರಜ್ಞಾನವಿದ್ದರೂ ಕವಿತಾಸಾಮರ್ಥ್ಯವಿಲ್ಲದಿರುವುದು ತುಂಬಲಾಗದ ಕೊರತೆಯೇ ಆಗಿದೆ. ನಾಗವರ್ಮನು 'ಕಾವ್ಯಾವಲೋಕನ'ದಲ್ಲಿ ಅದನ್ನೇ ಎಂದಿರುವುದು ಹೀಗೆ :

ಮದಮಿಲ್ಲದಿಭಂ ಮಧುವಿ।
ಲ್ಲದ ಕುಸುಮಂ ಚಂದ್ರನಿಲ್ಲದೊಂದಿರುಳಾರ್ಪಿ
ಲ್ಲದ ನೃಪತಿ ಕವಿತೆಯಿಲ್ಲದ।
ವಿದಗ್ಧತಾಗುಣಮದೇಂ ಮನಂಗೊಳಿಸುಗುಮೇ॥ (ಪದ್ಯ: ೪೨೬)

ಕಾವ್ಯಲಕ್ಷಣಗಳನ್ನು ನಿರೂಪಣೆ ಮಾಡಿರುವ ಸಂಸ್ಕೃತ–ಕನ್ನಡ ಕವಿಗಳು (ಲಾಕ್ಷಣಿಕರು) ಕಾವ್ಯಗುಣಗಳನ್ನು ನಿರೂಪಿಸುವುದರೊಂದಿಗೆ ಕಾವ್ಯದೋಷಗಳನ್ನೂ ವಿವರಿಸಿರುವುದು ಕಂಡುಬರುತ್ತದೆ. ಅವು ಹಿಂದಿನ, ಇಂದಿನ ಹಾಗೂ ಮುಂದಿನಕಾಲಕ್ಕೂ ಅನ್ವಯಿಸುವಂಥವೇ ಆಗಿವೆ. ಆದುದರಿಂದ ಅವನ್ನು ಇಲ್ಲಿ ಮೊದಲಾಗಿ ಪ್ರಸ್ತಾವಿಸುವುದು ಸೂಕ್ತವೇ ಸರಿ.

ಸಂಸ್ಕೃತ ಲಾಕ್ಷಣಿಕರಲ್ಲಿ ಮೊದಲನೆಯವನೆನಿಸಿದ ಭಾಮಹನು (೬ನೆಯ ಶತಮಾನ) ತನ್ನ 'ಕಾವ್ಯಾಲಂಕಾರ' ಎಂಬ ಲಕ್ಷಣಗ್ರಂಥದಲ್ಲಿ ತಿಳಿಸಿರುವ ಕಾವ್ಯದೋಷಗಳಿವು : ಅರ್ಥ

ದೋಷಗಳು : ನೇಯಾರ್ಥ, ಕ್ಲಿಷ್ಟ, ಅನ್ಯಾರ್ಥ, ಅವಾಚಕ, ಅಯುಕ್ತಿಮತ್, ಗೂಢಶಬ್ದಾಭಿಧಾನ—ಎಂಬ ಆರು ; ಶಬ್ದದೋಷಗಳು : ಶ್ರುತಿದುಷ್ಟ, ಅರ್ಥದುಷ್ಟ, ಕಲ್ಪನಾದುಷ್ಟ, ಶ್ರುತಿಕಷ್ಟ—ಎಂಬೀ ನಾಲ್ಕು (ಕೆಲವಟ್ಟಿಗೆ ಈ ಶಬ್ದದೋಷಗಳು ಆಶ್ರಯಸೌಂದರ್ಯದಿಂದ ದೋಷವಾಗದಿರುವುದುಂಟು ಎಂದು ಅಪವಾದವನ್ನೂ ಹೇಳಿರುತ್ತಾನೆ.). ಮತ್ತೆ ನಾಲ್ಕನೆಯ ಅಧ್ಯಾಯದಲ್ಲಿ ಈ ಹದಿನೆಂಟು ಕಾವ್ಯದೋಷಗಳನ್ನು ನಿರೂಪಿಸಿದ್ದಾನೆ : ಅಪಾರ್ಥ, ವ್ಯರ್ಥ, ಏಕಾರ್ಥ, ಸಸಂಶಯ, ಅಪಕ್ರಮ, ಶಬ್ದಹೀನ, ಯತಿಭ್ರಷ್ಟ, ಭಿನ್ನವೃತ್ತ, ವಿಸಂಧಿ, ದೇಶವಿರುದ್ಧ, ಕಾಲವಿರುದ್ಧ, ಕಲಾವಿರುದ್ಧ ಲೋಕವಿರುದ್ಧ, ನ್ಯಾಯವಿರುದ್ಧ, ಆಗಮವಿರುದ್ಧ, ಪ್ರತಿಜ್ಞಾಹೀನ, ಹೇತುಹೀನ, ಮತ್ತು ದೃಷ್ಟಾಂತಹೀನ (ನೋಡಿ : ಕೆ. ಕೃಷ್ಣಮೂರ್ತಿ 'ಕನ್ನಡ ಕಾವ್ಯಾಲಂಕಾರ').

ವಾಮನನೆಂಬ ಲಾಕ್ಷಣಿಕನು (೮ನೆಯ ಶತಮಾನ) ತನ್ನ 'ಕಾವ್ಯಾಲಂಕಾರಸೂತ್ರಾಣಿ' ಎಂಬ ಗ್ರಂಥದಲ್ಲಿ ಕಾವ್ಯದೋಷಗಳನ್ನು ಪದದೋಷ, ಅರ್ಥದೋಷ ಎಂದು ವಿಂಗಡಿಸಿದ್ದಾನೆ. ಅಲ್ಲಿ ಹೇಳಿದ ಐದು ಬಗೆಯ ಪದದೋಷಗಳು—ದುಷ್ಟ (ಅಸಾಧು, ವ್ಯಾಕರಣವಿರುದ್ಧ) ಕಷ್ಟ (ಶ್ರುತಿವಿರಸ, ಕಿವಿಗೆ ಕರ್ಕಶ), ಗ್ರಾಮ್ಯ (ಜಾನಪದರೂಪ), ಅಪ್ರತೀತ (ಶಾಸ್ತ್ರಕ್ಕೆ ಸರಿಯಾದರೂ ರೂಢಿಯಲ್ಲಿಲ್ಲ), ಅನರ್ಥಕ (ಪೂರಣಾರ್ಥಂ ಅನರ್ಥಕಂ : ಅವಶ್ಯವಿಲ್ಲದ ಅವ್ಯಯಗಳ ಬಳಕೆ ; ಆದರೂ ವಾಕ್ಯಕ್ಕೆ ಸೊಗಸು ಉಂಟಾಗುವಲ್ಲಿ ಇರಬಹುದು) ; ಅರ್ಥದೋಷಗಳು—ಅನ್ಯಾರ್ಥ, ನೇಯಾರ್ಥ, ಗೂಢಾರ್ಥ, ಅಶ್ಲೀಲ, ಕ್ಲಿಷ್ಟ. ವಿವರ : ರೂಢಿಚ್ಯುತವಾದುದು ಅನ್ಯಾರ್ಥ, ಕಲ್ಪಿತಾರ್ಥವೇ ನೇಯಾರ್ಥ. ಅಪ್ರಸಿದ್ಧವಾದುದು ಗೂಢಾರ್ಥ. ಅಸಭ್ಯವಾದ ಅರ್ಥಾಂತರವುಳ್ಳದ್ದು ಅಶ್ಲೀಲ (ಗುಪ್ತವಾಗಿ ಇಲ್ಲವೆ ಮುಚ್ಚಲ್ಪಟ್ಟು ಅಶ್ಲೀಲವಿದ್ದರೆ ; ಉದಾ : ಸುಭಗೆ, ಭಗಿನಿ, ಕುಮಾರಿ, ಅಭಿಪ್ರೇತ, ಶಿವಲಿಂಗ ಮುಂತಾದುವು–ದೋಷಕರವಲ್ಲ).

ಮೇಲಿನ ಲಾಕ್ಷಣಿಕನು ಹೇಳಿರುವ ವಾಕ್ಯದೋಷಗಳಿವು–ಭಿನ್ನವೃತ್ತ (ತನ್ನ ಲಕ್ಷಣದಿಂದ ಚ್ಯುತವಾದುದು ಅಂದರೆ, ಛಂದೋದೋಷವುಳ್ಳುದು), ಯತಿಭ್ರಷ್ಟತೆ (ಕಿವಿಗೆ ಕರ್ಕಶವಾಗಿ ವಿರಾಮಸ್ಥಳವುಳ್ಳುದು—ಇದು ಭಿನ್ನವೃತ್ತಾಂತರ್ಗತ), ವಿಸಂಧಿ (ವಿರೂಪವಾದ ಪದಸಂಧಿ—ಇದು ವಿಶ್ಲೇಷ, ಅಶ್ಲೀಲ, ಕಷ್ಟ ಎಂದು ಮೂರು ವಿಧ), ವ್ಯರ್ಥ (ಹಿಂದಿನ ಮುಂದಿನ ವಾಕ್ಯಗಳಿಗೆ ತಡೆ), ಏಕಾರ್ಥ (ಹೇಳಿದುದನ್ನೆ ಹೇಳುವುದು, ಪುನರುಕ್ತಿ—ಪುನಃ ಹೇಳಿದುದರಲ್ಲಿ ವಿಶೇಷಾರ್ಥವಿಲ್ಲದಿದ್ದರೆ ಅಂತಹ ಏಕಾರ್ಥವು ದೋಷಕರ ; ಉದಾ : ಕಳಭ ಎಂದರೆ ಆನೆಯ ಮರಿ : ಅದನ್ನು ಕರಿಕಳಭ ಎನ್ನಬಹುದು ; ಇದರಂತೆ ನಿತಂಬಕಾಂಚಿ, ಕರ್ಣಕುಂಡಲ, ಕನ್ನಡದಲ್ಲಿ ಎಳ್ + ನೆಯ್—ಎಣ್ಣೆ ಆಗಿದ್ದರೂ ಎಳ್ಳೆಣ್ಣೆ ಎಂಬುದು ತಪ್ಪಲ್ಲ. ತಾದ್ರೂಪ್ಯಬೋಧನೆಗಾಗಿ ಹೀಗೆ ಪುನರುಕ್ತಿ ಮಾಡಬಹುದು). ಸಂದಿಗ್ಧ (ಸಂಶಯಕರ), ಅಪ್ರಯುಕ್ತ, ಅಪಕ್ರಮ (ಸಂಬಂಧಕ್ರಮವಿಲ್ಲದುದು). ಲೋಕವಿರುದ್ಧ (ದೇಶ ಕಾಲಸ್ವಭಾವವಿರುದ್ಧಾರ್ಥಕವುಳ್ಳುದು), ವಿದ್ಯಾವಿರುದ್ಧ (ಕಲೆಗೆ ವಿರುದ್ಧ ಮತ್ತು ಚತುರ್ವರ್ಗ ಶಾಸ್ತ್ರಗಳಿಗೆ ವಿರೋಧವಾದುದು.)

ಮಮ್ಮಟನು (೧೧ನೆಯ ಶತಮಾನ) ತನ್ನ 'ಕಾವ್ಯಪ್ರಕಾಶ'ದ ಏಳನೆಯ ಸಮುಲ್ಲಾಸದಲ್ಲಿ ಕಾವ್ಯದೋಷಗಳನ್ನು ದುಷ್ಟ, ಕ್ಲಿಷ್ಟ ಎಂದು ವಿಂಗಡಿಸಿ ಹಿಂದಿನಪರಂಪರೆಯೇ ವಿವರಿಸಿದ್ದಾನೆ. ಸುಮಾರು ಅದೇ ಶತಮಾನದ ಕ್ಷೇಮೇಂದ್ರನು ತನ್ನ 'ಕವಿಕಂಠಾಭರಣ' ಎಂಬ ಕೃತಿಯಲ್ಲಿ ಕಾವ್ಯದೋಷಗಳನ್ನು ಶಬ್ದಕಾಲುಷ್ಯ, ಅರ್ಥಕಾಲುಷ್ಯ ರಸಕಾಲುಷ್ಯ ಎಂದು ಮೂರು ವರ್ಗ ಮಾಡಿದ್ದಾನೆ. ಇವನ್ನು ಅನುಲಕ್ಷಿಸಿ ಕಾವ್ಯಸ್ವರೂಪವನ್ನು ಸಗುಣ, ನಿರ್ಗುಣ, ಸದೋಷ, ನಿರ್ದೋಷ, ಗುಣದೋಷಯುಕ್ತ—ಎಂದು ಐದು ಬಗೆಯಾಗಿ ತಿಳಿಸಿದ್ದಾನೆ. ಸತ್ಕವಿಯಾದವನು ಆಕರ್ಷಕವಿಷಯ, ಮನೋಹರಶಬ್ದ, ರಮಣೀಯಾರ್ಥ ಇವುಗಳಿಂದ ಕೂಡಿದ ಕಾವ್ಯರಚನೆ ಮಾಡುತ್ತಾನೆ ಎಂದಿದ್ದಾನೆ.

ಸಂಸ್ಕೃತ ಲಾಕ್ಷಣಿಕರ ಮಾರ್ಗವನ್ನೆ ಹಿಡಿದು ಕನ್ನಡ ಲಾಕ್ಷಣಿಕರೂ ಕಾವ್ಯದೋಷಗಳನ್ನು ಕನ್ನಡದ ಪ್ರಯೋಗಾಧಾರದಿಂದ ನಿರೂಪಣೆ ಮಾಡಿರುತ್ತಾರೆ. ಕನ್ನಡದಲ್ಲಿ ಮೊದಲ ಲಾಕ್ಷಣಿಕ ಗ್ರಂಥವಾಗಿರುವ 'ಕವಿರಾಜಮಾರ್ಗ'ದಲ್ಲಿ (ಸು. ೮೫೦) ಪ್ರಥಮಪರಿಚ್ಛೇದವು 'ದೋಷಾದೋಷಾನುವರ್ಣನನಿರ್ಣಯ' ಎಂದೇ ಹೆಸರಾಂತಿದೆ. ಕಣ್ಣುಗಳಿಗೆ ತಮ್ಮ ಕಾಡಿಗೆ ಹೇಗೆ ಕಾಣಿಸುವುದಿಲ್ಲವೋ ಹಾಗೆ, ಕಾವ್ಯರಚನೋದ್ಯುಕ್ತನು ತನ್ನ ರಚನಾದೋಷವನ್ನು ಕಾಣಲಾರನು. ಆದುದರಿಂದ ತನ್ನ ರಚನೆಯನ್ನು ಜಾಣರಿಂದ ಓದಿಸಿ, ತಿದ್ದಿಸಿ ಕಾವ್ಯರಚಿಸುತ್ತಿರಬೇಕು—ಎಂದು ಮಾರ್ಗಕಾರನು ಕವಿಗಳಿಗೆ ಕಿವಿಮಾತನ್ನು ಹೇಳಿದ್ದಾನೆ (೧–೪೫). ಪೂರ್ವಕವಿಗಳ ಮಾರ್ಗದಲ್ಲಿ ಹೇಳಲಾದ ದೋಷಗಳನ್ನು ಮನನ ಮಾಡಿಕೊಂಡು, ತನಗೆ ತಿಳಿದಿರುವ ಅಂಶಗಳನ್ನೂ ನಿಶ್ಚಯಿಸಿಕೊಂಡು ಕೆಲವನ್ನು ಹೇಳುವೆನು ಎಂದಿದ್ದಾನೆ. ಆಧುನಿಕ ಕವಿಗಳಿಗೂ ಅನ್ವಯವಾಗುವ ಮಹತ್ತ್ವವುಳ್ಳುದಾಗಿ ಅವನು ಹೇಳಿರುವ ದೋಷ ವಿಚಾರಗಳಿವು :

ಹಳಗನ್ನಡವನ್ನು ಹೊಲಗೆಡಿಸಿ ಅಸಂಗತವಾಗುವಂತೆ ಬಳಸುವುದು. ಅರಿಸಮಾಸ-ಸಂಸ್ಕೃತಾವ್ಯಯಗಳನ್ನು ಸಮಾಸಮಾಡಿಕೊಳ್ಳದೆ ಕನ್ನಡದಲ್ಲಿ ಪ್ರಯೋಗಿಸುವುದು—ಇವು ದೋಷಗಳು. 'ಕವಿರಾಜಮಾರ್ಗ'ದಲ್ಲಿ ಕಾವ್ಯದೋಷಗಳಾಗಿ ಶ್ರುತದುಷ್ಟ (ಅಶ್ಲೀಲ), ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿಕಷ್ಟ ಎಂಬ ನಾಲ್ಕನ್ನು ಹೇಳಿ ಉದಾಹರಣೆಗಳನ್ನು ಕೊಡಲಾಗಿದೆ (೧–೬೨). ಆದರೆ, ದುಷ್ಕರಕಾವ್ಯಗಳಲ್ಲಿ ಶ್ರುತಿಕಷ್ಟವು ದೋಷವೆನಿಸದೆಂದು ಹೇಳಿದೆ. ಇನ್ನುಳಿದ ಮೂರೂ ಪಗರಣ ಎಂಬ ಗ್ರಾಮ್ಯನಾಟಕದಲ್ಲಿ ಹಾಸ್ಯರಸಕ್ಕೆ ಸಾಧನವಾಗುವುದರಿಂದ (೧–೬೮) ಅಲ್ಲಿ ಅವು ದೋಷವೆನಿಸವೆಂದು ಹೇಳಿದೆ. ಅನಂತರ ಹೇಳಲಾದ ಹದಿನಾರು ಬಗೆಯ ದೋಷಗಳು ಹಾವಿನ ವಿಷದಂತೆ ಕೃತಿವಧುವನ್ನು ವಧೆಮಾಡುವವೆಂದು ಹೇಳಲಾಗಿದೆ. ಅವು ಯಾವುವೆಂದರೆ—ಯತಿಭಂಗ, ಅರ್ಥಶೂನ್ಯತೆ, ವಿರುದ್ಧಾರ್ಥ, ಉಕ್ತಪುನರುಕ್ತಾರ್ಥ, ಯಾಥಾಸಂಖ್ಯಚ್ಯುತಿ, ವ್ಯವಹಿತ, ಅಚ್ಛಂದ (ಛಂದೋಭಂಗ), ವಿಸಂಧಿ (ವಿರೂಪಸಂಧಿ), ನೇಯಾರ್ಥ, ಶಾಸ್ತ್ರವಿರುದ್ಧ, ಸಮಯವಿರುದ್ಧ, ನ್ಯಾಯವಿರುದ್ಧ, ಕಳಾವಿರುದ್ಧ, ಕಾಲವಿರುದ್ಧ, ಲೋಕವಿರುದ್ಧ ಮತ್ತು ದೇಶವಿರುದ್ಧ. ಹೀಗೆ ಹೇಳಿ

ಕನ್ನಡದಲ್ಲಿ ಖಂಡಪ್ರಾಸದ ಬಳಕೆಯಿರುವುದರಿಂದ ನಿಯತಸ್ಥಾನದ ಯತಿವಿಲಂಘನೆ ದೋಷ ಕರವಲ್ಲವೆಂದು ಹೇಳಿದೆ.

ಇಷ್ಟು ಸಂಗತಿಗಳನ್ನು ತಿಳಿಸಿದ ಮೇಲೆ, ದೋಷಪ್ರಭೇದ ಅನಂತವೆಂದೂ 'ಕವಿರಾಜ ಮಾರ್ಗ'ದಲ್ಲಿ ಹೇಳಲಾಗಿದೆ (೧–೧೧೧). ವ್ಯಾಕರಣದೋಷಗಳಾಗಿ ಕಾರಕ (ವಿಭಕ್ತಿ), ವಚನ, ಗುರು, ಲಘು, ಉಚ್ಚಾರಣೆ, ಸಮುಚ್ಚಯ, ವಿಕಲ್ಪ, ಅವಧಾರಣೆ, ವಿಶಂಕೆಗಳ ದೋಷಗಳನ್ನು ತಿಳಿಸಲಾಗಿದೆ. ಇವು ಆಧುನಿಕ ಕಾವ್ಯದೋಷಗಳೂ ಆಗಿವೆ.

ಕನ್ನಡದಲ್ಲಿ ಕಾವ್ಯದೋಷಗಳನ್ನು ನಿರೂಪಿಸುವ ಇನ್ನೊಂದು ಪ್ರಮುಖ ಲಕ್ಷಣಗ್ರಂಥ ಎರಡನೆಯ ನಾಗವರ್ಮನ (೧೧೪೨) 'ಕಾವ್ಯಾವಲೋಕನ'. ಇದರಲ್ಲಿ 'ಕಾವ್ಯಮಲವ್ಯಾವೃತ್ತಿ' ಎಂಬ ಅಧಿಕರಣ (ಅಧ್ಯಾಯ) ಇದೆ. ವ್ಯಾವೃತ್ತಿ ಎಂದರೆ 'ಹೊರದೂಡುವುದು', ಇದರಲ್ಲಿ ಹೇಳಿರುವ ಪದದೋಷ ಸಂಧಿದೋಷಗಳಿವು : ಅಸಮರ್ಥ, ಅಪ್ರತೀತ, ವಿಸಂಧಿ, ವಿರೂಪ ಸಂಧಿ, ವಿಪರೀತ ಕಲ್ಪನೆ, ನೀರಸ (ಗ್ರಾಮ್ಯ, ಅಸಭ್ಯ), ಕಷ್ಟ (ಶ್ರುತಿವಿರಸ). ಅರ್ಥವನ್ನು ತಿಳಿದಂತೆ ತಿಳಿಸದುದು ಅಸಮರ್ಥ, ಅರ್ಥವೇ ಗೂಢವಾಗಿರುವುದು ಅಪ್ರತೀತ. ಉದಾ : 'ಅಸಿತಾರ್ಚಿವಯಸ್ಯಾಧ್ವದೊಳ್', ಅಸಿತಾರ್ಚಿ ಎಂದರೆ ಅಗ್ನಿ : ವಯಸ್ಯ ಎಂದರೆ ಸ್ನೇಹಿತ : ಅಧ್ವ ಎಂದರೆ ದಾರಿ. ಒಟ್ಟಿಗೆ ಅರ್ಥ : ಅಗ್ನಿಯ ಸಖನಾದ ವಾಯುವಿನ ದಾರಿ ಅಂದರೆ 'ಆಕಾಶ' ಎಂದಾಗುವುದು. ಇಂತಹ ಮಾತಿಗೆ ಅರ್ಥ ತಿಳಿಯುವುದು ಅತಿ ಕಠಿನವಾದುದ ರಿಂದ 'ಅಪ್ರತೀತ' ಎನಿಸುವುದು.

**ವಾಕ್ಯದೋಷ ವಾಕ್ಯಾರ್ಥದೋಷಗಳಿವು :** ವ್ಯವಹಿತ (ವ್ಯತಿಕೀರ್ಣಪದಕ್ರಮ; ಅನ್ವಯವಿಲ್ಲ ದಿರುವುದು), ಏಕಾರ್ಥ (ಪುನರುಕ್ತಿದೋಷ : ಇದು ಕೋಪ, ವಿಷಾದ, ಭಯ, ವಿಸ್ಮಯ ಗಳಲ್ಲಿ ನಿರ್ದೋಷ. ಹಾಗೆಯೇ ಕರಿಕಳಭ, ಶಿರಶ್ಶೇಖರ ಎಂದಾಗ ಪುನರುಕ್ತದೋಷ ವಾಗದು), ವ್ಯರ್ಥ (ಪೂರ್ವಾಪರವಿರುದ್ಧ), ಅನರ್ಥಕ, ಅಕ್ರಮ, ಕಾಲವಿರುದ್ಧ ಸ್ವಭಾವವಿರುದ್ಧ, ದೇಶವಿರುದ್ಧ (ಈ ಮೂರು ಕವಿಕೌಶಲದಿಂದ ಗುಣಗಳೆನಿಸುತ್ತವೆ. ಪದ್ಯ ೪೭೫), ಶಾಸ್ತ್ರವಿರುದ್ಧ (ಅಂದರೆ—ನ್ಯಾಯ, ಆಗಮ, ರಾಜನೀತಿ, ವೇದ, ಕಲೆ, ಕಾಮತಂತ್ರ ವಿಷಯಗಳಿಗೆ ವಿರುದ್ಧ ಆದರೂ ಉಕ್ತಿಕ್ರಮದಿಂದ ದೋಷರಹಿತವಾಗು ವುದು.), ಯತಿಭಂಗ, ಭಿನ್ನವೃತ್ತ (ಲಘು ಗುರು ಗಣದೋಷ) ಅನರ್ಥಕ (ಅನವಶ್ಯವಾಗಿ ಮಿಗೆ, ದಲ್, ವಲಂ ಮುಂತಾದ ಅವ್ಯಯಗಳ ಅತಿರೇಕದ ಬಳಕೆ; ಆದರೆ ಇವನ್ನು ವಾಕ್ಯಕ್ಕೆ ಅಲಂಕಾರ ಬರುವಲ್ಲಿ ಪ್ರಯೋಗಿಸಬಹುದು).

ಹಿಂದಿನ ಕನ್ನಡ ಕವಿಗಳು ಸಂಸ್ಕೃತ ಶಾಸ್ತ್ರ ಕಾವ್ಯ ಎರಡನ್ನೂ ಚೆನ್ನಾಗಿ ಅಭ್ಯಾಸ ಮಾಡಿದವರಾಗಿದ್ದರು. ಸಂಸ್ಕೃತ ಲಾಕ್ಷಣಿಕರ ವಿವೇಕಪ್ರಭಾವಕ್ಕೆ ಒಳಗಾಗಿ ಸಂಸ್ಕೃತ ಕಾವ್ಯ ಗಳ ನೆಲೆಬೆಲೆಗಳನ್ನರಿತು ದೋಷರಹಿತವಾಗಿ ಕನ್ನಡದಲ್ಲಿ ಕಾವ್ಯರಚನೆಮಾಡುತ್ತಿದ್ದರು. ಮುಖ್ಯವಾಗಿ ಕನ್ನಡ ಚಂಪೂಕಾವ್ಯಗಳು ಈ ಹೇಳಿಕೆಗೆ ಸಾಕ್ಷಿಗಳಾಗಿವೆ. ಪ್ರಾಚೀನ ಲಾಕ್ಷಣಿಕರಿಂದ ಉಕ್ತವಾದ ಕಾವ್ಯಗುಣಗಳು, ಕಾವ್ಯಸೌಂದರ್ಯ, ರೀತಿ ರಸಪ್ರತಿಪಾದನೆಗಳು ಇಂದಿಗೂ ಅನುಸರಣೀಯವೇ ಆಗಿವೆ. ಕಾವ್ಯದೋಷಗಳು ಯಾವುವೆಂದರಿತು, ಅವು

ತಮ್ಮ ರಚನೆಗಳಲ್ಲಿ ಎಡೆಹಾಯದಂತೆ ಕೃತಿರಚನೆ ಮಾಡಬೇಕಾದುದು ಆಧುನಿಕ ಕವಿಧರ್ಮವೇ ಆಗಿದೆ. ಆದರೆ ಇಂದಿನ ಕವಿಗಳಲ್ಲಿ ಶಾಸ್ತ್ರಕ್ಕೆ ನಿರಾಕರಣೆಯಿರುವುದರಿಂದ ದೋಷ ಸಮೃದ್ಧಿಯೇ ಕಾವ್ಯಸಂಪದವಾಗಿದೆ ಎಂದರೆ ಹೆಚ್ಚಲ್ಲ! ಇದು ಪರಿಹಾರವಾಗಬೇಕಾದುದು. ಈ ದೃಷ್ಟಿಯಿಂದ ಆಧುನಿಕ ಕವಿಗಳ ಹಾಗೂ ಕಾವ್ಯವಿಮರ್ಶಕರ ಕಣ್ದೆರೆಯಿಸುವ ಕಾರ್ಯವಾಗಬೇಕಾಗಿದೆ.

ಕನ್ನಡದ ಪ್ರಾಚೀನ ಕವಿಗಳು ಗಾತ್ರ ಪಾತ್ರಗಳೆರಡನ್ನೂ ಲಕ್ಷ್ಯದಲ್ಲಿಟ್ಟುಕೊಂಡು ಕಾವ್ಯಗಳನ್ನು ರಚಿಸಿರುತ್ತಾರೆ. ತುಂಡುಗವಿತೆಗಳನ್ನು—ಸಾಂಪ್ರತ ಪ್ರಚಲಿತವಿರುವ ಭಾವಗೀತಗಳನ್ನು—ಕಾವ್ಯವೆನ್ನುತ್ತಿದ್ದ ಉದಾಹರಣೆಯಿಲ್ಲ. 'ವಾಕ್ಯಂ ರಸಾತ್ಮಕಂ ಕಾವ್ಯಂ' ಎಂಬಲ್ಲಿ ರಸಾತ್ಮಕವಾಗಿ ಒಂದೇ ಒಂದು ವಾಕ್ಯ ಬರೆದರೆ ಸಾಕು, ಅದೇ ಕಾವ್ಯ ಎಂದರ್ಥವಲ್ಲ. ಅಂತಹ ವಾಕ್ಯಗಳ ಸಮುದಾಯವುಳ್ಳ ರಚನೆ ಕಾವ್ಯವೆನಿಸುವುದೆಂದು ತಾತ್ಪರ್ಯ. ಆಧುನಿಕ ಕಾಲದಲ್ಲಿ ಕವನಗಳನ್ನು ಕಾವ್ಯವೆನ್ನಲಾಗುತ್ತಿದೆ. ಹೀಗೆ ಹೇಳುವುದು, ತಿಳಿಯುವುದು ಕೂಡ ಒಂದೇ ದೋಷವೇ ಸರಿ.

ಕವನಗಳನ್ನೂ ಒಳಗೊಂಡಂತೆ ಆಧುನಿಕ ಕಾವ್ಯಗಳನ್ನು ಅನುಲಕ್ಷಿಸಿ, ಕಾವ್ಯದೋಷಗಳನ್ನು ಬಾಹ್ಯ ಮತ್ತು ಆಂತರಿಕ ಎಂದು ವರ್ಗೀಕರಿಸಬಹುದು. ಬಾಹ್ಯದೋಷಗಳಲ್ಲಿ ಮುಖ್ಯವಾದುವು ಎರಡು: ಪ್ರಕಟನೆಗೆ ಮೊದಲು ಪರಿಣತರಿಂದ ತಿದ್ದಿಸದಿರುವುದು ಮತ್ತು ಮುದ್ರಣದೋಷಗಳು. ಪ್ರಾಚೀನ ಕವಿಗಳು ಕಾವ್ಯರಚಿಸಿದರೆ, ಜನತೆಯ ಮುಂದಿಡುವ ಮೊದಲು ಜಾಣರಿಂದ ತಿದ್ದಿಸುತ್ತಿದ್ದರೆಂಬುದನ್ನು ಇದೇ ಲೇಖನದಲ್ಲಿ ತಿಳಿಸಿ ಆಗಿದೆ. ಆದರೆ ಆಧುನಿಕರಿಗೆ ಸಾಮಾನ್ಯವಾಗಿ ಇತರರ ತಿದ್ದುಪಡಿ ಬೇಕಾಗಿಲ್ಲ. ಸ್ವತಃ ನಿಷ್ಕಲ್ಮಷರು, ಪರಿಣತರು, ಪ್ರಮಾದಾತೀತರು; ತಾವು ಬರೆದುದೆಲ್ಲ ಸರಿ, ಪರಿಷ್ಕೃತ ಮತ್ತು ಉತ್ಕೃಷ್ಟ ಎಂಬ ಹಮ್ಮು! ತಮ್ಮ ರಚನೆಗೆ ಒಂದೆರಡು ಕಡೆಯಿಂದ ಹೊಗಳಿಕೆ ಬಂದರೆ, ಹೊಗಳಿಕೆಯ ಪರಿಣಾಮವಾಗಿ ಬಹುಮಾನ ಬಂದರೆ, ಅವರ ಹಿರಿಮೆಯ ಗರಿಮೆಯ ರಾಶಿಗೆ ಪಾರಾಶಿಯೇ ಕಿರಿದಾಗುವುದು. ಕೆಲವರು ಕವಿಗಳು ತಿದ್ದಿಸಿಕೊಂಡಿದ್ದರೂ ಅದನ್ನು ಹೇಳಿಕೊಳ್ಳುವುದು ಅವರಿಗೆ ಅಗೌರವ.

ಬಾಹ್ಯದೋಷಗಳಲ್ಲಿ ಎರಡನೆಯದು ಮುದ್ರಣದೋಷ. ಇದಕ್ಕೆ ಕಾರಣ—ಮುದ್ರಣಕ್ಕಾಗಿ ಶುದ್ಧಪ್ರತಿಯನ್ನು ಒದಗಿಸದಿರುವುದು, ಕರಡನ್ನು ಪರಿಣತರಿಂದ ತಿದ್ದಿಸದಿರುವುದು, ತಿದ್ದುವಿಕೆಯಲ್ಲಿ ಪದಗಳ ವಿಶ್ಲೇಷಣೆ ಅಲಕ್ಷಿತವಾಗಿರುವುದು. ಪದಗಳ ವಿಶ್ಲೇಷಣೆ ಪದ್ಯಗಳಲ್ಲಿ ಅತಿಮುಖ್ಯ 'ಪದ' ಎಂದರೆ, ಪ್ರಕೃತಿ ಪ್ರತ್ಯಯಗಳೆರಡೂ ಸೇರಿಕೊಂಡ ರೂಪ. ಅದನ್ನೆಂದಿಗೂ ಬಿಡಿಸಿ ಇಡಬಾರದು. ರಾಮನಿಂದ, ಮನೆಯನ್ನು ಎಂಬಿವನ್ನು ರಾಮನ ಇಂದ, ಮನೆ ಅನ್ನು ಎಂಬ ರೂಪದಲ್ಲಿ ಕಾಣಿಸಬಾರದು. 'ಪೇಳ್ದಂ' ಎಂಬುದನ್ನು ಪೇಳ್ ದಂ ಎಂದು ವಿಂಗಡಿಸಿ ಇಡಬಾರದು. ಸಮಾಸಪದವನ್ನೂ ಒಂದೇ ಪದವಾಗಿ ಗಣಿಸಬೇಕು. ದೀರ್ಘಸಮಾಸಪದವನ್ನು ಮಾತ್ರ ಅರ್ಥಕ್ಕೆ ಬಾಧೆ ಬಾರದಂತೆ ಅಲ್ಲಲ್ಲಿ ಒಂದಕ್ಷರದ ಎಡೆಬಿಟ್ಟು ಕಾಣಿಸುವ ಪದ್ಧತಿ ಕನ್ನಡದ ಛಾಯಮಾನಗಳಲ್ಲಿ ಒಂದು.

ಉದಾ : ಶ್ರೀಮನ್ನಾಗೇಂದ್ರಭೋಗ ಸ್ಫುರದರುಣಮಣಿದ್ಯೋತಿಸಂಧ್ಯಾನಿಬದ್ಧ ಪ್ರೇಮಂ ಎಂಬ ಸಮಾಸಪದವನ್ನು 'ಶ್ರೀಮನ್ನಾಗೇಂದ್ರಭೋಗ ಸ್ಫುರದರುಣ ಮಣಿ ದ್ಯೋತಿಸಂಧ್ಯಾ ನಿಬದ್ಧಪ್ರೇಮಂ' ಎಂದು ಎಡೆಕೊಟ್ಟು ಕಾಣಿಸುವುದು ದೋಷವಲ್ಲ. ಇದಕ್ಕೆ ಸಮರ್ಥನೆಯೂ ಇದೆ—

ಸಂಧಿರೇಕಪದೇ ನಿತ್ಯಾ ನಿತ್ಯಾ ಧಾತೂಪಸರ್ಗಯೋಃ ।
ನಿತ್ಯಾ ಸಮಾಸೇ ವಾಕ್ಯೇ ತು ಸಾ ವಿವಕ್ಷಾಮಪೇಕ್ಷತೇ ॥

ದೀರ್ಘಸಮಾಸವನ್ನು ವಾಕ್ಯವಾಗಿ ವಿಕಲ್ಪವೆಂದು ತಿಳಿಯಬಹುದು.

**ಆಂತರಿಕ ದೋಷಗಳು :** ಕಾವ್ಯಸೌಂದರ್ಯವಿರುವುದು ಪ್ರಧಾನವಾಗಿ ಅದರ ಆಂತರಿಕ ಶೋಭೆಯಲ್ಲಿ. ಆಧುನಿಕ ಕನ್ನಡಕಾವ್ಯಗಳಲ್ಲಿ ಆಂತರಿಕಶೋಭೆಗೆ ಬಾಧಕವಾಗುವ ಕಾವ್ಯ ದೋಷಗಳನ್ನು ಈಗ ನೋಡೋಣ. ಹತ್ತು ಬಗೆಯ ಕಾವ್ಯದೋಷಗಳನ್ನಿಲ್ಲಿ ಕಾಣಿಸಿದೆ.

೧. ಛಂದೋಲ್ಲಂಘನೆ, ೨. ಪ್ರಾಸ ಪಾದನಿಯಮತ್ಯಾಗ, ೩. ಸಂಧಿದೋಷ, ೪. ದ್ವಿತ್ವ ದೋಷ, ೫. ಶಬ್ದದೋಷ (ಅಶುದ್ಧಶಬ್ದಗಳ ಬಳಕೆ), ೬. ಅನ್ವಯದೋಷ, ೭. ಪದ ದೋಷ (ವಿಭಕ್ತಿ, ಲಿಂಗ, ವಚನ, ಸರ್ವನಾಮದೋಷ). ೮. ಅರಿಸಮಾಸದೋಷ, ೯. ಅನ್ಯದೇಶೀ ಮಿಶ್ರಣದೋಷ, ೧೦. ನೇಯಾರ್ಥದೋಷ.

ಈ ಆಧುನಿಕ ಕಾವ್ಯದೋಷಗಳು ಯಾವ ಯಾವ ಕವಿಗಳ ಯಾವ ಯಾವ ಕಾವ್ಯ ಕವನಗಳಲ್ಲಿ ಎಲ್ಲಿ ಕಾಣಿಸಿವೆ ? ಎಂಬ ತೋರುಬೆರಲ ಪ್ರಯೋಗಕ್ಕೆ ಈ ಲೇಖನವನ್ನು ನಾನು ಬದ್ಧಗೊಳಿಸಲು ಇಚ್ಛಿಸುವುದಿಲ್ಲ. ಸಹೃದಯರು ಇವು ಎಲ್ಲಿಗೆ ಹೊದ್ದುಗೆಯಾಗುತ್ತವೆಂಬುದನ್ನು ಪರಿಶೀಲಿಸಿಕೊಳ್ಳಬಹುದಾಗಿದೆ. ಹಲವನ್ನು ಮಾತುಗಳಲ್ಲಿ ಹಾಗೂ ಗದ್ಯದಲ್ಲಿ ಕಾಣಬಹುದಾಗಿದೆ.

**೧. ಛಂದೋಲ್ಲಂಘನೆ :** ಛಂದಸ್ಸು ಪದ್ಯರಚನೆಯ ಶಾಸ್ತ್ರವಾದರೂ ಅದರ ವ್ಯಾಪ್ತಿ ದೊಡ್ಡದು. ಜಯಕೀರ್ತಿ ತನ್ನ 'ಛಂದೋನುಶಾಸನ'ದಲ್ಲಿ ಹೀಗೆಂದಿದ್ದಾನೆ :

ಛಂದಶ್ಶಾಸ್ತ್ರಂ ಬಹಿತ್ರಂ ತದ್ವಿವಿಕ್ಷೋಃ ಕಾವ್ಯಸಾಗರಂ ।
ಛಂದೋಭಾಗ್ ವಾಙ್ಮಯಂ ಸರ್ವಂ ನ ಕಿಂಚಿತ್ ಛಂದಸಾ ವಿನಾ ॥

ಎಂದರೆ—ಕಾವ್ಯವೆಂಬ ಸಾಗರವನ್ನು ದಾಟಲು ಪ್ರವೇಶಿಸುವವನಿಗೆ ಛಂದಸ್ಸೆಂಬುದು ಹಡಗು. ಎಲ್ಲ ವಾಙ್ಮಯವೂ ಛಂದಸ್ಸಿನಿಂದ ಕೂಡಿದೆ. ಛಂದಸ್ಸನ್ನು ಬಿಟ್ಟಿರುವುದು ಯಾವುದೂ ಇಲ್ಲ. ಹೀಗೆನ್ನುವಾಗ ಪದ್ಯಕವನ ಮಾತ್ರವಲ್ಲ, ಗದ್ಯ ಸಹಿತ ಛಂದೋಬದ್ಧ ರಚನೆಯೇ ಆಗುತ್ತದೆ. ಆದರೆ, ಈ ಉಕ್ತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಛಂದಸ್ಸಿಗೆ ಮೂಲ ಅಕ್ಷರಗಳು ಲಘು-ಗುರು. ಭಾಷೆಯ ಎಲ್ಲ ಅಕ್ಷರಗಳೂ ಲಘು ಗುರು ಬಿಟ್ಟರೆ ಬೇರೆ ಇಲ್ಲ. ಆದುದರಿಂದ ಜಯಕೀರ್ತಿ ಹಾಗೆಂದಿರುವುದೆಂದು ತಿಳಿಯಬೇಕು. ಛಂದಸ್ಸು ಪದ್ಯರಚನೆಯ ಶಾಸ್ತ್ರ...

> ಛಂದಮನಱಿಯದೆ ಕವಿತೆಯ
> ದಂದುಗದೊಳ್ ತೊಳಲಿ ಸುಳಿವ ಕುಕವಿಯೆ ಕುರುಡಂ ॥ (ಪೀಠಿಕೆ : ಪದ್ಯ ೧೭)

ಹೀಗಿರುವಾಗ, ಛಂದಸ್ಸನ್ನು ಹೇಯವೆಂದು ತೊರೆದು ಸ್ವಚ್ಛಂದಸ್ಸಿಗೆ ಹೊಸ ಹೆಸರನ್ನು ಇಟ್ಟು ಕಾವ್ಯರಚನೆ ಮಾಡುವುದೆಂದರೆ, ಅದು ಛಂದಸ್ತ್ಯಾಗವೇ ಆಗುತ್ತದೆ ಎಂದು ನನ್ನ ಅಭಿಪ್ರಾಯ. ಏಕೆಂದರೆ, ಅಂತಹ ರಚನೆಗಳಲ್ಲಿ ನಿಶ್ಚಿತ ಲಘು ಗುರು ವಿನ್ಯಾಸವಿರುವುದಿಲ್ಲ ; ಪ್ರಾಸವಿರುವುದಿಲ್ಲ ; ಪಾದನಿಯಮವೂ ಅಲಕ್ಷಿತ. ಪಾದಗಳು ಸರಿಯಾಗಿ ಗಣವಿಭಜನೆಗೆ ಅಳವಡುವುದಿಲ್ಲ. ಹೀಗಿದ್ದರೂ ಅಭಿಮಾನಕ್ಕೆ ಬದ್ಧರಾದವರು ಅಂಥವನ್ನು ಪ್ರಶಂಸಾಪೂಜೆ ಮಾಡದಿರುವುದಿಲ್ಲ. ಇದು ಕನ್ನಡ ಕಾವ್ಯಕಲೆಗೆ ಕೇಡು ಎಂದರೆ ತಪ್ಪಲ್ಲ. ಆದುದರಿಂದ ಛಂದೋಲ್ಲಂಘನೆಯನ್ನು ಆಧುನಿಕ ಕಾವ್ಯದೋಷವನ್ನಾಗಿ ಗಣಿಸಬಹುದು.

೨. **ಪ್ರಾಸ ಪಾದನಿಯಮತ್ಯಾಗ** : ಇದು ಛಂದಸ್ಸಿಗೆ ಒಳಪಟ್ಟುದಾದರೂ ಪ್ರಾಸವು ಶಬ್ದಾಲಂಕಾರ ವಿಷಯವಾದುದರಿಂದ ಪ್ರತ್ಯೇಕ ವಿವರವಿಷಯವೆನಿಸಿದೆ. 'ಪ್ರಾಸ' ಎಂಬುದು ಪದ್ಯಪಾದಗಳಲ್ಲಿ ಬರಬೇಕಾದ ದ್ವಿತೀಯಾಕ್ಷರಪ್ರಾಸವೆಂದು ತಿಳಿಯಬೇಕು. ಕನ್ನಡದಲ್ಲಿ ಕವಿತಾರಚನೆಯ ವೈಶಿಷ್ಟ್ಯವೇನು ? ಎಂಬ ಪ್ರಶ್ನೆಗೆ ಮುಖ್ಯೋತ್ತರವಾಗಿ 'ಕನ್ನಡದಲ್ಲಿ ದ್ವಿತೀಯಾಕ್ಷರ ಪ್ರಾಸವಿದೆ ?' ಎಂದು ಅಭಿಮಾನದಿಂದ ಹೇಳಿಕೊಳ್ಳುವ ಕಾಲ ಇತ್ತು ; ಇಂದು ಇಲ್ಲ. ದ್ವಿತೀಯಾಕ್ಷರಪ್ರಾಸವನ್ನು ಕನ್ನಡದಲ್ಲಿ ಎಂದೆಂದೂ ಇರತಕ್ಕ ವೈಶಿಷ್ಟ್ಯವೆಂದು 'ಕವಿರಾಜಮಾರ್ಗ' ಸಾರಿ ಹೇಳಿದೆ :

> ನುತಶಬ್ದಾಲಂಕಾರದೊ । ಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ ।
> ಕೃತಕೃತ್ಯಮಪ್ಪುದೆಲ್ಲರ । ಮತದಿಂದದು ತಪ್ಪೆ ಕಾವ್ಯಮೇಂ ಶೋಭಿಪುದೇ ॥ (೨-೩೦)

'ಕವಿಜಿಹ್ವಾಬಂಧನ' ಎಂಬ ಛಂದೋಗ್ರಂಥದ ಸೂಕ್ತಿಯಿದು :

> ಉಸಿರಳಿದ ತನುವವೋಲ್ ಭಾ । ವಿಸಲುಂ ಪ್ರಾಸಿಲ್ಲದಿರ್ಪ ಪದ ಪದ್ಯಂಗಳ್ ।
> ಒಸೆದದನು ಪೇಳೆ ಕೇಳಿದ । ರಸಿಕರ್ಗಾಯುಷ್ಯ ಮಾನಹಾನಿಗಳಕ್ಕುಂ ॥

ಸರ್ವಜ್ಞಕವಿಯ ವಚನರತ್ನವಿದು :

> ಪ್ರಾಸಿಲ್ಲದಕ್ಕರವ ತಾಸು ಹಾಡಿದರೇನು
> ಸಾಸವೆ ಸುಣ್ಣ ಹದಮಾಡಿ ಕಣ್ಣಿಗೆ
> ಪೂಸಿಕೊಂಡಂತೆ—ಸರ್ವಜ್ಞ ॥

ಕನ್ನಡದಲ್ಲಿ ಕವಿತೆಗೆ ವೈಶಿಷ್ಟ್ಯಪೂರ್ಣವಾದ ಕಳೆಯನ್ನು ತಂದಿರುವ, ತರುತ್ತಿ ಪ್ರಾಸವನ್ನು ಕೊಳೆಯಾಗಿ ಕಾಣುವುದು ವಿವೇಕವೆ ? ಪ್ರಾಸವನ್ನು ತೊರೆದ ಕವಿಗಳು ಸಾಧಿಸಿದ ಮಹತ್ತ್ವವೇನು ? ಆದರೆ ಅಂಥವರು ಇಂದಿನವರ ಪ್ರಶಂಸೆಗೆ ಪಾತ್ರರಾಗಿದ್ದಾ ರೆಂದರೆ ಕಾವ್ಯದೋಷವನ್ನೆ ಗುಣವೆಂದ ಹಾಗಾಯಿತಲ್ಲವೆ ? ಹೀಗಾಗಲು ಕಾರಣವೆಂದರೆ, ಆಧುನಿಕ ಕವಿಗಳು ಪರಿಸಿಕೊಂಡಿರುವ ಪಾಶ್ಚಾತ್ಯ ಕವಿಮಾರ್ಗದ ಅಂಧಪ್ರೇಮವೆ ಸಿ

ದ 'ಸ್ವಾನ್ಯಲೋಕನಂ' ಎಂಬ ಚಂಪೂಕಾವ್ಯಕ್ಕೆ ಕೆ. ಕೃಷ್ಣಮೂರ್ತಿಯವರು ೧೯೫೫ ರಲ್ಲಿ ಬರೆದ ಅಭಿಪ್ರಾಯ ಕವಿತೆಯಲ್ಲಿರುವ ಒಂದು ಕಂದಪದ್ಯ ಪ್ರಸ್ತುತವಾಗಿದೆ :

ರುಚಿಚಕ್ರದ ಪರಿವರ್ತಂ
ಪ್ರಚಲಿತ ಪಾಶ್ಚಾತ್ಯಮಾರ್ಗದಂಧಪ್ರೇಮಂ
ಸುಚರಿತ ಕವಿಪದ್ಧತಿಯಂ
ವಿಚಲಿತಗೊಳಿಸಲ್ಕೆ ಸಾಲ್ವುದೆಂತೀ ಧರೆಯೊಳ್ ॥

ಬಂದ ಗಾಳಿಯ ಸುತ್ತಿನಂತೆ ಬಂದಿರುವ ಪಾಶ್ಚಾತ್ಯ ಕಾವ್ಯಮಾರ್ಗದ ಕುರುಡೊಲವು ಕಲುಗುವ ಕಾಲ ಬಂದಿದೆಯೆಂಬ ಸೂಚನೆ ಮೇಲಿನ ಉದಾಹೃತಪದ್ಯದಲ್ಲಿದೆ. ಪ್ರಾಸ ಮತೆಯೇ ಪಾದನಿಯಮವನ್ನು ತೊರೆದಿರುವುದೂ ಆಧುನಿಕ ಕಾವ್ಯದೋಷವೆನಿಸುತ್ತದೆ.

೭. **ಸಂಧಿದೋಷ :** ಕನ್ನಡ ಕಾವ್ಯರಚನೆಗೆ ತೊಡಗುವವರಿಗೆ ಕನ್ನಡ ಸಂಸ್ಕೃತ ಎಂಬ ಎರಡೂ ಭಾಷೆಗಳ ಸಂಧಿನಿಯಮಗಳ ಪರಿಜ್ಞಾನ ಅನಿವಾರ್ಯ. ಅಂತಹ ನಿಯಮಗಳನ್ನು ಮೀರಿದು ದರಿಂದ ಕಂಡುಬರುವ ಅಸಾಧು ಪ್ರಯೋಗಗಳಲ್ಲಿ ಕೆಲವಿವು (ಕಂಸದೊಳಗೆ ಶುದ್ಧರೂಪ ವಿದೆ): ಜಾತ್ಯಾತೀತ (ಜಾತ್ಯತೀತ), ಕೋಟ್ಯಾಂತರ (ಕೋಟ್ಯಂತರ), ಮನರಂಜನೆ (ಮನೋರಂಜನೆ), ಮನೋಸಾಕ್ಷಿ (ಮನಸ್ಸಾಕ್ಷಿ), ಹೇಳಲೆತ್ನಿಸು (ಹೇಳಲು ಯತ್ನಿಸು), ಕೈಸ್ಸಿ (ಕೈಯಲ್ಲಿ), ದುಃಖನೇ ಇಲ್ಲ (ದುಃಖವೇ ಇಲ್ಲ), ಒಗ್ಗಟ್ಟು (ಒಕ್ಕಟ್ಟು) . . . ಇತ್ಯಾದಿ.

ಸಂಧಿದೋಷದಲ್ಲಿ ವಿಸಂಧಿದೋಷವೂ ಒಂದು : ಪದ್ಯದಲ್ಲಿ ಮೊದಲ ಅಕ್ಷರವಾಗಿ ಸ್ವರವಿರಬಹುದು. ಪದ್ಯಾರ್ಧದ ಪ್ರಾರಂಭದಲ್ಲಿಯೂ ಇರಬಹುದು. ಹಾಗೆಯೇ ನಿಪಾತ, ಅವಧಾರಣೆ, ವಿಶಂಕೆ, ಪ್ಲುತ, ಮೆಚ್ಚಿಕೆಯ ಮತ್ತು ಆಕ್ಷೇಪದ ಸೂಚಕವಾದ ಓಕಾರ, ಅಂಗೀಕಾರಾರ್ಥದ 'ಎಮ', ವಾಕ್ಯವೇಷ್ಟನ ಇರುವಲ್ಲಿ ವಿಸಂಧಿ ನಿರ್ದೋಷ. ಉಳಿದೆಡೆ ಗಳಲ್ಲಿ ಸ್ವರಾಕ್ಷರ (ವ್ಯಂಜನ ಸೇರದುದು) ಇದ್ದರೆ, ವಿಸಂಧಿ ದೋಷವೆನಿಸುತ್ತದೆ. ಇದು ಕಾವ್ಯದೋಷ. ಆಧುನಿಕ ಕಾವ್ಯಗಳಲ್ಲಿ ಕವಿತೆಗಳಲ್ಲಿ ವಿಸಂಧಿದೋಷವನ್ನು ಕಡೆಗಣಿಸಲಾಗಿದೆ. ಒಂದು ಉದಾಹರಣೆ : ಇದು ಕೆ. ಎಸ್. ನರಸಿಂಹಸ್ವಾಮಿಯವರ ಕವನ 'ಬೆಳಗಿನ ದನಿ'ಯ (ಉದಯವಾಣಿ ೩-೧-೧೯೯೩ರಲ್ಲಿ ಪ್ರಕಟಿತ) ಏಳು ನುಡಿಗಳಲ್ಲಿ ಐದನೆಯದು—

ಬೆಳಗಾಯಿತು ಹಗಲೇರಿತು ಆಗಸದಲಿ ಉರಿದು
ಹೊಸ ಹೆಜ್ಜೆಯನಿಡಲೆದ್ದಿತು ಸಂತಸದಲಿ ಸುರಿದು

ಇದರ ಮೊದಲ ಪಾದದಲ್ಲಿ ಎರಡು ಕಡೆ ವಿಸಂಧಿಯಿದೆ. ಆಧುನಿಕ ಭಾವಗೀತೆಗಳಲ್ಲಿ, ಚಿತ್ರಗೀತೆಗಳಲ್ಲಿ, ಬಾಲಕರ ಗೀತೆಗಳಲ್ಲಿ, ಮಾತ್ರವಲ್ಲದೆ ಆಧುನಿಕ ಮಹಾಕಾವ್ಯಗಳಲ್ಲಿಯೂ ಇಂತಹ ವಿಸಂಧಿದೋಷಗಳು ಎಷ್ಟೋ ಇರುವುದರಿಂದ ಇದು ಕಾವ್ಯದೋಷವೆಂಬ ಕಲ್ಪನೆಯೇ ಜನಮನದಿಂದ ಅಳಿಸಿಹೋಗುವ ಪರಿಸ್ಥಿತಿಯೊದಗಿದೆ.

೮. **ದ್ವಿತ್ವದೋಷ :** ದ್ವಿತ್ವ ಎಂದರೆ, ಒತ್ತಿನಿಂದ ಕೂಡಿದ ಅಕ್ಷರ. ಅದನ್ನು ಒತ್ತಿ ಉಚ್ಚರಿಸ

ಬೇಕು. ಕನ್ನಡದಲ್ಲಿ ಅದು ಮೂರು ವಿಧ: ಸಜಾತೀಯದ್ವಿತ್ವ, ವಿಜಾತೀಯದ್ವಿತ್ವ ಮತ್ತು ಶಿಥಿಲದ್ವಿತ್ವ. ಒಂದು ವ್ಯಂಜನಕ್ಕೆ ಅದೇ ವ್ಯಂಜನ ಒತ್ತಾಗಿದ್ದರೆ ಅದು ಸಜಾತೀಯ ದ್ವಿತ್ವ; ಬೇರೊಂದು ವ್ಯಂಜನವಾಗಿದ್ದರೆ ಅದು ವಿಜಾತೀಯ ದ್ವಿತ್ವ; ಒತ್ತಿದ್ದರೂ ಒತ್ತದ ಉಚ್ಚಾರಣೆಯುಳ್ಳದು ಶಿಥಿಲದ್ವಿತ್ವ. ದ್ವಿತ್ವಾಕ್ಷರದ ಹಿಂದಿನ ಹ್ರಸ್ವವು (ಶಿಥಿಲದ್ವಿತ್ವ ಹೊರತು) ಗುರುವೆನಿಸುವುದು. ಆಗ ಅದಕ್ಕೆ ಮಾತ್ರೆಗಳು ಎರಡು. ಪದ್ಯರಚನೆ ಮಾಡುವವರು ದ್ವಿತ್ವ ಶಿಥಿಲದ್ವಿತ್ವಗಳ ಮರ್ಮವನ್ನು ಅರಿತಿರಬೇಕು. ಇಲ್ಲವಾದರೆ ದ್ವಿತ್ವದೋಷ ಉಂಟಾಗುವುದು. ಇನ್ನೊಂದು ಬಗೆಯ ದ್ವಿತ್ವದೋಷವಿದೆ—ಪದ್ಯದಲ್ಲಿ ಎರಡು ಪದಗಳು ಹತ್ತಿರ ಬಂದಾಗ ಪರಪದದ ಪೂರ್ವಾಕ್ಷರ ದ್ವಿತ್ವವಾಗಿ ಪೂರ್ವಪದದ ಅಂತ್ಯಾಕ್ಷರ ಹ್ರಸ್ವವಾಗುವುದು. ಇದನ್ನು ಸಂಧಿದೋಷವೆಂದು ಹೇಳಲಾಗಿದೆ (ಶಮದ. ಸೂ. ೬೯): ದ್ವಿತ್ವಾಕ್ಷರವನ್ನು ಶಿಥಿಲದ್ವಿತ್ವವಾಗಿ ಉಚ್ಚರಿಸುವುದು ತಪ್ಪು. ಕುಮಾರವ್ಯಾಸನ ರಚನೆಯಲ್ಲಿ, ದಾಸರ ಪದಗಳಲ್ಲಿ ಒಮ್ಮೊಮ್ಮೆ ಕಾಣಿಸಿಕೊಳ್ಳುವ ಈ ದ್ವಿತ್ವದೋಷ ಆಧುನಿಕರ ರಚನೆಗಳಲ್ಲೆಲ್ಲ ಸಮೃದ್ಧವಾಗಿಯೇ ಕಂಡುಬರುತ್ತವೆ. ಕುಮಾರವ್ಯಾಸನ ಉದಾಹರಣೆ:

ಚೋರರ ಸಿಂದಿಗೆ ಶಿರಿಯ ಧ್ವಜದ
ಕ್ಷೀರವನು ಕ್ಷಯರೋಗಿ ಹೀರದ
ದಾರಣಾಂಗಿಯ ಪೆಳವ ಸಿಂದಿಗೆ ನಕ್ಕವೇನಹುದು ॥ (೧–೨೨)

ಈ ಪದ್ಯದಲ್ಲಿ ಕ್ಷೀ ಮತ್ತು ಕ್ಷ ಎಂಬುವು ದ್ವಿತ್ವಗಳು. ಅದರ ದ್ವಿತ್ವವಾಗಿ ಉಚ್ಚರಿಸಿದರೆ ಹಿಂದಿನ ಅಕ್ಷರ ಗುರುವಾಗುವುದರಿಂದ ಛಂದಸ್ಸು ಕೆಡುವುದು. ಶಿಥಿಲವಾಗಿ ಉಚ್ಚರಿಸುವುದು ಉಚ್ಚಾರಣದೋಷವಾಗುವುದು. ಆಧುನಿಕ ಕವಿಗಳ ರಚನೆಗಳಲ್ಲಿ ಇಂತಹ ದ್ವಿತ್ವದೋಷ ಅಸಂಖ್ಯವಾಗಿರುತ್ತದೆ. ಹಿಂದೆ ಉದಾಹರಿಸಿದ ಕೆ. ಎಸ್. ನರಸಿಂಹಸ್ವಾಮಿಯವರ ಕವನದ ಇನ್ನೊಂದು ನುಡಿ ನೋಡಿ:

ಬೆಳಗಿನ ದನಿ ಬೆಳಗಿನ ಹೂ ತೆನೆಗರಿಕೆಯ ಮೇಲೆ
ಬಾನ್ನೆಲೆಗಳ ಚುಂಬನದಲಿ ಸೌಂದರ್ಯದ ಜ್ವಾಲೆ

ಆರು ಮಾತ್ರೆಯ ಗಣಗಳಿಂದ ಕೂಡಿದ ಪಾದಗಳ ಕೊನೆಯದು ಮೂರು ಮಾತ್ರೆಯದು. ಎರಡನೆಯ ಪಾದದಲ್ಲಿ ಜ್ವಾ ಎಂಬ ದ್ವಿತ್ವವನ್ನು ಉಚ್ಚರಿಸಿದಾಗ ಅದರ ಹಿಂದಿನ ಹ್ರಸ್ವವು ಗುರುವಾಗುತ್ತದೆ. ಆಗ ಆ ಹಿಂದಿನದು ಏಳು ಮಾತ್ರೆಗಳ ಗಣವಾಗುವುದು ಛಂದೋದೋಷ. ಜ್ವಾ ವನ್ನು ಶಿಥಿಲವಾಗಿ ಉಚ್ಚಾರಣೆ ಮಾಡುವುದು ವ್ಯಾಕರಣದೋಷ. ದ್ವಿತ್ವದೋಷದ ಕೆಡುಕು ಸಾಮಾನ್ಯವೆ? ಆದರೆ ಆಧುನಿಕರು ಇವನ್ನೆಲ್ಲ ಲಕ್ಷಿಸುವರೆ? ಇಂತಹ ದೋಷಗಳಿಲ್ಲದ ಆಧುನಿಕ ರಚನೆಗಳು ವಿರಳವೇ ಸರಿ.

**೩. ಶಬ್ದದೋಷಗಳು:** ಕನ್ನಡ ಕಾವ್ಯಗಳಲ್ಲಿ ಅಚ್ಚಗನ್ನಡ, ಸಂಸ್ಕೃತ (ಸಮಸಂಸ್ಕೃತ, ತದ್ಭವ) ಶಬ್ದಗಳ ಪ್ರಯೋಗವಿರುತ್ತದೆ. ಅನ್ಯದೇಶೀ ಶಬ್ದಗಳೂ ಈಗೀಗ ನುಸುಳಿಬರುತ್ತಿವೆ. ಆಧುನಿಕರು ಅನೇಕರು ಅದನ್ನು ತಪ್ಪಾಗಿ ಬಳಸುತ್ತಿದ್ದಾರೆ. ಕೆಲವು ಉದಾಹರಣೆಗಳು

(ಆವರಣದಲ್ಲಿ ಶುದ್ಧರೂಪಗಳಿವೆ) :

ದುಂಬಿ (ತುಂಬಿ), ಮೊರೆಹೋಗು (ಮರೆಹೊಗು), ಮುಂದುವರೆ (ಮುಂದುವರಿ, ಮುಂಬರಿ), ಆಳ್ವಿಕೆ (ಆಳುವಿಕೆ, ಆಳಿಕೆ), ನೆಲೆಸು (ನೆಲಸು), ನಂತರ (ಅನಂತರ), ಗಾಯಿತ್ರಿ (ಗಾಯತ್ರಿ), ಭುವಿ (ಬುವಿ, ಭೂಮಿ), ಲೆಕ್ಕ (ಲೆಖ್ಖ). ಇಂತಹ ಉದಾಹರಣೆಗಳು ಎಷ್ಟೋ ಇವೆ. ಕಾವ್ಯರಚನೆಯಲ್ಲಿ ಶಬ್ದಶುದ್ಧಿ ಅತಿಮುಖ್ಯ.

೬. **ಅನ್ವಯದೋಷ :** ಯಾವುದೇ ಪದ್ಯರಚನೆ ಮಾತಿನ ಗೇಯಾತ್ಮಕ ಕಲಾತ್ಮಕ ಅಭಿವ್ಯಕ್ತಿಯಾದುದರಿಂದ ಅನ್ವಯದೋಷವಿಲ್ಲದಿರಬೇಕು. 'ಅನ್ವಯ' ಎಂದರೆ, ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯೆ, ಲಿಂಗ, ವಚನ, ವಿಭಕ್ತಿ, ವಿಶೇಷಣ, ಸರ್ವನಾಮ ಮುಂತಾದ ವಾಕ್ಯಾಂಶಗಳು ಸರಿಯಾದ ಸ್ಥಾನದಲ್ಲಿರುವಿಕೆ. ಪದ್ಯದಲ್ಲಿ ಅವುಗಳಿಗೆ ಸ್ಥಾನಪಲ್ಲಟವಿರುತ್ತದೆ. ಅರ್ಥಬೋಧೆಗಾಗಿ ಅದನ್ನು ಅನ್ವಯಮಾಡಲು ಸಾಧ್ಯವಿರಬೇಕು. ಆಧುನಿಕ ಕಾವ್ಯಗಳಲ್ಲಿ ಹಲವೆಡೆ ಪದ್ಯಗಳಿಗೆ ಅನ್ವಯವಿರುವುದಿಲ್ಲ. ಹಲವು ಅಧ್ಯಾಹಾರಗಳನ್ನು ಮಾಡಿಕೊಂಡು ಅರ್ಥವನ್ನು ಊಹೆಯಿಂದ ಹೊರಗೆಡಹಬೇಕಾಗುತ್ತದೆ. ಇದನ್ನು ಅನ್ವಯದೋಷವೆಂದು ಹೇಳಬಹುದು.

೭. **ಪದದೋಷ :** ಪದದೋಷದಲ್ಲಿ ವಿಭಕ್ತಿ, ಲಿಂಗ, ವಚನ, ಸರ್ವನಾಮ ಸಂಬಂಧದೋಷಗಳು ಅಂತರ್ಗತವಾಗುತ್ತವೆ. ಪ್ರಕೃತಿಗೆ ಪ್ರತ್ಯಯ ಸೇರಿ ಪದವಾಗುತ್ತದೆ. ಪರಸ್ಪರ ಸಂಬಂಧವುಳ್ಳಪದಗಳು ಸೇರಿದಾಗ ವಾಕ್ಯವಾಗುತ್ತದೆ. ಅಂತಹ ಸಂಬಂಧವುಳ್ಳ ಪದಗಳು ಕೂಡ ಕ್ಲೃಪ್ತ ಸ್ಥಾನದಲ್ಲಿರಬೇಕಾಗುತ್ತದೆ. ಇಲ್ಲಿ ಉದಾಹರಣೆಗಾಗಿ ಯಾವ ಆಧುನಿಕ ಕಾವ್ಯವನ್ನೂ ಉಲ್ಲೇಖಿಸದೆ, ವಾಕ್ಯಗಳನ್ನು ಕೊಟ್ಟಿದೆ. ಅವನ್ನು ಹೋಲುವ ಪದ್ಯವಾಕ್ಯಗಳಿರುತ್ತವೆಯೆಂದು ತಿಳಿಯಬೇಕು.

'ಸಚಿವಸಂಪುಟ ವಿಸ್ತರಿಸಿದ ಮುಖ್ಯಮಂತ್ರಿ' ಎಂದಾಗ, ಕರ್ತೃಪದ ಯಾವುದೆಂಬುದು ಅಸ್ಪಷ್ಟ. 'ಸಚಿವ ಸಂಪುಟವನ್ನು' ಎಂಬುದಾಗಿ ವಿಭಕ್ತಿಪ್ರತ್ಯಯ ಹಚ್ಚಿದರೆ ದೋಷ ಪರಿಹಾರವಾಗುವುದು. ಒಂದು ವಾಕ್ಯ ಹೀಗಿದೆ : ಕಾಮುಕನಾದ ವಿಭೀಷಣನ ಅಣ್ಣನಾದ ರಾವಣನನ್ನು ಸೀತೆ ಕಂಡಳು, ಇಲ್ಲಿ ವಿಶೇಷಣದ ಸ್ಥಾನ ತಪ್ಪಿದೆ. 'ರಾವಣನನ್ನು' ಎಂಬ ವಿಶೇಷ್ಯದ ಹಿಂದೆ ವಿಶೇಷಣವಿರಬೇಕು. 'ಜನ ಹೇಳುತ್ತಾರೆ' ಎಂದು ಪ್ರಯೋಗಿಸುವವರಿದ್ದಾರೆ. 'ಜನ' ಶಬ್ದ ಬಹುವಚನರೂಪವಲ್ಲ ; ಅದು ನಪುಂಸಕಲಿಂಗದ ಏಕವಚನವಾಗಿರುತ್ತದೆ. ಮನಸಲಿ, ಕನಸಲಿ—ಎಂಬ ಸಪ್ತಮೀವಿಭಕ್ತಿರೂಪವೂ ಸರಿಯಲ್ಲ : ಮನದಲಿ ಮನದಲ್ಲಿ, ಮನಸ್ಸಿನಲ್ಲಿ ಕನಸಿನಲ್ಲಿ ಎಂಬವು ಶುದ್ಧರೂಪಗಳು. ಪದದೋಷವಿಲ್ಲದ ರಚನೆಯ ವಾಕ್ಯಗಳು ಆಧುನಿಕ ಕಾವ್ಯಗಳನ್ನು ಅಲಂಕರಿಸಬೇಕು.

೮. **ಅರಿಸಮಾಸದೋಷ :** ಸಂಸ್ಕೃತವನ್ನೂ ಕನ್ನಡವನ್ನೂ ಬೆರಸಿ ಸಮಾಸಮಾಡಬಾರದು. ಅದು ಅರಿಸಮಾಸವೆನಿಸುವುದಾಗಿ ತ್ಯಾಜ್ಯ. ಆದರೆ, ಗಮಕಸಮಾಸದಲ್ಲಿ, ಬಿರುದಾವಳಿಯಲ್ಲಿ ದೋಷವಲ್ಲವೆಂದು ವೈಯಾಕರಣರು ತಿಳಿಸಿದ್ದಾರೆ (ಶಮದ, ಸೂ. ೧೮೫). ಪೂರ್ವಕವಿಪ್ರಯೋಗದ ಅರಿಸಮಾಸಕ್ಕೂ ಮಾನ್ಯತೆಯಿದೆ. ಆಧುನಿಕ ಕವಿಗಳು ಈ ದೋಷವನ್ನೆ

ಗುಣವೆಂದು ಭಾವಿಸಿದಂತಿದೆ. ಅರಿಸಮಾಸವನ್ನು ಪರಿಹರಿಸಬಹುದಾದ ಕಡೆಯೂ ಅಲಕ್ಷ್ಯಮಾಡುತ್ತಿದ್ದಾರೆ. ಸಹಬಾಳ್ವೆ, ತಡೆರಹಿತ, ಭಾಷಾಬಳಕೆ—ಇವನ್ನು ಸಹಜೀವನ, ತಡೆಯಿಲ್ಲದ, ಭಾಷಾಪ್ರಯೋಗ ಎಂದು ಸಮಾಸದೋಷ ಬಾರದಂತೆ ಪ್ರಯೋಗಿಸಬಹುದಾದರೂ ಹಾಗೆ ಮಾಡುತ್ತಿಲ್ಲ. ದೋಷಪ್ರಜ್ಞೆ ಇಲ್ಲದುದೇ ಇದಕ್ಕೆ ಕಾರಣ.

೯. **ಅನ್ಯದೇಶೀ ಮಿಶ್ರಣದೋಷ** : ಇಂಗ್ಲಿಷ್, ಹಿಂದೀ, ಉರ್ದು ಮುಂತಾದ ಭಾಷೆಗಳ ಶಬ್ದಗಳನ್ನು ಕವಿತೆಗಳಲ್ಲಿಯೂ ಬಳಸುವ ಪ್ರವೃತ್ತಿ ಈಗೀಗ ಕಂಡುಬರುತ್ತದೆ. ಅನಿವಾರ್ಯವಾದ ಕಡೆಯಲ್ಲಿ ಒಂದು ವೇಳೆ ಇದು ಕ್ಷಮ್ಯವೆನಿಸಬಹುದು, ಬೇಕುಬೇಕೆಂದೇ ಪ್ರಯೋಗಿಸುವುದು ಕಾವ್ಯದೋಷವಾದೀತು.

೧೦. **ನೇಯಾರ್ಥದೋಷ** : ಸಂಸ್ಕೃತದ ಕನ್ನಡದ ಲಾಕ್ಷಣಿಕರು ಈ ದೋಷವನ್ನು ಉದಾಹರಣೆಯೊಂದಿಗೆ ವಿವರಿಸಿದ್ದಾರೆ. ಆಧುನಿಕ ರಚನೆಗಳಲ್ಲಿ ಇದು ಮಿತಿಮೀರುತ್ತಿದೆ. 'ನೇಯ' ಎಂದರೆ ಎಳೆದುತರುವುದು. ಕವಿ ಕಲ್ಪಿಸಿಕೊಂಡ ಅರ್ಥವನ್ನು ಎಳೆದು ತರಬೇಕಾಗುವುದು 'ನೇಯಾರ್ಥ': 'ಕಲ್ಪಿತಾರ್ಥಂ ನೇಯಾರ್ಥಂ' ಎಂಬುದು ವಾಮನನ 'ಕಾವ್ಯಾಲಂಕಾರ'ದ ಸೂತ್ರ. ಭಾಮಹನೂ ಇದನ್ನು ಸೋದಾಹರಣವಾಗಿ ವಿವರಿಸಿದ್ದಾನೆ. ಆಧುನಿಕರಚನೆಗಳಲ್ಲಿ ಒಂದಾದ 'ಲಿಂಗಾಷ್ಟಕ'ದಲ್ಲಿ (ಪಿ. ಬಸವಣ್ಣ) ಒಂದು ನುಡಿಯಿದು.

ರೂಢಿಯ ಸೃಷ್ಟಿಗೆ ಕಾರಣ ಲಿಂಗಂ
ಕಾಡುವ ಪಾಪವ ದೂಡುವ ಲಿಂಗಂ
ಬೇಡಿದ ಭಾಗ್ಯವ ನೀಡುವ ಲಿಂಗಂ
ಬೇಡುವೆ ನಾಂ ಮನಸಾ ಶಿವಲಿಂಗಂ ॥ (ಕರ್ನಾಟಕಲೋಚನ, ಜೂನ್, ೧೯೫೨)

ಈ ಪದ್ಯದಲ್ಲಿ 'ಶಿವಲಿಂಗಂ' ಎಂಬುದು ಮತ್ತು ಅದಕ್ಕೆ ವಿಶೇಷಣಗಳಾದ ಪಾದಗಳ ಅಂತ್ಯದ 'ಲಿಂಗಂ' ಎಂಬವು ಸ್ಪಷ್ಟವಾಗಿ ಪ್ರಥಮಾವಿಭಕ್ತಿಯಲ್ಲಿವೆ. ಆದುದರಿಂದ 'ಶಿವಲಿಂಗಸ್ವರೂಪನಾಗಿರುವ ನಾವು ಮನಸ್ಸಿನಿಂದ ಬೇಡುತ್ತೇನೆ' ಎಂದೇ ಅರ್ಥ ಹೊರಡುವುದು. ಆದರೆ, ಕವಿ ಇಲ್ಲಿ ಲಿಂಗಸ್ವರೂಪನಾದ ಶಿವನನ್ನು ಎಂಬ ಅರ್ಥವನ್ನು ಭಾವಿಸಿಯೇ ಇದನ್ನು ರಚಿಸಿರುವುದು ಸ್ಪಷ್ಟವಿದೆ. ಇಲ್ಲಿ ಪ್ರಥಮಾವಿಭಕ್ತ್ಯರ್ಥಕ್ಕೆ ದ್ವಿತೀಯಾವಿಭಕ್ತ್ಯರ್ಥವನ್ನು ಎಳೆದು ತರಬೇಕಾಗುತ್ತದೆ. ಆದುದರಿಂದ ಇದು 'ನೇಯಾರ್ಥ' ಎಂಬ ಕಾವ್ಯದೋಷವಾಗುತ್ತದೆ. ಇದರಂತೆ, 'ಬ್ರಹ್ಮವಿದ್ಯೆ' ಎಂಬ ಅರ್ಥದಲ್ಲಿ ಅಜವಿದ್ಯೆ, ವಿಧಿವಿದ್ಯೆ, ಬಿದಿಬಿಜ್ಜೆ ಎಂದು ಪ್ರಯೋಗಿಸಿದಾಗ ನೇಯಾರ್ಥವಾಗುತ್ತದೆ. ಆಧುನಿಕಕಾವ್ಯಗಳಲ್ಲಿ ನೇಯಾರ್ಥದೋಷಕ್ಕೆ ಇವು ಉದಾಹರಣೆಗಳು.

ಇಂತಹ ಕೆಲವು ಆಧುನಿಕ ಕಾವ್ಯದೋಷಗಳನ್ನು ಪ್ರಸ್ತಾಪಿಸಿರುವುದು ಯಾವುದೇ ಇತರ ಉದ್ದೇಶದಿಂದಲ್ಲ ; ಪ್ರಾಚೀನಕವಿಗಳಿಂದ ಉತ್ತಮಕಾವ್ಯಗಳು ರಚಿತವಾದಂತೆ ಆಧುನಿಕ ಕವಿಗಳೂ ಕಾವ್ಯದ ಗುಣದೋಷಗಳನ್ನು ಅನುಲಕ್ಷಿಸಿ ಉತ್ತಮಕಾವ್ಯಗಳನ್ನು ತಾವೂ ರಚಿಸಿದ ಕೀರ್ತಿಗೆ ಭಾಜನರಾಗಲಿ ಎಂಬುದೇ ಆಗಿದೆ. ಪಾಶ್ಚಾತ್ಯರ ಅಂಧಾನುಸರಣೆಯಿಂದ ಸ್ವದೇಶೀಯ ಕಾವ್ಯದ ಶ್ರೇಷ್ಠತೆಗೆ ಕುಂದುಬರುವಂತೆ ಆಗುವುದು ಬೇಡವೆಂಬ ಸದುದ್ದೇಶ

ಎಲ್ಲಾದರೂ ಒಂದೊಂದೆಡೆ ಅಲಂಕಾರವಿಲ್ಲದ ಶಬ್ದಾರ್ಥಗಳ ರಚನೆಯನ್ನು ಕಾವ್ಯ ಎಂದಿರುವನು. ಅಲ್ಲದೆ, ವಾಚ್ಯಾರ್ಥಕ್ಕಿಂತ ಅಧಿಕವಾಗಿ ವ್ಯಂಗ್ಯಾರ್ಥವಿದ್ದರೆ ಅದು 'ಧ್ವನಿಕಾವ್ಯ'ವೆಂದೂ ಅದು ಉತ್ತಮಕಾವ್ಯವೆಂದೂ ಹೇಳಿದ್ದಾನೆ. ಹಾಗಿಲ್ಲದುದು ಮಧ್ಯಮಕಾವ್ಯವೆಂದೂ ವ್ಯಂಗ್ಯವೇನೂ ಇಲ್ಲದೆ ಶಬ್ದ ಚಿತ್ರ ಅರ್ಥಚಿತ್ರಗಳನ್ನು ಮಾತ್ರವುಳ್ಳುದು ಅಧಮ (ಕೆಳಮಟ್ಟದ) ಕಾವ್ಯವೆಂದೂ ತಿಳಿಸಿದ್ದಾನೆ. ಆಧುನಿಕಕಾವ್ಯಗಳ ವರ್ಗೀಕರಣದಲ್ಲಿ ಯಾವುದನ್ನಾದರೂ ನಾವು ಅಧಮ ಎನ್ನುವುದು ಅತಿರೇಕದ ಮಾತಾಗಬಹುದು. ಆದುದರಿಂದ ಉತ್ತಮ, ಮಧ್ಯಮ, ಪ್ರಥಮ ಎಂದು ವರ್ಗೀಕರಿಸುವುದು ಸೂಕ್ತವಾಗಬಹುದು. ಹಾಗಾದರೆ, ಉತ್ತಮಕಾವ್ಯದ ಲಕ್ಷಣವೇನು ?

ಸಮಾಜಚಿತ್ರಣ, ಜೀವನಮಾರ್ಗದರ್ಶನಯುಕ್ತವಾಗಿ, ರಸಸ್ಯಂದಿಯಾಗಿ, ಚಿತ್ತಾಕರ್ಷಕವಾಗಿ, ಕಾವ್ಯಾನಂದಪ್ರದವಾಗಿ, ವ್ಯಾಕರಣಶುದ್ಧತೆಯುಳ್ಳುದು, ಛಂದೋಬದ್ಧವಾದುದು ಉತ್ತಮಕಾವ್ಯವೆನ್ನಬಹುದು. ಶಾಸ್ತ್ರೀಯ ಛಂದಸ್ಸನ್ನು ತೊರೆದರೂ, ಕೃತಕಶಾಸ್ತ್ರಾನುಸಾರಿಯಾದ ಯಾವುದೋ ಛಂದಸ್ಸನ್ನು ಅವಲಂಬಿಸಿ, ಕಾವ್ಯದೋಷವನ್ನು ಪರಿಮಿತಿಗಿಟ್ಟಿರುವ ರಚನೆಯನ್ನು ಮಧ್ಯಮಕಾವ್ಯ ಎಂದು ಹೇಳಿಕೊಳ್ಳಬಹುದು. ಇಂತಹ ಶುದ್ಧತೆಯ ಕಡೆಗಾಗಲಿ ಛಂದಸ್ಸಿನ ಅನುಸರಣೆಗಾಗಲಿ ಲಕ್ಷ್ಯವಿಡದೆ, ಮೂಡಿದ ಭಾವನೆಗಳಿಗೆ ಪದಗಳನ್ನೂ ವಾಕ್ಯಗಳನ್ನೂ ಜೋಡಿಸಿ ರಚಿಸಲಾದುವು ಭಾವಗೀತಗಳು, ಚಿತ್ರಗೀತಗಳು, ಜಾನಪದಗೀತಗಳು, ನವ್ಯಕವನಗಳು, ರೂಪರೇಖೆಗಳಲ್ಲಿ ಇವುಗಳಂತೆಯೇ ಇರುವ ಇನ್ನೆಷ್ಟೋ ಅಭ್ಯಾಸಕವಿತೆಗಳು ಇವನ್ನೆಲ್ಲ ಪ್ರಥಮವರ್ಗದವಾಗಿ ನಾವು ಪರಿಗಣಿಸಬಹುದು. ಇವುಗಳಲ್ಲಿ ನಾವು ದೋಷಜ್ಞತೆಯಿಂದ ವರ್ತಿಸುವುದು ತಕ್ಕುದಾಗದು. ಕವಿಯ ಗುರಿ ಮಾತ್ರ ಪ್ರಥಮದಿಂದ ಮಧ್ಯಮಕ್ಕೆ, ಮಧ್ಯಮದಿಂದ ಉತ್ತಮಕ್ಕೆ ಏರುವುದೇ ಆಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಅದಕ್ಕಾಗಿ ಕಾವ್ಯರಚನೆಯೊಂದಿಗೆ ಕಾವ್ಯ ದೋಷಜ್ಞತೆ ಮತ್ತು ...

# ಸಾಹಿತ್ಯ ಮತ್ತು ಗತಿಶೀಲತೆ: ತಾತ್ತ್ವಿಕ ಮೂಲಾಧಾರಗಳು

**ಡಿ. ವಿ. ಕೆ. ಮೂರ್ತಿ**

ಸಾಹಿತ್ಯ ಕಲೆಗಳಿಗೆ ಸಂಬಂಧಿಸಿದಂತೆ ಗತಿಶೀಲತೆ ಒಂದು ಅಪೇಕ್ಷಣೀಯ ಸಹಜಗುಣವೇ ಆಗಿರುತ್ತದೆ. ಸಾಹಿತ್ಯದ ನೈಜಸ್ವರೂಪವನ್ನು ಯಾವ ಕಾಲಕ್ಕೂ ಸಾಪೇಕ್ಷವಾಗಿ ನಿರ್ದೇಶ ಮಾಡುವಂಥ ಸತ್ತ್ವ ಪ್ರಗತಿತತ್ತ್ವದಲ್ಲಡಗಿರುತ್ತದೆ.

ಪ್ರಕೃತಿಯಲ್ಲಿ ಪ್ರಗತಿತತ್ತ್ವವನ್ನು ಸಹಜ ಸಂಗತಿಯಾಗಿ ಕಾಣುತ್ತೇವೆ. ಅವಿನಾಶಿಯಾಗಿ, ನಿರಂತರ ಚಲನೆಯಲ್ಲಿ ನಿರತವಾಗಿ, ಬಗೆಬಗೆಯ ಸಂಮಿಶ್ರಣ ಸಂಯೋಜನೆಗಳಲ್ಲಿ ಪರಸ್ಪರ ವೈರುದ್ಧ್ಯ ವೈಷಮ್ಯ ಸಂಘರ್ಷ ಸಹಯೋಗಗಳಿಂದಾಗಿ, ಸಂಘಟನೆ ವಿಸಂಘಟನೆ ಮತ್ತೆ ಹೊಸಸಂಘಟನೆಯ ಸೃಜನಶೀಲ ಕ್ರಿಯೆಯಲ್ಲಿ ಭೌತದ್ರವ್ಯಗಳು ನಿರಂತರ ಸಾಗುತ್ತಾ, ನಿತ್ಯಪರಿವರ್ತನಶೀಲತೆಯಿಂದ ನವೋದಯ ವಿಕಾಸದಲ್ಲಿ ತೊಡಗಿರುವುದು ಜಗತ್ತಿನ ಇತಿಹಾಸದಿಂದ ವೇದ್ಯವಾಗುತ್ತದೆ. ಸಸ್ಯವರ್ಗ ಪ್ರಾಣಿವರ್ಗಗಳೂ ಸೇರಿದಂತೆ ಭೌತಜಗತ್ತಿನಲ್ಲಿ ಇದೊಂದು ಸಹಜ ವಿಕಾಸಚಕ್ರವಾಗಿ ಕಂಡುಬರುತ್ತಲೇ ಇದೆ. ಲೋಕದ ಈ ಗತಿಯ ಹಿಂದಿರುವ ರಹಸ್ಯವಾದರೂ ಏನು ? ಇದು ತನಗೆ ತಾನೇ ನಡೆಯುವಂಥ ವ್ಯಾಪಾರವೆ ಅಥವಾ ಇದರ ಹಿಂದೆ ಪರಮವಾದ ಆಶಯವೊಂದಿದೆಯೇ ಎಂಬುದು ಮಾನವನಿರ್ಮಿತ ತತ್ತ್ವಶಾಸ್ತ್ರದ ಪ್ರಥಮಲಕ್ಷ್ಯ ಆಯಿತು.

ಪರಮಸತ್ಯದ ಶೋಧದಲ್ಲಿ ತೊಡಗಿ ಬೆಳೆದ ತತ್ತ್ವಶಾಸ್ತ್ರ ಚಿಂತನೆ, ಅದನ್ನವಲಂಬಿಸಿ ರೂಢಿಸಿದ ಮತಧರ್ಮದ ಪ್ರಭಾವಗಳು ಮಾನವೇತಿಹಾಸದುದ್ದಕ್ಕೂ ಮಾನವಸಮಾಜ ಸಂಘಟನೆ ಹಾಗೂ ಸಾಹಿತ್ಯ ಕಲೆಗಳ ಮೇಲೆ ಪ್ರಭಾವ ಬೀರುತ್ತ ಬಂದಿರುವುದನ್ನು ಗಮನಿಸುವುದು ಅಗತ್ಯವಾಗಿರುತ್ತದೆ.

ತತ್ತ್ವಶಾಸ್ತ್ರದ ಆರಂಭದ ದೆಸೆಯಲ್ಲಿ—ಭಾರತೀಯ ತತ್ತ್ವಶಾಸ್ತ್ರವೇ ಆಗಲಿ ಗ್ರೀಕ್ ಹಾಗೂ ಇತರ ಪ್ರಾಚೀನ ತತ್ತ್ವಶಾಸ್ತ್ರಗಳೇ ಆಗಲಿ—ಪ್ರಧಾನವಾಗಿ ಗಮನ ಸೆಳೆದದ್ದು ಭೌತದ್ರವ್ಯಗಳೇ. ಒಂದಲ್ಲ ಒಂದು ಭೌತದ್ರವ್ಯವನ್ನು ಅಥವಾ ನೆಲ, ಜಲ, ಗಾಳಿ, ಶಾಖ, ಈ ಎಲ್ಲ ಭೌತದ್ರವ್ಯಗಳ ಸಮೂಹವನ್ನು ಒಟ್ಟಾಗಿ ಪರಿಗಣಿಸಿ ಲೋಕದ ಗತಿಗೆ ಇದೇ ಅಥವಾ ಇವೇ ಪ್ರಮುಖವಾದ ಪಾರಾಯಣ ಸೂತ್ರಗಳು ಎಂದು ಹೇಳಲಾಯಿತು.

ಆದರೆ ಪ್ರತ್ಯಕ್ಷವಾಗಿ ತಮ್ಮ ತಮ್ಮ ಗುಣವಿಶೇಷಗಳಿಂದ ಮಾತ್ರ ಕಾಣಿಸಿಕೊಳ್ಳುತ್ತಿದ್ದ ಈ ಭೌತದ್ರವ್ಯಗಳು ಸೃಷ್ಟಿ ಸ್ಥಿತಿ ಲಯಗಳ ಕರ್ತೃತ್ವ ವಹಿಸಲು ಹೇಗೆತಾನೆ ಸಾಧ್ಯವಾದೀತು ಎಂಬ ತೊಡಕುಂಟಾದಾಗ ಇವುಗಳಿಗೆ ದೈವತ್ವವನ್ನು ಅಥವಾ ದಿವ್ಯದರ್ಶನದ ಪರಮಪದವನ್ನು ಕಲ್ಪಿಸಿ ಪಾರಲೌಕಿಕ–ಆಧ್ಯಾತ್ಮಿಕ ವಿಚಾರಪಾರಮ್ಯವನ್ನು ಸಿದ್ಧಪಡಿಸಲಾಯಿತು. ಇದು ಮಾನವೇತಿಹಾಸದಲ್ಲಿ ಆದರ್ಶಭಾವವಾದಿ ತತ್ತ್ವಶಾಸ್ತ್ರ ಹುಟ್ಟಿ ಬೆಳೆದ ಹಿನ್ನೆಲೆ ಆಗಿರುತ್ತದೆ.

ಇದರೊಂದಿಗೇ ವೈಜ್ಞಾನಿಕ ದೃಷ್ಟಿಯು ಮಾನವಿಕ ತರ್ಕದಿಂದ ಪರಕೀಯಗೊಳ್ಳುವಂತಾಯಿತೆನ್ನಬಹುದು. ಎಂದರೆ ವಸ್ತುಸ್ಥಿತಿಯಲ್ಲಿನ ಸಹಜವ್ಯಾಪಾರಗಳನ್ನು ಮಾನವ ನಿರ್ಮಿತ ಪರಿಕಲ್ಪನೆಯೊಂದಕ್ಕೆ ಅಧೀನಗೊಳಿಸುವಂಥ ವಿಚಾರಪಾರಮ್ಯ ಹುಟ್ಟಿ ಬೆಳೆಯುವಂತಾಯಿತು. ಇದರಿಂದಾಗಿ ಸಸ್ಯವರ್ಗ ಪ್ರಾಣಿವರ್ಗಗಳೂ ಸೇರಿದಂತೆ ಭೌತದ್ರವ್ಯಗಳ ಸ್ವರೂಪ ಸ್ವಭಾವಗಳು ಲವಲೇಶವೂ ವಿಚಲಿತಗೊಳ್ಳಲಿಲ್ಲ. ಆದರೆ ಭೌತಜಗತ್ತಿನ ವಿಕಾಸದಲ್ಲಿ ಒಂದು ದೊಡ್ಡ ಹಂತವೇ ಆದ ಮಾನವವರ್ಗದ ಮೇಲೆ ಮಾತ್ರ ಇದರ ಪ್ರಭಾವ ಪ್ರಖರವಾಗಿ ಕಾಣಿಸಿಕೊಂಡು ಕಾಲಕಾಲಕ್ಕೆ ವಿವಿಧ ಮಾನವಿಕ-ಸಾಮಾಜಿಕ ಸಮಸ್ಯೆಗಳನ್ನು ಸೃಷ್ಟಿಸುವಂತಾಯಿತು.

ಭಾರತೀಯ ಸಂದರ್ಭದಲ್ಲಿ ಮಾನವೇತಿಹಾಸವನ್ನು ಗಮನಿಸಿದಾಗ ಲೋಕಾಯತ ತತ್ತ್ವ ಅತ್ಯಂತ ಪ್ರಾಚೀನ ಭಾರತೀಯ ಸಮಾಜದ ತತ್ತ್ವವಾಗಿತ್ತೆಂದು ನಂಬಲು ಸಾಕಷ್ಟು ಆಧಾರಗಳಿವೆ. ಇಲ್ಲದಿದ್ದಲ್ಲಿ ಮುಂದೆ ಬೆಳೆದ ಆದರ್ಶವಾದಿ ವೈದಿಕದರ್ಶನಗಳು ಪ್ರಪ್ರಥಮವಾಗಿ ಲೋಕಾಯತವನ್ನು ಪೂರ್ವಪಕ್ಷವಾಗಿ ಪರಿಗಣಿಸಿ, ಅದನ್ನು ಖಂಡಿಸಿ ತಿರಸ್ಕರಿಸಬೇಕಾದ ಅಗತ್ಯವಿರುತ್ತಿರಲಿಲ್ಲ.

ಲೋಕಾಯತವು ಭೌತಜಗತ್ತನ್ನು ವಸ್ತುನಿಷ್ಠೆಯಿಂದ ಇದ್ದಂತೆಯೇ ಪರಿಗಣಿಸಿ ಪ್ರಾಕೃತಿಕ ನಿಯಮಗಳಿಗನುಸಾರ ಜಗತ್ತನ್ನು ಅರ್ಥೈಸಿತಲ್ಲದೆ, ವಸ್ತುವಿನ ಸ್ವರೂಪ ಸ್ವಭಾವಗಳು ಅನನ್ಯ ಎಂಬುದನ್ನು ಸಿದ್ಧಪಡಿಸಿ ಭೌತಪರಿಣಾಮವಾದಕ್ಕೆ ಪೀಠಿಕೆ ಹಾಕಿತೆನ್ನಬಹುದು. ಇದು ಸಮಗ್ರವಿಶ್ವದಲ್ಲಿ ಮಾನವಕುಲದ ಪ್ರಥಮ ತತ್ತ್ವವಾಗಿ ವಿಜ್ಞಾನ. ಮಾನವಿಕ ಜ್ಞಾನಪ್ರಕಾರಗಳು ಹಾಗೂ ಸಾಹಿತ್ಯ ಕಲೆಗಳ ಮೇಲೆ ಪ್ರಾಕೃತಿಕ ನಿಯಮಗಳಿಗನುಸಾರವಾಗಿ ಜಾಗತಿಕ ಪ್ರಭಾವ ಬೀರುವಂತಾಯಿತು. ಮಾನವನ ಚಿಂತನ ಹಾಗೂ ಕ್ರಿಯಾಶೀಲತೆ ಸಮಷ್ಟಿಯ ಹಿತಸಾಧನೆಯೊಂದಿಗೆ ಏಕೀಭವಿಸಿ ಆದಿಮಾನವ ಸಮಾಜವನ್ನು ರಚಿಸುವುದರಲ್ಲಿ ಇದು ಸಾರ್ಥಕವಾಯಿತು.

ಆದರೆ ಮಾನವೇತಿಹಾಸ ಬೆಳೆದಂತೆ, ಸಮಷ್ಟಿಯೇ ಕೇಂದ್ರಬಿಂದುವಾಗಿದ್ದ ಸಮಾಜ ವ್ಯವಸ್ಥೆ ಒಡೆದು, ಪರಕೀಯತೆ ಅಮಾನವೀಕರಣಗಳ ಸಂಕೀರ್ಣಜಾಲದಲ್ಲಿ ಸಮಾಜದ ಘಟಕ ನಶಿಸಿ, ಅದರ ಸ್ಥಾನದಲ್ಲಿ ವ್ಯಕ್ತಿಪಾರಮ್ಯದ ವಿಚಾರಗಳು ಬೆಳೆದವು.

ಒಂದು ಕಾಲಕ್ಕೆ ಬೆಳೆದ ದೈವನಿರ್ಣಾಯಕ ತತ್ತ್ವ ಅಥವಾ ದಿವ್ಯದರ್ಶನದ ವಿಚಾರಗಳು ಆರಂಭದಲ್ಲಿ ಪಶೌಲ್ಯಾಧಾರಿತವಾಗಿ ಉತ್ತಮ ಆದರ್ಶಗಳನ್ನೂ ಮೌಲ್ಯಗಳನ್ನೂ

ಸಮಾಜವ್ಯವಸ್ಥೆಯಲ್ಲಿ ರೂಢಿಸುವಂತಾಯಿತು. ಇಂಥ ಒಂದು ಘಟ್ಟವನ್ನು ಮಾನವ ಇತಿಹಾಸದಲ್ಲಿ ಬುಡಕಟ್ಟಿನ ಸಮಾಜವ್ಯವಸ್ಥೆ ವಿಕಸಿಸುತ್ತ ಬಂದ ಆರಂಭಕಾಲದಲ್ಲಿ ಕಾಣುತ್ತೇವೆ. ಈ ದೆಸೆಯಲ್ಲಿ ಪ್ರಥಮವಾಗಿ ಏರ್ಪಟ್ಟ ಬುಡಕಟ್ಟಿನ ನಾಯಕನ ಪಾತ್ರ ಗಮನಾರ್ಹವಾಗಿರುತ್ತದೆ.

ಬುಡಕಟ್ಟಿನ ನಾಯಕ ಮುಂದೆ ಸಮಾಜದಲ್ಲಿ ಬೆಳೆದ ಅರಸೊತ್ತಿಗೆಗೆ ನಾಂದಿಯಾಗುತ್ತಾನೆ. ಆದರೆ ಆರಂಭದಲ್ಲಿ ಈ ನಾಯಕನ ಸ್ಥಾನ ಬಹುಮಟ್ಟಿಗೆ ಸರಳವಾದ, ಸಮಷ್ಟಿಹಿತ–ಪ್ರಧಾನವಾದ ಸಮಾಜಸಂಘಟನೆಯಲ್ಲಿ, ಉತ್ಕೃಷ್ಟಮೌಲ್ಯಗಳನ್ನು ಧರ್ಮದರ್ಶಿಯಂತೆ ಬಿತ್ತರಿಸುವ ಕರ್ತವ್ಯದ ಹೊಣೆಗಾರಿಕೆಯಿಂದ ಕೂಡಿತ್ತು. ಸಮಾಜದ ಯಾವುದೇ ವ್ಯಕ್ತಿಯ ಪಾಲಿಗೂ–ನಾಯಕನೂ ಸೇರಿದಂತೆ–ಸಂಪನ್ಮೂಲಗಳ ಯಾಜಮಾನ್ಯವಿರಲಿಲ್ಲ. ಹೀಗಾಗಿ ಪ್ರತಿಯೊಬ್ಬ ವ್ಯಕ್ತಿಯೂ ಸಮಷ್ಟಿಹಿತಕ್ಕಾಗಿ ದೈಹಿಕ-ಬೌದ್ಧಿಕ ಶ್ರಮವನ್ನು ವಿನಿಯೋಗಿಸಿ ಉತ್ತಮ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಪ್ರೇರಕವಾಗಿತ್ತು. ಬುಡಕಟ್ಟಿನ ನಾಯಕನದಾದರೂ ಇಂಥ ಪಾತ್ರವೇ ಆಗಿತ್ತು.

ಈ ಹಂತದಲ್ಲಿ ಪ್ರಾಚೀನ ಮಹಾಕಾವ್ಯಗಳು ರಚಿತವಾದವು ; ಅಂದಿನ ಸರಳ ಸಮಾಜ ವ್ಯವಸ್ಥೆಗೆ ಸಂಬಂಧಿಸಿದಂತೆ ಸಾಪೇಕ್ಷವಾಗಿ ಸಮಗ್ರ ಸತ್ಯವನ್ನು ಅಭಿವ್ಯಕ್ತಗೊಳಿಸಿದವು. ಸಮಾಜಧರ್ಮವೇ ಆಗಿ ರೂಢಿಸಬೇಕಾದ, ರೂಢಿಸಬಲ್ಲ ಮೌಲ್ಯಗಳನ್ನು ಸಾರಿದುವು. ಈ ಮಹಾಕಾವ್ಯಗಳಲ್ಲಿ ಮೌಲ್ಯಗಳು ಆನ್ವಯಿಕ ಮರ್ಯಾದೆಯಿಂದ ಅವು ರಚಿತವಾದಂದಿನ ಸಮಾಜವ್ಯವಸ್ಥೆಯನ್ನು ಸಾಪೇಕ್ಷವಾಗಿ ಅವಲಂಬಿಸಿದ್ದುವಾದರೂ, ಅವು ಬಿತ್ತರಿಸಿದ ಮೌಲ್ಯಗಳು ನಿರಪೇಕ್ಷವಾಗಿ ಮಾನವಕುಲದ ಉತ್ಕೃಷ್ಟ ಸಾರಸ್ವತ ಮೌಲ್ಯಸಂಹಿತೆಯಾಗಿ ಉಳಿದುಕೊಳ್ಳುವಂತಾಯಿತು.

ಆದರೆ, ಅಂದಿನ ಸಮಾಜವ್ಯವಸ್ಥೆಯಿಂದ ಮಹಾಕಾವ್ಯದ ವ್ಯಕ್ತಿಗಳನ್ನೂ ಸಂದರ್ಭಗಳನ್ನೂ ಬೇರ್ಪಡಿಸಿ ಇಂದಿನ ಸಮಾಜವ್ಯವಸ್ಥೆಯೊಂದಿಗೆ ಅವುಗಳನ್ನು ತಾಳೆಹಾಕುವುದು ಎಂತೂ ಸಂಗತವೆನಿಸಲಾರದು.

ಬರಬರುತ್ತ ಮಾನವಸಮಾಜ ಒಡೆದು ಸಮಾಜದ ಸ್ಥಾನದಲ್ಲಿ ಅರಸೊತ್ತಿಗೆ, ಜಮೀನುದಾರರು ಮತ್ತು ೧೯ನೆಯ ಶತಮಾನದ ಬಳಿಕ ನಿರ್ಜೀವವೂ ಜಡವೂ ಆದ ಬಂಡವಾಳ ಇವು ಪ್ರಧಾನವಾದವು. ಹೀಗಾಗಿ ದಿವ್ಯದರ್ಶನದ ಅಲೌಕಿಕ ವಿಚಾರಗಳ ಹಿನ್ನೆಲೆಯಲ್ಲಿ ಅನುಕ್ರಮವಾಗಿ ಅರಸೊತ್ತಿಗೆ, ಊಳಿಗಮಾನ್ಯಪದ್ಧತಿ, ಬಂಡವಾಳ ಪಾರಮ್ಯದ ಅವಸ್ಥೆಗಳು ಸಮಾಜ ಸಂಘಟನೆಯಲ್ಲಿ ಕ್ರಮವಾಗಿ ಬೆಳೆದು ಅದರಿಂದಾಗಿ ಗುಲಾಮಗಿರಿ, ಜಮೀನುದಾರನ ಹಿತಕ್ಕಾಗಿ ಶ್ರಮಿಸುವ ಕೃಷಿಕವರ್ಗ ಮತ್ತು ಬಂಡವಾಳಿಗನ ಲಾಭಕ್ಕಾಗಿ ದೈಹಿಕ, ಬೌದ್ಧಿಕಶ್ರಮ ವಿನಿಯೋಗಿಸುವಂಥ ಸಮುದಾಯ ಬೆಳೆಯುವಂತಾಯಿತು.

ಜ್ಞಾನ, ಪರಿಶ್ರಮ, ಕಾಯಕ ಇವೆಲ್ಲ ತಮ್ಮ ಸಾಮಾಜಿಕ ಪಾತ್ರನಿರ್ವಹಣದಿಂದ ಪರಕೀಯಗೊಂಡು ಅಮಾನವೀಕರಣದಲ್ಲಿ ಪರ್ಯವಸಾನಗೊಳ್ಳುವಂತಾಯಿತು.

ಅಂತರ್ವಿರೋಧ ಬಹಿರ್ವಿರೋಧಗಳಿಂದ ತುಂಬಿರುವ ಈ ಸಂಧಿಕಾಲವೇ ಇಂದಿನ ಸಂದರ್ಭದಲ್ಲಿ ಮಹಾಕಾವ್ಯಸದೃಶವಾದ ವಸ್ತುವಾಗಿರುತ್ತದೆ.

ಮಾನವ ಬೆಳೆಸಿಕೊಂಡು ಬಂದಿರುವ ಅಪಾರವಾದ ಜ್ಞಾನಸಂಪತ್ತು ಮತ್ತು ಮೌಲ್ಯಗಳು ಆದೇಕೆ ನಮ್ಮ ಬದುಕಿಗೆ ಅಸಂಗತವಾಗಿಬಿಟ್ಟಿವೆ. ಮಾರಕವಾಗಿಬಿಟ್ಟಿವೆ ಎಂಬುದು ನಮ್ಮ ಲೇಖಕರ ಮುಂದಿರುವ ಪ್ರಶ್ನೆಯಾಗಿರುತ್ತದೆ. ಈ ಪ್ರಶ್ನೆಯನ್ನು ಬಿಡಿಸಲು ವಸ್ತುಸ್ಥಿತಿಯನ್ನೂ ಸನಾತನವಾಗಿ ಪ್ರವಹಿಸುತ್ತ ಬಂದಿರುವ ಅದಮ್ಯಮಾನವಚೇತನವನ್ನು ಗುರುತಿಸುವುದೇ ಸೃಜನಶೀಲಸಾಹಿತ್ಯದ ಇಂದಿನ ಅಗತ್ಯವಾಗಿರುತ್ತದೆ.

ಇತಿಹಾಸದ ಮಜಲುಗಳಲ್ಲಿ ಪ್ರಗತಿಯ ಕೊಂಡಿ ಕಳಚಿಕೊಂಡಿದ್ದಂತು. ಅದನ್ನು ಪುನಃ ಕೂಡಿಸಿ ಪ್ರಗತಿಪಥದಲ್ಲಿ ಹೂಡುವುದು ಹೇಗೆ—ಎಂಬುದೇ ಇಂದಿನ ಲೇಖಕನ ಮುಂದಿರುವ ಪ್ರಶ್ನೆಯಾಗಿರುತ್ತದೆ.

ಪ್ರಕೃತಿಯಲ್ಲಿ ಸಹಜಸಂಗತಿಯಾಗಿರುವ ಪ್ರಗತಿಸೂತ್ರ ಪ್ರಕೃತಿಯ ಒಂದು ಭಾಗವೇ ಆದ ಮಾನವಕುಲದ ಸಾಮೂಹಿಕಚೇತನದಲ್ಲಿ ಜೀವಂತವಾಗಿದೆ ಎಂಬುದನ್ನು ಗಮನಿಸುವುದು ಅಗತ್ಯವಾಗಿರುತ್ತದೆ. ಇದನ್ನು ವಸ್ತುಸ್ಥಿತಿಯಲ್ಲಿ ಗಮನಿಸಬೇಕೇ ಹೊರತು, ಅಲೌಕಿಕವಿಚಾರಗಳಿಂದ ವಸ್ತುಸ್ಥಿತಿಯ ಮೇಲ್ಪದರದಲ್ಲಿ ಕಾಣುವ ವಿಕೃತಿಗೇ ಶರಣಾಗುವುದು ಸಲ್ಲ ಎಂಬ ಅರಿವು ಮೂಡಬೇಕಾಗುತ್ತದೆ. ಇಂಥ ಪ್ರಜ್ಞೆಯನ್ನು ವಿಶ್ವಸಾಹಿತ್ಯದಲ್ಲಿ ಮೊದಲಬಾರಿಗೆ ತಾತ್ತ್ವಿಕವಾಗಿ ಸಿದ್ಧಪಡಿಸಿದ ಪ್ರವರ್ತಕನೆಂದರೆ ೧೯ನೆಯ ಶತಮಾನದ ರಷ್ಯಾದ ಸಮಾಜತತ್ತ್ವವೇತ್ತ, ಸೌಂದರ್ಯಮೀಮಾಂಸಕ ಹಾಗೂ ಕ್ರಾಂತಿಕಾರಿ ಜನಸತ್ತಾವಾದಿ ವಿಸ್ಸೊರಿಯೊನ್ ಗ್ರಿಗೋರ್ಯೆವಿಚ್ ಬೆಲೀನ್‌ಸ್ಕಿ (೧೮೧೧–೧೮೪೮) ಎನ್ನಬಹುದು.

ಮಾನವನೂ ಸೇರಿದಂತೆ ಭೌತವಸ್ತುವಿನ ಚಲನೆಯೇ ಚೈತನ್ಯ, ವಸ್ತುವನ್ನು ಬಿಟ್ಟು ಚೈತನ್ಯವಿಲ್ಲ, ಎಲ್ಲ ಮಾನವಿಕ ವಿಚಾರಗಳೂ ವಸ್ತುಸ್ಥಿತಿಯಿಂದಲೇ ಉಗಮಿಸಿ ಅದರಲ್ಲೇ ಪರ್ಯವಸಾನಗೊಂಡು ಬೆಳೆಯುತ್ತ ಮುನ್ನಡೆಯತಕ್ಕದ್ದು ಎಂದು ಪ್ರತಿಪಾದಿಸಿದ ಬೆಲೀನ್‌ಸ್ಕಿ ಪ್ರಗತಿಸೂತ್ರದ ಜೀವನಾಡಿಯನ್ನು ವಸ್ತುಸ್ಥಿತಿಯಲ್ಲೇ ನಿರೂಪಿಸಿದ.

ಚಲನೆಯಲ್ಲಿರುವ ವಸ್ತುಸ್ಥಿತಿಯ ಗರ್ಭದಲ್ಲಿ ಅಂತರ್ಗತವಾಗಿ ಮೊರೆಯುತ್ತಿರುವ ಮಾನವತಾಚೈತನ್ಯವನ್ನು ಅದಕ್ಕೆ ವಿರುದ್ಧ ಎಳೆಯುವ ಪ್ರತಿಗಾಮಿಶಕ್ತಿಗಳಿಂದ ಬೇರ್ಪಡಿಸಿ ವಿವೇಚಿಸುವ ನಿರ್ಣಾಯಕದರ್ಶನವೇ ವಾಸ್ತವತೆ ಎಂಬ ಮೂಲಭೂತ ಸೂತ್ರವನ್ನು ಬೆಲೀನ್‌ಸ್ಕಿ ಪ್ರತಿಪಾದಿಸಿದ.

ಎಂತಲೇ ವಸ್ತುಸ್ಥಿತಿಯ ಮೇಲ್ಪದರದಲ್ಲಿ ಎದ್ದು ಕಾಣುವ ತೋರ್ಕೆಯ ಸತ್ಯ ಮೂಲಭೂತಸತ್ಯವಲ್ಲ. ವಸ್ತುಸ್ಥಿತಿಯಲ್ಲಿ ಅಂತರ್ಗತವಾಗಿ ಮಿಡಿಯುತ್ತಿರುವ ಮಾನವತಾಆಶಯದ ಸಾಧ್ಯತೆಯ ಸತ್ಯವೇ ಮಾನವಚೈತನ್ಯದ ಅದಮ್ಯ ಸನಾತನಸತ್ಯ. ಅದುವೇ ಪೂರ್ಣಸತ್ಯದ ವಿಕಾಸಸಂಹಿತೆ ಎಂಬ ಪ್ರಮೇಯವನ್ನು ಬೆಲೀನ್‌ಸ್ಕಿ ಐತಿಹಾಸಿಕ-ಸಾಮಾಜಿಕ ವಸ್ತುಸ್ಥಿತಿಗಳಿಗೆ ಅನ್ವಯಿಸಿ ನಿರೂಪಿಸಿರುತ್ತಾನೆ.

ವಿಶ್ವಸಾಹಿತ್ಯದಲ್ಲಿ ಸೈದ್ಧಾಂತಿಕವಾಗಿ ಸಾಹಿತ್ಯದ ಪ್ರಗತಿಸೂತ್ರಗಳನ್ನು ಪ್ರಪ್ರಥಮವಾಗಿ ಬೆಲೀನ್‌ಸ್ಕಿ ನಿರೂಪಿಸಿದನೆನ್ನಬಹುದು. ಈ ಸೂತ್ರಗಳಾದರೂ ಅವನ ಹಿಂದಿನ ಕಾಲಕ್ಕೆ, ಅವನ ಕಾಲಕ್ಕೆ ಮತ್ತು ಮುಂದಿನ ಕಾಲಕ್ಕೆ ಹೀಗೆ ಸಾರ್ವಕಾಲಿಕವಾಗಿ ಸಲ್ಲುವ ಬೀಜಗರ್ಭಿತ ತತ್ತ್ವ ಎಂಬುದು ಗಮನಾರ್ಹ.

ಹೆಗೆಲನ ಆದರ್ಶಭಾವವಾದಿ ತತ್ತ್ವವನ್ನವಲಂಬಿಸಿ ಪಾಶ್ಚಾತ್ಯ ದೇಶಗಳಲ್ಲಿ ಕ್ರೋಚೆ, ಬ್ರ್ಯಾಡ್ಲಿ ಮುಂತಾದವರು ಸೌಂದರ್ಯಮೀಮಾಂಸೆಯನ್ನು ಬೆಳೆಸಿದರಾದರೆ ಅದರಿಂದ ಮೊದಲು ಪ್ರಭಾವಿತನಾಗಿ, ಆ ಬಳಿಕ ಅದರಲ್ಲಿನ ಗತಿಶೀಲ ತಾರ್ಕಿಕ ಸಾಧನವನ್ನು ಭೌತತತ್ತ್ವಕ್ಕಳವಡಿಸಿ ಗತಿಶೀಲವಾಸ್ತವತಾವಾದದ ಸೌಂದರ್ಯಮೀಮಾಂಸೆಯನ್ನು ತತ್ತ್ವಬದ್ಧವಾಗಿ ಬೆಲೀನ್‌ಸ್ಕಿ ಪ್ರತಿಪಾದಿಸಿ, ಪ್ರಗತಿಪಥದಲ್ಲಿ ಸಾಗುವ ಮಾನವ ಸಮಾಜಕ್ಕೆ ದ್ರಷ್ಟಾರಪ್ರಜ್ಞೆಯನ್ನು ನೀಡಿದ್ದಾನೆನ್ನಬಹುದು.

೧೮೪೧ರಲ್ಲಿ ಬೆಲೀನ್‌ಸ್ಕಿ ಬರೆದ 'ಕಲೆಯ ಪರಿಭಾವನೆ' ಎಂಬ ಲೇಖನದಲ್ಲಿ ಅವನ ವಿಚಾರಗಳು ಭೌತದ ತಿರುವು ಪಡೆದಿರುವುದನ್ನು ಕಾಣಬಹುದಾಗಿದೆ :

''ಚಿಂತನದ ಜ್ಞಾತೃಜ್ಞೇಯಗಳೆರಡೂ ಒಂದೇ ಮೂಲದಿಂದ ಸಹಜವಾಗಿ ಹುಟ್ಟಿಬಂದು ಅನನ್ಯವಾಗಿರುತ್ತವೆ ; ಎಂತಲೇ ಆದಿಭೌತವಸ್ತುವು ನಮ್ಮ ಭೂಮಿ-ಗ್ರಹವಾಗಿ ಪರಿಣಮಿಸಲು ಹವಣಿಸುತ್ತ ಸಾಗಿದ ಪ್ರಪ್ರಥಮ ಚಲನೆ ಹಾಗೂ ಬುದ್ಧಿವಂತ ಮನುಷ್ಯನ ಕಟ್ಟಕಡೆಯ ಯುಕ್ತಿಯುಕ್ತವಾದ ಮಾತು—ಇವೆರಡೂ ಅದರ (ಆದಿಭೌತವಸ್ತುವಿನ) ವಿಕಾಸದ ಬೇರೆ ಬೇರೆ ಹಂತಗಳಲ್ಲಿನ ಒಂದೇ ಅಸ್ತಿತ್ವವಾಗಿರುತ್ತದೆ. ಅರಿವು ಹುಟ್ಟಿ ಬೆಳೆಯುವ ನೆಲವೇ ಪ್ರಜ್ಞೆಯ ಸೀಮೆಯಾಗಿರುತ್ತದೆ.''

ಹೀಗೆ ಭೌತದ ಮೂಲಾಧಾರದ ಮೇಲೆ ತನ್ನ ಸಾಹಿತ್ಯಕ ವಿಚಾರಗಳನ್ನು ಬೆಳೆಸಿದ ಬೆಲೀನ್‌ಸ್ಕಿಯ ಸೌಂದರ್ಯಮೀಮಾಂಸೆಯಲ್ಲಿ ಸಾಹಿತ್ಯದ ಗತಿಶೀಲತೆ ಕುರಿತ ಸೂತ್ರಭಾಷ್ಯವನ್ನೇ ಕಾಣಬಹುದಾಗಿದೆ. ನಮ್ಮ ಇಂದಿನ ಯುವಪೀಳಿಗೆ, ಚಿಂತನಶೀಲರು ಬೆಲೀನ್‌ಸ್ಕಿಯ ಈ ಮಾತುಗಳನ್ನು ಮನನಮಾಡಿದಲ್ಲಿ ಸಾಹಿತ್ಯದ ಪ್ರಗತಿಸೂತ್ರಗಳ ಮೂಲಭೂತಪ್ರಜ್ಞೆ ದೊರಕಿದಂತಾಗುತ್ತದೆ :

''ಸತ್ಯ ಪುಟಿಯುವುದು ಮಣ್ಣುನೆಲದಿಂದ ಮತ್ತು ಎಲ್ಲ ಸತ್ಯದ ನೆಲ ಸಮಾಜವೇ ಆಗಿರುತ್ತದೆ.''

''ಕಲೆಯು ಸನಾತನವಾದರಿಯೆಂದರೆ ಪ್ರಕೃತಿ ಮತ್ತು ಪ್ರಕೃತಿಯಲ್ಲಿನ ಅತ್ಯಂತ ಮಹತ್ವಪೂರ್ಣ ಉದಾತ್ತವಸ್ತುವೆಂದರೆ ಮಾನವ.''

''ಮನುಷ್ಯ ಹುಟ್ಟಿರುವುದು ಒಳಿತಿಗಾಗಿ, ಕೇಡು ಬಗೆಯುವುದಕ್ಕಲ್ಲ : ಬದುಕಿನಲ್ಲಿ ಆನಂದವನ್ನು ಯುಕ್ತವಾಗಿ ನ್ಯಾಯವಾಗಿ ಅನುಭವಿಸುವುದಕ್ಕೇ ಹೊರತು ಕೆಡಕೆಸಗುವುದಕ್ಕಲ್ಲ. ಅವನ ಹವಣಿಕೆಗಳು ಸತ್ಯಶೀಲವಾದವು. ಅವನ ಸಹಜಪ್ರವೃತ್ತಿ ಉದಾತ್ತವಾದದ್ದು. ಕೆಡಕು ಹುದುಗಿರುವುದು ಮನುಷ್ಯನಲ್ಲಲ್ಲ, ಸಮಾಜವ್ಯವಸ್ಥೆಯಲ್ಲಿ : ಏಕೆಂದರೆ

ಸಮಾಜ—ಎಂದರೆ ಮಾನವನ ಬೆಳವಣಿಗೆಯ ಅವಸ್ಥೆಗಳು—ಇನ್ನೂ ಪರಿಪೂರ್ಣತೆಯನ್ನು ಮುಟ್ಟಿಲ್ಲ.''

''ಪ್ರವೃತ್ತಿ ಎಂಬ ಮಾಂತ್ರಿಕಪದದಿಂದ ಬಹುಜನರು ಇಂದು ಸೆಳೆಯಲ್ಪಟ್ಟು ಅದರಲ್ಲೇ ಎಲ್ಲ ಹುದುಗಿದೆಯೆಂದು ನಂಬುತ್ತಾರೆ. ಆದರೆ ಅವರಿದನ್ನು ಅರ್ಥಮಾಡಿಕೊಂಡಿಲ್ಲ: ಮೊದಲನೆಯದಾಗಿ ಕಲಾಕ್ಷೇತ್ರದಲ್ಲಿ ಸಹಜಪ್ರತಿಭೆಯ ಬೆಂಬಲವಿದ್ದ ಹೊರತು ಪ್ರವೃತ್ತಿಗೆ ಒಂದು ಪುಡಿಕಾಸಿನ ಬೆಲೆಯೂ ಬಾರದು. ಎರಡನೆಯದಾಗಿ, ಪ್ರವೃತ್ತಿಯನ್ನು ಲೇಖಕನ ಮನಸ್ಸಿನಲ್ಲಿ ಮಾತ್ರವಲ್ಲ, ಅದಕ್ಕಿಂತ ಮುಖ್ಯವಾಗಿ ಅವನ ಹೃದಯದಲ್ಲಿ, ರಕ್ತದಲ್ಲಿ ಕಾಣುವಂತಿರಬೇಕು. ಪ್ರಥಮತಃ ಅದೊಂದು ಅಂತಃಕರಣದ ಹುಟ್ಟರಿವಾಗಿರಬೇಕು; ಆ ಬಳಿಕವೇ ಅದು ಬಹುಶಃ ಜಾಗೃತ ಕಲಾಚೇತನವಾಗಬಲ್ಲದು.''

''ಪ್ರಾಸಪ್ರಣೀತ ರಿಂಗಣಗಳ ಕಾಲ ಆಗಿಹೋಯಿತು. ಮತ್ತೆಂದೂ ಅದು ಮರಳಿ ಬಾರದು. ಹುರುಳಿಲ್ಲದ ರಾಗೋಲ್ಬಣ ಭಾವುಕತೆಗಳಿಗೀಗ ಮಹತ್ವವಿಲ್ಲ: ಇವೆರಡಕ್ಕೂ ಬದಲಾಗಿ ಆಳವಾದ ಭಾವನೆಗಳನ್ನೂ ವಿಚಾರಗಳನ್ನೂ ಕಲಾಮಾಧ್ಯಮದಲ್ಲಿ ಅಭಿವ್ಯಕ್ತಗೊಳಿಸುವುದೇ ಇಂದಿನ ಅಗತ್ಯ. ಅದು ಪ್ರಾಸಬದ್ಧವಾಗಿದ್ದರೂ ಸರಿ, ಇಲ್ಲದಿದ್ದರೂ ಸರಿ—ಗಣನೆಗೆ ತೆಗೆದುಕೊಳ್ಳುವಂಥ ವಿಷಯ ಅದೇನೂ ಅಲ್ಲ. ಕಾವ್ಯದಲ್ಲಿಂದು ಯಶಸ್ಸು ಗಳಿಸಲು ಕೇವಲ ಪ್ರತಿಭೆಯೊಂದೇ ಸಾಲದು. ಇತಿಹಾಸಪ್ರಜ್ಞೆಯೂ ಅಷ್ಟೇ ಅಗತ್ಯ. ಕವಿ ಈಗ ತನ್ನ ಕಾಲದ ವಾಸ್ತವಜಗತ್ತಿನ ಪ್ರಜೆಯಾಗಿರುತ್ತಾನೆ. ಭೂತಕಾಲವೆಲ್ಲ ಅವನಲ್ಲಿ ಬಾಳಬೇಕು. ಅವನು ಮನೋರಂಜನೆ ನೀಡಬೇಕೆಂಬ ಅಪೇಕ್ಷೆಈಗಿನ ಸಮಾಜಕ್ಕಿಲ್ಲ. ಬದಲಾಗಿ ತನ್ನ (ಸಮಾಜದ) ಚೈತನ್ಯಯುಕ್ತ ಆದರ್ಶದ ಬಾಳ್ವೆಯ ಪ್ರತಿನಿಧಿಯಾಗಿ ಅತ್ಯಂತ ಕಠಿಣ ಪ್ರಶ್ನೆಗಳಿಗೂ ಉತ್ತರ ನೀಡಬಲ್ಲ ಮಾರ್ಗದರ್ಶಕನಾಗಿ, ಇತರರಲ್ಲಿ ನೋವು ಯಾತನೆಗಳನ್ನು ಕಂಡುಕೊಳ್ಳುವುದಕ್ಕೆ ಮುನ್ನ ತನ್ನಲ್ಲೆ ಆ ಸಮಾನಾನುಭವ ಹೊರಗೆಡಹಿ, ಅವನ್ನು ಕಾವ್ಯರೂಪದಲ್ಲಿ ಪ್ರತಿಫಲಿಸಿ ವೈದ್ಯನಂತೆ ಗುಣಪಡಿಸಬೇಕೆಂದು ಸಮಾಜ ಅಪೇಕ್ಷಿಸುತ್ತದೆ.''

''ಸಮಕಾಲೀನ ಕಲೆ ಎಂಥದು ?—ಅದೊಂದು ತೀರ್ಪು, ವಿಶ್ಲೇಷಣೆ: ಎಂತಲೇ ವಿಮರ್ಶೆ. ವಿಚಾರಶೀಲಘಟಕಾಂಶ ಇದೀಗ ಕಲೆಯ ಘಟಕಾಂಶದಲ್ಲೂ ಅಂತರ್ಗತವಾಗಿದೆ. ನಮ್ಮ ಈ ಕಾಲದಲ್ಲಿ, ಕಲಾಕೃತಿಯು ಯುಗಪ್ರಜ್ಞೆಯ ಮಹತ್ತರ ಅಂತಃಪ್ರೇರಣೆಯಿಂದ ಪುಟಿಯುದೆ. ಚಿತ್ರಿಸಬೇಕೆನ್ನುವ ಮಾತ್ರದಿಂದ ಬದುಕನ್ನು ಚಿತ್ರಿಸಿದಲ್ಲಿ, ಅದು ಸಂಕಟದ ಕೂಗು ಅಥವಾ ಆನಂದೋತ್ಸಾಹದ ಮೇಳಗಾನವಾಗದಿದ್ದಲ್ಲಿ, ಅದೊಂದು ಪ್ರಶ್ನೆಯಾಗಲಿ ಪ್ರಶ್ನೆಯೊಂದಕ್ಕೆ ಉತ್ತರವಾಗಲಿ ಆಗದಿದ್ದಲ್ಲಿ ಅದು ನಿರ್ಜೀವವೆನಿಸಿದಂತೆಯೆ.''

''ಬದುಕಿನ ಬೇರೆ ಬೇರೆ ಮುಖಗಳೊಂದಿಗೆ ಯಾವ ಸಂಬಂಧವೂ ಇಲ್ಲದೆ ತಾನೇ ತಾನಾಗಿರುವ ಶುದ್ಧ ಅಮೂರ್ತಕಲೆಯ ಭಾವನೆ ಕನಸಿನ ಭ್ರಾಂತಿಯಷ್ಟೆ. ಅಂಥ ಕಲೆ ಎಂದೂ ಎಲ್ಲಿಯೂ ಇರಲಿಲ್ಲ.''

"ಸಾರ್ವಜನಿಕ ಹಿತಾಸಕ್ತಿಗಳಿಗಾಗಿ ದುಡಿಯುವ ಹಕ್ಕನ್ನು ಕಲೆಗೆ ನಿರಾಕರಿಸಿದಲ್ಲಿ ಕಲೆಯನ್ನು ಹೀನಯಿಸಿದಂತೆಯೇ ಹೊರತು ಮೇಲೆತ್ತಿದಂತಾಗುವುದಿಲ್ಲ; ಏಕೆಂದರೆ ಇದರಿಂದಾಗಿ ಅದರ ಅತ್ಯಂತ ಸತ್ವಪೂರ್ಣ ಅಂತಃಶಕ್ತಿಯನ್ನೇ ಕಿತ್ತುಕೊಂಡಂತಾಗುತ್ತದೆ. ಪರಿಣಾಮವಾಗಿ ಅದನ್ನು ಭೋಗಲೋಲುಪರ ಕೀಳ್ಮಟ್ಟದ ವಿನೋದದ ವಸ್ತುವಾಗಿಸುವಂಥ, ಸೋಮಾರಿಗಳ ಆಟದ ವಸ್ತುವಾಗಿಸುವಂಥ ಭಾವನೆಗೀಡುಮಾಡಿದಂತಾಗುತ್ತದೆ.

ಮಾನವೇತಿಹಾಸದಲ್ಲಿ ನಿರಂತರವಾಗಿ ಪ್ರವಹಿಸುತ್ತ, ಸತ್ಯ ಸೌಂದರ್ಯಗಳ ಹೊಸ ಹೊಸ ನೆಲೆಗಳನ್ನು ನಿರ್ಮಿಸಿಕೊಂಡು ಮುಂದುವರಿಯುತ್ತಿರುವ ಅದಮ್ಯ ಮಾನವ ಚೇತನವೇ ಬೆಲೀನ್‌ಸ್ಕಿಯ ಸೌಂದರ್ಯಮೀಮಾಂಸೆಯ ಜೀವನಾಡಿ ಎನ್ನಬಹುದು. ಎಂತಲೇ ಅವನು ಉದಾತ್ತ ಸೌಂದರ್ಯೋಪಾಸಕನೇ ಆಗಿದ್ದ. ಪ್ರಕೃತಿದತ್ತವಾದ ಪ್ರತಿಭೆ ಮೊದಲ ಅಗತ್ಯ, ಅದಿಲ್ಲದೆ ಲೇಖಕ ಕಲಾವಿದನೆನಿಸಲಾರ. ಆದರೆ ಆ ಪ್ರತಿಭೆ ಒಂದೇ ಸಾಲದು. ಅದರೊಂದಿಗೆ ಅವನಲ್ಲಿ ಪ್ರಾಮಾಣಿಕ ಮಾನವತಾ ಆಶಯವಿರಬೇಕು, ವಸ್ತುನಿಷ್ಠೆ ಇರಬೇಕು. ಅಂಥ ಪ್ರಾಮಾಣಿಕ ಕಲಾಚೇತನ ವಸ್ತುಸ್ಥಿತಿಯಲ್ಲಿ ತಾದಾತ್ಮ್ಯಗೊಂಡಾಗ ಅದಮ್ಯ ಮಾನವಚೇತನದ ದರ್ಶನವೇ ಪ್ರತಿಮೆಗಳಲ್ಲಿ ಧ್ವನಿಸುತ್ತದೆ. ಸೌಂದರ್ಯಕ್ಕೆ ಅಪವಾದವೇ ಆದ ಅಸತ್ಯ ಮಿಥ್ಯಗಳ ವಿರುದ್ಧ ವಸ್ತುಸ್ಥಿತಿಯ ಒಳಪದರಗಳಲ್ಲಿ ಸತತವಾಗಿ ಮಿಡಿಯುತ್ತಿರುವ ಸನಾತನ ಮಾನವ ಚೇತನವೇ ಎದ್ದು ಕಾಣುತ್ತದೆ. ಅದರ ಅಭಿವ್ಯಕ್ತಿ ಸಂಕಟದ ಸಂಕೋಲೆಯಲ್ಲಿ, ಪ್ರತಿಭಟನೆಯ ಕೆಚ್ಚಿನಲ್ಲಿ, ಸ್ವಾರ್ಥ ಕ್ರೌರ್ಯಗಳ ಆತ್ಮವಂಚನೆಯ ವಿಕಾರಗಳ ವಿಪರ್ಯಾಸದಲ್ಲಿ, ಹೋರಾಟದ ಕ್ಷಾತ್ರದಲ್ಲಿ, ತ್ಯಾಗ ಬಲಿದಾನಗಳ ಪೂರ್ಣಾಹುತಿಯಲ್ಲಿ—ಹೀಗೆ ಬಗೆಬಗೆಯಾಗಿ ಮಿಡಿಯಬಹುದು. ಸೃಜನಶೀಲ ಕಲಾವಿದನ ಸ್ವಂತ ಅಭಿಪ್ರಾಯಗಳೇನೇ ಇರಲಿ, ಅವನ ಕಲಾಚೇತನ ಮಾನವತಾ ಆಶಯದಿಂದ ಪ್ರಾಮಾಣಿಕವಾಗಿ ವಸ್ತುನಿಷ್ಠವಾದಾಗ ಅವನು ಕಲೆಯ ಬಾಗುಗನ್ನಡಿಯಲ್ಲಿ ಮಾನವತಾ ಗತಿಶೀಲತೆಯ ಜೀವಂತಚಿತ್ರವನ್ನೇ ಪ್ರತಿಮೆಗಳಲ್ಲಿ ಪ್ರತಿಫಲಿಸುತ್ತಾನೆ. ಅವನು ಪ್ರಚಾರಕನಲ್ಲ, ಉಪದೇಶಕನೂ ಅಲ್ಲ—ದ್ರಷ್ಟಾರ. ಸತ್ಯಸೌಂದರ್ಯಗಳ ಅನನ್ಯ ಅವಿನಾಭಾವ ಅವನದು. ಸತ್ಯವಲ್ಲದ್ದು ಎಂದೂ ಸುಂದರವಾಗದು; ಅಂಥ ಅಸತ್ಯ ಮಿಥ್ಯಗಳ ವಿರುದ್ಧ ವಸ್ತುಸ್ಥಿತಿಯ ಒಳಪದರಗಳಲ್ಲಿ ಪ್ರಾಮಾಣಿಕವಾಗಿ ಮಿಡಿಯುತ್ತಿರುವ ಮಾನವ ಚೇತನವೇ ಸೌಂದರ್ಯದ ನೆಲೆ ಹಾಗೂ ಸತ್ಯದ ಸೋಪಾನ.

ಕಾರ್ಲ್‌ಮಾರ್ಕ್ಸ್ ವಿಚಾರಧಾರೆಯ ಸಾರಸರ್ವಸ್ವವಾದ ಮಾನವತಾ ಆಶಯದ ಸೂತ್ರಪ್ರಾಯವಾದ ಭಾವಪ್ರಕ್ರಿಯೆಯನ್ನೇ ಬೆಲೀನ್‌ಸ್ಕಿಯ ಸೌಂದರ್ಯಮೀಮಾಂಸೆಯಲ್ಲಿ ಕಾಣಬಹುದಾಗಿದೆ. ಬೆಲೀನ್‌ಸ್ಕಿಯಿಂದ ವಿಧ್ಯುಕ್ತವಾಗಿ ಉಗಮಿಸಿದ ಈ ಕ್ರಿಯಾಶೀಲ ಸೌಂದರ್ಯಮೀಮಾಂಸೆ ಮುಂದೆ ಚೆರ್ನಿಷೇವ್‌ಸ್ಕಿ, ದೊಬ್ರೊಲ್ಯುಬೋವ್, ಅಲೆಗ್ಸಾಂಡರ್ ಹರ್ಜನ್, ಪ್ಲೆಹನೋವ್, ಕ್ರಿಸ್ಟೊಫರ್ ಕಾಡ್ವೆಲ್, ಜಾರ್ಜ್ ಲುಕಾಸ್ ಮುಂತಾದವರ ವಿಪುಲ ಲೇಖನಗಳಲ್ಲಿ ಶಾಖೋಪಶಾಖೆಯಾಗಿ ಬೆಳೆದು ಪ್ರಗತಿಪಥದಲ್ಲಿ

ಸಾಗುತ್ತಿರುವ ಸಮಗ್ರ ಮಾನವಕೋಟಿಗೆ ಸೃಜನಶೀಲ ದೃಷ್ಟಾರಪ್ರಜ್ಞೆಯನ್ನು ನೀಡುತ್ತಿದೆ ಎನ್ನಬಹುದು.

## ಕೆಲವು ಪರಾಮರ್ಶ ಗ್ರಂಥಗಳು


Marx Engels : *Selected Works* (2 Volumes)
Marx : *The Poverty of Philosophy*
Engels : *Dialectics of Nature*
Engels : *The Origin of Family Private Property and the State*
V G Belinsky : *Selected Philosophical Works*
N G Chernyshevsky : *Selected Philosophical Works*
A Herzen : *Selected Philosophical Works*
N A Dobrolyubov : *Selected Philosophical Essays*
V I Lenin : *Materialism and Empirio-Criticism*
V I Lenin : *On Literature and Art*
G Plekhanov : *Art and Social Life*
G Plekhanov : *Selected Philosophical Works* (2 Volumes)
Georg Lukacs : *Studies in European Realism*
Georg Lukacs : *History and Class Consciousness*
Georg Lukacs : *The Historical Novel*
Georg Lukacs : *The Meaning of Contemporary Realism*
Georg Lukacs : *Writer and Critic*
Crishtopher Caudwell : *Studies in a Dying Culture*
Crishtopher Caudwell : *Further Studies in a Dying Culture*
Crishtopher Caudwell : *Illusion and Reality*
Ralpx Fox : *The Novel and the People*
Mikhail Khrapchenko : *Artistic Creativity, Reality and Man*
Aristotle's Poetics : *Edited by Rev T A Moxon*
Deviprasad Chattopadhyaya : *Lokayata*

# ಭಾರತೀಯ ಚಿತ್ರಕಲೆ : ಕೆಲವು ವಿಚಾರಗಳು

ಜಿ. ಎಸ್. ಶಿವರುದ್ರಪ್ಪ

ಕಲೆಗಳ, ಕಲಾವಿದರ ಹಾಗೂ ಕಲಾತತ್ವಗಳ ಒಂದು ಸಮೃದ್ಧವಾದ ಪರಂಪರೆಯೇ ಇರುವ ನಮ್ಮ ದೇಶದಲ್ಲಿ, ಈ ಎಲ್ಲವನ್ನೂ ಸಮರ್ಪಕವಾದ ರೀತಿಯಲ್ಲಿ ಪರಿಚಯ ಮಾಡಿಕೊಡುವ ಹಾಗೂ ತಕ್ಕ ವಿಮರ್ಶನ ಪ್ರಜ್ಞೆಯಿಂದ ವಿವೇಚಿಸುವ ಕಾರ್ಯ ಇನ್ನೂ ವ್ಯಾಪಕವಾದ ರೀತಿಯಲ್ಲಿ ನಡೆಯಬೇಕಾಗಿದೆ. ಈವರೆಗೆ ಈ ದಿಕ್ಕಿನಲ್ಲಿ ಆಗಿರುವ ಕೆಲಸಕ್ಕೆ ಹೋಲಿಸಿದರೆ, ಇನ್ನೂ ಆಗಬೇಕಾಗಿರುವ ಕೆಲಸದ ಪ್ರಮಾಣ ದೊಡ್ಡದಾಗಿದೆ.

ಕಲೆ ಎಂದರೆ, ಸ್ಥೂಲವಾಗಿ ಹೇಳುವುದಾದರೆ ಉಪಾಯ ಅಥವಾ ಕೌಶಲ ಎಂದು ಅರ್ಥ. ಯಾವ ಉಪಾಯ ಅಥವಾ ಕೌಶಲದ ಮೂಲಕ ಸೃಜನಶೀಲವಾದ ಮನಸ್ಸೊಂದು ತನ್ನ ಭಾವ-ಭಾವನೆ-ಅನುಭವಗಳನ್ನು ಮತ್ತೊಂದು ಮನಸ್ಸಿಗೆ ಮುಟ್ಟಿಸುವ ಸೌಂದರ್ಯ ನಿರ್ಮಾಣಕ್ರಿಯೆಯಲ್ಲಿ ತೊಡಗುತ್ತದೆಯೋ, ಆ ಕ್ರಿಯೆಯ ಪರಿಣಾಮವನ್ನೇ ಕಲೆ, ಕಲಾಕೃತಿ ಎಂದು ಹೇಳಬಹುದು. ಈ ಒಂದು ಮನೋಧರ್ಮದ ಮೂಲಕ ಮನುಷ್ಯ ಕೈಗೊಳ್ಳುವ ಇನ್ನಿತರ ಚಟುವಟಿಕೆಗಳೂ ಈ ಕ್ಷೇತ್ರದೊಳಗೇ ಸೇರ್ಪಡೆಯಾಗುತ್ತವೆ. ಈ ಅರ್ಥದಲ್ಲಿ ಸೌಂದರ್ಯ ನಿರ್ಮಾಣಕಾರಕವಾದ ಮನಸ್ಸುಗಳು ಹದವರಿತು ಮಾಡಿದ ಮಾಟಗಳೆಲ್ಲವೂ ಕಲೆಯೇ. ಕಲೆಗಳ ಸಂಖ್ಯೆ ಅನಿರ್ದಿಷ್ಟ ಹಾಗೂ ವಿವಾದಾತ್ಮಕವಾಗಿರುವುದಾದರೂ, ಒಟ್ಟಿನಲ್ಲಿ ಕಲೆಗಳ ಸಂಖ್ಯೆ ಅರುವತ್ತುನಾಲ್ಕು ಎಂದು ತಿಳಿಸಲಾಗಿದೆ.

ಭಾರತೀಯರ ಪ್ರಕಾರ ಶಿಲ್ಪ ಮತ್ತು ಕಲೆ ಈ ಎರಡೂ ಸಮಾನಾರ್ಥಕಗಳು. ಶಿಲ್ಪ ಅನ್ನುವ ಮಾತು ಸಮಸ್ತ ಕಲೆಗಳನ್ನೂ ಒಳಗೊಳ್ಳುತ್ತದೆ. ಭಾರತೀಯ ಕಲೆ ಎರಡು ನಿರ್ದಿಷ್ಟವಾದ ರೂಪದಿಂದ ನಿಷ್ಪನ್ನಗೊಂಡಿದೆ. ಒಂದು, ಶವಸಂಸ್ಕಾರ ರೂಪವಾದುದು ; ಎರಡು, ಯಜ್ಞಕರ್ಮರೂಪವಾದುದು. ಯಜ್ಞಯಾಗಗಳಿಗೆ ರಚಿಸಿದ 'ಚಿತಾ' ಅಥವಾ ಯಜ್ಞಕುಂಡ, ಅನುಭಾವಿಕವಾದ ರೇಖಾಕೃತಿಗಳನ್ನು ಉಳ್ಳದ್ದು. ಇದೇ ಭಾರತೀಯ ದೇವಾಲಯಶಿಲ್ಪದ ಮೂಲವೆಂದು ಹೇಳಲಾಗಿದೆ. ಹಾಗೆಯೇ ಶವಸಂಸ್ಕಾರದ ನಂತರ, ಚಿತಾಭಸ್ಮವನ್ನಿಡುವ ಸ್ಥಳದಿಂದಾಗಿ ಅದು ಚೈತ್ಯ, ಸ್ತೂಪಗಳ ನಿರ್ಮಿತಿಗೆ ಕಾರಣವಾಯಿತು. ದೇವಸ್ಥಾನಗಳ ತಳಪಾಯವನ್ನು ಗಮನಿಸಿದರೆ ಅವು ಯಜ್ಞವೇದಿಕೆಯ ರೇಖಾಕೃತಿಯನ್ನು ಆಧಾರವಾಗಿರಿಸಿಕೊಂಡಿದೆ ಎಂದು ವಿದ್ವಾಂಸರು ಹೇಳುತ್ತಾರೆ.

ಹಾಗೆಯೇ ದೇವಸ್ಥಾನದ ವಿಮಾನಮಂಡಪ ಇತ್ಯಾದಿಗಳ ರಚನೆ ಕೂಡ ಹಲವು ಬಗೆಯ ಅನುಭಾವಿಕ ರೇಖಾಚಿತ್ರಗಳ ಹಿನ್ನೆಲೆಯಿಂದ ರೂಪುಗೊಂಡಿದೆ ಎಂದು ಊಹಿಸುತ್ತಾರೆ. ಮೊದಮೊದಲ ದೇವಾಲಯನಿರ್ಮಿತಿ ಮಹಾವ್ಯಕ್ತಿಗಳ ಶವದಹನದ ಚಿತಾಭಸ್ಮಗಳನ್ನು ಇರಿಸುವ ಉದ್ದೇಶದಿಂದಲೇ ಪ್ರಾರಂಭವಾಯಿತೆಂದು ಹೇಳಲಾಗಿದೆ. ಬುದ್ಧನ ಚಿತಾಭಸ್ಮವನ್ನು ಕರಂಡವೊಂದರಲ್ಲಿ ಇರಿಸಿ, ಕಟ್ಟಿದ ಸಾಂಚೀಸ್ತೂಪ ಇದಕ್ಕೆ ಒಂದು ನಿದರ್ಶನವಾಗಿದೆ. ಚೈತ್ಯಾಲಯವೆಂದು ಹೆಸರಾದ ಈ ಸ್ತೂಪದ ರಚನೆ ಕೂಡ ಅತ್ಯಂತ ಸಾಂಕೇತಿಕವಾಗಿದೆ. ಒಳಗೆ ಇರುವ ಚಿತಾಭಸ್ಮ ಮೃತ್ಯುವನ್ನು ಅಥವಾ ಬದುಕಿನ ನಶ್ವರತೆಯನ್ನು ಸಂಕೇತಿಸಿದರೆ, ಮೇಲೆ ಗೋಳಾಕಾರದ ಅದರ ರಚನೆ, ಹೆಣ್ಣಿನ ಸ್ತನವನ್ನು, ಅಂದರೆ, ಬದುಕಿನ ಪೋಷಣೆ, ಸಮೃದ್ಧಿ, ವಾತ್ಸಲ್ಯ ಇತ್ಯಾದಿ ಭಾವನೆಗಳನ್ನು ಸಂಕೇತಿಸುತ್ತದೆ. ಹೀಗೆ ಸಾವು-ಬದುಕುಗಳೆರಡರ ಕಲ್ಪನೆಯನ್ನು ಈ ಶಿಲ್ಪ ಅಪೂರ್ವವಾದ ರೀತಿಯಲ್ಲಿ ಹಿಡಿದಿರಿಸುವುದರ ಮೂಲಕ ನಿಜವಾದ ಅರ್ಥದಲ್ಲಿ ಕಲಾಕೃತಿಯಾಗಿದೆ.

ಭಾರತೀಯರ ಪ್ರಕಾರ ಸಮಸ್ತಕಲೆಗಳನ್ನೂ ಶಿಲ್ಪವೆಂದೇ ಪರಿಗಣಿಸಲಾಗಿದೆ. ಈ ಶಿಲ್ಪ ಮೂರು ಅಂಗಗಳನ್ನು ಒಳಗೊಂಡಿದೆ. ಒಂದು ವಾಸ್ತುಶಾಸ್ತ್ರ, ಎರಡು ಶಿಲ್ಪಶಾಸ್ತ್ರ, ಮತ್ತೊಂದು ಚಿತ್ರಶಾಸ್ತ್ರ. ಈ ಮೂರನ್ನೂ ಒಟ್ಟಾಗಿ 'ಶಿಲ್ಪ'ವೆಂದೇ ನಿರ್ದೇಶಿಸಲಾಗಿದೆ. ಭಾರತೀಯ ಕಲಾಕಲ್ಪನೆಯ ಪ್ರಕಾರ ಶಿಲ್ಪ, ಚಿತ್ರ, ಗೀತ ಹಾಗೂ ನರ್ತನ—ಇವು ಪರಸ್ಪರ ಪೂರಕವಾದ ಕಲೆಗಳು ಎಂದು ಗೃಹೀತವಾಗಿರುವುದು ಒಂದು ವಿಶೇಷವಾದ ಸಂಗತಿಯಾಗಿದೆ. "ಯಾರಿಗೆ ಚಿತ್ರ ತಿಳಿಯದೋ ಅವರಿಗೆ ಪ್ರತಿಮಾಲಕ್ಷಣ ತಿಳಿಯದು. ಯಾರಿಗೆ ನೃತ್ಯ ತಿಳಿಯದೋ ಅವರಿಗೆ ಚಿತ್ರ ತಿಳಿಯದು. ಯಾರಿಗೆ ಸಂಗೀತ ತಿಳಿಯದೋ ಅವರಿಗೆ ನೃತ್ಯ ತಿಳಿಯದು" ಎನ್ನುತ್ತದೆ ವಿಷ್ಣುಧರ್ಮೋತ್ತರ ಪುರಾಣ. "ನೃತ್ಯದಂತೆ ಚಿತ್ರವೂ ಲೋಕತ್ರಯದ ಅನುಕರಣರೂಪವಾದುದರಿಂದ, ಆಯಾ ಭಾವಾವೇಶಕ್ಕೆ ತಕ್ಕಂತೆ ಇರುವ ಆಕೃತಿ ವಿಶೇಷಗಳು ಸಮಾನವಾಗಿರುವುದರಿಂದ, ನೃತ್ಯಸಹ ಉತ್ಕೃಷ್ಟವಾದ ಚಿತ್ರವೇ ಆಗುತ್ತದೆ" ಎಂಬ ಮಾತೂ ಅಲ್ಲೇ ಉಲ್ಲೇಖಿತವಾಗಿದೆ. ಅಂದರೆ, ಗೀತ-ನರ್ತನ-ಚಿತ್ರ-ಶಿಲ್ಪ ಎಲ್ಲವೂ ಒಂದೇ ಸೃಜನಶೀಲ ಮನಸ್ಸಿನ ಅಭಿವ್ಯಕ್ತಿಗಳಾದ ಕಾರಣ, ಆಯಾ ಕಲಾವಿದ ಅನುಸರಿಸುವ ಮಾಧ್ಯಮಗಳು ಬೇರೆಬೇರೆಯಾದರೂ, ಈ ಎಲ್ಲವಕ್ಕೂ ಆಂತರಿಕ ಸಂಬಂಧವಿದೆ ಎಂಬ ಭಾರತೀಯ ನಿಲುವು ವಿಶೇಷವಾದದ್ದು. ... ಬಗೆಯ ನಿಲುವು ಅಷ್ಟಾಗಿ ಕಾಣಿಸದು.

ಬೇರೆಬೇರೆಯಾಗಿವೆ. ಭಾರತೀಯ ಕಲಾತತ್ತ್ವ ಕಲಾವಿದ ಒಬ್ಬ ಸಾಧಕ. ಅವನು ಕಲೆಯ ಅನುಗ್ರಹಕ್ಕೆ ಪಾತ್ರನಾಗಬೇಕಾದರೆ ಈ ಒಂದು ಸಾಧಕಮನೋಭಾವದಿಂದ ಅದನ್ನು ತನ್ನಲ್ಲಿ ಆವಾಹನೆ ಮಾಡಿಕೊಳ್ಳಲು ಅಗತ್ಯವಾದ ಒಂದು ಶುಚಿಶೀಲ, ಧ್ಯಾನಸ್ಥಿತಿಯನ್ನು ತಲುಪಬೇಕು—ಎನ್ನುವುದು. ಆದರೆ ಪಶ್ಚಿಮದ ಕಲಾತತ್ತ್ವದ ಪ್ರಕಾರ ಕಲೆ ಒಂದು ಹೊಳವು. ಅದು ಮಿಂಚಿನಂತೆ ಹೊಳೆದು ಕಲಾವಿದನ ಮೂಲಕ ಮೂರ್ತಗೊಳ್ಳುವ ಒಂದು ಶಕ್ತಿ ವಿಶೇಷ. ಅದನ್ನು ದೈವಿಕವೆಂದು ಕರೆಯಬಹುದು : ಕರೆಯದಿರಬಹುದು. ಆದರೆ ಕಲಾವಿದ ಅದನ್ನು ಆವಾಹನೆ ಮಾಡಿಕೊಳ್ಳಲು ಅಗತ್ಯವಾದ ಧಾರ್ಮಿಕವೋ ಆಧ್ಯಾತ್ಮಿಕವೋ ಆದ ಸಾಧಕನೇ ಆಗಿರಬೇಕಾಗಿಲ್ಲ. ಯಾಕೆಂದರೆ ಆ ಕಲಾಶಕ್ತಿ ಕಲಾವಿದನ ಬದುಕಿನ ಮಡಿ-ಮೈಲಿಗೆಗಳ ಬಗೆಗೆ ಯಾವ ನೈತಿಕವಾದ ನಿಲುವನ್ನೂ ತೆಗೆದುಕೊಳ್ಳುವುದಿಲ್ಲ. ವಾಸ್ತವವಾಗಿ ಪೂರ್ವದವನೇ ಆಗಲಿ, ಪಶ್ಚಿಮದವನೇ ಆಗಲಿ ಕಲಾವಿದ ಮೂಲತಃ ಕಲಾಸಾಮರ್ಥ್ಯವನ್ನು ಹುಟ್ಟಿನಿಂದ ಪಡೆದುಕೊಂಡ ಕಲೆಗಾರನಾಗಿರಬೇಕೆಂಬುದು ಮುಖ್ಯ. ಆದರೆ ಎಲ್ಲ ಕಲಾಭಿವ್ಯಕ್ತಿಯೂ ಮೂಲತಃ ಗಾಢವಾದ ಪರಿಭಾವನೆಯಿಂದ ತಾನೇ ಮೂಡತಕ್ಕದ್ದು? ಈ ಪರಿಭಾವನೆಯ ಮನಃಸ್ಥಿತಿಯನ್ನೇ ಭಾರತೀಯ ಕಲಾತತ್ತ್ವ ಧ್ಯಾನಧಾರಣ ಸ್ಥಿತಿ ಎಂದು ವರ್ಣಿಸುತ್ತದೆ. ವಾಸ್ತವವಾಗಿ ಭಾರತೀಯ ಕಲೆ ಒತ್ತಿ ಹೇಳುವುದು, ಕಲೆ ಅನ್ನುವುದು ಕಲಾವಿದನ ಧ್ಯಾನಸ್ಥಿತಿಯಿಂದ ಮೂಡುವ ಒಂದು ಸೃಜನಾತ್ಮಕ ಅಭಿವ್ಯಕ್ತಿ ಎಂಬುದಾಗಿ. ಈ ಕಲಾಕೃತಿಗಳೂ, ನೋಡಿದವರಲ್ಲಿ ಇದೇ ಬಗೆಯ ಒಂದು ಮನಃಸ್ಥಿತಿಯನ್ನು ನಿರ್ಮಿಸಬೇಕೆಂಬುದು ಭಾರತೀಯ ಕಲಾತತ್ತ್ವದ ಆಶಯವಾಗಿದೆ. ಈ ಆಶಯದ ಹಿಂದೆ ಭಾರತೀಯ ಧಾರ್ಮಿಕ-ಆಧ್ಯಾತ್ಮಿಕ ವಿಚಾರಗಳ ಪ್ರಭಾವವೂ ಗಾಢವಾಗಿ ವ್ಯಾಪಿಸಿಕೊಂಡಿದೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಭಾರತೀಯ ಶಾಸ್ತ್ರಗಳು ಸೃಜನಶೀಲ ಕಲಾವಿದನಿಗೆ 'ಪ್ರಭುಸಮ್ಮಿತಿ'ಯ ನಿರ್ಬಂಧಗಳನ್ನು ವಿಧಿಸುವ ಕಡೆಗೆ ವಿಶೇಷ ಒತ್ತನ್ನು ಕೊಟ್ಟಂತೆ ಭಾಸವಾಗುತ್ತದೆ. ಚಿತ್ರ-ಶಿಲ್ಪ-ಸಂಗೀತಗಳ ವಿಷಯದಲ್ಲಂತೂ ಈ ಮಾತು ವಿಶೇಷವಾಗಿ ಅನ್ವಯಿಸುವಂತೆ ತೋರುತ್ತದೆ. ಈ ಎಲ್ಲ ಕಲೆಗಳೂ ಶಾಸ್ತ್ರಾನುಸಾರಿಯಾಗಬೇಕು : ಶಾಸ್ತ್ರೋಕ್ತವಾಗಿರುವಿಕೆಯಿಂದ ಶ್ರೇಯಸ್ಸು, ಶಾಸ್ತ್ರೋಲ್ಲಂಘನೆಯಿಂದ ಕೇಡು—ಎಂಬುದು ಮತ್ತೆ ಮತ್ತೆ ಕೇಳಿಬರುವ ಮಾತಾಗಿದೆ. ಯಾಕೆಂದರೆ ಪೂರ್ವಾಚಾರ್ಯರು ತಮ್ಮ ಧ್ಯಾನಸ್ಥಿತಿಯಲ್ಲಿ ಏನೇನು ಲಕ್ಷಣಗಳನ್ನು ಕಂಡು ವಿಧಿಸಿದ್ದಾರೋ ಮತ್ತು ಶಾಸ್ತ್ರಾನುಸಾರಿಯಾಗಿ ಆಗಲೇ ನಿರ್ಮಿತವಾದ ಕಲೆಗಳಿವೆಯೋ ಅವುಗಳನ್ನು ಉಳಿದವರೂ ಅನುಸರಿಸಬೇಕು ಎನ್ನುತ್ತವೆ—ಈ ಶಾಸ್ತ್ರಗ್ರಂಥಗಳು. ಆದರೆ ಈ ಎಲ್ಲ ನಿಯಮಗಳೂ ಹೊಸದಾಗಿ ಈ ಕ್ಷೇತ್ರಗಳಿಗೆ ಪ್ರವೇಶ ಮಾಡುವವರನ್ನು, ಒಂದು ಶಿಸ್ತಿಗೆ ಒಳಪಡಿಸಲು ನೀಡಿದ ನಿರ್ದೇಶಗಳೆಂದು ಭಾವಿಸುವುದೇ ಹೆಚ್ಚು ಸೂಕ್ತ. ವಾಸ್ತವವಾಗಿ ಕಲಾವಿದನಿಗೆ ಈ ಬಗೆಯ ಶಾಸ್ತ್ರಜ್ಞಾನ ಅಗತ್ಯ, ಆದರೆ ಆತ ನಿಜವಾದ ಕಲಾವಿದನಾಗುವುದು ಈ ಶಾಸ್ತ್ರದ ಅರಿವನ್ನು ಅರಗಿಸಿಕೊಂಡು ಅದನ್ನು

ಮೀರಿದ ಸೃಜನಾತ್ಮಕ ನೆಲೆಯಲ್ಲಿ ತನ್ನನ್ನು ನಿಲ್ಲಿಸಿಕೊಂಡಾಗಲೇ. ಕಲೆ ಎಂಬುದು ಬಂಧನದೊಳಗಿಂದಲೇ ಬಿಡುಗಡೆಯನ್ನು ಸಾಧಿಸುವ ಕೌಶಲ.

ನಮ್ಮ ದೇಶದ ಚಿತ್ರಕಲೆಯನ್ನು ನೋಡುವುದಾದರೆ ಅದು ಶಿಲ್ಪದಂತೆ. ಬೆಳೆದದ್ದು ಬೌದ್ಧಧರ್ಮದ ಹಿನ್ನೆಲೆಯಲ್ಲಿಯೆ. ನಿಜವಾದ ಚಿತ್ರಶೈಲಿ ಹಲವು ಹಂತಗಳ ಮೂಲಕ ವಿಕಾಸಗೊಂಡದ್ದು. ಹರಪ್ಪಾ ಮೊಹಂಜದಾರೋ ಕಾಲದಲ್ಲಿ, ಹಾಗೂ ಪ್ರಾಚೀನ ಆದಿಮಾನವರ ಗುಹಾಭಿತ್ತಿಗಳಲ್ಲಿ ಚಿತ್ರದ ಮೂಲಸೆಲೆಗಳು ಕಂಡುಬಂದರೂ, ನಿಜವಾದ ಚಿತ್ರಶೈಲಿ ರೂಪುಗೊಂಡದ್ದು ಮತ್ತು ಪ್ರಕರ್ಷಾವಸ್ಥೆಯಲ್ಲಿ ಪ್ರಕಟವಾದದ್ದು ಕ್ರಿ.ಶ. ಎರಡನೆ ಶತಮಾನದಿಂದ ಹಿಡಿದು ಮೂರನೆ ಶತಮಾನದವರೆಗಿನ ಕಾಲದ ಅಜಂತಾ ಗುಹೆಗಳ ಭಿತ್ತಿಚಿತ್ರಗಳಿಂದಲೇ ಎಂದು ಹೇಳಲಾಗಿದೆ. ಮುಂದೆ ರಾಷ್ಟ್ರಕೂಟರ ಕಾಲದಲ್ಲೂ ಇದು ಮುಂದುವರಿದಂತೆ ಕಂಡುಬರುತ್ತದೆ. ಜತೆಗೆ ಪ್ರತಿಯೊಂದು ಪ್ರದೇಶಕ್ಕೂ ಅದರದರ ಸಂಸ್ಕೃತಿಗೇ ವಿಶಿಷ್ಟವಾದ ಜಾನಪದ ಶೈಲಿಯೊಂದು ಇದ್ದೇ ಇತ್ತು ಎಂಬುದನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗಿದೆ. ಇವಲ್ಲದೆ ದಲವಾರು ದೇವಸ್ಥಾನಗಳ ಗೋಡೆಗಳಲ್ಲಿ, ತಾಳೆಯೋಲೆ ಪುಸ್ತಕಗಳಲ್ಲಿ ಮತ್ತು ಹಲಗೆಗಳ ಮೇಲೆ ಬರೆದ ಚಿತ್ರಗಳ ಪರಂಪರೆಯೂ ಇದೆ. ಇಡೀ ಭಾರತದಲ್ಲೇ ಅಲ್ಲಲ್ಲಿನ ಪ್ರಾದೇಶಿಕವಾದ ಹಲವು ಚಿತ್ರಶೈಲಿಗಳ ಚರಿತ್ರೆಯೇ ಇದೆ ಎಂಬುದು ತಿಳಿದ ಸಂಗತಿಯಾಗಿದೆ.

ಚಿತ್ರಕಲೆಯನ್ನು ಕುರಿತ ಹಲವಾರು ಸಂಗತಿಗಳನ್ನು ಹೇಳುವ ಕೃತಿಗಳೂ ನಮ್ಮಲ್ಲಿ ಸಾಕಷ್ಟಿವೆ. ಅವುಗಳಲ್ಲಿ ಚಿತ್ರಸೂತ್ರ ಮತ್ತು ವಿಷ್ಣುಧರ್ಮೋತ್ತರಗಳು ಮುಖ್ಯವಾದವುಗಳು. ಈ ಕೃತಿಗಳು ಚಿತ್ರಕಲೆಯನ್ನು ಕುರಿತು ಪುರಾಣಶೈಲಿಯಲ್ಲಿ ಹೇಳುವ ಕೆಲವು ಕಥಾರೂಪದ ಸಂಗತಿಗಳನ್ನು ಒಡೆದುನೋಡಿದರೆ, ಚಿತ್ರಕಲೆಯನ್ನು ಕುರಿತ ಮೌಲಿಕ ವಿಷಯಗಳು ಸ್ಫೋಟಗೊಳ್ಳುತ್ತವೆ. ಭಯಾಜಿತ್ ಎಂಬ ರಾಜ, ಅಕಾಲಮರಣಕ್ಕೀಡಾದ ಬ್ರಾಹ್ಮಣಕುಮಾರನನ್ನು ಹಿಂದಕ್ಕೆ ತರುವ ಹೋರಾಟದಲ್ಲಿ ಯಮನ ನಗ್ನಪ್ರೇತಗಳನ್ನು ಗೆದ್ದುದರಿಂದ ಈತನಿಗೆ ನಗ್ನಜಿತ್ ಎಂದು ಹೆಸರಾಯಿತಂತೆ. ಈ ಪ್ರಯತ್ನದಲ್ಲಿ ಆತ ಬ್ರಾಹ್ಮಣನ ಸೂಚನೆಯಂತೆ, ಮೃತನಾದ ಆ ಬ್ರಾಹ್ಮಣಕುಮಾರನ ಚಿತ್ರವನ್ನು ಬರೆದು ಅದಕ್ಕೆ ಜೀವವನ್ನು ತುಂಬಿಸಿಕೊಂಡು ಬಂದನಂತೆ. ಇದೇ ಜಗತ್ತಿನ ಮೊದಲ ಚಿತ್ರ ಎಂದು ಹೇಳಲಾಗಿದೆ. ಇದು ಚಿತ್ರಸೂತ್ರದಲ್ಲಿ ಬರುವ ಕಥೆ. ವಿಷ್ಣುಧರ್ಮೋತ್ತರ ಪುರಾಣದಲ್ಲಿ ಇನ್ನೊಂದು ಕಥೆ ಇದೆ. ನಾರಾಯಣ ಎಂಬ ಋಷಿ ತನ್ನ ತಪೋಭಂಗ ಮಾಡಲು ಬಂದ ಅಪ್ಸರೆಯರನ್ನು ನಾಚಿಸುವಂತೆ, ಮಾವಿನ ಎಲೆಯ ರಸದಿಂದ ಊರ್ವಶಿಯ ಚಿತ್ರವನ್ನು ಬರೆದನಂತೆ. ಅದನ್ನು ನೋಡಿ ತಪೋಭಂಗಮಾಡಲು ಬಂದ ಅಪ್ಸರೆಯರು ನಾಚಿಕೊಂಡು ಓಡಿಹೋದರಂತೆ. ಈ ಎರಡೂ ಕತೆಗಳನ್ನು ಒಟ್ಟಿಗೆ ಇರಿಸಿಕೊಂಡು ಗಮನಿಸಿದರೆ, ಚಿತ್ರ ಅನ್ನುವುದು ಬ್ರಹ್ಮಸೃಷ್ಟಿಗೆ ಸದೃಶವಾದ ಒಂದು ನಿರ್ಮಿತಿ, ಅದು ಮೃತ್ಯುವನ್ನು ಗೆದ್ದು ನಿಲ್ಲುವಂಥದು—ಎನ್ನುವ ಸಂಗತಿ ನಿಷ್ಪನ್ನವಾಗುತ್ತದೆ.

ವಾತ್ಸ್ಯಾಯನನ ಕಾಮಸೂತ್ರಕ್ಕೆ (ಇದರ ಕಾಲ ಕ್ರಿ.ಶ. ಆರನೆ ಶತಮಾನ ಎನ್ನಲಾಗಿದೆ)

ವ್ಯಾಖ್ಯಾನವನ್ನು ಬರೆದ ಯಶೋಧರ (ಕ್ರಿ. ಶ. ೧೧ನೆ ಶತಮಾನ) ಭಾರತೀಯ ಚಿತ್ರಕಲೆಯನ್ನು ಕುರಿತು ಹೇಳುವ ಆರು ಸೂತ್ರಗಳು ತುಂಬ ಗಮನಾರ್ಹವಾಗಿವೆ. ಭಾರತೀಯ ಚಿತ್ರಕಲೆಯ 'ಷಡಂಗ'ಗಳು ಎಂದು ಇವುಗಳನ್ನು ಕರೆಯಲಾಗಿದೆ. ಆ ಕುರಿತ ಶ್ಲೋಕ ಹೀಗಿದೆ :

ರೂಪಭೇದಾಃ ಪ್ರಮಾಣಾನಿ ಭಾವಲಾವಣ್ಯಯೋಜನಾಮ್
ಸಾದೃಶಂ ವರ್ಣಿಕಾಭಂಗ ಇತಿ ಚಿತ್ರಂ ಷಡಂಗಕಂ ॥

ಸುಪ್ರಸಿದ್ಧ ಕಲಾವಿದರಾದ ಅವನೀಂದ್ರನಾಥ ಠಾಕೂರರು ಈ ಕುರಿತು 'ರೂಪಂ' ಎಂಬ ಪತ್ರಿಕೆಯಲ್ಲಿ **Six limbs of Painting** ಎಂಬ ಲೇಖನವನ್ನು ಬರೆದಿದ್ದಾರೆ. ಅದನ್ನು ನಮ್ಮ ಇಂದಿನ ಕಲಾವಿದರು ಗಮನಿಸುವುದು ಅಗತ್ಯವಾಗಿದೆ.

ಚಿತ್ರಕಲೆಯ ಮೊದಲ ಲಕ್ಷಣ 'ರೂಪಭೇದ'. ಚಿತ್ರಕಲಾವಿದನಾದವನಿಗೆ ಇರಬೇಕಾದ ಮೊದಲ ಪರಿಜ್ಞಾನ ಇದು. ಈ ಜಗತ್ತು ರೂಪಗಳ ಜಗತ್ತು. ಯಾವುದೇ ವಸ್ತು ನಮ್ಮ ಕಣ್ಣಿಗೆ ಮುಟ್ಟುವುದು ಅದರ 'ರೂಪ'ದಿಂದ. ಈ ರೂಪಲೋಕದ ವಸ್ತುಗಳು ಅವುಗಳ ವರ್ಣ-ಗಾತ್ರ-ರೇಖೆಗಳಿಂದ ನಮ್ಮ ಅರಿವಿಗೆ ಬರುತ್ತವೆ. ಆದಕಾರಣ ಜಗತ್ತಿನ ವಿವಿಧ ವಸ್ತುಗಳ ರೂಪ-ಆಕಾರಗಳನ್ನು ಕಲಾವಿದ ಸೂಕ್ಷ್ಮವಾಗಿ ಕಂಡಿರಬೇಕಲ್ಲದೆ, ಪ್ರತಿಯೊಂದು ವಸ್ತುವಿನ ರೂಪ-ಆಕಾರಗಳು, ಇತರ ವಸ್ತುಗಳ ರೂಪ-ಆಕಾರಗಳಿಂದ ಎಷ್ಟು ಮಟ್ಟಿಗೆ ಭಿನ್ನವಾಗಿವೆ ಎಂಬುದನ್ನು ಗಮನಿಸಬೇಕು. ಈ ರೂಪಗಳು ಕೂಡ ಜಡ-ಚೇತನ, ಸ್ಥೂಲ-ಸೂಕ್ಷ್ಮವೆಂದು ನಾವು ಗುರುತಿಸಬಹುದು. "ಜಡಚೇತನಗಳ ನಿಮ್ನೋನ್ನತಗಳ [illegible] ಹಾಗೂ ವ್ಯತ್ಯಾಸಗಳನ್ನು ಗುರುತಿಸಲಾರದವನು ಕಲಾವಿದನಾಗಲಾರ" ಎನ್ನುತ್ತದೆ ವಿಷ್ಣು ಧರ್ಮೋತ್ತರ ಪುರಾಣ. ಆದಕಾರಣ ಈ ರೂಪಲೋಕದ ವಿವಿಧ ವಿನ್ಯಾಸಗಳನ್ನು ಗುರುತಿಸುವುದು ಹಾಗೂ ಅವುಗಳನ್ನು ಚಿತ್ರಿಸುವುದು ಚಿತ್ರಕಲೆಯ ಬಹು ಮುಖ್ಯವಾದ ಲಕ್ಷಣವಾಗಿದೆ.

ಎರಡನೆಯದು 'ಪ್ರಮಾಣ'ಗಳ ಪರಿಜ್ಞಾನ. ಪ್ರಮಾಣ ಎಂದರೆ ಒಂದು ಮತ್ತೊಂದಕ್ಕೆ ಇರುವ ಹೊಂದಾಣಿಕೆಯ ಅರಿವು. ಕಾವ್ಯಮೀಮಾಂಸೆಯ ಪರಿಭಾಷೆಯಲ್ಲಿ [illegible] ಬೇಕೆಂದರೆ ಔಚಿತ್ಯಜ್ಞಾನ. ಶಿಲ್ಪದಲ್ಲಂತೂ, ಈ ಪ್ರಮಾಣಜ್ಞಾನ ಹೆಚ್ಚು [illegible] ತ್ತದೆ. ಸಾಂಕೇತಿಕವಲ್ಲದ ಮತ್ತು ವಾಸ್ತವಕ್ಕೆ ಹತ್ತಿರವಾದ ಚಿತ್ರಶಿಲ್ಪಗಳಲ್ಲಿ ಪ್ರಮಾಣ ಬಹುಮುಖ್ಯವಾದದ್ದು.

ಮೂರನೆಯದು ಭಾವಯೋಜನೆ. 'ಭಾವ' ಅನ್ನುವುದು ಮನಸ್ಸಿನ ಚಿತ್ತವೃತ್ತಿ. ಕಲಾವಿದ ತಾನು ಚಿತ್ರಿಸುವ ಚಿತ್ರದಲ್ಲಿ ಈ ಮನಃಸ್ಥಿತಿಯನ್ನು ಹೇಗೆ ಚಿತ್ರಿಸುತ್ತಾನೆ ಅನ್ನುವುದು. ಒಂದು ವಿಶೇಷ. ಯಾವ ಯಾವ ಸಂದರ್ಭಗಳಲ್ಲಿ ಹಾಗೂ ಅವುಗಳಿಗೆ ಈ ಭಾವ. ಅಂದಂದಿಗೆ ಅನುಸಾರವಾಗಿ, ಮುಖದಲ್ಲಿ ಹಾಗೂ ಇಡೀ ಅಂಗಭಂಗಿಯಲ್ಲಿ ಹೇಗೆ ಅಭಿವ್ಯಕ್ತವಾಗುತ್ತದೆ ಎನ್ನುವುದನ್ನು ಸೂಕ್ಷ್ಮವಾಗಿ ಗಮನಿಸಿದ ಕಲಾವಿದ, ಅದನ್ನು ತನ್ನ ಚಿತ್ರದ ಸಂದರ್ಭದಲ್ಲಿ ತರುವ ಕೌಶಲ ಇದು. ಇದು ಕೇವಲ ಮನುಷ್ಯಾಕೃತಿಗಳ

ಮಾತ್ರ ಸಂಬಂಧಿಸಿದ್ದಲ್ಲ : ನಿಸರ್ಗಚಿತ್ರದ ವಿಚಾರಕ್ಕೂ ಸಂಬಂಧಿಸಿದ್ದು. **'Every landscape is a State of mind'** ಅನ್ನುವ ಮಾತೊಂದಿದೆ. ಅಂದರೆ ಕಲಾವಿದ ಬರೆದ ನಿಸರ್ಗದೃಶ್ಯ, ಮೂಲತಃ ಒಂದು ಮನಃಸ್ಥಿತಿ ಅಥವಾ ಭಾವವೊಂದರ ಅಭಿವ್ಯಕ್ತಿಯಾಗಿದೆ. ನೀರಸವಾಗಿ ಬೋಳುಬಾನಿಗೆ ಕೊಂಬೆಗಳನ್ನು ಚಾಚಿಕೊಂಡ, ಒಣನೆಲದ ಹಿನ್ನೆಲೆಯಲ್ಲಿ ಚಿತ್ರಿತವಾಗಿರುವ 'ಮರ'ದ ಚಿತ್ರ ಅಭಿವ್ಯಕ್ತಿಸುವ ಭಾವಕ್ಕೂ ಸಮೃದ್ಧವಾದ ಹೊಸ ಚಿನ್ನದ ಚಿಗುರನ್ನು ತುಂಬಿಕೊಂಡು ಹೊಂಬಿಸಿಲಿನಲ್ಲಿ ಥಳಥಳಿಸುವ 'ಮರ'ದ ಚಿತ್ರ ಅಭಿವ್ಯಕ್ತಿಸುವ ಭಾವಕ್ಕೂ ಖಂಡಿತ ವ್ಯತ್ಯಾಸವಿದೆ. ಹಾಗೆಯೆ ಮ್ಲಾನವಾದ ಮಬ್ಬುಮೋಡಗಳಿಂದ ಜೋಲುವ ಆಕಾಶದ 'ಚಿತ್ರ' ಸೂಚಿಸುವ ಭಾವಕ್ಕೂ ಬಿಳಿಮೋಡಗಳಿಂದ ಶೋಭಿತವಾದ ಶರತ್ಕಾಲದ ಆಕಾಶದ 'ಚಿತ್ರ' ಸೂಚಿಸುವ ಭಾವಕ್ಕೂ ವ್ಯತ್ಯಾಸವಿದೆ. ವಾಸ್ತವವಾಗಿ ಈ ನಿಸರ್ಗಚಿತ್ರಗಳು ನಿಸರ್ಗದ ತದ್ರೂಪವಾಗದೆ, ಹಲವು ಬಗೆಯ ಭಾವಗಳಿಗೆ ಸಂಕೇತವಾಗುತ್ತವೆ.

ಮುಂದಿನದು 'ಲಾವಣ್ಯಯೋಜನೆ.' ಲಾವಣ್ಯ ಅನ್ನುವುದು ಮೂಲತಃ ಒಂದು ಕಾಂತಿ ; ಅದು ವಸ್ತುವೊಂದನ್ನು ಜೀವಂತಿಕೆಯುಳ್ಳದ್ದನ್ನಾಗಿ ಮಾಡುವ ಮೋಡಿ. ಈ ಲಾವಣ್ಯಯೋಜನೆ ಕಲಾವಿದನ ಕೌಶಲದ ಹೆಗ್ಗುರುತು. ಒಂದು ಮುಖವನ್ನು ಚಿತ್ರಿಸುವಾಗ, ಅದರಲ್ಲಿ ಜೀವಕಳೆಯುಕ್ಕುವಂತೆ ತುಳುಕುವ ಒಂದು ಬೆಳಕು ಅದು. 'ಲಾವಣ್ಯ' ಎಂದರೆ ಮುತ್ತಿನ ಒಳಗಿನ ಹೊಳಪಿನಂತೆ, ಅಂಗಾಂಗಗಳಲ್ಲಿ ಲಕಲಕಿಸುವ ಒಂದು ಕಾಂತಿ. ಈ ಲಾವಣ್ಯಯೋಜನೆ ಚಿತ್ರಕಲೆಯ ಬಹುಮುಖ್ಯವಾದ ಒಂದು ಲಕ್ಷಣ.

ಐದನೆಯದು, ಮತ್ತು ಅತ್ಯಂತ ವಿಶಿಷ್ಟವಾದದ್ದು 'ಸಾದೃಶ್ಯ' : ಅಂದರೆ ಸಾದೃಶ್ಯ ನಿರ್ಮಾಣ. ನಮ್ಮ ಭಾರತೀಯ ತತ್ವಶಾಸ್ತ್ರ ವಸ್ತುಗಳನ್ನು ದೃಶ್ಯ ಮತ್ತು ಅದೃಶ್ಯ ಎಂದು ಎರಡು ಬಗೆಯಾಗಿ ವಿಂಗಡಿಸುತ್ತದೆ. ಅಂದರೆ ಕಣ್ಣಿಗೆ ಯಥಾವತ್ತಾಗಿ ಗೋಚರಿಸುವಂಥದು ಮತ್ತು ಕಾಣದೆ ಇರುವಂಥದು. ಕಣ್ಣಿಗೆ ಕಾಣದೆ ಇರುವುದು ಎಂದರೆ ಅಸ್ತಿತ್ವದಲ್ಲಿ ಇಲ್ಲದ್ದು ಎಂದು ಅರ್ಥವಲ್ಲ. ದೃಶ್ಯ ಎಂದರೆ ಕಣ್ಣಿಗೆ ಕಾಣುವ ನಾಮರೂಪಲೋಕದ ವಿವರಗಳು. ಕಣ್ಣಿಗೆ ಕಾಣುವ ಈ ದೃಶ್ಯಜಗತ್ತು ಕೂಡ ಎಲ್ಲರಿಗೂ ಒಂದೇ ರೀತಿ ಗೋಚರಿಸತಕ್ಕದ್ದಲ್ಲ. ಅದು ಅವನವನ ಮನೋಧರ್ಮಕ್ಕೆ ಅನುಗುಣವಾಗಿ ಕಾಣುವ ಜಗತ್ತು. ಕಲಾವಿದ ಒಬ್ಬ ವಿಶಿಷ್ಟವ್ಯಕ್ತಿಯಾದ ಕಾರಣ ಅವನು ಈ ಲೋಕವನ್ನು ಗ್ರಹಿಸುವ ಕ್ರಮ ಕೂಡ ಬೇರೆಯೇ ಆಗಿರುತ್ತದೆ. ಒಂದು ವಸ್ತುವನ್ನು ನೋಡುವುದು ಎಂದರೆ, ಕಲಾವಿದನ ಸಂದರ್ಭದಲ್ಲಿ ಅದನ್ನು ವಿಶೇಷವಾದ ರೀತಿಯಲ್ಲಿ ಗ್ರಹಿಸುವುದು ಅಥವಾ ಅನುಭವಕ್ಕೆ ತಂದುಕೊಳ್ಳುವುದು ಎಂದೇ ಅರ್ಥ. ಅಂದರೆ ವಸ್ತು ಹೇಗೆ 'ಇದೆ'ಯೋ ಹಾಗೆ ಅಲ್ಲ, ಹೇಗೆ 'ಕಾಣುತ್ತದೊ' ಹಾಗೆ ಕಲಾವಿದನಲ್ಲಿ ಅದು ಅನುಭವಕ್ಕೆ ಬರುತ್ತದೆ. ಕೋಲ್‌ರಿಜ್ ಎಂಬ ಕವಿ ಕವಿಕಲ್ಪನೆಯನ್ನು ಕುರಿತು ಹೇಳುವಾಗ ಅದು ಎರಡು ವಿಧವೆಂದು ಹೇಳುತ್ತಾನೆ. ಅದನ್ನು ಆತ **Primary Imagination** ಮತ್ತು **Secondary Imagination** ಎಂದು ಕರೆದಿದ್ದಾನೆ. ನಾವು ಲೋಕವನ್ನು ದಿನದಿನದ ವ್ಯವಹಾರ

ದಲ್ಲಿ ನೋಡುವ ಕ್ರಮವನ್ನು **Primary Imagination** ಎನ್ನುತ್ತಾನೆ. ಎಂದರೆ ನೋಡುವುದೆಲ್ಲವೂ ಮೂಲತಃ ನನ್ನ ಕಲ್ಪನೆಯ ಕ್ರಿಯೆಯೇ ಎಂದು ಅತನ ಅಭಿಪ್ರಾಯ. ಇನ್ನು ಎರಡನೆಯದು, ಹಾಗೆ ಕಾಣುವುದನ್ನು ಕಲಾಕೃತಿಯನ್ನಾಗಿ ರೂಪಾಂತರಿಸುವ ಕಲೆಗಾರನ ಅಥವಾ ಕವಿಯ ಪ್ರತಿಭಾಶಕ್ತಿಗೆ ಅವನು ಕೊಟ್ಟ ಹೆಸರು. ಆದಕಾರಣ ಕಲಾವಿದ ಮಾಡುವುದೇನಿದ್ದರೂ 'ದೃಶ್ಯ'ವನ್ನು ಕುರಿತದ್ದಲ್ಲ, ಅದಕ್ಕೊಂದು ಸಾದೃಶ್ಯವನ್ನು ನಿರ್ಮಿಸುವ ಕೆಲಸ. 'ದೃಶ್ಯ'ಕ್ಕೆ ಅನುಸಾರವಾದ ನಕಲು ಅಥವಾ ಅನುಕರಣೆ, ನಿಜವಾಗಿಯೂ ಏನನ್ನೂ ಮಾಡಿದಂತಲ್ಲ; ಅದಕ್ಕೊಂದು 'ಸಾದೃಶ್ಯ'ವನ್ನು ನಿರ್ಮಿಸುವುದೇ ನಿಜವಾದ ಕಲೆಗಾರಿಕೆ ಅನ್ನಿಸಿಕೊಳ್ಳುತ್ತದೆ. ಚಿತ್ರಕಲೆಯ ಲಕ್ಷಣವನ್ನು ಹೇಳುವಲ್ಲಿ ಕಲಾವಿದನ ಕ್ರಿಯೆ 'ದೃಶ್ಯ'ವನ್ನು ಹಿಡಿದಿಡುವುದಲ್ಲ, ಅದಕ್ಕೊಂದು ಸಾದೃಶ್ಯವನ್ನು ಕಲ್ಪಿಸುವುದು ಎನ್ನುವ ಈ ಮಾತು ಬಹಳ ಮುಖ್ಯವಾದದ್ದು. ಮುಖ್ಯವಾಗಿ ಈ ಧೋರಣೆ, ಭಾರತೀಯ ಕಲೆ ಅನುಕರಣೆಯನ್ನು ಎಂದೂ ಮಹತ್ತಾದುದೆಂದು ಭಾವಿಸಲೇ ಇಲ್ಲ ಎಂಬುದನ್ನು ಸೂಚಿಸುತ್ತದೆ. ಪಾಶ್ಚಾತ್ಯಚಿತ್ರಕಲೆಯೊಳಗಿನಂತೆ ನಮ್ಮ ಚಿತ್ರಕಲೆ ವ್ಯಕ್ತಿಯನ್ನು ಎದುರಿಗೆ ಕೂರಿಸಿಕೊಂಡು ಚಿತ್ರಬರೆಯುವ ಬಗ್ಗೆ ಅತ್ಯಂತನಿರಾಸಕ್ತಿಯನ್ನು ತಾಳಿದೆ. ಇದರಿಂದ ಕೆಲವು ಮಹಾವ್ಯಕ್ತಿಗಳ ಯಥಾವತ್ತಾದ ಚಿತ್ರ ನಮಗೆ ಲಭಿಸದೆ ನಷ್ಟವಾಗಿದೆ ಎಂಬ ಅಂಶವನ್ನು ಮರೆಯುವಂತಿಲ್ಲ. ಈ ದಿನ ನಮಗೆ ದೊರೆಯುವ ಬುದ್ಧನನ್ನು ಕುರಿತ ಚಿತ್ರಗಳಾಗಲಿ, ಶಿಲ್ಪಕೃತಿಗಳಾಗಲಿ ಬುದ್ಧನ ಮರಣಾನಂತರ ಎಷ್ಟೋ ಕಾಲದ ಮೇಲೆ ಕಲ್ಪಿತವಾದವುಗಳು. ಶಾಕುಂತಲನಾಟಕದಲ್ಲಿ ದುಷ್ಯಂತ ಶಕುಂತಲೆಯ ಚಿತ್ರವನ್ನು ಬರೆಯುವುದು, ಅವನು ಅವಳ ಅಗಲಿಕೆಯಲ್ಲಿರುವ ಸಂದರ್ಭದಲ್ಲಿ. ನಮ್ಮ ಹಲವು ರಮ್ಯ ಕಾವ್ಯಗಳ ನಾಯಕ-ನಾಯಿಕೆಯರು, ತಾವು ಕನಸಿನಲ್ಲಿ ಕಂಡ ನಲ್ಲರನ್ನು ಅಥವಾ ನಲ್ಲೆಯರನ್ನು ನಿದ್ದೆಯಿಂದ ಎದ್ದಮೇಲೆ ನೆನಸಿಕೊಂಡು ಬರೆದ ಚಿತ್ರಗಳೇ ಆಗಿವೆ ಎಂಬುದು ಸ್ವಾರಸ್ಯದ ಸಂಗತಿಯಾಗಿದೆ. ಅಜಂತಾದ ಚಿತ್ರಗಳನ್ನು ನೋಡಿದರೆ ಈ ಸಂಗತಿಯ ಇನ್ನೊಂದು ಮಗ್ಗುಲಿನ ಪರಿಚಯವಾಗುತ್ತದೆ; ಅಲ್ಲೂ ಸಹ ಲೋಕದ ವ್ಯಕ್ತಿಗಳ ಯಥಾವತ್ತಾದ ಚಿತ್ರಣಗಳಿಲ್ಲ. ಕೊಳಲು ಬಾರಿಸುವ ನರ್ತಕಿಯ ಮೈ ಸಂಪೂರ್ಣ ನೀಲಿಬಣ್ಣದ್ದಾಗಿದೆ. ಹಾಗೆಯೇ ಮುಖದಲ್ಲಿನ ಕಣ್ಣುಗಳು ತುಂಬಾ ಉದ್ದವಾಗಿವೆ. ಇದರರ್ಥ ಮುಖದಲ್ಲಿ ಕಣ್ಣು ಬಹು ಮುಖ್ಯವಾದದ್ದೆಂಬುದನ್ನು ಸೂಚಿಸುವುದಷ್ಟೇ. ಹಾಗೆಯೇ 'ತಾಯಿ-ಮಗು' ಎಂಬ ಚಿತ್ರವೊಂದರಲ್ಲಿ ಬುದ್ಧ ತುಂಬಾ ಎತ್ತರದಲ್ಲೂ, ತಾಯಿ–ಮಗು ಕೆಳಗೆಲ್ಲೋ ದೀನವಾಗಿ ನಿಂತು, ಬುದ್ಧನ ಕರುಣಾಪೂರ್ಣವಾದ ಮುಖದೆಡೆಗೆ ತಮ್ಮ ಕೃಪಾಯಾಚನೆಯ ಭಂಗಿಯಲ್ಲಿರುವಂತೆ ಚಿತ್ರಿಸಲಾಗಿದೆ. ಈ ಬಗೆಯಾದ ಸಾಂಕೇತಿಕವಿಧಾನದ ಮೂಲಕವಾಗಿ ಅವರು ಲೋಕವಾಸ್ತವವನ್ನು ಮೀರಿದ್ದಾರೆ. ಹೀಗಾಗಿ ಭಾರತೀಯ ಚಿತ್ರಕಲೆ 'ದೃಶ್ಯ'ದ ಯಥಾನುಸರಣೆಗಿಂತ, ದೃಶ್ಯಕ್ಕೆ—ಅಂದರೆ ಕಂಡದ್ದಕ್ಕೆ—ಒಂದು 'ಸಾದೃಶ್ಯ'ವನ್ನು ಕಲ್ಪಿಸುವ ಕಡೆಗೆ ತನ್ನ ಗಮನವನ್ನು ಕೇಂದ್ರೀಕರಿಸಿದೆ.

ಇದೇ ಸಂದರ್ಭದಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿ ಎಂದರೆ, ಭಾರತೀಯ

ಕಲಾತತ್ತ್ವದ ಪ್ರಕಾರ ಚಿತ್ರಕಾರನಾದವನು ಪ್ರಕೃತಿಯೊಳಗಣ ನರ್ತನವನ್ನು ಚಿತ್ರಿಸಬೇಕು ಎನ್ನುವುದು. ಅಂದರೆ, ಕಲಾವಿದನಾದವನು ವಸ್ತುಗಳ ಯಥಾವತ್ತಾದ 'ಸ್ಥಿರ' ಚಿತ್ರವನ್ನು ಚಿತ್ರಿಸುವುದಕ್ಕಿಂತ, ಆಯಾ ನಿಸರ್ಗವ್ಯಾಪಾರದ 'ನರ್ತನ'ವನ್ನು ಅಥವಾ ಚಲನಶೀಲತೆಯನ್ನು ಚಿತ್ರಿಸಬೇಕು. ಈ ನರ್ತನ ಅನ್ನುವುದು ಎರಡು ವಿಧವಾಗಿದೆ. ಒಂದು ಗಿಡಗುಡ್ಡ ಕಣಿವೆಗಳ ಅಂತರಂಗದಲ್ಲಿ ಪ್ರವಹಿಸುವ ಆಂತರಿಕವಾದ ಚೈತನ್ಯದ ನರ್ತನ : ಮತ್ತೊಂದು ದೃಗ್ಗೋಚರವಾದ ಆಕೃತಿಗಳಲ್ಲಿ ಮೈದೋರುವ ನರ್ತನವಿಲಾಸ. ಈ ದೃಷ್ಟಿಯಿಂದ ಗ್ರೀಕರಂತೆ ಭಾರತೀಯ ಕಲಾವಿದರು ಕೇವಲ ಅಂಗಾಂಗರಚನೆಯ ಸಮಪ್ರಮಾಣಗಳ ಯಥಾವತ್ತಾದ ಅನುಕರಣೆಯ ಕಡೆಗೆ ಗಮನವನ್ನು ಕೊಡುವ ಬಗ್ಗೆ ಆಸಕ್ತರಾಗಲಿಲ್ಲ. ಶಿಲ್ಪದಲ್ಲಾಗಲಿ ಚಿತ್ರದಲ್ಲಾಗಲಿ, ಕಡೆದ ಶಿಲ್ಪಗಳು, ಚಿತ್ರಿಸಿದ ಚಿತ್ರಗಳು ಒಂದು ಬಗೆಯ ನರ್ತನ ವಿನ್ಯಾಸವನ್ನು ತಮ್ಮ ಭಂಗಿಗಳಲ್ಲಿ ಪ್ರಕಟಿಸುತ್ತವೆ.

ಈಗ ಪ್ರಸ್ತಾಪಿಸುತ್ತಿರುವ ಷಡಂಗಗಳಲ್ಲಿ ಕೊನೆಯದು 'ವರ್ಣಿಕಾಭಂಗ'. ಎಂದರೆ, ಚಿತ್ರವೊಂದರಲ್ಲಿ ಅಳವಡಿಸಬಹುದಾದ ಬಣ್ಣಗಳ ಬಳಕೆ. ಚಿತ್ರಗಾರನ ಭಾಷೆಯೇ ಬಣ್ಣವಾದ ಕಾರಣ, ಯಾವ ಬಗೆಯ ವರ್ಣವಿನ್ಯಾಸದಿಂದ ಕಲೆಗಾರ ಆಯಾ ಸಂದರ್ಭದ ಉದ್ದೇಶಿತ ಭಾವಗಳನ್ನು ಪ್ರಕಟಿಸಲು ಸಾಧ್ಯ ಎಂಬುದು ಅವನ ಪರಿಣತಿಗೆ ಸಾಕ್ಷಿಯಾಗಿದೆ. "ಶ್ವೇತ, ರಕ್ತ, ಪೀತ, ಕೃಷ್ಣ, ಹರಿತ—ಈ ಐದು ಬಣ್ಣಗಳು ಮೂಲವರ್ಣವೆಂದೂ ಈ ವರ್ಣಗಳ ಒಂದು ಎರಡು ಮೂರರ ಮಿಶ್ರಣದಿಂದಲೂ ಅಲ್ಪಸ್ವಲ್ಪ ವ್ಯತ್ಯಾಸದಿಂದ ಪೃಥಕ್ ಭಾವವನ್ನು ಕಲ್ಪಿಸುವುದರಿಂದಲೂ ಉಂಟಾಗಬಹುದುದ ವರ್ಣಗಳ ಸಂಖ್ಯೆಗೆ ಮಿತಿಯೇ ಇಲ್ಲ"—ಎಂದು ವಿಷ್ಣುಧರ್ಮೋತ್ತರ ಪುರಾಣದಲ್ಲಿ ಹೇಳಲಾಗಿದೆ. ಈ ಬಣ್ಣಗಳ ಸಂಯೋಜನೆ ಕಲಾವಿದನ ಪ್ರತಿಭೆ ಹಾಗೂ ತಂತ್ರಕ್ಕೆ ಸಂಬಂಧಪಟ್ಟ ಸಂಗತಿಯಾಗಿದೆ.

ಚಿತ್ರಕಲೆಯ ಈ ಆರೂ ಅಂಗ (ಷಡಂಗ)ಗಳ ಪರಿಜ್ಞಾನ ಹಾಗೂ ಪರಿಪಾಲನೆಯೇ ಕಲಾವಿದರಿಗೆ ಮಾರ್ಗದರ್ಶಕಸೂತ್ರವೆಂದು ಹೇಳಲಾಗಿದೆ. ಕ್ರಿ.ಶ. ಆರನೆ ಶತಮಾನದ ಚೀನಾದೇಶದ ಚಿತ್ರಕಾರರಿಗೂ ಈಗ ಪ್ರಸ್ತಾಪಿಸಿದ ಸೂತ್ರದ (ಅಂದರೆ ಚಿತ್ರದ ಆರು ಲಕ್ಷಣಗಳ) ಪರಿಚಯವಿತ್ತೆಂದು ಹೇಳಲಾಗಿದೆ. ಇದರರ್ಥ, ಈ ಹೊತ್ತಿಗಾಗಲೇ ಭಾರತೀಯ ಚಿತ್ರಕಲೆಯ ಷಡಂಗಗಳ ಪರಿಚಯ ಹಾಗೂ ಪ್ರಭಾವ ಚೀನಾದೇಶದ ಕಲೆಗಾರರ ಮೇಲೂ ಆಗಿತ್ತೆಂದು ತಿಳಿಯಬಹುದಾಗಿದೆ.

ಕಲೆಗಳಲ್ಲೆಲ್ಲಾ ಚಿತ್ರಕಲೆ ಶ್ರೇಷ್ಠವಾದದ್ದೆಂದೂ ಉತ್ತಮವಾದ ಚಿತ್ರಗಳ ವೀಕ್ಷಣೆಯಿಂದ ಶ್ರೇಯಸ್ಸೂ, ಅತ್ಯುತ್ತಮವಾದ ಚಿತ್ರಗಳಿಂದ ನಿಶ್ರೇಯಸ್ಸೂ ಉಂಟಾಗುವುದೆಂದೂ ಚಿತ್ರಕಲೆ ಕೂಡ ಧರ್ಮಾರ್ಥ ಕಾಮ ಮೋಕ್ಷಗಳಿಗೆ ಸಾಧಕವೆಂದೂ ಹೇಳಲಾಗಿದೆ. ಆದರೆ ಈ 'ಧರ್ಮನಿಷ್ಠ' ಹಾಗೂ 'ಆದರ್ಶನಿಷ್ಠ' ನಿಲುವುಗಳು ಇವತ್ತಿಗೆ ಸಂಗತವಾಗುತ್ತವೆ ಎಂದು ಹೇಳಲು ಬಾರದು. ಎಲ್ಲ ಕಲೆಗಳ ವಿಚಾರದಲ್ಲೂ ಈ ಮಾತು ಅನ್ವಯಿಸುತ್ತದೆ. ಕಲೆಗಳಿರುವುದೇ ಅಂದಂದಿನ ಸಂವೇದನೆಗಳಿಗೆ, ಭಾವನೆಗಳಿಗೆ ಅಭಿವ್ಯಕ್ತಿಯನ್ನು

ನೀಡುವುದರ ಮೂಲಕ ಮನುಷ್ಯನನ್ನು ಈ ಲೋಕದೊಂದಿಗೆ ಹೊಂದಿಸುತ್ತ, ಅವನ ಸಂವೇದನೆಗಳನ್ನು ಎಚ್ಚರಗೊಳಿಸುತ್ತ, ಲೋಕವನ್ನು ಗ್ರಹಿಸುವ ಕ್ರಮಗಳನ್ನು ಕಲಿಸುತ್ತ, ಅವನ ಅರಿವಿನ ಪರಿಧಿಯನ್ನು ವಿಸ್ತರಿಸುತ್ತ ಪ್ರಜ್ಞಾವಂತನನ್ನಾಗಿ ಮಾಡುವ ಸಲುವಾಗಿ ಇದೇ ಕಲಾಧರ್ಮ.

# ದ್ರೌಪದಿ ಪಂಚವಲ್ಲಭೆಯೇ ?

ನ. ಸುಬ್ರಹ್ಮಣ್ಯಂ

ಮನುಷ್ಯ ವಿಚಾರಶಕ್ತಿಯುಳ್ಳವನು. ತನ್ನ ಸುತ್ತಲಿರುವುದನ್ನು ಏನು ಏಕೆ ಹೇಗೆ ಎಂದು ವಿಚಾರಿಸದೆ ಅವನು ಸುಮ್ಮನಿರಲಾರ.

ಈ ಸೃಷ್ಟಿಯೆಂಬುದೇನು ? ಇದನ್ನು ಮಾಡಿದವರಾರು ? ಬೀಜ ಮೊಳೆತು ಗಿಡವಾಗು ವಾಗುವುದು ಹೇಗೆ ? ಮಾವಿನ ಬೀಜದಿಂದ ಮಾವಿನ ಮರವೇ ಏಕೆ ? ಮಾವೇಕೆ ಸಿಹಿ. ಬೇವೇಕೆ ಕಹಿ ? ಬೆಂಕಿಯೇಕೆ ಸುಡುತ್ತದೆ. ನೀರೇಕೆ ಹರಿಯುತ್ತದೆ ? ನಾವೇಕೆ ಹಕ್ಕಿಯಂತೆ ಅಂತರಿಕ್ಷದಲ್ಲಿ ಹಾರಾಡಬಾರದು ? ಮೀನಿನಂತೆ ನೀರಿನಲ್ಲಿ ವಿಹರಿಸಬಾರದು ? ಮೇಲಕ್ಕೆ ಹಾರಿದ ವಸ್ತು ಮತ್ತೆ ಭೂಮಿಗೇ ಏಕೆ ಬಂದು ಬೀಳಬೇಕು ? ಸೂರ್ಯ ಭೂಮಿಯ ಸುತ್ತ ಸುತ್ತುತ್ತಾನೋ ಭೂಮಿ ಸೂರ್ಯನ ಸುತ್ತ ಸುತ್ತುತ್ತದೋ ? ಭೂಮಿ ಚಪ್ಪಟೆಯೋ ದುಂಡಾಗಿದೆಯೋ ? ನಾನು ಎಂದರೆ ಯಾರು ? ನಾವೆಲ್ಲಿಂದ ಬಂದೆವು, ಎಲ್ಲಿಗೆ ಹೋಗುವೆವು ?

ಹೀಗೆ ಯಾವುದೇ ವಿಷಯ ತಲೆಯನ್ನು ಹೊಕ್ಕರೂ ಚಿಂತನಶೀಲನಾದ ಮನುಷ್ಯನಿಗೆ ಸುಮ್ಮನೆ ಕೂರಲಾಗುವುದಿಲ್ಲ. ಮರದ ದಿಮ್ಮಿಯನ್ನು ಹೊಕ್ಕ ಕಿಡಿಯಂತೆ ಆ ಚಿಂತನೆಯ ಕಿಡಿ ಮನಸ್ಸನ್ನು ಒಳಗೇ ಕವರತೊಡಗುತ್ತದೆ. ಎಡೆಬಿಡದ ಆ ಚಿಂತೆಯೇ ಅವನನ್ನು ಮುಂದುಮುಂದಕ್ಕೆ ಎಳೆದೊಯ್ದು ಕೊನೆಗೆ ಸತ್ಯದರ್ಶನ ಮಾಡಿಸುತ್ತದೆ. ಇದೇ ಸಂಶೋಧನೆ. ವಿಜ್ಞಾನ ಇತಿಹಾಸ ದರ್ಶನ ಇತ್ಯಾದಿ ಯಾವುದೇ ಜ್ಞಾನವಿಭಾಗವೂ ಸಂಶೋಧನೆಯ ಫಲ.

ಸಾಹಿತ್ಯಕ್ಷೇತ್ರದಲ್ಲಿಯೂ, ತಲೆಯನ್ನು ಹೊಕ್ಕು ಬಂದ ಭಾವನೆ ಹೇಗೆ ಸಂಶೋಧನೆಗೆ ಕಾರಣವಾಗುತ್ತದೆ, ವಿಷಯದ ಎಳೆಯನ್ನು ಹಿಡಿದು ಹೊರಟರೆ ಹೇಗೆ ಅದು ಎತ್ತೆತ್ತಲೋ ಒಯ್ದು ಸಿದ್ಧಾಂತವನ್ನು ಮುಟ್ಟಿಸುತ್ತದೆ ಎಂಬುದನ್ನು ತಿಳಿಸುವುದೇ ಪ್ರಕೃತ ಲೇಖನದ ಉದ್ದೇಶ.

ಮಹಾಭಾರತದಲ್ಲಿ ಒಂದು ಪ್ರಸಂಗ. ದ್ರೌಪದಿಗೆ ಸಂಬಂಧಪಟ್ಟುದು : ದ್ರೌಪದಿ ಆ ಕಾಲದ ಸ್ತ್ರೀಯರಲ್ಲಿ ಅತ್ಯಂತ ರೂಪವತಿ, ಗುಣವತಿ. ಅವಳ ಕೈಹಿಡಿಯಲೆಂದು ಇಡೀ ಭೂಮಂಡಲದ ರಾಜರೆಲ್ಲ ಸ್ವಯಂವರಕ್ಕೆ ಬಂದಿದ್ದರು. ಅವಳು ಮಹಾಧರ್ಮಪರಳೆಂದೂ ಪತಿವ್ರತೆಯೆಂದೂ ಪ್ರಖ್ಯಾತಿ. ಪ್ರಾತಃಸ್ಮರಣೀಯರಾದ ಪಂಚಕನ್ಯೆಯರಲ್ಲಿ ಇವಳೂ

ಒಬ್ಬಳು. ಆದರೆ ಒಬ್ಬರಿಗಿಂತ ಹೆಚ್ಚು ಪುರುಷರೊಡನೆ ಬಾಳಿದ ಆಕೆ ಜಾರೆಯೆನಿಸದೆ ಹೇಗೆ ಪತಿವ್ರತೆಯೆನಿಸಿಯಾಳು ? ಧರ್ಮವಿರುದ್ಧವಾಗಿ ಹಲವು ಪುರುಷರನ್ನು ಕೂಡಿದವಳು ಹೇಗೆ ಧರ್ಮಪರಳಾದಾಳು ?

ಅಲ್ಲದೆ ಅವಳನ್ನು ಮದುವೆಯಾದ ಯುಧಿಷ್ಠಿರಾದಿ ಪಂಚಪಾಂಡವರೂ ಸಹ ವೇದ ಪಾರಗರೂ ಧರ್ಮಿಷ್ಠರೂ ಮಹಾಪುರುಷರೂ ಆಗಿದ್ದರೆನ್ನುತ್ತಾರೆ. ವೈದಿಕಧರ್ಮ ವಿರುದ್ಧವಾಗಿ ಐವರು ಒಬ್ಬಳನ್ನೇ ಕೂಡಿಯೂ ಹೇಗೆ ಅವರು ಮಹಾಪುರುಷರೆನಿಸುತ್ತಾರೆ ?

ಪಾಂಡವರು ಹಾಗೂ ದ್ರೌಪದಿಯ ಬಗ್ಗೆ ಮಹಾಭಾರತದಲ್ಲಿ ಅಲ್ಲಲ್ಲಿ ಪ್ರಚಲಿತ ವಾಗಿರುವ ಅಭಿಪ್ರಾಯಗಳು ಹೀಗಿವೆ :

ಪಾಂಡವರನ್ನು ವಾರಣಾವತಕ್ಕೆ ಕಳಿಸುವ ಪ್ರಸ್ತಾಪ ಬಂದಾಗ ಯುಧಿಷ್ಠಿರನ ಬಗ್ಗೆ ಧೃತರಾಷ್ಟ್ರ ದುರ್ಯೋಧನನಿಗೆ ಹೇಳುತ್ತಾನೆ :

ತಸ್ಯ ಪುತ್ರೋ ಯಥಾ ಪಾಂಡುಃ ತಥಾ ಧರ್ಮಪರಾಯಣಃ
ಗುಣವಾನ್ ಲೋಕವಿಖ್ಯಾತಃ ಪೌರವಾಣಾಂ ಸುಸಮ್ಮತಃ ॥

(ಆದಿ. ೧೪೧-೮)

ವಿದುರ ಧೃತರಾಷ್ಟ್ರನಿಗೆ ಹೇಳುತ್ತಾನೆ :

ನಿಕೃತಸ್ಯಾಽಪಿ ತೇ ಪುತ್ರೈಃ ಹೃತೇ ರಾಜ್ಯೇ ಧನೇಷು ಚ
ನ ಧರ್ಮಾಚ್ಚಲತೇ ಬುದ್ಧಿಃ ಧರ್ಮರಾಜಸ್ಯ ಧೀಮತಃ ॥

(ಸಭಾ. ೮೦-೧೦)

ಪಾಂಡವರನ್ನು ಕುರಿತು ಚಿತ್ರರಥನೆಂಬ ಗಂಧರ್ವ ಅರ್ಜುನನೊಡನೆ :

ದಿವ್ಯಾತ್ಮಾನೋ ಮಹಾತ್ಮಾನಃ ಸರ್ವಶಸ್ತ್ರಭೃತಾಂ ವರಾಃ
ಭವನ್ತೋ ಭ್ರಾತರಃ ಶೂರಾಃ ಸರ್ವೇ ಸುಚರಿತವ್ರತಾಃ ॥

(ಆದಿ. ೧೬೯-೬೬)

ಪಾಂಡವರ ಬಗ್ಗೆ ವೈಶಂಪಾಯನ :

ಶೂರಾಶ್ಚ ಕೃತವಿದ್ಯಾಶ್ಚ ಬುದ್ಧಿಮನ್ತೋ ಜಿತೇಂದ್ರಿಯಾಃ
ಧರ್ಮಜ್ಞಾಶ್ಚ ಕೃತಜ್ಞಾಶ್ಚ ಧರ್ಮರಾಜಮನುವ್ರತಾಃ ॥

(ವಿರಾ. ೨೭-೨)

ದ್ರೌಪದಿಯ ಬಗ್ಗೆ ವಿದುರ :

ಧರ್ಮಾರ್ಥಕುಶಲಾ ಚೈವ ದ್ರೌಪದೀ ಧರ್ಮಚಾರಿಣೀ

(ಸಭಾ. ೭೮-೧೧)

ಧೃತರಾಷ್ಟ್ರನೇ ಸ್ವಯಂ ದ್ರೌಪದಿಯ ಬಗ್ಗೆ :

ವಧೂನಾಂ ಹಿ ವಿಶಿಷ್ಟಾ ಮೇ ತ್ವಂ ಧರ್ಮಪರಮಾ ಸತೀ

(ಸಭಾ. ೭೧-೨೬)

ದ್ರೌಪದಿ ಮತ್ತು ಪಾಂಡವರೈವರನ್ನು ಕುರಿತು ಕೃಷ್ಣ :

ನ ಹ್ಯೇಷ ಕಾಮಾನ್ನ ಭಯಾನ್ನ ಲೋಭಾತ್
ಯುಧಿಷ್ಠಿರೋ ಜಾತು ಜಹ್ಯಾತ್ ಸ್ವಧರ್ಮಮ್

ಭೀಮಾರ್ಜುನೌ ಚಾತಿರಥೌ ಯಮೌ ಚ
ತಥೈವ ಕೃಷ್ಣಾ ದ್ರುಪದಾತ್ಮಜೇಯಮ್ ॥

(ವನ. ೧೨೦-೧೨೪)

ಇಂತಹ ಪಾಂಡವರೈವರೂ ಕೂಡಿ ಅಂತಹ ದ್ರೌಪದಿಯನ್ನು ವೇದವಿರುದ್ಧವಾಗಿ ಮತ್ತು ಲೋಕರೂಢಿಗೂ ಸಾಮಾಜಿಕನೀತಿಗೂ ವಿರುದ್ಧವಾಗಿ ಮದುವೆಯಾದದ್ದು ಹೇಗೆ ? ಹಾಗೆ ಮದುವೆಯಾಗಿಯೂ ಹೇಗೆ ಅವರು ಧರ್ಮಪರರೆನಿಸಿಯಾರು ? ಇದು ಮನಸ್ಸನ್ನು ಬಾಧಿಸುವ ಸಮಸ್ಯೆ. ಈ ಸಮಸ್ಯೆಯೊಡಗೂಡಿ ಇಡೀ ಕಾವ್ಯವನ್ನವಲೋಕಿಸಿದಾಗ, ಸಮಸ್ಯೆ ಹೇಗೆ ಪರಿಹಾರವಾಗುತ್ತದೆಂಬುದನ್ನು ನೋಡೋಣ :

'ಮನುಸ್ಮೃತಿ'ಯಲ್ಲಿ ಅಂದು ಪ್ರಚಲಿತವಾಗಿದ್ದ ಎಂಟು ಬಗೆಯ ವಿವಾಹವನ್ನು ಹೀಗೆ ಹೇಳಿದೆ :

ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥

ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಎಂಬ ಇವುಗಳಲ್ಲಿ ದ್ರೌಪದಿಯ ವಿವಾಹ ಯಾವುದಕ್ಕೂ ಅನ್ವಯವಾಗುವುದಿಲ್ಲ. ಆ ಕಾಲದಲ್ಲಿ ಕ್ಷತ್ರಿಯರಿಗೆ ಬಹುಪತ್ನೀತ್ವ ಆಚರಣೆಯಲ್ಲಿತ್ತೇ ಹೊರತು, ಹೆಂಗಸಿಗೆ ಬಹುಪತಿತ್ವವೇ ಬಂದಿರಲಿಲ್ಲ. ಲೋಕವೇದವಿರುದ್ಧವಾದ ಇಂತಹ ಮದುವೆ ಮಹಾಭಾರತದ ಈ ಒಂದು ಪ್ರಸಂಗದಲ್ಲಿ ಕಂಡುಬರುತ್ತದೆಯೇ ಹೊರತು ಬೇರೆ ಎಲ್ಲೂ ಆಚರಣೆಯಲ್ಲಿದ್ದುದು ಕಂಡುಬರುವುದಿಲ್ಲ.[1] ದ್ರೌಪದಿಯ ಪಂಚಪತಿತ್ವ ಸಮರ್ಥನೆಗಾಗಿ ಮಹಾಭಾರತದಲ್ಲಿಯೇ ಬರುವ ಜಟಿಲೆ, ವಾರ್ಕ್ಷಿ, ಭೌಮಾಶ್ವಿಗಳ ಕಥೆಯೂ ಸಹ ಅನ್ಯತ್ರ ದೊರೆಯಲಾರದಂತಹ ಕಾಲ್ಪನಿಕ ನಿದರ್ಶನಗಳಷ್ಟೆ. ಯುಧಿಷ್ಠಿರಾದಿ ಪಾಂಡವರು ಈ ಮದುವೆಗೆ ಹೇಗೆ ಸಮ್ಮತಿಸಿದರು ?

"ಭಾರತಃ ಪಂಚಮೋ ವೇದಃ" ಎಂಬುದು ಪ್ರತೀತಿ. ವೇದಗಳನ್ನು ವಿಂಗಡಿಸಿ ವ್ಯವಸ್ಥೆಗೊಳಿಸಿದ ವ್ಯಾಸಮಹರ್ಷಿಯೇ ಸ್ವಯಂ ಭಾರತದ ಕರ್ತೃ. ತಾನೇ ಪ್ರಚುರಪಡಿಸಿದ ಧರ್ಮಕ್ಕೆ ವಿರುದ್ಧವಾಗಿ ವ್ಯಾಸ ದ್ರೌಪದಿಗೆ ಪಂಚಪತಿತ್ವವನ್ನು ಕಲ್ಪಿಸಿದನೆಂದು ನಂಬಬಹುದೇ ?

ಮಹಾಭಾರತ ವರ್ಧನಶೀಲವಾದ ಕಾವ್ಯ. ಅದು ಎಷ್ಟು ಜನಪ್ರಿಯವಾಗಿತ್ತೆಂದರೆ, ಶತಮಾನಗಳುರುಳಿದಂತೆ ನೂರಾರು ಕವಿಗಳ ಕೈವಾಡಕ್ಕೆ ಸಿಕ್ಕಿ, ನಾನಾ ವಿಷಯಗಳು ಅದರಲ್ಲಿ ಸೇರಿ, ಅದು ವರ್ಧಿಸುತ್ತಾ ಹೋಯಿತು. ಬಹುಶಃ ೮,೮೦೦ ಶ್ಲೋಕಗಳಿಂದ[2] ಮೊದಲಾದ ಈ ಕಾವ್ಯ ವ್ಯಾಸಶಿಷ್ಯ ವೈಶಂಪಾಯನ ಸೂತಪೌರಾಣಿಕ ಮೊದಲಾದವರಿಂದ ಪ್ರಚುರವಾಗುತ್ತ ಹೋದಂತೆಲ್ಲ ೨೪,೦೦೦[3], ಒಂದು ಲಕ್ಷ[4] ಶ್ಲೋಕಗಳಾಗಿ ಬೆಳೆಯಿತೆಂದು ತಿಳಿಯುತ್ತದೆ. ಹೀಗಾದಾಗ, ಜನಪದದ ಮೂಲೆಯಲ್ಲೆಲ್ಲೋ ಪ್ರಚಲಿತವಾಗಿದ್ದ ದ್ರೌಪದಿಯ ಪಂಚಪತಿತ್ವದ ಕಥೆ ಮಹಾಭಾರತವನ್ನು ಸೇರಿ, ಅದನ್ನು ಸಮರ್ಥನೆ

ಭೀಮಾರ್ಜುನೌ ಚಾತಿರಥೌ ಯಮೌ ಚ
ತಥೈವ ಕೃಷ್ಣಾ ದ್ರುಪದಾತ್ಮಜೇಯಮ್ ॥

(ವನ. ೧೨೦-೧೨೪)

ಇಂತಹ ಪಾಂಡವರೈವರೂ ಕೂಡಿ ಅಂತಹ ದ್ರೌಪದಿಯನ್ನು ವೇದವಿರುದ್ಧವಾಗಿ ಮತ್ತು ಲೋಕರೂಢಿಗೂ ಸಾಮಾಜಿಕನೀತಿಗೂ ವಿರುದ್ಧವಾಗಿ ಮದುವೆಯಾದದ್ದು ಹೇಗೆ ? ಹಾಗೆ ಮದುವೆಯಾಗಿಯೂ ಹೇಗೆ ಅವರು ಧರ್ಮಪರರೆನಿಸಿಯಾರು ? ಇದು ಮನಸ್ಸನ್ನು ಬಾಧಿಸುವ ಸಮಸ್ಯೆ. ಈ ಸಮಸ್ಯೆಯೊಡಗೂಡಿ ಇಡೀ ಕಾವ್ಯವನ್ನವಲೋಕಿಸಿದಾಗ, ಸಮಸ್ಯೆ ಹೇಗೆ ಪರಿಹಾರವಾಗುತ್ತದೆಂಬುದನ್ನು ನೋಡೋಣ :

'ಮನುಸ್ಮೃತಿ'ಯಲ್ಲಿ ಅಂದು ಪ್ರಚಲಿತವಾಗಿದ್ದ ಎಂಟು ಬಗೆಯ ವಿವಾಹವನ್ನು ಹೀಗೆ ಹೇಳಿದೆ :

ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ
ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥

ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಎಂಬ ಇವುಗಳಲ್ಲಿ ದ್ರೌಪದಿಯ ವಿವಾಹ ಯಾವುದಕ್ಕೂ ಅನ್ವಯವಾಗುವುದಿಲ್ಲ. ಆ ಕಾಲದಲ್ಲಿ ಕ್ಷತ್ರಿಯರಿಗೆ ಬಹುಪತ್ನೀತ್ವ ಆಚರಣೆಯಲ್ಲಿತ್ತೇ ಹೊರತು, ಹೆಂಗಸಿಗೆ ಬಹುಪತಿತ್ವವೇ ಬಂದಿರಲಿಲ್ಲ. ಲೋಕವೇದವಿರುದ್ಧವಾದ ಇಂತಹ ಮದುವೆ ಮಹಾಭಾರತದ ಈ ಒಂದು ಪ್ರಸಂಗದಲ್ಲಿ ಕಂಡುಬರುತ್ತದೆಯೇ ಹೊರತು ಬೇರೆ ಎಲ್ಲೂ ಆಚರಣೆಯಲ್ಲಿದ್ದುದು ಕಂಡುಬರುವುದಿಲ್ಲ.[1] ದ್ರೌಪದಿಯ ಪಂಚಪತಿತ್ವ ಸಮರ್ಥನೆಗಾಗಿ ಮಹಾಭಾರತದಲ್ಲಿಯೇ ಬರುವ ಜಟಿಲೆ, ವಾರ್ಕ್ಷಿ, ಭೌಮಾಶ್ವಿಗಳ ಕಥೆಯೂ ಸಹ ಅನ್ಯತ್ರ ದೊರೆಯಲಾರದಂತಹ ಕಾಲ್ಪನಿಕ ನಿದರ್ಶನಗಳಷ್ಟೆ. ಯುಧಿಷ್ಠಿರಾದಿ ಪಾಂಡವರು ಈ ಮದುವೆಗೆ ಹೇಗೆ ಸಮ್ಮತಿಸಿದರು ?

"ಭಾರತಃ ಪಂಚಮೋ ವೇದಃ" ಎಂಬುದು ಪ್ರತೀತಿ. ವೇದಗಳನ್ನು ವಿಂಗಡಿಸಿ ವ್ಯವಸ್ಥೆಗೊಳಿಸಿದ ವ್ಯಾಸಮಹರ್ಷಿಯೇ ಸ್ವಯಂ ಭಾರತದ ಕರ್ತೃ. ತಾನೇ ಪ್ರಚುರಪಡಿಸಿದ ಧರ್ಮಕ್ಕೆ ವಿರುದ್ಧವಾಗಿ ವ್ಯಾಸ ದ್ರೌಪದಿಗೆ ಪಂಚಪತಿತ್ವವನ್ನು ಕಲ್ಪಿಸಿದನೆಂದು ನಂಬಬಹುದೇ ?

ಮಹಾಭಾರತ ವರ್ಧನಶೀಲವಾದ ಕಾವ್ಯ. ಅದು ಎಷ್ಟು ಜನಪ್ರಿಯವಾಗಿತ್ತೆಂದರೆ, ಶತಮಾನಗಳುರುಳಿದಂತೆ ನೂರಾರು ಕವಿಗಳ ಕೈವಾಡಕ್ಕೆ ಸಿಕ್ಕಿ, ನಾನಾ ವಿಷಯಗಳು ಅದರಲ್ಲಿ ಸೇರಿ, ಅದು ವರ್ಧಿಸುತ್ತಾ ಹೋಯಿತು. ಬಹುಶಃ ೮,೮೦೦ ಶ್ಲೋಕಗಳಿಂದ[2] ಮೊದಲಾದ ಈ ಕಾವ್ಯ ವ್ಯಾಸಶಿಷ್ಯ ವೈಶಂಪಾಯನ ಸೂತಪೌರಾಣಿಕ ಮೊದಲಾದವರಿಂದ ಪ್ರಚುರವಾಗುತ್ತ ಹೋದಂತೆಲ್ಲ ೨೪,೦೦೦[3], ಒಂದು ಲಕ್ಷ[4] ಶ್ಲೋಕಗಳಾಗಿ ಬೆಳೆಯಿತೆಂದು ತಿಳಿಯುತ್ತದೆ. ಹೀಗಾದಾಗ, ಜನಪದದ ಮೂಲೆಯಲ್ಲೆಲ್ಲೋ ಪ್ರಚಲಿತವಾಗಿದ್ದ ದ್ರೌಪದಿಯ ಪಂಚಪತಿತ್ವದ ಕಥೆ ಮಹಾಭಾರತವನ್ನು ಸೇರಿ, ಅದನ್ನು ಸಮರ್ಥನೆ

ಮಾಡುವಂತಹ ಕಥೆ ಕಾಲಾನುಕ್ರಮದಲ್ಲಿ ಬೆಳೆದುಕೊಂಡು ಬಂದಿರಬಹುದು.

ಕಾವ್ಯದಲ್ಲಿ ದ್ರೌಪದಿಯ ಪಂಚಪತಿತ್ವದ ಕಥೆಯ ಮೂಲವನ್ನು ಸ್ವಲ್ಪ ನೋಡೋಣ:

ಗತ್ವಾ ತು ತಾಂ ಭಾರ್ಗವ ಕರ್ಮಶಾಲಾಂ । ಪಾರ್ಥೌ ಪೃಥಾಂ ಪ್ರಾಪ್ಯ ಮಹಾನುಭಾವೌ ।
ತಾಂ ಯಾಜ್ಞಸೇನೀಂ ಪರಮಪ್ರತೀತೌ । ಭಿಕ್ಷೇತ್ಯಥಾವೇದಯತಾಂ ನರಾಗ್ರ್ಯೌ ॥

ಕುಟೀಗತಾ ಸಾ ತ್ವನವೇಕ್ಷ್ಯ ಪುತ್ರೌ । ಪ್ರೋವಾಚ ಭುಂಕ್ತೇತಿ ಸಮೇತ್ಯ ಸರ್ವೇ ।
ಪಶ್ಚಾಚ್ಚ ಕುಂತೀ ಪ್ರಸಮೀಕ್ಷ್ಯ ಕೃಷ್ಣಾಂ । ಕಷ್ಟಂ ಮಯಾ ಭಾಷಿತಮಿತ್ಯುವಾಚ ॥

ಸಾಧರ್ಮಭೀತಾ ಪರಿಚಿಂತಯಂತೀ । ತಾಂ ಯಾಜ್ಞಸೇನೀಂ ಪರಮಪ್ರತೀತಾಮ್ ।
ಪಾಣೌ ಗೃಹೀತ್ವೋಪಜಗಾಮ ಕುಂತೀ । ಯುಧಿಷ್ಠಿರಂ ವಾಕ್ಯಮುವಾಚ ಚೇದಮ್ ॥

ಇಯಂ ತು ಕನ್ಯಾ ದ್ರುಪದಸ್ಯ ರಾಜ್ಞಃ । ತವಾನುಜಾಭ್ಯಾಂ ಮಯಿ ಸಂನಿವಿಷ್ಟಾ ।
ಯಥೋಚಿತಂ ಪುತ್ರ ಮಯಾಪಿ ಚೋಕ್ತಮ್ । ಸಮೇತ್ಯ ಭುಂಕ್ತೇತಿ ನೃಪ ಪ್ರಮಾದಾತ್ ॥

ಮಯಾ ಕಥಂ ನಾನೃತಮುಕ್ತಮದ್ಯ । ಭವೇತ್ ಕುರೂಣಾಮೃಷಭ ಬ್ರವೀಹಿ ।
ಪಾಂಚಾಲರಾಜಸ್ಯ ಸುತಾಮಧರ್ಮೋ । ನ ಚೋಪವರ್ತೇತ ನ ವಿಭ್ರಮೇಚ್ಚ ॥

(ಆದಿ. ೧೯೦-೧-೫)

ಅತ್ತ ಸ್ವಯಂವರಕ್ಕೆ ಹೋದ ಮಕ್ಕಳೇಕೋ ಇನ್ನೂ ಬರಲಿಲ್ಲ. ಭಿಕ್ಷಾಕಾಲ ಕಳೆದು ಹೋಯಿತು, ಮಕ್ಕಳಿಗೆ ಏನಾಯಿತೋ ಏನೋ ಎಂದು ಇತ್ತ ಕುಲಾಲಭವನದಲ್ಲಿದ್ದ ಕುಂತಿಗೆ ಕಳವಳ. ಆ ವೇಳೆಗೆ ದ್ರೌಪದಿಯೊಡಗೂಡಿ ಭೀಮಾರ್ಜುನರು ತಾಯ ಬಳಿಗೆ ಬಂದು "ಅಮ್ಮಾ, ಇದೋ ಭಿಕ್ಷೆ" ಎಂದರು. ಗುಡಿಸಿಲೊಳಗಿದ್ದ ಕುಂತಿ ತಲೆಯೆತ್ತಿ ನೋಡದೆ "ಎಲ್ಲರೂ ಸೇರಿ ಭುಂಜಿಸಿರಿ" ಎಂದಳು. ತಲೆಯೆತ್ತಿ ದ್ರೌಪದಿಯನ್ನು ನೋಡಿದ ಮೇಲೆ "ಅಯ್ಯೋ ತಪ್ಪಾಡಿಬಿಟ್ಟೆನಲ್ಲಾ" ಎಂದು ಪೇಚಾಡಿಕೊಂಡಳು. ಅಧರ್ಮಭೀತಿಯಿಂದ ತತ್‌ಕ್ಷಣವೇ ದ್ರೌಪದಿಯ ಕೈಹಿಡಿದುಕೊಂಡು ಯುಧಿಷ್ಠಿರನ ಬಳಿಗೆ ಕರೆದೊಯ್ದು "ಮಗು, ನಿನ್ನಿಬ್ಬರು ಸೋದರರು ದ್ರೌಪದಿಯನ್ನು ನನ್ನ ಬಳಿ ಕರೆತಂದಾಗ ಪ್ರಮಾದದಿಂದ ಎಲ್ಲರೂ ಸೇರಿ ಭುಂಜಿಸಿರಿ ಎಂದುಬಿಟ್ಟೆ. ನಾನು ಸುಳ್ಳು ಹೇಳಿದಂತಾಗದಿರುವುದು ಹೇಗೆ? ಪಾಂಚಾಲರಾಜಸುತೆಗೆ ಅಪ್ರಿಯವಾಗದಂತೆ ನಡೆಯುವುದು ಹೇಗೆ? ದ್ರೌಪದಿಯಿಂದ ಅಧರ್ಮ ನಡೆಯದಿರುವುದು ಹೇಗೆ? ಹೇಳು" ಎಂದಳು.

ಮಕ್ಕಳಿಗೆ ಮಾತೃವಾಕ್ಯ ಪರಿಪಾಲನೆ ನ್ಯಾಯವಾದುದೇ. ಆದರೆ ಈ ಪ್ರಸಂಗವನ್ನು ಗಂಭೀರವಾಗಿ ಪರಿಶೀಲಿಸಿದರೆ ಕುಂತಿ ತಾನು ಆಡಬೇಕೆಂದು ಆಡಿದ ಮಾತಲ್ಲ ಅದು. ಹಿಂದೆ ಮುಂದೆ ನೋಡದೆ, ಎಂದಿನಂತೆಯೇ, ತಂದ ಆಹಾರವನ್ನು ಎಲ್ಲರೂ ಭುಂಜಿಸಿರಿ ಎಂದು ಮಕ್ಕಳಿಗೆ ಹೇಳಿದಳು. ಅವಳ ಆಜ್ಞೆ ಆಹಾರಕ್ಕೆ ಅನ್ವಯಿಸುವುದೇ ಹೊರತು ಹೆಣ್ಣಿಗಲ್ಲ. ಮಕ್ಕಳು ಆಹಾರವನ್ನು ತಂದಿರಲಿಲ್ಲ; ಆಹಾರವನ್ನೇ ತರದಿದ್ದ ಮೇಲೆ ಆಹಾರಕ್ಕೆ ಅನ್ವಯಿಸುವ ಆಜ್ಞೆಯನ್ನು ಪಾಲಿಸಬೇಕೆಂಬ ಪ್ರಶ್ನೆಯೆಲ್ಲಿ ಬಂತು? ಪಾಲಿಸದಿದ್ದರೆ ಅಧರ್ಮವೇಕಾಗುತ್ತದೆ?

ಕುಂತಿ ವ್ಯವಹಾರಜ್ಞಾನವಿಲ್ಲದ ಸಾಧಾರಣ ಸ್ತ್ರೀಯಲ್ಲ. ವೇದಶಾಸ್ತ್ರಪಾರಂಗತಳಾಗಿದ್ದಳು. ಅಂಥವಳು ವೇದಶಾಸ್ತ್ರವಿರುದ್ಧವಾಗಿ ಒಂದು ಹೆಣ್ಣನ್ನು ಅನೇಕರು ಭೋಗಿಸಿರಿ ಎನ್ನುವಳೇ ? ಅಜ್ಞಾನವಶದಿಂದ ಬಾಯಿತಪ್ಪಿ ಆಡಿದ ಮಾತಲ್ಲವೆ ಅದು ? ಆದರೂ ಅದರಂತೆಯೇ ನಡೆಯಿರೆಂದು ಧರ್ಮಿಷ್ಠರಾದ ತನ್ನ ಮಕ್ಕಳನ್ನು ಒತ್ತಾಯಮಾಡುವಷ್ಟು ವಿವೇಚನಾರಹಿತಳೆ ಅವಳು ? ಒತ್ತಾಯ ಮಾಡಿದರೆ ಅಧರ್ಮವಾದೀತೆಂಬ ಅಳುಕು ಅವಳ ಮಾತಿನಲ್ಲೇ ಗೋಚರವಾಗುವುದಿಲ್ಲವೆ ?

ಅದೇ ಸಂದರ್ಭದಲ್ಲಿ ಭೀಮಾರ್ಜುನರಿಗೆ ಕವಿ "ಮಹಾನುಭಾವೌ", "ಪರಮಪ್ರತೀತೌ", "ನರಾಗ್ರ್ಯೌ" ಎಂಬ ವಿಶೇಷಣಗಳನ್ನು ಬಳಸಿದ್ದಾನೆ. ಅಂಥವರು ಪರಾಕ್ರಮಾತಿಶಯತೆಯಿಂದ ಗೆದ್ದು ತಂದ ದ್ರೌಪದಿಯನ್ನು ತಾಯಿಗೆ ಪರಿಚಯಿಸುವಾಗ ಬೇಡಿ ತಂದ ಭಿಕ್ಷೆ ಎನ್ನುವುದು ಉಚಿತವೇ ? ಗೆದ್ದು ತಂದ ಒಂದು ಸಂತೋಷದಲ್ಲಿ ಸ್ವಲ್ಪ ವಿನೋದ ಮಾಡಬಯಸಿದರೆಂದೇ ಇಟ್ಟುಕೊಳ್ಳೋಣ. ಆ ವಿನೋದದ ಪ್ರತಿಕ್ರಿಯೆ ಕುಂತಿಯಾಡಿದ ಮಾತು. ತಾನು ಅಚಾತುರ್ಯದಿಂದ ಆಡಿದ ಮಾತಿನಂತೆ ನಡೆಯಲೇಬೇಕೆಂದು ಆಕೆ ಒತ್ತಾಯ ಮಾಡಲೂ ಬಾರದು, ಬಾಯಿತಪ್ಪಿಕೊಟ್ಟ ಆಜ್ಞೆಯನ್ನು ವಿವೇಕಿಗಳಾದ ಮಕ್ಕಳು ಪಾಲಿಸಲೂ ಬಾರದು. ತಾಯಾದ ಮಾತ್ರಕ್ಕೆ ಅಧರ್ಮಕಾರ್ಯವನ್ನು ಮಾಡುವುದು ಮಕ್ಕಳಿಗೆ ಕರ್ತವ್ಯವೆ ? "ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ನೋ ಇತರಾಣಿ" ಎಂಬುದು ಉಪನಿಷದ್ವಾಕ್ಯ. ಹಿರಿಯರ ಸದ್ಗುಣಗಳನ್ನು ಸದಾಚರಣೆಗಳನ್ನು ಅನುಸರಿಸಿ ಅನುಷ್ಠಾನಮಾಡಬೇಕೇ ಹೊರತು ದುರ್ಗುಣಗಳನ್ನೂ ದುರಾಚರಣೆಗಳನ್ನೂ ಅಲ್ಲ.

ಆದ್ದರಿಂದಲೇ ಧರ್ಮದ ಸಾಕಾರವೆನಿಸಿದ ಧರ್ಮರಾಯ ಅವಳ ಮಾತಿಗೆ ಉತ್ತರ ಕೊಡಲಿಲ್ಲ. ಅರ್ಜುನನ ಕಡೆ ತಿರುಗಿ ದ್ರೌಪದಿಯನ್ನು ನೀನು ಅಗ್ನಿಸಾಕ್ಷಿಯಾಗಿ ವರಿಸು ಎಂದ. ಅಧರ್ಮವಾದರೂ ಚಿಂತೆಯಿಲ್ಲ, ಅನೈತಿಕವಾದರೂ ಚಿಂತೆಯಿಲ್ಲ, ತಾಯ ಮಾತನ್ನು ನಡೆಸಲೇಬೇಕೆಂದು ಅವನು ಭಾವಿಸಿದ್ದ ಪಕ್ಷದಲ್ಲಿ ಅರ್ಜುನನಿಗೆ ಅವನು ಹಾಗೆ ಹೇಳುತ್ತಿರಲಿಲ್ಲ. ಹಾಗೆ ಹೇಳಿದುದರಿಂದ ಅವನು ತಾಯಿಯ ಮಾತಿಗೆ ವಿರುದ್ಧವಾಗಿ ನಡೆದಂತೆ ಆಗುವುದಿಲ್ಲವೆ ?

ಅರ್ಜುನ ಅಣ್ಣನಿಗೆ ಹೀಗೆ ಉತ್ತರ ಕೊಡುತ್ತಾನೆ. "ರಾಜಾ, ಅಧರ್ಮ ಮಾಡುವಂತೆ ನನಗೆ ಆಜ್ಞೆ ಮಾಡಬೇಡ. ಇದು ಸರಿಯಲ್ಲ. ನಿನ್ನ ಮದುವೆ ಮೊದಲಾಗಬೇಕು. ಅನಂತರ ಭೀಮನದು, ನನ್ನದು, ನಕುಲಸಹದೇವರದು. ಭೀಮ ನಾನು ನಕುಲಸಹದೇವರು ಮತ್ತು ದ್ರೌಪದಿ ಎಲ್ಲರೂ ನಿನ್ನ ಅಧೀನರಾಗಿದ್ದೇವೆ. ಪಾಂಚಾಲರಾಜನ ಕ್ಷೇಮವನ್ನು ಪರಿಗಣಿಸಿ, ಕರ್ತವ್ಯ ಧರ್ಮ ನೀತಿಗಳ ಕಡೆಗೂ ಗಮನವಿಟ್ಟು ನಮಗೆ ಏನು ಮಾಡಬೇಕೆಂದು ತಿಳಿಸು. ನಾವು ನಿನ್ನ ಆಜ್ಞಾನುವರ್ತಿಗಳಾಗಿದ್ದೇವೆ" (ಆದಿ. ೧೯೦-೮.೧೦). ಈ ಮಾತುಗಳಿಂದ ಅರ್ಜುನನ ಅಪೇಕ್ಷೆ ಯುಧಿಷ್ಠಿರನೇ ದ್ರೌಪದಿಯನ್ನು ವರಿಸಬೇಕೆಂದೂ ತನಗೆ ಆಕೆಯನ್ನು ವರಿಸಲು ಒಲವಿಲ್ಲವೆಂದೂ ತಿಳಿದುಬರುತ್ತದೆ.

ಇಲ್ಲಿ ನಾವು ಗಮನಿಸಬೇಕಾದ ಒಂದಂಶವಿದೆ: ಅಂದಿನ ಸ್ವಯಂವರಪದ್ಧತಿಯಲ್ಲಿ ಕನ್ಯೆಯನ್ನು ಯಾವನು ಗೆಲ್ಲುವನೋ ಅವನೇ ಲಗ್ನವಾಗಬೇಕೆಂಬ ಒತ್ತಾಯವಿರಲಿಲ್ಲ. ಕನ್ಯೆ ಅವನ ಸ್ವತ್ತು, ಸ್ವಯಂ ಅವನು ಲಗ್ನವಾಗಬಹುದು ಇಲ್ಲವೇ ತನ್ನಿಷ್ಟಬಂದವನಿಗೆ ಕೊಟ್ಟು ಲಗ್ನ ಮಾಡಿಸಬಹುದು. ಇದಕ್ಕೆ ಮಹಾಭಾರತದಲ್ಲಿಯೇ ಹಲವು ನಿದರ್ಶನಗಳಿವೆ. ಕಾಶೀರಾಜನೇ ಏರ್ಪಡಿಸಿದ್ದ ಸ್ವಯಂವರದಲ್ಲಿ ಭೀಷ್ಮ ಅಂಬೆ ಅಂಬಿಕೆ ಅಂಬಾಲಿಕೆಯರನ್ನು ಗೆದ್ದು ತಂದು ಅವರಲ್ಲಿ ಅಂಬಿಕೆ ಅಂಬಾಲಿಕೆಯರನ್ನು ತನ್ನ ತಮ್ಮ ವಿಚಿತ್ರವೀರನಿಗೆ ಕೊಟ್ಟು ಲಗ್ನಮಾಡಿಸಿ ಅಂಬೆಯನ್ನು ಶಾಲ್ವನ ಬಳಿಗೆ ಕಳಿಸಿದ. ಮತ್ತೊಮ್ಮೆ ಭೀಷ್ಮನೇ ಮಾದ್ರಿಯನ್ನು ತಂದು ಪಾಂಡುವಿಗೂ ಮತ್ತೊಬ್ಬ ಕನ್ಯೆಯನ್ನು ವಿದುರನಿಗೂ ಕೊಟ್ಟು ವಿವಾಹಮಾಡಿಸಿದ. ಬಲರಾಮ ರುಕ್ಮನನ್ನು ಯುದ್ಧದಲ್ಲಿ ಗೆದ್ದು ರುಕ್ಮಿಣಿಯನ್ನು ತಂದು ಕೃಷ್ಣನಿಗೆ ಲಗ್ನಮಾಡಿಸಿದ. ಕರ್ಣನೂ ಒಮ್ಮೆ ದಿಗ್ವಿಜಯಮಾಡಿ ಮೂವರು ಕನ್ಯೆಯರನ್ನು ತಂದು ಅವರಲ್ಲಿ ಭಾನುಮತಿಯನ್ನು ದುರ್ಯೋಧನನಿಗೆ ಕೊಟ್ಟು, ಇನ್ನೊಬ್ಬಳನ್ನು ದುಶ್ಶಾಸನನಿಗೆ ಕೊಟ್ಟು, ಉಳಿದವಳನ್ನು ತಾನು ಮದುವೆಯಾದ. ಹಾಗಾಗಿ ಪ್ರಕೃತ ಸಂದರ್ಭದಲ್ಲಿ ಅರ್ಜುನ, ಇನ್ನೂ ವಿವಾಹವಾಗದಿದ್ದ ತನ್ನ ಅಣ್ಣನಿಗೆ ದ್ರೌಪದಿಯನ್ನು ಕೊಡಬಯಸಿದುದು ಸಹಜವಾಗಿಯೇ ಇದೆ.

ಅನಂತರ ಪಾಂಡವರನ್ನು ಸಂಧಿಸಿದ ದ್ರುಪದ ಶುಭದಿನದಲ್ಲಿ ಅರ್ಜುನ ದ್ರೌಪದಿಯ ಕೈಹಿಡಿಯಲಿ ಎಂದುದಕ್ಕೆ, ಯುಧಿಷ್ಠಿರ "ಓ ರಾಜಾ, ನನ್ನ ಮದುವೆ ವಿಧಿಪೂರ್ವಕವಾಗಿ ನೆರವೇರಲಿ" ಎಂದ. ಅದಕ್ಕೆ ದ್ರುಪದ "ಓ ವೀರ, ನೀನೇ ವಿಧಿಪೂರ್ವಕವಾಗಿ ನನ್ನ ಮಗಳನ್ನು ಮದುವೆಯಾಗು, ಇಲ್ಲವೇ ಯಾರನ್ನು ಅವಳು ವರಿಸುವುದು ಉಚಿತವೆಂದು ನಿನಗನಿಸುತ್ತದೆಯೋ ಅವನಿಗೆ ಕೊಡುವಂತೆ ಆಜ್ಞೆ ಮಾಡು" ಎಂದ (ಆದಿ. ೧೯೪-೨೧, ೨೨). ದ್ರುಪದನ ಮಾತೂ ಸಹ ಆಗಿನ ಕಾಲದ ಆಚರಣೆಗೆ ಅನುಗುಣವಾಗಿಯೇ ಇದೆ.

ಅದುವರೆಗೆ ವಿವಾಹವಿಲ್ಲದಿದ್ದ ತನ್ನ ಅಣ್ಣನೇ ಮದುವೆಯಾಗಲಿ ಎಂದು ಅರ್ಜುನ ಅಪೇಕ್ಷೆಪಟ್ಟ. ಸ್ವಯಂವರದ ನಿಯಮ ಅದಕ್ಕೆ ಅಡ್ಡಿ ಬರಲಿಲ್ಲ. ದ್ರುಪದನೂ ಸಹ ಮಗಳನ್ನು ಅವನಿಗೆ ಕೊಡಲು ಸಮ್ಮತಿಸಿದ. ಹಾಗಾಗಿ ಯುಧಿಷ್ಠಿರನೊಬ್ಬನೇ ಅವಳನ್ನು ವರಿಸಿರಬೇಕು. ಇದಕ್ಕೆ ಪೋಷಕವಾಗುವ ಗಮನಾರ್ಹ ಸಂಗತಿಗಳು ಮುಂದೆ ಕಾಣಸಿಗುತ್ತವೆ.

ವಿವಾಹ ನಡೆಸಲು ಪುರೋಹಿತನಾಗಿ ಬಂದಿದ್ದ ಧೌಮ್ಯ ದ್ರೌಪದಿಯನ್ನು ಯುಧಿಷ್ಠಿರನಿಗೆ ವಿಧಿವತ್ತಾಗಿ ಪಾಣಿಗ್ರಹಣ ಮಾಡಿಸಿ ಅನಂತರ ಅಲ್ಲಿಂದ ಹೊರಟುಬಿಡುತ್ತಾನೆ. ಉಳಿದ ನಾಲ್ವರೊಡನೆ ದ್ರೌಪದಿಯ ಮದುವೆಯನ್ನು ಸ್ತ್ರೀಯರೇ ನಡೆಸಿದರೆಂದು ಬರುತ್ತದೆ (ಆದಿ. ೧೯೭-೧೨,೧೪).

ದ್ರೌಪದಿಯ ಪಂಚಪತಿತ್ವದ ಪ್ರತಿಪಾದಕರು ಅದರ ಸಮರ್ಥನೆಗಾಗಿ ತರ್ಕಬದ್ಧವಲ್ಲದ ಅನೇಕ ಸಂಗತಿಗಳನ್ನು ಸೃಷ್ಟಿಸಿ ಸೇರಿಸಿರುವಂತೆ ಕಾಣುತ್ತದೆ. ಅವುಗಳನ್ನು ಒಂದೊಂದಾಗಿ ಪರಿಶೀಲಿಸಬಹುದು :

(೧) ಪಾಂಡವರೈವರಿಗೂ ದ್ರೌಪದಿಯಲ್ಲಿ ಮನಸ್ಸಾಯಿತೆಂದೂ ಅದನ್ನು ತೀರ

ಯುಧಿಷ್ಠಿರ ತಮ್ಮ ತಮ್ಮಲ್ಲೇ ಮನಸ್ತಾಪ ಬರುತ್ತದೆಂದು ಹೆದರಿ ದ್ರೌಪದಿಯನ್ನು ತಮ್ಮೆಲ್ಲರ ಪತ್ನಿಯಾಗಲೆಂದು ಹೇಳಿದನೆಂದೂ ಕಾವ್ಯದಲ್ಲಿ ಬರುತ್ತದೆ (ಆದಿ. ೧೯೦–೧೧.೧೩).

ಮಹಾಪುರುಷರೆಂದೂ ಬ್ರಹ್ಮಚಾರಿಗಳೆಂದೂ ಸಂಯಮಿಗಳೆಂದೂ ಕಾವ್ಯದ ಹಲವೆಡೆ ವರ್ಣಿತರಾಗಿರುವ ಪಾಂಡವ ಸಹೋದರರೊಬ್ಬೊಬ್ಬರೂ ದ್ರೌಪದಿಯನ್ನು ಬಯಸಿದ ರೆನ್ನಬಹುದೇ ? ಸೋದರರಲ್ಲಿ ಒಡಕುಂಟಾಗುತ್ತದೆಂದು ಹೆದರಿ ಧರ್ಮಾವತಾರನಾದ ಆ ಯುಧಿಷ್ಠಿರ ಆ ಅಧರ್ಮಕ್ಕೆ ತಲೆಬಾಗಿದನೆನ್ನಬಹುದೇ ? ತನ್ನ ಆಜ್ಞಾನುವರ್ತಿಗಳಾದ ಅವರಿಗೆ ಬುದ್ಧಿ ಹೇಳಬಹುದಾಗಿತ್ತಲ್ಲವೆ ?

(೨) ವಿವಾಹದ ವಿಷಯದಲ್ಲಿ ದ್ರುಪದನೊಡನೆ ಮಾತನಾಡುವಾಗ ಯುಧಿಷ್ಠಿರ ಹೀಗೆಂದ : "ದ್ರೌಪದಿ ನಮ್ಮೆಲ್ಲರ ಪತ್ನಿಯಾಗಲಿ. ನನ್ನ ತಾಯಿಯೂ ಅದನ್ನೇ ಹೇಳಿದಳು. ಭೀಮಸೇನ ಮತ್ತು ನಾನು ಇನ್ನೂ ವಿವಾಹವಿಲ್ಲದವರು. ಈ ನಿನ್ನ ಪುತ್ರೀ ರತ್ನವನ್ನು ಅರ್ಜುನ ಗೆದ್ದಿದ್ದಾನೆ. ಸಿಕ್ಕ ರತ್ನವನ್ನು ಎಲ್ಲರೂ ಒಟ್ಟುಗೂಡಿ ಉಪಭೋಗಿಸ ಬೇಕೆಂಬ ನಿಯಮವಿದೆ ನಮ್ಮಲ್ಲಿ. ದ್ರೌಪದಿ ನಮ್ಮೆಲ್ಲರನ್ನು ಅಗ್ನಿಸಾಕ್ಷಿಯಾಗಿ ಕೈ ಹಿಡಿಯಲಿ" (ಆದಿ. ೧೯೪–೨೯–೩೧).

ತಾಯಿ ಹಾಗೆ ಹೇಳಿದ್ದರೂ ಅನೀತಿಯುತವಾದುದನ್ನು ಮಗ ನಡೆಸಲೇಬೇಕಾಗಿರಲಿಲ್ಲ ವಷ್ಟೆ? ಭೀಮಸೇನ ಹಿಡಿಂಬೆಯನ್ನು ಆಗಲೇ ಮದುವೆಯಾಗಿದ್ದನಲ್ಲವೆ ? ಹಾಗಾಗಿ ಯುಧಿಷ್ಠಿರನ ಮಾತು ಸುಳ್ಳಾಯಿತಲ್ಲವೆ ? ದ್ರೌಪದಿ ಒಂದು ರತ್ನವೆಂದೂ ಅವಳನ್ನು ಎಲ್ಲರೂ ಸೇರಿ ಉಪಭೋಗಿಸುವೆವೆಂದೂ ಹೇಳಿಕೊಂಡಾಗ ಯುಧಿಷ್ಠಿರನ ಘನತೆ ಏನಾಯಿತು ?

(೩) ದ್ರುಪದ ವ್ಯಾಸನನ್ನು ಕುರಿತು "ಒಬ್ಬ ಹೆಂಗಸು ಐವರಿಗೆ ಪತ್ನಿಯಾದರೆ ವೇಶ್ಯೆ ಯೆನಿಸುವುದಿಲ್ಲವೆ ?" ಎಂದು ಕೇಳಿದ ಪ್ರಶ್ನೆಗೆ ವ್ಯಾಸ ಉತ್ತರವನ್ನೇ ಕೊಡದೆ,

ಅಸ್ಮಿನ್ ಧರ್ಮೇ ವಿಪ್ರಲಬ್ಧೇ ಲೋಕವೇದವಿರೋಧಕೇ
ಯಸ್ಯ ಯಸ್ಯ ಮತಂ ಯದ್ಯದ್ ಶ್ರೋತುಮಿಚ್ಛಾಮಿ ಯಸ್ಯ ತತ್ ॥

ಲೋಕವಿರುದ್ಧವಾದ ಮತ್ತು ವೇದವಿರುದ್ಧವಾದ ಕಳೆದು ಹೋದ ಈ ಒಂದು ಧರ್ಮದ ವಿಷಯವಾಗಿ ನಿಮ್ಮ ನಿಮ್ಮ ಅಭಿಪ್ರಾಯವೇನು ಹೇಳಿ ಎಂದು ಹೇಳುತ್ತಾನೆ. ಆ ಧರ್ಮ ಯಾವುದೆಂದು ಮಾತ್ರ ಆತ ಹೇಳುವುದಿಲ್ಲ. ಅದು ಲೋಕವೇದವಿರುದ್ಧವಾದುದು ಎಂದು ಹೇಳುತ್ತಾನೆ. ಪಂಚಮವೇದದ ಕರ್ತನೂ ವೇದವ್ಯಾಸನೆಂದು ಪ್ರತೀತನೂ ಆದ ವ್ಯಾಸಮಹರ್ಷಿ ಆ ಧರ್ಮದ ಪೋಷಕನೇ ?

ದ್ರುಪದ ಆ ಕೆಲಸವನ್ನು ತಾನು ಮಾಡಲಾರೆನೆನ್ನುತ್ತಾನೆ. ಧೃಷ್ಟದ್ಯುಮ್ನನೂ ಸಂದೇಹವ್ಯಕ್ತಪಡಿಸುತ್ತಾನೆ.

ಯುಧಿಷ್ಠಿರ ಮಾತ್ರ ಅದು ಅಧರ್ಮವಾಗಲಾರದೆಂದು ಗೌತಮಗೋತ್ರದ ಜಟಿಲೆ ಯೆಂಬವಳು ಸಪ್ತರ್ಷಿಗಳನ್ನು ಮದುವೆಯಾದ ಮತ್ತು ವೃಕ್ಷದಿಂದ ಜನಿಸಿದ ಒಬ್ಬಾಕೆ

ಯುಧಿಷ್ಠಿರ ತಮ್ಮ ತಮ್ಮಲ್ಲೇ ಮನಸ್ತಾಪ ಬರುತ್ತದೆಂದು ಹೆದರಿ ದ್ರೌಪದಿಯನ್ನು ನಮ್ಮೆಲ್ಲರ ಪತ್ನಿಯಾಗಲೆಂದು ಹೇಳಿದನೆಂದೂ ಕಾವ್ಯದಲ್ಲಿ ಬರುತ್ತದೆ (ಆದಿ. ೧೯೦–೧೧.೧೩).

ಮಹಾಪುರುಷರೆಂದೂ ಬ್ರಹ್ಮಚಾರಿಗಳೆಂದೂ ಸಂಯಮಿಗಳೆಂದೂ ಕಾವ್ಯದ ಹಲವೆಡೆ ವರ್ಣಿತರಾಗಿರುವ ಪಾಂಡವ ಸಹೋದರರೊಬ್ಬೊಬ್ಬರೂ ದ್ರೌಪದಿಯನ್ನು ಬಯಸಿದ ರೆನ್ನಬಹುದೇ ? ಸೋದರರಲ್ಲಿ ಒಡಕುಂಟಾಗುತ್ತದೆಂದು ಹೆದರಿ ಧರ್ಮಾವತಾರನಾದ ಆ ಯುಧಿಷ್ಠಿರ ಆ ಅಧರ್ಮಕ್ಕೆ ತಲೆಬಾಗಿದನೆನ್ನಬಹುದೇ ? ತನ್ನ ಆಜ್ಞಾನುವರ್ತಿಗಳಾದ ಅವರಿಗೆ ಬುದ್ಧಿ ಹೇಳಬಹುದಾಗಿತ್ತಲ್ಲವೆ ?

(೨) ವಿವಾಹದ ವಿಷಯದಲ್ಲಿ ದ್ರುಪದನೊಡನೆ ಮಾತನಾಡುವಾಗ ಯುಧಿಷ್ಠಿರ ಹೀಗೆಂದ : "ದ್ರೌಪದಿ ನಮ್ಮೆಲ್ಲರ ಪತ್ನಿಯಾಗಲಿ. ನನ್ನ ತಾಯಿಯೂ ಅದನ್ನೇ ಹೇಳಿದಳು. ಭೀಮಸೇನ ಮತ್ತು ನಾನು ಇನ್ನೂ ವಿವಾಹವಿಲ್ಲದವರು. ಈ ನಿನ್ನ ಪುತ್ರೀ ರತ್ನವನ್ನು ಅರ್ಜುನ ಗೆದ್ದಿದ್ದಾನೆ. ಸಿಕ್ಕ ರತ್ನವನ್ನು ಎಲ್ಲರೂ ಒಟ್ಟುಗೂಡಿ ಉಪಭೋಗಿಸ ಬೇಕೆಂಬ ನಿಯಮವಿದೆ ನಮ್ಮಲ್ಲಿ. ದ್ರೌಪದಿ ನಮ್ಮೆಲ್ಲರನ್ನು ಅಗ್ನಿಸಾಕ್ಷಿಯಾಗಿ ಕೈ ಹಿಡಿಯಲಿ" (ಆದಿ. ೧೯೪–೨೯–೩೧).

ತಾಯಿ ಹಾಗೆ ಹೇಳಿದ್ದರೂ ಅನೀತಿಯುತವಾದುದನ್ನು ಮಗ ನಡೆಸಲೇಬೇಕಾಗಿರಲಿಲ್ಲ ವಷ್ಟೆ ? ಭೀಮಸೇನ ಹಿಡಿಂಬೆಯನ್ನು ಅಗಲೇ ಮದುವೆಯಾಗಿದ್ದನಲ್ಲವೆ ? ಹಾಗಾಗಿ ಯುಧಿಷ್ಠಿರನ ಮಾತು ಸುಳ್ಳಾಯಿತಲ್ಲವೆ ? ದ್ರೌಪದಿ ಒಂದು ರತ್ನವೆಂದೂ ಅವಳನ್ನು ಎಲ್ಲರೂ ಸೇರಿ ಉಪಭೋಗಿಸುವೆವೆಂದೂ ಹೇಳಿಕೊಂಡಾಗ ಯುಧಿಷ್ಠಿರನ ಘನತೆ ಏನಾಯಿತು ?

(೩) ದ್ರುಪದ ವ್ಯಾಸನನ್ನು ಕುರಿತು "ಒಬ್ಬ ಹೆಂಗಸು ಐವರಿಗೆ ಪತ್ನಿಯಾದರೆ ವೇಶ್ಯೆ ಯೆನಿಸುವುದಿಲ್ಲವೆ ?" ಎಂದು ಕೇಳಿದ ಪ್ರಶ್ನೆಗೆ ವ್ಯಾಸ ಉತ್ತರವನ್ನೇ ಕೊಡದೆ,

> ಅಸ್ಮಿನ್ ಧರ್ಮೇ ವಿಪ್ರಲಬ್ಧೇ ಲೋಕವೇದವಿರೋಧಕೇ
> ಯಸ್ಯ ಯಸ್ಯ ಮತಂ ಯದ್ಯದ್ ಶ್ರೋತುಮಿಚ್ಛಾಮಿ ಯಸ್ಯ ತತ್ ॥

ಲೋಕವಿರುದ್ಧವಾದ ಮತ್ತು ವೇದವಿರುದ್ಧವಾದ ಕಳೆದು ಹೋದ ಈ ಒಂದು ಧರ್ಮದ ವಿಷಯವಾಗಿ ನಿಮ್ಮ ನಿಮ್ಮ ಅಭಿಪ್ರಾಯವೇನು ಹೇಳಿ ಎಂದು ಹೇಳುತ್ತಾನೆ. ಆ ಧರ್ಮ ಯಾವುದೆಂದು ಮಾತ್ರ ಆತ ಹೇಳುವುದಿಲ್ಲ. ಅದು ಲೋಕವೇದವಿರುದ್ಧವಾದುದು ಎಂದು ಹೇಳುತ್ತಾನೆ. ಪಂಚಮವೇದದ ಕರ್ತನೂ ವೇದವ್ಯಾಸನೆಂದು ಪ್ರತೀತನೂ ಆದ ವ್ಯಾಸಮಹರ್ಷಿ ಆ ಧರ್ಮದ ಪೋಷಕನೇ ?

ದ್ರುಪದ ಆ ಕೆಲಸವನ್ನು ತಾನು ಮಾಡಲಾರೆನೆನ್ನುತ್ತಾನೆ. ಧೃಷ್ಟದ್ಯುಮ್ನನೂ ಸಂದೇಹವ್ಯಕ್ತಪಡಿಸುತ್ತಾನೆ.

ಯುಧಿಷ್ಠಿರ ಮಾತ್ರ ಅದು ಅಧರ್ಮವಾಗಲಾರದೆಂದು ಗೌತಮಗೋತ್ರದ ಜಟಿಲೆ ಎಂಬುವಳು ಸಪ್ತರ್ಷಿಗಳನ್ನು ಮದುವೆಯಾದ ಮತ್ತು ವೃಕ್ಷದಿಂದ ಜನಿಸಿದ ಒಬ್ಬಾಕೆ

(ವಾರ್ಕ್ಷಿ) ಪ್ರಾಚೇತಸ ಎಂಬ ಹೆಸರಿನ ಹತ್ತುಮಂದಿ ಸೋದರರನ್ನು ಮದುವೆಯಾದ ನಿದರ್ಶನದೊಡನೆ ಸಮರ್ಥಿಸುತ್ತಾನೆ. ಆದರೆ ಅನ್ಯತ್ರ ಎಲ್ಲೂ ಕಾಣಬಾರದಂತಹ ನಿದರ್ಶನಗಳು ಇವು.

ಅನಂತರ ವ್ಯಾಸ ದ್ರುಪದನಿಗೆ ಮಾತ್ರ ಅದು ಧರ್ಮವೆಂದೂ ನ್ಯಾಯವೆಂದೂ ಹೇಳಿ ಅವನನ್ನು ರಾಜಭವನದೊಳಕ್ಕೆ ಕರೆದೊಯ್ದು ದ್ರುಪದಪತ್ನಿಯ ಬೇಡಿಕೆಯಂತೆ ದ್ರೌಪದಿಗೆ ಐವರು ಪತಿಗಳಾಗಬೇಕಾಗಿದೆಯೆಂದೂ, ದ್ರೌಪದಿ ಹಿಂದಿನ ಜನ್ಮದಲ್ಲಿ ನಾರಾಯಣಿ ಯಾಗಿದ್ದು ಅತಿಭೋಗಾಸಕ್ತಿಯಿಂದ ಕೂಡಿದ್ದುದರಿಂದ ಐವರು ಪತಿಗಳನ್ನು ಪಡೆಯು ವಂತೆ ಪತಿಯಿಂದ ಶಪ್ತಳಾಗಿದ್ದಳೆಂದೂ, ನಾರಾಯಣಿ ಶಿವನನ್ನು ಮೆಚ್ಚಿಸಿ ಐದು ಬಾರಿ 'ಪತಿಂ ದೇಹಿ' ಎಂದು ಬೇಡಿದುದರಿಂದ ಐವರು ಪತಿಗಳನ್ನು ಶಿವ ಕರುಣಿಸಿದನೆಂದೂ, ಶಿವನಿಂದ ಬಂಧಿತರಾಗಿದ್ದ ಐವರು ಇಂದ್ರರೇ ಪಂಚಪಾಂಡವರಾಗಿ ಜನಿಸಿ ದ್ರೌಪದಿ ಯಾಗಿ ಹುಟ್ಟಿರುವ ಆ ನಾರಾಯಣಿಯನ್ನು ವರಿಸಬೇಕಾಗಿದೆಯೆಂದೂ ಹೇಳುತ್ತಾನೆ. ಅಲ್ಲದೆ ಭೌಮಾಶ್ವಿ ಎಂಬವಳು ನಿತಂತುವಿನ ಐವರು ಮಕ್ಕಳನ್ನು ವರಿಸಿದ ನಿದರ್ಶನವನ್ನೂ ಹೇಳುತ್ತಾನೆ. ಇವು ಯಾವುವೂ ತರ್ಕಬದ್ಧವಾಗಿ ನಿಲ್ಲುವಂತಹವಲ್ಲ. ಧರ್ಮದ ಒರೆಗಲ್ಲಿ ನಲ್ಲಿ ಬಣ್ಣವೇರುವಂತಹವಲ್ಲ. ಬೇರೆಯವರು ತಪ್ಪು ಮಾಡಿದ ನಿದರ್ಶನವನ್ನು ಹೇಳಿ, ನೀನೂ ಹಾಗೆ ಮಾಡು ಎಂದಂತಾಗುವುದಿಲ್ಲವೆ ?

(೪) ಮುಂದೆ ನಾರದ ಪಾಂಡವರೊಬ್ಬೊಬ್ಬರೂ ದ್ರೌಪದಿಯನ್ನು ಒಂದೊಂದು ವರ್ಷ ಉಪಭೋಗಿಸಬೇಕೆಂದೂ ಆ ಅವಧಿಯಲ್ಲಿ ಇತರರು ಕಂಡುಬಿಟ್ಟರೆ ೧೨ ವರ್ಷ ಬ್ರಹ್ಮ ಚರ್ಯೆಯಿಂದ ವನವಾಸ ಮಾಡಬೇಕೆಂದೂ ಕಟ್ಟುಪಾಡು ಮಾಡಿದ ವಿಷಯ ಬರುತ್ತದೆ.

ಕೇವಲ ನಾಡಾಡಿಗಳಲ್ಲದ, ಬ್ರಹ್ಮಚಾರಿಗಳೂ ಸಂಯಮಿಗಳೂ ಆದ, ಸೋದರರ ನಡುವೆ ಇಂತಹ ಕಟ್ಟುಪಾಡು ಅವಶ್ಯವಾಯಿತೆಂದೂ ನಾರದ ಅದರ ಸೂತ್ರಧಾರನೆಂದೂ ನಂಬಿದರೂ, ಇಡೀ ಭಾರತದಲ್ಲಿ ಎಲ್ಲಿಯೂ ದ್ರೌಪದಿ ಯುಧಿಷ್ಠಿರನೊಡನೆ ಸಂಕೇತ ದಲ್ಲಿದ್ದ ಸಂನಿವೇಶಗಳು ಕಾಣಸಿಗುತ್ತವೆಯೇ ಹೊರತು ಪ್ರತ್ಯೇಕವಾಗಿ ಒಬ್ಬೊಬ್ಬ ಅನ್ಯ ಪಾಂಡವನೊಡನೆ ಸಂಕೇತದಲ್ಲಿದ್ದ ಸಂನಿವೇಶಗಳು ದೊರೆಯುವುದಿಲ್ಲ.

ಈ ಕಟ್ಟುಪಾಡನ್ನು ಮಾಡಿಕೊಂಡದ್ದು ಮದುವೆಯಾದ ಮೂರು ವರ್ಷಗಳ ಮೇಲೆ. ಅದುವರೆಗೆ ಅನವಶ್ಯವಾಗಿದ್ದ ಕಟ್ಟುಪಾಡು ಆಮೇಲೆ ಏಕೆ ಬೇಕಾಯಿತು ? ಇರಲಿ. ಒಮ್ಮೆ ದ್ರೌಪದಿಯೊಡನೆ ಏಕಾಂತದಲ್ಲಿದ್ದ ಯುಧಿಷ್ಠಿರನನ್ನು ಕಂಡ ಅರ್ಜುನ ೧೨ ವರ್ಷದ ಬ್ರಹ್ಮಚರ್ಯೆಯ ವನವಾಸಕ್ಕೆ ಹೋಗುತ್ತಾನೆ. ಆದರೆ ಅವನು ಬ್ರಹ್ಮಚರ್ಯೆಯಿಂದಲೂ ಇರಲಿಲ್ಲ, ವನವಾಸವನ್ನೂ ಅನುಭವಿಸಲಿಲ್ಲ. ನಾಗರಾಜನ ಅರಮನೆಯಲ್ಲಿದ್ದು ಉಲೂಪಿ ಯನ್ನು ಮದುವೆಯಾಗಿ ಇರಾವಾನ್ ಎಂಬ ಪುತ್ರನನ್ನು ಪಡೆದ, ಮಣಿಪುರದ ಅರಮನೆ ಯಲ್ಲಿ ಚಿತ್ರಾಂಗದೆಯನ್ನು ಮದುವೆ ಆಗಿ ಬಭ್ರುವಾಹನನನ್ನು ಪಡೆದ, ಮಧುರೆಯಲ್ಲಿ ಸುಭದ್ರೆಯನ್ನು ವರಿಸಿ ಅಪಹರಿಸಿಕೊಂಡು ಬಂದ.

(೫) ದ್ರೌಪದಿಯಿಂದ ಐವರಿಗೂ ಐದು ಜನ ಗಂಡುಮಕ್ಕಳಾದರೆಂಬುದೂ ಅಷ್ಟೇ

ಅಪ್ರಕೃತವಾದೆಡೆಯಲ್ಲಿ ಆ ವಿಷಯ ಸೂಚಿತವಾಗುತ್ತದೆ. ಪಂಚಪತಿತ್ವವನ್ನು ಸ್ಥಾಪಿಸ ಹೊರಟವರ ಆತಂಕದ ಸೃಷ್ಟಿ ಆದಾಗಿರಬೇಕು. ಇಲ್ಲವಾದಲ್ಲಿ ಅವರಲ್ಲಿ ಒಬ್ಬರಾದರೂ ಆಭಿಮನ್ಯುವಿನಂತೆ ಪ್ರಸಿದ್ಧಿಗೆ ಬರಲಿಲ್ಲವೇಕೆ ?

(೬) ಮಾತಾ, ಪಿತಾ, ಪುತ್ರ, ಪತಿ, ಭಾರ್ಯಾ ಇತ್ಯಾದಿ ಶಬ್ದಗಳು ಮಹಾಭಾರತದಲ್ಲಿ ವಿಶಾಲಾರ್ಥದಲ್ಲಿ ಪ್ರಯೋಗವಾಗಿವೆ. ಹೆತ್ತ ತಾಯಿ ತಂದೆಗಳಿಗೆ ಮಾತ್ರವಲ್ಲದೆ ಚಿಕ್ಕಮ್ಮ, ದೊಡ್ಡಮ್ಮ, ಚಿಕ್ಕಪ್ಪ, ದೊಡ್ಡಪ್ಪ, ಅವರ ಮಕ್ಕಳು ಎಂಬರ್ಥದಲ್ಲಿ ಮಾತಾ, ಪಿತಾ, ಪುತ್ರ ಶಬ್ದಗಳು ಬಳಕೆಯಾಗಿವೆ. ಅಂತೆಯೇ ಗಂಡ ಎಂಬರ್ಥವೇ ಅಲ್ಲದೆ ಒಡೆಯ, ಯಜಮಾನ ಎಂಬರ್ಥದಲ್ಲಿ ಪತಿ ಶಬ್ದ. ಪತ್ನಿ ಎಂಬರ್ಥದಲ್ಲಿ ಮಾತ್ರವಲ್ಲದೆ ಭರಿಸಲ್ಪಡಬೇಕಾದವಳು ಸಂರಕ್ಷಿಸಲ್ಪಡಬೇಕಾದವಳು ಎಂಬರ್ಥದಲ್ಲಿ ಭಾರ್ಯಾ ಶಬ್ದ ಪ್ರಯೋಗವಾಗಿದೆ. ಅರ್ಜುನ ಅಥವಾ ಭೀಮನಿಗೆ ದ್ರೌಪದಿ ಭಾರ್ಯೆ ಎಂದರೆ ತಾಯ ಸ್ಥಾನದಲ್ಲಿದ್ದು ರಕ್ಷಿಸಲ್ಪಡಬೇಕಾದವಳು. ನಾಲ್ವರೂ ಸೋದರರೂ ದ್ರೌಪದಿಯನ್ನು ಮಾತೆಯಂತೆ ಗೌರವಿಸುತ್ತಿದ್ದರು. ಅವಳೂ ಅವರನ್ನು ಪುತ್ರವಾತ್ಸಲ್ಯದಿಂದ ಕಾಣುತ್ತಿದ್ದಳು. ಅರ್ಜುನ ಇಂದ್ರಕೀಲಕ್ಕೆ ತಪಸ್ಸಿಗೆ ಹೊರಟಾಗ ದ್ರೌಪದಿ ಅರ್ಜುನನಿಗೆ ಬುದ್ಧಿವಾದ ಹೇಳಿ ಆಶೀರ್ವಾದ ಮಾಡಿ ಕಳಿಸುತ್ತಾಳೆ. (ಏವಮುಕ್ತ್ವಾಶಿಷಃ ಕೃಷ್ಣಾ ವಿರರಾಮ ಯಶಸ್ವಿನೀ. ವನ. ೩೭–೩೬) ಕಾಡಿನಲ್ಲಿ ದ್ರೌಪದಿ ನಡೆಯಲಾರದಾದಾಗ ಭೀಮ ಅಥವಾ ಅರ್ಜುನ ಅವಳನ್ನು ಹೊತ್ತು ನಡೆವ ಪ್ರಸಂಗ ಬರುತ್ತದೆ. ವನದಲ್ಲಿದ್ದ ಋಷಿಗಳ, ಮಿತ್ರೇತರರ ಎದುರಿನಲ್ಲಿ ಹೆಂಡತಿಯನ್ನು ಯಾರೂ ಭುಜದ ಮೇಲೆ ಹೊರುವುದಿಲ್ಲ. ಕಿರಿಯರು ತಾಯನ್ನು ಮತ್ತು ಹಿರಿಯರನ್ನು ಹೊರುವುದು ಪದ್ಧತಿ. ನಕುಲ ಸಹದೇವರು ದ್ರೌಪದಿಯ ಪಾದಸೇವೆ ಮಾಡುವ ಪ್ರಸಂಗವೂ ಬರುತ್ತದೆ.

(೭) ಕೃಷ್ಣ ಒಮ್ಮೆ ಯುಧಿಷ್ಠಿರನನ್ನೂ ದ್ರೌಪದಿಯನ್ನೂ ಪುರೋಹಿತ ಧೌಮ್ಯನನ್ನೂ ವಿಧಿವಿಹಿತವಾಗಿ ಪೂಜಿಸಿ ಸ್ವಸ್ಥಾನದಲ್ಲಿ ಕುಳಿತುಕೊಂಡನೆಂದು ಬರುತ್ತದೆ.

ಯುಧಿಷ್ಠಿರನೇನೋ ದೊಡ್ಡವನು. ಪೂಜೆಗೆ ಪಾತ್ರ. ಆದರೆ ದ್ರೌಪದಿ ಚಿಕ್ಕವಳು. ತನಗಿಂತ ಚಿಕ್ಕವನಾದ ಅರ್ಜುನನ ಪತ್ನಿಯೂ ಆಗಿದ್ದಿದ್ದರೆ ಅವಳನ್ನು ಕೃಷ್ಣ ಪೂಜಿಸುತ್ತಿರಲಿಲ್ಲ. ಯುಧಿಷ್ಠಿರನ ಪತ್ನಿಯಾಗಿಯೇ ಅವಳಿಗೆ ಆ ಅರ್ಹತೆ.

(೮) ದ್ರೌಪದಿ ಭೀಮನಿಗೆ ಭಾರ್ಯೆ, ಅಂದರೆ ರಕ್ಷಿಸಲ್ಪಡಬೇಕಾದವಳು. ಹಾಗಾಗಿ ಕೀಚಕನನ್ನು ಕೊಂದ. "ನನ್ನ ಸಹೋದರನ ಪತ್ನಿಯನ್ನಪಹಾರ ಮಾಡಲೆತ್ನಿಸಿದ್ದ ಕೀಚಕನನ್ನು ಕೊಂದು ನನ್ನ ಕರ್ತವ್ಯವನ್ನು ನಿರ್ವಹಿಸಿ ಆತ್ಮಶಾಂತಿಯನ್ನು ಹೊಂದಿದೆ" ಎನ್ನುತ್ತಾನೆ.

(೯) ಭೀಮ ದುರ್ಯೋಧನನನ್ನು ಹೊಡೆದುರುಳಿಸಿದ ಮೇಲೆ ಯುಧಿಷ್ಠಿರ ಭೀಮನಿಗೆ "ವಿಧಿವಶದಿಂದ ನೀನು ನಿನ್ನ ತಾಯ (ದ್ರೌಪದಿಯ) ಋಣವನ್ನು, ನಿನ್ನ ಕೋಪದ ಋಣವನ್ನು, ತೀರಿಸಿದೆ" ಎಂದು ಹೊಗಳುತ್ತಾನೆ.

(೧೦) ದ್ರೌಪದಿ ಅನ್ಯರ ಪತ್ನಿಯೂ ಆಗಿದ್ದಿದ್ದರೆ ದ್ಯೂತದಲ್ಲಿ ಅವಳನ್ನು ಪಣವಾಗಿ

ಒಪ್ಪಲು ಯುಧಿಷ್ಠಿರನಿಗೆ ಪೂರ್ಣವಾದ ಅಧಿಕಾರ ಇರುತ್ತಿರಲಿಲ್ಲ.

(೧೧) ಯುಧಿಷ್ಠಿರನಿಗೆ ರಾಜ್ಯಾಭಿಷೇಕವಾದಾಗ, ಅವನು ರಾಜಸೂಯವನ್ನು ಮಾಡಿದಾಗ, ಯುದ್ಧಾನಂತರ ಅಶ್ವಮೇಧಯಾಗ ಮಾಡಿದಾಗ, ದ್ರೌಪದಿಯೇ ಪಟ್ಟದ ರಾಣಿಯಾಗಿ ವಿರಾಜಿಸಿದುದು.

ಚಿನ್ನದ ಅದಿರಿನ ರೇಖೆಯನ್ನೇ ಅನುಸರಿಸಿ ಹೋಗಿ, ಬಂಡೆಯ ಭಾಗವನ್ನು ಒಡೆದು ಬೇರ್ಪಡಿಸಿ ಅದಿರು ಸಂಗ್ರಹಿಸಿ ಸಂಸ್ಕರಿಸಿದರೆ, ಚಿನ್ನ ದೊರೆಯುತ್ತದೆ; ಅಂತೆಯೇ ಮೂಲ ಎಳೆಯನ್ನೇ ಹಿಡಿದು ಹೋಗಿ ಕಥಾವಸ್ತುವನ್ನು ವಿಶ್ಲೇಷಿಸಿ ಪ್ರಕ್ಷಿಪ್ತಭಾಗಗಳನ್ನು ಗುರುತಿಸಿ ಬೇರ್ಪಡಿಸಿದರೆ, ಸತ್ಯಸಂಗತಿ ಹೊರಬೀಳುತ್ತದೆ.

## ಟಿಪ್ಪಣಿಗಳು

1. "Not a single vedic passage can be cited which clearly refers to the practice of polyandry. The most glaring example of polyandry in Sanskrit literature is that of Draupadi as the wife of five Pandavas"—*History of Dharma Sastra*, Vol. II, Part I, p. 554.

   "*Cambridge History of India*" ದಲ್ಲೂ, ಪ್ರಾಚೀನ ಕಾಲದಲ್ಲಿ ಬಹುಪತಿತ್ವದ ನಿದರ್ಶನಗಳು ಕೇಳಿ ಬರುವುದೇ ಇಲ್ಲ ಎಂಬ ಉಲ್ಲೇಖವಿದೆ. (Vol. I, p. 88; Vedic Index I, p. 479)

2. ಅಷ್ಟೌ ಶ್ಲೋಕಸಹಸ್ರಾಣಿ ಅಷ್ಟೌ ಶ್ಲೋಕಶತಾನಿ ಚ (ಆದಿ. ೧-೮೧)
3. ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತ ಸಂಹಿತಾಂ
   ಉಪಾಖ್ಯಾನೈರ್ವಿನಾ ತಾವತ್ ಭಾರತಂ ಪ್ರೋಚ್ಯತೇ ಬುಧೈಃ ॥ (ಆದಿ. ೧-೧೦೨, ೧೦೩)
4. ಏಕಂ ಶತಸಹಸ್ರಂ ತು ಮಯೋಕ್ತಂ ವೈ ನಿಬೋಧತ (ಆದಿ. ೧-೧೦೭)

ಮಹಾಂತಃ ಕವಯಃ ಸಂತು ಮಹಾಂತಃ ಪಂಡಿತಾಸ್ತಥಾ ।
ಮಹಾಕವಿರ್ಮಹಾವಿದ್ವಾನೇಕೋ ಭರ್ತೃಹರಿರ್ಮತಃ ॥

ಮಹಾಕವಿಗಳು ಅನೇಕರು; ಹಾಗೆಯೇ ಮಹಾಪಂಡಿತರು ಸಹ. ಆದರೆ ಮಹಾಕವಿಯೂ ಮಹಾವಿದ್ವಾಂಸನೂ ಭರ್ತೃಹರಿಯೊಬ್ಬನೇ. ಇದು ವಿದ್ವನ್ಮಂಡಲಿಯಲ್ಲಿ ಕೇಳಿ ಬರುವ ಒಂದು ಲೋಕೋಕ್ತಿ.

ಕಾಳಿದಾಸ, ಭವಭೂತಿ ಮೊದಲಾದ ಮಹಾಕವಿಗಳು ಸಹ ವಿದ್ವಾಂಸರೇ. ಆದುದರಿಂದ ಮೇಲಿನ ಶ್ಲೋಕದಲ್ಲಿ 'ಮಹಾವಿದ್ವಾನ್' ಪದವನ್ನು ದೊಡ್ಡ ಶಾಸ್ತ್ರಕಾರನೆಂಬರ್ಥದಲ್ಲಿ ಪ್ರಯೋಗಿಸಿರುವಂತಿದೆ. ಆದರೆ ಮಹಾಕವಿಯೂ ಮಹಾಶಾಸ್ತ್ರಕಾರನೂ ಆದ ಭರ್ತೃಹರಿ ಯಾರು, ಅವನ ಕೃತಿಗಳು ಯಾವುವು ಎಂಬುದು ಚರ್ಚಾಸ್ಪದವಾಗಿಯೇ ಇದೆ.

ಭರ್ತೃಹರಿ ವಿರಚಿತವೆಂದು ಹೇಳಲಾದ ಗ್ರಂಥಗಳು : **(i)** ಸುಭಾಷಿತ ಶತಕತ್ರಯ ; **(ii)** ವಾಕ್ಯಪದೀಯ (ಸ್ವೋಪಜ್ಞವೃತ್ತಿಸಹಿತ) ; **(iii)** ಮಹಾಭಾಷ್ಯದೀಪಿಕಾ ; **(iv)** ಭಾಗವೃತ್ತಿ ; ಮತ್ತು **(v)** ರಾವಣವಧ ಅಥವಾ ಭಟ್ಟಿಕಾವ್ಯ.

## ಸುಭಾಷಿತ ಶತಕತ್ರಯ

ಮುಂಬಯಿಯ ಟಾಟಾ ಮೂಲತತ್ತ್ವ ಸಂಶೋಧನ ಸಂಸ್ಥೆ (**Tata Institute of Fundamental Research**) ಯಲ್ಲಿ ಗಣಿತಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಡಿ. ಡಿ. ಕೋಸಂಬೀಯವರು ಶತಕತ್ರಯದ ೩೭೭ ಹಸ್ತಪ್ರತಿಗಳನ್ನು—ಇವುಗಳಲ್ಲಿ ಅಪೂರ್ಣ ಪ್ರತಿಗಳೂ ಸೇರಿವೆ—ಸ್ವದೇಶ ವಿದೇಶಗಳಿಂದ ಸಂಗ್ರಹಿಸಿದರು. ಈ ಪ್ರತಿಗಳಲ್ಲಿ ಒಟ್ಟು ೩೦೦ಕ್ಕೆ ಬದಲು ೮೫೨ ಪದ್ಯಗಳು ದೊರೆತುವು. ಮೌಖಿಕವಾಗಿ ಒಬ್ಬರು ಇನ್ನೊಬ್ಬರಿಗೆ ಹೇಳಿದಾಗ, ಮರೆವಿನಿಂದಾಗಿ ಬೇರೆ ಪದ್ಯಗಳನ್ನು ಹೇಳುವುದು, ಹಸ್ತಪ್ರತಿಗಳಲ್ಲಿ ಕೆಲವು ಪತ್ರಗಳು ಕಳೆದು ಹೋದಾಗ ಶತಕದಲ್ಲಿ ೧೦೦ ಪದ್ಯವಾಗುವಂತೆ ಇತರರ ಪದ್ಯಗಳನ್ನು ಭರ್ತೃಹರಿಯದೆಂದು ತಿಳಿದು ಅವುಗಳನ್ನೋ ಅಥವಾ ಸ್ವಕಪೋಲಕಲ್ಪಿತವಾದ ಪದ್ಯಗಳನ್ನೋ ಸೇರಿಸುವುದು—ಇತ್ಯಾದಿ ಕಾರಣಗಳಿಂದ ೫೦೦ಕ್ಕೂ ಹೆಚ್ಚು ಪದ್ಯಗಳು ಪ್ರಕ್ಷಿಪ್ತವಾಗಿವೆ.

ಕೋಸಂಬೀಯವರು ಹಸ್ತಪ್ರತಿಗಳ ಸಾದೃಶ್ಯವೈದೃಶ್ಯಗಳ ಆಧಾರದ ಮೇಲೆ ಅವುಗಳನ್ನು ದಾಕ್ಷಿಣಾತ್ಯ ಮತ್ತು ಔತ್ತರೇಯ ಪಾಠಸಂಪ್ರದಾಯಗಳಾಗಿ (Southern and Northern Recessions) ವಿಂಗಡಿಸಿ ಮತ್ತೆ ಪ್ರತಿಸಂಪ್ರದಾಯಕ್ಕೆ ಸೇರಿದ ಹಸ್ತಪ್ರತಿಗಳನ್ನು ವರ್ಗೀಕರಿಸಿ ಶಾಖಾಪಾಠ(version)ಗಳನ್ನು ಗುರ್ತಿಸಿದರು. ಅನಂತರ ಈ ಶಾಖಾಪಾಠಗಳ ಅನುಸಾರವಾಗಿ ಪದ್ಯಗಳನ್ನು ಮೂರು ಗುಂಪಾಗಿ ಮಾಡಿದರು : (೧) ಮೊದಲನೆಯ ಗುಂಪು : ಎಲ್ಲ ಪಾಠಶಾಖೆಗಳಲ್ಲಿ ಕಂಡುಬರುವ ಶ್ಲೋಕಗಳು (ಸಂಖ್ಯೆ ೨೦೦) (೨) ಎರಡನೆಯ ಗುಂಪು : ಎಲ್ಲಕ್ಕೂ ಸಮಾನವಲ್ಲದಿದ್ದು ಎರಡು ಅಥವಾ ಹೆಚ್ಚು ಪಾಠಶಾಖೆಗಳಲ್ಲಿರುವ "ಸಂಶಯಿತ ಶ್ಲೋಕಗಳು" (೧೫೨) (೩) ಮೂರನೆಯ ಗುಂಪು : ಉಳಿದ ೫೦೦ ಶ್ಲೋಕಗಳು.

ಭರ್ತೃಹರಿಯದೆಂದು ಹೇಳಲಾದ, ೮೪ ಪದ್ಯಗಳಿರುವ ವಿಟೀವೃತ್ತ ಮತ್ತು ೧೦೩ ಪದ್ಯಗಳಿರುವ ವಿಜ್ಞಾನ ಶತಕಗಳ ಪದ್ಯಗಳನ್ನು ನಾಲ್ಕನೆಯ ಗುಂಪಾಗಿ ಕೊಟ್ಟು, ಈ ಶ್ಲೋಕಗಳನ್ನು ಮೊದಲನೆಯ ಮತ್ತು ಎರಡನೆಯ ಗುಂಪಿನ ಶ್ಲೋಕಗಳೊಡನೆ ಹೋಲಿಸಿ ನೋಡಿದರೆ ಅವು ಶತಕತ್ರಯಕಾರನದಲ್ಲವೆಂದು ದೃಢವಾಗುವುದೆಂದು ತಮ್ಮ ಅಭಿಪ್ರಾಯವನ್ನು ಹೇಳಿದ್ದಾರೆ.

ಈ ಎಲ್ಲ ಪದ್ಯಗಳನ್ನು, ತಮ್ಮ ಉಪೋದ್ಘಾತದೊಂದಿಗೆ, 'ಭರ್ತೃಹರಿವಿರಚಿತಃ ಶತಕತ್ರಯಾದಿ ಸುಭಾಷಿತ ಸಂಗ್ರಹಃ' (The Epigrams attributed to Bhartrhari)[1] ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ.

ಅತಿ ಹೆಚ್ಚಿನ ಸಂಖ್ಯೆಯಲ್ಲಿ, ವಿವಿಧ ಪ್ರಕಾರದ ಹಸ್ತಪ್ರತಿಗಳು ರಾಜಸ್ಥಾನದಲ್ಲಿ ಸಿಕ್ಕಿರುವುದರಿಂದ, ಹಸ್ತಪ್ರತಿ ಸಂಪ್ರದಾಯ ಅಲ್ಲಿಂದ ಮೊದಲಾಗಿರಬಹುದು. ಅನೇಕ ಶ್ಲೋಕಗಳು ಬೇರೆ ಬೇರೆ ಹಸ್ತಪ್ರತಿಗಳಲ್ಲಿ ಬೇರೆ ಬೇರೆ ಶತಕಗಳಲ್ಲಿರುವುದರಿಂದಲೂ, ಶ್ಲೋಕಗಳ ಕ್ರಮದಲ್ಲಿ ಬಹಳ ವ್ಯತ್ಯಾಸವಿರುವುದರಿಂದಲೂ ದಾಕ್ಷಿಣಾತ್ಯ ಸಂಪ್ರದಾಯದಲ್ಲಿ ಮಾತ್ರ ಶತಕದ ಪದ್ಯಗಳನ್ನು ಪದ್ಧತಿಗಳಾಗಿ ವಿಂಗಡಿಸಿರುವುದರಿಂದಲೂ ಮೊದಲು ಸಂಗ್ರಹಕಾರನು ಭರ್ತೃಹರಿಯದೆಂದು ನಂಬಿದ್ದ ಸುಭಾಷಿತಗಳ ಸಂಗ್ರಹವಾಗಿದ್ದುದು. ಅನಂತರ ಶತಕಗಳ ರೂಪ ಪಡೆದಿರಬಹುದು. ಇದು ಕೋಸಂಬೀಯವರ ಅಭಿಪ್ರಾಯ (ಪ್ರಸ್ತಾವನೆ ; ಪುಟಗಳು ೫೭, ೩೨ ಮತ್ತು ೭೮).

ಶತಕತ್ರಯದ ಪದ್ಯಗಳು ಏಕಕರ್ತೃಕಗಳಾಗಿದ್ದರೆ, ಗ್ರಂಥಕಾರ ಕ್ರಿಸ್ತಶಕದ ಮೊದಲಿನ ಶತಕಗಳವನಿರಬೇಕೆಂದೂ[2] ಮತ್ತು ಅವನು ವಾಕ್ಯಪದೀಯಕಾರ ಭರ್ತೃಹರಿಗಿಂತ ಭಿನ್ನನೆಂದೂ ಕೋಸಂಬೀಯವರ ಮತ. ಈ ವಿಷಯವನ್ನು ಮುಂದೆ ಪರಿಶೀಲಿಸಲಾಗುತ್ತದೆ.

## 'ವಾಕ್ಯಪದೀಯ' ಮತ್ತು 'ಮಹಾಭಾಷ್ಯ ದೀಪಿಕಾ'

ಪುಣೆ ವಿಶ್ವವಿದ್ಯಾಲಯದಿಂದ ಪ್ರಕಟಿತವಾದ ವಾಕ್ಯಪದೀಯದ ಸಂಪಾದಕರು, ತಮ್ಮ ಉಪೋದ್ಘಾತದಲ್ಲಿ,[3] "ಭರ್ತೃಹರಿಃ ವಾಕ್ಯಪದೀಯಪ್ರಕೀರ್ಣಕಯೋಃ ಕರ್ತಾ

ಕೋಸಂಬೀಯವರು ಹಸ್ತಪ್ರತಿಗಳ ಸಾದೃಶ್ಯವೈದೃಶ್ಯಗಳ ಆಧಾರದ ಮೇಲೆ ಅವುಗಳನ್ನು ದಾಕ್ಷಿಣಾತ್ಯ ಮತ್ತು ಔತ್ತರೇಯ ಪಾಠಸಂಪ್ರದಾಯಗಳಾಗಿ **(Southern and Northern Recessions)** ವಿಂಗಡಿಸಿ ಮತ್ತೆ ಪ್ರತಿಸಂಪ್ರದಾಯಕ್ಕೆ ಸೇರಿದ ಹಸ್ತಪ್ರತಿಗಳನ್ನು ವರ್ಗೀಕರಿಸಿ ಶಾಖಾಪಾಠ(version)ಗಳನ್ನು ಗುರ್ತಿಸಿದರು. ಅನಂತರ ಈ ಶಾಖಾಪಾಠಗಳ ಅನುಸಾರವಾಗಿ ಪದ್ಯಗಳನ್ನು ಮೂರು ಗುಂಪಾಗಿ ಮಾಡಿದರು: (೧) ಮೊದಲನೆಯ ಗುಂಪು : ಎಲ್ಲ ಪಾಠಶಾಖೆಗಳಲ್ಲಿ ಕಂಡುಬರುವ ಶ್ಲೋಕಗಳು (ಸಂಖ್ಯೆ ೨೦೦) (೨) ಎರಡನೆಯ ಗುಂಪು : ಎಲ್ಲಕ್ಕೂ ಸಮಾನವಲ್ಲದಿದ್ದು ಎರಡು ಅಥವಾ ಹೆಚ್ಚು ಪಾಠಶಾಖೆಗಳಲ್ಲಿರುವ "ಸಂಶಯಿತ ಶ್ಲೋಕಗಳು" (೧೫೨) (೩) ಮೂರನೆಯ ಗುಂಪು : ಉಳಿದ ೫೦೦ ಶ್ಲೋಕಗಳು.

ಭರ್ತೃಹರಿಯದೆಂದು ಹೇಳಲಾದ, ೮೪ ಪದ್ಯಗಳಿರುವ ವಿಟೀವೃತ್ತ ಮತ್ತು ೧೦೩ ಪದ್ಯಗಳಿರುವ ವಿಜ್ಞಾನ ಶತಕಗಳ ಪದ್ಯಗಳನ್ನು ನಾಲ್ಕನೆಯ ಗುಂಪಾಗಿ ಕೊಟ್ಟು, ಈ ಶ್ಲೋಕಗಳನ್ನು ಮೊದಲನೆಯ ಮತ್ತು ಎರಡನೆಯ ಗುಂಪಿನ ಶ್ಲೋಕಗಳೊಡನೆ ಹೋಲಿಸಿ ನೋಡಿದರೆ ಅವು ಶತಕತ್ರಯಕಾರನದಲ್ಲವೆಂದು ದೃಢವಾಗುವುದೆಂದು ತಮ್ಮ ಅಭಿಪ್ರಾಯವನ್ನು ಹೇಳಿದ್ದಾರೆ.

ಈ ಎಲ್ಲ ಪದ್ಯಗಳನ್ನು, ತಮ್ಮ ಉಪೋದ್ಘಾತದೊಂದಿಗೆ, 'ಭರ್ತೃಹರಿವಿರಚಿತಃ ಶತಕತ್ರಯಾದಿ ಸುಭಾಷಿತ ಸಂಗ್ರಹಃ' **(The Epigrams attributed to Bhartrhari)**[1] ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ.

ಅತಿ ಹೆಚ್ಚಿನ ಸಂಖ್ಯೆಯಲ್ಲಿ, ವಿವಿಧ ಪ್ರಕಾರದ ಹಸ್ತಪ್ರತಿಗಳು ರಾಜಸ್ಥಾನದಲ್ಲಿ ಸಿಕ್ಕಿರುವುದರಿಂದ, ಹಸ್ತಪ್ರತಿ ಸಂಪ್ರದಾಯ ಅಲ್ಲಿಂದ ಮೊದಲಾಗಿರಬಹುದು. ಅನೇಕ ಶ್ಲೋಕಗಳು ಬೇರೆ ಬೇರೆ ಹಸ್ತಪ್ರತಿಗಳಲ್ಲಿ ಬೇರೆ ಬೇರೆ ಶತಕಗಳಲ್ಲಿರುವುದರಿಂದಲೂ, ಶ್ಲೋಕಗಳ ಕ್ರಮದಲ್ಲಿ ಬಹಳ ವ್ಯತ್ಯಾಸವಿರುವುದರಿಂದಲೂ ದಾಕ್ಷಿಣಾತ್ಯ ಸಂಪ್ರದಾಯದಲ್ಲಿ ಮಾತ್ರ ಶತಕದ ಪದ್ಯಗಳನ್ನು ಪದ್ಧತಿಗಳಾಗಿ ವಿಂಗಡಿಸಿರುವುದರಿಂದಲೂ ಮೊದಲು ಸಂಗ್ರಹಕಾರನು ಭರ್ತೃಹರಿಯದೆಂದು ನಂಬಿದ್ದ ಸುಭಾಷಿತಗಳ ಸಂಗ್ರಹವಾಗಿದ್ದುದು, ಅನಂತರ ಶತಕಗಳ ರೂಪ ಪಡೆದಿರಬಹುದು. ಇದು ಕೋಸಂಬೀಯವರ ಅಭಿಪ್ರಾಯ (ಪ್ರಸ್ತಾವನೆ ; ಪುಟಗಳು ೫೭, ೩೨ ಮತ್ತು ೭೮).

ಶತಕತ್ರಯದ ಪದ್ಯಗಳು ಏಕಕರ್ತೃಕಗಳಾಗಿದ್ದರೆ, ಗ್ರಂಥಕಾರ ಕ್ರಿಸ್ತಶಕದ ಮೊದಲಿನ ಶತಕಗಳವನಿರಬೇಕೆಂದೂ[2] ಮತ್ತು ಅವನು ವಾಕ್ಯಪದೀಯಕಾರ ಭರ್ತೃಹರಿಗಿಂತ ಭಿನ್ನನೆಂದೂ ಕೋಸಂಬೀಯವರ ಮತ. ಈ ವಿಷಯವನ್ನು ಮುಂದೆ ಪರಿಶೀಲಿಸಲಾಗುತ್ತದೆ.

## 'ವಾಕ್ಯಪದೀಯ' ಮತ್ತು 'ಮಹಾಭಾಷ್ಯ ದೀಪಿಕಾ'

ಪುಣೆ ವಿಶ್ವವಿದ್ಯಾಲಯದಿಂದ ಪ್ರಕಟಿತವಾದ ವಾಕ್ಯಪದೀಯದ ಸಂಪಾದಕರು, ತಮ್ಮ ಉಪೋದ್ಘಾತದಲ್ಲಿ,[3] "ಭರ್ತೃಹರಿಃ ವಾಕ್ಯಪದೀಯಪ್ರಕೀರ್ಣಕಯೋಃ ಕರ್ತಾ

ಭೂತೋ ವೇದಾಂಗತ್ವಾತ್ ಪ್ರಮಾಣತ ಶಬ್ದಶಾಸ್ತ್ರಃ" ಎಂದು ಬರೆದಿದ್ದಾನೆಂದು ಹೇಳಿ, 'ವಾಕ್ಯಪದೀಯ' ಮತ್ತು 'ಮಹಾಭಾಷ್ಯದೀಪಿಕೆ'ಗಳನ್ನು ತುಲನೆ ಮಾಡಿ ನೋಡಿದರೆ ಅವೆರಡೂ ಏಕಕರ್ತೃಕಗಳೆಂದು ವಿದಿತವಾಗುವುದೆಂದು ಸೋದಾಹರಣವಾಗಿ ನಿರೂಪಿಸಿದ್ದಾರೆ. ಈ ಭರ್ತೃಹರಿಯು ವೈದಿಕ ಪಂಥಕ್ಕೆ ಸೇರಿದವನೆಂದೂ, ವಿಕ್ರಮಸಂವತ್ ೪೦೦ ಕ್ಕಿಂತ ಅರ್ವಾಚೀನನಲ್ಲವೆಂದೂ ಇವರ ಮತ.

ಕೈಯಟನು ತನ್ನ 'ಮಹಾಭಾಷ್ಯಪ್ರದೀಪ'ದ ಆದಿಯಲ್ಲಿ ಭರ್ತೃಹರಿಗೆ ತನ್ನ ಗೌರವಪೂರ್ವಕವಾದ ಕೃತಜ್ಞತೆಯನ್ನು ಹೀಗೆ ಸಲ್ಲಿಸಿದ್ದಾನೆ :

ಭಾಷ್ಯಾಬ್ಧಿಃ ಕ್ವಾತಿ ಗಂಭೀರಃ ಕ್ವಾಹಂ ಮಂದಮತಿಸ್ತತಃ ।
ಛಾತ್ರಾಣಾಮುಪಹಾಸ್ಯತ್ವಂ ಯಾಸ್ಯಾಮಿ ಪಿಶುನಾತ್ಮನಾಂ ॥
ತಥಾಪಿ ಹರಿಬದ್ಧೇನ ಸಾರೇಣ ಗ್ರಂಥಸೇತುನಾ ।
ಕ್ರಮಮಾಣಃ ಶನೈಃ ಪಾರಂ ತಸ್ಯ ಪ್ರಾಪ್ಸ್ಯಾಮಿ ಪಂಗುವತ್ ॥

[ಅಗಾಧವಾದ ಭಾಷ್ಯ ಸಮುದ್ರವೆಲ್ಲಿ ; ಮಂದಮತಿಯಾದ ನಾನೆಲ್ಲಿ ! ಆದುದರಿಂದ (ಆ ಸಮುದ್ರ ಪ್ರವೇಶ ಮಾಡಹೊರಟಿರುವ) ನಾನು ದುಷ್ಟ ವಿದ್ಯಾರ್ಥಿಗಳ ಅಪಹಾಸ್ಯಕ್ಕೀಡಾಗುತ್ತೇನೆ. ಆದರೂ ಭರ್ತೃಹರಿರಚಿತವಾದ ಸುದೃಢವಾದ ಗ್ರಂಥಸೇತುವಿನ ಸಹಾಯದಿಂದ, ಹೆಳವನಂತೆ ಮೆಲ್ಲನೆ ಮುಂದುವರಿಯುತ್ತಾ, ಅದರ ಆಚೆಯ ದಡವನ್ನು ಸೇರುತ್ತೇನೆ.]

ಕೈಯಟನೇ ಮೊದಲಾದ ವೈಯಾಕರಣರೇ ಅಲ್ಲದೆ ಅನೇಕ ವೈದಿಕ, ಬೌದ್ಧ, ಜೈನ ದಾರ್ಶನಿಕರೂ ಇತರ ಶಾಸ್ತ್ರಕಾರರೂ ವಾಕ್ಯಪದೀಯದ ಕಾರಿಕೆಗಳನ್ನು ತಮ್ಮ ಗ್ರಂಥಗಳಲ್ಲಿ ಪ್ರಮಾಣಗಳಾಗಿಯೋ ಖಂಡನಾರ್ಥವಾಗಿಯೋ ಉದಾಹರಿಸಿದ್ದಾರೆ. ಇವುಗಳನ್ನು 'ವಾಕ್ಯಪದೀಯ'ದ ಪುಣೆಯ ಆವೃತ್ತಿಯ ಸಂಪಾದಕರು ಸಂಗ್ರಹಿಸಿ, ೧೬೦ ಪುಟಗಳಷ್ಟು ದೊಡ್ಡದಾದ ಹಿನೆಯ ಅನುಬಂಧವಾಗಿ ಕೊಟ್ಟಿದ್ದಾರೆ. ದಿಙ್ನಾಗನು (ಸುಮಾರು ಕ್ರಿ. ಶ. ೪೮೦–೫೪೦) ತನ್ನ 'ತ್ರೈಕಾಲ್ಯಪರೀಕ್ಷಾ' ಎಂಬ ಗ್ರಂಥದಲ್ಲಿ 'ವಾಕ್ಯಪದೀಯ'ದ ಕಾರಿಕೆಗಳನ್ನು ಉದಾಹರಿಸಿರುವುದರಿಂದ ಭರ್ತೃಹರಿಯ ಕಾಲ ಕ್ರಿ.ಶ. ೪೫೦ ಮತ್ತು ೫೦೦ರ ಮಧ್ಯವರ್ತಿ ಇರಬಹುದೆಂದೂ ಇವರು ಹೇಳಿದ್ದಾರೆ.[6]

ಮೀಮಾಂಸಾವೃತ್ತಿಯು ಶಬರಸ್ವಾಮಿಗಿಂತಲೂ ಪ್ರಾಚೀನವೆಂದು ಪಂಡಿತ ರಾಮಕೃಷ್ಣ ಕವಿ ಹೇಳಿದ್ದಾರೆ : (೨) 'ವೇದಾಂತ ಸೂತ್ರವೃತ್ತಿ' : ಇದು ಅನುಪಲಬ್ಧ. ಯಾಮುನಾಚಾರ್ಯರು ಸಿದ್ಧಿತ್ರಯವೆಂಬ ಗ್ರಂಥದಲ್ಲಿ ಹೇಳಿರುವ ವೇದಾಂತಸೂತ್ರ ವ್ಯಾಖ್ಯಾನಕಾರರ ಹೆಸರುಗಳಲ್ಲಿ ಭರ್ತೃಹರಿಯದೂ ಸಹ ಸೇರಿದೆ ; (೩) 'ಶಬ್ದಧಾತು ಸಮೀಕ್ಷಾ' : ಪಂಡಿತ ಮಾಧವಕೃಷ್ಣ ಶರ್ಮರು ತಮ್ಮ ಲೇಖನವೊಂದರಲ್ಲಿ ಈ ಗ್ರಂಥ ಭರ್ತೃಹರಿಕೃತವೆಂದು ಹೇಳಿದ್ದಾರೆ.

## 'ಭಾಗವೃತ್ತಿ'

ಪುರುಷೋತ್ತಮದೇವನು (ಕ್ರಿ.ಶ. ೧೨ನೆಯ ಶತಮಾನ) ತನ್ನ ಭಾಷಾವೃತ್ತಿಯ ಕೊನೆಯಲ್ಲಿ, "ಕಾಶಿಕಾಭಾಗವೃತ್ತಿಗಳ ಸಿದ್ಧಾನ್ತವನ್ನು ತಿಳಿಯಬೇಕೆಂಬ ಮನಸ್ಸಿದ್ದರೆ ನನ್ನ ಭಾಷಾವೃತ್ತಿಯ ಚಿಂತನೆ ನಡೆಯಲಿ" ಎಂದು ಹೇಳಿದಾಗ 'ಕಾಶಿಕಾವೃತ್ತಿ' ಮತ್ತು 'ಭಾಗವೃತ್ತಿ'ಗಳಿಗೆ ಸಮಾನಸ್ಥಾನವನ್ನು ಕೊಟ್ಟಿದ್ದಾನೆ.[8] ಇವನಿಗಿಂತ ಪ್ರಾಚೀನನಾದ ಕೈಯಟ, ಪದಮಂಜರೀಕಾರ ಹರದತ್ತ, ಭಟ್ಟೋಜಿ ದೀಕ್ಷಿತ, ನಾಗೇಶಭಟ್ಟ ಮತ್ತು ಇನ್ನೂ ಅನೇಕ ವೈಯಾಕರಣರೂ ಕೋಶಕಾರರೂ ಸಹ 'ಭಾಗವೃತ್ತಿ'ಯ ಉಲ್ಲೇಖ ಮಾಡಿದ್ದರೂ ಆ ಗ್ರಂಥ ಉಪಲಬ್ಧವಿಲ್ಲ. ಇತರ ವೈಯಾಕರಣರೂ ಕೋಶಕಾರರೂ ಈ ಗ್ರಂಥದಿಂದ ಉದ್ಧರಿಸಿರುವ ೧೮೮ ಉದ್ಧರಣಗಳನ್ನು, ಯುಧಿಷ್ಠಿರ ಮೀಮಾಂಸಕರು ಸಂಗ್ರಹಿಸಿ 'ಭಾಗವೃತ್ತಿಸಂಕಲನಂ' ಎಂಬ ಹೆಸರಿನಲ್ಲಿ ಪುಸ್ತಕರೂಪವಾಗಿ ಪ್ರಕಟಿಸಿದ್ದಾರೆ.[9]

"ಸಂಬುದ್ಧೌ ಶಾಕಲ್ಯಸ್ಯೇತಾವನಾರ್ಷೇ" (೧-೧-೧೬) ಎಂಬ ಪಾಣಿನಿಸೂತ್ರದ ವೃತ್ತಿಯಲ್ಲಿ, ಪುರುಷೋತ್ತಮದೇವನು "ಅನಾರ್ಷೇ ಇತ್ಯೇಕವೃತ್ತಾವುಪಯುಕ್ತಂ" ಎಂದು ಹೇಳಿದ್ದಾನೆ. ಇದಕ್ಕೆ ವ್ಯಾಖ್ಯಾನ ಮಾಡುತ್ತಾ, ಸೃಷ್ಟಿಧರಚಕ್ರವರ್ತಿಯು ತನ್ನ ಭಾಷಾವೃತ್ತ್ಯರ್ಥವಿವೃತಿಯಲ್ಲಿ "ಏಕವೃತ್ತಿ ಎಂದರೆ ಕಾಶಿಕಾವೃತ್ತಿ" ಎಂದು ವಿವರಿಸಿದ್ದಾನೆ.[10] ಯುಧಿಷ್ಠಿರ ಮೀಮಾಂಸಕರು ಇದನ್ನುಲ್ಲೇಖಿಸಿ, ಇದಕ್ಕೆ ಹಿಂದಿನ ಅಷ್ಟಾಧ್ಯಾಯೀವೃತ್ತಿಗಳಲ್ಲೆಲ್ಲ ಎಲ್ಲ ಸೂತ್ರಗಳಿಗೂ ಪಾಣಿನಿಯ ಕ್ರಮದಲ್ಲೇ ವ್ಯಾಖ್ಯಾನವಿದ್ದಿತೆಂದೂ 'ಭಾಗವೃತ್ತಿ'ಯಲ್ಲಿ ಮೊದಲ ಬಾರಿಗೆ ಲೌಕಿಕ ವೈದಿಕಸೂತ್ರಗಳನ್ನು ವಿಭಜಿಸಿ ವ್ಯಾಖ್ಯಾನ ಮಾಡಿದುದರಿಂದ ಇದಕ್ಕೆ ಭಾಗವೃತ್ತಿಯೆಂದೂ ಇದಕ್ಕೆ ಪ್ರತಿಪಕ್ಷದಂತಿದ್ದ ಕಾಶಿಕಾವೃತ್ತಿಗೆ ಏಕವೃತ್ತಿಯೆಂದೂ ಹೆಸರಾಯಿತೆಂದು ನಿರೂಪಿಸಿದ್ದಾರೆ.[11]

ಗ್ರಂಥಕಾರನ ವಿಷಯವಾಗಿ ಯುಧಿಷ್ಠಿರಮೀಮಾಂಸಕರು ಹೀಗೆ ಬರೆದಿದ್ದಾರೆ: ಭಾಷಾವೃತ್ತಿವ್ಯಾಖ್ಯಾನಕಾರನಾದ ಸೃಷ್ಟಿಧರಾಚಾರ್ಯನು, "ವಲಭೀನಗರಸ್ಯ ರಾಜ್ಞಃ ಶ್ರೀಧರಸೇನಸ್ಯಾಜ್ಞಯಾ ಭರ್ತೃಹರಿಣಾ ಭಾಗವೃತ್ತಿರ್ವಿರಚಿತಾ" ಎಂದು ಹೇಳಿದ್ದಾನೆ. ಕಾತಂತ್ರಪರಿಶಿಷ್ಟಕಾರ ಶ್ರೀಪತಿದತ್ತನು "ವಿಮಲಮತಿನಾಮಕೇನ ಕೇನಚಿದ್ವಿದುಷೇಯಂ ಭಾಗವೃತ್ತಿರ್ವಿರಚಿತಾ" ಎಂದಿದ್ದಾನೆ. ಆದರೆ ಇವುಗಳಲ್ಲಿ ಪರಸ್ಪರ ವಿರೋಧವಿಲ್ಲ.

ಭಾಗವೃತ್ತಿಕಾರನ ಹೆಸರು ವಿಮಲಮತಿ. ವಾಕ್ಯಪದೀಯಕಾರನಾದ ಭರ್ತೃಹರಿಯಂತೆ ಇವನೂ ವ್ಯಾಕರಣಪಾಂಡಿತ್ಯವನ್ನು ಪ್ರದರ್ಶಿಸುವ 'ಭಾಗವೃತ್ತಿ'ಯನ್ನು ರಚಿಸಿದುದರಿಂದ, ಮುಂದೆ ಭರ್ತೃಹರಿಯೆಂಬ ಹೆಸರಿನಿಂದ ಪ್ರಸಿದ್ಧನಾದನು.

ವಲಭಿಯಲ್ಲಿ ಶ್ರೀಧರಸೇನನೆಂಬ ಹೆಸರಿನ ನಾಲ್ವರು ರಾಜರು ಆಳಿದರೆಂದೂ (ಇವರ ಕಾಲದ ವ್ಯಾಪ್ತಿ ವಿಕ್ರಮ ಸಂವತ್ ೫೫೭ರಿಂದ ೭೦೫ರವರೆಗೆ), ನಾಲ್ಕನೆಯ ಶ್ರೀಧರಸೇನನ ಕಾಲ (ವಿ.ಸಂ. ೭೦೨ರಿಂದ ೭೦೫)ದಲ್ಲಿ ಭಾಗವೃತ್ತಿ ರಚಿತವಾಯಿತೆಂದೂ ಯುಧಿಷ್ಠಿರ ಮೀಮಾಂಸಕರ ಅಭಿಪ್ರಾಯ.[12]

ಇವನು ಬೇರೆ ಯಾವ ಗ್ರಂಥವನ್ನೂ ಬರೆದಂತೆ ಕಾಣುವುದಿಲ್ಲ.

## 'ರಾವಣವಧಕಾವ್ಯ'

ಈ ಕಾವ್ಯವು 'ಭಟ್ಟಿಕಾವ್ಯ'ವೆಂದು ಪ್ರಸಿದ್ಧವಾಗಿದೆ. ವಿದ್ವಜ್ಜನರ ರಂಜನೆಗಾಗಿ ಬರೆದ ಕಾವ್ಯವಿದು. ರಸಿಕರಂಜನೆಗಿಂತ ವ್ಯಾಕರಣಶಾಸ್ತ್ರದ ಶಬ್ದವೈಚಿತ್ರ್ಯ ಪ್ರದರ್ಶನವೇ ಕವಿಯ ಮುಖ್ಯ ಉದ್ದೇಶವಾಗಿದೆ. ಕವಿಯೇ, ಗ್ರಂಥದ ಕೊನೆಯಲ್ಲಿ, ತನ್ನ ಉದ್ದೇಶವನ್ನು ಹೀಗೆ ಹೇಳಿಕೊಂಡಿದ್ದಾನೆ :

ದೀಪತುಲ್ಯಃ ಪ್ರಬಂಧೋಽಯಂ ಶಬ್ದಲಕ್ಷಣಚಕ್ಷುಷಾಂ ।
ಹಸ್ತಾಮರ್ಷ ಇವಾಂಧಾನಾಂ ಭವೇದ್ವ್ಯಾಕರಣಾದೃತೇ ॥
ವ್ಯಾಖ್ಯಾಗಮ್ಯಮಿದಂ ಕಾವ್ಯಮುತ್ಸವಃ ಸುಧಿಯಾಮಲಂ ।
ಹತಾ ದುರ್ಮೇಧಸಶ್ಚಾಸ್ಮಿನ್ ವಿದ್ವತ್ಪ್ರಿಯಚಿಕೀರ್ಷಯಾ ॥ (೨೨-೩೩, ೩೪)

[ವ್ಯಾಕರಣಶಾಸ್ತ್ರವನ್ನು ಬಲ್ಲವರಿಗೆ ಈ ಪ್ರಬಂಧವು ದೀಪವಿದ್ದಂತೆ. ವ್ಯಾಕರಣ ಜ್ಞಾನವಿಲ್ಲದಿದ್ದರೆ ಕುರುಡರಂತೆ ತಡವರಿಸಬೇಕಾದೀತು. ವ್ಯಾಖ್ಯಾನದ ಸಹಾಯದಿಂದ ಅರ್ಥಮಾಡಿಕೊಳ್ಳಬೇಕಾದ ಈ ಕಾವ್ಯವು ಬುದ್ಧಿವಂತರಿಗೆ ತುಂಬ ಸಂತೋಷವನ್ನುಂಟು ಮಾಡುತ್ತದೆ. ವಿದ್ವಾಂಸರಿಗೆ ಪ್ರಿಯವಾಗಲೆಂದು ರಚಿತವಾದ ಈ ಕಾವ್ಯದಲ್ಲಿ ಮಂದಮತಿಗಳಿಗೆ ನಿರಾಶೆಯಾಗುತ್ತದೆ.]

ಈ ಕವಿ ಮಹಾವೈಯಾಕರಣ. ಈ ಕಾವ್ಯಕ್ಕೆ ಅನೇಕ ವ್ಯಾಖ್ಯಾನಗಳಿವೆ. ವ್ಯಾಖ್ಯಾನಕಾರರು ಕವಿಯ ಹೆಸರನ್ನು, ಭರ್ತೃಸ್ವಾಮಿ, ಭರ್ತೃಹರಿ, ಭಟ್ಟಿ ಹೀಗೆ ಬೇರೆ ಬೇರೆ ವಿಧದಲ್ಲಿ ಹೇಳಿದ್ದಾರೆ.

ತನ್ನ ಕಾವ್ಯವು ವಲಭಿಯಲ್ಲಿ ಶ್ರೀಧರಸೇನನು ಆಳುತ್ತಿದ್ದಾಗ ರಚಿತವಾಯಿತೆಂದು ಕವಿ ಕೊನೆಯ ಶ್ಲೋಕದಲ್ಲಿ ಹೇಳಿಕೊಂಡಿದ್ದಾನೆ. ("ಕಾವ್ಯಮಿದಂ ವಿಹಿತಂ ಮಯಾ ವಲಭ್ಯಾಂ ಶ್ರೀಧರಸೇನನರೇಂದ್ರಪಾಲಿತಾಯಾಂ") ವಲಭಿಯಲ್ಲಿ ರಾಜ್ಯವಾಳಿದ ನಾಲ್ವರು ಧರಸೇನರ ಪೈಕಿ ಯಾವ ಧರಸೇನನ ಕಾಲದಲ್ಲಿ ಭಟ್ಟಿಯಿದ್ದನೆಂದು ಹೇಳಲು ಆಧಾರ ದೊರಕಿಲ್ಲವೆಂದೂ, ೬ನೆಯ ಶತಮಾನದಲ್ಲಿದ್ದ ಭಾಮಹನ ಗ್ರಂಥವನ್ನು ಭಟ್ಟಿಯು ಪರಿಶೀಲಿಸಿರಬೇಕೆಂದೂ ಸಂಸ್ಕೃತ ಭಾಷಾಶಾಸ್ತ್ರ ಮತ್ತು ಸಾಹಿತ್ಯ ಚರಿತ್ರೆಯಲ್ಲಿ ಹೇಳಲಾಗಿದೆ.[13]

ಯುಧಿಷ್ಠಿರ ಮೀಮಾಂಸಕರು, ಭಟ್ಟಿ ಮತ್ತು ಭಾಮಹರ ಪೂರ್ವಾಪರತ್ವ ವಿಷಯದಲ್ಲಿರುವ ಭಿನ್ನಾಭಿಪ್ರಾಯಗಳನ್ನು ವಿವರಿಸಿ ಭಟ್ಟಿಯು ವಲಭಿಯ ಮೂರನೆಯ ಶ್ರೀಧರಸೇನನ ಕಾಲದಲ್ಲಿ (ವಿಕ್ರಮ ಸಂವತ್ ೬೬೦–೬೭೭) ಈ ಕಾವ್ಯವನ್ನು ರಚಿಸಿರಬಹುದೆಂದು ಹೇಳಿದ್ದಾರೆ.[14]

ಭಟ್ಟಿಯ ಬೇರೆ ಯಾವ ಕೃತಿಯ ಉಲ್ಲೇಖವೂ ದೊರೆತಿಲ್ಲ.

## ವಾಕ್ಯಪದೀಯಕಾರ, ಭಾಗವೃತ್ತಿಕಾರ ಮತ್ತು ಭಟ್ಟಿ

ಈ ಮೂವರು ವೈಯಾಕರಣರೂ ಪರಸ್ಪರ ಭಿನ್ನರೆಂದು ಹಿಂದೆ ಕೊಟ್ಟಿರುವ ಅವರ ಕಾಲಮಾನಗಳಿಂದಲೇ ತಿಳಿಯಬಂದರೂ, ಅವರ ಭಿನ್ನತ್ವಕ್ಕೆ ಇತರ ಕಾರಣಗಳನ್ನೂ ಯುಧಿಷ್ಠಿರ ಮೀಮಾಂಸಕರು ತಮ್ಮ ವ್ಯಾಕರಣದ ಇತಿಹಾಸ ಗ್ರಂಥದಲ್ಲಿ ಕೊಟ್ಟಿದ್ದಾರೆ. ಅವು ಇಂತಿವೆ :

**(i)** (ಅ) ಪುರುಷೋತ್ತಮ ದೇವನು ತನ್ನ ಭಾಷಾವೃತ್ತಿಯಲ್ಲಿ (ಸೂತ್ರ ೨–೪–೭೪) ಭಾಗವೃತ್ತಿಕಾರನ ಮತವನ್ನು ಖಂಡಿಸಿ, ತನ್ನ ಮತದ ಮಂಡನೆಗಾಗಿ ಭಟ್ಟಿಕಾವ್ಯದ ಪ್ರಯೋಗವನ್ನು ಉದಾಹರಿಸಿದ್ದಾನೆ. (ಆ) ಭಾಷಾವೃತ್ತಿಯ ಅವಲೋಕನದಿಂದ (ಸೂತ್ರ ೫–೨–೧೧೨) ಭಾಗವೃತ್ತಿಕಾರ ಭಟ್ಟಿಗಿಂತ ಈಚಿನವನೆಂದು ವಿದಿತವಾಗುತ್ತದೆ. (ಇ) ಭಾಗವೃತ್ತಿಯ ಎಲ್ಲ ಉಪಲಬ್ಧ ಉದ್ಧರಣಗಳನ್ನು ನೋಡಿದರೆ, ಆ ಗ್ರಂಥಕಾರ ಮಹಾಭಾಷ್ಯದ ನಿಯಮಗಳನ್ನು ಎಲ್ಲಿಯೂ ಸ್ವಲ್ಪವೂ ಮೀರಿರುವುದು ಕಂಡುಬರುವುದಿಲ್ಲ. ಆದರೆ ಭಟ್ಟಿಕಾವ್ಯದಲ್ಲಿ ಭಾಷ್ಯವಿರುದ್ಧವಾದ ಪ್ರಯೋಗಗಳಿವೆ.[15] **(ii)** (ಅ) ಪುರುಷೋತ್ತಮದೇವ, ಸೀರದೇವ, ದುರ್ಘಟವೃತ್ತಿಕಾರ ಶರಣದೇವ ಮುಂತಾದವರು ಅನೇಕ ಕಡೆ ಭರ್ತೃಹರಿಯ ಮತ್ತು ಭಾಗವೃತ್ತಿಕಾರನ ಮತಗಳೆರಡನ್ನೂ ಕೊಟ್ಟಿದ್ದಾರೆ. ಕೆಲವು ಕಡೆ ಮತಭೇದ ಕಂಡುಬರುತ್ತದೆ. ಬೇರೆ ಕಡೆ ಭಾಗವೃತ್ತಿಕಾರ ಭರ್ತೃಹರಿಯ ಮತವನ್ನು ಖಂಡಿಸಿರುವುದೂ ಉಂಟು.[15] (ಆ) ಕಾಶಿಕಾವೃತ್ತಿಯ ರಚನೆಯಾದ ಮೇಲೆ ಭಾಗವೃತ್ತಿ ರಚಿತವಾಯಿತೆಂಬುದು ನಿರ್ವಿವಾದ. ಕಾಶಿಕಾವೃತ್ತಿಯಲ್ಲಿ 'ವಾಕ್ಯಪದೀಯ'ದ ಉಲ್ಲೇಖವಿರುವುದರಿಂದ 'ವಾಕ್ಯಪದೀಯ' ಅದಕ್ಕಿಂತ ಪ್ರಾಚೀನವಾದ ಗ್ರಂಥ[16–17]

ಹಿಂದೆಯೇ ಹೇಳಿರುವಂತೆ ಭಾಗವೃತ್ತಿಕಾರನು ಯಾವ ಕಾವ್ಯವನ್ನೂ ಬರೆದಂತೆ ತಿಳಿದುಬಂದಿಲ್ಲವಾದುದರಿಂದಲೂ ಭಟ್ಟಿಯು ವೈಯಾಕರಣನಾದ ಕವಿಯಾದರೂ ಅವನು ಯಾವ ಶಾಸ್ತ್ರಗ್ರಂಥವನ್ನೂ ಬರೆದಂತಿಲ್ಲವಾದುದರಿಂದಲೂ "ಮಹಾಕವಿರ್ಮಹಾವಿದ್ವಾನ್" ಎಂಬುದು ಇವರಿಬ್ಬರಲ್ಲಿ ಯಾರಿಗೂ ಅನ್ವಯಿಸಲಾರದು.

## ವಾಕ್ಯಪದೀಯಕಾರ ಮತ್ತು ಶತಕತ್ರಯಕಾರ

ಒಬ್ಬನೇ ಭರ್ತೃಹರಿ ವಾಕ್ಯಪದೀಯವನ್ನೂ ಶತಕತ್ರಯಗಳನ್ನೂ ರಚಿಸಿದನೆಂದು ಕನಿಷ್ಠ ಪಕ್ಷ ಮೂರು ಶತಮಾನಗಳಿಂದಲಾದರೂ, ವಿದ್ವದ್ವೃಂದದಲ್ಲಿ ಪ್ರಚಾರದಲ್ಲಿದೆ. ರಾಮಭದ್ರ ದೀಕ್ಷಿತನು (ಕ್ರಿ.ಶ. ೧೭ನೆಯ ಶತಮಾನ) ತನ್ನ ಪತಂಜಲಿಚರಿತವೆಂಬ ಕಾವ್ಯ

ದಲ್ಲಿ ಭರ್ತೃಹರಿಯು ಶತಕತ್ರಯವನ್ನೂ 'ವಾಕ್ಯಪದೀಯ'ವನ್ನೂ ರಚಿಸಿದನೆಂದೂ 'ವಾಕ್ಯಪದೀಯ'ಕ್ಕೆ ಹೇಲಾರಾಜನು ವ್ಯಾಖ್ಯಾನವನ್ನು ಬರೆದನೆಂದೂ ಹೇಳಿದ್ದಾನೆ.[18] ದೀಕ್ಷಿತನು ಪರಿಭಾಷಾವೃತ್ತಿ ವ್ಯಾಖ್ಯಾನವನ್ನೂ ಬರೆದಿರುವುದರಿಂದ ಇವನು ವೈಯಾಕರಣನೂ ಹೌದು. ಇವನ ಮೇಲಿನ ಹೇಳಿಕೆಗೆ ಏನಾದರೂ ಆಧಾರವಿದ್ದಿತೋ ಅಥವಾ ಇದೇ ಕಾವ್ಯದ ೭ನೇ ಸರ್ಗದಲ್ಲಿ ಹೇಳಿರುವ, ವರರುಚಿ, ವಿಕ್ರಮಾರ್ಕ, ಭಟ್ಟಿ ಮತ್ತು ಭರ್ತೃಹರಿ ಇವರು ನಾಲ್ವರೂ ಚಂದ್ರಗುಪ್ತನೆಂಬ ಬ್ರಾಹ್ಮಣನ ಪುತ್ರರೆಂಬ ಕಥೆಯಂತೆ ಇದೂ ದಂತಕಥೆಯೋ ತಿಳಿಯದು.

ಆಧುನಿಕ ವಿದ್ವಾಂಸರು ಈ ಇಬ್ಬರು ಗ್ರಂಥಕಾರರ ಏಕತ್ವ ಭಿನ್ನತ್ವ ವಿಷಯದಲ್ಲಿ ಬೇರೆ ಬೇರೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಸಂಸ್ಕೃತ ಭಾಷಾಶಾಸ್ತ್ರ ಮತ್ತು ಸಾಹಿತ್ಯ ಚರಿತ್ರೆಯಲ್ಲಿ ವಾಕ್ಯಪದೀಯಕಾರನೂ ಶತಕತ್ರಯವನ್ನು ಬರೆದ ಭರ್ತೃಹರಿಯೂ ಒಬ್ಬನೋ ಅಲ್ಲವೋ ನಿರ್ಣಯವಾಗಿಲ್ಲವೆಂದು ಹೇಳಲಾಗಿದೆ. ಯುಧಿಷ್ಠಿರ ಮೀಮಾಂಸಕರು ಶತಕತ್ರಯಕಾರ ಯಾವ ಭರ್ತೃಹರಿ ಯೆಂಬುದು ಅಜ್ಞಾತವೆಂದಿದ್ದಾರೆ. 'ವಾಕ್ಯಪದೀಯ'ದ ಪುಣೆ ಆವೃತ್ತಿಯ ಸಂಪಾದಕರು, ವಾಕ್ಯಪದೀಯದ ಕರ್ತೃವೂ ಶತಕತ್ರಯಕಾರನೂ ಒಬ್ಬನೇ ಅಲ್ಲವೆಂದು ನಮಗೆ ತೋರುತ್ತದೆಯೆಂದು ಹೇಳಿದ್ದಾರೆ; ಆದರೆ ಈ ಅಭಿಪ್ರಾಯಕ್ಕೆ ಕಾರಣವೇನನ್ನೂ ಹೇಳಿಲ್ಲ.

ಕೋಸಂಬೀಯವರು ಈ ಇಬ್ಬರು ಗ್ರಂಥಕಾರರೂ ಭಿನ್ನರೆಂದು ಹೇಳಲು ಈ ಕಾರಣಗಳನ್ನು ಕೊಟ್ಟಿದ್ದಾರೆ:

(೧) ಇತ್ಸಿಂಗನ ಪ್ರಕಾರ, 'ವಾಕ್ಯಪದೀಯ'ದ ಕರ್ತೃ ಭರ್ತೃಹರಿಯು ಕ್ರಿ.ಶ. ೬೫೨ ರಲ್ಲಿ ಮೃತನಾದನು ಮತ್ತು ಅವನು ಧರ್ಮನಿಷ್ಠನಾದ ಬೌದ್ಧ. ಶತಕತ್ರಯದಲ್ಲಿನ ಕೆಲವು ಸುಭಾಷಿತಗಳು ಮೂಲ ಪಂಚತಂತ್ರದಲ್ಲೂ ಶಾಕುಂತಲನಾಟಕದಲ್ಲೂ ಕಂಡುಬರುತ್ತವೆ ಯಾದುದರಿಂದ ಶತಕತ್ರಯಕಾರ ಈ ಗ್ರಂಥಗಳ ಕಾಲಕ್ಕಿಂತ ಹಿಂದಿನವನು; ಕ್ರಿ.ಶ. ೭ನೆಯ ಶತಮಾನದಷ್ಟು ಅರ್ವಾಚೀನ ಕಾಲದವನಲ್ಲ. ಶತಕತ್ರಯದಲ್ಲಿ ಬೌದ್ಧಧರ್ಮಿಯು ಬರೆದಿರಬಹುದಾದ ಪದ್ಯಗಳಾವುವೂ ಕಂಡುಬರುವುದಿಲ್ಲ.

(೨) ಶತಕತ್ರಯದಲ್ಲಿ ಪಾಣಿನಿವ್ಯಾಕರಣ ಸಮ್ಮತವಲ್ಲದ ಪ್ರಯೋಗಗಳಿವೆ. ಪಾಣಿನಿ ವ್ಯಾಕರಣ ಸಂಪ್ರದಾಯದ ಮಹಾವೈಯಾಕರಣನಾದ ವಾಕ್ಯಪದೀಯಕಾರ ಭರ್ತೃಹರಿಯು ಬರೆದ ಕೃತಿಯಲ್ಲಿ ಇಂತಹ ಅಪಪ್ರಯೋಗಗಳಿರಲಾರವು:[19] ಭರ್ತೃಹರಿಯ ಮಹಾಭಾಷ್ಯದ ಟೀಕೆಯಲ್ಲಿ ಮನುಷ್ಯ ಜೀವನದ ಮತ್ತು ವ್ಯಾಕರಣಶಾಸ್ತ್ರದ ಮೂಲ ತತ್ತ್ವಗಳ ಪೂರ್ಣಪ್ರತಿಪಾದನೆಯೂ ಅನೇಕ ಕುಟುಂಬಗಳ ಏಳುಬೀಳುಗಳಿಗೆ ಕಾರಣಗಳ ನಿರೂಪಣೆಯೂ ಇವೆಯೆಂದು ಇತ್ಸಿಂಗನು ಹೇಳಿದ್ದಾನೆ! ಕಾಶಿಕಾವೃತ್ತಿಯು ವಿಶ್ವದ ನಿಯಮಗಳನ್ನೂ ದೇವತೆಗಳ ಮತ್ತು ಮನುಷ್ಯರ ನಿಬಂಧನೆಗಳನ್ನೂ ಸ್ಪಷ್ಟೀಕರಿಸುತ್ತದೆ ಯೆಂದೂ ಅವನ ಹೇಳಿಕೆ!

ಇಂತಹ ವಿಲಕ್ಷಣವಾದ ವಿವರಣೆಗಳನ್ನು ನೋಡಿದರೆ, ಇತ್ಸಿಂಗನು ಆ ಗ್ರಂಥಗಳನ್ನು

ಧರ್ಮವನ್ನು ಸ್ವೀಕರಿಸಿ ಮೃತನಾದನೆಂದೂ ಇತ್ಸಿಂಗನು ಬರೆದಿರುವುದು ಇವನ ಮರಣದ ವಿಷಯವೆಂದೂ ಭಾಗೀರಥ ಪ್ರಸಾದ ತ್ರಿಪಾಠಿಗಳ ಮತ. ಭಟ್ಟಿಯು ಬೌದ್ಧ ಧರ್ಮವನ್ನು ಸ್ವೀಕರಿಸಿದ್ದನೆಂದು ಹೇಳಲು ಆಧಾರವೇನೆಂದು ತ್ರಿಪಾಠಿಗಳು ಹೇಳಿಲ್ಲ.[24]

ಕೋಸಂಬೀಯವರು ಶತಕತ್ರಯದ ಕೆಲವು ಶ್ಲೋಕಗಳಲ್ಲಿ ಅಪಪ್ರಯೋಗಗಳಿವೆ ಯೆಂದೂ ಕೆಲವು ಶ್ಲೋಕಗಳು ಪಂಚತಂತ್ರ, ಶಾಕುಂತಲಗಳಲ್ಲಿ ಕಂಡುಬರುತ್ತವೆಯೆಂದೂ ಹೇಳಿದ್ದಾರಷ್ಟೆ. ಈ ಶ್ಲೋಕಗಳು ಪ್ರಕ್ಷಿಪ್ತಗಳಿರಬಹುದಾದುದರಿಂದ ಇಬ್ಬರು ಗ್ರಂಥ ಕಾರರ ಏಕತ್ವ ಭಿನ್ನತ್ವದ ಅಥವಾ ಶತಕಕಾರನ ಕಾಲದ ನಿರ್ಣಯಕ್ಕೆ ಇವು ಸಾಧಕ ಗಳಾಗಲಾರವು. ಕೋಸಂಬೀಯವರಿಗೆ ಸಿಕ್ಕಿದ ಶತಕಗಳ ಅತಿಪ್ರಾಚೀನ ಹಸ್ತಪ್ರತಿ ಕ್ರಿ.ಶ. ೧೫ನೆಯ ಶತಮಾನದ್ದೆಂದು ಅವರೇ ಹೇಳಿದ್ದಾರೆ. ಆ ಕಾಲಕ್ಕಾಗಲೇ ಗ್ರಂಥರಚನೆಯಾಗಿ ಸಾವಿರ ವರ್ಷಗಳಷ್ಟು ಕಾಲ ಕಳೆದಿತ್ತು. ಈ ಗ್ರಂಥದ ಔತ್ತರೇಯ ಮತ್ತು ದಾಕ್ಷಿಣಾತ್ಯ ಪಾಠಸಂಪ್ರದಾಯಗಳು ಹುಟ್ಟುವುದಕ್ಕೆ ಎಷ್ಟೋ ಮೊದಲೇ ಈ ಪ್ರಕ್ಷಿಪ್ತಗಳು ಸೇರಿ, ಆ ಪದ್ಯಗಳು ಮೊದಲ ಗುಂಪಿನ ೨೦೦ ಪದ್ಯಗಳಲ್ಲೂ ಕಂಡು ಬರಬಹುದು. ಈ ವಿಷಯ ದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

ಈ ಎಲ್ಲ ಕಾರಣಗಳಿಂದ ವಾಕ್ಯಪದೀಯ ಮತ್ತು ಶತಕಗಳ ಕರ್ತೃಗಳು ಭಿನ್ನರೆಂಬ ಕೋಸಂಬೀಯವರ ನಿರ್ಣಯ ನಿರಾಧಾರವಾಗುತ್ತದೆ.

'ವಾಕ್ಯಪದೀಯ' ಮತ್ತು ಶತಕತ್ರಯಗಳು ಏಕಕರ್ತೃಕಗಳೆಂಬುದಕ್ಕೆ ಒಂದು ಆಧಾರವೂ ದೊರೆತಿದೆ :

ಭರ್ತೃಹರಿಯ 'ಶಬ್ದಧಾತು ಸಮೀಕ್ಷಾ' ಎಂಬ ಗ್ರಂಥದ ವಿಷಯವನ್ನು ಹಿಂದೆಯೇ ಪ್ರಸ್ತಾಪಿಸಿದೆ. ಆ ಗ್ರಂಥ ಇನ್ನೂ ದೊರಕಿಲ್ಲ. ಆದರೆ ಸೋಮಾನಂದನು (ಕ್ರಿ.ಶ. ೯ನೆಯ ಶತಮಾನದವನು) ತನ್ನ ಶಿವದೃಷ್ಟಿ ಎಂಬ ಗ್ರಂಥದಲ್ಲಿ ವೈಯಾಕರಣರ ಶಬ್ದಾದ್ವೈತ ವಾದವನ್ನು ಖಂಡಿಸುವ ಸಂದರ್ಭದಲ್ಲಿ, ಭರ್ತೃಹರಿಯ ಮತವನ್ನು ಹೇಳುವಾಗ, ಅವನ ವಾಕ್ಯಪದೀಯ ಮತ್ತು ಶಬ್ದಧಾತು ಸಮೀಕ್ಷೆಗಳೆರಡರಿಂದಲೂ ಉದ್ಧರಣಗಳನ್ನು ಕೊಟ್ಟಿದ್ದಾನೆ. ಸೋಮಾನಂದನ ಶಿಷ್ಯ ಉತ್ಪಲಾಚಾರ್ಯನು ತನ್ನ ಗುರುವಿನ ಗ್ರಂಥದ ಮೇಲಿನ ವ್ಯಾಖ್ಯಾನದಲ್ಲಿ ಶಬ್ದಧಾತು ಸಮೀಕ್ಷೆಯದೆಂದು ಎರಡು ಪದ್ಯಗಳನ್ನು ಕೊಟ್ಟಿದ್ದಾನೆ. ನೀತಿಶತಕದಲ್ಲೂ ಇರುವ "ದಿಕ್ಕಾಲಾದ್ಯನವಚ್ಛಿನ್ನಾನಂತ" ಎಂದು ಆರಂಭ ವಾಗುವ ಪದ್ಯವು ಅವುಗಳಲ್ಲೊಂದು.[25] ಈ ಪದ್ಯವನ್ನು ಕೋಸಂಬೀಯವರು ಸಂಶಯಿತ ಶ್ಲೋಕಗಳೆಂಬ ಎರಡನೆಯ ಗುಂಪಿಗೆ ಸೇರಿಸಿದ್ದಾರೆ. ಆದರೆ ಅವರ ಮೊದಲನೆಯ ಗುಂಪಿನಲ್ಲಿ ೨೦೦ ಪದ್ಯಗಳು ಮಾತ್ರ ಇರುವುದರಿಂದ, ೧೫೨ ಸಂಶಯಿತ ಶ್ಲೋಕಗಳಲ್ಲಿ ಬಹುಭಾಗ ಭರ್ತೃಹರಿಯವೇ ಆಗಿರಬೇಕು.

ಭರ್ತೃಹರಿಯ ಮಹಾಭಾಷ್ಯದ ಟೀಕೆಯಲ್ಲಿ ಮನುಷ್ಯ ಜೀವನದ ಮೂಲತತ್ತ್ವಗಳ ಪ್ರತಿಪಾದನೆಯಿದೆಯೆಂದು ಇತ್ಸಿಂಗನು ಹೇಳಿದ್ದಾನಷ್ಟೆ. ಅಂತಹ ಪ್ರತಿಪಾದನೆ ಶತಕತ್ರಯದಲ್ಲಿರುವುದರಿಂದ, ಅವನು ತಪ್ಪು ತಿಳಿವಳಿಕೆಯಿಂದ ಆದೂ ಮಹಾಭಾಷ್ಯದ ಟೀಕೆ

ಯದೆಂದು ಹೇಳಿರಬೇಕು. ಇಂತಹ ಅಟಾತುರ್ಯ ಇಬ್ಬರು ಭರ್ತೃಹರಿಗಳ ಗ್ರಂಥಗಳ ವಿಷಯದಲ್ಲಿ ನಡೆದಿರುವುದಕ್ಕಿಂತ ಒಬ್ಬನೇ ಗ್ರಂಥಕಾರನ ಎರಡು ಗ್ರಂಥಗಳ ವಿಷಯದಲ್ಲಿ ನಡೆದಿರುವುದು ಹೆಚ್ಚು ಸಂಭಾವ್ಯ. ಹಾಗಾಗಿದ್ದರೆ, ಇತ್ಸಿಂಗನ ಕಾಲದಲ್ಲಿಯೇ 'ವಾಕ್ಯಪದೀಯ' ಮತ್ತು ಶತಕತ್ರಯಗಳು ಏಕಕರ್ತೃಕಗಳೆಂಬ ಭಾವನೆ ಇದ್ದಿತೆಂದಾಗುತ್ತದೆ; ಆ ಭಾವನೆಯು ಸತ್ಯವಾಗಿರಲೂಬಹುದು.

"ದಿಕ್ಕಾಲಾದಿ" ಶ್ಲೋಕವು ಶತಕತ್ರಯದ್ದೇ ಅಲ್ಲವೇ ಎಂಬ ಸಂಶಯ ನಿವಾರಣೆಯಾಗುವವರೆಗೆ, 'ವಾಕ್ಯಪದೀಯ' ಮತ್ತು ಶತಕತ್ರಯ ಏಕಕರ್ತೃಕಗಳೇ ಎಂದು ಖಚಿತವಾಗಿ ಹೇಳಲಾಗುವುದಿಲ್ಲವಾದರೂ, ಮೇಲಿನ ಎಲ್ಲ ವಿಷಯಗಳನ್ನೂ ಪರಿಶೀಲಿಸಿದರೆ, ಸದ್ಯಕ್ಕೆ ಅವುಗಳು ಏಕಕರ್ತೃಕಗಳೆಂದು ಒಪ್ಪಬಹುದೆಂದೂ "ಮಹಾಕವಿರ್ಮಹಾವಿದ್ವಾನೇಕೋ ಭರ್ತೃಹರಿಃ" ಎಂಬ ಉಕ್ತಿಯು ಈ ಗ್ರಂಥಗಳ ಕರ್ತೃ ಭರ್ತೃಹರಿಗೆ ಅನ್ವಯಿಸುತ್ತದೆಯೆಂದೂ ಹೇಳಬಹುದು.

## ಟಿಪ್ಪಣಿಗಳು

1. ಪ್ರಕಾಶಕರು : **Bharatiya Vidya Bhavan, Bombay (Singhi Jain Series Number 23) ; 1948**
2. **If, therefore, one man wrote these verses, he must belong to the opening centuries of the Christian era, Introduction. p. 78**
3. ಭರ್ತೃಹರಿ ವಿರಚಿತಂ ವಾಕ್ಯಪದೀಯಂ (***Vakyapadiya of Bhartrhari***) **Ed. K. V. Abhyankar & V. P. Limaye, Poona University ; 1965 ; Introduction Page V**
4. ಸಂಸ್ಕೃತ ವ್ಯಾಕರಣ ಶಾಸ್ತ್ರಕಾ ಇತಿಹಾಸ್, ಪ್ರಕಾಶಕರು, ರಾಮಲಾಲ ಕಪೂರ ಟ್ರಸ್ಟ್, ಬಹಾಲಗಡ, ಜಿಲಾ ಸೋನೀಪತ, ಹರಯಾಣಾ, ದ್ವಿತೀಯ ಭಾಗ, ದ್ವಿತೀಯ ಸಂಸ್ಕರಣ; ೧೯೭೪ (ವಿ.ಸಂ. ೨೦೩೦), ಪು. ೩೯೯
5. ಮೇಲಿನ ಗ್ರಂಥ; ಪ್ರಥಮ ಭಾಗ (ತೃತೀಯ ಸಂಸ್ಕರಣ) – ವಿ.ಸಂ. ೨೦೩೦, ಪು. ೩೬೦, ೩೬೯–೭೦ ಮತ್ತು ೩೬೬.
6. ಪೂರ್ವೋಕ್ತ ಗ್ರಂಥ : **Introduction**, ಪುಟಗಳು **XII, XIII**
7. ಪೂರ್ವೋಕ್ತ ಗ್ರಂಥ, ಪ್ರಥಮ ಭಾಗ, ಪುಟಗಳು ೩೬೬, ೩೭೪
8. ಕಾಶಿಕಾ ಭಾಗವೃತ್ತ್ಯೋರ್ಲಕ್ಷ್ಯೇತ್ ಸಿದ್ಧಾನ್ತಂ ಬೋದ್ಧುಮಸ್ತಿ ಧೀಃ ।
   ತದಾ ವಿಚಿನ್ತ್ಯತಾಂ ಭ್ರಾತರ್ಭಾಷಾವೃತ್ತಿರಿಯಂ ಮಮ ॥
   ಶ್ರೀಮತ್ಪುರುಷೋತ್ತಮ ದೇವ ವಿರಚಿತಾ ಭಾಷಾವೃತ್ತಿಃ, ತಾರಾ ಪಬ್ಲಿಕೇಷನ್ಸ್, ವಾರಾಣಸಿ ೧೯೭೧. ಪುಟ ೫೨೨
9. ಪ್ರಕಾಶಕರು, ಭಾರತೀಯ ಪ್ರಾಚ್ಯ ವಿದ್ಯಾ ಪ್ರತಿಷ್ಠಾನ, ಅಜಮೇರ್ : ವಿ.ಸಂ. ೨೦೨೧ (ಕ್ರಿ.ಶ. ೧೯೬೫)
10. ಏಕವೃತ್ತೌ — ಸಾಧಾರಣವೃತ್ತೌ, ವೈದಿಕೇ ಲೌಕಿಕೇ ಚ ವಿವರಣೇ ಇತ್ಯರ್ಥಃ । "ಏಕವೃತ್ತೌ" ಇತಿ ಕಾಶಿಕಾಯಾಂ ವೃತ್ತಾವಿತ್ಯರ್ಥಃ । 'ಭಾಷಾವೃತ್ತಿ', ಪುಟ ೪ರಲ್ಲಿ ಅಡಿಟಿಪ್ಪಣಿ.

Scanned by CamScanner

11. ಅಸ್ಯಾವೃತ್ತೇಃ ಪ್ರಾಗಷ್ಟಾಧ್ಯಾಯ್ಯಾಃ ಯಾವತ್ಯೋ ವೃತ್ತಯಃ ನಿಷ್ಪನ್ನಾಃ ತಾಸು ಅಷ್ಟಾಧ್ಯಾಯ್ಯಾಃ ಸರ್ವಾಣಿ ಸೂತ್ರಾಣಿ ತತ್ಕ್ರಮಮನುರುಧ್ಯೈವ ಯಥಾಸ್ಥಾನಂ ವ್ಯಾಖ್ಯಾತಾನ್ಯಾಸನ್। ಅಸ್ಯಾಮೇವ ವೃತ್ತೌ ಸರ್ವಪ್ರಥಮಂ ಲೌಕಿಕವೈದಿಕಸೂತ್ರಾಣಿ ದ್ವಿಧಾ ವಿಭಜ್ಯ ಗ್ರಂಥಕರ್ತುಃ ಕ್ರಮಮುಲ್ಲಂಘ್ಯ ಪೃಥಕ್ ಪೃಥಕ್ ವ್ಯಾಖ್ಯಾತಾನಿ। ಅತ ಏವಾಸ್ಯಾಃ 'ಭಾಗವೃತ್ತಿಃ' ಇತ್ಯನ್ವರ್ಥಾ ಸಂಜ್ಞಾಽಭೂತ್; ತತ್ಪ್ರತಿಪಕ್ಷಭೂತಾಯಾಃ ಕಾಶಿಕಾಯಾಶ್ಚ ಏಕವೃತ್ತಿರಿತಿ। ಭಾಗವೃತ್ತಿಸಂಕಲನಂ, ಪ್ರಾಸ್ತಾವಿಕ ಪುಟ ೩

12. ಭಾಗವೃತ್ತಿ ಸಂಕಲನಂ, ಪ್ರಾಸ್ತಾವಿಕ, ಪುಟ ೧, ೨ ಮತ್ತು ಸಂಸ್ಕೃತ ವ್ಯಾಕರಣಶಾಸ್ತ್ರಕಾ ಇತಿಹಾಸ್, ಪ್ರಥಮ ಭಾಗ, ಪುಟ ೪೭೧

13. ಡಾ. ಕೆ. ಕೃಷ್ಣಮೂರ್ತಿ, ವಿದ್ವಾನ್ ಎನ್. ರಂಗನಾಥಶರ್ಮಾ, ವಿದ್ವಾನ್ ಎಚ್. ಕೆ. ಸಿದ್ಧಗಂಗಯ್ಯ; ಪ್ರಕಾಶನ:—ಕರ್ನಾಟಕ ಸರ್ಕಾರ ಪಠ್ಯಪುಸ್ತಕಗಳ ಇಲಾಖೆ, ೧೯೭೬, ಪುಟ ೩೩೫

14. 'ಸಂಸ್ಕೃತ ವ್ಯಾಕರಣ ಶಾಸ್ತ್ರಕಾ ಇತಿಹಾಸ್', ದ್ವಿತೀಯ ಭಾಗ, ಪುಟಗಳು ೪೪೬–೪೭

15. ಅದೇ, ಪ್ರಥಮ ಭಾಗ, ಪುಟ ೩೭೧–೩೭೩

16. ಅದೇ, ಪುಟಗಳು ೩೭೧ ಮತ್ತು ೩೬೧

17. "ಶಿಶುಕ್ರಂದಯಮಸಭ ದ್ವಂದ್ವೇದ್ರ ಜನನಾದಿಭ್ಯಶ್ಛಃ" (೪–೩–೧೮) ಸೂತ್ರದ ವೃತ್ತಿಯಲ್ಲಿ, ಶಿಶುಕ್ರಂದಾದಿಭ್ಯೋ ದ್ವಿತೀಯಾ ಸಮರ್ಥೇಭ್ಯಶ್ಛಃ ಪ್ರತ್ಯಯೋಭವತಿ ಅಧಿಕೃತ್ಯ ಕೃತೇ ಗ್ರಂಥೇ...ದ್ವಂದ್ವಾತ್, ಅಗ್ನಿಕಾಶ್ಯಪೀಯಃ। ಶ್ಯೇನಕಪೋತೀಯಃ। **ಶಬ್ದಾರ್ಥ ಸಂಬಂಧೀಯಂ ಪ್ರಕರಣಂ। ವಾಕ್ಯಪದೀಯಂ** (ಕಾಶಿಕಾವೃತ್ತಿಃ—ತಾರಾ ಪಬ್ಲಿಕೇಷನ್ಸ್, ವಾರಾಣಸೀ ೧೯೬೬)

18. ಸಂದರ್ಭಣೇನ ಚ ಸ ಭರ್ತೃಹರಿಃ ಪದಾನಾಂ।
ಕಂದರ್ಪ ಕಾರ್ಮುಕ ರಸಾರ್ಪಣ ಕರ್ಮಠೇನ ॥

ಶೃಂಗಾರನೀತಿ ವಿಗತ ಸ್ಪೃಹತಾನುಬಂಧ।
ಮುನ್ಮಚ್ಚ ಪದ್ಯಶತಕತ್ರಯಮಾತತಾನ ॥

ಗ್ರಂಥೋಽಧಿಕೃತ್ಯ ಕಿಲ ವಾಕ್ಯ ಪದೇ ಬುಧಾನಾಂ
ಚಕ್ರೇಽಥ ತೇನ ನಿಖಿಲಾರ್ಥವಿಬೋಧಹೇತುಃ ॥

ಯಸ್ಯಾತಸೋದ್ವಿವರಣ ಪ್ರಣಯೇನ ಹೇಲಾ।
ರಾಜಃ ಶಶೀವ ಕಿರಣೇನ ವಿವೃದ್ಧಿಮಚ್ಛೇಃ। (೮–೧೦, ೧೧)

19. ಕೋಸಂಬೀಯವರ ಪೂರ್ವೋಕ್ತ ಗ್ರಂಥದ ಪ್ರಸ್ತಾವನೆ, ಪುಟಗಳು ೭೮–೭೯

20. When he says about Bhartrhari's Commentary on the *Mahabhashya* that "it fully treats of the principles of human life as well as of the grammatical science and also relates the reasons of the rise and decline of many families", one feels that such a remark about this grammatical work is as strange as what he says about the *Kasika Vritti*, namely, that "if exposes the laws of the universe and the regulations of gods and men" One feels that Itsing is not speaking from first-hand Knowledge, but only recording what he understood of what he had heard and what he

had heard seems to have mixed up the three *Satakas* and the *Vakyapadiya*.

*Bhartrhari* by K. A. Subramania Iyer. Pub.—Deccan College Post Graduate and Research Institute, Poona 1969, Page 11.

21. ವಾಕ್ಯಪದೀಯದ, ಆಗಮ ಸಮುಚ್ಚಯವೆಂದೂ ಹೆಸರುಳ್ಳ, ಬ್ರಹ್ಮಕಾಂಡದಲ್ಲಿನ ಕಾರಿಕೆಗಳು :

ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ ಯದಕ್ಷರಂ ।
ವಿವರ್ತತೇಽರ್ಥಭಾವೇನ ಪ್ರಕ್ರಿಯಾ ಜಗತೋಯತಃ ॥

ಏಕಮೇವ ಯದಾಮ್ನಾತಂ ಭಿನ್ನಂ ಶಕ್ತಿವ್ಯಪಾಶ್ರಯಾತ್ ।
ಅಪೃಥಕ್ತ್ವೇಽಪಿ ಶಕ್ತಿಭ್ಯಃ ಪೃಥಕ್ತ್ವೇನೇವ ವರ್ತತೇ ॥

ಏಕಸ್ಯ ಸರ್ವಬೀಜಸ್ಯ ಯಸ್ಯ ಚೇಯಮನೇಕಧಾ ।
ಭೋಕ್ತೃ ಭೋಕ್ತವ್ಯರೂಪೇಣ ಭೋಗರೂಪೇಣ ಚ ಸ್ಥಿತಿಃ ॥

ಪ್ರಾಪ್ತ್ಯುಪಾಯೋಽನುಕಾರಶ್ಚ ತಸ್ಯ ವೇದೋ ಮಹರ್ಷಿಭಿಃ ।
ಏಕೋಽಪ್ಯನೇಕ ವರ್ತ್ಮೇವ ಸಮಾಮ್ನಾತಃ ಪೃಥಕ್ ಪೃಥಕ್ ॥

—ವಾಕ್ಯಪದೀಯಂ (ಬ್ರಹ್ಮಕಾಂಡಂ) ಅಂಬಾಕರ್ತ್ರೀ ವ್ಯಾಖ್ಯಯಾ ಸಹಿತಂ,
ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸೀ ೧೯೭೬.

22. ಪ್ರಥಮಂ ಛಂದಸಾಮಂಗಮಾಹುರ್ವ್ಯಾಕರಣಂ ಬುಧಾಃ ೧೧ರ ಉತ್ತರಾರ್ಧ
ನ ಚಾಗಮಾದೃತೇ ಧರ್ಮಸ್ತರ್ಕೇಣ ವ್ಯವತಿಷ್ಠತೇ
ಋಷೀಣಾಮಪಿ ಯಜ್ಞಾನಂ ತದಪ್ಯಾಗಮ ಪೂರ್ವಕಮ್ ॥
ವೇದಶಾಸ್ತ್ರಾವಿರೋಧೀ ಚ ತರ್ಕಶ್ಚಕ್ಷುರಪಶ್ಯತಾಮ್ । ೧೩೭ರ ಪೂರ್ವಾರ್ಧ

23. ಪೂರ್ವೋಕ್ತ ಗ್ರಂಥ, ಪ್ರಥಮ ಭಾಗ ಪುಟಗಳು ೩೭೪, ೩೭೫

24. ಪರಮಭಟ್ಟಾರಕಸ್ಯ ಶ್ರೀಧರಸೇನಚತುರ್ಥಸ್ಯ ಶಾಸನಕಾಲೇ ಮಹಾವೈಯಾಕರಣೋ ಭಟ್ಟಿರಯಂ ಬೌದ್ಧಧರ್ಮಂ ಗೃಹೀತ್ವಾ ನಿಧನಂ ಗತ ಇತ್ಸಿಂಗೇನ ಭರ್ತೃಹರಿ ಪದೇನ ಸ್ಮೃತಃ । ವಲಭ್ಯಾಂ ತದಾನೀಂ ಪ್ರಾಕೃತಭಾಷಾ ಪ್ರಾಧಾನ್ಯಾತ್ ಭರ್ತೃಹರಿ ಶಬ್ದಗತಂ ಭರ್ತೃಪದಂ ಭಟ್ಟಿಪದೇನ ವ್ಯಪದಿಷ್ಟಂ । ತಚ್ಚ ಸ್ವಾಮಿವಾಚಕತ್ವಾತ್ ಸಮಾದರಾಸ್ಪದಂ ಮನ್ಯತೇ ಸ್ಮ । ಇತ್ಥಂ, ಇತ್ಸಿಂಗಸ್ಮೃತೋ ಮಹಾವೈಯಾಕರಣೋ ಬೌದ್ಧೋ ಭರ್ತೃಹರಿರ್ಭಟ್ಟಿಪದವಾಚ್ಯಃ, ನ ತು ವಾಕ್ಯಪದೀಯಕಾರ ಇತಿ ಸಿದ್ಧಂ ।

'ವಾಕ್ಯಪದೀಯಂ' ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾನಿಲಯದ ಪ್ರಕಟನೆ, ಪ್ರಾಸ್ತಾವಿಕಂ, ಪುಟ ೧೩.

25. ಉಕ್ತೋ ಯಾವಚ್ಛಬ್ದಧಾತು ಸಮೀಕ್ಷಾಯಾಮಪಿ ವಿದ್ವದ್ಭರ್ತೃಹರಿಣಾ,
ದಿಕ್ಕಾಲಾದ್ಯಲಕ್ಷಣೇನ ವ್ಯಾಪಕತ್ವಂ ವಿಹನ್ಯತೇ ।
ಅವಶ್ಯಂ ವ್ಯಾಪಕೋ ಯೋ ಹಿ ಸರ್ವದಿಕ್ಷು ಸ ವರ್ತತೇ ॥
ದಿಕ್ಕಾಲಾದ್ಯನವಚ್ಛಿನ್ನಾನಂತಚಿನ್ಮಾತ್ರಮೂರ್ತಯೇ ।
ಸ್ವಾನುಭೂತ್ಯೇಕಮಾನಾಯ ನಮಃ ಶಾಂತಾಯ ತೇಜಸೇ ॥
*Bhartrhari* by K. A. Subramania Iyer. ಪುಟಗಳು ೯, ೧೩, ೨೧ ಮತ್ತು ೪೦೬.

had heard seems to have mixed up the three *Satakas* and the *Vakyapadiya*.

*Bhartrhari* by K. A. Subramania Iyer, Pub,—Deccan College Post Graduate and Research Institute, Poona 1969, Page 11,

21. ವಾಕ್ಯಪದೀಯದ, ಆಗಮ ಸಮುಚ್ಚಯವೆಂದೂ ಹೆಸರುಳ್ಳ, ಬ್ರಹ್ಮಕಾಂಡದಲ್ಲಿನ ಕಾರಿಕೆಗಳು;

ಅನಾದಿನಿಧನಂ ಬ್ರಹ್ಮ ಶಬ್ದತತ್ತ್ವಂ ಯದಕ್ಷರಂ ।
ವಿವರ್ತತೇಽರ್ಥಭಾವೇನ ಪ್ರಕ್ರಿಯಾ ಜಗತೋಯತಃ ॥

ಏಕಮೇವ ಯದಾಮ್ನಾತಂ ಭಿನ್ನಂ ಶಕ್ತಿವ್ಯಪಾಶ್ರಯಾತ್ ।
ಅಪೃಥಕ್ತ್ವೇಽಪಿ ಶಕ್ತಿಭ್ಯಃ ಪೃಥಕ್ತ್ವೇನೇವ ವರ್ತತೇ ॥

ಏಕಸ್ಯ ಸರ್ವಬೀಜಸ್ಯ ಯಸ್ಯ ಚೇಯಮನೇಕಧಾ ।
ಭೋಕ್ತೃ ಭೋಕ್ತವ್ಯರೂಪೇಣ ಭೋಗರೂಪೇಣ ಚ ಸ್ಥಿತಿಃ ॥

ಪ್ರಾಪ್ತ್ಯುಪಾಯೋಽನುಕಾರಶ್ಚ ತಸ್ಯ ವೇದೋ ಮಹರ್ಷಿಭಿಃ ।
ಏಕೋಽಪ್ಯನೇಕ ವರ್ತ್ಮೇವ ಸಮಾಮ್ನಾತಃ ಪೃಥಕ್ ಪೃಥಕ್ ॥

—ವಾಕ್ಯಪದೀಯಂ (ಬ್ರಹ್ಮಕಾಂಡಂ) ಅಂಬಾಕರ್ತ್ರೀ ವ್ಯಾಖ್ಯಯಾ ಸಹಿತಂ, ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ, ವಾರಾಣಸೀ ೧೯೭೬.

22. ಪ್ರಥಮಂ ಛಂದಸಾಮಂಗಮಾಹುರ್ವ್ಯಾಕರಣಂ ಬುಧಾಃ ೧೧ರ ಉತ್ತರಾರ್ಧ
ನ ಚಾಗಮಾದೃತೇ ಧರ್ಮಸ್ತರ್ಕೇಣ ವ್ಯವತಿಷ್ಠತೇ
ಋಷೀಣಾಮಪಿ ಯಜ್ಞಾನಂ ತದಪ್ಯಾಗಮ ಪೂರ್ವಕಮ್ ॥
ವೇದಶಾಸ್ತ್ರಾವಿರೋಧೀ ಚ ತರ್ಕಶ್ಚಕ್ಷುರಪಶ್ಯತಾಮ್ । ೧೩೮ರ ಪೂರ್ವಾರ್ಧ

23. ಪೂರ್ವೋಕ್ತ ಗ್ರಂಥ, ಪ್ರಥಮ ಭಾಗ ಪುಟಗಳು ೩.೭೪, ೩.೭೫

24. ಪರಮಭಟ್ಟಾರಕಸ್ಯ ಶ್ರೀಧರಸೇನಚತುರ್ಥಸ್ಯ ಶಾಸನಕಾಲೇ ಮಹಾವೈಯಾಕರಣೋ ಭಟ್ಟಿರಯಂ ಬೌದ್ಧಧರ್ಮಂ ಗೃಹೀತ್ವಾ ನಿಧನಂ ಗತ ಇತ್ಸಿಂಗೇನ ಭರ್ತೃಹರಿ ಪದೇನ ಸ್ಮೃತಃ । ವಲಭ್ಯಾಂ ತದಾನೀಂ ಪ್ರಾಕೃತಭಾಷಾ ಪ್ರಾಧಾನ್ಯಾತ್ ಭರ್ತೃಹರಿ ಶಬ್ದಗತಂ ಭರ್ತೃಪದಂ ಭಟ್ಟಿಪದೇನ ವ್ಯಪದಿಷ್ಟಂ । ತಚ್ಚ ಸ್ವಾಮಿಪಾಚಕತ್ವಾತ್ ಸಮಾದರಾಸ್ಪದಂ ಮನ್ಯತೇ ಸ್ಮ । ಇತ್ಥಂ, ಇತ್ಸಿಂಗಸ್ಮೃತೋ ಮಹಾವೈಯಾಕರಣೋ ಬೌದ್ಧೋ ಭರ್ತೃಹರಿರ್ಭಟ್ಟಿಪದವಾಚ್ಯಃ, ನ ತು ವಾಕ್ಯಪದೀಯಕಾರ ಇತಿ ಸಿದ್ಧಂ ।

'ವಾಕ್ಯಪದೀಯಂ' ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾನಿಲಯದ ಪ್ರಕಟನೆ, ಪ್ರಾಸ್ತಾವಿಕಂ. ಪುಟ ೧೩.

25. ಉಕ್ತೋ ಯಾವಚ್ಛಬ್ದಧಾತು ಸಮೀಕ್ಷಾಯಾಮಪಿ ವಿದ್ವದ್ಭರ್ತೃಹರಿಣಾ,
ದಿಕ್ಕಾಲಾದ್ಯಲಕ್ಷಣೇನ ವ್ಯಾಪಕತ್ವಂ ವಿಹನ್ಯತೇ ।
ಅವಶ್ಯಂ ವ್ಯಾಪಕೋ ಯೋ ಹಿ ಸರ್ವದಿಕ್ಷು ಸ ವರ್ತತೇ ॥
ದಿಕ್ಕಾಲಾದ್ಯನವಚ್ಛಿನ್ನಾನಂತಚಿನ್ಮಾತ್ರಮೂರ್ತಯೇ ।
ಸ್ವಾನುಭೂತ್ಯೇಕಮಾನಾಯ ನಮಃ ಶಾಂತಾಯ ತೇಜಸೇ ॥

*Bhartrhari* by K. A. Subramania Iyer. ಪುಟಗಳು ೯, ೧೩, ೨೦ ಮತ್ತು ೪೦೭.

# ನಾಗಾರ್ಜುನನ ಕನ್ನಡ ಪದ್ಯಗಳು

ಮ. ಸು. ಕೃಷ್ಣಮೂರ್ತಿ

'ಕವಿರಾಜ ಮಾರ್ಗ' ಪ್ರೋಕ್ತ ನಾಗಾರ್ಜುನ ಯಾರು ? ಅವನ ಕೃತಿಗಳು ಯಾವುವು ?—ಎಂಬ ಬಗೆಗೆ ನಾವು ಇನ್ನೂ ಕತ್ತಲೆಯಲ್ಲೇ ಇದ್ದೇವೆ. ಈ ಬಗೆಗೆ ಕವಿಚರಿತೆಯಲ್ಲಿ ಹೀಗೆ ಹೇಳಿದೆ :

"ಈ ಹೆಸರುಳ್ಳ ಒಬ್ಬನು ವೈದ್ಯದಲ್ಲಿ ಬಹಳ ನಿಪುಣನಾಗಿ ನಾಗಾರ್ಜುನಕಲ್ಪವೇ ಮೊದಲಾದ ಅನೇಕ ಗ್ರಂಥಗಳನ್ನು ಮಾಡಿದನೆಂದೂ ರಸವಾದದಲ್ಲಿ ಪಾರಂಗತನಾಗಿ ಬೆಟ್ಟಗಳನ್ನೆಲ್ಲ ಬಂಗಾರಮಾಡಿದನೆಂದೂ ಪ್ರತೀತಿಯಿದೆ. 'ರಾಜಾವಳೀ ಕಥೆ'ಯಲ್ಲಿ—ನಾಗಾರ್ಜುನನು ಪೂಜ್ಯಪಾದನ ಸೋದರಳಿಯನೆಂದೂ ಪೂಜ್ಯಪಾದನ ಉಪದೇಶಮಹಿಮೆಯಿಂದ ಇವನು ಬಂಗಾರಮಾಡುವುದನ್ನು ತಿಳಿದುಕೊಂಡು ದೇಶಾಟನೆ ಮಾಡುತ್ತ ಯಂತ್ರಮಂತ್ರತಂತ್ರಾದಿಗಳಂ ಕಲ್ಪಿಸಿ, ಸಿದ್ಧನಾಗಾರ್ಜುನನೆಂಬ ಕೀರ್ತಿ ದಿಗಂತವ್ಯಾಪಿಯಾಗಿರಲು ಶ್ರೀಶೈಲವನ್ನೈದಿ ಮಲ್ಲಿಕಾರ್ಜುನಪ್ರತಿಷ್ಠೆಗೈದು ಉತ್ತರ ದೇಶಕ್ಕೆ ಹೋಗಿ ಒಂದೆರಡು ಬೆಟ್ಟಮಂ ಚಿನ್ನಮಂ ಮಾಡಲು ಯತ್ನಿಸಿ ಮುಂದಕ್ಕೆ ಹೋದಾಗ ಇಬ್ಬರು ಸ್ತ್ರೀಯರು ವಂಚಿಸಿ ಇವನನ್ನು ಕೊಂದರೆಂದೂ ಹೇಳಿದೆ.

'ನಾಗಾರ್ಜುನಕಕ್ಷಪುಟ'ವೆಂಬ ಒಂದು ವೈದ್ಯಗ್ರಂಥವು ದೊರೆಯುತ್ತದೆ. ಅಲ್ಲದೆ, ನಂದಿಸೂತ್ರಗಳ ಮತ್ತು ಆವಶ್ಯಕ ಸೂತ್ರಗಳ ಆದಿಭಾಗದಲ್ಲಿ ಒಬ್ಬ ನಾಗಾರ್ಜುನನನ್ನು ವಿಶೇಷವಾಗಿ ಸ್ತುತಿಸಿರುವಂತೆ ತಿಳಿಯಬರುತ್ತದೆ.

ಇದರಲ್ಲಿ ನೃಪತುಂಗನು ಹೇಳುವ ನಾಗಾರ್ಜುನನು ಒಬ್ಬನಾಗಿರಬಹುದೇನೋ ಏನೋ ತಿಳಿಯದು."[1]

ಭಾರತದಲ್ಲಿ ಕೊನೆಯ ಪಕ್ಷ ನಾಲ್ಕು ಮಂದಿ ನಾಗಾರ್ಜುನರಿರಬೇಕು. ಮೊದಲನೆಯವನು ಮಾಧ್ಯಮಿಕ ಮತದ ಆಚಾರ್ಯ ಬೌದ್ಧ ನಾಗಾರ್ಜುನ, ಎರಡನೆಯವನು ಪೂಜ್ಯಪಾದನ ಸೋದರಳಿಯ ನಾಗಾರ್ಜುನ, ಮೂರನೆಯವನು ನಾಥಪಂಥದ ಸಿದ್ಧ ನಾಗಾರ್ಜುನ, ನಾಲ್ಕನೆಯವನು ರಸಸಿದ್ಧ ನಾಗಾರ್ಜುನ. 'ರಾಜಾವಳಿಯ ಕಥೆ'ಯಲ್ಲಿ ಪರಸ್ಪರ ವಿರುದ್ಧವಾದ ಹೇಳಿಕೆಯಿದೆ. ಒಂದು ಕಡೆ ಅವನು ಪೂಜ್ಯಪಾದನ ಸೋದರಳಿಯ ಎಂದರೆ, ಇನ್ನೊಂದು ಕಡೆ ಅವನು ಶ್ರೀಶೈಲಕ್ಕೆ ಹೋಗಿ ಮಲ್ಲಿಕಾರ್ಜುನನ ಪ್ರತಿಷ್ಠೆಗೈದ

ಎಂದು ಹೇಳಿದೆ. ಪೂಜ್ಯಪಾದನ ಸೋದರಳಿಯನಾದರ ಅವನು ಜೈನನಾಗಿರಬೇಕು. ಹಾಗಿದ್ದ ಪಕ್ಷದಲ್ಲಿ ಅವನು ಮಲ್ಲಿಕಾರ್ಜುನನ ಪ್ರತಿಷ್ಠೆಗೈದುದು ಹೇಗೆ?

'ಕವಿರಾಜಮಾರ್ಗ' ಪ್ರೋಕ್ತ ನಾಗಾರ್ಜುನ ಒಬ್ಬ ಬೌದ್ಧಸಿದ್ಧ ರಸವಾದಿ ಆಚಾರ್ಯನಾಗಿರಬೇಕು ಹಾಗೂ ಆತ ಕನ್ನಡದಲ್ಲಿ ಏನನ್ನಾದರೂ ಬರೆದಿರಬೇಕೆಂದು ನಮ್ಮ ಊಹೆ. ಸಂಸ್ಕೃತದಲ್ಲೇನೋ ಆತ ಸಾಕಷ್ಟು ಗ್ರಂಥಗಳನ್ನು ಬರೆದಿದ್ದಾನೆ. ಹಿಂದಿಯ ಪ್ರಸಿದ್ಧ ಲೇಖಕರಾದ ಆಚಾರ್ಯ ಚತುರಸೇನ ಶಾಸ್ತ್ರಿಯವರ 'ಕೀಮಿಯಾ' (ರಸವಿದ್ಯೆ) ಎಂಬ ಗ್ರಂಥ ಇತ್ತೀಚೆಗೆ (೧೯೮೮) ಪ್ರಕಟವಾಗಿದೆ. ಅದರಲ್ಲಿ ಅವರು ರಸಸಿದ್ಧ ನಾಗಾರ್ಜುನನ ಬಗೆಗೆ ಸಾಕಷ್ಟು ಮಾಹಿತಿ ನೀಡಿದ್ದಾರೆ. ಅಷ್ಟೇ ಅಲ್ಲ, ಆತನ ಕನ್ನಡದ ಎರಡು ಪದ್ಯಗಳನ್ನು ಉದಾಹರಿಸಿದ್ದಾರೆ. ಈ ಪದ್ಯಗಳತ್ತ ಕನ್ನಡ ವಿದ್ವಾಂಸರ ಗಮನ ಸೆಳೆಯುವುದೇ ಈ ಲೇಖನದ ಉದ್ದೇಶ.

ಕನ್ನಡದ ಈ ಸಿದ್ಧನನ್ನು ಅವರು ಮೊದಲನೆಯ ನಾಗಾರ್ಜುನ ಎಂದು ಕರೆದಿದ್ದಾರೆ. ಆಂಧ್ರರಾಜ ಶಾಲಿವಾಹನನೊಂದಿಗೆ ಈತನಿಗೆ ಮೈತ್ರಿಯಿತ್ತು. ಈತ ಸ್ವಹಸ್ತದಿಂದ ಶಾಲಿವಾಹನನಿಗೆ ಬರೆದ 'ಸುಹೃಲ್ಲೇಖ'ದ ಭಾಷಾಂತರ ಟಿಬೇಟ್ ಹಾಗೂ ಚೀನೀ ಭಾಷೆಯಲ್ಲಿ ದೊರೆತಿದೆ. 'ರಾಜತರಂಗಿಣಿ'ಯಲ್ಲಿ ಆತ ಬುದ್ಧನ ತರುವಾಯ ೧೫೦ ವರ್ಷಗಳಾದ ಮೇಲೆ ಆಗಿಹೋದ ಎಂದು ಹೇಳಿದೆ. ಚೀನಿ ಯಾತ್ರಿಕ ಹ್ಯೂಯೆನ್‌ತ್ಸಾಂಗ್ ಕ್ರಿ.ಶ. ೬೨೯ರಲ್ಲಿ ಭಾರತಕ್ಕೆ ಬಂದಿದ್ದಾಗ ಈ ಸಿದ್ಧಪುರುಷನ ಮಹಿಮೆಯನ್ನು ಕೇಳಿದ್ದ. ಆದ್ದರಿಂದ ಅವನು ಅವನನ್ನು ಉಲ್ಲೇಖಿಸುತ್ತಾನೆ. 'ರಾಜತರಂಗಿಣಿ' ಕೊಡುವ ಕಾಲ ಊಹೆಯದಿರಬೇಕು. ಆಂಧ್ರದಲ್ಲಿ ಶಾತವಾಹನರು ಕ್ರಿ.ಶ. ೭೨ರಿಂದ ೨೧೮ರವರೆಗೆ ಆಳಿದರು. ಆದ್ದರಿಂದ ಈತ ಎರಡನೆಯ ಇಲ್ಲವೆ ಮೂರನೆಯ ಶಾತವಾಹನನ ಕಾಲದಲ್ಲಿದ್ದ. ಎಂದರೆ ೧೭೨ನೆಯ ಇಸವಿಯೋ ಅವನ ಕಾಲ ಎನ್ನುವುದು ಸರಿಹೊಂದುತ್ತದೆ.

ಹ್ಯೂಯನ್‌ತ್ಸಾಂಗ್ ಭಾರತಕ್ಕೆ ಕ್ರಿ.ಶ. ೬೨೯ರಲ್ಲಿ ಬಂದಿದ್ದ. ಆತನು ಇಲ್ಲಿ ೧೫–೨೦ ವರ್ಷಗಳ ಕಾಲ ಇದ್ದ, ಭಾರತಾದ್ಯಂತ ಸಂಚರಿಸಿದ : ಅನೇಕ ವಿದ್ಯೆಗಳನ್ನು ಕಲಿತ. ಗ್ರಂಥ ಸಂಗ್ರಹ ಮಾಡಿದ ಅವನು ನಾಗಾರ್ಜುನ ಶಾತವಾಹನನ ಮಿತ್ರ ಹಾಗೂ ಸಿದ್ಧಪುರುಷ ಎಂದು ಬರೆಯುತ್ತಾನೆ. ಕ್ರಿ.ಶ. ೪೦೧–೪೦೯ರಲ್ಲಿ ನಾಗಾರ್ಜುನ ಬೋಧಿಸತ್ವನ ಒಂದು ಜೀವನಚರಿತ್ರೆ ಚೀನಿ ಭಾಷೆಗೆ ಅನುವಾದಗೊಂಡಿತು. ಈ ಗ್ರಂಥ ಮೊದಲಿಗೆ ಸಂಸ್ಕೃತದಲ್ಲಿ ರಚಿತವಾಗಿದ್ದಿರಬೇಕು. ನೂರೈವತ್ತು ವರ್ಷಗಳ ತರುವಾಯ ಅದರ ಚೀನೀ ಅನುವಾದವಾಗಿರಬೇಕು.

ಶಾತಕರ್ಣಿ ಅಥವಾ ಶಾತವಾಹನ ಆಂಧ್ರ ಅರಸರ ಉಪನಾಮ ಅಥವಾ ಉಪಾಧಿಯಾಗಿರಬೇಕು. ಏಕೆಂದರೆ ಭಾರತದ ಇತಿಹಾಸದಲ್ಲಿ ಶಾತಕರ್ಣಿ, ಶಾತವಾಹನ ಮೊದಲಾದವರು ಹಲವರು ಬರುತ್ತಾರೆ. ಕಳಿಂಗದ ಅರಸ ಖಾರವೇಲನ ಶಾಸನದಲ್ಲಿ ಒಬ್ಬ ಶಾತಕರ್ಣಿಯ ವರ್ಣನೆಯಿದೆ. ಬಲಶಾಲಿಯಾದ ಈ ರಾಜನ ಮೇಲೆ ಖಾರವೇಲ ಮುತ್ತಿಗೆ ಹಾಕಿದ್ದ. ವಾತ್ಸ್ಯಾಯನ ತನ್ನ 'ಕಾಮಸೂತ್ರ'ದಲ್ಲಿ ಒಬ್ಬ ಶಾತಕರ್ಣಿಯನ್ನು

ಹೇಳಲಾಗಿದ್ದಾನೆ. 'ಕಥಾಸರಿತ್ಸಾಗರ'ದಲ್ಲಿ ಶಾತವಾಹನ ದೀಪಕರ್ಣಿಯ ಪುತ್ರ ಎಂದು ಹೇಳಿದೆ. ಕಲಿಯುಗ ರಾಜ ವೃತ್ತಾಂತದಲ್ಲಿ ಯಾವನೋ ಒಬ್ಬ ಶಾತವಾಹನವಂಶಿ, ಕಾಣ್ವ ಸುಶರ್ಮನ ಸೇನಾಪತಿ ಎಂದು ಹೇಳಿದೆ. ಕುಂತಲ ಶಾತಕರ್ಣಿಯ ಹೆಸರೂ ಅದರಲ್ಲಿದೆ. ಗೌತಮೀಪುತ್ರ ಶಾತಕರ್ಣಿಯ ಅನೇಕ ಶಿಲಾಶಾಸನಗಳು ದೊರೆತಿವೆ. ನಾಸಿಕದಲ್ಲಿ ಪಾಂಡುಲಿಪಾ ಗುಹೆಗಳಲ್ಲಿ ಕೆತ್ತಿರುವ ಶಿಲಾಶಾಸನಗಳಲ್ಲಿ ಆತ ಬಲಶ್ರೀಗೌತಮಿಯ ಪುತ್ರ ನೆಂದು ಹೇಳಿದರೆ, ಜೀವಸುತಾ ಶಿಲಾಶಾಸನಗಳಲ್ಲಿ ಗೌತಮೀಪುತ್ರ ಎಂದು ಬರೆದಿದೆ. ಈ ಮಹಾವಿಜಯಿ ಶಕ ಯವನ ಪಹ್ಲವ ಹಾಗೂ ಕ್ಷಹರಾತರನ್ನು ಗೆದ್ದಿದ್ದ.

ಪುರಾಣಗಳಲ್ಲಿ ಇನ್ನೂ ಅನೇಕ ಮಂದಿ ಶಾತಕರ್ಣಿ ಹಾಗೂ ಶಾತವಾಹನರ ಉಲ್ಲೇಖ ವಿದೆ. ಇದರಲ್ಲಿ ನಾಗಾರ್ಜುನ ಯಾರ ಮಿತ್ರ ಹಾಗೂ ಸಮಕಾಲನಾಗಿದ್ದ ಎಂದು ಹೇಳು ವುದು ಕಷ್ಟ. ಆದರೆ ಒಂದು ಮಾತ್ರ ನಿಜ. ಆತ ಹರ್ಷ ಮತ್ತು ಹ್ಯೂಯೆನ್ ತ್ಸಾಂಗ್ (೬೦೨—೬೬೪)ರಿಗಿಂತ ಹಿಂದಿನವನು. ಕ್ರಿ.ಶ. ೪೦೧–೪೦೯ರಲ್ಲಿ ನಾಗಾರ್ಜುನ ಬೋಧಿಸತ್ವನ ಒಂದು ಜೀವನ ಚರಿತ್ರೆ ಚೀನಿ ಭಾಷೆಗೆ ಅನುವಾದಗೊಂಡಿತು ಎಂಬುದನ್ನು ಮೇಲೆ ನೋಡಿದೆವು. ಆದರೆ ಮೂಲಗ್ರಂಥ ಸಂಸ್ಕೃತದಲ್ಲಿದ್ದು. ಅನುವಾದಕ್ಕೆ ಕೊನೆಯ ಪಕ್ಷ ೧೦೦–೧೫೦ ವರ್ಷ ಮುಂಚೆ ರಚಿತವಾಗಿದ್ದಿರಬಹುದು. ಈ ಆಧಾರದ ಮೇಲೆ ನಾಗಾರ್ಜುನ ಕ್ರಿ.ಶ. ಎರಡನೆಯ ಶತಮಾನದಲ್ಲಿದ್ದ ಎಂದು ಊಹಿಸಿದರೆ ತಪ್ಪಾಗಲಾರದು. ಶುಂಗರು ಮತ್ತು ಕಣ್ವರ ತರುವಾಯ ಶಾತವಾಹನರ ರಾಜ್ಯ ಹುಟ್ಟಿಕೊಂಡಿತು. ಅದರ ರಾಜಧಾನಿ ಪ್ರತಿಷ್ಠಾನ (ಇಂದಿನ ಪೈಠಣ). ಅವರ ಯಾವನೋ ವಂಶಜ ಆಂಧ್ರದಲ್ಲಿ ಧಾನ್ಯಕಂಟಕದಲ್ಲಿ ಶಾತವಾಹನ ರಾಜ್ಯ ಸ್ಥಾಪಿಸಿದ. ಅದು ಕ್ರಿ.ಶ. ೭೩ರಿಂದ ೨೧೮ರವರೆ ಗಿತ್ತು. ನಾಗಾರ್ಜುನ ಧಾನ್ಯ ಕಂಟಕದ ಹತ್ತಿರ ಶ್ರೀಶೈಲದಲ್ಲಿ ತನ್ನ ಮಠವನ್ನು ಸ್ಥಾಪಿಸಿದ. ಈ ದೃಷ್ಟಿಯಿಂದಲೂ ಆತ ಕ್ರಿ.ಶ. ಎರಡನೆಯ ಶತಮಾನದ ಸರಿಸುಮಾರಿನಲ್ಲಿದ್ದನೆಂದು ಸಿದ್ಧವಾಗುತ್ತದೆ.

ಶಾಲಿವಾಹನ ತನ್ನ ಶಾಸನ ಕಾಲದಲ್ಲಿ ಬೌದ್ಧರ ನಾಲ್ಕು ಮಠಗಳನ್ನು ಸ್ಥಾಪಿಸಿದ. ಅವುಗಳ ಹೆಸರು ಹೀಗಿವೆ: ಪೂರ್ವಶೈಲ, ಅಪರಶೈಲ, ರಾಜಗಿರಿಕ ಮತ್ತು ಸಿದ್ಧಾರ್ಥಕ. ಈ ಮಠಗಳ ಸ್ಥಾಪನೆ ಕ್ರಿ.ಶ. ಎರಡನೆಯ ಶತಮಾನದ ಮಧ್ಯಭಾಗದಲ್ಲಿ ನಡೆದಿರಬೇಕು. ಈ ಮಠಗಳಲ್ಲಿ ನಾಲ್ಕು ಭಿನ್ನ ಭಿನ್ನ ನಿಕಾಯಗಳಾದವು. ಇವು ಒಳಪಂಗಡಗಳಿರಬೇಕು. ಈ ನಿಕಾಯಗಳು ತಮ್ಮ ತಮ್ಮ ಮಠಗಳನ್ನು ಸ್ಥಾಪಿಸಿಕೊಂಡವು. ಇವುಗಳಲ್ಲಿ ಪೂರ್ವ ಶೈಲ ಹಾಗೂ ಅಪರಶೈಲ ದಕ್ಷಿಣದ ಮಹಾಪರ್ವತದ ಮೇಲಿವೆ. ಈ ಪರ್ವತಗಳಲ್ಲೇ ಒಂದು ಮಠದ ಹೆಸರು ಶ್ರೀಶೈಲ; ಮತ್ತೊಂದರ ಹೆಸರು ಶ್ರೀಪರ್ವತ. ಶ್ರೀಶೈಲ ಮಠದ ಹತ್ತಿರವೇ ಆಂಧ್ರಪತಿ ಶಾಲಿವಾಹನನ ಹೊಸ ರಾಜಧಾನಿ ಧಾನ್ಯಕಂಟಕವಿತ್ತು. ನಾಗಾರ್ಜುನ ಇದ್ದದ್ದು ಇಲ್ಲೇ. ಈ ಪರಂಪರೆ ಆತ ಬೌದ್ಧ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಆದರೆ ಜೈನ ಸಾಹಿತ್ಯದಲ್ಲಿ ನಾಗಾರ್ಜುನನ ಬಗೆಗೆ ಸಾಕಷ್ಟು ಕಥೆಗಳು ದೊರೆಯುತ್ತವೆ. 'ಸ್ತಂಭನ ತೀರ್ಥಾವತಾರ ಪ್ರಬಂಧ' ಎಂಬ ಗ್ರಂಥದಲ್ಲಿ ನಾಗಾರ್ಜುನನ ಬಗೆಗೆ ವಿಸ್ತೃತ

ವರ್ಣನೆಯಿದೆ. ಅದರ ಪ್ರಕಾರ ಥಂಕಾ ಎಂಬ ಹೆಸರಿನ ರಾಜನ ಮಗ ರಣಸಿಂಗನು ಭೂಪಲಾ ಎಂಬ ನಾಗಕನ್ಯೆಯನ್ನು ಮೋಹಿಸಿ ಮದುವೆಯಾದ. ಅವಳಲ್ಲಿ ಅವನಿಗೆ ನಾಗಾರ್ಜುನ ಎಂಬ ಮಗ ಹುಟ್ಟಿದ. ಆ ಪಾತಾಳಪಾಲಕನು ಮಗನ ಮೇಲಿನ ಮಮತೆಯಿಂದ ಆತನಿಗೆ ಎಲ್ಲಾ ವಿಧವಾದ ನಾರು, ಬೇರು ಮೊದಲಾದ ಔಷಧ ಮೂಲಿಕೆಗಳ ಪರಿಚಯ ಮಾಡಿಸಿಕೊಟ್ಟ. ಅದರ ಪ್ರಭಾವದಿಂದ ಆತನಿಗೆ ಮಹಾಸಿದ್ಧಿಯುಂಟಾಯಿತು. ಅವನು ಸಿದ್ಧ ಪುರುಷನಾಗಿ ಭೂಲೋಕಕ್ಕೆ ಬಂದು ಸಾತವಾಹನ ರಾಜನ ಕಲಾಗುರುವಾದ. ಸಾಕಷ್ಟು ಪ್ರತಿಷ್ಠೆಯಿಂದಿದ್ದರೂ ಅವನು ವಿದ್ಯಾವ್ಯಸನಿಯಾಗಿದ್ದ. ಆಕಾಶಯಾನ ವಿದ್ಯೆಯನ್ನು ಕಲಿಯಲು ಶ್ರೀಪಾದಲಿಪ್ತಪುರದಲ್ಲಿ ಪಾದಲಿಪ್ತಾಚಾರ್ಯರ ಸೇವೆಯಲ್ಲಿದ್ದು ವ್ರತಸ್ಥನಾಗಿದ್ದ. ಭೋಜನ ಸಮಯದಲ್ಲಿ ಕಾಲುಗಳಿಗೆ ಒಂದು ಪ್ರಮಾಣದಲ್ಲಿ ಲೇಪ ಹಾಕಿಕೊಂಡು ಗಗನದಲ್ಲಿ ಹಾರಾಡುವ ಅಷ್ಟಾಪದ ಮುಂತಾದ ತೀರ್ಥಂಕರ (ತೀರ್ಥ)ರನ್ನು ನಮಸ್ಕರಿಸಿ. ಅವರು ಸುಮುಖಿವಾಗಿ ಕುಳಿತಿರುವಾಗ ಅವರ ಪಾದಗಳನ್ನು ತೊಳೆದು ನೂರ ಏಳು ಔಷಧಗಳ ಬಣ್ಣ, ರುಚಿ, ಗಂಧಗಳನ್ನು ಗುರುತಿಸಿ ಗುರುಗಳನ್ನು ಲೆಕ್ಕಿಸದ ಪಾದಲೇಪನ ಮಾಡಿಕೊಂಡು ನವಿಲಿನಂತೆ ಹಾರಲು ಹೋಗಿ ಹಳ್ಳದಲ್ಲಿ ಬಿದ್ದು ಘಾಯಗೊಂಡು ಜರ್ಜರ ದೇಹಿಯಾದನು. ಅದೇನೆಂದು ಗುರುಗಳು ಕೇಳಲು, ಅವನು ಎಲ್ಲ ವೃತ್ತಾಂತವನ್ನೂ ಹೇಳಿದನು. ಚತುರರೂ, ಚಮತ್ಕೃತಮತಿಗಳೂ ಆದ ಅವರು ನಗುತ್ತ ಅವನ ತಲೆಯನ್ನು ಷಾಷ್ಟಿಕ ಅಕ್ಕಿ ನೀರಿನಿಂದ ಔಷಧಿಗಳು ಹೋಗುವಂತೆ ತೊಳೆದು ಆ ಪಾದಲೇಪನದಿಂದ ಗಗನಗಾಮೀ ವಿದ್ಯೆಯನ್ನು ಅನುಗ್ರಹಿಸಿ ಒಂದು ಸಿದ್ಧಿಯನ್ನು ಕರುಣಿಸಿದರು. ಶ್ರೀ ಪಾರ್ಶ್ವನಾಥರಿಂದ ನಿರ್ಮಿಸಲ್ಪಟ್ಟ ರಸವು ಇಪ್ಪತ್ತುಮೂರು ಲಕ್ಷಣಗಳಿಂದ ಕೂಡಿದ ಪತಿವ್ರತೆಯಿಂದ ಮರ್ದಿಸಲ್ಪಟ್ಟರೆ ಕೋಟಿವೇದಿಯಾಗುವುದು ಎಂದು ಅವರಿಂದ ತಿಳಿದನು. ಹಿಂದೆ ಸಮುದ್ರವಿಜಯ ದಾಶಾರ್ಹನು ತ್ರಿಕಾಲವೇದಿಗಳಿಂದ ಶ್ರೀ ಪಾರ್ಶ್ವನಾಥರ ರತ್ನಮಯ ಮೂರ್ತಿಯನ್ನು ನಿರ್ಮಿಸಿ ದ್ವಾರಾವತೀ ಅರಮನೆಯಲ್ಲಿ ಇಟ್ಟಿದ್ದನು. ದ್ವಾರಾವತೀ ಪಟ್ಟಣವು ಸುಟ್ಟು ಸಮುದ್ರದಲ್ಲಿ ಮುಳುಗಲು ಅದು ಅಲ್ಲಿ ಹಾಗೆಯೇ ಉಳಿಯಿತು. ಕಾಂತೀಯ ಸಾಯಾಂತ್ರಿಕದ ಧನಪತಿ ಎಂಬಾತ ಹಡಗಿನಲ್ಲಿ ದೇವತಾರ್ಪಣೆಯನ್ನು ಮಾಡುತ್ತಿದ್ದಾಗ ಅದು ಅಲ್ಲಿ ಬೀಳಲು ಅಲ್ಲಿಯೇ ಜಿನಬಿಂಬವಿರುವುದೆಂದು ನಿರ್ಣಯಿಸಿ, ನಾವಿಕರನ್ನು ಅಲ್ಲಿಯೇ ಬಿಟ್ಟು ಏಳು ಆಮತಂತುಗಳಿಂದ ಸಂದಾನಿತವನ್ನು ಮೇಲೆತ್ತಿ ತನಗೆ ಅತ್ಯಂತ ಲಾಭವಾಯಿತೆಂದು ಯೋಚಿಸಿ, ತಾನೇ ನಿರ್ಮಿಸಿದ ಅರಮನೆಯಲ್ಲಿ ಇಟ್ಟನು. ನಾಗಾರ್ಜುನನು ಅತ್ಯಂತ ಶ್ರೇಷ್ಠವಾದ ಬಿಂಬವನ್ನು ಸಿದ್ಧರಸ ಸಿದ್ಧಿಗಾಗಿ ಕದ್ದು ಸಂಡೀನದಿಯ ದಡದಲ್ಲಿಟ್ಟು ಅದರ ಮುಂದೆ ರಸಸಾಧನೆಗಾಗಿ ಸಾತವಾಹನನ ಹೆಂಡಿರಲ್ಲಿ ಒಬ್ಬಳಾದ ಚಂದ್ರಲೇಖಾ ಎಂಬವಳಿಂದ ಪ್ರತಿರಾತ್ರಿ ಯಾರಿಗೂ ತಿಳಿಯದಂತೆ ರಸಮರ್ದನವನ್ನು ಮಾಡಿಸುತ್ತಿದ್ದನು. ಹೀಗೆ ಅಲ್ಲಿಗೆ ಮತ್ತೆ ಮತ್ತೆ ಬಂದು ಹೋಗುತ್ತಿರಲು ನಾಗಾರ್ಜುನ ತನ್ನ ಬಂಧು ಎಂದು ತಿಳಿದು ಮರ್ದನದ ಕಾರಣವನ್ನು ಕೇಳಿದಳು. ಅವನು ತನ್ನ ಕಲ್ಪನೆಯಿಂದ ಕೋಟಿ ವೇದಿರಸದ ಯಥಾವತ್ತಾದ ವೃತ್ತಾಂತ

ವನ್ನು ಹೇಳಿದನು. ಅವಳಿಗೆ ಪ್ರೀತಿನಿಂದ ಸರಳವಾದ ಸತ್ಕಾರ ಮಾಡಿ ಬಹಳ ಸೌಜನ್ಯ ವನ್ನು ತೋರಿದನು. ಹೀಗಿರಲು ಅವಳು ಒಮ್ಮೆ ನಿಜಾಗಜ ಎಂಬವನಿಗೆ ಈ ವೃತ್ತಾಂತ ವನ್ನು ಹೇಳಿದಳು. ಆತ ಅದರಿಂದ ಆಕರ್ಷಿತನಾಗಿ ತನ್ನ ರಾಜ್ಯವನ್ನು ಬಿಟ್ಟು ನಾಗಾರ್ಜುನನು ವಾಸವಾಗಿದ್ದ ಮನೆಗೆ ಬಂದನು. ಕಪಟದಿಂದ ರಸವಿದ್ಯೆಯನ್ನು ತಿಳಿಯಲು ಗುಪ್ತವೇಷ ದಿಂದ ನಾಗಾರ್ಜುನನು ಊಟಮಾಡುವಾಗ ಅವಳಿಗೆ ಹಣವನ್ನು ಕೊಟ್ಟು ಸಂತೋಷ ಪಡಿಸಿ ರಸವಾರ್ತೆಯನ್ನು ಕೇಳಿದನು. ಅವಳು ಆತನಿಗೆ ಅದನ್ನು ತಿಳಿಸಲು ಅದಕ್ಕೋಸ್ಕರ ಉಪ್ಪಿನ ರಸವನ್ನು ಮಾಡಿ ಆರು ತಿಂಗಳನಂತರ ಅದರಲ್ಲಿ ರಸವನ್ನು ಸೃಷ್ಟಿಸಿದಳು. ಸನ್ನೆ ಯಿಂದ ರಸವು ಸಿದ್ಧವಾಗಿದೆಯೆಂದು ಹೇಳಿದಳು. ಆಮೇಲೆ ರಸಪಾನ ಮಾಡುವ ಆಸೆ ಯುಳ್ಳವರಾಗಿ ಭಾಗಿನೇಯರನ್ನು ದರ್ಭಾಂಕುರಮೃತ್ಯು ಎಂಬ ಪರಂಪರೆಗನುಗುಣವಾಗಿ ಅಲ್ಲೇ ಕೊಂದರು. ಆ ರಸವು ದೇವತಾಧಿಷ್ಠಾನವಾಗಿದ್ದರಿಂದ ಅದೃಶ್ಯವಾಯಿತು. ಆ ರಸ ಎಲ್ಲಿ ಸ್ತಂಭಿತವಾಯಿತೋ ಅಲ್ಲಿ 'ಸ್ತಂಭನಕ' ಎಂಬ ಹೆಸರಿನ ಪಾರ್ಶ್ವನಾಥ ತೀರ್ಥ ವುಂಟಾಗಿ ಸಕಲ ಲೋಕಗಳ ಇಚ್ಛೆಯನ್ನು ಪೂರೈಸುವ ಶಕ್ತಿಯುಳ್ಳದ್ದಾಯಿತು. ಆಮೇಲೆ ಕೊಂಚ ಕಾಲಾನಂತರ ಆ ಬಿಂಬವು ತನ್ನ ಮುಖವನ್ನು ಮಾತ್ರ ಬಿಟ್ಟು ಅದೃಶ್ಯವಾಯಿತು. ಅನಂತರ ಶ್ರೀಶಾಸನ ದೇವತಾದೇಶದಿಂದ ಆರು ತಿಂಗಳನ್ನು ಕಳೆಯಲು ನಿರ್ಣಯಿಸಿ ಕಠಿಣ ಪ್ರಯೋಗದಿಂದಾಗಿ ಮಾತು ನಿಂತುಹೋಗಲು ಶ್ರೀ ಅಭಿದೇವ ಸೂರಿಗಳ ದೇಹದಲ್ಲಿ ದೊಡ್ಡ ರೋಗವುಂಟಾಯಿತು. ಆಗ ಪಾತಾಳಪಾಲನು ಶ್ರೀಧರಣೇಂದ್ರ ಎಂಬ ಹೆಸರಿನ ಕೆಂಪು ಹಾವಿನ ನಾಲಿಗೆಯಿಂದ ಅದನ್ನು ನೆಕ್ಕಿಸಿ ಆ ರೋಗವನ್ನು ವಾಸಿಮಾಡಿಸಿ ಆ ತೀರ್ಥದ ಬಗೆಗೆ ಶ್ರೀಮದಭವದೇವ ಸೂರಿಗಳಿಗೆ ತಿಳಿಸಿದನು. ಶ್ರೀ ಸಂಘದೊಡನೆ ಅಲ್ಲಿಗೆ ಬಂದು ಅಲ್ಲಿ ಒಂದು ಹಾಲುಕರೆಯುವ ಹಸುವಿನ ಬಗೆಗೆ ಗೋಪಾಲಬಾಲಕರು ತಿಳಿಸಲು ಸೂರಿ ಗಳು ಅದನ್ನು ನೋಡಿ ಭೂಮಿಯಲ್ಲಿ (೨೮೮) ಸ್ತುತಿಗಳನ್ನು ಮಾಡಿ ೩೦೭ನೆಯ ಶ್ಲೋಕ ದಿಂದ ಪಾರ್ಶ್ವನಾಥ ಬಿಂಬವನ್ನು ನೋಡಿದರು. ದೇವತಾದರ್ಶನದ ಆ ವ್ರತವನ್ನು ಗೋಪ್ಯ ವಾಗಿರಿಸಿದರು.

"ಯಾವ ಮಾರ್ಗದಲ್ಲಿ ನಾಲ್ಕು ಸಾವಿರ ಅಂಗುಲ ಪ್ರಮಾಣವುಳ್ಳ ದೇವಾಲಯ ನಿರ್ಮಿತ ವಾಗಿದೆಯೋ ಅದರ ಮಧ್ಯದಲ್ಲಿ ವಾರುಣ, ವಾಸುದೇವ, ವರುಣರು ವಾಸಿಸುವರೋ ಶಾಂತಿಯಿಂದ ಕೂಡಿದ ಪ್ರಸಿದ್ಧ ನಾಗಾರ್ಜುನನಿಂದ ಯಾವುದು ಅರ್ಚಿಸಲ್ಪಟ್ಟಿದೆಯೋ ಆ ಸ್ತಂಭನಕ ಪುರದಲ್ಲಿ ಮೂಡಿದ ಶ್ರೀಪಾರ್ಶ್ವನಾಥ ಜಿನರು ನಮ್ಮನ್ನು ಕಾಪಾಡಲಿ."

ಈ ವರ್ಣನೆ ಐತಿಹಾಸಿಕ ತತ್ತ್ವಗಳಿಂದ ಭಿನ್ನ. ಇದರಲ್ಲಿರುವ ನಾಗಾರ್ಜುನನ ಉತ್ಪತ್ತಿ ಮತ್ತು ಸ್ವಭಾವಕ್ಕೂ ಬೇರೆ ಕಡೆ ದೊರೆಯುವ ವೃತ್ತಾಂತಕ್ಕೂ ಅಂತರವಿದೆ. ಇದರಲ್ಲಿ ರಾಜನ ಪತ್ನಿ ಚಂದ್ರಲೇಖಾಳನ್ನು ನಾಗಾರ್ಜುನ ಕರೆದುಕೊಂಡು ಬರುತ್ತಿದ್ದ ಅಂಶವಿಲ್ಲ. ರಾಜನಿಗೆ ಈ ವಿಷಯ ತಿಳಿದಾಗ ಅವನು ನಾಗಾರ್ಜುನನನ್ನು ಕೊಲ್ಲಿಸಿದ. ಇದರಿಂದ [illegible] ಸಿದ್ಧಿ ತಿಳಿದಾಗ

ಹೇಳಿ ಅವನ ಆಶ್ರಮಕ್ಕೆ ಕಳಿಸಿದ. ಅವರು ಸ್ವತಃ ರಸಸಿದ್ಧಿಯನ್ನು ಪಡೆದರು ಮತ್ತು ಗುಪ್ತರೀತಿಯಿಂದ ಹಣದ ಆಸೆ ತೋರಿಸಿ ದಾಸಿಯನ್ನು ವಶಪಡಿಸಿಕೊಂಡರು. ಅನಂತರ ನಾಗಾರ್ಜುನನನ್ನು ವಿಷ ತಿನ್ನಿಸಿ ಕೊಲ್ಲಿಸಿದರು. ಆದರೆ ಅನಂತರ ಅವರು ಗಳಿಸಿದ ರಸಸೊಡ ಪ್ರಯೋಜನಕ್ಕೆ ಬರಲಿಲ್ಲ. ಈ ವರ್ಣನೆಯಿಂದ ಗೊತ್ತಾಗುವ ಮತ್ತೊಂದು ಅಂಶವೆಂದರೆ, ಆ ರಸ ಗುಪ್ತವಾಗಿ ಬಿಟ್ಟಿತು, ರಸ ಸ್ತಬ್ಧವಾಗಿ ಆ ಊರು ಸ್ತಂಭನಪುರ (ಇಂದಿನ ಖಿಂಬಾತ್) ಎಂದು ಪ್ರಸಿದ್ಧವಾಯಿತು. ಬಹುಶಃ ಈ ಘಟನೆಯೂ ಅಲ್ಲೇ ನಡೆದಿರಬೇಕು.

ಆದರೆ ಈ ಉಲ್ಲೇಖ ನಾಗಾರ್ಜುನನ ವಿಷಯವನ್ನು ಇನ್ನೂ ತೊಡಕಾಗಿ ಮಾಡುತ್ತದೆ. ಬೌದ್ಧ ಸಿದ್ಧನಾದ ನಾಗಾರ್ಜುನನನ್ನು ಇಲ್ಲಿ ಜೈನನೆಂದು ತೋರಿಸಲು ಪ್ರಯತ್ನಿಸಲಾಗಿದೆ. ಪಾರ್ಶ್ವನಾಥನ ಲೀಲೆ ಇವೆಲ್ಲ ಜೈನ ವಾತಾವರಣ ಸೃಷ್ಟಿಗಾಗಿ ತಂದವು. ನಮಗೆ ತಿಳಿದ ಮಟ್ಟಿಗೆ ರಸಸಿದ್ಧ ನಾಗಾರ್ಜುನ ಬೌದ್ಧನೇ ಹೊರತು ಜೈನನಲ್ಲ.

ನಾಗಾರ್ಜುನನಿಂದ ಆರಂಭವಾದ ಈ ರಸಸಿದ್ಧ ಪರಂಪರೆ ವಜ್ರಯಾನವಾಗಿ ಪರಿಣಮಿಸಿತು. ಇದರಲ್ಲಿ ಸರಹಪಾದನೇ ಮೊದಲಾದ ೮೪ ಮಂದಿ ಸಿದ್ಧರು ಆಗಿ ಹೋದರು. ಇವರಲ್ಲಿ ಪ್ರಸಿದ್ಧನಾದ ಕಣ್ಣಪಾ ಕರ್ನಾಟಕದವನು. ಅಷ್ಟೇ ಅಲ್ಲ, ಈ ಸಿದ್ಧ ಪರಂಪರೆಯೇ ಮುಂದೆ ನಾಥಸಿದ್ಧ ಪರಂಪರೆಯಾಗಿ ಪರಿಣಮಿಸಿತು. ಈ ನಾಥಸಿದ್ಧರಲ್ಲಿ ಅಲ್ಲಮ ಪ್ರಭು ಹಾಗೂ ರೇವಣರ ಉಲ್ಲೇಖವೂ ಇದೆ.

> ಆದಿನಾಥಂ ಮೂಲನಾಥಂ ಗೋರಕ್ಷ ಕೌಂಕಣೇಶ್ವರಮ್
> ಚೋಲಾಂಧ್ರ ದೇಶಂಕಥನೀಶಂ ಮೌದ್ಗೀಯಂ ಚಿಂಚಿಣೇಶ್ವರಂ ।
> ಚೌರಂಗೀ ಮೀತ್ಸ್ಯನ್ನಾಗಾಖ್ಯಿವಮಂ ನವ ಸಂತರ್ಪಯೇತತಃ ।
> ಚೌರಂಗೀ ಕರ್ಪಟೀ ಧೋಂಟೀ ಚುಲ್ಲಿಂಕಾಮಧ್ವಯಂತತಃ ।
> ಬಾಲಗೋವಿಂದ ಸಿದ್ಧಂ ಚ ವ್ಯಾಲಿಂ ನಾಗಾರ್ಜುನಂ ತತಃ ।
> ಭೋರಂಡ ಸೂರ್ಪ ಘಂಟಾಕ್ಷಂ ದುತ್ತಾರ್ಥೀ ರೇವಣಂ ತತಃ ।
> ಸಿದ್ಧಂಕುಕ್ಕುರ ಪಾದಂ ಚ ಸೂರ್ಯ ಪಾದಂ ಕಣ್ಯೈರಿತಂ
> ಸಿದ್ಧಂ ಟಿಂ ಟಿಣಿಕಾಸ್ಯಾಂಚ ಸಿದ್ಧಾನ್ ಷೋಡಶತರ್ಪಯೇತ್ (ಆನಂದಕಂದ)

'ಸಿದ್ಧೇ ರಸೇ ಕರಿಷ್ಯೇಽಹಂ ನಿರ್ದಾರಿದ್ರ್ಯ ಗದಂ ಜಗತ್' 'ಸಿದ್ಧರಸದಿಂದ ಜಗತ್ತನ್ನು ನಿರ್ದಾರಿದ್ರ್ಯವನ್ನಾಗಿ ಮಾಡುತ್ತೇನೆ'—ಹೀಗೆ ಘೋಷಿಸಿದ ನಾಗಾರ್ಜುನ ಮೂಲತಃ ಕರ್ನಾಟಕದವನು. ಧಾರವಾಡದ ಕಡೆಯವನು ಎಂದು ಶ್ರೀಚತುರ ಸೇನ ಶಾಸ್ತ್ರಿಯವರು ಅಭಿಪ್ರಾಯಪಡುತ್ತಾರೆ. ಅವನು ಧಾರವಾಡದ ಹತ್ತಿರ ಕಪೋತಗುಡ್ಡದಲ್ಲಿ ತನ್ನ ರಸ ಪ್ರಕ್ರಿಯೆಯಾಗಿ ಒಂದು ಒಲೆಯನ್ನು ಕಟ್ಟಿಸಿದ್ದನಂತೆ. ಅವನು 'ತೋಣಾಗಾಂವ್'ನಲ್ಲಿದ್ದನಂತೆ, ಅವನ ಕೀರ್ತಿಯನ್ನು ಕೇಳಿ ರಾಜ ಶಾಲಿವಾಹನ ತನ್ನ ಇಬ್ಬರು ಮಗಂದಿರನ್ನು ಅವನ ಶಿಷ್ಯರನ್ನಾಗಿ ಮಾಡಿದ್ದನಂತೆ, ಅನಂತರ ನಾಗಾರ್ಜುನ ಎಲ್ಲಿ ಬೆಟ್ಟಗುಡ್ಡಗಳನ್ನೆಲ್ಲ ಚಿನ್ನವನ್ನಾಗಿ ಮಾಡಿಬಿಟ್ಟಾನೋ ಎಂಬ ಭೀತಿಯಿಂದ ವಿಷವಿಕ್ಕಿಸಿ ಅವನನ್ನು ಕೊಲ್ಲಿಸಿದನಂತೆ. ಸಾಯುವಾಗ ನಾಗಾರ್ಜುನ ತನ್ನ ರಸವಿದ್ಯೆಯ ರಹಸ್ಯೋದ್ಘಾಟನೆ ಮಾಡಲು ಕನ್ನಡದಲ್ಲಿ ಹೀಗೆ ಹೇಳಿದನಂತೆ :

ತುತ್ಥಂ ರಸ ಗಂಧಕಂ । ನು ಥ್ಯಾರಸ ಗಂಧಕಂ ।
ಮತ್ತೊಂದು ಮತ್ತೊಂದು । ಮತ್ತೊಂದು ಮತ್ತೊಂದು ॥

ಎಂದರೆ ಮೈಲುತುತ್ತ, ಪಾದರಸ ಮತ್ತು ಗಂಧಕ ಇವುಗಳ ಜೊತೆಗೆ ಮತ್ತೊಂದನ್ನು ಬೆರಸಬೇಕು. ನಾಲ್ಕನೆಯ ವಸ್ತು ಅವನ ನೆನಪಿಗೆ ಬಾರದೇಹೋಯಿತು, ಮತ್ತೊಂದು ಮತ್ತೊಂದು ಎಂದು ನೆನಪಿಸಿಕೊಳ್ಳುತ್ತಿರುವಾಗಲೇ ಅವನ ಮಾತು ನಿಂತಿತು.

ಶಾಸ್ತ್ರಿಯವರ ಪ್ರಕಾರ ಕರ್ನಾಟಕ ಪರಂಪರೆಯಂತೆ ನಾಗಾರ್ಜುನ ರಸವಿದ್ಯೆಯನ್ನು ಸಿದ್ಧಪಡಿಸಿಕೊಳ್ಳಲು ತುಂಬಾ ಪರಿಶ್ರಮಪಟ್ಟನಂತೆ. ಎಷ್ಟು ಮಾಡಿದರೂ ಸಿದ್ಧಿ ದೊರಕದಿರಲು. ಅವನು ನಿರಾಶೆಗೊಂಡು ಹೀಗೆ ಹೇಳಿ ಭಿಕ್ಷೆ ಬೇಡುತ್ತಿದ್ದನಂತೆ :

"ಭೃಂಗವೇಯಲಿಲ್ಲ
ವಡ್ಗ ಬಲಿಯಲಿಲ್ಲ
ರಸ ನಿಲ್ಲಲಿಲ್ಲ
ಸುಟ್ಟು ಕಂಗೆಟ್ಟು ಹಾಳಾದೆನಾ ಭಿಕ್ಷಾಂ ದೇಹಿ ॥"

ಅರ್ಥಾತ್ "ಭೃಂಗ (ಅಭ್ರಕ) ಬೇಯಲಿಲ್ಲ, ವಡ್ಗ ಎಂದರೆ ತವರದ ಸ್ತಂಭನವಾಗಲಿಲ್ಲ, ರಸ (ಪಾದರಸ) ಬೆಂಕಿಯಲ್ಲಿ ನಿಲ್ಲಲಿಲ್ಲ. ಇದರಿಂದ ನಾನೂ ಸುಟ್ಟು ಕಂಗೆಟ್ಟು ಹಾಳಾದೆ, ಭಿಕ್ಷೆ ನೀಡಿ."

ಇಲ್ಲಿ ನಮಗೆ ಪ್ರಸ್ತುತವಾದುದೆಂದರೆ ಎರಡನೆಯ ಶತಮಾನದಲ್ಲಿದ್ದ ನಾಗಾರ್ಜುನ ಪ್ರಥಮ ರಸಸಿದ್ಧ ಮತ್ತು ಅವನ ಮಾತೃಭಾಷೆ ಕನ್ನಡ ಎಂಬುದು. ಇವನದೆಂದು ಶಾಸ್ತ್ರಿಗಳು ಉದ್ಧರಿಸಿದ ಎರಡು ಪದ್ಯಗಳು ಯಾವ ಮೂಲದಿಂದ ದೊರೆತವು ಎಂದು ಹೇಳಿಲ್ಲ. ಈ ಎರಡು ಪದ್ಯಗಳ ಭಾಷೆ ಕೂಡ ಈಚಿನದೆಂದು ಕಾಣುತ್ತದೆ. ಅಥವಾ ಅವಕ್ಕೆ ಈಚಿನ ಸಂಸ್ಕಾರವಾಗಿದೆ. ಏನಾದರೂ ಆಗಲಿ ೨ನೆಯ ಶತಮಾನದ ಕನ್ನಡದ ಕೆಲವು ತುಣುಕುಗಳು ಸಿಕ್ಕಿರುವುದು ನಮ್ಮ ಭಾಗ್ಯ. ಪದ್ಯಗಳನ್ನು ನೋಡಿದರೆ ಅದರಲ್ಲೂ ದ್ವಿತೀಯಾಕ್ಷರ ಪ್ರಾಸವನ್ನು ನೋಡಿದರೆ, ನಾಗಾರ್ಜುನ ಕನ್ನಡದಲ್ಲಿ ಏನನ್ನಾದರೂ ಬರೆದಿರಬೇಕು ಎನ್ನಿಸುತ್ತದೆ. ಕವಿರಾಜಮಾರ್ಗಕಾರ ಗದ್ಯಕಾರರ ಜೊತೆ ನಾಗಾರ್ಜುನನನ್ನು ಹೆಸರಿಸಿರುವುದರಿಂದ ಅವನು ಗದ್ಯದಲ್ಲೂ ರಸವಿದ್ಯೆಯನ್ನು ಕುರಿತಾದ ಗ್ರಂಥವನ್ನು ಬರೆದಿರಬೇಕು. ನಾಗಾರ್ಜುನ ಬರೆದ ಕೆಲ ಗ್ರಂಥಗಳ ಟಿಬೇಟ್ ಅನುವಾದ ದೊರೆಯುತ್ತದೆ, ಅವುಗಳನ್ನು ಪತ್ತೆ ಹಚ್ಚಿ, ಅವುಗಳ ಆಧಾರದ ಮೇಲೆ ಮೂಲವನ್ನು ಹುಡುಕಬೇಕಾಗುತ್ತದೆ. ನಾಗಾರ್ಜುನನ ಗ್ರಂಥಗಳು ದೊರೆತರೆ, ಆಗ ಕನ್ನಡ ಸಾಹಿತ್ಯಕ್ಕೆ ಗುದ್ದಲಿ ಪೂಜೆ ಮಾಡಿದವರು ಬೌದ್ಧರು ಎಂದು ಹೇಳಬೇಕಾಗುತ್ತದೆ. ವೆಂಕಣ್ಣಯ್ಯನವರ ಮಾತಿನ ಜಾಡು ಹಿಡಿದು ಇನ್ನೂ ಕೆಲಸ ಮಾಡಬೇಕಾಗಿದೆ.

1. 'ಕರ್ನಾಟಕ ಕವಿಚರಿತೆ' I, ಪರಿಶೋಧಿತ ಮುದ್ರಣ, ೧೯೬೧. ಪು. ೧೨

# ಹಳಗನ್ನಡ ಕವಿಗಳ ಮೇಲೆ ಮಾಘನ ಪ್ರಭಾವ

ಬಿ. ಚನ್ನಕೇಶವ

ಸಂಸ್ಕೃತ ಮಹಾಕವಿಗಳಲ್ಲಿ ಕಾಳಿದಾಸ, ಭಾರವಿ ಮತ್ತು ಶ್ರೀಹರ್ಷರ ಸಾಲಿನಲ್ಲಿ ಪರಿಗಣಿಸಲ್ಪಡುವ ಮಹಾಕವಿ ಮಾಘ. ಬರೆದ ಒಂದೇ ಒಂದು ಕಾವ್ಯದಿಂದ ಮಹಾಕವಿಯೆನಿಸಿಕೊಂಡು ಆಚಂದ್ರಾರ್ಕವಾದ ಕೀರ್ತಿಯನ್ನು ಗಳಿಸಿರುವ ಕೆಲವೇ ಕೆಲವು ಮಹಾಕವಿಗಳಲ್ಲಿ ಮಾಘನೂ ಒಬ್ಬ. ಇವನ 'ಶಿಶುಪಾಲವಧ' ಕಾವ್ಯವು ಸಂಸ್ಕೃತದ ಪಂಚಮಹಾಕಾವ್ಯಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ.[1] ಇದರೊಡನೆ ಇನ್ನೆರಡು ಪ್ರೌಢಕಾವ್ಯಗಳಾದ 'ಕಿರಾತಾರ್ಜುನೀಯ' ಮತ್ತು ನೈಷಧ ಚರಿತಗಳನ್ನು ಸೇರಿಸಿ ಇವು ಮೂರನ್ನು 'ಬೃಹತ್ತ್ರಯೀ' ಎಂದು ಕರೆಯಲಾಗುತ್ತದೆ.[2] ಭಟ್ಟಿಕವಿಯ 'ರಾವಣವಧ ಕಾವ್ಯ'ವನ್ನು ಸೇರಿಸಿ ಇವುಗಳನ್ನು 'ಶಾಸ್ತ್ರಕಾವ್ಯ'[3]ಗಳೆಂದು ಕರೆಯುವ ಪರಂಪರೆಯೂ ಇದೆ. ಪ್ರೌಢ ಕಾವ್ಯವೆನಿಸಿರುವ 'ಶಿಶುಪಾಲವಧ'ವು ಪ್ರಾಚೀನ ಕಾಲದಿಂದಲೂ ವಿದ್ವಾಂಸರ ಏಕಪ್ರಕಾರವಾದ ಆದರಕ್ಕೆ ಪಾತ್ರವಾಗಿದೆ.[4]

ಪೂರ್ವಕಾಲೀನ ಮಹಾಕಾವ್ಯಗಳಿಂದ ಪರವರ್ತಿ ಕವಿಗಳು ಪ್ರಭಾವಿತರಾಗುವುದು ಕೇವಲಸಹಜವಾದ ವಿಚಾರ. ಸಂಸ್ಕೃತ ಸಾಹಿತ್ಯದಲ್ಲಿ, ಅಷ್ಟೇ ಏಕೆ ೧೯ನೇ ಶತಮಾನದ ವರೆಗಿನ ಭಾರತೀಯ ಸಾಹಿತ್ಯದಲ್ಲಿ, ಸಾಮಾನ್ಯವಾಗಿ ಎಲ್ಲಾ ಕವಿಗಳೂ ವೇದೋಪನಿಷತ್ತುಗಳು, ರಾಮಾಯಣ ಮಹಾಭಾರತಗಳು ಮತ್ತು ಭಾಗವತಾದಿ ಪುರಾಣಗಳ ಪ್ರಭಾವಕ್ಕೊಳಗಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಭಾಸ, ಕಾಳಿದಾಸ, ಭವಭೂತಿಗಳಂತಹ ಮಹಾಪ್ರತಿಭಾವಂತ ಕವಿಗಳೂ ಈ ಮಾತಿಗೆ ಅಪವಾದವಲ್ಲ. ಆದ್ದರಿಂದಲೇ ರಾಜಶೇಖರನು ಹೇಳಿರುವ ಈ ಕೆಳಗಿನ ಮಾತು ಸಾರ್ವಕಾಲಿಕ ಸತ್ಯವೆಂದು ತೋರುತ್ತದೆ.

> ನಾಸ್ತ್ಯಚೌರಃ ಕವಿಜನಃ ನಾಸ್ತ್ಯಚೌರೋ ವಣಿಗ್ಜನಃ ।
> ಸ ನಂದತಿ ವಿನಾ ವಾಚ್ಯಂ ಯೋ ಜಾನಾತಿ ನಿಗೂಹಿತುಂ ॥[5]

(ಚೋರನಲ್ಲದ ಕವಿಯಿಲ್ಲ, ಚೋರನಲ್ಲದ ವಣಿಜನಿಲ್ಲ. ಯಾವನು ಚೌರ್ಯವನ್ನು ಬಚ್ಚಿಡಲು ಸಮರ್ಥನಾಗುತ್ತಾನೋ ಅವನು ನಿಂದೆಗೆ ಗುರಿಯಾಗದೆ ಯಶಸ್ವಿಯಾಗುತ್ತಾನೆ).

ಹಳಗನ್ನಡ ಸಾಹಿತ್ಯವು ಸಾಮಾನ್ಯವಾಗಿ ಸಂಸ್ಕೃತವನ್ನು ಚೆನ್ನಾಗಿಬಲ್ಲ ವಿದ್ವಾಂಸರಿಂದ

ರಚಿಸಲ್ಪಟ್ಟುದಾಗಿದೆ. ಹಳಗನ್ನಡದ ಪ್ರಸಿದ್ಧ ಲೇಖಕರಾದ ನೃಪತುಂಗ, ಪಂಪ, ರನ್ನ ಮತ್ತು ನಾಗವರ್ಮ ಮುಂತಾದವರು ಕನ್ನಡದಲ್ಲೆಂತೋ ಅಂತೆಯೇ ಸಂಸ್ಕೃತದಲ್ಲಿಯೂ ಅಗಾಧವಾದ ಪಾಂಡಿತ್ಯಗಳಿಸಿದವರಾಗಿದ್ದರು. ಇವರ ಮೇಲೆ ಕಾಳಿದಾಸ, ಭಾಸ, ದಂಡಿ, ಭಾರವಿ ಮುಂತಾದವರ ಪ್ರಭಾವವಾಗಿರುವುದು ಹಳಗನ್ನಡ ಸಾಹಿತ್ಯವನ್ನು ಬಲ್ಲ ಎಲ್ಲ ವಿದ್ವಾಂಸರಿಗೂ ವೇದ್ಯವಾಗಿರುವ ವಿಚಾರ.[6] ಇದರಂತೆಯೇ ಮಹಾಕವಿ ಮಾಘನಿಂದಲೂ ಕೆಲವು ಹಳಗನ್ನಡ ಕವಿಗಳು ಪ್ರಭಾವಿತರಾಗಿರುವುದು ಕಂಡುಬರುತ್ತದೆ.[7] ಮಾಘನ ಪ್ರಭಾವಕ್ಕೆ ಒಳಗಾಗಿರುವ ಮುಖ್ಯರಾದ ಹಳಗನ್ನಡ ಕವಿಗಳೆಂದರೆ—ನೃಪತುಂಗ, ಪಂಪ, ರನ್ನ ಮತ್ತು ನಾಗವರ್ಮ.

೧. **ನೃಪತುಂಗ :**[8] ಮಾಘನ ಉಲ್ಲೇಖ ದೊರೆತಿರುವ ಅತ್ಯಂತ ಪ್ರಾಚೀನ ಕೃತಿಯೆಂದರೆ ನೃಪತುಂಗನ 'ಕವಿರಾಜಮಾರ್ಗ'.[9] ಇವನು ಮಾಘನನ್ನು ನಾಮ್ನಾ ನಿರ್ದೇಶಿಸಿ ಭಾರವಿ ಕಾಳಿದಾಸರ ಜೊತೆಯಲ್ಲಿಟ್ಟು ಕೊಂಡಾಡಿರುವುದರಿಂದ ಅವನಿಂದ ಸಾಕಷ್ಟು ಪ್ರಭಾವಿತನಾಗಿರುವಂತೆ ಕಂಡುಬರುತ್ತದೆ.

ಪ್ರಣುತ ಗುಣಸೂರಿ ನಾರಾ
ಯಣ ಭಾರವಿ ಕಾಳಿದಾಸ ಮಾಘಾದಿಗಳೀ ।
ಗಣದದೊಳೆ ಮಹಾಕಾವ್ಯ
ಪ್ರಣಯಮನಾಗಿಸಿದರಮಳಕವಿವೃಷಭರ್ಕಳ್ ॥[10]

ಇಲ್ಲಿ ನೃಪತುಂಗನು ಗುಣಸೂರಿ, ನಾರಾಯಣ, ಭಾರವಿ, ಕಾಳಿದಾಸ ಮತ್ತು ಮಾಘ ಮುಂತಾದವರು 'ಮಹಾಕಾವ್ಯಪ್ರಣಯಮನಾಗಿಸಿದರಮಳಕವಿವೃಷಭರ್ಕಳ್' ಎಂಬುದಾಗಿ ಕೊಂಡಾಡಿದ್ದಾನೆ.[11]

ನೃಪತುಂಗನು 'ಕವಿರಾಜಮಾರ್ಗ'ದ ದ್ವಿತೀಯಪರಿಚ್ಛೇದದಲ್ಲಿ ಚಿತ್ರಬಂಧಗಳ ಪ್ರಸ್ತಾವವನ್ನು ಮಾಡುತ್ತಾ ಅವು ಬಹಳ ದುಷ್ಕರವಾದುವುಗಳೆಂದು ಹೇಳುತ್ತಾನೆ. ಇಲ್ಲಿ ಇವನು ಪ್ರಸ್ತಾವಿಸಿರುವ ಗೂಢಚತುರ್ಥ, ಏಕಾಕ್ಷರ, ದ್ವ್ಯಕ್ಷರ, ಅತಾಲವ್ಯ, ನಿರೋಷ್ಠ್ಯ, ಸರ್ವತೋಭದ್ರ, ಗೋಮೂತ್ರಿಕೆ, ಅರ್ಧಭ್ರಮಣ, ಮುರಜಬಂಧ, ಚಕ್ರಬಂಧ ಮುಂತಾದವುಗಳ ಮೇಲೆ ಭಾರವಿ, ದಂಡಿ ಮತ್ತು ಮಾಘರ ಪ್ರಭಾವವಿದೆಯೆಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ ಸ್ವತಃ ನೃಪತುಂಗನೇ ಪೂರ್ವಕವಿಗಳನ್ನನುಸರಿಸಿ ದುಷ್ಕರೋಕ್ತಿಯನ್ನು ರಚಿಸಿದೆನೆಂದು ಹೇಳಿಕೊಳ್ಳುತ್ತಾನೆ.

ಅನುಗತಂ ಪೂರ್ವಕವಿಗಳ್
ನೆನೆದಿನ್ನುಂ ಪೇಟ್ದಿಂ ದುಷ್ಕರೋಕ್ತಿಯ ।
ನ್ನನುಗತಕ್ರಮದೆ ಬಗೆದು ಹೇಳಿಕೆಯೊಳ್
ಜನಿತ ವಿಭೇದಮುಮಂ ಪೇಟ್ದಿಂ ಕಿಱಿದಂ ॥[12]

ಪೂರ್ವಕವಿಗಳು ನೆನೆದಿರುವ ಪ್ರಕಾರ ಈವರೆಗೆ ಕ್ರಮವಾಗಿ ದುಷ್ಕರ ಕಾವ್ಯಪ್ರಕಾರವನ್ನು ಹೇಳಿದೆನೆಂದು ಕವಿಯು ಹೇಳುವಾಗ ಅವನೇ ಈ ಮುಂಚೆ (೧.೩೧) ಸೂಚಿಸಿರುವ

ಪೂರ್ವಕವಿಗಳಲ್ಲಿ ದುಷ್ಕರಕಾವ್ಯಪ್ರಕಾರವನ್ನು ಹೇಳಿರುವ ಕವಿಗಳೆಂದರೆ ಭಾರವಿ ಮತ್ತು ಮಾಘ ಇವರಿಬ್ಬರು ಮಾತ್ರ. ನೃಪತುಂಗನು ಲಕ್ಷಣಗಳನ್ನು ರಚಿಸುವಲ್ಲಿ ದಂಡಿ ಮತ್ತು ಭಾಮಹರಿಂದ ಹೇಗೆ ಪ್ರಭಾವಿತನಾಗಿದ್ದಾನೋ ಹಾಗೆ ಲಕ್ಷ್ಯಗಳನ್ನು ರಚಿಸುವಲ್ಲಿ ಕಾಳಿದಾಸ, ಭಾರವಿ ಮತ್ತು ಮಾಘರಿಂದ ಪ್ರಭಾವಿತನಾಗಿರುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ವಿಶೇಷವಾಗಿ ಚಿತ್ರಕಾವ್ಯದ ರಚನೆಯಲ್ಲಿ ಅವನು ಭಾರವಿ ಮತ್ತು ಮಾಘರಿಂದ ಉಪಕೃತನಾಗಿದ್ದಾನೆ. ನೃಪತುಂಗನು ಹೇಳಿರುವ ಚಿತ್ರಕಾವ್ಯ ಪ್ರಕಾರಗಳಲ್ಲಿ ನಿಸ್ಸಾಲವ್ಯ, ಮುರಜಬಂಧ ಮತ್ತು ಚಕ್ರಬಂಧಗಳನ್ನು ಹೇಳಿರುವ ಪೂರ್ವಕವಿಯೆಂದರೆ ಮಾಘನೊಬ್ಬನು ಮಾತ್ರ. ಅಂದಮೇಲೆ ಅವನು ಮಾಘನ ಪ್ರಭಾವಕ್ಕೊಳಗಾಗಿದ್ದಾನೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ.[13]

**೨. ಪಂಪ :** ಪಂಪನಿಗೆ ಶಿಶುಪಾಲವಧದ ಪರಿಚಯ ಚೆನ್ನಾಗಿ ಇದ್ದಿತೆಂದು ಕಾಣುತ್ತದೆ. ಶಿಶುಪಾಲವಧದ ಪ್ರಥಮ ಸರ್ಗದಲ್ಲಿ ಬರುವ ನಾರದ ಮಹರ್ಷಿಯ ವರ್ಣನೆಗೂ, ಪಂಪನ ವಿಕ್ರಮಾರ್ಜುನವಿಜಯದ ಆರನೆಯ ಆಶ್ವಾಸದಲ್ಲಿ ಬರುವ ನಾರದನ ವರ್ಣನೆಗೂ ಬಹಳವಾದ ಸಾಮ್ಯವಿದೆ. ಅಂತರಿಕ್ಷದಿಂದ ವಸುದೇವನ ಮನೆಗೆ ಇಳಿದು ಬರುತ್ತಿರುವ ನಾರದನನ್ನು ಮಾಘನು ಹೀಗೆ ವರ್ಣಿಸುತ್ತಾನೆ—

ಚಯಸ್ತ್ವಿಷಾಮಿತ್ಯವಧಾರಿತಂ ಪುರಾ
ತತಶ್ಶರೀರೀತಿ ವಿಭಾವಿತಾಕೃತಿಮ್ ।
ವಿಭುರ್ವಿಭಕ್ತಾವಯವಂ ಪುಮಾನಿತಿ
ಕ್ರಮಾದಮುಂ ನಾರದ ಇತ್ಯಬೋಧಿ ಸಃ ॥[14] (ಶಿಶು. ೧. ೩)

ವಸುದೇವನ ಮನೆಯಲ್ಲಿದ್ದ ಶ್ರೀ ಕೃಷ್ಣನು ಅಂತರಿಕ್ಷದಿಂದ ಇಳಿದುಬರುತ್ತಿದ್ದ ವಸ್ತುವನ್ನು ನೋಡಿ "ಮೊದಲಿಗೆ ಒಂದು ತೇಜಃಪುಂಜವೆಂಬುದಾಗಿಯೂ, ಸ್ವಲ್ಪಹತ್ತಿರವಾಗಲು ಸ್ಪಷ್ಟವಾದ ಆಕಾರವುಳ್ಳ ಶರೀರಿಯೆಂಬುದಾಗಿಯೂ, ಇನ್ನೂ ಹತ್ತಿರವಾಗಲು ಮುಖಾದಿ ಅವಯವಗಳು ಗೋಚರಿಸಿ ಒಬ್ಬ ಪುರುಷನೆಂಬುದಾಗಿಯೂ ಕೊನೆಗೆ ನಾರದಮಹರ್ಷಿಯೆಂಬುದಾಗಿಯೂ ತಿಳಿದನು." ಇದನ್ನು ಪಂಪನು ಈ ರೀತಿಯಾಗಿ ಅನುಕರಿಸುತ್ತಾನೆ—

ಬೆಳಗುಗಳೆಲ್ಲಮೊಂದುರುಳಿಯಾಗಿ ನಭಸ್ಥಳದಿಂದಮೀ ಮಹೀ ।
ತಳಕಿಟಿತರ್ಪುದೆಂದು ಮನುಜಾಕೃತಿಯೆಂದು ಮುನೀಂದ್ರನೆಂದು ಕ ॥
ಣ್ಗೊಳಿಸೆ ಮುನೀಂದ್ರರೊಳ್ ಕಮಳಸಂಭವನಂದನನೆಂದು ನೋಟಕರ್ ।
ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ ॥
(ಪಂಪಭಾರತಂ ೬. ೬)

ಪಂಪನು ಇಲ್ಲಿ ಮಾಘನ ಮೇಲಿನ ಶ್ಲೋಕವನ್ನು ಯಥಾವತ್ತಾಗಿ ಕನ್ನಡಿಸಿದ್ದಾನೆಂಬುದು ಸ್ವತಃ ಸ್ಪಷ್ಟವಿದೆ. ಇದೇ ಸಂದರ್ಭದಲ್ಲಿ ಬರುವ ಮಾಘನ ಮತ್ತೊಂದು ಶ್ಲೋಕವನ್ನು ನೋಡಿ—

ಪೂರ್ವಕವಿಗಳಲ್ಲಿ ದುಷ್ಕರಕಾವ್ಯಪ್ರಕಾರವನ್ನು ಹೇಳಿರುವ ಕವಿಗಳೆಂದರೆ ಭಾರವಿ ಮತ್ತು ಮಾಘ ಇವರಿಬ್ಬರು ಮಾತ್ರ. ನೃಪತುಂಗನು ಲಕ್ಷಣಗಳನ್ನು ರಚಿಸುವಲ್ಲಿ ದಂಡಿ ಮತ್ತು ಭಾಮಹರಿಂದ ಹೇಗೆ ಪ್ರಭಾವಿತನಾಗಿದ್ದಾನೋ ಹಾಗೆ ಲಕ್ಷ್ಯಗಳನ್ನು ರಚಿಸುವಲ್ಲಿ ಕಾಳಿದಾಸ, ಭಾರವಿ ಮತ್ತು ಮಾಘರಿಂದ ಪ್ರಭಾವಿತನಾಗಿರುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ವಿಶೇಷವಾಗಿ ಚಿತ್ರಕಾವ್ಯದ ರಚನೆಯಲ್ಲಿ ಅವನು ಭಾರವಿ ಮತ್ತು ಮಾಘರಿಂದ ಉಪಕೃತನಾಗಿದ್ದಾನೆ. ನೃಪತುಂಗನು ಹೇಳಿರುವ ಚಿತ್ರಕಾವ್ಯ ಪ್ರಕಾರಗಳಲ್ಲಿ ನಿಸ್ತಾಲವ್ಯ, ಮುರಜಬಂಧ ಮತ್ತು ಚಕ್ರಬಂಧಗಳನ್ನು ಹೇಳಿರುವ ಪೂರ್ವಕವಿಯೆಂದರೆ ಮಾಘನೊಬ್ಬನು ಮಾತ್ರ. ಅಂದಮೇಲೆ ಅವನು ಮಾಘನ ಪ್ರಭಾವಕ್ಕೊಳಗಾಗಿದ್ದಾನೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ.[13]

**೨. ಪಂಪ :** ಪಂಪನಿಗೆ ಶಿಶುಪಾಲವಧದ ಪರಿಚಯ ಚೆನ್ನಾಗಿ ಇದ್ದಿತೆಂದು ಕಾಣುತ್ತದೆ. ಶಿಶುಪಾಲವಧದ ಪ್ರಥಮ ಸರ್ಗದಲ್ಲಿ ಬರುವ ನಾರದ ಮಹರ್ಷಿಯ ವರ್ಣನೆಗೂ, ಪಂಪನ ವಿಕ್ರಮಾರ್ಜುನವಿಜಯದ ಆರನೆಯ ಆಶ್ವಾಸದಲ್ಲಿ ಬರುವ ನಾರದನ ವರ್ಣನೆಗೂ ಬಹಳವಾದ ಸಾಮ್ಯವಿದೆ. ಅಂತರಿಕ್ಷದಿಂದ ವಸುದೇವನ ಮನೆಗೆ ಇಳಿದು ಬರುತ್ತಿರುವ ನಾರದನನ್ನು ಮಾಘನು ಹೀಗೆ ವರ್ಣಿಸುತ್ತಾನೆ—

ಚಯಸ್ತ್ವಿಷಾಮಿತ್ಯವಧಾರಿತಂ ಪುರಾ
ತತಶ್ಶರೀರೀತಿ ವಿಭಾವಿತಾಕೃತಿಮ್ ।
ವಿಭುರ್ವಿಭಕ್ತಾವಯವಂ ಪುಮಾನಿತಿ
ಕ್ರಮಾದಮುಂ ನಾರದ ಇತ್ಯಬೋಧಿ ಸಃ ॥[14] (ಶಿಶು. ೧. ೩)

ವಸುದೇವನ ಮನೆಯಲ್ಲಿದ್ದ ಶ್ರೀ ಕೃಷ್ಣನು ಅಂತರಿಕ್ಷದಿಂದ ಇಳಿದುಬರುತ್ತಿದ್ದ ವಸ್ತುವನ್ನು ನೋಡಿ "ಮೊದಲಿಗೆ ಒಂದು ತೇಜಃಪುಂಜವೆಂಬುದಾಗಿಯೂ, ಸ್ವಲ್ಪಹತ್ತಿರವಾಗಲು ಸ್ಪಷ್ಟವಾದ ಆಕಾರವುಳ್ಳ ಶರೀರಿಯೆಂಬುದಾಗಿಯೂ, ಇನ್ನೂ ಹತ್ತಿರವಾಗಲು ಮುಖಾದಿ ಅವಯವಗಳು ಗೋಚರಿಸಿ ಒಬ್ಬ ಪುರುಷನೆಂಬುದಾಗಿಯೂ ಕೊನೆಗೆ ನಾರದಮಹರ್ಷಿಯೆಂಬುದಾಗಿಯೂ ತಿಳಿದನು." ಇದನ್ನು ಪಂಪನು ಈ ರೀತಿಯಾಗಿ ಅನುಕರಿಸುತ್ತಾನೆ—

ಬೆಳಗುಗಳೆಲ್ಲಮೊಂದುರುಳಿಯಾಗಿ ನಭಸ್ಥಳದಿಂದಮೀ ಮಹೀ ।
ತಳಕೆಟಿತರ್ಪುದೆಂದು ಮನುಜಾಕೃತಿಯೆಂದು ಮುನೀಂದ್ರನೆಂದು ಕ ॥
ಣ್ಗೊಳಿಸೆ ಮುನೀಂದ್ರರೊಳ್ ಕಮಳಸಂಭವನಂದನನೆಂದು ನೋಟಕರ್ ।
ತಳವೆಳಗಾಗೆ ಸಾರೆವರೆ ನೀರದಮಾರ್ಗದಿನಂದು ನಾರದಂ ॥
(ಪಂಪಭಾರತಂ ೬. ೬)

ಪಂಪನು ಇಲ್ಲಿ ಮಾಘನ ಮೇಲಿನ ಶ್ಲೋಕವನ್ನು ಯಥಾವತ್ತಾಗಿ ಕನ್ನಡಿಸಿದ್ದಾನೆಂಬುದು ಸ್ವತಃ ಸ್ಪಷ್ಟವಿದೆ. ಇದೇ ಸಂದರ್ಭದಲ್ಲಿ ಬರುವ ಮಾಘನ ಮತ್ತೊಂದು ಶ್ಲೋಕವನ್ನು ನೋಡಿ—

ಅಜಸ್ರಮಾಸ್ಫಾಲಿತವಲ್ಲಕೀಗುಣ—
ಕ್ಷತೋಜ್ಜ್ವಲಾಂಗುಷ್ಠನಖಾಂಶುಭಿನ್ನಯಾ।
ಪುರಃ ಪ್ರವಾಲೈರಿವ ಪೂರಿತಾರ್ಧಯಾ
ವಿಭಾನ್ತಮಚ್ಛಸ್ಫಟಿಕಾಕ್ಷಮಾಲಯಾ ॥ (ಶಿಶು ೧. ೯)

"ಒಂದೇ ಸಮನೆ ವೀಣೆಯ ತಂತಿಗಳನ್ನು ಮಿಡಿಯುವುದರಿಂದುಂಟಾದ ಸಂಘರ್ಷದಿಂದ ಕೆಂಪಗಾಗಿರುವ ಹೆಬ್ಬೆಟ್ಟಿನ ಉಗುರಿನ ಕೆಂಪುಕಾಂತಿಯಿಂದ ಕೂಡಿರುವ, ಅದ್ದರಿಂದಲೇ ಮುಂದಣ ಅರ್ಧಭಾಗ ಪ್ರವಾಲ (ಹವಳ)ದಿಂದ ಕೂಡಿದೆಯೋ ಎಂಬಂತೆ ಕಾಣುತ್ತಿರುವ ಸ್ಫಟಿಕಮಣಿಗಳ ಅಕ್ಷಮಾಲೆಯಿಂದ ಶೋಭಿಸುತ್ತಿರುವ (ನಾರದನನ್ನು ಶ್ರೀಕೃಷ್ಣನು ಕಂಡನು)". ಈ ಶ್ಲೋಕವನ್ನು ಪಂಪನ ಕೆಳಗಿನ ಪದ್ಯದೊಡನೆ ಹೋಲಿಸಿ—

ಬೆರಲೊಳ್ ಬೀಣೆಯ ತಂತಿ ಗ।
ಲೊರಸಿದ ಕೆಂಗಡೆಗಳಕ್ಷಮಾಲೆಯೊಳೆಸೆದಂ॥
ತಿರೆ ಪೊಸೆಯೆ ಮುತ್ತು ಪವಳಂ।
ಬೆರಸಿದ ವೋ [ಲಾಯ್ತು] ಚೆನ್ನ ತಪಸಿಯ ಕೆಯ್ಯೊಳ್ ॥
(ಪಂಪಭಾರತಂ ೬. ೧೦)

ಇಲ್ಲಿ ಪಂಪನು ಮಾಘನ ಮೇಲಿನ ಶ್ಲೋಕವನ್ನೆ ಅನುಕರಿಸುತ್ತಿದ್ದಾನೆಂಬುದು ಯಾರಿಗಾದರೂ ಥಟ್ಟನೆ ಗೋಚರಿಸುತ್ತದೆ.

ಇದೇ ಸಂದರ್ಭದಲ್ಲಿ ಬರುವ ಪಂಪನ ಇನ್ನೊಂದು ಪದ್ಯವು ಮಾಘನ ಅನೇಕ ಅಭಿವ್ಯಕ್ತಿಗಳ ಜೋಡಣೆಯಾಗಿ ಕಾಣಿಸುತ್ತದೆ :

ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನಮುಂಜಿ ತೊಳೆಪ್ಪ ಕ।
ರ್ಪುರದ ಭಸ್ಮರಜ [ತ್ರಿಪುಂಡ್ರ] ಕಮೊಪ್ಪೆ ಪಿಂಗಜಟಾಳಿ ತಾ॥
ವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ।
ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ॥ (ಪಂಪಭಾರತಂ ೬.೮)

ಈ ಪದ್ಯದ ಮೇಲೆ ಮಾಘನ "ಸಮೂಢ ಕರ್ಪೂರಪರಾಗ ಪಾಂಡುರಂ" ಅಂಭೋರುಹ ಕೇಸರ ದ್ಯುತೀರ್ಜಟಾಃ", "ಪಿಶಂಗಮೌಂಜೀಯುಜಂ", "ಸುವರ್ಣಸೂತ್ರಾಕಲಿತಾಧರಾಂಬರಮ್" ಮತ್ತು "ಹಿರಣ್ಮಯೋರ್ವೀರುಹವಲ್ಲಿತಂತುಭಿಃ ಕೃತೋಪವೀತಂ" (ಶಿಶು. ೧.೪–೭) ಈ ಅಭಿವ್ಯಕ್ತಿಗಳ ಪ್ರಭಾವವನ್ನು ಕಾಣಬಹುದು.

ಪಂಪನು ೧೩ನೇ ಆಶ್ವಾಸದ ಒಂದು ವಚನದಲ್ಲಿ ಸಿದ್ಧಿತ್ರಯಗಳ ವಿಚಾರವನ್ನು ಪ್ರಸ್ತಾಪಿಸುತ್ತಾನೆ. ಆ ವಚನ ಇಂತಿದೆ :

ಅದಲ್ಲದೆಯುಂ ಸಿದ್ಧಿತ್ರಯಂಗಳ್ ನಿನಗಾತ್ಮೀಯಮಾಯತ್ತ ಸಿದ್ಧಿಯಾಗಿ ನಿಂದುದಱಿಂ ನೀನೆ ವೀರವೃತ್ತಮಂ ತಾಳ್ದಿ ನಿಲ್ವುದೆನೆ (ಪಂಪಭಾರತಂ–೧೩. ೩೧ ವಚನ)

ಇಲ್ಲಿ ಅವನು ಹೇಳುವ ಸಿದ್ಧಿತ್ರಯಗಳು ಮಾಘನು ಮಂತ್ರಾಲೋಚನಸರ್ಗ (೨ನೇ ಸರ್ಗ)ದಲ್ಲಿ ಹೇಳಿರುವ ಸಿದ್ಧಿತ್ರಯದಿಂದ ಪ್ರಭಾವಿತವಾಗಿರುವಂತೆ ತೋರುತ್ತದೆ[15]

ಅಜಸ್ರಮಾಸ್ಫಾಲಿತವಲ್ಲಕೀಗುಣ—
ಕ್ಷತೋಜ್ಜ್ವಲಾಂಗುಷ್ಠನಖಾಂಶುಭಿನ್ನಯಾ ।
ಪುರಃ ಪ್ರವಾಲೈರಿವ ಪೂರಿತಾರ್ಧಯಾ
ವಿಭಾನ್ತಮಚ್ಛಸ್ಫಟಿಕಾಕ್ಷಮಾಲಯಾ ॥ (ಶಿಶು ೧. ೯)

"ಒಂದೇ ಸಮನೆ ವೀಣೆಯ ತಂತಿಗಳನ್ನು ಮಿಡಿಯುವುದರಿಂದುಂಟಾದ ಸಂಘರ್ಷದಿಂದ ಕೆಂಪಾಗಿರುವ ಹೆಬ್ಬೆಟ್ಟಿನ ಉಗುರಿನ ಕೆಂಪುಕಾಂತಿಯಿಂದ ಕೂಡಿರುವ, ಆದ್ದರಿಂದಲೇ ಮುಂದಣ ಅರ್ಧಭಾಗ ಪ್ರವಾಲ (ಹವಳ)ದಿಂದ ಕೂಡಿದೆಯೋ ಎಂಬಂತೆ ಕಾಣುತ್ತಿರುವ ಸ್ಫಟಿಕಮಣಿಗಳ ಅಕ್ಷಮಾಲೆಯಿಂದ ಶೋಭಿಸುತ್ತಿರುವ (ನಾರದನನ್ನು ಶ್ರೀಕೃಷ್ಣನು ಕಂಡನು)". ಈ ಶ್ಲೋಕವನ್ನು ಪಂಪನ ಕೆಳಗಿನ ಪದ್ಯದೊಡನೆ ಹೋಲಿಸಿ—

ಬೆರಲೊಳ್ ಬೀಣೆಯ ತಂತಿ ಗ ।
ಟೊರಸಿದ ಕೆಂಗಡೆಗಳಕ್ಷಮಾಲೆಯೊಳೆಸೆದಂ ॥
ತಿರೆ ಪೊಸೆಯೆ ಮುತ್ತುಪವಳಂ ।
ಬೆರಸಿದ ವೋ [ಲಾಯ್ತು] ಚೆನ್ನ ತಪಸಿಯ ಕೆಯ್ಯೊಳ್ ॥
(ಪಂಪಭಾರತಂ ೬. ೧೦)

ಇಲ್ಲಿ ಪಂಪನು ಮಾಘನ ಮೇಲಿನ ಶ್ಲೋಕವನ್ನೆ ಅನುಕರಿಸುತ್ತಿದ್ದಾನೆಂಬುದು ಯಾರಿಗಾದರೂ ಥಟ್ಟನೆ ಗೋಚರಿಸುತ್ತದೆ.

ಇದೇ ಸಂದರ್ಭದಲ್ಲಿ ಬರುವ ಪಂಪನ ಇನ್ನೊಂದು ಪದ್ಯವು ಮಾಘನ ಅನೇಕ ಅಭಿವ್ಯಕ್ತಿಗಳ ಜೋಡಣೆಯಾಗಿ ಕಾಣಿಸುತ್ತದೆ :

ಸರಿಗೆಯೊಳ್ ಸಮೆದಕ್ಷಮಾಲಿಕೆ ಪೊನ್ನಮುಂಜಿ ತೊಳೆಪ್ಪ ಕ ।
ಪ್ಪುರದ ಭಸ್ಮರಜ [ತ್ರಿಪುಂಡ್ರ] ಕಮೊಪ್ಪೆ ಪಿಂಗಜಟಾಳಿ ತಾ ॥
ವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ।
ಕರಮೊಡಂಬಡೆ ನೋಟಕರ್ಕಳನಾ ತಪಸ್ವಿ ಮರುಳ್ಚಿದಂ ॥ (ಪಂಪಭಾರತಂ ೬.೮)

ಈ ಪದ್ಯದ ಮೇಲೆ ಮಾಘನ "ಸಮೂಢ ಕರ್ಪೂರಪರಾಗ ಪಾಂಡುರಂ" ಅಂಭೋರುಹ ಕೇಸರ ದ್ಯುತೀರ್ಜಟಾಃ", "ಪಿಶಂಗಮೌಂಜೀಯುಜಂ", "ಸ್ವರ್ಣಸೂತ್ರಾಕಲಿತಾಧರಾಂಬರಮ್" ಮತ್ತು "ಹಿರಣ್ಮಯೋರ್ವೀರುಹವಲ್ಲಿತಂತುಭಿಃ ಕೃತೋಪವೀತಂ" (ಶಿಶು. ೧.೪–೭) ಈ ಅಭಿವ್ಯಕ್ತಿಗಳ ಪ್ರಭಾವವನ್ನು ಕಾಣಬಹುದು.

ಪಂಪನು ೧೩ನೇ ಆಶ್ವಾಸದ ಒಂದು ವಚನದಲ್ಲಿ ಸಿದ್ಧಿತ್ರಯಗಳ ವಿಚಾರವನ್ನು ಪ್ರಸ್ತಾಪಿಸುತ್ತಾನೆ. ಆ ವಚನ ಇಂತಿದೆ :

ಅದಲ್ಲದೆಯುಂ ಸಿದ್ಧಿತ್ರಯಂಗಳ್ ನಿನಗಾತ್ಮೀಯಾಯತ್ತ ಸಿದ್ಧಿಯಾಗಿ ನಿಂದುದಱಿಂ ನೀನೆ ಬೀರವಟ್ಟಮಂ ತಾಳ್ದಿ ನಿಲ್ವುದೆನೆ (ಪಂಪಭಾರತಂ–೧೩. ೩೧ ವಚನ)

ಇಲ್ಲಿ ಅವನು ಹೇಳುವ ಸಿದ್ಧಿತ್ರಯಗಳು ಮಾಘನು ಮಂತ್ರಾಲೋಚನಸರ್ಗ (೨ನೇ ಸರ್ಗ)ದಲ್ಲಿ ಹೇಳಿರುವ ಸಿದ್ಧಿತ್ರಯದಿಂದ ಪ್ರಭಾವಿತವಾಗಿರುವಂತೆ ತೋರುತ್ತದೆ[15]

**೩. ರನ್ನ :** ಮಾಘನಿಂದ ಪ್ರಭಾವಿತನಾಗಿರುವ ಮತ್ತೊಬ್ಬ ಹಳಗನ್ನಡ ಮಹಾಕವಿಯೆಂದರೆ 'ಸಾಹಸಭೀಮವಿಜಯಂ' (ಗದಾಯುದ್ಧಂ)ಕಾವ್ಯದ ಕರ್ತೃ ರನ್ನ. ದ್ರೋಣನನ್ನು ವಂಚನೆಯಿಂದ ಕೊಲ್ಲಿಸಿದ ಧರ್ಮರಾಜನನ್ನು ರನ್ನನು ಮೂದಲಿಸುವ ಪರಿಯನ್ನು ನೋಡಿ :

ಕಳಶಜನನಿಂತು ಕೊಲಿಸಿದ
ಖಳನೆ ಗಡಂ ಧರ್ಮನಂದನಂ ಕ್ರೂರದಿನಂ ।
ಗಳ ಪೆಸರಂ ಮಱೆಯಿಸಿ ಮಂ
ಗಳವಾರಂ ಕಡ್ಡವಾರಮೆಂಬಂತೆ ವಲಂ ॥[16] (ಗದಾಯುದ್ಧಂ, ೩. ೨೬)

(ವಂಚನೆಯಿಂದ ತನ್ನ ಗುರುವಾದ ದ್ರೋಣನ ಸಾವಿಗೆ ಕಾರಣನಾದ ಧರ್ಮರಾಜ ನಿಜವಾಗಿಯೂ ಖಳನೇ ಸರಿ. ಅಮಂಗಳವಾರವು ಮಂಗಳವಾರವೆನ್ನಿಸಿಕೊಳ್ಳುವಂತೆ ಖಳನಾದ (ಅಧರ್ಮರಾಜ) ಧರ್ಮರಾಜನು ಧರ್ಮನಂದನನೆನಿಸಿಕೊಳ್ಳುತ್ತಾನೆ).

ರನ್ನನ ಈ ಪದ್ಯದ ಮೇಲೆ 'ಶಿಶುಪಾಲವಧ'ದ ರಾಜಸೂಯಯಾಗಪ್ರಸಂಗದ ಒಂದು ಶ್ಲೋಕದ ನೇರವಾದ ಪ್ರಭಾವವಿರುವಂತೆ ಕಂಡುಬರುತ್ತದೆ. ಆ ಶ್ಲೋಕ ಈ ಕೆಳಗಿನಂತಿದೆ—

ತವ ಧರ್ಮರಾಜ ಇತಿ ನಾಮ ಕಥಮಿದಮಪಠ್ಯ ಪಠ್ಯತೇ ।
ಭೌಮದಿನಮಭಿದಧತ್ಯಥವಾ ಭೃಶಮಪ್ರಶಸ್ತಮಪಿ ಮಂಗಲಂ ಜನಾಃ ॥
(ಶಿಶು. ೧೫. ೧೭)

ಶ್ರೀಕೃಷ್ಣನಿಗೆ ಅಗ್ರತಾಂಬೂಲವನ್ನರ್ಪಿಸಿದ ಧರ್ಮರಾಜನನ್ನು ಶಿಶುಪಾಲನು ನಿಂದಿಸುವಾಗಿನ ಮಾತಿದು : "ನಿನಗೆ ಧರ್ಮರಾಜನೆಂಬ ಅಸತ್ಯವಾದ ಹೆಸರು ಜನರಿಂದ ಹೇಗೆ ತಾನೆ ಇಡಲ್ಪಟ್ಟಿತು ? ಅಥವಾ ಅಪ್ರಶಸ್ತವಾದರೂ ಭೌಮದಿನವನ್ನು ಮಂಗಲವಾರವೆನ್ನುವಂತೆ ಇದು ನಿನ್ನ ವಿಷಯದಲ್ಲಿಯೂ ಸಲ್ಲುತ್ತದೆ."

ರನ್ನನ ಬಹಳ ಪ್ರಸಿದ್ಧವಾದ "ನೀರೊಳಗಿರ್ದುಂ ಬೆಮರ್ತನುರಗಪತಾಕಂ" (ಗದಾ. ೭. ೨೨) ಎನ್ನುವ ಅಭಿವ್ಯಕ್ತಿಯೂ ಪ್ರಾಯಃ ಮಾಘನಿಂದಲೇ ಪ್ರೇರಿತವಾಗಿದ್ದಿರಬೇಕು. ಶಿಶುಪಾಲವಧದ ಜಲಕ್ರೀಡಾ ವರ್ಣನೆಯಲ್ಲಿ ಬರುವ ಒಂದು ಶ್ಲೋಕದಲ್ಲಿ ಇದೇ ರೀತಿಯಾದ ಅಂದರೆ ನೀರೊಳಗಿದ್ದೂ ಬೆವರುವ ಅಭಿವ್ಯಕ್ತಿಯನ್ನು ಕಾಣುತ್ತೇವೆ.

ಆನಂದಂ ದಧತಿ ಮುಖೇ ಕರೋದಕೇನ
ಶ್ಯಾಮಾಯಾಃ[17] ದಯಿತತಮೇನ ಸಿಚ್ಯಮಾನೇ ।
ಈರ್ಷ್ಯಾಯಾಃ ವದನಮಸಿಕ್ತಮಪ್ಯಸಪ್ತ್ಯಾ
ಸ್ವೇದಾಂಬುಸ್ನಪಿತಮಜಾಯತೇತರಸ್ಯಾಃ ॥ (ಶಿಶು. ೮. ೩೩)

"(ಜಲಕ್ರೀಡೆಯ ಸಮಯದಲ್ಲಿ) ಪ್ರಿಯತಮನು ತನ್ನ ಸವತಿಯ ಮುಖವನ್ನು ಕರೋದಕದಿಂದ ತಂಪಡಿಸುತ್ತಿರುವಾಗ ಅವಳ ಮುಖವು ಆನಂದಾತಿರೇಕದಿಂದ ಅರಳಿ

**೩. ರನ್ನ :** ಮಾಘನಿಂದ ಪ್ರಭಾವಿತನಾಗಿರುವ ಮತ್ತೊಬ್ಬ ಹಳಗನ್ನಡ ಮಹಾಕವಿ ಯೆಂದರೆ 'ಸಾಹಸಭೀಮವಿಜಯಂ' (ಗದಾಯುದ್ಧಂ)ಕಾವ್ಯದ ಕರ್ತೃ ರನ್ನ, ದ್ರೋಣ ನನ್ನು ವಂಚನೆಯಿಂದ ಕೊಲ್ಲಿಸಿದ ಧರ್ಮರಾಜನನ್ನು ರನ್ನನು ಮೂದಲಿಸುವ ಪರಿಯನ್ನು ನೋಡಿ :

ಕಳಶಜನನಿಂತು ಕೊಲಿಸಿದ
ಖಳನೆ ಗಡಂ ಧರ್ಮನಂದನಂ ಕ್ರೂರದಿನಂ ।
ಗಳ ಪೆಸರಂ ಮಱೆಯಿಸಿ ಮಂ
ಗಳವಾರಂ ಕಡ್ಡವಾರಮೆಂಬಂತೆ ವಲಂ ॥[16] (ಗದಾಯುದ್ಧಂ, ೩, ೨೬)

(ವಂಚನೆಯಿಂದ ತನ್ನ ಗುರುವಾದ ದ್ರೋಣನ ಸಾವಿಗೆ ಕಾರಣನಾದ ಧರ್ಮರಾಜ ನಿಜವಾಗಿಯೂ ಖಳನೇ ಸರಿ. ಅಮಂಗಳವಾರವು ಮಂಗಳವಾರವೆನ್ನಿಸಿಕೊಳ್ಳುವಂತೆ ಖಳನಾದ (ಅಧರ್ಮರಾಜ) ಧರ್ಮರಾಜನು ಧರ್ಮನಂದನನೆನಿಸಿಕೊಳ್ಳುತ್ತಾನೆ).

ರನ್ನನ ಈ ಪದ್ಯದ ಮೇಲೆ 'ಶಿಶುಪಾಲವಧ'ದ ರಾಜಸೂಯಯಾಗಪ್ರಸಂಗದ ಒಂದು ಶ್ಲೋಕದ ನೇರವಾದ ಪ್ರಭಾವವಿರುವಂತೆ ಕಂಡುಬರುತ್ತದೆ. ಆ ಶ್ಲೋಕ ಈ ಕೆಳಗಿನಂತಿದೆ—

ತವ ಧರ್ಮರಾಜ ಇತಿ ನಾಮ ಕಥಮಿದಮಪಪಠ್ಯತೇ ।
ಭೌಮದಿನಮಭಿದಧತ್ಯಥವಾ ಭೃಶಮಪ್ರಶಸ್ತಮಪಿ ಮಂಗಲಂ ಜನಾಃ ॥
(ಶಿಶು. ೧೫, ೧೬)

ಶ್ರೀಕೃಷ್ಣನಿಗೆ ಅಗ್ರತಾಂಬೂಲವನ್ನರ್ಪಿಸಿದ ಧರ್ಮರಾಜನನ್ನು ಶಿಶುಪಾಲನು ನಿಂದಿಸುವಾಗಿನ ಮಾತಿದು : "ನಿನಗೆ ಧರ್ಮರಾಜನೆಂಬ ಅಸತ್ಯವಾದ ಹೆಸರು ಜನರಿಂದ ಹೇಗೆ ತಾನೆ ಇಡಲ್ಪಟ್ಟಿತು ? ಅಥವಾ ಅಪ್ರಶಸ್ತವಾದರೂ ಭೌಮದಿನವನ್ನು ಮಂಗಲವಾರವೆನ್ನುವಂತೆ ಇದು ನಿನ್ನ ವಿಷಯದಲ್ಲಿಯೂ ಸಲ್ಲುತ್ತದೆ."

ರನ್ನನ ಬಹಳ ಪ್ರಸಿದ್ಧವಾದ "ನೀರೊಳಗಿರ್ದುಂ ಬೆಮರ್ತನುರಗಪತಾಕಂ" (ಗದಾ. ೭. ೨೨) ಎನ್ನುವ ಅಭಿವ್ಯಕ್ತಿಯು ಪ್ರಾಯಃ ಮಾಘನಿಂದಲೇ ಪ್ರೇರಿತವಾಗಿದ್ದಿರಬೇಕು. ಶಿಶುಪಾಲವಧದ ಜಲಕ್ರೀಡಾ ವರ್ಣನೆಯಲ್ಲಿ ಬರುವ ಒಂದು ಶ್ಲೋಕದಲ್ಲಿ ಇದೇ ರೀತಿಯಾದ ಅಂದರೆ ನೀರೊಳಗಿದ್ದೂ ಬೆವರುವ ಅಭಿವ್ಯಕ್ತಿಯನ್ನು ಕಾಣುತ್ತೇವೆ.

ಆನಂದಂ ದಧತಿ ಮುಖೇ ಕರೋದಕೇನ
ಶ್ಯಾಮಾಯಾಃ[17] ದಯಿತತಮೇನ ಸಿಚ್ಯಮಾನೇ ।
ಈರ್ಷ್ಯಾನ್ಯಾ ವದನಮಸಿಕ್ತಮಪ್ಯನಲ್ಪ
ಸ್ವೇದಾಂಬುಸ್ನಪಿತಮಜಾಯತೇತರಸ್ಯಾಃ ॥ (ಶಿಶು. ೮. ೨೬)

"(ಜಲಕ್ರೀಡೆಯ ಸಮಯದಲ್ಲಿ) ಪ್ರಿಯತಮನು ತನ್ನ ಸವತಿಯ ಮುಖವನ್ನು ಕರೋದಕದಿಂದ ಸಿಂಪಡಿಸುತ್ತಿರುವಾಗ ಅವಳ ಮುಖವು ಆನಂದಾತಿರೇಕದಿಂದ ಅರಳು

ತ್ರಿರಲು ಆ ಸವತಿಯ ಮುಖವನ್ನು ನೋಡಿದ ಒಬ್ಬ ಸುಂದರಿಯ ಮುಖವು ಈರ್ಷ್ಯಾ-ಕೋಪದಿಂದುಂಟಾದ ಬೆವರಿನ ಹನಿಗಳಿಂದಾಗಿ ಅಸಿಕ್ತವಾಗಿದ್ದರೂ ಸಿಕ್ತವಾದದ್ದಾಯಿತು."

ರನ್ನನ ದುರ್ಯೋಧನನು ಕ್ರೋಧೋನ್ಮತ್ತನಾಗಿ ನೀರಿನಲ್ಲಿದ್ದೂ ಬೆವರಿದರೆ ಮಾಘನ ಈರ್ಷ್ಯೋನ್ಮತ್ತ ಸುಂದರಿಯು ನೀರಿನಲ್ಲಿದ್ದೂ ಬೆವರುತ್ತಾಳೆ. ನೀರಲ್ಲಿದ್ದು ಬೆವರುವ ಕಲ್ಪನೆ ಇಬ್ಬರಲ್ಲಿಯೂ ಸಮನಾಗಿದೆ. ಆದ್ದರಿಂದ ರನ್ನನು ಮಾಘನಿಂದ ಇಲ್ಲಿ ಪ್ರೇರಣೆಯನ್ನು ಪಡೆದಿರಬಹುದೆಂದು ಊಹಿಸಲವಕಾಶವಿದೆ. ಮಾಘನ 'ಅಸಿಕ್ತಮಪ್ಯನಲ್ಪಸ್ವೇದಾಂಬುಸ್ನಪಿತಮಜಾಯತ' ಎನ್ನುವ ಮಾತು ರನ್ನನಲ್ಲಿ 'ನೀರೊಳಗಿರ್ದುಂ ಬೆಮರ್ತನ್' ಎಂದಾಗಿರುವಂತೆ ತೋರುತ್ತದೆ. ರನ್ನನ ಕಲ್ಪನೆ ಮಾಘನ ಕಲ್ಪನೆಗಿಂತ ಸಂದರ್ಭಗೌರವದಿಂದಾಗಿ ಹೆಚ್ಚು ಸಮಂಜಸವೂ ಮತ್ತು ಸುಂದರವೂ ಆಗಿ ಕಾಣುತ್ತದೆಂಬುದರಲ್ಲಿ ಸಂಶಯವಿಲ್ಲ.

**೪. ನಾಗವರ್ಮ :** ನಾಗವರ್ಮನು ೧೧ನೇ ಶತಮಾನದ ಒಬ್ಬ ಪ್ರಸಿದ್ಧ ಕನ್ನಡ ಆಲಂಕಾರಿಕ. ಅವನ 'ಕಾವ್ಯಾವಲೋಕನ'ವು ಒಂದು ಉಪಯುಕ್ತ ಅಲಂಕಾರ ಗ್ರಂಥ. ಲಕ್ಷಣಗಳ ರಚನೆಯಲ್ಲಿ ತಾನು ಭಾಮಹ, ದಂಡಿ, ವಾಮನ, ರುದ್ರಟ ಮುಂತಾದ ಸಂಸ್ಕೃತ ಲಾಕ್ಷಣಿಕರನ್ನನನುಕರಿಸಿದ್ದೇನೆಂದು ಸ್ವತಃ ನಾಗವರ್ಮನೇ ಹೇಳಿಕೊಂಡಿದ್ದಾನೆ.[18] ಇದರಂತೆಯೇ ಲಕ್ಷ್ಯಗಳ ಆಯ್ಕೆಯಲ್ಲಿಯೂ ಕೆಲವು ಸಂಸ್ಕೃತ ಕವಿಕೃತಿಗಳ ಅನುವಾದಿತ ಪದ್ಯಗಳು ಸೇರಿಕೊಂಡಿವೆ.[19]

'ಶಿಶುಪಾಲವಧ'ದ ಪ್ರಥಮಸರ್ಗದಲ್ಲಿ ನಾರದಮಹರ್ಷಿಯ ಮುಂದೆ ಆಸನದಲ್ಲಿ ಕುಳಿತ ಶ್ರೀಕೃಷ್ಣನನ್ನು ವರ್ಣಿಸುವ ಒಂದು ಶ್ಲೋಕ ಇಂತಿದೆ—

> ಸ ತಪ್ತಕಾರ್ತಸ್ವರಭಾಸ್ವರಾಂಬರಃ ಕಠೋರತಾರಾಧಿಪಲಾಂಛನಚ್ಛವಿಃ ।
> ವಿದಿದ್ಯುತೇ ವಾಡವಜಾತವೇದಸಃ ಶಿಖಾಭಿರಾಶ್ಲಿಷ್ಟ ಇವಾಂಭಸಾಂ ನಿಧಿಃ ॥
>
> (ಶಿಶು. ೧–೨೦)

"ತಪ್ತ ಸುವರ್ಣದಂತೆ ದೇದೀಪ್ಯಮಾನವಾದ ಪೀತಾಂಬರವನ್ನು ಧರಿಸಿರುವ, ಪೂರ್ಣಚಂದ್ರನ ಲಾಂಛನದಂತೆ (ಚಂದ್ರನೊಳಗಿನ ಕಪ್ಪು) ಕಾಂತಿಯಿಂದ ಕೂಡಿರುವ ಶ್ರೀಕೃಷ್ಣನು ವಡವಾಗ್ನಿಯ ಹೊಂಬಣ್ಣದ ಶಿಖೆಗಳಿಂದ ಆವೃತನಾಗಿರುವ ಸಮುದ್ರನಂತೆ ಶೋಭಿಸಿದನು."

ಕವಿಸಮಯಾಧಿಕರಣದಲ್ಲಿ ಬರುವ ಕಾವ್ಯಾವದೊಳಗಿನ ಈ ವೃತ್ತ ಮಾಘನ ಮೇಲಿನ ಪದ್ಯದಿಂದ ಪ್ರಭಾವಿತವಾಗಿರುವಂತೆ ಕಂಡು ಬರುತ್ತದೆ.

> ವಿದಳತ್ಕಿಂಶುಕಕಿಂಕಿರಾತಸುಮನಃ ಕಾಶ್ಮೀರಸಂಧ್ಯೋದ್ಗತಾಂ
> ಬುದ ಪೀತಾಂಬರ ನಿಂದ್ರನೀಲ ವಿಲಸ ನ್ನೀಲಾತಸೀನೀಲನೀ ।
> ರದನೀಲಾಂಬುಜವರ್ಣನರ್ಣವಯುಶಂ ಕೃಷ್ಣಂ ಧರಾದೇವಿಗೊ
> ಪ್ಪಿದನಂತಜ್ವಲದೌರ್ವವಹ್ನಿಲವಣಾಂಭೋರಾಶಿಲೀಲಾವಹಂ ॥
>
> (ಕಾವ್ಯಾವಲೋಕನಂ. ೯೨೫)

ಮಾಘನ "ವಿದಿದ್ಯುತೇ ವಾಡವಜಾತವೇದಸಃ ಶಿಖಾಭಿರಾಶ್ಲಿಷ್ಟ ಇವಾಂಭಸಾಂ ನಿಧಿಃ" ಎಂಬುದು ಉದ್ಧೃತ ಲಕ್ಷ್ಯದಲ್ಲಿ "ಒಪ್ಪಿದನಂತರ್ಜ್ವಲದೌರ್ವವಹ್ನಿಲವಣಾಂಭೋರಾಶಿಲೀಲಾವಹಂ" ಎಂದಾಗಿದೆ.

ಇದೇ ಸಂದರ್ಭದಲ್ಲಿ ಬರುವ ಮತ್ತೊಂದು ಶ್ಲೋಕದಲ್ಲಿ ಶ್ರೀಕೃಷ್ಣನು ಸ್ಮಿತವದನನಾಗಿ ನಾರದನನ್ನು ಕುರಿತು ಮಾತನಾಡುವುದನ್ನು ಮಾಘನು ಹೀಗೆ ಚಿತ್ರಿಸುತ್ತಾನೆ :

ಸಿತಂ ಸಿತಿಮ್ನಾ ಸುತರಾಂ ಮುನೇರ್ವಪುರ್ವಿಸಾರಿಭಿಸ್ಸೌಧಮಿವಾಥ ಲಂಭಯನ್ ।
ದ್ವಿಜಾವಳಿವ್ಯಾಜನಿಶಾಕರಾಂಶುಭಿಃ ಶುಚಿಸ್ಮಿತಾಂ ವಾಚಮವೋಚದಚ್ಯುತಃ ॥

(ಶಿಶು. ೧.೨೫)

"ಶ್ರೀಕೃಷ್ಣನು ತನ್ನ ದಂತಪಂಕ್ತಿಯೆಂಬ ನಿಶಾಕರನ ಕಿರಣಗಳಿಂದ ಸ್ವಭಾವದಿಂದಲೇ ಬೆಳ್ಳಗಿರುವ ನಾರದನ ಶರೀರವನ್ನು ಸುಣ್ಣಬಳಿದ ಸೌಧದಂತೆ ಮತ್ತಷ್ಟು ಬೆಳ್ಳಗೆ ಮಾಡುತ್ತಾ ಶುದ್ಧವಾದ ಮಂದಹಾಸದಿಂದ ಕೂಡಿದ ಮಾತುಗಳನ್ನಾಡಿದನು."

ಇಲ್ಲಿ ಮಾಘನು "ಸೌಧಮಿವ" ಎಂಬಲ್ಲಿ ಉಪಮೆಯನ್ನೂ, "ಸಿತಿಮ್ನಾ ಲಂಭಯನ್" ಅನ್ನುವಲ್ಲಿ ಅಸಂಬಂಧ ರೂಪಾತಿಶಯೋಕ್ತಿಯನ್ನೂ ಮತ್ತು "ದ್ವಿಜಾವಲಿವ್ಯಾಜ ನಿಶಾಕರ" ಎಂಬಲ್ಲಿ ಅಪಹ್ನವಾಲಂಕಾರವನ್ನೂ (ಇದು 'ವ್ಯಾಜ' ಶಬ್ದದಿಂದ ಸೂಚಿತವಾಗುತ್ತದೆ) ಹೀಗೆ ಮೂರು ಅಲಂಕಾರಗಳನ್ನು ಉಪಯೋಗಿಸಿ ಈ ಶ್ಲೋಕವನ್ನು ಸುಂದರಗೊಳಿಸಿದ್ದಾನೆ.

ಕಾವ್ಯಾವಲೋಕನದ ಕವಿಸಮಯಾಧಿಕರಣದಲ್ಲಿಯ ಲಕ್ಷ್ಯ ಹೀಗಿದೆ :

ತೊಳಪ ದಂತಮರೀಚಿಸಂತತಿ ಪರ್ವಿ ಬಳ್ವಳ ನೀಳ್ದು ಗೊಂ
ದಳಿಸಿ ಬಾಳಮೃಗಾಂಕದೀಧಿತಿಜಾಳ ಮಂಜರಿಗಳ್ ಜಗ ।
ದ್ವಳಯಮಂ ಬೆಳಪಂತೆ ಬಂದು ಸಭಾಂತರಾಳಮನೆಲ್ಲಮಂ
ಬೆಳಗೆ ಭೂವಳಯಾಧಿಪಂ ನುಡಿಗುಂ ಸ್ವಚಿತ್ತಗತಾರ್ಥಮಂ ॥ (ಪ. ೮೭೫)

'ಶಿಶುಪಾಲವಧ'ದ ಎರಡನೇ ಸ್ವರ್ಗಕ್ಕೆ 'ಮಂತ್ರವರ್ಣನ' ಸರ್ಗವೆಂದು ಹೆಸರು. ಇದು ಶಿಶುಪಾಲವಧದ ಅತ್ಯಂತ ಸುಂದರವಾದ ಸರ್ಗಗಳಲ್ಲೊಂದು. ಶ್ರೀಕೃಷ್ಣ, ಬಲರಾಮ ಮತ್ತು ಉದ್ಧವ ಇವರು ಮೂವರು ಮಂತ್ರಾಲೋಚನೆಗಾಗಿ ಸೇರಿದ್ದಾರೆ. ಯುಗಪತ್ಪ್ರಾಪ್ತವಾದ ಧರ್ಮರಾಜನ ಯಾಗಕ್ಕೆ ಹೋಗುವುದು ಉಚಿತವೇ ಅಥವಾ ದೇವತೆಗಳ ಸಂದೇಶವನ್ನು ಹೊತ್ತು ತಂದಿರುವ ನಾರದನ ಮಾತಿನಂತೆ ಶಿಶುಪಾಲನನ್ನು ನಿಗ್ರಹಿಸಲು ಅವನ ಮೇಲೆ ದಂಡೆತ್ತಿ ಹೋಗಬೇಕೆ ಎಂಬೀ ಎರಡು ವಿಷಯಗಳೇ ಅವರ ಮುಂದಿರುವ ಮಂತ್ರಾಲೋಚನೆಯ ವಸ್ತು. ಈ ಸಂದರ್ಭದಲ್ಲಿ ಶಿಶುಪಾಲನ ಮೇಲೆ ದಂಡೆತ್ತಿ ಹೋಗುವುದೇ ಸೂಕ್ತವೆಂದು ವಾದಿಸುವ ಬಲರಾಮನ ಒಂದು ಮಾತು ಹೀಗಿದೆ—

ಅಂಕಾಧಿರೋಪಿತಮೃಗಶ್ಚಂದ್ರಮಾ ಮೃಗಲಾಂಛನಃ ।
ಕೇಸರೀನಿಷ್ಠುರಕ್ಷಿಪ್ತಮೃಗಯೂಥೋ ಮೃಗಾಧಿಪಃ ॥ (ಶಿಶು. ೨.೫೩)

"ಕರುಣೆಯಿಂದ ತೊಡೆಯ ಮೇಲೆ ಮೃಗವನ್ನು ಕೂರಿಸಿಕೊಂಡ ಚಂದ್ರನು 'ಮೃಗಲಾಂಛನ' ನೆನಿಸಿಕೊಳ್ಳುತ್ತಾನೆ. ಆದೇ ಬಹಳ ನಿಷ್ಕರುಣೆಯಿಂದ ಮೃಗಗಳನ್ನು ಬೇಟೆ

ಮಾಘನ "ವಿದಿದ್ಯುತೇ ವಾಡವಜಾತವೇದಸಃ ಶಿಖಾಭಿರಾಶ್ಲಿಷ್ಟ ಇವಾಂಭಸಾಂ ನಿಧಿಃ" ಎಂಬುದು ಉದ್ಧೃತ ಲಕ್ಷ್ಯದಲ್ಲಿ "ಒಪ್ಪಿದನಂತರ್ಜ್ವಲದೌರ್ವವಹ್ನಿಲವಣಾಂಭೋರಾಶಿಲೀಲಾವಹಂ" ಎಂದಾಗಿದೆ.

ಇದೇ ಸಂದರ್ಭದಲ್ಲಿ ಬರುವ ಮತ್ತೊಂದು ಶ್ಲೋಕದಲ್ಲಿ ಶ್ರೀಕೃಷ್ಣನು ಸ್ಮಿತವದನನಾಗಿ ನಾರದನನ್ನು ಕುರಿತು ಮಾತನಾಡುವುದನ್ನು ಮಾಘನು ಹೀಗೆ ಚಿತ್ರಿಸುತ್ತಾನೆ :

ಸಿತಂ ಸಿತಿಮ್ನಾ ಸುತರಾಂ ಮುನೇರ್ವಪುರ್ವಿಸಾರಿಭಿಸ್ಸೌಧಮಿವಾಥ ಲಂಭಯನ್ ।
ದ್ವಿಜಾವಳಿವ್ಯಾಜನಿಶಾಕರಾಂಶುಭಿಃ ಶುಚಿಸ್ಮಿತಾಂ ವಾಚಮವೋಚದಚ್ಯುತಃ ॥
(ಶಿಶು. ೧.೨೫)

"ಶ್ರೀಕೃಷ್ಣನು ತನ್ನ ದಂತಪಂಕ್ತಿಯೆಂಬ ನಿಶಾಕರನ ಕಿರಣಗಳಿಂದ ಸ್ವಭಾವದಿಂದಲೇ ಬೆಳ್ಳಗಿರುವ ನಾರದನ ಶರೀರವನ್ನು ಸುಣ್ಣಬಳಿದ ಸೌಧದಂತೆ ಮತ್ತಷ್ಟು ಬೆಳ್ಳಗೆ ಮಾಡುತ್ತಾ ಶುದ್ಧವಾದ ಮಂದಹಾಸದಿಂದ ಕೂಡಿದ ಮಾತುಗಳನ್ನಾಡಿದನು."

ಇಲ್ಲಿ ಮಾಘನು "ಸೌಧಮಿವ" ಎಂಬಲ್ಲಿ ಉಪಮೆಯನ್ನೂ, "ಸಿತಿಮ್ನಾ ಲಂಭಯನ್" ಅನ್ನುವಲ್ಲಿ ಅಸಂಬಂಧ ರೂಪಾತಿಶಯೋಕ್ತಿಯನ್ನೂ ಮತ್ತು "ದ್ವಿಜಾವಲಿವ್ಯಾಜ ನಿಶಾಕರ" ಎಂಬಲ್ಲಿ ಅಪಹ್ನವಾಲಂಕಾರವನ್ನೂ (ಇದು 'ವ್ಯಾಜ' ಶಬ್ದದಿಂದ ಸೂಚಿತವಾಗುತ್ತದೆ) ಹೀಗೆ ಮೂರು ಅಲಂಕಾರಗಳನ್ನು ಉಪಯೋಗಿಸಿ ಈ ಶ್ಲೋಕವನ್ನು ಸುಂದರಗೊಳಿಸಿದ್ದಾನೆ.

ಕಾವ್ಯಾವಲೋಕನದ ಕವಿಸಮಯಾಧಿಕರಣದಲ್ಲಿಯ ಲಕ್ಷ್ಯ ಹೀಗಿದೆ :

ತೊಳಪ ದಂತಮರೀಚಿಸಂತತಿ ಪರ್ವಿ ಬಳ್ವಳ ನೀಳ್ದು ಗೊಂ
ದಳಿಸಿ ಬಾಳಮೃಗಾಂಕದೀಧಿತಿಜಾಳ ಮಂಜರಿಗಳ್ ಜಗ ।
ದ್ವಳಯಮಂ ಬೆಳಪಂತೆ ಬಂದು ಸಭಾಂತರಾಳಮನೆಲ್ಲಮಂ
ಬೆಳಗೆ ಭೂವಳಯಾಧಿಪಂ ನುಡಿಗುಂ ಸ್ವಚಿತ್ರಗತಾರ್ಥಮಂ ॥ (ಪ. ೮೭೯)

'ಶಿಶುಪಾಲವಧ'ದ ಎರಡನೇ ಸ್ವರ್ಗಕ್ಕೆ 'ಮಂತ್ರವರ್ಣನ' ಸರ್ಗವೆಂದು ಹೆಸರು. ಇದು ಶಿಶುಪಾಲವಧದ ಅತ್ಯಂತ ಸುಂದರವಾವ ಸರ್ಗಗಳಲ್ಲೊಂದು. ಶ್ರೀಕೃಷ್ಣ, ಬಲರಾಮ ಮತ್ತು ಉದ್ಧವ ಇವರು ಮೂವರು ಮಂತ್ರಾಲೋಚನೆಗಾಗಿ ಸೇರಿದ್ದಾರೆ. ಯುಗಪತ್ಪ್ರಾಪ್ತವಾದ ಧರ್ಮರಾಜನ ಯಾಗಕ್ಕೆ ಹೋಗುವುದು ಉಚಿತವೇ ಅಥವಾ ದೇವತೆಗಳ ಸಂದೇಶವನ್ನು ಹೊತ್ತು ತಂದಿರುವ ನಾರದನ ಮಾತಿನಂತೆ ಶಿಶುಪಾಲನನ್ನು ನಿಗ್ರಹಿಸಲು ಆವನ ಮೇಲೆ ದಂಡೆತ್ತಿ ಹೋಗಬೇಕೆ ಎಂಬೀ ಎರಡು ವಿಷಯಗಳೇ ಅವರ ಮುಂದಿರುವ ಮಂತ್ರಾಲೋಚನೆಯ ವಸ್ತು. ಈ ಸಂದರ್ಭದಲ್ಲಿ ಶಿಶುಪಾಲನ ಮೇಲೆ ದಂಡೆತ್ತಿ ಹೋಗುವುದೇ ಸೂಕ್ತವೆಂದು ವಾದಿಸುವ ಬಲರಾಮನ ಒಂದು ಮಾತು ಹೀಗಿದೆ—

ಅಂಕಾಧಿರೋಪಿತಮೃಗಶ್ಚಂದ್ರಮಾ ಮೃಗಲಾಂಛನಃ ।
ಕೇಸರೀನಿಷ್ಠುರಕ್ಷಿಪ್ತಮೃಗಯೂಥೋ ಮೃಗಾಧಿಪಃ ॥ (ಶಿಶು. ೨.೫೩)

"ಕರುಣೆಯಿಂದ ತೊಡೆಯ ಮೇಲೆ ಮೃಗವನ್ನು ಕೂರಿಸಿಕೊಂಡ ಚಂದ್ರನು 'ಮೃಗಲಾಂಛನ' ನೆನಿಸಿಕೊಳ್ಳುತ್ತಾನೆ. ಅದೇ ಬಹಳ ನಿಷ್ಕರುಣೆಯಿಂದ ಮೃಗಗಳನ್ನು ಬೇಟೆ

ಯಾಡುವ ಸಿಂಹವು 'ಮೃಗಾಧಿಪ' ನೆನಿಸಿಕೊಳ್ಳುತ್ತದೆ."

ಸರ್ವಥಾ ಶಿಶುಪಾಲನು ದಯಾರ್ಹನಲ್ಲ. ಅವನ ಮೇಲೆ ಪೌರುಷವೇ ಲೇಸು ಎಂಬುದು ಇದರ ತಾತ್ಪರ್ಯ. ಮಾಘನು ಈ ಶ್ಲೋಕದಲ್ಲಿ ಅಪ್ರಸ್ತುತ ಪ್ರಶಂಸಾಲಂಕಾರವನ್ನು ಬಹಳ ಚೆನ್ನಾಗಿ ಉಪಯೋಗಿಸಿಕೊಂಡಿದ್ದಾನೆ.

ಈ ಶ್ಲೋಕದ ಕನ್ನಡ ಛಾಯೆಯೋ ಎಂಬಂತಿರುವ ಕಾವ್ಯಾವಲೋಕನದ ಲಕ್ಷ್ಯಪದ್ಯವನ್ನು ನೋಡಿ :

ಕರುಣದಿಂ ಮೃಗಮಂ ನಿಜಾಂಕದೊಳಿಟ್ಟೊಡಾ ಕಜಿಯಾದೊಡೀ
ಧರೆ ಮೃಗಾಧಿಪನೆಂದುದಿಲ್ಲ ಮೃಗಾಂಕನೆಂದುದು ಚಂದ್ರನಂ ।
ಕರುಣವಿಲ್ಲದ ಸಿಂಗಮಂ ಮೃಗರಾಜನೆಂದುದು ಭೂಪರೊಳ್
ಧರೆಗಧೀಶ್ವರನಕ್ಕುಮೇ ಪರಚಕ್ರ ಕರ್ಕಶನಲ್ಲದಂ ॥ (ಪ. ೧೬೪)

ಮಾಘನ ಒಂದು ಪದ್ಯವು ಹೇತೂತ್ಪ್ರೇಕ್ಷೆಯಿಂದ ಬಹಳ ಸುಂದರವಾಗಿದೆ :

ದಿವಸೋನುಮಿತ್ರಮಗಮದ್ವಿಲಯಂ ಕಿಮಿಹಾಸ್ಯತೇ ಬತ ಮಯಾಬಲಯಾ ।
ರುಚಿಭರ್ತುರಸ್ಯ ವಿರಹಾಧಿಗಮಾದಿತಿ ಸಂಧ್ಯಯಾಪಿ ಸಪದಿ ವ್ಯಗಮಿ ॥
(ಶಿಶು. ೯.೧೭)

"ದಿವಸ (ರೂಪ ಪುರುಷನು) ಮಿತ್ರ (ಸೂರ್ಯ, ಸ್ನೇಹಿತ) ನನ್ನನುಸರಿಸಿ ವಿಲಯವನ್ನು ಹೊಂದಿದ. ಹೀಗಿರುವಲ್ಲಿ ಅಬಲೆಯಾದ ನಾನು ತೇಜೋನಿಧಿಯ (ಇಷ್ಟನಾದ ಪತಿಯ) ವಿರಹವನ್ನನುಭವಿಸುತ್ತಾ ಹೇಗೆ ತಾನೆ ಬದುಕಿರಲಿ (ಎಂದು ಯೋಚಿಸಿಯೋ) ಎಂಬಂತೆ ಸಂಧ್ಯೆಯು ಕಣ್ಮರೆಯಾದಳು."

ಈ ಪದ್ಯವನ್ನು ಕಾವ್ಯಾವ.ದ ಲಕ್ಷ್ಯ ಪದ್ಯದ ಕವಿ ಇನ್ನೂ ಸುಂದರಗೊಳಿಸಿರುವುದು ಹೀಗೆ :

ಪತಿಯಿಂ ಪಿಂಬಡಿನೊಳ್ ಪತಿವ್ರತೆಗೆ ಬೇಜಿೞೊಂದುಂಟೆ ಕೃತ್ಯಂ ವಿರಾ
ಗತೆಯುಂ ಮೇಣ್ ತದನುಪ್ರಯಾಣ ವಿಧಿಯುಂ ತಾವಲ್ಲದೆಂದಿಂತಿದಂ ।
ಕ್ಷಿತಿಗೆಲ್ಲ ತಿಳಿಪಾಗೆ ತೋರ್ಪ ತೆಜದಿಂ ರಾಗೋದಯಂ ಪಿಂಗೆ ಸಂ
ಗತೆ ಸಂಧ್ಯಾಂಗನೆ ಪೋದಳಾದೊಲವಿನಿಂ ಬೆನ್ನೊಳ್ ದಿನಾಧೀಶನಾ ॥ (ಪ. ೭೦೬)

'ಪತಿಯು ಗತಿಸಲು ತದನುಗಮನವಲ್ಲದೆ ಪತಿವ್ರತೆಗೆ ಬೇರೆ ಕೃತ್ಯವುಂಟೇ'—ಇದನ್ನು ಲೋಕಕ್ಕೆ ಸಾರಿ ಹೇಳಲೋ ಎಂಬಂತೆ ಅಸ್ತನಾದ ಸೂರ್ಯನ ಬೆನ್ನ ಹಿಂದೆಯೇ ಸಂಧ್ಯೆಯೂ ಹೋದಳು.

ಮಾಘನ ಸಂಧ್ಯೆಯು ವಿರಹವೇದನೆಯನ್ನು ತಾಳಲಾರದೆ ಸೂರ್ಯನನ್ನನುಸರಿಸಿದರೆ, ಕನ್ನಡ ಕವಿಯ ಸಂಧ್ಯೆಯು ಲೋಕಕ್ಕೆ ಪಾತಿವ್ರತ್ಯದ ಪಾಠವನ್ನು ಕಲಿಸಲೋ ಎಂಬಂತೆ ಸೂರ್ಯನನ್ನನುಸರಿಸಿ ಹೋಗುತ್ತಾಳೆ. ಕನ್ನಡ ಕವಿಯ ಉತ್ಪ್ರೇಕ್ಷೆ ಮಾಘನ ಉತ್ಪ್ರೇಕ್ಷೆಗಿಂತ ಹೆಚ್ಚು ಸುಂದರವಾಗಿರುವುದರಲ್ಲಿ ಸಂಶಯವಿಲ್ಲ.

ಧರ್ಮಜನ ರಾಜಸೂಯಯಾಗದ ಅವಭೃಥದ ಸಮಯದಲ್ಲಿ ಶ್ರೀಕೃಷ್ಣನೇ ಹೇಳುವ ಒಂದು ಮಾತು ಹೀಗಿದೆ :

ಯಾಡುವ ಸಿಂಹವು 'ಮೃಗಾಧಿಪ' ನೆನಿಸಿಕೊಳ್ಳುತ್ತದೆ."

ಸರ್ವಥಾ ಶಿಶುಪಾಲನು ದಯಾರ್ಹನಲ್ಲ, ಅವನ ಮೇಲೆ ಪೌರುಷವೇ ಲೇಸು ಎಂಬುದು ಇದರ ತಾತ್ಪರ್ಯ. ಮಾಘನು ಈ ಶ್ಲೋಕದಲ್ಲಿ ಅಪ್ರಸ್ತುತ ಪ್ರಶಂಸಾಲಂಕಾರವನ್ನು ಬಹಳ ಚೆನ್ನಾಗಿ ಉಪಯೋಗಿಸಿಕೊಂಡಿದ್ದಾನೆ.

ಈ ಶ್ಲೋಕದ ಕನ್ನಡ ಛಾಯೆಯೋ ಎಂಬಂತಿರುವ ಕಾವ್ಯಾವಲೋಕನದ ಲಕ್ಷ್ಯಪದ್ಯವನ್ನು ನೋಡಿ :

ಕರುಣದಿಂ ಮೃಗಮಂ ನಿಜಾಂಕದೊಳಿಟ್ಟೊಡಾ ಕಜ಼ಿಯಾದೊಡೀ
ಧರೆ ಮೃಗಾಧಿಪನೆಂದುದಿಲ್ಲ ಮೃಗಾಂಕನೆಂದುದು ಚಂದ್ರನಂ ।
ಕರುಣವಿಲ್ಲದ ಸಿಂಗಮಂ ಮೃಗರಾಜನೆಂದುದು ಭೂಪರೊಳ್
ಧರೆಗಧೀಶ್ವರನಕ್ಕುಮೇ ಪರಚಕ್ರ ಕರ್ಕಶನಲ್ಲದಂ ॥ (ಪ. ೧೬೪)

ಮಾಘನ ಒಂದು ಪದ್ಯವು ಹೇತೂತ್ಪ್ರೇಕ್ಷೆಯಿಂದ ಬಹಳ ಸುಂದರವಾಗಿದೆ :

ದಿವಸೋನುಮಿತ್ರಮಗಮದ್ವಿಲಯಂ ಕಿಮಿಹಾಸ್ಯತೇ ಬತ ಮಯಾಬಲಯಾ ।
ರುಚಿಭರ್ತುರಸ್ಯ ವಿರಹಾಧಿಗಮಾದಿತಿ ಸಂಧ್ಯಯಾಪಿ ಸಪದಿ ವ್ಯಗಮಿ ॥
(ಶಿಶು. ೯.೧೭)

"ದಿವಸ (ರೂಪ ಪುರುಷನು) ಮಿತ್ರ (ಸೂರ್ಯ, ಸ್ನೇಹಿತ) ನನ್ನನುಸರಿಸಿ ವಿಲಯವನ್ನು ಹೊಂದಿದ. ಹೀಗಿರುವಲ್ಲಿ ಅಬಲೆಯಾದ ನಾನು ತೇಜೋನಿಧಿಯ (ಇಷ್ಟನಾದ ಪತಿಯ) ವಿರಹವನ್ನನುಭವಿಸುತ್ತಾ ಹೇಗೆ ತಾನೆ ಬದುಕಿರಲಿ (ಎಂದು ಯೋಚಿಸಿಯೋ) ಎಂಬಂತೆ ಸಂಧ್ಯೆಯು ಕಣ್ಮರೆಯಾದಳು."

ಈ ಪದ್ಯವನ್ನು ಕಾವ್ಯಾವ.ದ ಲಕ್ಷ್ಯ ಪದ್ಯದ ಕವಿ ಇನ್ನೂ ಸುಂದರಗೊಳಿಸಿರುವುದು ಹೀಗೆ :

ಪತಿಯಿಂ ಪಿಂಬಡಿನೊಳ್ ಪತಿವ್ರತೆಗೆ ಬೇಜ಼ೊಂದುಂಟೆ ಕೃತ್ಯಂ ವಿರಾ
ಗತೆಯುಂ ಮೇಣ್ ತದನುಪ್ರಯಾಣ ವಿಧಿಯುಂ ತಾವಲ್ಲದೆಂದಿಂತಿದಂ ।
ಕ್ಷಿತಿಗೆಲ್ಲ ತಿಳಿಪಾಗೆ ತೋರ್ಪ ತೆಱದಿಂ ರಾಗೋದಯಂ ಪಿಂಗೆ ಸಂ
ಗತೆ ಸಂಧ್ಯಾಂಗನೆ ಪೋದಳಾದೊಲವಿನಿಂ ಬೆನ್ನೊಳ್ ದಿನಾಧೀಶನಾ ॥ (ಪ. ೭೦೬)

'ಪತಿಯು ಗತಿಸಲು ತದನುಗಮನವಲ್ಲದೆ ಪತಿವ್ರತೆಗೆ ಬೇರೆ ಕೃತ್ಯವುಂಟೇ'—ಇದನ್ನು ಲೋಕಕ್ಕೆ ಸಾರಿ ಹೇಳಲೋ ಎಂಬಂತೆ ಅಸ್ತನಾದ ಸೂರ್ಯನ ಬೆನ್ನ ಹಿಂದೆಯೇ ಸಂಧ್ಯೆಯೂ ಹೋದಳು.

ಮಾಘನ ಸಂಧ್ಯೆಯು ವಿರಹವೇದನೆಯನ್ನು ತಾಳಲಾರದೆ ಸೂರ್ಯನನ್ನನುಸರಿಸಿದರೆ, ಕನ್ನಡ ಕವಿಯ ಸಂಧ್ಯೆಯು ಲೋಕಕ್ಕೆ ಪಾತಿವ್ರತ್ಯದ ಪಾಠವನ್ನು ಕಲಿಸಲೋ ಎಂಬಂತೆ ಸೂರ್ಯನನ್ನನುಸರಿಸಿ ಹೋಗುತ್ತಾಳೆ. ಕನ್ನಡ ಕವಿಯ ಉತ್ಪ್ರೇಕ್ಷೆ ಮಾಘನ ಉತ್ಪ್ರೇಕ್ಷೆಗಿಂತ ಹೆಚ್ಚು ಸುಂದರವಾಗಿರುವುದರಲ್ಲಿ ಸಂಶಯವಿಲ್ಲ.

ಧರ್ಮಜನ ರಾಜಸೂಯಯಾಗದ ಅವಭೃಥದ ಸಮಯದಲ್ಲಿ ಶ್ರೀಕೃಷ್ಣನೇ ಹೇಳುವ ಒಂದು ಮಾತು ಹೀಗಿದೆ :

ಪದ್ಮಭೂರಿತಿ ಸೃಜನ್ ಜಗದ್ರಜಃ ಸತ್ವಮಚ್ಯುತ ಇತಿ ಸ್ಥಿತಿಂ ನಯನ್ ।
ಸಂಹರನ್ ಹರ ಇತಿ ಶ್ರಿತಸ್ತಮಃ ತ್ರೈಧಮೇಷಭಜತಿ ತ್ರಿಭಿರ್ಗುಣೈಃ ॥
(ಶಿಶು. ೧೪. ೬೧)

"ಈ ಕೃಷ್ಣನು ರಜೋಗುಣದಿಂದ ಜಗತ್ತನ್ನು ಸೃಷ್ಟಿಸಿ ಬ್ರಹ್ಮನೆಂತಲೂ, ಸತ್ತ್ವಗುಣದಿಂದ ಜಗತ್ತನ್ನು ರಕ್ಷಿಸಿ ಅಚ್ಯುತನೆಂತಲೂ ಮತ್ತು ತಮೋಗುಣದಿಂದ ಜಗತ್ತನ್ನು ನಾಶಗೊಳಿಸಿ ಹರನೆಂತಲೂ ಹೀಗೆ ತ್ರಿಗುಣಗಳಿಂದ ಬ್ರಹ್ಮ ವಿಷ್ಣು ಮಹೇಶ್ವರನೆಂದು ಮೂರು ರೂಪಗಳನ್ನು ಧರಿಸುತ್ತಾನೆ."

ಇದೇ ಶ್ಲೋಕ ಕಾವ್ಯಾವ.ದಲ್ಲಿ ಸೇರಿರುವ ಕನ್ನಡ ಕವಿಯ ಪದ್ಯದಲ್ಲಿ ಇಂತು ಮರುಹುಟ್ಟು ಪಡೆಯುತ್ತದೆ :

ಸತ್ವರಜಸ್ತಮೋಗುಣವಿಭಾಗದಿನೀ ತ್ರಿಜಗಕ್ಕೆ ತಾನೆ ಕ
ರ್ತೃತ್ವದೊಳೊಂದಿಯುಂ ನೆಱೆಯೆ ಸಂಹರಿಸಲ್ ನೆಱೆದುಂ ಸಮಂತು ನಿ ।
ತ್ಯತ್ವಮನಾಂತುಮೀಶನಜನಚ್ಯುತನೆಂಬಿನೆಗಂ ವಿಭಿನ್ನ ಮೂ
ರ್ತಿತ್ವಮನಪ್ಪುಕೆಯ್ದು ಪರಮೇಶ್ವರನೀಗೆಮಗಾಪ್ತತತ್ವಮಂ ॥
(ಕಾವ್ಯಾವಲೋಕನಂ ೪೬೯)

ಮೇಲೆ ಹೇಳಿದ ನಾಲ್ಕು ಜನ ಹಳಗನ್ನಡ ಕವಿಗಳ ಮೇಲೆ ಮಾಘನ ಪ್ರಭಾವ ಪ್ರಧಾನವಾಗಿ ಕಂಡುಬರುತ್ತದಾದರೂ, ಹುಡುಕುತ್ತಾ ಹೋದರೆ, ಇನ್ನೂ ಕೆಲವು ಕವಿಗಳ ಮೇಲೆ ಅವನ ಪ್ರಭಾವವನ್ನು ಗುರ್ತಿಸಬಹುದೇನೋ. ಉದಾಹರಣೆಗೆ ಹೇಳುವುದಾದರೆ ೧೨–೧೩ನೇ ಶತಮಾನದವನಾದ ದೇವಕವಿಯು ಪೂರ್ವಕವಿಗಳನ್ನು ಸ್ಮರಿಸುತ್ತಾ ಮಾಘನನ್ನು ಎರಡು ಬಾರಿ ಸ್ಮರಿಸಿಕೊಳ್ಳುತ್ತಾನೆ.[21] ಇವನ 'ಕುಸುಮಾವಳೀಕಾವ್ಯ'ವು ವರ್ಣನಾ ಪ್ರಧಾನವಾದ ಕಾವ್ಯವಾದುದರಿಂದ ಇದೇ ರೀತಿಯ ಕಾವ್ಯವಾದ 'ಶಿಶುಪಾಲವಧ'ದ ಪ್ರಭಾವ ಇದರ ಮೇಲೆ ಆಗಿದ್ದಿರಲು ಸಾಕು.

## ಅಡಿಟಿಪ್ಪಣಿಗಳು

1. ಕಾಳಿದಾಸನ 'ರಘುವಂಶ' ಮತ್ತು 'ಕುಮಾರಸಂಭವ', ಭಾರವಿಯ 'ಕಿರಾತಾರ್ಜುನೀಯ' ಮತ್ತು ಶ್ರೀಹರ್ಷನ 'ನೈಷಧ ಚರಿತ'—ಇವು ಉಳಿದ ನಾಲ್ಕು ಮಹಾಕಾವ್ಯಗಳು.
2. ಹೀಗೆಯೇ 'ರಘುವಂಶ', 'ಕುಮಾರಸಂಭವ' ಮತ್ತು 'ಮೇಘಸಂದೇಶ'ಗಳನ್ನು 'ಲಘುತ್ರಯೀ' ಎಂದು ಕರೆಯಲಾಗುತ್ತದೆ. ಕೆಲವು ದಾಕ್ಷಿಣಾತ್ಯರು ಮೇಘಸಂದೇಶದ ಜಾಗದಲ್ಲಿ ವೇದಾಂತ ದೇಶಿಕರ 'ಯಾದವಾಭ್ಯುದಯ'ವನ್ನು ಸೇರಿಸುತ್ತಾರೆ.
3. ಶಾಸ್ತ್ರಂ ಕಾವ್ಯಂ ಶಾಸ್ತ್ರಕಾವ್ಯಂ ಕಾವ್ಯಶಾಸ್ತ್ರಂ ಚ ಭೇದತಃ ।
   ಚತುಷ್ಪ್ರಕಾರಃ ಪ್ರಸರಃ ಸತಾಂ ಸಾರಸ್ವತೋ ಮತಃ ॥ —'ಸುವೃತ್ತತಿಲಕ' ೩.೭
4. ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಮ್ ।
   ದಂಡಿನಃ ಪದಲಾಲಿತ್ಯಂ ಮಾಘೇ ಸನ್ತಿ ತ್ರಯೋಗುಣಾಃ ॥
   ಇಂತಹ ಹತ್ತಾರು ಪ್ರಶಂಸಾತ್ಮಕ ಉದ್ಗಾರಗಳೇ ಇದಕ್ಕೆ ಸಾಕ್ಷಿ.

Scanned by CamScanner

5. 'ಕಾವ್ಯಮೀಮಾಂಸೆ', ಅಧ್ಯಾಯ ೧೧.
6. "ಪ್ರಾಚೀನ ಕನ್ನಡ ಸಾಹಿತ್ಯ ರಚನೆಗೆ ಸಂಸ್ಕೃತ ಸಾಹಿತ್ಯವೇ ಪ್ರೇರಕವೂ ಪೋಷಕವೂ ಆಗಿತ್ತೆಂದು ಹೇಳಬಹುದು. ಆದಿಯಲ್ಲಿ ಕನ್ನಡ ಗ್ರಂಥಗಳನ್ನು ರಚಿಸಿದವರೆಲ್ಲ ಉಭಯಭಾಷಾ ಪಂಡಿತರು. ಅವರ ಕನ್ನಡ ಗ್ರಂಥಗಳಲ್ಲಿ ಸಂಸ್ಕೃತ ಸಾಹಿತ್ಯದ ಪಡಿಯಚ್ಚೇ ಕಂಡುಬರುತ್ತದೆ. ವಸ್ತು, ರೀತಿ, ಶೈಲಿ, ಸಂಪ್ರದಾಯ ಎಲ್ಲಕ್ಕೂ ಸಂಸ್ಕೃತವೇ ಮಾದರಿ."—'ಕಾವ್ಯಾವಲೋಕನಂ', ಪೀಠಿಕೆ, ಪು. ೧೦.
7. "ಸಂಸ್ಕೃತ ಕಾವ್ಯಗಳಲ್ಲಿ ಹೆಚ್ಚಾಗಿ ಈ ಕಾವ್ಯ ನಮ್ಮ ಹಿಂದಿನ ಕನ್ನಡ ಕವಿಗಳಿಗೆ ಬಹಳ ಪ್ರಿಯ ವಾಗಿದ್ದಂತೆ ತಿಳಿದು ಬರುತ್ತದೆ. ಅಲಂಕಾರಶಾಸ್ತ್ರದಲ್ಲಿ ದಂಡಿಯ ಕಾವ್ಯಾದರ್ಶವಿದ್ದಂತೆ."
—ಸಂ. ಶಿವರಾಮಶಾಸ್ತ್ರಿ, 'ಹಿರಿಗನ್ನಡ ಶಿಶುಪಾಲವಧಂ' ಮುನ್ನುಡಿ, ಪು. ೧
8. 'ಕವಿರಾಜಮಾರ್ಗ'ದ ಕರ್ತೃ ನೃಪತುಂಗನೇ, ಶ್ರೀವಿಜಯನೇ ಅಥವಾ ಕವೀಶ್ವರನೇ ಎಂಬ ಬಗ್ಗೆ ವಿದ್ವಾಂಸರಲ್ಲಿ ಹೇರಳವಾಗಿ ವಾದವಿವಾದಗಳು ನಡೆದಿದ್ದರೂ ಇನ್ನೂ ಒಮ್ಮತದ ತೀರ್ಮಾನ ಹೇರ್ಪಟ್ಟಿಲ್ಲ. ನೋಡಿ — 'ಕವಿರಾಜಮಾರ್ಗ', ಸಂ. ವಿ. ಸೀತಾರಾಮಯ್ಯ, ಐಬಿಹೆಚ್, ಬೆಂಗಳೂರು. ೧೯೭೩.—ಇದರಲ್ಲಿ ಎಂ. ವಿ. ಸೀತಾರಾಮಯ್ಯನವರ ಲೇಖನ
9. ನೋಡಿ—'ಕವಿರಾಜಮಾರ್ಗ', ಸಂ. ಕೆ. ಬಿ. ಪಾಠಕ್, ಬಿಬ್ಲಿಯೋಥಿಕಾ ಕರ್ನಾಟಿಕಾ, ೧೮೯೮, ಪೀಠಿಕೆ, ಪು. ೫
10. 'ಕವಿರಾಜಮಾರ್ಗ'—೧.೩೧
11. ಕವಿರಾಜಮಾರ್ಗಕಾರನು ಹೇಳುವ ಗುಣಸೂರಿ ಮತ್ತು ನಾರಾಯಣರೆಂಬುವರು ಯಾರೆಂದು ತಿಳಿದಿಲ್ಲ. ಬೃಹತ್ಕಥೆಯ ಕರ್ತೃ ಗುಣಾಢ್ಯ ಮತ್ತು ವೇಣೀಸಂಹಾರದ ಕರ್ತೃ ಭಟ್ಟನಾರಾಯಣ ಇದ್ದಿರಬಹುದೇ ಎಂಬ ಭಾವನೆ ಮೂಡಿದರೂ ನೃಪತುಂಗನು ಮೇಲಿನ (೧.೩೧) ಪದ್ಯದಲ್ಲಿ ಪದ್ಯಕಾವ್ಯದ ಲಕ್ಷಣವನ್ನು ಹೇಳಿ ಅದಕ್ಕೆ ಉದಾಹರಣೆಯಾಗಿ ಗುಣಸೂರಿ ಮುಂತಾದವರ ಹೆಸರನ್ನು ಹೇಳುತ್ತಿರುವುದರಿಂದ ಈ ಭಾವನೆಗೆ ಪುಷ್ಟಿದೊರೆಯುವುದಿಲ್ಲ. ಪ್ರಕೃತ ಪದ್ಯದಲ್ಲಿಯೂ 'ಮಹಾಕಾವ್ಯಪ್ರಣಯಮನಾಗಿಸಿದರ್' ಎಂದು ಹೇಳುತ್ತಿರುವುದರಿಂದ ಭಾರವಿ, ಕಾಳಿದಾಸ ಮತ್ತು ಮಾಘರಂತೆಯೇ ಇವರೂ ಯಾವುದೋ ಪದ್ಯಕಾವ್ಯವನ್ನು ಬರೆದವರಿರಬೇಕೆಂದು ತಿಳಿಯುವುದು ಹೆಚ್ಚು ಸಮಂಜಸವಾಗಿ ಕಾಣುತ್ತದೆ.
12. 'ಕವಿರಾಜಮಾರ್ಗ'—೨-೧೪೩
13. ನೃಪತುಂಗನ ಚಕ್ರಬಂಧ ಪದ್ಯದ (೨.೧೪೨) ಮೇಲೆ ಬರೆಯುತ್ತಾ ಎಂ. ವಿ. ಸೀತಾರಾಮಯ್ಯ ನವರು "ಕವಿರಾಜಮಾರ್ಗದಲ್ಲಿರುವ ಚಕ್ರಬಂಧ ರಚನೆ ಒಂದು ಮುಖ್ಯವಾದ ಆಂತರಿಕ ಪ್ರಮಾಣ. ಕವಿರಾಜಮಾರ್ಗಕಾರನು ಓದಿರಬಹುದಾದ ಮಾಘನ ಶಿಶುಪಾಲವಧದಲ್ಲಿಯೂ ಚಕ್ರಬಂಧವಿದೆ". ಎಂದು ಅಭಿಪ್ರಾಯಪಡುತ್ತಾರೆ. ಇಲ್ಲಿ ಎಂ.ವಿ.ಸೀ. ಅವರು "ಓದಿರಬಹುದಾದ" ಎಂದು ಸಂಶಯ ಸೂಚಕವಾದ ಪ್ರಯೋಗವನ್ನು ಬಳಸಿರುವುದು ಅರ್ಥವಾಗುವಂತಿಲ್ಲ. ಏಕೆಂದರೆ ನೃಪತುಂಗನು ೧.೩೧ರಲ್ಲಿ ಮಹಾಕಾವ್ಯ ಪ್ರಕಾರವನ್ನು ಪ್ರಸಿದ್ಧಗೊಳಿಸಿದ 'ಕವಿವೃಷಭ'ರಲ್ಲಿ ಮಾಘನೂ ಒಬ್ಬನೆಂದು ಹೇಳುವಾಗ ಅವನಿಗೆ ಮಾಘನ ಏಕಮಾತ್ರ ಕಾವ್ಯವಾದ ಶಿಶುಪಾಲವಧದ ಪರಿಚಯವಿದ್ದಿರಲೇ ಬೇಕಲ್ಲವೆ ? ಮತ್ತೆ ೨.೧೪೩ರಲ್ಲಿ 'ದುಷ್ಕರೋಕ್ತಿ'ಯನ್ನು ನೆನೆದ 'ಪೂರ್ವ ಕವಿಗಳ್' ಎಂದು ಹೇಳುವಾಗಲೂ ಅವನು ಮಾಘನನ್ನೂ ಸೂಚಿಸುತ್ತಿದ್ದಾನೆಂಬುದರಲ್ಲಿ ಸಂಶಯವಿಲ್ಲ. ನೋಡಿ—'ಕವಿರಾಜಮಾರ್ಗ' (ಪು. ೯೮, ಅ.ಟಿ. ೩.೨)
14. ಪ್ರಸಿದ್ಧ ನೈಯಾಯಿಕನಾದ ಜಯಂತಭಟ್ಟನು ದೂರ ಮತ್ತು ಸಮೀಪದ ವಸ್ತುಗಳಲ್ಲಿ ಉಂಟಾಗುವ ಪ್ರತೀತಿಯಲ್ಲಿ ಕಾಣಿಸುವ ಭೇದವು ಉಪಾಯಜನ್ಯವೇ ಅಥವಾ ವಿಷಯಜನ್ಯವೇ

ಎಂದು ವಿಚಾರಿಸುವಾಗ ಶಿಶುಪಾಲವಧದ ಈ ಶ್ಲೋಕವನ್ನು ಉದಾಹರಣೆಯಾಗಿ ಉಪಯೋಗಿಸಿ ಕೊಂಡಿದ್ದಾನೆ :

ದೂರಾದ್ಧಿ ವಸ್ತುಸಾಮಾನ್ಯಂ ಧರ್ಮಮಾತ್ರೋಪಲಕ್ಷಿತಂ ।
ಅದೂರತಸ್ತು ವಿಸ್ಪಷ್ಟವಿಶೇಷಮವಗೀಯತೇ ॥

—ಜಯಂತಭಟ್ಟ, ನ್ಯಾಯಮಂಜರೀ.

ಜಯಂತಭಟ್ಟನು ಕ್ರಿ.ಶ. ೯ನೇ ಶತಮಾನದಲ್ಲಿ ಕಾಶ್ಮೀರದಲ್ಲಿದ್ದನೆಂದು ಸಾಮಾನ್ಯವಾಗಿ ನಂಬಲಾಗಿದೆ. ಇವನು ಕಾದಂಬರೀ ಕಥಾಸಾರವನ್ನು ಬರೆದ ಅಭಿನಂದನ ತಂದೆ.

15. ನೋಡಿ : ಶಿಶು. ೨.೨೬.
16. ಇದರಲ್ಲಿ ಬರುವ 'ಕಡ್ಡ' ಶಬ್ದವು ಸಂಸ್ಕೃತದ 'ಕಷ್ಟ' ಶಬ್ದದ ತದ್ಭವವಿರಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಕಷ್ಟವಾದ ವಾರವೆಂದರೆ ಕೆಟ್ಟವಾರವೆಂದು ತಾತ್ಪರ್ಯ. ಡಿ.ಎಲ್.ಎನ್. ಅವರು 'ಕಡ್ಡ' ಶಬ್ದಕ್ಕೆ ಸೂಚಿತವಾದ 'ವಡ್ಡ' ಪಾಠಾಂತರವೇ ಸಾಧುವಾದುದೆಂದು ಅಭಿಪ್ರಾಯಪಟ್ಟು, ವಡ್ಡವಾರವೆಂದರೆ ಶನಿವಾರವೆಂದು ಅರ್ಥಮಾಡುತ್ತಾರೆ. ಕ್ರೂರಗ್ರಹಗಳಾದ ಕುಜ ಮತ್ತು ಶನಿಯ ಹೆಸರುಗಳನ್ನು ಮರೆಮಾಡಿ ಮಂಗಳವಾರ ಮತ್ತು ವಡ್ಡವಾರವೆಂದು ಕರೆಯುವಂತೆ 'ಅಧರ್ಮನಂದನ'ನು 'ಧರ್ಮನಂದನ'ನೆನಿಸಿಕೊಳ್ಳುತ್ತಾನೆ. ನೋಡಿ : ಕನ್ನಡ ಗ್ರಂಥ ಸಂಪಾದನೆ, ಡಿ. ಎಲ್. ನರಸಿಂಹಾಚಾರ್, ಪು. ೧೯–೨೦.
17. "ಶ್ಯಾಮಾ ಯೌವನಮಧ್ಯಸ್ಥಾ"—ಉತ್ಪಲಕೋಶ.
18. ವಾಮನನುಂ ರುದ್ರಟನುಂ
ಭಾಮಹನುಂ ದಂಡಿಯುಂ ಮನಂಗೊಳೆ ಪೇಳ್ದಂ ।
ತೀ ಮಹಿಗೆ ನೆಗೞ್ಟೆ ಪೇೞ್ದಂ
ದಾಮೋದರ ತನಯನೀ ವಚೋಲಂಕೃತಿಯಂ ॥

—ಕಾವ್ಯಾವಲೋಕನಂ, ಕವಿಸಮಯಾಧಿಕರಣ, ೯೬೧.

19. 'ಕಾವ್ಯಾವಲೋಕನ'ದ ಆಯ್ಕೆಯ ಲಕ್ಷ್ಯಪದ್ಯಗಳ ಆಕರಗಳೆಂದರೆ : ಕಾಳಿದಾಸನ 'ರಘುವಂಶ', 'ಕುಮಾರಸಂಭವ' ಮತ್ತು 'ವಿಕ್ರಮೋರ್ವಶೀಯ' : ಭಾರವಿಯ 'ಕಿರಾತಾರ್ಜುನೀಯ' ; ಭವಭೂತಿಯ 'ಮಾಲತೀಮಾಧವ' ; ಭಟ್ಟಿಯ 'ರಾವಣವಧ' ಮತ್ತು ಮಾಘನ 'ಶಿಶುಪಾಲವಧ'. ನೋಡಿ—ಕಾವ್ಯಾವಲೋಕನಂ. ಆರ್. ನರಸಿಂಹಾಚಾರ್ ಅವರ ಆಂಗ್ಲಭಾಷೆಯ ಪೀಠಿಕೆ, ಪು. ೬೯–೭೦.
20. 'ಸೃಜಜ್ಜಗದ್ರಜ' ಎಂದು ಕಾವ್ಯಾವಲೋಕನದಲ್ಲಿರುವುದು ತಪ್ಪು. ನಯನ್, ಸಂಹರನ್‌ಗಳಂತೆ ಸೃಜನ್ ಎಂದು ವರ್ತಮಾನಕೃದಂತವಿರಬೇಕು. ನೋಡಿ—ಕಾವ್ಯಾವಲೋಕನಂ, ಪೂರ್ವೋಕ್ತ, ಪು. ೨೪೯.
21. ನೋಡಿ—'ಕುಸುಮಾವಳೀ' ೧.೪ ಮತ್ತು ೧.೮.

Scanned by CamScanner

# ಮೂರನೆಯ ವಿದ್ಯಾಚಕ್ರವರ್ತಿಯ 'ರುಕ್ಮಿಣೀಕಲ್ಯಾಣ'

ಇಮ್ಮಡಿ ಶಿವಬಸವಸ್ವಾಮಿ

ಒಂದೇ ಕುಟುಂಬಕ್ಕೆ ಸೇರಿದ ವಿದ್ಯಾಚಕ್ರವರ್ತಿಗಳೆಂಬ ಮೂವರು ವಿದ್ವಾಂಸರು ಸಂಸ್ಕೃತ ಸಾಹಿತ್ಯಕ್ಕೆ ಪ್ರೋತ್ಸಾಹವನ್ನಿತ್ತ ಕನ್ನಡ ರಾಜಮನೆತನಗಳಲ್ಲೊಂದಾದ ಹೊಯ್ಸಳ ರಾಜರ ಆಶ್ರಯದಲ್ಲಿದ್ದು ಸಂಸ್ಕೃತ ಸಾಹಿತ್ಯಕ್ಕೆ ತಮ್ಮ ಅಮೂಲ್ಯವಾದ ಕಾಣಿಕೆಯನ್ನಿತ್ತಿದ್ದಾರೆ. ಈ ವಂಶದ ಕೆಲವು ವಿವರಗಳನ್ನು ಮೂರನೆಯ ಬಲ್ಲಾಳನ ಆಸ್ಥಾನ ಕವಿಯಾಗಿದ್ದ ತ್ರಿಭುವನ ವಿದ್ಯಾಚಕ್ರವರ್ತಿಯ ಅಪ್ರಕಟಿತ ಕೃತಿಯಾದ 'ರುಕ್ಮಿಣೀ ಕಲ್ಯಾಣ'ವೆಂಬ ಮಹಾಕಾವ್ಯದ[1] ಮೊದಲನೆಯ ಸರ್ಗದಿಂದ ತಿಳಿಯಬಹುದು.

ಮೊದಲನೆಯ ತ್ರಿಭುವನ ಚಕ್ರವರ್ತಿಯು ಹೊಯ್ಸಳ ರಾಜನಾದ ಎರಡನೆಯ ವೀರ ಬಲ್ಲಾಳನ (ಕ್ರಿ.ಶ. ೧೧೭೩–೧೨೨೦) ಆಶ್ರಯದಲ್ಲಿ ಕವಿಯಾಗಿದ್ದನು. ಸಂಸ್ಕೃತದಲ್ಲಿ ಅನೇಕ ಶಾಸನಗಳನ್ನು ಬರೆದಿದ್ದನು. ಸಂಪ್ರದಾಯದ ಅಗ್ನಿಹೋತ್ರ ಬ್ರಾಹ್ಮಣ ಕುಟುಂಬಕ್ಕೆ ಸೇರಿದವನಾಗಿದ್ದ ಈತನು ಕಠಿಣ ತಪಸ್ಸನ್ನಾಚರಿಸಿ, ಶಿವನ ಅನುಗ್ರಹದಿಂದ ಅದ್ಭುತವಾದ ಜ್ಞಾನ ಸಂಪಾದಿಸಿ ಸರ್ವರಿಂದಲೂ ವಿದ್ಯೆಗಳ ಚಕ್ರವರ್ತಿ ಎಂದು ನುತಿಸಲ್ಪಟ್ಟಿದ್ದನು.[2] ಈತನ ಯಾವ ಕೃತಿಗಳೂ ಉಪಲಬ್ಧವಿಲ್ಲ. ಈತನ ಪುತ್ರ ವೈದ್ಯನಾಥನು ಹೊಯ್ಸಳವಂಶದ ಅರಸನಾದ ಎರಡನೆಯ ನರಸಿಂಹನ ಆಸ್ಥಾನಕವಿಯಾಗಿದ್ದನು. ಹದಿನಾಲ್ಕು ವಿದ್ಯೆಗಳಲ್ಲಿ ಬಲ್ಲಿದನಾಗಿದ್ದು ಪಂಡಿತರ ಪ್ರಶಂಸೆಗೆ ಭಾಜನನಾಗಿದ್ದನು.[3]

ಎರಡನೆಯ ಸಕಲವಿದ್ಯಾಚಕ್ರವರ್ತಿಯು ವೈದ್ಯನಾಥನ ಮಗ ಎರಡನೆಯ ನರಸಿಂಹ ಹಾಗೂ ಆತನ ಮಗ ಸೋಮೇಶ್ವರನ ಸಮಕಾಲೀನನಾಗಿದ್ದನು. ಈತನ ಮತ್ತೊಂದು ಹೆಸರು ಕಾಲಕಲಭ ಎಂಬುದು ಈತನ ಕೃತಿ 'ಗದ್ಯಕರ್ಣಾಮೃತ'ದಿಂದ ತಿಳಿದುಬರುತ್ತದೆ.[4]

ಮೂರನೆ ವಿದ್ಯಾಚಕ್ರವರ್ತಿಯು ಅಣ್ಣನಾದ ಮಹಾದೇವನ ಬಳಿ ಶಿಕ್ಷಣವನ್ನು ಪಡೆದ. ವಿದ್ವಾಂಸನಾದ ಬಳಿಕ ಅನೇಕ ರಾಜರುಗಳಿಂದ ಗೌರವಿಸಲ್ಪಟ್ಟಿದ್ದನು. ಈತನು ಮೂರನೆ ಬಲ್ಲಾಳನ (೧೨೯೨–೧೩೪೨) ಆಸ್ಥಾನ ವಿದ್ವಾಂಸನಾಗಿದ್ದನು. ಈತನು ಅನೇಕ ಶಾಸನಗಳ ಕರ್ತೃವಾಗಿದ್ದು, ಮಮ್ಮಟನ 'ಕಾವ್ಯಪ್ರಕಾಶ'ಕ್ಕೆ ಮಹತ್ವಪೂರ್ಣವಾದ 'ಸಂಪ್ರದಾಯ ಪ್ರಕಾಶಿನೀ' ಎಂಬ ಟೀಕೆಯನ್ನು ರಚಿಸಿರುವುದಲ್ಲದೆ[5] ರುಯ್ಯಕನ 'ಅಲಂಕಾರ

ಸರ್ವಸ್ವ'ಕ್ಕೆ 'ಸಂಜೀವಿನೀ' ಎಂಬ ವಿಮರ್ಶಾತ್ಮಕವಾದ ಟೀಕೆಯನ್ನು ಬರೆದಿದ್ದಾನೆ.[6] 'ನಿಷ್ಪ್ರಪ್ಪಾರ್ಥಕಾರಿಕೆ' ಎಂಬ ಹೆಸರಿನಿಂದ ಕಾರಿಕೆಯ ರೂಪದಲ್ಲಿ ಅಲಂಕಾರಗಳ ಸಾರವನ್ನು ನಿರೂಪಿಸಿದ್ದಾನೆ.[7] 'ಕಾವ್ಯಪ್ರಕಾಶ'ಕ್ಕೆ ಒಂದು ಲಘುಟೀಕೆಯನ್ನು ರಚಿಸಿದ್ದಾನೆ.[8] ಇವಲ್ಲದೆ ನಾಟ್ಯದ ಮೇಲಣ ಸಂಗ್ರಹ ಗ್ರಂಥವಾದ 'ಭರತ ಸಂಗ್ರಹ'ವನ್ನೂ,[9] 'ರಸಮೀಮಾಂಸೆ'ಯನ್ನೂ,[10] 'ಪ್ರಯೋಗ ದೀಪಿಕೆ'[11] ಎಂಬ ಕೃತಿಯನ್ನೂ, 'ವಾಕ್ಯಪದೀಯ'ದ ಮೂರನೆಯ ಅಧ್ಯಾಯದ ಪ್ರಕೀರ್ಣಕಕ್ಕೆ[12] ಟೀಕೆಯನ್ನೂ ರಚಿಸಿರುವಂತೆ ಆತನ ಸಂಜೀವಿನೀ ವ್ಯಾಖ್ಯಾನದಿಂದ ತಿಳಿದುಬರುತ್ತದೆ. ವಿದ್ಯಾಚಕ್ರವರ್ತಿಯ ಟೀಕೆಯಿರುವ 'ವಿರೂಪಾಕ್ಷ ಪಂಚಾಶಿಕಾ' ಎಂಬ ತಾತ್ವಿಕ ಕೃತಿಯೊಂದು ಪ್ರಕಟವಾಗಿದೆ. ಇದು 'ರುಕ್ಮಿಣೀ ಕಲ್ಯಾಣ'ದ ಕರ್ತೃವಾದ ವಿದ್ಯಾಚಕ್ರವರ್ತಿಯ ಕೃತಿಯೇ ಎಂಬುದಕ್ಕೆ ಇನ್ನೂ ಸಾಕಷ್ಟು ಆಧಾರಗಳು ಅಗತ್ಯ.[13]

ಈತನು ಬಾಲ್ಯದಲ್ಲಿಯೇ ಸಾಂಖ್ಯ ಯೋಗ ಶಾಸ್ತ್ರಗಳಲ್ಲಿ, ಪುರಾಣಾದಿಗಳಲ್ಲಿ ಭರತ ವಾತ್ಸ್ಯಾಯನಾದಿ ಶಾಸ್ತ್ರಗಳಲ್ಲಿ ಹೆಚ್ಚಿನ ಪರಿಣತಿಯನ್ನು ಪಡೆದಿದ್ದನು ಎಂಬುದು ಆತನ ಸಂಜೀವಿನೀ ಟೀಕೆಯಿಂದ ತಿಳಿದು ಬರುತ್ತದೆ.[14] ಇದಲ್ಲದೆ ಷಡ್ಭಾಷೆಯಲ್ಲಿ ಕವಿತ್ವವನ್ನು ರಚಿಸುವ ಪ್ರಗಲ್ಭ ಪಾಂಡಿತ್ಯವಿತ್ತು. ಹೊಯ್ಸಳ ಅರಸನು ಈತನಿಗೆ 'ಸಂಸ್ಕೃತ ಸಾರ್ವಭೌಮ', 'ಪ್ರಾಕೃತ ಪೃಥ್ವೀಶ್ವರ', 'ಶೌರಸೇನ ಶಿರೋಮಣಿ', 'ಮಾಗಧೀ ಮಕರಧ್ವಜ', 'ಪೈಶಾಚೀ ಪರಮೇಶ್ವರ', 'ಅಪಭ್ರಂಶ ರಾಜಹಂಸ', 'ಅಲಂಕಾರ ಚಕ್ರವರ್ತಿ' ಮುಂತಾದ ಬಿರುದುಗಳನ್ನು ನೀಡಿದ್ದನು.[15] ಬಹುಶಃ ಈ ಭಾಷೆಗಳಲ್ಲಿ ಈತನು ಕೃತಿಗಳನ್ನು ರಚಿಸಿರಬಹುದಾಗಿದ್ದರೂ, ಈ ಭಾಷೆಯ ಯಾವುದೇ ಕೃತಿಗಳೂ ಇದುವರೆಗೆ ಲಭ್ಯವಾಗಿಲ್ಲ. ಈಗ ನಾವು ಈತನ ಮಹಾಕಾವ್ಯವಾದ 'ರುಕ್ಮಿಣೀ ಕಲ್ಯಾಣ'ದ ಸಾಹಿತ್ಯಾಂಶಗಳನ್ನು ಪರಿಶೀಲಿಸಬಹುದು.

ಈ ಅಪ್ರಕಟಿತ ಕಾವ್ಯವನ್ನು ಕವಿಯು ಪ್ರಾಯಶಃ ತನ್ನ ವೃದ್ಧಾಪ್ಯದಲ್ಲಿದ್ದಾಗ ಬರೆದಿದ್ದಾನೆ ಎಂಬುದು ಈ ಕಾವ್ಯದ ಪ್ರಾರಂಭದ ಪದ್ಯಗಳಿಂದ ತಿಳಿದುಬರುತ್ತದೆ. ಸಾಕಷ್ಟು ಕೀರ್ತಿ, ಗೌರವ, ಐಹಿಕ ಭೋಗಭಾಗ್ಯಗಳೆಲ್ಲವನ್ನೂ ಅನುಭವಿಸಿದ ತರುವಾಯ ವಾಕ್ಕಾಲುಷ್ಯವನ್ನು ನಿವಾರಿಸುವ ಸಲುವಾಗಿ ಹಾಗೂ ತನ್ನನ್ನು ಪುನೀತನನ್ನಾಗಿಸಿಕೊಳ್ಳಲು ಶ್ರೀಕೃಷ್ಣನಿಗೆ ಸಂಬಂಧಿಸಿದ ಕಾವ್ಯವನ್ನು ರಚಿಸಿದೆನೆಂದು ಹೇಳಿಕೊಂಡಿದ್ದಾನೆ.[16] ಇದರಿಂದಾಗಿ ಈತನು ತನ್ನ ಇಳಿವಯಸ್ಸಿನಲ್ಲಿ ಈ ಕಾವ್ಯವನ್ನು ರಚಿಸಿದ್ದಿರಬಹುದು ಎಂದು ಊಹಿಸಲು ಅವಕಾಶವಿದೆ. ಅಲ್ಲದೆ ಧಾರ್ಮಿಕ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಸಾಹಿತ್ಯವು ರಚಿತವಾದಾಗ ಮಾತ್ರವೇ ಜೀವನದಲ್ಲಿ ಸಾರ್ಥಕತೆಯುಂಟಾಗುತ್ತದೆ ಎಂಬುದು ಈತನ ಅಭಿಪ್ರಾಯವಾಗಿರಬಹುದು. ಈ ಮಹಾಕಾವ್ಯವನ್ನು ಬರೆಯುವುದಕ್ಕೆ ಪೂರ್ವದಲ್ಲಿಯೇ ವಿದ್ಯಾಚಕ್ರವರ್ತಿಯು 'ಕಾವ್ಯಪ್ರಕಾಶ'ಕ್ಕೆ ವ್ಯಾಖ್ಯಾನವನ್ನು ರಚಿಸುವುದರ ಮೂಲಕ ಅತ್ಯಂತ ಪ್ರಸಿದ್ಧಿ ಪಡೆದವನಾಗಿದ್ದ ಎಂಬುದು ಈತನ ಈ ಕಾವ್ಯದಿಂದ ತಿಳಿದು ಬರುವ ಮತ್ತೊಂದು ಅಂಶ.[17]

ಈ ಕೃತಿಯ ಹೆಸರೇ ಸೂಚಿಸುವಂತೆ ಶ್ರೀಕೃಷ್ಣನ ಬಾಲ್ಯ, ಯೌವನವನ್ನು ಹೇಳು ವುದರ ಜೊತೆಗೆ ಆತನ ವಿವಾಹವು ರುಕ್ಮಿಣಿಯೊಡನೆ ನೆರವೇರಿದುದೇ ಈ ಕಾವ್ಯದ ಕಥಾ ವಸ್ತು. ಕಥೆಯ ಮೂಲವು, ಅನೇಕ ವೈಷ್ಣವ ಭಕ್ತಕವಿಗಳಿಗೆ ಚಿರಂತನಸ್ಫೂರ್ತಿ ಯನ್ನೊದಗಿಸುತ್ತಿರುವ ಶ್ರೀಮದ್ಭಾಗವತ. ವಿದ್ಯಾಚಕ್ರವರ್ತಿಯೇ ಇದನ್ನು ಸ್ಪಷ್ಟಪಡಿ ಸಿರುವುದಲ್ಲದೆ ತಾನು ಯಾವ ರೀತಿಯಲ್ಲೂ ಕಥಾವಸ್ತುವಿನಲ್ಲಿ ಮಿಶ್ರಣವನ್ನಾಗಲಿ, ಕಲ್ಪನೆ ಯನ್ನಾಗಲಿ ಮಾಡಿಲ್ಲವೆಂದಿದ್ದಾನೆ.[18] ಒಟ್ಟು ಹದಿನಾರು ಸರ್ಗಗಳಲ್ಲಿ ಶ್ರೀಕೃಷ್ಣಕಥೆಯು ನಿರೂಪಿತವಾಗಿದೆ.

ಈ ಕಾವ್ಯದ ಕವಿಕಾವ್ಯವಂಶಾನುವರ್ಣನವೆಂಬ ಪ್ರಥಮಸರ್ಗವು ಚಾರಿತ್ರಿಕ ದೃಷ್ಟಿ ಯಿಂದ ಅತ್ಯಂತ ಮಹತ್ವದ್ದೆನಿಸಿದೆ. ಇದರಲ್ಲಿ ಕರ್ತೃವಿನ ವಂಶಜರ ಹಾಗೂ ತನಗೆ ಆಶ್ರಯ ನೀಡಿದ್ದ ಹೊಯ್ಸಳ ರಾಜವಂಶದ ವಿಷಯವು ನಿರೂಪಿತವಾಗಿದೆ. ಹೊಯ್ಸಳ ರಾಜವಂಶದ ಚರಿತ್ರೆಯನ್ನು ರಚಿಸುವಲ್ಲಿ ಇದು ಬಹಳ ಉಪಯುಕ್ತವೆನಿಸಿದೆ. ಆದುದ ರಿಂದಲೇ ಈ ಸರ್ಗದ ಅಂತ್ಯದಲ್ಲಿ 'ಕವಿಕಾವ್ಯವಂಶಾನುಚರಿತೋಪವರ್ಣನಂ' ಎಂದು ಈ ಸರ್ಗಕ್ಕೆ ಹೆಸರಿತ್ತಿದ್ದಾನೆ. ಎರಡನೆಯ ಸರ್ಗದಲ್ಲಿ ಶ್ರೀಕೃಷ್ಣನ ಜನನ, ಬಾಲ್ಯ, ವಾಸುದೇವನು ಅವನನ್ನು ಗೋಕುಲಕ್ಕೆ ಕರೆದುಕೊಂಡು ಹೋದ ಘಟನೆಗಳಿವೆ. ಮೂರರಲ್ಲಿ ಶ್ರೀಕೃಷ್ಣನ ಬಾಲ್ಯದ ಕ್ರೀಡೆಗಳು, ಪೂತನೀ, ಶಕಟ, ಧೇನುಕ, ಅಘ, ತೃಣವ್ರತ ಮುಂತಾದ ರಾಕ್ಷಸರ ಸಂಹಾರದ ವಿಷಯವಿದೆ. 'ಗೋವರ್ಧನೋದ್ಧರಣಂ' ಎಂಬ ಹೆಸರಿನ ನಾಲ್ಕರಲ್ಲಿ ಗೋಪಿಯ ರೊಡನೆ ಕೃಷ್ಣನ ಕ್ರೀಡೆ, ವಸ್ತ್ರಾಪಹರಣ, ಗೋವರ್ಧನೋದ್ಧರಣವೂ ಐದು ಮತ್ತು ಆರನೆಯ ಸರ್ಗಗಳಲ್ಲಿ ಸುಪ್ರಸಿದ್ಧವಾದ ರಾಸಕ್ರೀಡೆಯ ವರ್ಣನೆಗಳೂ ಇವೆ. ಏಳರಲ್ಲಿ ಮಥುರಾಪಟ್ಟಣಕ್ಕೆ ತೆರಳಿದುದು, ಎಂಟರಲ್ಲಿ ಅಕ್ರೂರನೊಡನೆ ಕೃಷ್ಣ ಹಾಗೂ ಬಲರಾಮರು ಮಥುರೆಗೆ ಬರುವುದು, ಒಂಭತ್ತನೆಯ ಸರ್ಗದಲ್ಲಿ ಕುವಲಯಾಪೀಡ ಎಂಬ ಗಜದೊಡನೆ ಹೋರಾಟ, ಚಾಣೂರ, ಮುಷ್ಟಿಕರೆಂಬ ಮಲ್ಲರೊಡನೆ ಹೋರಾಟ, ಕೊನೆಗೆ ಕಂಸನ ಹತ್ಯೆ ಇವು ಬಹು ಸುಂದರವಾಗಿ ಚಿತ್ರಿತವಾಗಿವೆ. ಹತ್ತರಲ್ಲಿ ಆಚಾರ್ಯ ಸಾಂದೀಪನಿಯ ಮಾರ್ಗದರ್ಶನದಲ್ಲಿ ಗುರುಕುಲಾಭ್ಯಾಸ, ರೇವತಿಯೊಡನೆ ಬಲರಾಮನ ವಿವಾಹ, ರುಕ್ಮಿಣೀಸಂದೇಶವೃತ್ತಾಂತ ವರ್ಣನೆಗಳಿವೆ. ಹನ್ನೊಂದರಲ್ಲಿ ಕೃಷ್ಣ ಮತ್ತು ಬಲಭದ್ರರ ಸೇನೆಯ ಪ್ರಯಾಣ ವರ್ಣನೆ ಇದೆ. ಸೇನಾನಿವೇಶವೆಂಬ ಹನ್ನೆರಡನೆಯ ಸರ್ಗದಲ್ಲಿ ಕೃಷ್ಣನ ಸೇನೆಯು ಕುಂಡಿನ ನಗರಕ್ಕೆ ಪ್ರವೇಶಿಸಿದುದು, ಅಲ್ಲಿನ ಪ್ರಜೆಗಳಿಗೆ ಕೃಷ್ಣದರ್ಶನ, ರುಕ್ಮಿಣಿಗೆ ಕೃಷ್ಣನ ಸಂದೇಶವೂ, 'ರುಕ್ಮಿಣೀ ಅಪಹರಣಂ' ಎಂಬ ಹದಿಮೂರ ರಲ್ಲಿ ಶ್ರೀಕೃಷ್ಣನ ಸೈನ್ಯವು ಅಲ್ಲಿ ನೆಲೆಸಿದ ತರುವಾಯ ರುಕ್ಮಿಣಿಯ ಅಪಹರಣದ ವಿಷಯವೂ ನಿರೂಪಿತವಾಗಿವೆ. ಹದಿನಾಲ್ಕರಲ್ಲಿ ಬಲರಾಮನಿಗೂ ಚೇದಿರಾಜನಿಗೂ ನಡೆದ ತುಮುಲ ಹೋರಾಟ, 'ರುಕ್ಮಿಣೀಜಯಂ' ಎಂಬ ಹದಿನೈದನೆಯ ಸರ್ಗದಲ್ಲಿ ರುಕ್ಮಿಯು ಕೃಷ್ಣನ ಮೇಲೆ ದಂಡೆತ್ತಿ ಹೋಗುವುದು, ಅದನ್ನು ಕಂಡು ಹತಾಶಳಾದ ರುಕ್ಮಿಣಿಯನ್ನು ಕೃಷ್ಣನು ಸಂತೈಸುವುದು, ಅನಂತರ ಹೋರಾಟದಲ್ಲಿ ಉದ್ಧಟನಾದ ರುಕ್ಮಿಯ ಸಂಹಾರ, ಕೊನೆಯು

'ರುಕ್ಮಿಣೀ ಕಲ್ಯಾಣಂ' ಎಂಬ ಹದಿನಾರನೆಯ ಸರ್ಗದಲ್ಲಿ ಶ್ರೀಕೃಷ್ಣ-ರುಕ್ಮಿಣಿಯರ ಸುಮಧುರ ಮಿಲನ ಹಾಗೂ ಕುಚೇಲನ ಭೇಟಿಯೊಡನೆ ಕಾವ್ಯವು ಮುಕ್ತಾಯವಾಗುತ್ತದೆ.

ವಿದ್ಯಾಚಕ್ರವರ್ತಿಯ ವರ್ಣನಾನೈಪುಣ್ಯ, ಅಲಂಕಾರಸಂಯೋಜನೆ ಹಾಗೂ ಕಾವ್ಯದ ರಸಭಾವಗಳ ಪರಿಚಯಕ್ಕೋಸ್ಕರ ಇಲ್ಲಿ ಕೆಲವು ಪದ್ಯಗಳನ್ನು ಉದಾಹರಿಸಿದೆ. ಯಾವುದೇ ಘಟನೆಯೂ ನಮ್ಮ ಕಣ್ಮುಂದೆ ನಿಲ್ಲುವಂತೆ ಮಾಡಬಲ್ಲ ಪ್ರತಿಭಾಸಾಮರ್ಥ್ಯ ಈ ಕವಿಗೆ ಸಿದ್ಧಿಸಿದೆ. ವಸುದೇವನು ಕಾರಾಗೃಹದಿಂದ ತಪ್ಪಿಸಿಕೊಂಡು ಹೋದ ವಾರ್ತೆ ಕಂಸನ ಕಿವಿಗೆ ಬಿದ್ದಾಗ, ಅವನು ಕೋಪೋದ್ರಿಕ್ತನಾಗಿ ಹೇಗೆ ವರ್ತಿಸಿದ ಎಂಬುದನ್ನು ಕವಿಯು ಹೀಗೆ ವರ್ಣಿಸುತ್ತಾನೆ :

> ಸಮಾಸ್ಫೋಟ್ಯ ಭುವಂ ಕಂಸಃ ಪಾಣಿನಿಷ್ಪಿಷ್ಟಕುಟ್ಟಿಮಮ್ ।
> ಉದ್ಯಾಪ್ಲೋದ್ಭ್ರಾಂತಭೀಮಾಕ್ಷಃ ಪರ್ಯಂಕಾದವಪುಪ್ಲುವೇ ॥
>
> ನನಾದ ಸಿಂಹವತ್ಕಂಸಃ ತರ್ಜನೀತಾಡಿತಾಧರಃ ।
> ಕುಲಾಚಲಶಿಲಾಸಾರಗರ್ಭನಿರ್ಭೇದನಕ್ಷಮೈಃ
>
> ಕಂಸಃ ಖಡ್ಗಾಗ್ರವಿಕ್ಷೇಪೈಃ ಕ್ಷೇಪೀಯೋಕ್ಷಿರುಪಾಯಯೌ
> ಸದ್ಯಗ್ರಾಲೋಕ ಶಬ್ದಾನಾಂ ದೈತ್ಯಾನಾಮನುಧಾವತಾಮ್
> ದುರಾಪೇ ವ್ಯಾಘ್ರವತ್ಕ್ರಾಮನ್ ಅಶಿಷ್ಟಗೃಹಮಾವಿಶತ್ ॥ (ಪು. ೧೮)

ಕೃಷ್ಣನ ಬಾಲಲೀಲೆಯ ಘಟನೆಗಳನ್ನು ಕವಿಯು ಹೆಚ್ಚಾಗಿ ವರ್ಣಿಸದೆ ಒಂದೆರಡು ಪದ್ಯಗಳಲ್ಲೇ ಸಂಕ್ಷೇಪಿಸಿದ್ದಾನೆ.

ಕೃಷ್ಣನ ರಾಸಕ್ರೀಡೆಯ ಚೇತೋಹಾರಿ ಸಂದರ್ಭದ ಬೆಳದಿಂಗಳಿನ ಸುಂದರವರ್ಣನೆ ಹೀಗೆ ಮೂಡಿದೆ :

> ಜ್ಯೋತ್ಸ್ನಾವದಾತಭುವನಾಃ ಸಕಲೇಂದುಬಿಂಬಾಃ
> ಸೌರಭ್ಯವಾಸಿತದಿಶೋ ನವಮಾಲಿಕಾನಾಮ್ ।
> ಉದ್ಗಂಧಿಕೈರವಪರಾಗತಿರೈಃ ಸಮೀರೈ
> ರಾಹ್ಲಾದಯನ್ ಯದುಪತೇಃ ಹೃದಯಂ ಪ್ರದೋಷಃ ॥ (ಪು.೩೪)

ಬೆಳದಿಂಗಳಿನಿಂದ ಇಡೀ ವಿಶ್ವವನ್ನೇ ಶುಭ್ರಗೊಳಿಸಿರುವ ಸಕಲಕಲಾಪೂರ್ಣವಾದ ಚಂದ್ರಬಿಂಬ, ನವಮಲ್ಲಿಗೆಯ ಪರಿಮಳವನ್ನು ಎಲ್ಲೆಡೆಯೂ ಪಸರಿಸುತ್ತಿರುವ ಸಮೀರ. ಇಂಥ ಪ್ರದೋಷವು ಯದುಪತಿಯ ಹೃದಯವನ್ನು ಆಹ್ಲಾದಗೊಳಿಸಿತು.

ಕವಿಯು ವಸಂತಮಾಸವನ್ನು ಅನೇಕ ಪದ್ಯಗಳಿಂದ ಮನೋಜ್ಞವಾಗಿ ವರ್ಣಿಸಿದ್ದಾನೆ. ಒಂದು ಪದ್ಯ ಹೀಗಿದೆ :

> ವನರಾಜಿಷು ಕರ್ಣಿಕಾರಕೋಪೇಷ್ವತಿವಿಕ್ಷಿಪ್ತದಲಂ ವಿಕಾಸಮತ್ಸು
> ಕನಕಾಭರಣಾ ವಸಂತಲಕ್ಷ್ಮೀರುದಿತೇವಾನುಚಕರ್ಷ ಲೋಚನಾನಿ ॥ (ಪು. ೫೦)

ವನದ ಸಾಲಿನಲ್ಲಿ ಕರ್ಣಿಕಾರಪುಷ್ಪಗಳು ತಮ್ಮ ದಳಗಳನ್ನೆಲ್ಲಾ ಬಿಚ್ಚಿಕೊಂಡಿರಲು ಕನಕಾಭರಣವನ್ನು ಧರಿಸಿಕೊಂಡು ವಸಂತಲಕ್ಷ್ಮಿಯು ಉದಿಸಿದಳೋ ಎಂಬಂತೆ ಕಣ್ಣುಗಳನ್ನು ಸೆಳೆದಳು.

ಮತ್ತೊಂದು ಪದ್ಯ ಇಂತಿದೆ :

ವಿವಿಧೋಜ್ವಲರತ್ನರಾಶಿರಮ್ಯಃ ವನಭಾಗಸ್ಸುರಭಿರ್ವಿಸಿದ್ರಪುಷ್ಪೈಃ ।
ಮಧುನೇವ ಬಭೌ ಪ್ರದೃಶ್ಯಮಾನಶ್ಚಿರಗುಪ್ತೋ ಮದನಸ್ಯ ಮೂಲಕೋಶಃ ॥
(ಪು. ೧೧)

ನಾನಾ ವಿಧವಾದ ಉಜ್ವಲ ರತ್ನರಾಶಿಗಳಿಂದ ರಮ್ಯವಾಗಿರುವ ಮತ್ತು ಅರಳಿದ ಕುಸುಮಗಳಿಂದ ಕೂಡಿದ ಮರಗಳುಳ್ಳ ಆ ವನಪ್ರದೇಶವು, ಬಹಳ ಕಾಲದಿಂದಲೂ ಬಚ್ಚಿಟ್ಟುಕೊಂಡಿದ್ದ ಮನ್ಮಥನ ಖಜಾನೆಯನ್ನು ಗೆಳೆಯನಾದ ವಸಂತನು ಪ್ರದರ್ಶಿಸಿದನೋ ಎಂಬಂತೆ ಶೋಭಿಸಿತು.

ಕಂಠಪರ್ಯಂತ ನೀರೊಳಗೆ ಮುಳುಗಿ ಕೈಮುಗಿಯುತ್ತಾ ತಮ್ಮ ವಸನಗಳನ್ನು ಬೇಡುತ್ತಿದ್ದ ಗೋಪಿಕೆಯರ ಮುಖವನ್ನು ಉಪಮೆಯ ಮೂಲಕ ಪಕ್ಕದಲ್ಲೇ ಮೊಗ್ಗಿರುವ ಅರಳಿದ ಪದ್ಮಗಳಿಗೆ ಹೋಲಿಸಿದೆ.

ದ್ರುಮಾಗ್ರಮಾರೋಹತಿ ಯಾದವೇಂದ್ರೇ
ನಿಮಜ್ಯ ಕಂಠಾವಧಿ ಗೋಪಕನ್ಯಾಃ
ಮುಖೈರ್ನಿಬದ್ಧಾಂಜಲಿಭಿಃ ಪ್ರಣೇಮುಃ
ಪದ್ಮೈಃ ಸಕೋಶೈರಿವ ಭಾಸವದ್ಭಿಃ ॥ (ಪು. ೨೯)

ಕೃಷ್ಣನು ಗೋವರ್ಧನಗಿರಿಯನ್ನು ಮೇಲಕ್ಕೆತ್ತಿರುವ ದೃಶ್ಯವನ್ನು ಕವಿಯು ಹೀಗೆ ಉತ್ಪ್ರೇಕ್ಷಿಸಿದ್ದಾನೆ :

ಪರ್ಯಂತಕೀರ್ಣಾಂಗುಲಿರದ್ರಿವಾರಿ
ಪಾಣಿರ್ವಿರೇಜೇ ಪುರುಷೋತ್ತಮಸ್ಯ ।
ವ್ಯೋಮಹ್ರದೇ ವ್ಯಸ್ತದಲಪ್ರಕಾಯಂ
ಉತ್ಕೀರ್ಣಕಂ ಸ್ಮೇರಮಿವೈಕಪದ್ಮಮ್ ॥ (ಪು. ೩೩)

ಪರಡಿದ ಬೆರಳುಗಳುಳ್ಳ, ನೀರು ಸುರಿಯುತ್ತಿರುವ, ಮೇಲಕ್ಕೆತ್ತಿದ ಕೃಷ್ಣನ ಹಸ್ತವು ಆಕಾಶವೆಂಬ ಸರೋವರದಲ್ಲಿ ದಳಗಳನ್ನು ಸಾಕಷ್ಟು ಬಿಚ್ಚಿಕೊಂಡು ಮೇಲಕ್ಕೆದ್ದು ಅರಳುತ್ತಿರುವ ಒಂದು ಪದ್ಮದಂತೆ ಶೋಭಿಸಿತು.

ನಿದರ್ಶನಾಲಂಕಾರದ ಮೂಲಕ ಕೃಷ್ಣನ ಅಶ್ವಸೇನೆಯ ಪರಿಣಾಮವು ಹೀಗೆ ಚಿತ್ರಿತವಾಗಿದೆ :

ಸಂಚೂರ್ಣ್ಯಮಾನಗಿರಿಕೋಟಿವಿಚಿತ್ರವರ್ಣಂ
ಕೂಟಾಶ್ಮಕೀರ್ಣಮಭಿತೋ ರಜಸಾಂ ವಿತಾನಮ್
ಊರ್ಧ್ವೋರ್ಧ್ವ ನಿರ್ಗಮತರಂಗಿತಮಂತರಿಕ್ಷೇ
ಸಂಧ್ಯಾಂಬುವಾಹನಿವಹಶ್ರಿಯಮಾಲಲಂಬೇ ॥ (ಪು. ೧೦೪)

ಕೃಷ್ಣನ ಅಶ್ವಸೈನ್ಯದ ಖುರಪುಟಗಳಿಂದ ಆ ಬೆಟ್ಟದ ನಾನಾ ವರ್ಣದ ಕಲ್ಲುಗಳು ಪುಡಿಪುಡಿಯಾಗಿ ಮೇಲೆದ್ದು, ದೂಳಿನ ಚಪ್ಪರವಾಗಿ, ಆಕಾಶದಲ್ಲಿ ಮೇಲೆ ಮೇಲೆ ಅಲೆಗಳಂತಾಗಿ,

ಸಂಧ್ಯಾಕಾಲದ ಮೋಡಗಳ ಗುಂಪಿನ ಕಾಂತಿಯನ್ನು ಪಡೆದವು.

ಶ್ರೀ ಕೃಷ್ಣನ ರಾಸಲೀಲೆಯನ್ನು ವರ್ಣಿಸುವಾಗ ಸಂಗೀತಶಾಸ್ತ್ರದ ವಿಶಿಷ್ಟ ಪಾರಿಭಾಷಿಕ ಪದಗಳನ್ನು ಬಳಸಿರುವುದನ್ನು ಪರಿಶೀಲಿಸಿದಲ್ಲಿ, ವಿದ್ಯಾಚಕ್ರವರ್ತಿಗೆ ಸಂಗೀತದಲ್ಲಿ ಆಳವಾದ ಪರಿಣತಿಯಿತ್ತು ಎಂಬುದು ಮನದಟ್ಟಾಗುತ್ತದೆ. ಇಂಥ ಪದ್ಯಗಳಲ್ಲಿ ಎರಡನ್ನು ಇಲ್ಲಿ ಉದಾಹರಿಸಿದೆ.

ಆರೋಹಣಾತ್ ಕ್ರಮವಶಾದವರೋಹಣಾಚ್ಚ
ಸಪ್ತಸ್ವರೋಲ್ಲಸನಭಾಜಿ ಮುಕುಂದವೇಣೌ
ಆವಿರ್ಭವದ್ವಿವಿಧಜಾತಿಷು ಮೂರ್ಛನಾಸು
ಮೂರ್ಛಾಂ ಜಗಾಮ ಹೃದಯಂ ವ್ರಜಬಾಲಿಕಾನಾಮ್ ॥ (ಪ್ರ. ೩೯)

ಮುಕುಂದನ ವೇಣುವಿನಲ್ಲಿ ಸಪ್ತಸ್ವರಗಳು ಮೈದಳೆದು ಶೋಭಿಸುತ್ತಿರಲು, ಅವುಗಳ ಕ್ರಮಬದ್ಧವಾದ ಆರೋಹಣ–ಅವರೋಹಣದಿಂದಾಗಿ ಹೊರಹೊಮ್ಮಿದ ವಿಧ ವಿಧವಾದ ಜಾತಿ ಮತ್ತು ಮೂರ್ಛನೆಗಳಲ್ಲಿ ವ್ರಜಬಾಲಿಕೆಯರ ಹೃದಯವು ಮೋಹಗೊಂಡಿತು.

ಆಂದೋಲಿತಸ್ಫುರಿತಕಂಪಿತಲೀನಮುಖ್ಯಾ-
ನ್ಯಾಕರ್ಣ್ಯ ಗೀತಗಮಕಾನಿ ಮುಕುಂದವೇಣೌ
ಚಿತ್ತಂ ಚಮತ್ಕೃತಿವಶೇನ ನಭಶ್ಚರಾಣಾಂ
ಆಂದೋಲಿತಸ್ಫುರಿತಕಂಪಿತಲೀನಮಾಸೀತ್ ॥ (ಪ್ರ. ೩೯)

ಆಂದೋಲಿತ, ಸ್ಫುರಿತ, ಕಂಪಿತ, ಲೀನವೇ ಪ್ರಮುಖವಾಗಿರುವ ಗೀತ ಗಮಕಗಳನ್ನುಳ್ಳ ಕೃಷ್ಣನ ವೇಣುನಾದವನ್ನು ಕೇಳಿದ ತರುವಾಯ, ಅದರ ಸೌಂದರ್ಯದಿಂದಾಗಿ ದೇವತೆಗಳ ಮನಸ್ಸೂ ಸಹ ಉಯ್ಯಾಲೆಯಾಡುತ್ತ, ಚಿಮ್ಮುತ್ತ, ಕಂಪಿಸುತ್ತ, ಲೀನವಾಯಿತು.

ಹೀಗೆಯೇ ಮುಂದುವರಿದು ಮಾರ್ಗ, ದೇಶಿಗಳಿಂದ ಕೂಡಿದ ಅನಿಬದ್ಧ, ಚೂಡಕ ಮುಂತಾದ ವಿವಿಧ ಪ್ರಕಾರದ ಸಂಗೀತದಿಂದ ಮುಕುಂದಗೋಷ್ಠಿಯು ಜಗತ್ತಿಗೆ ಪ್ರಮೋದವನ್ನುಂಟುಮಾಡಿತು ಎನ್ನುತ್ತಾನೆ ಕವಿ (ಪ್ರ. ೫೬). ರಾಸನೃತ್ಯದ ವಿವಿಧ ಭಂಗಿಗಳ ಒಂದೊಂದು ಅಂಶವೂ ಕಣ್ಣಿಗೆ ಕಟ್ಟುವಂತೆ ಮನೋಹರವಾಗಿ ಚಿತ್ರಿತವಾಗಿದೆ. ಇಡೀ ಒಂದು ಸರ್ಗವೇ ಈ ಅದ್ಭುತ ರಮ್ಯ ನೃತ್ಯದ ವರ್ಣನೆಗೆ ಮುಡುಪಾಗಿರುವುದು ಈ ಕಾವ್ಯದ ಒಂದು ವಿಶೇಷ.

ಈ ಕಾವ್ಯದ ಮೊದಲನೆಯ ಸರ್ಗದಲ್ಲಿ ತನ್ನ ವಂಶದ ವರ್ಣನೆಯ ಜೊತೆಗೆ ಆಶ್ರಯದಾತರಾಗಿದ್ದ ಹೊಯ್ಸಳ ಅರಸರ ವಂಶಾವಳಿ ಹಾಗೂ ಸಾಧನೆಗಳನ್ನು ಕುರಿತು ಕೆಲವು ವಿವರಗಳನ್ನು ನೀಡಿದ್ದಾನೆ. ಎರಡನೆಯ ಬಲ್ಲಾಳನಿಂದ ಆರಂಭಿಸಿ ತನ್ನ ಆಶ್ರಯದಾತನಾಗಿದ್ದ ಮೂರನೆಯ ಬಲ್ಲಾಳನ ವಂಶವೃಕ್ಷವನ್ನು ತಿಳಿಸಿದ್ದಾನೆ. ಈತನು ಹೊಯ್ಸಳರ ಕಾಲದ ಶಾಸನಗಳನ್ನು ರಚಿಸಿ, ಅವರ ಇತಿಹಾಸವನ್ನು ಬಲ್ಲವನಾಗಿದ್ದುದರಿಂದ ತನ್ನ ಇತರ ಗ್ರಂಥಗಳಲ್ಲಿಯೂ ಪ್ರಸ್ತಾಪಿಸಿರುವುದು ಸಹಜವೇ ಆಗಿದೆ. ಆದರೆ ಈತನು ನೀಡಿರುವ ಕೆಲವು ಇತಿಹಾಸವೆಂದುಕೊಂಡಿರುವ ಸಂಗತಿಗಳು ಇತಿಹಾಸಕ್ಕಿಂತ ಹೆಚ್ಚಾಗಿ

ಕಲ್ಪನೆಗೆ ಹತ್ತಿರವಾಗಿವೆ. ಈ ವಂಶದ ಮೂಲಪುರುಷ ಯಾದವರ ಕುಲಕ್ಕೆ ಸೇರಿದವನೆಂದು ಹೇಳಿರುವುದನ್ನು ಮೇಲಿನ ಅಭಿಪ್ರಾಯಕ್ಕೆ ಪೋಷಕವೆಂದು ಇಲ್ಲಿ ಹೇಳಬಹುದಾಗಿದೆ. ಇದಲ್ಲದೆ ಹೊಯ್ಸಳರಾಜರ ಸಾಧನೆಗಳನ್ನು ಪ್ರಸ್ತುತಪಡಿಸುವಾಗ ಅವನಲ್ಲಿದ್ದ ಕವಿತಾ ಗುಣದ ಕಲ್ಪಕಶಕ್ತಿ ಪಾರವಶ್ಯವನ್ನು ಪಡೆದು ಐತಿಹಾಸಿಕ ಅಂಶ ಒಂದಕ್ಕೆ ಸರಿಯುತ್ತದೆ. ಒಟ್ಟಿನಲ್ಲಿ 'ರುಕ್ಮಿಣೀ ಕಲ್ಯಾಣ'ವೆಂಬ ಈ ಮಹಾಕಾವ್ಯವು ಸಂಸ್ಕೃತ ಕಾವ್ಯಕ್ಷೇತ್ರಕ್ಕೆ ಒಂದು ಮಹತ್ವವಾದ ಕೊಡುಗೆ.

## ಅಡಿಟಿಪ್ಪಣಿಗಳು

1. Tri. cat. IV pt. 1 Madras 1928, R. 3666.
2. ಅದೇ, ಪು. ೨.
3. ಅದೇ, ಪು. ೩.

ಶ್ರೀ ವೈದ್ಯನಾಥಃ ಕಿಲ ಚಕ್ರವರ್ತಿಸುತಸ್ತದಾಸ್ಥಾನಮಹಾಸಮುದ್ರಮ್ ।
ಮರೀಚಿಭಿಶ್ಚಂದ್ರ ಇವಾಮಲಾಭಿರಹರ್ನಿಶಂ ವರ್ಧಯತಿ ಸ್ಮ ವಾಗ್ಭಿಃ ॥

4. (ಸಂ) ಡಾ. ಜಾನಕಿ ಎಸ್. ಎಸ್. ಕುಪ್ಪುಸ್ವಾಮಿಶಾಸ್ತ್ರಿ ಸಂಶೋಧನ ಸಂಸ್ಥೆ, ಮದ್ರಾಸ್ ೧೯೮೭, ಪು. ೧೧, ೧೨, ೪೫, ೫೬.
5. Tri. Skt. Series, vol I 1925, vol. II 1930.
6. (ಸಂ) ಜಾನಕಿ ಎಸ್. ಎಸ್, ಪೂರ್ವೋಕ್ತ, Delhi, ೧೯೬೫.
7. ಅದೇ. Appendix 1.
8. ಡಾ. ಜಾನಕಿ, ಎಸ್. ಎಸ್., ಪೂರ್ವೋಕ್ತ, ಪೀ. ಪು. ೧೪.
9. Dr. V. Raghavan The Bharatasangraha, of Vidyacakravartin, ABORI, Vol. XIV, pp. 256-57.
10. ಡಾ. ಜಾನಕಿ, ಎಸ್. ಎಸ್., 'ಪೂರ್ವೋಕ್ತ' ಸಂಜೀವಿನೀ ಟೀಕೆ, ಪು. ೧೧೪.
11. ಅದೇ, ಪು. ೪೩.
12. ರುಕ್ಮಿಣೀಕಲ್ಯಾಣ, ಪು. ೭. "ವೇದಾಂತಯೋಗಾಗಮಸಂಗೃಹಿತ್ವಾ ಪ್ರಕೀರ್ಣಕಸ್ಯಾಹಿತ ದರ್ಪಣೇನ".
13. ಡಾ. ಜಾನಕಿ, ಎಸ್. ಎಸ್., ಪೂರ್ವೋಕ್ತ, ಸಂಜೀವಿನೀಟೀಕೆ, ಪು. ೨೫.
14. ಅದೇ, ಪು. ೫೨.
15. ಅದೇ, ಪು. ೫೨-೫೩.
16. ಸೋऽಹಂ ಪ್ರವೃದ್ಧಾಮುಪಭುಜ್ಯ ಲಕ್ಷ್ಮೀಂ
ಪ್ರಸೂಯ ಪುತ್ರಾನನುರೂಪಶೀಲಾನ್ ।
ವಿಚಾರ್ಯ ಚಾತ್ಮಾನಮಬಾಹ್ಯಕಾಮೋ
ವಿಷ್ಣುಂ ಭಜೇ ವಾಕ್ಯಲುಪಾಪನುತ್ಯೈ ॥ (ಪು. ೭)

17. ವ್ಯಾಖ್ಯಾಯ ಯೇನೋಪಚಿತಾನಿ ಲೋಕೇ ಕಾವ್ಯಪ್ರಕಾಶಾದೀನಿ ನಿಬಂಧನಾನಿ.
ಉದಾಹೃತಿತ್ವೇನ ನಯ್ಯೈರ್ನಿಬಧ್ಯ ಕಾವ್ಯಪ್ರಕಾಶಾದಿಷು ಲಕ್ಷಣೇಷು ।
ನಿವೇದಿತಾ ಯೇನ ಜಗತ್ಸಮಕ್ಷಂ ಖ್ಯಾತಿಂ ಗತಾಃ ಹೋಸಲರಾಜಗಾಥಾಃ ॥ (ಪು.೭)

18. ಪರಾಶರವ್ಯಾಸಶುಕೋಪದಿಷ್ಟಂ ಯಥಾವದಾಲಂಬ್ಯ ಕಥಾಶರೀರಮ್
ವ್ಯಾವರ್ಣ್ಯತೇ ಭೀಷ್ಮಸುತಾವಿವಾಹಃ ಫಲಾಂತಮಾರಭ್ಯ ಹರೇಃ ಪ್ರಸೂತಿಮ್ ।

ದಿವ್ಯೇ ಕಥಾವಸ್ತುನಿ ನಾತ್ರ ಕಿಂಚಿದುತ್ಪಾದಿತಂ ನಾಪಿ ವಿಮಿಶ್ರಿತಂ ವಾ
ನಿತ್ಯೋಪಮೇಯಾ ರಸಸಾರಭೂಮ್ನಾ ಕೃತಾಪರಂ ವರ್ಣನಸೃಷ್ಟಿರಸ್ಯಾ ॥ (ಪು. ೭)

# ‘ಧರ್ಮನಾಥ ಪುರಾಣ’ದ ಕರ್ತೃ ಬಾಹುಬಲಿಪಂಡಿತನ ಶಾಸನಶಿಲ್ಪ ಮತ್ತು ಪದ್ಯಗಳು

ಜಿ. ಜಿ. ಮಂಜುನಾಥನ್

೧

ಬಾಹುಬಲಿ ಪಂಡಿತ ಉಭಯ ಭಾಷಾಕವಿ. ಸಂಸ್ಕೃತಭಾಷೆಯ ಹರಿಚಂದ್ರನ ‘ಧರ್ಮಶರ್ಮಾಭ್ಯುದಯ’ವನ್ನು ಆಧರಿಸಿ ಕನ್ನಡದಲ್ಲಿ ‘ಧರ್ಮನಾಥ ಪುರಾಣ’ವನ್ನು ರಚಿಸಿದ್ದಾನೆ; ಈತನ ಸಂಸ್ಕೃತ ಕೃತಿ ‘ಗುಮ್ಮಟನಾಥ ಚರಿತ’. ಬಾಹುಬಲಿ ಪಂಡಿತನು ಕೊಂಡಕುಂದಾನ್ವಯಕ್ಕೆ ಸೇರಿದವನು : ಪುಸ್ತಕಗಚ್ಛ ಪೂರ್ಣತಿಳಕನಾದವನು : ನಯಯುಕ್ತನಾದ ಈತ ಮೂಲಸಂಘದ ಒಡೆಯ : ದೇಶೀಗಣಾಗ್ರೇಸರ. ನಯಕೀರ್ತಿವ್ರತಿಯ ಶಿಷ್ಯನಾದ ಈತ ‘ಸಕಳವಿದ್ಯಾಚಕ್ರವರ್ತಿ’ಯೆಂದು ಪ್ರಸಿದ್ಧನಾಗಿದ್ದನು. ಈತನ ಕಾರ್ಯಕ್ಷೇತ್ರ ನಂಜನಗೂಡು ತಾಲ್ಲೂಕು ಏಚಿಗನಹಳ್ಳಿ.

ಮೈಸೂರಿನಿಂದ ನಂಜನಗೂಡಿಗೆ ಹೋಗುವ ದಾರಿಯಲ್ಲಿ ೧೫ ಕಿ.ಮೀ. ದೂರ ಹೋದರೆ, ತಾಂಡವಪುರ (ಹಿಂದಿನ ತಂಡ್ಯ) ಸಿಕ್ಕುತ್ತದೆ. ಅಲ್ಲಿಂದ ಪಶ್ಚಿಮಕ್ಕೆ ೨ ಕಿ.ಮೀ. ದೂರ ಹೋದರೆ ಏಚಿಗನಹಳ್ಳಿ. ಒಂದು ಕಾಲದಲ್ಲಿ ಇದು ಎಳಂದೂರು ದೊಡ್ಡಪಂಡಿತರಿಗೆ ಚಿಕ್ಕದೇವರಾಜನಿತ್ತ ಜಹಗೀರು. ಇಲ್ಲಿಂದ ೧ ಕಿ.ಮೀ. ದಕ್ಷಿಣದಲ್ಲಿ ಕಪಿಲಾನದಿಗೆ ಎಡದಂಡೆಯ ಮೇಲೆ ಒಂದು ನೇಮಿನಾಥ ಬಸದಿಯಿದೆ. ಇಲ್ಲಿಯ ಯಕ್ಷ ಕೂಗುವ ಬ್ರಹ್ಮದೇವರು ಪ್ರಸಿದ್ಧ. ನೇಮಿನಾಥ ಬಸದಿ ಇರುವ ಜಾಗದಲ್ಲಿದ್ದ ಕಾರವುರ ಇಂದು ಇಲ್ಲ : ಶಾಸನಸ್ಥ ಉಲ್ಲೇಖ ಮಾತ್ರ ಉಂಟು.

ನೇಮಿನಾಥ ಬಸದಿಯ ಉತ್ತರದ ಬಾಗಿಲಲ್ಲಿ ಒಂದು ಶಾಸನವಿದೆ. ಅದರ ಎತ್ತರ ಎರಡು ಅಡಿ, ಅಗಲ ಒಂದೂವರೆ ಅಡಿ. ಇದರಲ್ಲಿ ಶಕ. ೧೨೫೩, ವಿರೋಧಿಕೃತ್ ಮಾರ್ಗಶಿರ ಶುದ್ಧ ೧೫ ಭಾನುವಾರ(೨೩–೧೧–೧೩೩೧)ದಂದು ನಿಧನನಾದ ಮೇಘಚಂದ್ರ ಗುರುವಿನ ಸ್ತುತಿ ಇದ್ದು ಶಾಸನ ಪಾಠ ಹೀಗಿದೆ :[1]

೧. ಶ್ರೀಮತ್ಪರಮ ಗಂಭೀರ ಸ್ಯಾದ್ವಾದಮೋಘಲಾಂಛ
೨. ನಂ ಜೀಯಾತ್ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾ
೩. ಸನಂ॥ ಧೀರರಪಾರ ಸದ್ಗುಣಮಣಿ ಬ್ರಜವಾರಿಧಿ

೪. ಗಳ್ಳಪಾಯಸಂಹಾರಿಗಳಾತ್ಮಭಾವಪರರಿದ್ಧ ಜಿ
೫. ನೇಶ್ವರ ಧರ್ಮರಾಜಿಗಳ್ಪೂರಿಚರಿತ್ರ ಬಾಹುಬಲಿ
೬. ದೇವರಭಿಷ್ಟುತ ಪಾರ್ಶ್ವದೇವರುಂ ಸೂರಿವಿನೂ
೭. ತಪದ್ವಿಪದ ಕೀರ್ತಿಯನಾಂತೆಸೆದಸ್ಸಿರಂತರ
೮. ೦॥ ಜೈನಮತಾಂಬುರಾಶಿ ಪರಿವರ್ಧನ ಚಂದ್ರ
೯. ನನ್ನಸ್ತತಂದ್ರನಂ ಮಾನಿತಸಾರ ಸರ್ವಗುಣ
೧೦. ರುಂದ್ರನನುನ್ನತ ಕೀರ್ತಿಸಾಂದ್ರನಂ। ಹೀನ
೧೧. ವಿಮೋಹ ಮಾರಣ ಮೃಗೇಂದ್ರನನುದ್ಧ ಕೃಪಾನದೀಂದ್ರನಂ ಭೂನುತ ಮೇಘಚಂದ್ರನ
೧೨. ನಶೇಷಜನಂ ನಲವಿಂದೆ ಬಣ್ಣಿಕುಂ ॥ ಅಱಿಯದ ವಿದ್ದೆಯಿಲ್ಲ ಬಿಡದೋದದ ಕೇಳದ ಶಾಸ್ತ್ರವಿ
೧೩. ಲ್ಲ ಕೂರ್ತೆಱಗದ ಭೂಪರಿಲ್ಲ ಸಲಿ ಸೋಲದ ವಾದಿಗಳಿಲ್ಲ ಸಂತತಂ ನೆಱೆಯೆ ಸಮಸ್ತರುಂ ಪೊ
೧೪. ಗಳದಿರ್ದ ಕವಿತ್ವಮುಮಿಲ್ಲ ಲೋಕದೊಳ್ಳುಂಜಿ ಪಾರ್ಶ್ವದೇವಸುತ ಬಾಹುಬಲಿ ಬ್ರತಿಶಕ್ತಿಯದ್ಬು
೧೫. ತಂ॥ ಸಕವರ್ಷ ೧೪೫೫ನೆಯ ಸಂದ ವಿರೋಧಿಕೃತು ಸಂವತ್ಸರದ ಮಾರ್ಗಶಿರ ಸು
೧೬. ೧೫ ಆ। ವಾರದ ದಿವದಲ್ಲಿ ಮೇಘಚಂದ್ರದೇವರು ಮುಕ್ತಿಗೆ ಸಂದರು ಮಂಗಳ ಮಹಾಶ್ರೀ
೧೭. ಯವರಿಗೆ ನಿಶಿಧಿಯ ಮಾಡಿಸಿದವ ಕೋಟಿಯ ॥ ಮೇಘಚಂದ್ರದೇವರ ಶಿಷ್ಯರು ಮಾಣಿಕ್ಯ ದೇವರು। ನ
೧೮. …ಯ ದೇವರು.

ಈ ಶಾಸನವನ್ನು ಎಪಿಗ್ರಾಫಿಯ ಕರ್ನಾಟಿಕ **III**, ನಂಜನಗೂಡು ೪೫ನೆಯ ಶಾಸನವಾಗಿ ರೈಸ್ ಅವರು ಮೊದಲು ಪ್ರಕಟಿಸಿದರು. ಕನ್ನಡ ಅಧ್ಯಯನ ಸಂಸ್ಥೆಯ ಮೂಲಕ ಇದೇ ಶಾಸನ ಎಪಿಗ್ರಾಫಿಯ ಕರ್ನಾಟಿಕ **III**, ನಂಜನಗೂಡು ೧೭೧ನೆಯ ಶಾಸನವಾಗಿ ಮರುಮುದ್ರಣಗೊಂಡಿತು. ರೈಸ್ ಅವರ ಮುದ್ರಣದಲ್ಲಿ ಈ ಶಾಸನವನ್ನು ಹಲವೆಡೆ ತಪ್ಪಾಗಿ ಓದಿ ಉಂಟಾದ ದೋಷಗಳು ಇದರಲ್ಲಿಯೂ ಮುಂದುವರಿದಿವೆ. ಈ ಶಾಸನದ ಸೂಕ್ಷ್ಮ ಪರಿಶೀಲನೆಯಿಂದ ಅವುಗಳನ್ನು ಪರಿಷ್ಕರಿಸಬಹುದಾಗಿದ್ದು, ಅವು ಹೀಗಿವೆ:

| ಶಾಸನದ ಪಂಕ್ತಿ | ಎ.ಕ.ದ ಮುದ್ರಿತಪಾಠ | ತಿದ್ದಿದ ಶಾಸನ ಪಾಠ |
|---|---|---|
| ೪ | ಗಳಪಾಯ | ಗಳ್ಳಪಾಯ |
| ೪ | ಗಳಾದ | ಗಳಾತ್ಮ |
| ೪ | ಪರಿದ್ಧ | ಪರರಿದ್ಧ |

| | | |
|---|---|---|
| ೫ | ಳ್ಕ್ಯಾರೆ ಚರಿತ್ರ | ಳ್ಕ್ಯಾರಿ ಚರಿತ್ರ |
| ೬ | ಶಕ್ತಿಂಯು | ಕೀರ್ತಿಯು |
| ೭ | ನಸ್ತ | ನ್ಯಸ್ತ |
| ೧೨ | ವಿಡದೋದದ | ಬಿಡದೋದದ |
| ೧೩ | ಕೂರ್ತಿೀ... | ಕೂರ್ತೆಜಗದ |
| ೧೪ | ಕವೀಶ್ವರು | ಕವಿತ್ವಮು |
| ೧೪ | ದೊಲ್ಲಜ಼ಿ | ದೊಲ್ಲುಜ಼ಿ |

ಪ್ರಸ್ತುತ ಶಾಸನದಲ್ಲಿ ಪಾರ್ಶ್ವದೇವರು, ಮೇಘಚಂದ್ರ ಮತ್ತು ಬಾಹುಬಲಿ ಬ್ರತಿಯನ್ನು ಕುರಿತ ಮೂರು ಪದ್ಯಗಳನ್ನು 'ಧರ್ಮನಾಥ ಪುರಾಣ'ದಿಂದ[2] ಆಯ್ದುಕೊಳ್ಳಲಾಗಿದೆ. 'ಧರ್ಮನಾಥ ಪುರಾಣ'ವನ್ನು ೪ ಪ್ರತಿಗಳ ಸಹಾಯದಿಂದ ಸಂಪಾದಿಸಲಾಗಿದೆ. ಇದರಲ್ಲಿ ಮೂಡಬಿದರೆಯ ಓಲೆಯ ಪ್ರತಿಯಿಂದ ಪ್ರತಿಮಾಡಿರುವ ಕನ್ನಡ ಅಧ್ಯಯನ ಸಂಸ್ಥೆಯ ಕೆ.ಎ. ೨೯೬ನೆಯ ಪ್ರತಿಯ ಕಾಲ, ಶಾಲಿವಾಹನ ಶಕವರ್ಷ ೧೩೪೨, ಎಂದರೆ ಕ್ರಿ.ಶ. ೧೪೨೦ ಆಗುತ್ತದೆ. ಇದರದೇ ಮೈಕ್ರೋಫಿಲಂ ಪ್ರತಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಎನ್ ೧೦೦೮ ಎಂದರೆ ಕ ಮತ್ತು ಚ ಸಂಕೇತವಿರುವ ಎರಡು ಪ್ರತಿಗಳೂ ಒಂದೇ ಮೂಲದಿಂದ ಬಂದವು. ಕನ್ನಡ ಅಧ್ಯಯನ ಸಂಸ್ಥೆಯ ಎನ್. ೧೫೪೮ ಮೈಕ್ರೋಫಿಲಂ ಪ್ರತಿ ಗ. ಪ್ರತಿಗೆ ಮೂಡಬಿದರೆಯ ಬೇರೊಂದು ಹಸ್ತಪ್ರತಿ ಮೂಲವಾಗಿದೆ. ಇದನ್ನು ಬರೆದವನು ಓದುವ ಕಮಲನಾಥ; ಬರೆಸಿದವರು ಲಕ್ಷ್ಮೀಸೇನದೇವರು. ಜ. ಪ್ರತಿಯು ಜಿನವಾಣಿಯಲ್ಲಿ ಪ್ರಕಟಿಸಿದ ಅಸಮಗ್ರ ಪ್ರತಿಯಾಗಿದ್ದು ಇದರ ವಿವರಗಳು ಲಭ್ಯವಿಲ್ಲ. ಬಹುಶಃ ಮೇಲಿನ ಪ್ರತಿಗಳಲ್ಲಿ ಒಂದನ್ನು ಆಧರಿಸಿರಬಹುದು. ಒಟ್ಟಿನಲ್ಲಿ ಹೇಳಬಹುದಾದರೆ, ತಾಳೆಗರಿಯ ಪ್ರತಿಗಳಲ್ಲಿ 'ಧರ್ಮನಾಥ ಪುರಾಣ'ದ ಕ್ರಿ.ಶ. ೧೪೨೦ರಷ್ಟು ಹಿಂದಿನ ಹಳೆಯಪಾಠ ನಿಕ್ಷಿಪ್ತವಾಗಿದ್ದು ಹೀಗಿವೆ :

ಉ॥ ಮಾ॥ ಧೀರರಪಾರ ಸದ್ಗುಣ ಮಣಿವ್ರಜವಾರಿಧಿಗಳ್ ಕಷಾಯ ಸಂ
ಹಾರಿಗಳಾತ್ಮ ಭಾವಪರರಿದ್ದ ಜಿನೇಶ್ವರ ಧರ್ಮರಾಜಿಗಳ್
ಭೂರಿ ಚರಿತ್ರ ಬಾಹುಬಲಿ ದೇವರಭಿಷ್ಟುತ ಪಾರ್ಶ್ವದೇವರುಂ
ಸೂರಿ ವಿನೂತನರ್ ವಿಶದ ಕೀರ್ತಿಯನಾಂತೆಸೆದರ್ ನಿರಂತರಂ ॥ (೧–೨೨)

ಜೈನಮತಾಂಬುರಾಶಿ ಪರಿವರ್ಧನ ಚಂದ್ರನನಸ್ತತಂದ್ರನಂ
ಮಾನಿತಸಾರ ಸರ್ವ ಗುಣರುಂದ್ರನನುನ್ನತಕೀರ್ತಿಸಾಂದ್ರನಂ
ಹೀನ ವಿಮೋಹವಾರಣಮೃಗೇಂದ್ರನನುದ್ಧಕೃಪಾನದೀಂದ್ರನಂ
ಭೂನುತ ಮೇಘಚಂದ್ರನನಶೇಷಜನಂ ನಲವಿಂದೆ ಬಣ್ಣಿಕುಂ ॥ (೧–೨೭)

ಚಂ॥ ಮಾ॥ ಅಜ಼ಿಯದ ವಿದ್ಯೆಯಿಲ್ಲ ಬಿಡದೋದದ ಕೇಳದ ಶಾಸ್ತ್ರವಿಲ್ಲ ಕೂ
ರ್ತೆಜಗದ ಭೂಪರಿಲ್ಲ ಸಲೆ ಸೋಲದ ವಾದಿಗಳಿಲ್ಲ ಸಂತತಂ
ನೆಜ಼ೆಯೆ ಸಮಸ್ತರುಂ ಪೊಗಳದಿರ್ದ ಕವಿತ್ವಮುಮಿಲ್ಲ ಲೋಕದ
ಳ್ಳುಜ಼ಿ ನಯಕೀರ್ತಿದೇವಸುತ ಬಾಹುಬಲಿವ್ರತಿ ಶಕ್ತಿಯದ್ಭುತಂ ॥ (೧–೨೪)

'ಧರ್ಮನಾಥ ಪುರಾಣ'ದ ಈ ಮೂರು ಪದ್ಯಗಳಿಂದ ಶಾಸನ ಪಾಠವನ್ನು ಮತ್ತಷ್ಟು ಪರಿಷ್ಕರಿಸಬಹುದಾಗಿದೆ. ಶಾಸನದ ೬ ಮತ್ತು ೭ನೆಯ ಪಂಕ್ತಿಗಳಲ್ಲಿ ಬರುವ "ಸೂರಿ ವಿನೂತವದ್ವಿಷದ ಕೀರ್ತಿಯು" ಎನ್ನುವ ಪಾಠ ಅಪಪಾಠ. ಅರ್ಥ ಮಾಡುವುದು ಕಷ್ಟ. ಅದರ ಬದಲು ಕಾವ್ಯದ ೧–೨೨ರಲ್ಲಿರುವ, "ಸೂರಿ ವಿನೂತನರ್ ವಿಶದ ಕೀರ್ತಿಯು" ಎನ್ನುವ ಪಾಠವನ್ನು ಅಂಗೀಕರಿಸಬಹುದಾಗಿದೆ. ಇದರಿಂದ ಸ್ವಚ್ಛವಾದ, ಶುದ್ಧವಾದ ಕೀರ್ತಿ ಎಂದಾಗುತ್ತದೆ. 'ವಿಶದ' ಎನ್ನುವುದಕ್ಕೆ 'ಬಿಳಿಪು' ಎನ್ನುವ ಅರ್ಥವೂ ಇದ್ದು 'ವಿಶದ ಕೀರ್ತಿ' ಎನ್ನುವ ಶಬ್ದ 'ಧವಳ ಕೀರ್ತಿ' ಎನ್ನುವ ಶಬ್ದಕ್ಕೆ ಸಂವಾದಿಯಾದುದಾಗಿದೆ.

ಶಾಸನದ ೧೦ ಮತ್ತು ೧೧ನೆಯ ಪಂಕ್ತಿಗಳಲ್ಲಿ ಬರುವ "ಪೀನ । ವಿಮೋಹ ಮಾರಣ ಮೃಗೇಂದ್ರನನ್" ಎನ್ನುವ ಪಾಠ ಕೂಡ ಪರಿಶೀಲನಾರ್ಹವಾಗಿದೆ. 'ಮಾರಣ' ಎಂದರೆ 'ಕೊಲ್ಲುವುದು' ಎಂದರ್ಥ. 'ವಿಮೋಹ ಮಾರಣ ಮೃಗೇಂದ್ರನನ್' ಎಂದರೆ 'ವಿಶೇಷವಾದ ಮೋಹವನ್ನು ಕೊಲ್ಲುವ ಸಿಂಹ' ಎಂದು ಅರ್ಥವಾಗುತ್ತದೆ. ಇದು ತನ್ನಷ್ಟಕ್ಕೆ ತಾನೆ ಚೆನ್ನಾಗಿದ್ದರೂ ಕಾವ್ಯದ ೧–೨೬ರಲ್ಲಿ ದೊರೆಯುವ "ಪೀನ ವಿಮೋಹವಾರಣ ಮೃಗೇಂದ್ರನನ್" ಎನ್ನುವುದನ್ನು ಅಂಗೀಕರಿಸಬಹುದಾಗಿದೆ. 'ವಿಶೇಷವಾದ ಮೋಹವೆನ್ನುವ ಆನೆಗೆ ಸಿಂಹ' ಎಂದು ರೂಪಕವಾಗಿ ಅರ್ಥ ಮತ್ತಷ್ಟು ಸುಂದರವಾಗುತ್ತದೆ. ಆನೆ ಮತ್ತು ಸಿಂಹಗಳ ನಡುವಣ ಜಾತಿವೈರ ಪ್ರಸಿದ್ಧ.

ಶಾಸನದ ೧೪ನೆಯ ಪಂಕ್ತಿಯಲ್ಲಿ ಬರುವ "ಲ್ಲುಂಜಿ ಪಾರ್ಶ್ವದೇವ ಸುತ ಬಾಹುಬಲಿ ಬ್ರತಿ ಶಕ್ತಿಯದ್ಭುತಂ" ಎನ್ನುವ ಮಾತು ಗಮನಾರ್ಹವಾಗಿದೆ. ಈ ಶಾಸನ ಭಾಗ ಚಂಪಕ ಮಾಲಾ ವೃತ್ತವಾಗಿದ್ದು, ಪ್ರಸ್ತಾರಕ್ಕೆ ಧಕ್ಕೆ ಬರುತ್ತದೆ. ಈ ವೃತ್ತದ ಆರಂಭದ ನ ಜ ಗಣಗಳಲ್ಲಿ ನಗಣದ ಕಡೆಯ ಲಘುವೂ ಜಗಣದ ಆರಂಭದ ಲಘುವೂ ಲುಪ್ತವಾಗಿ ಎರಡು ಅಕ್ಷರ ಕಡಿಮೆ ಬೀಳುತ್ತದೆ. ಕಾವ್ಯದ ೧–೪೪ರಲ್ಲಿ ಬರುವ "ಲ್ಲುಂಜಿ ನಯಕೀರ್ತಿದೇವ ಸುತ ಬಾಹುಬಲಿವ್ರತಿ ಶಕ್ತಿಯದ್ಭುತಂ" ಎನ್ನುವ ಪಾಠದಿಂದ ಮೇಲಿನ ಪಾಠ ಸರಿಹೋಗುತ್ತದೆ. 'ನಯಕೀರ್ತಿದೇವಸುತ' ಎನ್ನುವುದನ್ನು ಉದ್ದೇಶಪೂರ್ವಕವಾಗಿ ಶಾಸನ ಕರ್ತೃ 'ಪಾರ್ಶ್ವದೇವ ಸುತ' ಎಂದು ಬದಲಾಯಿಸಿರುವಂತಿದೆ. ಆದರೆ ಛಂದೋದೋಷ ತಲೆದೋರುವುದರಿಂದ ಈ ಬದಲಾವಣೆ ನಿಲ್ಲುವುದಿಲ್ಲ.

## ೨

ಏಚಿಗನಹಳ್ಳಿ ಶಾಸನದ ಮಹತ್ವವಿರುವುದು ಮೂರು ಘಟ್ಟಗಳಲ್ಲಿ ಕಂಡುಬರುವ ಉಬ್ಬುಶಿಲ್ಪಗಳಿಂದ.[3] ಎಲ್ಲಕ್ಕಿಂತ ಮೇಲಿನ ಘಟ್ಟದಲ್ಲಿ ಸಿಂಹಲಲಾಟ, ಮುಕ್ಕೊಡೆ, ಸೂರ್ಯ, ಚಂದ್ರ ಮತ್ತು ಚಾಮರಗಳಿಂದ ಕೂಡಿದ ಪದ್ಮಾಸನಾಸೀನ ತೀರ್ಥಂಕರನ ಶಿಲ್ಪವಿದೆ. ಎರಡನೆಯ ಘಟ್ಟದಲ್ಲಿ ಮಧ್ಯದಲ್ಲಿರುವ ಅಟ್ಟವಣೆಯಲ್ಲಿ ತಾಡಪತ್ರಗಳನ್ನಿಟ್ಟು ಕೊಂಡು ಅಭ್ಯಾಸಮಾಡುತ್ತಿರುವ ಮುನಿವೃಂದದ ಜೊತೆಯಲ್ಲಿ ಕೈಯೆತ್ತಿ ಮುಗಿದಿರುವ

ಶಿಷ್ಯನ ಉಬ್ಬುಶಿಲ್ಪವಿದೆ. ಮೂರನೆಯ ಘಟ್ಟದಲ್ಲಿ ಇಬ್ಬರು ಮುನಿಗಳು ಮತ್ತು ಕಂತಿಯ ಉಬ್ಬುಶಿಲ್ಪವಿದೆ.

ಇದರಲ್ಲಿ ಎರಡನೆಯ ಘಟ್ಟದಲ್ಲಿ ಬರುವ ಶಿಷ್ಯ ಮತ್ತು ಮುನಿವೃಂದದ ಮೇಲೆ ಅವರ ತಲೆಯ ನೇರಕ್ಕೆ ಸರಿಯಾಗಿ ಹೆಸರುಗಳನ್ನು ಬರೆದಿದ್ದು ಹೀಗಿವೆ:—

| | | | |
|---|---|---|---|
| ೧. ಕೇತಗೊಂಡನ ಮಗ ಮ | ಮೇಘಚಂದ್ರ | ಬಾಹುಬಲಿ | ಪಾರ್ಶ್ವದೇವರು |
| ೨. ದ್ದಗೊಂಡ | ದೇವರು | ದೇವರು | |

ಈ ಹೆಸರುಗಳು ಶಾಸನಗಳಲ್ಲಿ ಬಹಳ ಸ್ಫುಟವಾಗಿವೆ. ಆದರೆ ಮೈಸೂರು ಪುರಾತತ್ತ್ವ ಇಲಾಖೆ ವರದಿ ೧೯೩೬, ಶಾಸನ ೫೭ರಲ್ಲಿ ಅವುಗಳನ್ನು ಹೀಗೆ ಓದಿದೆ.

| | | | |
|---|---|---|---|
| ೧. ಕೇತಗೊಂಡನ ಮಗ ಮ | ಮೇಘಚಂದ್ರ | [ಮಾಣಿಕ್ಯನಂದಿ] | ಬರ್ದ್ದ (?) |
| ೨. ದ್ದಗೊಂಡ | ದೇವರು | ದೇವರು | ದೇವರು |

ಕೇತಗೊಂಡನ ಮಗ ಮದ್ದಗೊಂಡ, ಮೇಘಚಂದ್ರದೇವರು ಎನ್ನುವ ಹೆಸರುಗಳು ಸರಿಯಾಗಿವೆ. ಸ್ಪಷ್ಟವಾಗಿದ್ದರೂ 'ಬಾಹುಬಲಿ ದೇವರು' ಎನ್ನುವುದನ್ನು '[ಮಾಣಿಕ್ಯನಂದಿ] ದೇವರು' ಎಂದೂ 'ಪಾರ್ಶ್ವದೇವರು' ಎನ್ನುವುದನ್ನು 'ಬರ್ದ್ದ ? ದೇವರು' ಎಂದೂ ಏಕೆ ಓದಿದರೋ ತಿಳಿಯದಾಗಿದೆ. ಮೈಸೂರು ಪುರಾತತ್ತ್ವ ಇಲಾಖೆ ವರದಿಯಲ್ಲಿರುವಂತೆಯೇ ಎ.ಕ. III ನಂಜನಗೂಡು ೧೭೧ರಲ್ಲಿ ಸಹ ಪ್ರಕಟವಾಗಿದೆ.

ಧರ್ಮನಾಥ ಪುರಾಣದ ರಚನೆಯ ಕಾಲ :

ಶಾ॥ ವಿ॥ ಸ್ವಸ್ತಿಶ್ರೀ ಶಕವತ್ಸರಂ ಸಲೆ ಚತುಸ್ಸಪ್ತದ್ವಯ್ಯೈಕಾಂಕ ವಿ
ನ್ಯಸ್ತಂ ನಂದನ ವರ್ಷದಲ್ಲಿ ಮಧುಮಾಸ ಶ್ವೇತಪಕ್ಷಾಷ್ಟಮಿ
ವಿಸ್ತಾರೀಕೃತ ಸೋಮವಾರದೊಳಿದಂ ಸಂಪೂರ್ಣಮಂ ಮಾಡಿದಂ
ಪ್ರಸ್ತುತ್ಯಂ ಪ್ರತಿಭಾಪರಂ ಭುಜಬಲಿ ಪ್ರಖ್ಯಾತಯೋಗೀಶ್ವರಂ ॥ (೧೬-೪೩೨)

ಸ್ವಾಮಿ ಕಣ್ಣುಪಿಳ್ಳೆಯವರ ಪಂಚಾಂಗದಲ್ಲಿ ಮೇಲಿನ ತೇದಿ ೨೪-೩-೧೩೫೨ಕ್ಕೆ ಸರಿಹೊಂದುತ್ತದೆ. ಆದರೆ ಗ್ರಂಥೋಕ್ತ ಸೋಮವಾರದ ಬದಲು ಶನಿವಾರವಾಗುತ್ತದೆ. 'ಧರ್ಮನಾಥ ಪುರಾಣ' ರಚಿತವಾದ ೧೯ ವರ್ಷಗಳಲ್ಲಿ ಅಲ್ಲಿನ ಪದ್ಯಗಳು ಶಾಸನಸ್ಥವಾಗಿವೆ ; ಎಂದರೆ ಬಾಹುಬಲಿ ಪಂಡಿತನ ಕಾಲದಲ್ಲಿಯೇ ಈ ಶಾಸನ ರೂಪುಗೊಂಡಿರಬಹುದಾದ ಸಾಧ್ಯತೆಯಿದೆ. ಆದುದರಿಂದ 'ಬಾಹುಬಲಿ ದೇವರು' ಎಂದು ಉತ್ಕೀರ್ಣವಾಗಿರುವ ಈ ಉಬ್ಬುಶಿಲ್ಪಕ್ಕೆ ಮಹತ್ತ್ವ ದೊರೆಯುತ್ತದೆ. ೬೪೧ ವರ್ಷಗಳ ಹಿಂದೆ 'ಧರ್ಮನಾಥ ಪುರಾಣ'ವನ್ನು ಬರೆದ ಬಾಹುಬಲಿ ಪಂಡಿತನ ೬೨೨ ವರ್ಷಗಳ ಹಿಂದಿನ ಉಬ್ಬುಶಿಲ್ಪ ಏಚಿಗನಹಳ್ಳಿಯ ಶಾಸನದಲ್ಲಿ ಲಭಿಸಿರುವುದು ಕನ್ನಡ ಸಾಹಿತ್ಯ ಸಂದರ್ಭಕ್ಕೆ ಒಂದು ಮಹತ್ತ್ವದ ಸಂಗತಿಯಾಗಿದೆ.

**೩**

ಚಾಮರಾಜನಗರ ತಾಲ್ಲೂಕಿನ ಮಲೆಯೂರು ಜೈನರ ತೀರ್ಥಸ್ಥಳಗಳಲ್ಲಿ ಒಂದು. ಇದು ಪೂಜ್ಯಪಾದ ಮತ್ತು ನಾಗಾರ್ಜುನರ ಜೀವಿತದ ವಿವರಗಳೊಂದಿಗೆ ಎಡೆ ಪಡೆದಿರುವ ಸ್ಥಳ. ಮಲೆಯೂರು ದೇವಚಂದ್ರನ 'ಪೂಜ್ಯಪಾದ ಚರಿತೆ' ಮತ್ತು 'ರಾಜಾವಳೀ ಕಥಾಸಾರ'ಗಳಲ್ಲಿ ಈ ಸ್ಥಳದ ಅತಿಶಯದ ಬಗ್ಗೆ ಹೆಚ್ಚಿನ ವಿವರಗಳಿವೆ.

ಮಲೆಯೂರು ಬೆಟ್ಟದ ಪಾರ್ಶ್ವನಾಥ ಬಸದಿಯ ಪ್ರಾಕಾರದಲ್ಲಿ ದಕ್ಷಿಣದ ಕಡೆ ನಿಲ್ಲಿಸಿರುವ ಕಲ್ಲಿನಲ್ಲಿ 'ಧರ್ಮನಾಥ ಪುರಾಣ' ಕರ್ತೃ ಬಾಹುಬಲಿಪಂಡಿತ ದೇವನ ಶಿಲ್ಪದೊಂದಿಗೆ ಅವನನ್ನು ಕುರಿತ ಒಂದು ಪದ್ಯ ದೊರೆತಿದ್ದು ಶಾಸನಪಾಠ ಹೀಗಿದೆ[1]—

೧. ಬಾಹುಬಲಿಪಂಡಿತದೇವರು
೨. ನಯಕೀರ್ತಿ ಬ್ರತಿನಂದನಂ ಸಕಳವಿ
೩. ದ್ಯಾಚಕ್ರವರ್ತ್ಯಾಹ್ವಯಂ ದ್ವಯ
೪. ಭಾಷಾ ಕವಿತಾತ್ರಿನೇತ್ರ
೫. ನುರು ಹೋರಾಶಾಸ್ತ್ರ
೬. ಸರ್ವಂ‍್ಞಕಂ ನಯಯೋ
೭. ಕ್ತಂ ವರ ಮೂಲ ಸಂಘದೊ
೮. ಡಯಂ ದೇಸಿಗಣಾಗ್ರೇಸರ
೯. ಂ ಪ್ರಿಯದಂ ಪೊಸ್ತಗಗಚ್ಛ
೧೦. ಪೂರ್ನ್ನ ತಿಳಕಂ ಶ್ರೀಕೊಂ
೧೧. ಡಕುಂದಾನ್ವಯಂ

ಈ ಶಾಸನಪಾಠ 'ಧರ್ಮನಾಥ ಪುರಾಣ'ದಲ್ಲಿ ಹೀಗಿದೆ :

ಮ॥ ವಿ॥ ನಯಕೀರ್ತಿವ್ರತಿನಂದನಂ ಸಕಳವಿದ್ಯಾ ಚಕ್ರವರ್ತ್ಯಾಹ್ವಯಂ
ದ್ವಯಭಾಷಾಕವಿತಾತ್ರಿನೇತ್ರನುರುಹೋರಾಶಾಸ್ತ್ರ ಸರ್ವಜ್ಞಕಂ
ನಯಯುಕ್ತಂ ವರಮೂಲಸಂಘದೊಡೆಯಂ ದೇಶೀಗಣಾಗ್ರೇಸರಂ
ಪ್ರಿಯದಂ ಪುಸ್ತಕಗಚ್ಛ ಪೂರ್ಣತಿಳಕಂ ಶ್ರೀಕೊಂಡಕುಂದಾನ್ವಯಂ ॥ (೧–೪೫)

ಶಾಸನ ಪಾಠಕ್ಕೂ ಕಾವ್ಯ ಪಾಠಕ್ಕೂ ಹೆಚ್ಚು ವ್ಯತ್ಯಾಸಗಳಿಲ್ಲದಿರುವುದು ಗಮನಾರ್ಹ. ಬಿಚಿಗನಹಳ್ಳಿ ಮತ್ತು ಮಲೆಯೂರು ಶಾಸನಗಳಲ್ಲಿ ದೊರೆತಿರುವ ಸಾಕ್ಷ್ಯಾಧಾರಗಳಿಂದ ಸಮಕಾಲೀನ ಪ್ರಪಂಚದಲ್ಲಿ ಬಾಹುಬಲಿ ಪಂಡಿತನ ಸ್ಥಾನ ಬಹಳ ಮಹತ್ವದ್ದಾಗಿತ್ತು ಎನ್ನುವುದು ವ್ಯಕ್ತವಾಗುತ್ತದೆ.

**ಅಡಿಟಿಪ್ಪಣಿಗಳು**

1. ಛಾಯಾಚಿತ್ರ 1 ನೋಡಿ.
2. (ಸಂ) ಎನ್. ಬಸವಾರಾಧ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೬೫.

**೩**

ಚಾಮರಾಜನಗರ ತಾಲ್ಲೂಕಿನ ಮಲೆಯೂರು ಜೈನರ ತೀರ್ಥಸ್ಥಳಗಳಲ್ಲಿ ಒಂದು. ಇದು ಪೂಜ್ಯಪಾದ ಮತ್ತು ನಾಗಾರ್ಜುನರ ಜೀವಿತದ ವಿವರಗಳೊಂದಿಗೆ ಎಡೆ ಪಡೆದಿರುವ ಸ್ಥಳ. ಮಲೆಯೂರು ದೇವಚಂದ್ರನ 'ಪೂಜ್ಯಪಾದ ಚರಿತೆ' ಮತ್ತು 'ರಾಜಾವಳೀ ಕಥಾಸಾರ'ಗಳಲ್ಲಿ ಈ ಸ್ಥಳದ ಅತಿಶಯದ ಬಗ್ಗೆ ಹೆಚ್ಚಿನ ವಿವರಗಳಿವೆ.

ಮಲೆಯೂರು ಬೆಟ್ಟದ ಪಾರ್ಶ್ವನಾಥ ಬಸದಿಯ ಪ್ರಾಕಾರದಲ್ಲಿ ದಕ್ಷಿಣದ ಕಡೆ ನಿಲ್ಲಿಸಿರುವ ಕಲ್ಲಿನಲ್ಲಿ 'ಧರ್ಮನಾಥ ಪುರಾಣ' ಕರ್ತೃ ಬಾಹುಬಲಿಪಂಡಿತ ದೇವನ ಶಿಲ್ಪದೊಂದಿಗೆ ಅವನನ್ನು ಕುರಿತ ಒಂದು ಪದ್ಯ ದೊರೆತಿದ್ದು ಶಾಸನಪಾಠ ಹೀಗಿದೆ[1]—

೧. ಬಾಹುಬಲಿಪಂಡಿತದೇವರು
೨. ನಯಕೀರ್ತಿ ಬ್ರತಿನಂದನಂ ಸಕಳವಿ
೩. ದ್ಯಾಚಕ್ರವರ್ತ್ಯಾಹ್ವಯಂ ದ್ವಯ
೪. ಭಾಷಾ ಕವಿತಾತ್ರಿಣೇತ್ರ
೫. ನುರು ಹೋರಾಶಾಸ್ತ್ರ
೬. ಸರ್ವಂಙಕಂ ನಯಯೋ
೭. ಕ್ತಂ ವರ ಮೂಲ ಸಂಘದೊ
೮. ಡಯಂ ದೇಸಿಗಣಾಗ್ರೇಸರ
೯. ಂ ಪ್ರಿಯದಂ ಪೊಸ್ತಗಗಚ್ಛ
೧೦. ಪೂರ್ನ್ನ ತಿಳಕಂ ಶ್ರೀಕೊಂ
೧೧. ಡಕುಂದಾನ್ವಯಂ

ಈ ಶಾಸನಪಾಠ 'ಧರ್ಮನಾಥ ಪುರಾಣ'ದಲ್ಲಿ ಹೀಗಿದೆ :

ಮ॥ ವಿ॥ ನಯಕೀರ್ತಿವ್ರತಿನಂದನಂ ಸಕಳವಿದ್ಯಾ ಚಕ್ರವರ್ತ್ಯಾಹ್ವಯಂ
ದ್ವಯಭಾಷಾಕವಿತಾತ್ರಿಣೇತ್ರನುರುಹೋರಾಶಾಸ್ತ್ರ ಸರ್ವಜ್ಞಕಂ
ನಯಯುಕ್ತಂ ವರಮೂಲಸಂಘದೊಡೆಯಂ ದೇಶೀಗಣಾಗ್ರೇಸರಂ
ಪ್ರಿಯದಂ ಪುಸ್ತಕಗಚ್ಛ ಪೂರ್ಣತಿಳಕಂ ಶ್ರೀಕೊಂಡಕುಂದಾನ್ವಯಂ ॥ (೧–೪೫)

ಶಾಸನ ಪಾಠಕ್ಕೂ ಕಾವ್ಯ ಪಾಠಕ್ಕೂ ಹೆಚ್ಚು ವ್ಯತ್ಯಾಸಗಳಿಲ್ಲದಿರುವುದು ಗಮನಾರ್ಹ. ಏಚಿಗನಹಳ್ಳಿ ಮತ್ತು ಮಲೆಯೂರು ಶಾಸನಗಳಲ್ಲಿ ದೊರೆತಿರುವ ಸಾಕ್ಷ್ಯಾಧಾರಗಳಿಂದ ಸಮಕಾಲೀನ ಪ್ರಪಂಚದಲ್ಲಿ ಬಾಹುಬಲಿ ಪಂಡಿತನ ಸ್ಥಾನ ಬಹಳ ಮಹತ್ವದ್ದಾಗಿದ್ದಿತು ಎನ್ನುವುದು ವ್ಯಕ್ತವಾಗುತ್ತದೆ.

**ಅಡಿಟಿಪ್ಪಣಿಗಳು**

1. ಛಾಯಾಚಿತ್ರ 1 ನೋಡಿ.
2. (ಸಂ) ಎಸ್. ಬಸವಾರಾಧ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೭೫.

3. ಛಾಯಾಚಿತ್ರ 2 ನೋಡಿ.
4. ಛಾಯಾಚಿತ್ರ 3 ನೋಡಿ.
5. ಎ.ಕ.. IV, ಚಾಮರಾ, ೧೫೭ (ಬಿ. ಎಲ್. ರೈಸ್) ; ಎ.ಕ., IV, ಚಾಮರಾ, ೨೭೯ (ಕಅಸಂ)
   ಛಾಯಾಚಿತ್ರ 4 ನೋಡಿ.

ಛಾಯಾ ಚಿತ್ರಗಳು ಕೆ. ಬಿ. ಸದಾನಂದ.

**ಕೆ. ಅನಂತರಾಮು**

ಶಿವಗಣಪ್ರಸಾದಿ ಮಹಾದೇವಯ್ಯನ 'ಪ್ರಭುದೇವರ ಶೂನ್ಯಸಂಪಾದನೆ'ಯ ಕಥಾವಸ್ತುವನ್ನು ಸಂಗ್ರಹಿಸಿ ಆದರ ಪ್ರಬಂಧಗುಣವನ್ನು ವಿಮರ್ಶಿಸುವುದು ಈ ಪ್ರಬಂಧದ ಮುಖ್ಯ ಉದ್ದೇಶ. ಅದಕ್ಕೆ ಹಿನ್ನೆಲೆಯಾಗಿ ಆ ಕೃತಿಯ ಸ್ವರೂಪಾದಿಗಳಿಗೆ ಸಂಬಂಧಿಸಿದ ಕೆಲವು ಮುಖ್ಯಾಂಶಗಳನ್ನು ಇಲ್ಲಿ ಮೊದಲಿಗೆ ಚರ್ಚಿಸಲಾಗಿದೆ :

## (೧) 'ಶೂನ್ಯಸಂಪಾದನೆ'ಯ ಉದ್ದೇಶ, ಸ್ವರೂಪ

**ವಚನಗಳ ಸಂರಕ್ಷಣೆ :** ಕ್ರಿ.ಶ. ೧೨ನೆಯ ಶ.ದಲ್ಲಿ ಕನ್ನಡನಾಡಿನಲ್ಲಿ ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ

ದೊಂದಿಗೆ ವಚನಸಾಹಿತ್ಯದ ಪುನರುಜ್ಜೀವನ ಕಾರ್ಯವೂ ಆಗ ಬಿರುಸಿನಿಂದ ನಡೆಯಿತು.

**'ಶೂನ್ಯಸಂಪಾದನೆ'ಯ ಉದ್ದೇಶ :** ವಚನಸಂರಕ್ಷಣೆಯ ದಿಕ್ಕಿನಲ್ಲಿಟ್ಟ ಹೆಜ್ಜೆಗಳಲ್ಲಿ 'ಶೂನ್ಯಸಂಪಾದನೆ'ಯ ಕಲ್ಪನೆ ಅತ್ಯಂತ ವಿಶಿಷ್ಟವಾದುದು. ಶಿವಗಣಪ್ರಸಾದಿ ಮಹಾದೇವಯ್ಯನು ಆ ಕಲ್ಪನೆಗೆ ರೂಪುಕೊಟ್ಟ ಮೂಲಪುರುಷ. ಅವನ ಕೃತಿರಚನಾಕಾಲ ಸು. ೧೪೦೦.[1] ಅವನು ಕಲ್ಯಾಣಪಟ್ಟಣದ ನಿವಾಸಿಯಾಗಿದ್ದಿರಬೇಕೆಂದು ಎಲ್. ಬಸವರಾಜು ಅವರು ಊಹಿಸಿದ್ದಾರೆ.[2] ಮಹಾದೇವಯ್ಯನ ಮುಂದೆ ಅಲ್ಲಮಾದಿ ಶರಣರ ವಚನಗಳಿದ್ದುವು; ಆ ವಚನಗಳ ಒಂದಷ್ಟು ಭಾಗ ಬಸವಣ್ಣನವರ ಮಹಾಮನೆಯಲ್ಲಿ ಹಾಗೂ ಇತರೆಡೆಗಳಲ್ಲಿ ಆಧ್ಯಾತ್ಮಿಕ ವಿಚಾರಮಂಥನದ ಹೊತ್ತಿನಲ್ಲಿ ಮೂಡಿಬಂದಂಥವು ಎಂಬ ಪ್ರತೀತಿಯೂ ಇತ್ತು; ಹರಿಹರನು ಕಾವ್ಯವಾಗಿಸಿದ್ದಂತೆ ಹಾಗೂ ಜನಸಮುದಾಯದ ನಡುವೆ ಪ್ರಚಾರದಲ್ಲಿದ್ದಂತೆ ಅವರ ಜೀವನಕಥೆಗಳೂ ಇದ್ದುವು. ಈ ಮೂರನ್ನೂ ಮುಪ್ಪುರಿಗೊಳಿಸುವ ಕೌಶಲವನ್ನು ಮಹಾದೇವಯ್ಯನು ಮೆರೆದನು. ಅವನು ಆ ಶರಣರ ವಚನರಾಶಿಯ ಅಧ್ಯಾತ್ಮಪ್ರಧಾನವಾದ, ಬೆಡಗು ಮುಖ್ಯವಾದ ಕುಸುಮಗಳನ್ನು ಆಯ್ದುಕೊಂಡು, ಅವೆಲ್ಲವೂ ಶರಣರ ಬಾಯಿಂದ ಮಹಾನುಭಾವಪ್ರಸಂಗಗೋಷ್ಠಿಯಲ್ಲಿ ಹಾಗೂ ಇನ್ನಿತರ ಸಂವಾದ ಸಂದರ್ಭಗಳಲ್ಲಿ ಮೂಡಿಬಂದುವೆಂದು ಕಲ್ಪಿಸಿಕೊಂಡು, ಅವುಗಳನ್ನು ಆ ಶರಣರ ಜೀವನಕಥೆಯ ದಾರದಲ್ಲಿ ಅಂದವಾಗಿ ಕಟ್ಟುವ ಅದ್ಭುತವನ್ನೆಸಗಿ ಯಶಸ್ವಿಯಾದನು.

ಆತನ ಕೃತಿರಚನೆಯ ಹಿನ್ನೆಲೆಯಲ್ಲಿರುವ ಮುಖ್ಯ ಉದ್ದೇಶಗಳನ್ನು ಹೀಗೆ ಪರಿವಿಡಿಸಬಹುದು : (೧) ಅಲ್ಲಮಪ್ರಭುವೇ ಮೊದಲಾದ ಹತ್ತಾರು ಶರಣರ ಪರಮಾರ್ಥವಚನಗಳನ್ನು ಒಂದೆಡೆ ಸಂಗ್ರಹಿಸುವುದು ; (೨) ಆ ಶರಣರ ಜೀವನದ ಕೆಲವು ಪ್ರಸಂಗಗಳನ್ನು ತನ್ನದೇ ಆದ ಗದ್ಯದ ಮಾತುಗಳಲ್ಲಿ ಬರೆದು, ಆ ಹಂದರದ ಮೇಲೆ ಅವರ ವಚನವಲ್ಲಿಗಳನ್ನು ಹಬ್ಬಿಸುವುದು : (೩) ಶರಣರ ಜೀವನಕಥೆ ಮತ್ತು ಅವರು ತಮ್ಮ ವಚನಗಳ ಮೂಲಕವೇ ಸುಭಾಷಣೆ ನಡೆಸಿದರೆಂಬ ಕಲ್ಪನೆಯ ಹಿನ್ನೆಲೆಯಲ್ಲಿ ಮುಕ್ತಕವಾದ ವಚನಗಳಿಗೆ ಪ್ರಬಂಧರೂಪವನ್ನು ಕೊಟ್ಟು ವಿನೂತನ ಚಂಪೂಕಾವ್ಯವೊಂದನ್ನು ಸೃಷ್ಟಿಸುವುದು ; (೪) ತನ್ನ ಗದ್ಯದ ಮಾತುಗಳ ಮೂಲಕ ಕೆಲವು ವಚನಗಳ ಭಾವ ಪರಿಸ್ಫುಟಗೊಳ್ಳುವಂತೆ ಮಾಡುವುದು ; ಅವುಗಳ ಕಾವ್ಯಗುಣ ಶಾಸ್ತ್ರಗುಣಗಳು ಉಜ್ವಲಗೊಳ್ಳುವಂತೆ ಮಾಡುವುದು : ತನ್ಮೂಲಕ ಅವುಗಳ ಆಸ್ವಾದನೆಯಲ್ಲಿ ಸಹೃದಯರಿಗೆ ಅಭಿರುಚಿ ಹುಟ್ಟುವಂತೆ ಮಾಡುವುದು : (೫) ಶರಣರ ಆಧ್ಯಾತ್ಮಿಕ ಸಾಧನಾಪಥವನ್ನು ಗುರುತಿಸಿ ಅವರು ಪಡೆದುಕೊಂಡ ಪರಮಸಿದ್ಧಿಯನ್ನು ಪ್ರಕಾಶಪಡಿಸುವುದು ; (೬) ವೀರಶೈವಧರ್ಮಕ್ಕೆ ಸಮ್ಮತವಾದ ಶಿವಾದ್ವೈತ ತತ್ತ್ವವಿಚಾರಗಳನ್ನು ಅವರ ಜೀವನಕಥೆಯ ಮೂಲಕ ಮತ್ತು ವಚನಗಳ ಮೂಲಕ ನಿರೂಪಿಸಿ ಅದನ್ನೊಂದು ಪವಿತ್ರ ಗ್ರಂಥವಾಗಿಸುವುದು.

ತನ್ನ ಕೃತಿಯ ಆರಂಭದಲ್ಲಿಯೇ "ಅಲ್ಲಮಪ್ರಭುದೇವರು ಬಸವರಾಜದೇವರು ಚೆನ್ನಬಸವರಾಜದೇವರು ಮುಖ್ಯವಾದ ಅಸಂಖ್ಯಾತಮಹಾಗಣಂಗಳೊಡನೆ ಮಹಾನುಭಾವ ಪ್ರಸಂಗಮಂ ಮಾಡಿದ

ಲೋಕದ ಮಹಾಗಣಂಗಳಿಗೆ ಆ ಮಹಾಪ್ರಸಂಗಮಂ ಸಮರ್ಪಿಸಿದ ಭೇದಮೆಂತಿರ್ದುದೆಂದಡೆ" ಎನ್ನುವಲ್ಲಿ ಮಹಾದೇವಯ್ಯನು ತನ್ನ ಕೃತಿರಚನೆಯ ಹಿನ್ನೆಲೆಯಲ್ಲಿರುವ ಮೂರು ಮುಖ್ಯವಾದ ಉದ್ದೇಶಗಳನ್ನು ತಾನೇ ಸ್ಪಷ್ಟಪಡಿಸಿದ್ದಾನೆ. "ಜೀವಜಾತಿಯು ಸಾರವಾದ ಮಾನವ ತನ್ನ ಬೆಳಗಿನಿಂದ, ತನ್ನ ಅರಿವಿನ ಕಣ್ಣಿಂದ ಅರಸಬೇಕು, ಕಾಣಬೇಕು. ಈ ಮಹಾಬೆಳಗನ್ನು ಕಂಡು ಬೆಳಗು ನಡೆಸಿದಂತೆ ನಡೆಯಬೇಕು. ಬೆಳಗು ಇರಿಸಿದಂತೆ ಇರಬೇಕು. ಜೀವಜಾತಿಯು ಬೆಳಗಿನ ಬೆಳಗಿನಲ್ಲಿ ಬೆಳಗಾಗಿ ಇರುವುದೇ ದಿವ್ಯಜೀವನ. ಈ ಮಹಾಬೆಳಗು ನಿರೂಪಿಸಿದಂತೆ, ಪ್ರೇರಿಸಿದಂತೆ ವರ್ತಿಸುವುದೇ ದಿವ್ಯಾಚರಣೆ. ಮಹಾಬೆಳಗಿನಲ್ಲಿ ಎಚ್ಚೆತ್ತು ಬೆಳಗಾದ ಅರಿವು ಆಚರಣೆಯಾಗಿ ಸರ್ವಾಂಗದಿಂದ ಹರಿದರೆ ಅದೇ ಪರಿಪೂರ್ಣವಾದ ದಿವ್ಯಜೀವನ. ಇಂಥ ಪರಿಪೂರ್ಣ ದಿವ್ಯಜೀವನ ದರ್ಶನವೇ ಪ್ರಭುದೇವರ ಶೂನ್ಯಸಂಪಾದನೆಯಲ್ಲಿ ಸಂವಾದರೂಪವಾಗಿ ನಡೆದಿರುವ ಸಮಾಲೋಚನೆಯ ಉಜ್ವಲ ಧ್ಯೇಯ"[3] ಎಂದು ಸಂ. ಶಿ. ಭೂಸನೂರಮಠ ಅವರು ಆ ಕೃತಿಯ ಉದ್ದೇಶವನ್ನು ಪ್ರೌಢವಾದ ನೆಲೆಯಲ್ಲಿ ತಿಳಿಸಿಕೊಟ್ಟಿದ್ದಾರೆ.

**'ಶೂನ್ಯಸಂಪಾದನೆ'ಯು ಮೋಕ್ಷಶಾಸ್ತ್ರ :** ಶೂನ್ಯವೆಂದರೆ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣೀಭೂತವಾದ ಪರಮಾತ್ಮತತ್ವ ಅಥವಾ ಪರಬ್ರಹ್ಮತತ್ವ ; ಏನೊಂದೂ ಇಲ್ಲವಾಗಿ ಎಲ್ಲವೂ ತಾನೇ ಆಗಿರುವ ದಿವ್ಯತತ್ವ. ಮಾನವನು ತಾನೂ ಪರಮಾತ್ಮನೇ ಆಗಿದ್ದರೂ ಅಜ್ಞಾನವಶನಾಗಿ 'ನಾನು ಜೀವಾತ್ಮ, ಅಲ್ಪನಾದವನು' ಎಂಬ ಕೀಳರಿವೆಯಿಂದ ಹುಟ್ಟುಸಾವುಗಳ ಸಂಸಾರಚಕ್ರದಲ್ಲಿ ಅನಂತಕಾಲದಿಂದ ಸುತ್ತುತ್ತಲೇ ಇದ್ದಾನೆ. ಮುಮುಕ್ಷಜೀವನು ಜೀವಾತ್ಮಸ್ಥಿತಿಯಿಂದ ಪಾರಾಗಿ, ಹುಟ್ಟುಸಾವುಗಳನ್ನು ಗೆದ್ದು, ತಾನೂ ಆ ಪರಾತ್ಪರ ವಸ್ತುವಿನಲ್ಲಿ ಸೇರಿಹೋಗುವುದೇ ಮೋಕ್ಷ ಅಥವಾ ಐಕ್ಯ. ಎಲ್ಲ ಜೀವಾತ್ಮರೂ ಬಯಸಬೇಕಾದ ಪರಮಪುರುಷಾರ್ಥವದು. "ನಾನಾ ಭವದುಃಖದಲಿ ಹುಟ್ಟಿದ

ತಪಸ್ಸಿನ ಪದವೇನು ಎಂಬುದನ್ನೆಲ್ಲ ತಿಳಿಸಿಕೊಡುವುದೇ 'ಶೂನ್ಯ ಸಂಪಾದನೆ'ಯ ಉದ್ದೇಶ. ಏನನ್ನು ಸಂಪಾದಿಸಿದರೆ ಎಲ್ಲವನ್ನೂ ಸಂಪಾದಿಸಿದಂತೆ ಆಗುತ್ತದೆಯೋ ಅದೇ ಶೂನ್ಯ ಸಂಪಾದನೆ. "ಶೂನ್ಯಸಂಪಾದನೆಯೆಂದರೆ ಪೂರ್ಣಯೋಗ. ಇದರಲ್ಲಿ ಪಿಂಡಾಂಡದ ಎಲ್ಲ ಪರಿಚಯವಿದೆ. ಪಿಂಡಾಂಡದ ಪೂರ್ಣವಿಕಾಸಕ್ಕೆ ಬೇಕಾದ ಎಲ್ಲ ಸಾಧನ ಸಂಪತ್ತಿದೆ. ಸ್ವಯಸಂವಿತ್ತಿಯಿದೆ. ಅನುಭವ, ಅನುಗ್ರಹ, ಆಚಾರ, ಅರ್ಚನ, ಕಾಯಕ, ಆರೋಹಣ. ಆರೋಗಣ ಮೊದಲಾದ ಆತ್ಮವಿಕಾಸಕ್ಕೆ ಬೇಕಾದ ಸಂಪನ್ಮೂಲಗಳಿವೆ. ಇದು ಬ್ರಹ್ಮಾಂಡ ವನ್ನೊಳಗೊಂಡ ಪಿಂಡಾಂಡ ವಿಶ್ವಕೋಶದಂತಿದೆ" ಎಂದು ಜಚನಿ ಅವರು ಹೇಳಿದ್ದಾರೆ.[4]

ಬದುಕಿರುವಾಗಲೇ ಮುಕ್ತಿಯನ್ನು ಸಾಧಿಸಿದ ಅಲ್ಲಮಪ್ರಭುವೇ 'ಶೂನ್ಯಸಂಪಾದನೆ'ಯ ಕೇಂದ್ರಬಿಂದು. ಅವನೇ ಗುರು ; ಜೀವಾತ್ಮ–ಪರಮಾತ್ಮರ ಐಕ್ಯವೇ ಗುರಿ. ಜೀವಾತ್ಮ ರೆಲ್ಲರೂ ಹೆಣ್ಣುಗಳು ; ಪರಮಾತ್ಮನೊಬ್ಬನೇ ಪುರುಷ ; ಆ ಪರಮಪುರುಷನನ್ನು ಕೂಡಿ ಕೊಳ್ಳುವುದೇ ಮುಮುಕ್ಷುವಿನ ಗುರಿ. "ಕೂಡಲಸಂಗಮದೇವಯ್ಯನೆಂಬ ಗಂಡನೆನ್ನ ಬೆರಸ ಬೇಕೆಂದು ಕರೆಯಲಟ್ಟಿದನು" (ವಚನ. ೯೭೭) ಎಂಬ ಬಸವಣ್ಣನವರ ಮಾತಿನಲ್ಲಿ ಅದು ಪ್ರಕಟವಾಗಿದೆ. ಅಲ್ಲಮನು ತನ್ನ ಅಧ್ಯಾತ್ಮಸಾಧನೆಯಲ್ಲಿ ಐಕ್ಯಸ್ಥಿತಿಯನ್ನು ಪಡೆದು ಕೊಂಡದ್ದು ಹೇಗೆ, ತನ್ನ ಸಂಪರ್ಕಕ್ಕೆ ಬಂದ ಅನ್ಯಶರಣರಿಗೆ ಅದರ ರಹಸ್ಯವನ್ನು ತಿಳಿಸಿ ಕೊಟ್ಟದ್ದು ಹೇಗೆ ಎಂಬುದನ್ನು ಮನವರಿಕೆ ಮಾಡಿಕೊಡುವುದೇ 'ಶೂನ್ಯಸಂಪಾದನೆ'ಯ ಪ್ರಮುಖ ಗುರಿ. ಈ ಅರ್ಥದಲ್ಲಿ ಆ ಗ್ರಂಥವೊಂದು ಮೋಕ್ಷಶಾಸ್ತ್ರ. ಆ ಶಾಸ್ತ್ರನಿರೂ ಪಣೆಯು ನೀರಸವಾಗಬಾರದೆಂದು ಆ ಆಧ್ಯಾತ್ಮಿಕವಸ್ತ್ರಕ್ಕೆ ಶರಣರ ಜೀವನದ ಘಟನಾ ವಳಿಗಳ ಚಿನ್ನದ ಅಂಚನ್ನು ನೆಯ್ದು ಕೂಡಿಸಲಾಗಿದೆ. ಇಲ್ಲಿ ಸಾಧಕನು ನಡೆಯ ಬೇಕಾದುದು ಷಟ್‌ಸ್ಥಲಮಾರ್ಗವಾದ್ದರಿಂದ, ಅದರ ವಿವರಗಳೂ ಕೂಡಿಕೊಂಡು 'ಶೂನ್ಯಸಂಪಾದನೆ'ಯು ವೀರಶೈವಸಮ್ಮತವಾದ ಐಕ್ಯಶಾಸ್ತ್ರಪ್ರದೀಪಿಕೆಯಾಗಿದೆ. ಎಲ್. ಬಸವರಾಜು ಅವರ ಮಾತುಗಳಲ್ಲಿ ಅದು 'ವೀರಶೈವಧರ್ಮದ ಮಹಾಪ್ರಸ್ಥಾನ'.[5] ಶಿವಗಣಪ್ರಸಾದಿಯ ಸಮಾಪ್ತಿವಾಕ್ಯದ ಮಾತುಗಳಲ್ಲಿಯೇ ಹೇಳುವುದಾದರೆ "ಇದು ಪರಮಗುರು ಪರಮವೀರಶೈವಸಿದ್ಧಾಂತ ತತ್ತ್ವಜ್ಞಾನ ; ಇದು ವೀರಶೈವಾಚಾರ ಪ್ರತಿಷ್ಠಾಪನಾ ಚಾರ್ಯ ; ಇದು ದಿವ್ಯವೇದಾಂತಶಿರೋಮಣಿ ; ಇದು ಸಮಸ್ತಶಾಸ್ತ್ರಮುಖ್ಯ ಮುಖದರ್ಪಣ ; ಇದು ಮಹಾಜ್ಞಾನವರ್ಧನ ಪರಮಾನುಭಾವಸಂಬೋಧೆ ; ಇದು ಸರ್ವಾಚಾರಸಂಪನ್ನ ಸಮಾರೂಢ ಸಂಗ್ರಹ."

ಶಿವಗಣಪ್ರಸಾದಿಯು 'ಶೂನ್ಯಸಂಪಾದನೆ'ಯ ಶ್ರವಣ ಮನನಾದಿಗಳಿಂದ ಆಗುವ ಲಾಭವನ್ನು ಕುರಿತು ಕೃತಿಯ ಅಂತ್ಯದಲ್ಲಿ "ಆ ಮಹಾಪ್ರಸಂಗದ ಸದುಹೃದಯವನರಿವಡೆ ನಿತ್ಯನಿರವಯನಪ್ಪನು. ಭವಭಾರಕ್ಕಂಜಿ ಕೇಳಲು ಸದ್ಯೋಮುಕ್ತನಪ್ಪನು. ಸತ್‌ಸಂಗದಿಂ ಕೇಳಿ ಮನದಲು ಧರಿಸಲು ನಿರ್ಮಳಾತ್ಮಕನಪ್ಪನು. ಆದರಣೆಯಿಂ ಶ್ರೋತ್ರಸುಖಕ್ಕೆ ಕೇಳಿದಾತನು ರುದ್ರಲೋಕಾಧಿಪತಿ ಯಪ್ಪನು. ಮನೋರತಿಯಿಂ ಬರೆದಡೆ, ಪಠಿಸಿದಡೆ, ಹೇಳಿದಡೆ, ಕೇಳಿದಡೆ—ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ ಚತುರ್ವಿಧ ಪದಮಂ ಪಡೆವರು" ಎಂದು ಹೇಳಿರುವಲ್ಲಿ ಪಾರಲೌಕಿಕ, ಆಧ್ಯಾತ್ಮಿಕಪ್ರಯೋಜನಗಳ ಕಡೆಗೇ ಹೆಚ್ಚು ಒತ್ತು ಕೊಟ್ಟಿರುವುದು ಆ ಕೃತಿಯು

ಅಧ್ಯಾತ್ಮ ಶಾಸ್ತ್ರವೆಂಬುದನ್ನು ಸ್ಪಷ್ಟಪಡಿಸುತ್ತದೆ. ಎಚ್. ತಿಪ್ಪೇರುದ್ರಸ್ವಾಮಿಯವರು ಹೇಳಿರುವಂತೆ ಶರಣರು ನಿರೂಪಿಸಿರುವ ಶೂನ್ಯತತ್ತ್ವವು ಅನುಭವಪ್ರಧಾನವಾದ ತಾತ್ತ್ವಿಕ ವಿಮರ್ಶೆ. ಹಿಂದೂಧರ್ಮದ ತಳಹದಿಗೆ ಅನುಗುಣವಾದ ರೀತಿಯಲ್ಲಿ ಆತ್ಮವಾದದ ಮಾರ್ಗವನ್ನು ಅವಲಂಬಿಸಿರುವಂಥದು.[6]

**ಮೂರು ಪರಿಷ್ಕರಣಗಳು :** 'ಶೂನ್ಯ ಸಂಪಾದನೆ'ಯು ಅಧ್ಯಾತ್ಮಶಾಸ್ತ್ರವಾಗಿ ರೂಪುಗೊಂಡುದರಿಂದ ನಿರ್ಮಾಣದ ಸಮಕಾಲದಲ್ಲಿಯೇ ಜ್ಞಾನಿಗಳನ್ನೂ ಸಾಧಕರನ್ನೂ ಭಕ್ತರನ್ನೂ ವಿದ್ವಾಂಸರನ್ನೂ ಅತಿಶಯವಾಗಿ ಆಕರ್ಷಿಸಿರಬಹುದು. ಆ ಆಕರ್ಷಣೆಯ ಫಲವಾಗಿ ಶಿವಗಣಪ್ರಸಾದಿ ಮಹಾದೇವಯ್ಯನ ತರುವಾಯ ಕಾಲದಿಂದ ಕಾಲಕ್ಕೆ ಮೂವರು ಮಹನೀಯರು ಮೂಲಕೃತಿಯನ್ನು ಪರಿಷ್ಕರಿಸುವ ಕಾರ್ಯವನ್ನು ಕೈಗೊಂಡರು. (೧) ಮೂಲಕೃತಿಯ ಕಥಾವೃತ್ತಾಂತಕ್ಕೆ ಬೆಸೆದುಕೊಳ್ಳುವಂತೆ ಇನ್ನಷ್ಟು ಶರಣರ ಅನುಭಾವಪ್ರಸಂಗಗಳನ್ನು ಸೇರಿಸಬೇಕೆಂಬ ಹಂಬಲದಿಂದ; (೨) ಮೂಲಕಥೆಯನ್ನು ತಮ್ಮ ಮನೋಧರ್ಮಕ್ಕೆ ಬೇಕಾಗುವಂತೆ ಅಲ್ಲಲ್ಲಿ ಪರಿವರ್ತಿಸುವ ಮತ್ತು ಸ್ಫುಟಗೊಳಿಸುವ ಉದ್ದೇಶದಿಂದ : (೩) ಅದನ್ನು ವೀರಶೈವಧರ್ಮದ ಪಠ್ಯಪುಸ್ತಕವೊಂದಾಗುವಂತೆ ರೂಪಿಸುವ ಆಸೆಯಿಂದ; (೪) ತಮ್ಮದೂ ಒಂದು ಸಂಪಾದನೆಯಿರಲಿ ಎಂಬ ಕೀರ್ತಿಕಾಂಕ್ಷೆಯಿಂದ—ಕ್ರಮವಾಗಿ ಹಲಗೆದೇವ (ಸು. ೧೫೦೦), ಗುಮ್ಮಳಾಪುರದ ಸಿದ್ಧಲಿಂಗದೇವ (ಸು. ೧೫೬೦–೭೦), ಗೂಳೂರು ಸಿದ್ಧವೀರಣ್ಣೊಡೆಯ (ಸು. ೧೫೭೦–೮೦) ಎಂಬ ವಿದ್ವಾಂಸರು ತಾವೂ ಒಂದೊಂದು 'ಶೂನ್ಯಸಂಪಾದನೆ'ಯನ್ನು ಸಂಕಲನ ಮಾಡಿದರು. ಅವರೆಲ್ಲರೂ ತಂತಮ್ಮ ಕೃತಿಗಳಲ್ಲಿ ಮೂಲಪುರುಷನಾದ ಶಿವಗಣಪ್ರಸಾದಿಯನ್ನು ನೆನೆದು ಅವನ ಜಾಡಿನಲ್ಲಿಯೇ ನಡೆದರು.

ಹಲಗೆದೇವನ 'ಶೂನ್ಯಸಂಪಾದನೆ'ಯನ್ನು ಬಿಟ್ಟು ಮಿಕ್ಕೆಲ್ಲವೂ ಈಗ ಬೆಳಕು ಕಂಡಿವೆ. ಮೂಲಪುರುಷನ ಕೃತಿಯ ಪ್ರಕಟಣೆಗೆ ಮುನ್ನವೇ ಕೊನೆಯ ಪರಿಷ್ಕರಣಕಾರನಾದ ಗೂಳೂರು ಸಿದ್ಧವೀರಣ್ಣೊಡೆಯನ ಕೃತಿಯು ೧೯೩೦ರಲ್ಲಿ ಪ್ರಕಟಗೊಂಡು[7] ತರುವಾಯ ದಲ್ಲಿ ಅದನ್ನು ಅನುಸರಿಸಿಯೇ 'ಶೂನ್ಯಸಂಪಾದನೆ'ಗೆ ಸಂಬಂಧಿಸಿದ ವಿಚಾರ-ವಿಮರ್ಶೆಗಳು ಸಾಕಷ್ಟು ನಡೆದುಬಿಟ್ಟುವು. ೧೯೬೯ರಲ್ಲಿ ಎಲ್. ಬಸವರಾಜು ಅವರು ಮೊತ್ತಮೊದಲ ಬಾರಿಗೆ ಶಿವಗಣಪ್ರಸಾದಿಯ 'ಶೂನ್ಯಸಂಪಾದನೆ'ಯನ್ನು ವಿಸ್ತಾರವಾದ ಪೀಠಿಕೆ, ತೌಲನಿಕ ಅಧ್ಯಯನಕ್ಕೆ ಬೇಕಾಗುವ ಸಾಮಗ್ರಿ ಮತ್ತು ಉಪಯುಕ್ತವಾದ ಅನುಬಂಧಗಳೊಡನೆ ಪ್ರಕಟಿಸಿ ಮೂಲಕೃತಿಕಾರನ ಪ್ರತಿಭೆಯನ್ನೂ ಹಿರಿಮೆಯನ್ನೂ ಎತ್ತಿಹಿಡಿದರು. "ಪರಿಷ್ಕರಣಗಳೆಲ್ಲ ಸ್ವತಂತ್ರ ಶೂನ್ಯಸಂಪಾದನೆಗಳೆಂಬಂತೆ ಅರಿಯದವರಿಗೆ ಅದ್ಭುತವಾಗಿ ಕಂಡುವು. ಆದರೆ ಅವೆಲ್ಲದರ ನಿಲುವಿಗೆ ಮತ್ತು ಚೆಲುವಿಗೆ ಶಿವಗಣಪ್ರಸಾದಿಯ ಶೂನ್ಯ ಸಂಪಾದನೆಯೇ ಬೆನ್ನೆಲುಬು ಮತ್ತು ಮೈಕಟ್ಟು[8]" ಎಂದು ಅವರು ಘೋಷಿಸಿದ ಮೇಲೆ ಆ ಕ್ಷೇತ್ರದಲ್ಲಿ ವಿಶೇಷ ಜಾಗೃತಿಯುಂಟಾಯಿತು. "ಕುಬೇರನ ಖಜಾನೆಗೆ ಮೂವರು ನಾಲ್ಕಾರು ರೂಪಾಯಿಗಳನ್ನು ಜಮಾ ಮಾಡಿ ಇಡೀ ಖಜಾನೆಯೇ

ಸಮ್ಮತವು ಎಂದಾಗಿದೆ—ಶೂನ್ಯಸಂಪಾದನೆಯು ಹಲಗೆಯ ದೇವನದು, ಗುಮ್ಮಳಾಪುರದ ಸಿದ್ಧಲಿಂಗನದು, ಗೂಳೂರು ಸಿದ್ಧವೀರನದು ಎಂದುಕೊಳ್ಳುವುದು. ಆ ಖಜಾನೆಗೆ ನಿಜವಾದ ಒಡೆಯ ಶಿವಗಣಪ್ರಸಾದಿ ಮಹಾದೇವಯ್ಯ"[9] ಎಂಬ ಮಾತೂ ಶಿವಗಣಪ್ರಸಾದಿಯ ಹಿರಿಮೆಯನ್ನು ಎತ್ತಿ ಹಿಡಿಯುವಂಥದು.

ಹಲಗೆದೇವನು ಶಿವಗಣಪ್ರಸಾದಿಯ ಕೃತಿಯಲ್ಲಿದ್ದ ಎಲ್ಲ ವಿವರಗಳನ್ನೂ ಉಳಿಸಿಕೊಂಡಿದ್ದಾನೆ. ಅದರಲ್ಲಿ ಚರ್ಚಿತವಾಗಿದ್ದ ಸಿದ್ಧರಾಮನ ದೀಕ್ಷಾಪ್ರಸಂಗವನ್ನು ದೀರ್ಘವಾಗಿ ಬೆಳೆಸಿದ್ದಾನೆ. ಅಷ್ಟೇ ಅಲ್ಲದೆ, ನುಲಿಯ ಚಂದಯ್ಯನೆಂಬ ಶರಣನ ಪ್ರಸಂಗವನ್ನು ಹೊಸದಾಗಿ ಸೇರಿಸಿದ್ದಾನೆ. ಅಜಗಣ್ಣ, ಸಿದ್ಧರಾಮ, ಬಸವಣ್ಣ, ಚೆನ್ನಬಸವಣ್ಣನವರುಗಳಿಗೆ ಸಂಬಂಧಿಸಿದಂತೆ ಸುದೀರ್ಘ ಆಖ್ಯಾನಗಳನ್ನು ಜೋಡಿಸಿದ್ದಾನೆ. ವೀರಶೈವಶಾಸ್ತ್ರದ ಪಾರಿಭಾಷಿಕ ವಿವರಗಳನ್ನು ವಿಶೇಷವಾಗಿ ಅಳವಡಿಸಿ ಅದನ್ನು ವೀರಶೈವದ ಕೈಪಿಡಿಯಾಗಿಸುವ ಯತ್ನ ಮಾಡಿದ್ದಾನೆ. ಈ ಕಾರಣಗಳಿಂದಲೇ ಹಲಗೆದೇವನ ಕೃತಿಯು ಎಲ್ಲ 'ಶೂನ್ಯಸಂಪಾದನೆ'ಗಳಿಗಿಂತ ಗಾತ್ರದಲ್ಲಿ ದೊಡ್ಡದಾಗಿದ್ದು ಶರಣರ ೧೬೩೬ ವಚನಗಳನ್ನು ಒಳಗೊಂಡಿದೆ. ಶಿವಗಣಪ್ರಸಾದಿಯಲ್ಲಿ ಅವುಗಳ ಸಂಖ್ಯೆ ೧೦೧೨ ಮಾತ್ರವೇ ಇತ್ತು.[10]

ಗುಮ್ಮಳಾಪುರದ ಸಿದ್ಧಲಿಂಗದೇವನ[11] ಕೃತಿಯಲ್ಲಿ ಒಟ್ಟು ೧೪೩೯ ವಚನಗಳಿವೆ. ಮೊದಲ ಶೂನ್ಯಸಂಪಾದನೆಯ ಕಥಾವಿವರಗಳ ಜೊತೆಗೆ ಹಲಗೆದೇವನ ಹೊಸಸಂಪಾದನೆಯನ್ನೂ ಸಿದ್ಧಲಿಂಗದೇವನು ಉಳಿಸಿಕೊಂಡಿದ್ದಾನೆ. ಆಯ್ದಕ್ಕಿ ಮಾರಯ್ಯನ ವೃತ್ತಾಂತವನ್ನು ಹೊಸದಾಗಿ ಕಟ್ಟಿ ಕೂಡಿಸಿದ್ದಾನೆ. ಈ ಹಿಂದೆ ವಿಸ್ತರಣೆಯಿಲ್ಲದೆ ಉಲ್ಲೇಖಗೊಂಡಿದ್ದ ಅಲ್ಲಮ-ಗೋರಕ್ಷರ ಪ್ರಸಂಗವನ್ನು ಒಂದಿಷ್ಟು ಹಿಗ್ಗಿಸಿದ್ದಾನೆ. ಹಲಗೆದೇವನ ಕೃತಿಯಲ್ಲಿದ್ದ ಹೊಸ ಸಂಗತಿಗಳಲ್ಲಿ ತನಗೆ ಬೇಕಾದುದನ್ನಷ್ಟೇ ಆಯ್ದು ಸಂಗ್ರಹಿಸಿಕೊಂಡಿದ್ದಾನೆ.

ಕೊನೆಯದಾದ ಗೂಳೂರು ಸಿದ್ಧವೀರಣ್ಣೊಡೆಯನ[12] ಪರಿಷ್ಕರಣದಲ್ಲಿ ಒಟ್ಟು ೧೫೪೩ ವಚನಗಳಿವೆ. ಮೊದಲ ಮೂರು ಶೂನ್ಯಸಂಪಾದನೆಗಳಲ್ಲಿ ಕೃತಿಗಳ ಆಸ್ವಾದನೆಗೆ ಅನುಕೂಲಿಸುವ ಯಾವುದೇ ವಿರಾಮಸ್ಥಾನಗಳಿಲ್ಲ; ಅನುಭಾವ ಕಥಾಪ್ರಸಂಗಗಳ ವಿಂಗಡಣೆಯಿಲ್ಲ; ಎಲ್ಲವೂ ಅಖಂಡವಾಗಿ ಸಾಗುವಂಥವು. ಸಿದ್ಧವೀರಣ್ಣೊಡೆಯನು ಮಾತ್ರ ಒಟ್ಟು ಕೃತಿಯನ್ನು ೨೧ ಉಪಸಂಪಾದನೆಗಳಾಗಿ ವಿಂಗಡಿಸಿ, ಪಠನ ಬೋಧನ ಮನನಗಳಿಗೆ ಬೇಕಾದ ಸೌಲಭ್ಯವನ್ನು ಒದಗಿಸಿಕೊಟ್ಟಿದ್ದಾನೆ. ಪ್ರತಿ ಸಂಪಾದನೆಯ ಆದಿಯಲ್ಲಿ ಕಂದಪದ್ಯವನ್ನು ಬರೆದು, ಅದರ ಮೂಲಕ ಅಲ್ಲಿರುವ ವಸ್ತುವಿನ ಸೂಚನೆಯನ್ನು ನೀಡಿ, ಅದಕ್ಕೊಂದು ಕಾವ್ಯರೂಪವನ್ನು ನೀಡುವ ಯತ್ನಮಾಡಿದ್ದಾನೆ; ಮುಕ್ತಾಯದಲ್ಲಿ ಗದ್ಯದ ಮಾತುಗಳಲ್ಲಿ ಏನಾಯಿತು, ಎಷ್ಟು ವಚನಗಳಾದುವು, ಎಲ್ಲಿದ್ದೇವೆ ಎಂಬುದನ್ನೆಲ್ಲ ತಿಳಿಸಿಕೊಟ್ಟಿದ್ದಾನೆ. ಪರಿಷ್ಕರಣಕಾರರಲ್ಲಿ ಸಿದ್ಧವೀರಣ್ಣೊಡೆಯನೇ ಹೆಚ್ಚು ಪ್ರತಿಭಾಶಾಲಿ. ಶಿವಗಣಪ್ರಸಾದಿಯಲ್ಲಿರುವ ಪ್ರಸಂಗಗಳನ್ನು ಹಾಗೆಯೆ ಉಳಿಸಿಕೊಂಡು, ತರುವಾಯದ ಪರಿಷ್ಕರಣಕಾರರ ಹೊಸ ಸಂಪಾದನೆಗಳನ್ನು ರಕ್ಷಿಸಿಕೊಂಡು, ತನ್ನ ಕಡೆಯಿಂದ ಘಟ್ಟಿವಾಳ ಮುದ್ದಣ್ಣ

ಮತ್ತು ಮೋಳಿಗೆ ಮಾರಯ್ಯಗಳ ಕಥಾವೃತ್ತಾಂತಗಳನ್ನು ನೂತನವಾಗಿ ನಿರೂಪಿಸಿದ್ದಾನೆ.

ಶಿವಗಣಪ್ರಸಾದಿಯಲ್ಲಿಲ್ಲದ ನುಲಿಯ ಚಂದಯ್ಯ, ಆಯ್ದಕ್ಕಿ ಮಾರಯ್ಯ, ಮೋಳಿಗೆ ಮಾರಯ್ಯ, ಘಟ್ಟಿವಾಳ ಮುದ್ದಣ್ಣರ ವೃತ್ತಾಂತಗಳು ಹೊಸದಾಗಿ ಕೂಡಿಕೊಂಡು ಶೂನ್ಯ ಸಂಪಾದನೆಯು ಪರಿಷ್ಕರಣಗೊಂಡಿರುವುದರ ಜೊತೆಗೆ ಬೆಳವಣಿಗೆಯನ್ನೂ ಹೊಂದಿದೆ. ಈ ಬೆಳವಣಿಗೆಯನ್ನು ಚಿದಾನಂದಮೂರ್ತಿಯವರು 'ಸಂಚಿತ ಬೆಳವಣಿಗೆ'[13] ಎಂದು ಹೆಸರಿಸಿದ್ದಾರೆ. ಹೊಸ ಕಥಾಪ್ರಸಂಗಗಳ ಮೂಲಕ ಶೂನ್ಯಸಂಪಾದನೆಯನ್ನು ಸೇರಿಕೊಂಡ ಶರಣರ ಪೈಕಿ ನುಲಿಯ ಚಂದಯ್ಯ, ಗೋರಕ್ಷ, ಮೋಳಿಗೆ ಮಾರಯ್ಯ, ಘಟ್ಟಿವಾಳ ಮುದ್ದಣ್ಣರು ಶಿವಗಣಪ್ರಸಾದಿಯ ಕೃತಿಯಲ್ಲಿಯೇ ಸುಳಿದುಹೋಗಿದ್ದಾರೆಂಬುದು ಗಮನಾರ್ಹ ಸಂಗತಿ.

**ಚಂಪೂ ಎನ್ನಬಹುದಾದ ಕಾವ್ಯಬಂಧ :** ಶಿವಶರಣರಿಂದ ರಚಿತವಾದ ವಚನಗಳೆಲ್ಲ ಮೂಲತಃ ಮುಕ್ತಕಗಳೆಂಬುದನ್ನು ಶಿವಗಣಪ್ರಸಾದಿಯೇ ಹೇಳಿದ್ದಾನೆ. ಆ ಮುಕ್ತಕಗಳಿಗೆ ಪ್ರಬಂಧರೂಪವನ್ನು ಕೊಡುವಲ್ಲಿ ಶಿವಗಣಪ್ರಸಾದಿಯು ಯಾವ ಸಂದರ್ಭಕ್ಕೆ ಯಾವ ವಚನವನ್ನು ಪವಣಿಸಬಹುದು ಎಂಬುದನ್ನು ತನ್ನ ಉಚಿತಾನುಚಿತ ಪ್ರಜ್ಞೆಯ ಮೂಲಕ, ಪಾಂಡಿತ್ಯದ ಮೂಲಕ ನಿರ್ಧರಿಸಿದ್ದಾನೆ. ಹಾಗೆ ನಿರ್ಧರಿಸಿರುವಲ್ಲಿ ಅನೇಕ ವಚನಗಳು ಸಂವಾದಶೈಲಿಗೆ, ನಿರೂಪಿತವಾಗುತ್ತಿರುವ ಕಥಾಪ್ರಸಂಗಕ್ಕೆ ಅಚ್ಚುಕಟ್ಟಾಗಿ ಹೊಂದಿಕೊಂಡಿವೆ; ಒಂದಷ್ಟು ವಚನಗಳು ಹಾಗೆ ಹೊಂದಿಕೊಳ್ಳದೆ ಪ್ರತ್ಯೇಕವೆಂಬಂತೆಯೂ ಉಳಿದುಕೊಂಡಿವೆ. ವಚನ-ವಚನಗಳ ನಡುವೆ, ವಚನಗುಚ್ಛಗಳ ನಡುವೆ ಸಂಬಂಧವೇರ್ಪಡಿಸುವ ಸಲುವಾಗಿ; ಕಥೆಯ ಕೊಂಡಿಯನ್ನು ಕೂಡಿಸುವ ಸಲುವಾಗಿ ಅಲ್ಲಲ್ಲಿ ಶಿವಗಣಪ್ರಸಾದಿಯು ತನ್ನದೇ ಆದ ಆತ್ಮೀಯವಾದ ಗದ್ಯದ ಮಾತುಗಳನ್ನು ಬರೆದಿದ್ದಾನೆ. ಆ ಮಾತುಗಳ ಮೂಲಕ ಶರಣರ ಕೆಲವು ವಚನಗಳು ಯಾವ ಮನಃಸ್ಥಿತಿಯಲ್ಲಿ ಮೂಡಿರಬಹುದು ಎಂಬುದನ್ನು ತಿಳಿದು, ಅವುಗಳ ವ್ಯಾಪ್ತಿಯನ್ನೂ ಅರ್ಥವಂತಿಕೆಯನ್ನೂ ಧ್ವನಿಪೂರ್ಣತೆಯನ್ನೂ ಅರಿಯಲು ಸಹಾಯವಾಗಿದೆ. ಅಂತೆಯೇ ಅವನ ವ್ಯಾಖ್ಯಾನದ ಮೂಲಕ ಕೆಲವು ವಚನಗಳ ಅರ್ಥವ್ಯಾಪ್ತಿ ಸೀಮಿತವಾಗಿಬಿಡುವಂತೆ ತೋರುವಂತೆಯೂ ಆಗಿದೆ.[14] ವಚನಗಳನ್ನೆಲ್ಲ 'ಪದ್ಯ'ಗಳೆಂದು ಭಾವಿಸಿ, ಶಿವಗಣಪ್ರಸಾದಿಯು ಬರೆದಿರುವ ವ್ಯಾಖ್ಯಾನದ ಮಾತುಗಳನ್ನು 'ಗದ್ಯ'ವೆಂದು ಭಾವಿಸಿ, ಚಂಪೂಕಾವ್ಯಶೈಲಿಯನ್ನು ಮನಸ್ಸಿಗೆ ತಂದುಕೊಂಡರೆ 'ಶೂನ್ಯಸಂಪಾದನೆ'ಯು ವಿಶಿಷ್ಟವಾದ ಚಂಪೂಕಾವ್ಯ ಬಂಧವನ್ನು ಗಳಿಸಿಕೊಂಡಿದೆ ಎಂದು ಹೇಳಬಹುದು.

**ವಚನಗಳ ಮೂಲಪಾಠ ಸಂರಕ್ಷಣೆ :** ಶರಣರ ವಚನಗಳು, ಅವರ ನಡುವೆ ನಡೆದ ನೇರವಾದ ಸಂಭಾಷಣೆಯೇ ಹೌದು ಎನ್ನುವಷ್ಟರಮಟ್ಟಿಗೆ ಅನೇಕ ಕಡೆ ಸಹಜವೆಂಬಂತೆ ಸನ್ನಿವೇಶಕ್ಕೆ ಹೊಂದಿಕೊಂಡುಬಿಟ್ಟಿವೆಯಲ್ಲ; ಆ ಸಹಜತೆ ಮೂಲವಚನಗಳಿಂದಲೇ ಮೂಡಿಬಂದದ್ದೇ ಅಥವಾ ಶಿವಗಣಪ್ರಸಾದಿಯು ಆ ವಚನಗಳಲ್ಲಿ ಕೆಲವನ್ನಾದರೂ ತನಗೆ ಬೇಕಾದಂತೆ ಅಲ್ಪಸ್ವಲ್ಪ ತಿದ್ದಿಕೊಂಡನೆ? ಅವುಗಳ ಜೊತೆಗೆ ತನ್ನ ಕಡೆಯಿಂದಲೂ

ಕೆಲವು ವಚನಗಳನ್ನು ಸ್ವತಂತ್ರವಾಗಿ ರಚಿಸಿ ಜೋಡಿಸಿಬಿಟ್ಟನೆ ಎಂಬ ಸಂದೇಹ ನಮ್ಮನ್ನು ಕಾಡದಿರುವುದಿಲ್ಲ. ವಚನಗಳನ್ನು ಸಂಭಾಷಣೆಗೆ ಹೊಂದಿಸುವಲ್ಲಿ ಶಿವಗಣಪ್ರಸಾದಿಯು ಅಲ್ಪಸ್ವಲ್ಪ ತಿದ್ದಿಕೊಂಡಿರಬಹುದೆ ಹೊರತು ಮನಬಂದಂತೆ ಅವುಗಳನ್ನು ತಿರಿಚುವ ಕಾರ್ಯಕ್ಕೆ ಅವನು ಕೈ ಹಾಕಿಲ್ಲ ಎಂದು ಎಲ್. ಬಸವರಾಜು ಅವರು ಅಭಿಪ್ರಾಯಪಟ್ಟಿದ್ದಾರೆ.[15] ಆದರೆ ತರುವಾಯದ ಪರಿಷ್ಕರಣಕಾರರು ಮೂಲವಚನಗಳನ್ನು ತಿದ್ದಿಕೊಳ್ಳುವಿಕೆಯ ವಿಷಯದಲ್ಲಿ ಇನ್ನಷ್ಟು ಮುಂದೆ ಹೋಗಿದ್ದಾರೆ. ಹಾಗೆ ಅಂಜದೆ ಅಳುಕದೆ ತಿದ್ದಿರುವವರಲ್ಲಿ ಹಲಗೆದೇವನೇ ಪ್ರಮುಖ. ಗುಮ್ಮಳಾಪುರದ ಸಿದ್ಧಲಿಂಗದೇವ ಮತ್ತು ಗೂಳೂರು ಸಿದ್ಧವೀರಣ್ಣೊಡೆಯರು ವಚನಪಾಠಗಳ ವಿಷಯದಲ್ಲಿ ಶಿವಗಣಪ್ರಸಾದಿಯನ್ನೇ ಅನುಸರಿಸಿದ್ದರೂ ಹಲಗೆದೇವನು ಪ್ರವರ್ತಿಸಿದ ಪ್ರಕ್ಷೇಪಗಳು ಅವರ ಪ್ರಜ್ಞೆಯನ್ನು ಮೀರಿ ಅವರ ಕೃತಿಗಳಲ್ಲಿ ಹೇಗೋ ನುಸುಳಿಕೊಂಡುಬಿಟ್ಟಿವೆ.[16]

ಇನ್ನು ಇಡೀ ವಚನಗಳನ್ನೇ ಪ್ರಕ್ಷೇಪಗೊಳಿಸಿರುವ ವಿಚಾರಕ್ಕೆ ಬರೋಣ. ಶಿವಗಣಪ್ರಸಾದಿಯಲ್ಲಿ ಅಂತಹ ಪ್ರಕ್ಷೇಪಗಳು ಕಡಿಮೆಯಿರಬಹುದು. ಆದರೆ ಪರಿಷ್ಕರಣಕಾರರಲ್ಲಿ ಈ ಪ್ರಮಾಣವು ಇನ್ನೂ ಕೊಂಚ ಹೆಚ್ಚಾಗಿದೆ. ಗೂಳೂರು ಸಿದ್ಧವೀರಣ್ಣೊಡೆಯನ ಕೃತಿಯನ್ನು ಕುರಿತು ಹೇಳುವಾಗ ರಂ. ಶ್ರೀ. ಮುಗಳಿಯವರು "ಕೆಲವು ವಚನಗಳು ವಚನಕಾರರವೇ, ಸ್ವಯಂಕೃತವೇ ಎಂಬ ಸಂಶಯ ಹುಟ್ಟುತ್ತದೆ"[17] ಎಂದಿದ್ದಾರೆ. ಚಿದಾನಂದಮೂರ್ತಿಗಳು ಪರಿಷ್ಕರಣಕಾರರನ್ನು ಹೆಚ್ಚಾಗಿ ಮನಸ್ಸಿನಲ್ಲಿಟ್ಟುಕೊಂಡು "ನಾಟಕೀಯ ಶೈಲಿಗಾಗಿ, ತಾವು ಒಪ್ಪಿದ ಅಥವಾ ಕಲ್ಪಿಸಿದ ಕಥಾನಿರೂಪಣೆಗಾಗಿ ವಚನಗಳನ್ನು ತಾವೇ ಕಟ್ಟಿ ಸೇರಿಸಿದರೆನ್ನುವುದಕ್ಕೆ ಶೂನ್ಯಸಂಪಾದನೆಗಳಲ್ಲಿ ಸ್ಪಷ್ಟ ಕುರುಹುಗಳಿವೆ"[18] ಎಂದು ಹೇಳುತ್ತ ಕೆಲವು ಉದಾಹರಣೆಗಳನ್ನು ತೋರಿಸಿಕೊಟ್ಟಿದ್ದಾರೆ. ಎಂ. ಎಂ. ಕಲಬುರ್ಗಿ ಅವರು ಶೂನ್ಯಸಂಪಾದನಕಾರರನ್ನು ಒಟ್ಟಾರೆ ದೃಷ್ಟಿಯಲ್ಲಿಟ್ಟುಕೊಂಡು ಅವರ ಕೃತಿಗಳಲ್ಲಿರುವ ದೀರ್ಘ ವಚನಗಳೆಲ್ಲ ಬಹುಶಃ ಸಂಪಾದನಕಾರರೇ ಕಟ್ಟಿ ಸೇರಿಸಿರುವಂಥವಾಗಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಅವರೇ ಮುಂದುವರಿದು "ಪುನರುಕ್ತಿಗಳನ್ನು ಬಿಟ್ಟರೆ ನಾಲ್ಕೂ ಶೂನ್ಯಸಂಪಾದನೆಗಳು ಸೇರಿ, ಬಸವಣ್ಣನವರ ೩೦೦ ವಚನಗಳನ್ನು ಬಳಸಿಕೊಂಡಿವೆ. ಇವುಗಳಲ್ಲಿ ೨೦೦ ವಚನಗಳು ಬೇರೆ ಯಾವ ಪ್ರಾಚೀನ ಸಂಗ್ರಹದಲ್ಲಿಯೂ ಸಿಗದೆ ಕೇವಲ ಶೂನ್ಯಸಂಪಾದನೆಯಲ್ಲಿಯೇ ಕಾಣುತ್ತವೆ. ಇವು ಇವರಿಗೆ ಎಲ್ಲಿಂದ ಸಿಕ್ಕವು ? ಬೇರೆಯವರಿಗೆ ಏಕೆ ಸಿಗಲಿಲ್ಲ ? ಈ ಪ್ರಶ್ನೆಗೆ ಉತ್ತರ ಬಹುಶಃ ಇವು ಸಂಪಾದನಕಾರರೇ ಕಟ್ಟಿದ ವಚನಗಳು. ಹೀಗೆ ಬಸವಣ್ಣನವರ ೩೦೦ ವಚನಗಳಲ್ಲಿ ೨೦೦ ವಚನಗಳು ಸಂಪಾದನಕಾರರ ಸೃಷ್ಟಿಯಾಗಿರುವುದು ನಿಜವಿದ್ದರೆ ಶೂನ್ಯಸಂಪಾದನೆಯು ಮೂರರಲ್ಲಿ ಎರಡು ಪಾಲು ಕೂಟವಚನಗಳನ್ನೊಳಗೊಂಡಿದೆ ಎಂಬ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ"[19] ಎನ್ನುವಷ್ಟು ಮುಂದೆ ಹೋಗಿದ್ದಾರೆ. ಆದರೆ ಈ ಪ್ರಕ್ಷೇಪಗಳು ವಚನಸಾಹಿತ್ಯದ ಮೂಲಸ್ವರೂಪದ ಮೇಲೆ ಪ್ರತಿಕೂಲ ಪರಿಣಾಮವನ್ನೇನೂ ಉಂಟುಮಾಡುವಂತಿಲ್ಲ.

ಇಲ್ಲಿಂದ ಮುಂದಕ್ಕೆ ಶಿವಗಣಪ್ರಸಾದಿ ಮಹಾದೇವಯ್ಯನ ಕೃತಿಯಲ್ಲಿ ನಿರೂಪಿತ ಅಭಿಜ್ಞಾನ ವಾಗಿರುವಂತೆ ಅದರ ಕಥಾವಸ್ತುವನ್ನು ಸಂಗ್ರಹಿಸಿ, ಅಲ್ಲಿರುವ ಪ್ರಬಂಧಗುಣವನ್ನು ವಿಮರ್ಶಿಸಲಾಗಿದೆ:

## (೨) ಕಥಾವಸ್ತು

**ಅಲ್ಲಮನ ಅವತಾರ:** ನಿತ್ಯನಿರಂಜನನಾದ ಪರಮೇಶ್ವರನ ಕೈಲಾಸಮಂದಿರದಲ್ಲಿ ಒಡ್ಡೋಲಗ ನೆರೆದಿತ್ತು. ಆ ಸಭೆಯಲ್ಲಿ ನಿರ್ಮಾಯನೆಂಬ ಗಣಾಧಿಪತಿಯು ಶಿವನಿಗಿಂತಲೂ ಅಧಿಕನೆಂಬಂತೆ ಒಪ್ಪುತ್ತಿದ್ದನು. ಆಗ ಪಾರ್ವತೀದೇವಿಯು ಆ ಗಣೇಶ್ವರನ ಪ್ರತಾಪ ಶಕ್ತಿಯೇನೆಂಬುದನ್ನು ಶಿವನಿಂದ ಕೇಳಿ ತಿಳಿದುಕೊಂಡಳು. ಆತನ ವಿಷಯದಲ್ಲೇಕೋ ದೇವಿಗೆ ಮಮತೆಯು ಒದಲು ಹುರುಡು ಹುಟ್ಟಿತು. ನಿರ್ಮಾಯನೆಂಬ ಆತನ ಹೆಸರನ್ನು ಸುಳ್ಳಾಗಿಸಿ, ಅವನು ಮಾಯಾಸಕ್ತನಾಗುವಂತೆ ಮಾಡಿ ತೋರಿಸುತ್ತೇನೆ ಎಂದು ಹೇಳಿದ ಜಗನ್ಮಾತೆಯು ಶಿವನಿಂದ ಅಪ್ಪಣೆ ಪಡೆದುಕೊಂಡಳು.

ಒಂದು ದಿನ ಪಾರ್ವತೀದೇವಿಯು ತನ್ನ ಓಲಗದಲ್ಲಿದ್ದ ರುದ್ರಕನ್ನಿಕೆಯೊಬ್ಬಳನ್ನು ತನ್ನ ಸಮೀಪಕ್ಕೆ ಬರಮಾಡಿಕೊಂಡು ಅವಳಿಗೆ ಕಾಮಲತೆಯೆಂಬ ಹೆಸರನ್ನೂ ತನಗಿಂತ ಮಿಗಿಲಾದ ಸೌಂದರ್ಯವನ್ನೂ ಕರುಣಿಸಿದಳು. ಆಕೆಯನ್ನು ಕುರಿತು "ನೀನು ನಿರ್ಮಾಯ ನೆಂಬ ಗಣೇಶ್ವರನು ಪರಮೇಶ್ವರನ ಓಲಗಕ್ಕೆ ಬರುವ ದಾರಿಯಲ್ಲಿ ನಿಲ್ಲಬೇಕು; ನಿನ್ನ ಹಾವಭಾವವಿಲಾಸಗಳಿಂದ ಅವನ ಕಣ್ಮನಗಳಿಗೆ ಕಾಮಜಾಲವನ್ನು ಬೀಸಬೇಕು; ಅವನ ಮನಸ್ಸು ನಿನ್ನ ಕೂಟಕ್ಕೆಳಸುವಂತೆ ಮಾಡಬೇಕು" ಎಂದು ಆಜ್ಞೆಮಾಡಿದಳು. ಕಾಮಲತೆಯು ದೇವಿಯ ಆಜ್ಞೆಯನ್ನು ನೆರವೇರಿಸಿದಳು. ಅದರ ಪರಿಣಾಮವಾಗಿ ನಿರ್ಮಾಯನ ಚಿತ್ತವು ಚಂಚಲವಾಯಿತು; ಇಂದ್ರಿಯಗಳು ಕದಡಿದುವು; ಕಾಮಾತು ರತೆಯು ಕೈಮೀರಿತು; ಮನಸ್ಸು ಕೂಟಕ್ಕಾಗಿ ತವಕಿಸಿತು. ಆದರೆ ನಿರ್ಮಾಯನು ಮರು ಕ್ಷಣದಲ್ಲಿಯೇ "ನನ್ನ ಅಂತರಂಗದಲ್ಲಿ ಈ ಮಾಯಾಪರವಶತೆ ಹುಟ್ಟಿದುದಾದರೂ ಹೇಗೆ" ಎಂದು ಕರಗಿ ಕೊರಗುತ್ತ ಅನುತಾಪಾಗ್ನಿಯಲ್ಲಿ ಬೆಂದುಹೋದನು. "ಈ ಸ್ತ್ರೀಯ ದೆಸೆಯಿಂದ ನಾನಿನ್ನು ಭವಸಾಗರದಲ್ಲಿ ಬೀಳಬೇಕಾಗುತ್ತದೇನೋ" ಎಂದು ಚಿಂತಾಕ್ರಾಂತ ನಾಗಿ ಶಿವನ ಓಲಗವನ್ನು ಹೊಕ್ಕನು. ನಿರ್ಮಾಯನ ಸ್ಥಿತಿಗತಿಗಳನ್ನು ಅರಿತ ಶಿವನು "ನೀನು ಮಾಯೆಗೆ ಸೋತ ಕಾರಣ ಭೂಲೋಕದಲ್ಲಿ ಹುಟ್ಟಿ ಆ ರುದ್ರಕನ್ನಿಕೆಯೊಡನೆ ಸುರತಸುಖವನ್ನು ಅನುಭವಿಸು ಹೋಗು" ಎಂದು ಆಜ್ಞಾಪಿಸಿದನು.[20]

ನಿರ್ಮಾಯನಿಗಾದರೋ ಭೂಲೋಕದಲ್ಲಿ ಹುಟ್ಟುವುದು ಹೀನವೆನಿಸಿತು. "ನಾನು ಅಲ್ಲಿ ಹುಟ್ಟಿದರೆ ನಿಮ್ಮ ಸ್ವರೂಪವನ್ನೇ ಮರೆತುಬಿಡುತ್ತೇನಲ್ಲ" ಎಂದು ಶಿವನೊಂದಿಗೆ ಅರಿಕೆಮಾಡಿಕೊಳ್ಳುತ್ತ ದಳದಳನೆ ಕಣ್ಣೀರು ಹರಿಸುತ್ತ ತಲೆತಗ್ಗಿಸಿ ನಿಂತನು. ಆಗ ಶಿವನು ಅವನನ್ನು ಸಂತೈಸುತ್ತ "ಮರ್ತ್ಯಲೋಕವೆಂಬುದು ನನ್ನ ಕರ್ಮಶಾಲೆ. ನೀನು ಅಲ್ಲಿದ್ದರೂ ಒಂದೇ, ಇಲ್ಲಿದ್ದರೂ ಒಂದೇ. ಎರಡಕ್ಕೂ ನಾನೇ ಒಡೆಯ. ಅಲ್ಲಿ ನಾನೇ ನಿನಗೆ ಪ್ರಾಣ

ಲಿಂಗವಾಗಿ ಬಂದು, ನಿನ್ನ ಮಾಯೆಯನ್ನು ಕಳೆದು, ನಿನ್ನನ್ನು ನಿರ್ವಾಣಸಮಾಧಿಯಲ್ಲಿ ನೆಲೆಗೊಳಿಸುತ್ತೇನೆ. ನಿನ್ನಿಂದ ಮರ್ತ್ಯಲೋಕದಲ್ಲಿ ಶಿವಾಚಾರವು ಜೀರ್ಣೋದ್ಧಾರವಾಗಬೇಕಾಗಿದೆ : ಅಲ್ಲಿನ ಮಹಾಗಣಗಳಿಗೆ ನಿನ್ನಿಂದ ಜ್ಞಾನಾನಂದಸುಖವು ಲಭಿಸಬೇಕಾಗಿದೆ : ನೀನು ಅಂಜದೆ ಭೂಲೋಕಕ್ಕೆ ಹೋಗು" ಎಂದು ಅಭಯಹಸ್ತವನ್ನು ನೀಡಿದನು. ಶಿವನ ಅನುಜ್ಞೆಯನ್ನು ಮಹಾಪ್ರಸಾದವೆಂದು ಸ್ವೀಕರಿಸಿ, ಮಾನವಾಕಾರ ಚೈತನ್ಯಕಳೆಯನ್ನು ಧರಿಸಿ, ನಿರ್ಮಾಯನು ಭೂಲೋಕಕ್ಕೆ ಇಳಿದು ಬಂದನು.

**ಕಾಮಲತೆಯೊಡನೆ ಸಂಸಾರ :** ಮೇರುಪರ್ವತದ ದಕ್ಷಿಣಪ್ರಾಂತದಲ್ಲಿ ಶೋಭಿಸುತ್ತಿದ್ದ ಬನವಾಸಿಯೆಂಬ ಗ್ರಾಮದಲ್ಲಿದ್ದ ನಾಗವಾಸಾಧಿಪತಿಯಾದ ಶಿವಭಕ್ತನ ಮಡದಿ ಸುಜ್ಞಾನಾದೇವಿಯ ಮಗನಾಗಿ ನಿರ್ಮಾಯನು ಜನಿಸಿದನು. "ನಾನು ಪುಣ್ಯಪಾಪಗಳಿಗೆ ಒಳಗಾದವನಲ್ಲ" ಎಂಬುದನ್ನು ತೋರಿಸಿಕೊಡಲೋ ಎಂಬಂತೆ ಅಲ್ಲಮ ಎಂಬ ಹೆಸರಿನಿಂದ ಬೆಳೆದು ದಿವ್ಯ ರೂಪಲಾವಣ್ಯ ಸಂಪನ್ನನಾದನು ; ವಾದ್ಯವಿದ್ಯೆಯಲ್ಲಿ ನಿಪುಣನಾದನು. ರುದ್ರಕನ್ನಿಕೆಯಾದರೋ ಶಿವನ ಆಜ್ಞೆಯಂತೆ ತಾನೂ ಬನವಾಸಿಗೆ ಬಂದು ಶಿವಭಕ್ತೆಯೊಬ್ಬಳ ಮಗಳಾಗಿ ಹುಟ್ಟಿ, ಪಾರ್ವತಿಯು ಕರೆದಿದ್ದ ಕಾಮಲತೆ ಎಂಬ ಹೆಸರನ್ನೇ ಧರಿಸಿದಳು. ಅತ್ಯಂತ ರೂಪಸಿಯಾದ ಅವಳು ನೋಡನೋಡುತ್ತಿದ್ದಂತೆಯೇ ಬೆಳೆದು ಯೌವನವತಿಯಾಗಿ ನೃತ್ಯವಿದ್ಯೆಯಲ್ಲಿ ಆಸಕ್ತಳಾದಳು. ಶಿವನ ಇಚ್ಛೆಯೇ ಕಾರಣವಾಗಿ ಅವಳು ಅಲ್ಲಮನಿಗೆ ಸತಿಯಾದಳು. ಇಬ್ಬರೂ ಸುರತೋನ್ಮತ್ತ ಸುಖದಲ್ಲಿ ಪರವಶರಾದರು. ಭಕ್ತರಾದ ಅವರು ಆ ಪಟ್ಟಣದ ಗುಹೇಶ್ವರನೆಂಬ ಮೂಲಸ್ಥಾನದ ಪರಿಚರ್ಯೆಯಲ್ಲಿಯೂ ಇದ್ದರು. ಕೆಲವು ವರ್ಷಗಳು ಉರುಳಿದುವು.

**ಅಲ್ಲಮನ ವೈರಾಗ್ಯ :** ಗಡುವು ಮುಗಿಯುತ್ತಿದ್ದಂತೆಯೆ ಕಾಮಲತೆಯಾಗಿದ್ದ ರುದ್ರಕನ್ನಿಕೆಯ ಶಾಪವಿಮುಕ್ತಿಯಾಯಿತು. ಅಲ್ಲಿಗೆ ಪಾರ್ವತೀದೇವಿಯು ಕೈಗೊಂಡಿದ್ದ ಪ್ರತಿಜ್ಞೆಯೂ ನೆರವೇರಿದಂತಾಯಿತು. ಕಾಮಲತೆಯು ಅಲ್ಲಮನನ್ನು ಅಗಲಿದಳು. ಅವಳ ಅಗಲಿಕೆಯಿಂದ ಅಲ್ಲಮನು ಚಿಂತೆಯಲ್ಲಿ ಮುಳುಗಿದನು. ಆ ಪರವಶತೆಯಲ್ಲಿಯೇ ಅವನು ಪುಷ್ಪವಾಟಿಕೆಯೊಂದರಲ್ಲಿ ಕುಳಿತಿದ್ದನು. "ಕಾಮತತ್ವದ ಅಳಿವು ಶಿವತತ್ವದ ಉಳಿವು" ಎಂಬ ಮಾತು ಸತ್ಯವಾದಂತೆ ಅಲ್ಲಮನ ಹೃದಯದಲ್ಲಿ ಸುಜ್ಞಾನದ ಅಂಕುರವಾಯಿತು. "ನಾನೀ ಮಾಂಸಪಿಂಡ ಹುಟ್ಟುವಂದು ಹುಟ್ಟಿದವನಲ್ಲ, ಬೆಳೆವಲ್ಲಿ ಬೆಳೆದವನಲ್ಲ, ಅಳಿವಲ್ಲಿ ಅಳಿದವನಲ್ಲ" ಎಂದು ಚಿಂತಿಸಿದನು. "ನಾನು ಶಿವನೇ ಆಗಿದ್ದೇನೆ, ನಾನು ಜೀವ ಎಂಬ ಇಲ್ಲದ ಭ್ರಾಂತಿಯು ನನಗೆ ಮಾಯಾವಿಲಾಸದಿಂದ ಉಂಟಾಯಿತು" ಎಂದು ಸುವಿವೇಕದಿಂದ ವಿಚಾರಿಸಿ ನಿಜವಾದ ಅರ್ಥದಲ್ಲಿ ಮತ್ತೆ ನಿರ್ಮಾಯನೇ ಆದನು.

**ಅನಿಮಿಷ ಗುರುವಿನ ಪುಣ್ಯದರ್ಶನ :** ಒಂದು ದಿನ ಪ್ರಭುದೇವನು ಏಕಾಂತವಾದ ಸ್ಥಳವೊಂದರಲ್ಲಿ ಶಿವಚಿಂತಾತುರ ಸಮಾಧಿಯಲ್ಲಿ ಕುಳಿತಿದ್ದನು. "ಗುರುವಿಂದ ಮುನ್ನವೆ ಶಿಷ್ಯನು ಗುರು" ಎಂಬ ಶಿವಾದ್ವೈತವಾಕ್ಯವಿದ್ದರೂ ಅಲ್ಲಮನ ಅಂತರಂಗದಲ್ಲಿ ತನಗೊಬ್ಬ ಗುರು ಬೇಕು ಎಂಬ ಭಾವ ತಲೆದೋರಿತು. ಅಂಜನವಿದ್ದವನಿಗೆ ನಿಧಿಯು ಹುದುಗಿರುವ

ತಾಣವು ತಾನೇ ಕಾಣಿಸುವಂತೆ, ಅಲ್ಲಮನಿಗೆ ತನ್ನೆದುರಿನಲ್ಲಿ ಅನಾದಿಸಂಸಿದ್ಧವಾದ ಅನಿಮಿಷ ಗುರುವಿನ ಸಮಾಧಿ ಕಾಣಿಸಿತು. ಅಷ್ಟಗಲಕ್ಕೂ ಭೂಮಿಯನ್ನು ಅಗೆಯಿಸಿ ನೋಡಿದಾಗ ಅಲ್ಲಿ ಶಿವಾಲಯದ ಆಕಾರವೊಂದು ಕಾಣಿಸಿತು. ಅದರಿಂದ ಸಂತೋಷಗೊಂಡ ಅಲ್ಲಮನು ಅದನ್ನು ಒಳಹೊಕ್ಕು ನೋಡಿದನು. ಕರಸ್ಥಲದಲ್ಲಿ ಅಮೃತಲಿಂಗವನ್ನು ಹಿಡಿದು ಪದ್ಮಾಸನದಲ್ಲಿ ಕುಳಿತಿದ್ದ ಅನಿಮಿಷಯೋಗಿಯನ್ನು ಅಲ್ಲಿ ಕಂಡನು.[21] ಒಡನೆಯೆ "ಈತನೆ ಗುರು, ನಾನೇ ಶಿಷ್ಯ" ಎಂದು ನಿರ್ಧರಿಸಿ ಅವನ ಪಾದಗಳನ್ನು ಹಿಡಿದು ಕೊಂಡಾಡಿದನು. ನಿತ್ಯ ನಿಜ ಸಮಾಧಿಯಲ್ಲಿದ್ದ ಆ ಗುರುವು ತಾನೆಂಬುದನ್ನೂ ಅರಿಯದೆ, ಇದಿರೆಂಬುದನ್ನೂ ಅರಿಯದೆ ಇದ್ದನು. "ಇವನು ಇದಿರಿಟ್ಟು ಉಪದೇಶ ಮಾಡುವವನಲ್ಲ, ನನಗೆ ನಾನೇ ಗುರೂಪದೇಶವನ್ನು ಪಡೆದುಕೊಳ್ಳಬೇಕು" ಎಂದು ನಿಶ್ಚಯಿಸಿ ಅನಿಮಿಷಯೋಗಿಯ ಕರಸ್ಥಲದಲ್ಲಿದ್ದ ಲಿಂಗವನ್ನು ತಾನೇ ಅನುಗ್ರಹಿಸಿಕೊಂಡನು. ಮರುಕ್ಷಣದಲ್ಲಿಯೇ ಆ ಗುರುವಿನ ಅಸ್ಥಿಚರ್ಮಗಳೂ ಸಂದುಗಳೂ ಸಂಚತಪ್ಪಿ ನೆಲಕ್ಕೆ ಉದುರಿದುವು.

ಆ ದೃಶ್ಯವನ್ನು ಕಂಡ ಅಲ್ಲಮನು ತನಗೆ ಗುರುದ್ರೋಹ ಸಂಬಂಧಿಸಿತೇನೋ ಎಂದು ಅನುತಾಪ ಪಟ್ಟನು. ತರುವಾಯ ಶ್ರೀಗುರುವು ನಿತ್ಯನೆಂಬುದನ್ನು ಅರಿತು ಅನುತಾಪ ಸಂತಾಪಗಳನ್ನು ಮರೆತನು. ಆ ಶ್ರೀಗುರುಮೂರ್ತಿಯನ್ನು ತನ್ನ ಹೃದಯಕಮಲ ಮಧ್ಯದಲ್ಲಿ ಕಂಡು ಮನೋಪುಷ್ಪದಿಂದ ಪೂಜಿಸಿ ಪರಮಹರ್ಷಿತನಾದನು. "ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದರೆ ಶರಣನ ಪಂಚಭೌತಿಕ ಕಾಯಭಾವವೂ ಆತ್ಮನ ಜೀವಭಾವವೂ ಅಳಿದು ಅವನು ಪರಮಾತ್ಮನೆನಿಸುತ್ತಾನೆ. ಅದು ಷಡಂಗಯೋಗವಾಗಿ ಭಕ್ತಿಸ್ಥಲ, ಮಾಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ, ಐಕ್ಯಸ್ಥಲಗಳೆಂಬ ಷಟ್‌ಸ್ಥಲವಾಗುತ್ತವೆ" ಎಂದು ನಿಶ್ಚಯಿಸಿದನು.

ತರುವಾಯ ಅಲ್ಲಮನು ಜ್ಞಾನಜ್ಯೋತಿಸ್ವರೂಪನಾಗಿ, ನಿರಾಶಾಭರಿತವೆಂಬ ಜಂಗಮಸ್ಥಳವನ್ನು ಅಳವಡಿಸಿಕೊಂಡನು. ನಿಂದಲ್ಲಿ ನೆಳಲಿಲ್ಲದಂತಾದನು ; ಸುಳಿದಲ್ಲಿ ಹಜ್ಜೆ ಗುರುತಿಲ್ಲದಂತಾದನು. ಮರ್ತ್ಯಲೋಕವನ್ನೆಲ್ಲ ಪಾವನವಾಗಿಸಬೇಕೆಂಬ, ಸದಾಚಾರಿಗಳನ್ನು ಶಿವಾದ್ವೈತ ತತ್ವಸ್ವರೂಪವನ್ನು ತಿಳಿಸಿ ತನ್ನ ಹಾಗೆ ಮಾಡಬೇಕೆಂಬ ಕಾಂಕ್ಷೆಯಿಂದ ದೇಶದೇಶಾಂತರಗಳಲ್ಲಿ ಸಂಚರಿಸತೊಡಗಿದನು. ಅದೂ ಶಿವನ ಆಜ್ಞೆಗೆ ಅನುಸಾರವಾಗಿಯೇ ಇತ್ತು. ಎಡಹಸ್ತದಲ್ಲಿ ಲಿಂಗವಿತ್ತು ; ಬಲಹಸ್ತದಲ್ಲಿ ವೀಣಾದಂಡವಿತ್ತು ; ಪರಮಾನಂದ ರಸವು ಒಸರುವ ಹಾಗೆ ಅವನು ದಿವ್ಯ ವಚನಾಮೃತವನ್ನು ಹಾಡುತ್ತಿದ್ದನು. ಲೋಕದ ಲಜ್ಜಾಭಿಮಾನಗಳನ್ನು ಅರಿಯದೆ ದಿಗಂಬರವೇಷದಿಂದ ಆತ್ಮಸ್ವರೂಪವನ್ನೇ ಪರಿಭಾವಿಸುತ್ತ ಮುನ್ನಡೆದನು.

**ಮುಕ್ತಾಯಕ್ಕನ ಪ್ರಸಂಗ** : ಸಂಚಾರ ಕಾಲದಲ್ಲಿ ಅಲ್ಲಮಪ್ರಭುದೇವನು ಅಜಗಣ್ಣನೆಂಬ ಮಹಾತ್ಮನ ವಿಯೋಗದಿಂದ ಪ್ರಲಾಪಿಸುತ್ತಿದ್ದ ಅವನ ತಂಗಿ ಮುಕ್ತಾಯಕ್ಕನನ್ನು ಕಂಡನು. "ಸುಜ್ಞಾನಪರಿಪೂರ್ಣನೂ ಸಚ್ಚಿದಾನಂದರಸಾರ್ಣವನೂ ಆದ ಪರಮಯೋಗೀಶ್ವರನನ್ನು ಅಗಲಿ ನಾನು ಹೇಗೆ ಜೀವಿಸಲಿ" ಎಂದು ಅವಳು ದುಃಖಿಸುತ್ತಿದ್ದಳು.

ಅಲ್ಲಮನು ಅವಳಿಗೆ ಸಮಾಧಾನ ಹೇಳುವ ಹಿನ್ನೆಲೆಯಲ್ಲಿ ಅವಳೊಡನೆ ಅಧ್ಯಾತ್ಮ ವಿಷಯಗಳನ್ನು ಕುರಿತು ಚರ್ಚೆ ನಡೆಸಿದನು. ಅದ್ವೈತವನ್ನು ನೆಲೆಗೊಳಿಸಿಕೊಂಡ ಶರಣನಿಗೆ ಎರಡೆಂಬುದು ಅಳಿದಂತೆಯೆ : ಅಂತಹವನು ಮೌನಿಯಾಗಬೇಕು : ಮಾತನಾಡಬಾರದು ; ಮಾತನಾಡಿದರೆ ಮತ್ತೆ ದ್ವೈತವನ್ನು ಅಪ್ಪಿಕೊಂಡಂತಾಗುತ್ತದೆ" ಎಂಬುದು ಮುಕ್ತಾಯಕ್ಕನ ನಿರೂಪಣೆಯಾಗಿತ್ತು. "ಮಾತೆಂಬುದು ಜ್ಯೋತಿರ್ಲಿಂಗವಾದ್ದರಿಂದ ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ" ಎಂದು ಅಲ್ಲಮನು ಸ್ಪಷ್ಟಪಡಿಸಿದನು. ಅವಳಿಗೆ ಅನುಭಾವವನ್ನು ಬೋಧಿಸಿ, ಅವಳ ಪ್ರಲಾಪವನ್ನು ನಿಲ್ಲಿಸಿ, ಅವಳನ್ನು ಜೀವನ್ಮುಕ್ತಳನ್ನಾಗಿಸಿದನು.

**ಕರ್ಮಯೋಗಿ ಸಿದ್ಧರಾಮನ ಭೇಟಿ :** ಅಲ್ಲಿಂದ ಮುಂದೆ ಪ್ರಭುದೇವನು ತನಗೆ ಸಿದ್ಧರಾಮಯ್ಯನ ದರ್ಶನವಾಗಬೇಕೆಂದು ಸೊನ್ನಲಿಗೆಪುರಕ್ಕೆ ಬಂದನು. ಸಿದ್ಧರಾಮನ ಅಪ್ಪಣೆಯಂತೆ ಅಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಶಿವಾಲಯಗಳನ್ನು ಭಕ್ತರು ನಿರ್ಮಿಸುತ್ತಿದ್ದರು. ಆ ಜನಪದ ನೆರವಿಯನ್ನು ಕಂಡ ಅಲ್ಲಮನು "ಕಲ್ಲ ಮನೆಯ ಮಾಡಿ ಕಲ್ಲ ದೇವರ ಮಾಡಿ ಆ ಕಲ್ಲು ಮೇಲೆ ಕೆಡೆದರೆ ದೇವರೆತ್ತ ಹೋದರೋ! ಲಿಂಗಪ್ರತಿಷ್ಠೆಯ ಮಾಡಿದವರಿಗೆ ನಾಯಕನರಕ ಗುಹೇಶ್ವರ" (ವಚನ. ೧೯೯) ಎಂದು ಝಂಕಿಸಿದನು. ಅಲ್ಲಿಂದ ಮುಂದೆ ಬಂದಾಗ ಕೆರೆಯ ನಿರ್ಮಾಣವಾಗುತ್ತಿರುವುದನ್ನು ಕಂಡನು. "ಅನ್ನದಾನ, ಕೆರೆಯ ನಿರ್ಮಾಣಾದಿಗಳಿಂದ ಸ್ವರ್ಗವು ಲಭಿಸುತ್ತದೆಯೇ ಹೊರತು ಶಿವನ ನಿಜವು ಸಾಧ್ಯವಾಗದು. ಈ ಕೆರೆಯನ್ನು ಕಟ್ಟಿಸುತ್ತಿರುವ ಒಡ್ಡನ ಪ್ರತಾಪವನ್ನು ಏನು ಹೇಳಲಿ" ಎಂದು ವಿಡಂಬಿಸುತ್ತಾ ಸಿದ್ಧರಾಮನ ಶಿಷ್ಯರನ್ನು ಸಂಬೋಧಿಸಿ, "ಒಡ್ಡರಾಮನು ಇದ್ದಾನೆಯೆ" ಎಂದು ಕೇಳಿದನು. ಶಿಷ್ಯರು ಗುರುನಿಂದೆಯ ಆ ಮಾತಿನಿಂದ ಕೆರಳಿದರು. ಕಲ್ಲುಗುಂಡು ಬಡಿಗೆಗಳಿಂದ ಅಲ್ಲಮನನ್ನು ಬಡಿದು ನೋಯಿಸಿದರು. ಆದರೆ ಅಲ್ಲಮನಿಗೆ ತಾಗಿದಂತಹ ಗಾಯಗಳೆಲ್ಲ ಶಿಷ್ಯರಿಗೇ ಮರಳಿ ತಾಗಿದುವು. "ದೇಹಧಾರಿಗಳನ್ನು ಇವರು ನೋಯಿಸಬಲ್ಲರೇ ಹೊರತು ನಿರ್ದೇಹಿಯಾದವನನ್ನು ನೋಯಿಸಬಲ್ಲರೆ! ಗುಹೇಶ್ವರ ಲಿಂಗವು ಜಗವನ್ನೆಲ್ಲ ತುಂಬಿಕೊಂಡಿರುವ ಕಾರಣ ಶರಣರಿಗೆ ಉಂಟುಮಾಡಿದ ನೋವು ಮರಳಿ ಪಾತಕರನ್ನೇ ತಾಗಿತು" ಎಂದು ಹೇಳುತ್ತಾ ಅಲ್ಲಮನು ನಗುತ್ತಿದ್ದನು.

ಗಾಯದ ವಿಘಾತಿಯಿಂದ ನೊಂದ ಗುಡ್ಡರು ಗೋಳಾಡುತ್ತಾ ಸಿದ್ಧರಾಮನ ಬಳಿಗೆ ಬಂದು "ಆವನೊಬ್ಬ ಇಂದ್ರಜಾಲಿಗನು ನಿಮ್ಮನು ಬಾಯಿಗೆ ಬಂದಂತೆ ನಿಂದಿಸುತ್ತಿರಲು" ಎಂದು ಆರಂಭಿಸಿ ನಡೆದ ವೃತ್ತಾಂತವನ್ನೆಲ್ಲ ಬಣ್ಣಿಸಿದರು. ಕ್ರೋಧಕ್ಕೆ ತುತ್ತಾದ ಸಿದ್ಧರಾಮನು ಆಗಿಂದಾಗಲೆ ತನ್ನ ಹಣೆಗಣ್ಣನ್ನು ತೆರೆದು ಅಗ್ನಿಜ್ವಾಲೆಯನ್ನು ಹೊಮ್ಮಿಸಿದನು. ತನ್ನ ಗುಡ್ಡರನ್ನು ನೋಯಿಸಿದವರನ್ನು ಸುಟ್ಟು ಒರಸಿಹಾಕಬೇಕೆಂದು ಆ ಜ್ವಾಲೆಗೆ ಆಜ್ಞಾಪಿಸಿದನು. ಬ್ರಹ್ಮಾಂಡಮಂಡಲವನ್ನೇ ಮುಸುಕುತ್ತಾ ಮುನ್ನುಗ್ಗಿ ಬರುತ್ತಿರುವ ಆ ಕಿಚ್ಚು ಯಾವುದೆಂಬುದು ಪ್ರಭುದೇವನಿಗೆ ತಿಳಿದು ಹೋಯಿತು. ಒಡನೆಯೆ ಆ ಜ್ವಾಲೆಯನ್ನು ತನ್ನ ಅಂಗಾಲೊಳಗೆ ಅಡಗಿಸಿಕೊಂಡನು. ಸಿದ್ಧರಾಮನ ಶಕ್ತಿಯನ್ನು ನೋಡ

ಬೇಕೆಂದು ತನ್ನ ಅಂಗಾಲಿನಲ್ಲಿದ್ದ ಕಣ್ಣನ್ನು ತೆರೆದು, ಕಿಚ್ಚನ್ನು ಹೊರಡಿಸಿ, ಸಿದ್ಧರಾಮನಲ್ಲಿಗೆ ಹೋಗುವಂತೆ ಆಜ್ಞಾಪಿಸಿದನು. ಪ್ರಳಯಕಾಲಕ್ಕೆ ಮುನ್ನವೇ ಇದಾವುದೋ ಮಹಾಪ್ರಳಯ ಬಂತೆಂಬಂತೆ ಆ ಅಗ್ನಿಯು ಸಿದ್ಧರಾಮನನ್ನು ಸಮೀಪಿಸಿತು. ಅದೆಲ್ಲಿಂದ ಹೊಮ್ಮಿಬಂದುದೆಂಬುದನ್ನು ಸಿದ್ಧರಾಮನು ವಿವೇಕದಿಂದ ಅರಿತುಕೊಂಡು ತಾನು ಮಾಡಿದ ತಪ್ಪಿಗಾಗಿ ಅನುತಾಪ ಪಟ್ಟುಕೊಂಡನು. “ನನ್ನ ಪ್ರಾಣವನ್ನೇ ಅವನಿಗೆ ಅರ್ಪಿಸುತ್ತೇನೆ” ಎಂದು ಹೇಳುತ್ತಾ ಅವನು ಪ್ರಭುದೇವನ ಶ್ರೀಪಾದಗಳನ್ನು ಅರಸಿಕೊಂಡು ಬಂದನು.

ಅಲ್ಲಮಪ್ರಭುವಿನ ದರ್ಶನವಾದಾಗ ಸಿದ್ಧರಾಮನು ಆನಂದಾಶ್ರುಗಳನ್ನು ಸುರಿಸುತ್ತ “ಅಯ್ಯಾ, ನೀನು ನವಕೋಟಿಸೂರ್ಯಪ್ರಕಾಶನು, ನಿನ್ನನ್ನು ಕಂಡ ಬಳಿಕ ನನ್ನ ಕರ್ಮವೆಲ್ಲವೂ ಹರಿಯಿತು. ನನ್ನ ತಪ್ಪನ್ನು ಮನ್ನಿಸು” ಎಂದು ಬೇಡುತ್ತ ಅವನ ಚರಣಗಳ ಮೇಲೆ ಬಿದ್ದು ಹೊರಳಾಡಿದನು. ಅಲ್ಲಮನು ಸಿದ್ಧರಾಮನ ಕಿಂಕುರ್ವಾಣವನ್ನು ಕಂಡು ಕೃಪೆಯಿಂದ ಶಿರವಿಡಿದು ಮೇಲೆತ್ತಿ ಕಣ್ಣೀರು ತೊಡೆದನು; ಅವನನ್ನು ಪ್ರೇಮದಿಂದ ಬಿಗಿದಪ್ಪಿಕೊಂಡನು. ಅವನ ಪ್ರಾರ್ಥನೆಯಂತೆ ಕೈಹಿಡಿದುಕೊಂಡು ಮಠಕ್ಕೆ ನಡೆದನು. ಸಿದ್ಧರಾಮನು ಪ್ರಭುವಿನ ಪಾದಾರ್ಚನೆ ಮಾಡಿ ಪಾದೋದಕವನ್ನು ಕೊಂಡು ಹರ್ಷದಲ್ಲಿ ಓಲಾಡಿದನು.

“ಕಾಯವೇ ಲಿಂಗ, ಪ್ರಾಣವೇ ಜಂಗಮವಾದ ಬಳಿಕ ಶರಣರು ಬೇರೆ ದೇವಾಲಯವನ್ನು ಏಕೆ ಮಾಡಿಸಬೇಕು? ಮಹಾಘನಲಿಂಗಕ್ಕೆ ಜಗದ ಜೀವರಾಶಿಗಳೆಲ್ಲ ಶಿವಾಲಯಗಳೆ! ಆ ಪರಬ್ರಹ್ಮವಸ್ತುವಿನ ಸ್ವರೂಪವನ್ನು ಹೀಗೆಯೇ ಸರಿ ಎಂದು ಹೇಳುವುದು ಸಾಧ್ಯವಿಲ್ಲ. ‘ಅತ್ಯತಿಷ್ಠದ್ದಶಾಂಗುಲಂ’ ಎಂಬಂತೆ ಅದು ಉಪಮಾತೀತ, ಈ ದೇಹವೇ ನಾನು, ಈ ಜೀವವೇ ನಾನು ಎಂಬ ಭಾವ ಅಳಿಯಬೇಕು. ಭಕ್ತಿಭಾವವು ತುಂಬಿಕೊಂಡು ನಿಶ್ಚಿತವಾದ ಆತ್ಮಜ್ಞಾನ ತಲೆದೋರಬೇಕು. ಆಗ ತಾನು ಬೇರೆ, ಪರಮಾತ್ಮವಸ್ತು ಬೇರೆ ಎಂಬ ದ್ವೈತದ ಕುರುಹು ಅಳಿಯುತ್ತದೆ, ಮಾಯೆ ಅಳಿಯುತ್ತದೆ” ಎಂದು ಮೊದಲಾಗಿ ಅಲ್ಲಮನು ಸಿದ್ಧರಾಮನಿಗೆ ಕಾಯಜೀವದ ಸಂದುಭೇದವನ್ನು ತಿಳಿಸಿಕೊಟ್ಟನು. “ಇಷ್ಟಲಿಂಗವ ಮುಟ್ಟಿದ ಶರಣನೊಳಗೆ ಹುಟ್ಟಿದ ಸ್ಥಳವೆಷ್ಟೆಂಬುದ ತಿಳುಹಿ ಎನ್ನನುಳಿಸಿಕೊಳ್ಳಾ” (ವ. ೨೫೭) ಎಂದು ಸಿದ್ಧರಾಮನು ಬೇಡಿದನು. ಅದನ್ನು ಬಸವಣ್ಣನ ಸನ್ನಿಧಿಯಲ್ಲಿ ಅವನಿಂದಲೇ ತಿಳಿಸಿಕೊಡುತ್ತೇನೆಂದ ಪ್ರಭುವು ಸಿದ್ಧರಾಮನನ್ನು ಕೂಡಿಕೊಂಡು ಕಲ್ಯಾಣದತ್ತ ಪಾದಬೆಳೆಸಿದನು.

### ಕಲ್ಯಾಣಕ್ಕೆ ಪ್ರಭುದೇವನ ಆಗಮನ

ಬಸವಣ್ಣನವರು ಅನಾದಿಯಲ್ಲಿ ತಮ್ಮ ಪ್ರಾಣಲಿಂಗವನ್ನು ಅನಿಮಿಷನಿಗೆ ಕೊಟ್ಟರು. ಅದೇ ಕಾರಣವಾಗಿ ಪರಮೇಶ್ವರನು “ನಿನ್ನ ಪ್ರಾಣಲಿಂಗವನ್ನು ಅರಸಿಕೊಂಡು ಬಾ” ಎಂದು ಬಸವಣ್ಣನವರಿಗೆ ಆಜ್ಞೆ ಮಾಡಿದನು. ಅದರಂತೆ ಬಸವಣ್ಣನವರು ಏಳುನೂರೆಪ್ಪತ್ತು

ಇಂಗಳೇಶ್ವರ ಬಾಗೇವಾಡಿ ...
ಗರ್ಭದಲ್ಲಿ "ಧರೆಯನೊಡೆದು ಮೂಡಿದ ...
ಮುಂದೆ ಸುಜ್ಞಾನೋದಯವಾಗಿ ಮಾಯಾಪಾಶವನ್ನು ಹರಿದುಕೊಂಡರು. ಅಲ್ಲಿಂದ ...ಗಳನ್ನು ತೊರೆದು ತಮ್ಮ ಕಿರಿಯ ಸೋದರಿ ನಾಗಾಂಬಿಕೆಯೊಡನೆ ಕಪ್ಪಡಿಗೆ ಹೋದರು. ಅಲ್ಲಿ ಸಾಕ್ಷಾತ್ ಶಿವನಿಂದಲೇ ಶೈವೋಪದೇಶವನ್ನು ಪಡೆದುಕೊಂಡರು.

ಸ್ವಲ್ಪಕಾಲದ ತರುವಾಯ ಬಸವಣ್ಣನವರು ತಂಗಿಯನ್ನೂ ಕರೆದುಕೊಂಡು ಬಿಜ್ಜಳ ರಾಯನು ಆಳುತ್ತಿದ್ದ ಕಲ್ಯಾಣಪಟ್ಟಣಕ್ಕೆ ಬಂದರು. ಆ ಹೊತ್ತಿಗೆ ಸರಿಯಾಗಿ ಮಹಾರಾಜನ ಸಿಂಹಾಸನದ ಮೇಲೆ ಪರಶಿವನು ಕಳುಹಿಸಿದ ಓಲೆಯೊಂದು ಬಂದು ಬಿತ್ತು. ಅದು ಛಪ್ಪನ್ನ ಭಾಷೆಯ ಯಾವ ಲಿಪಿಯೂ ಆಗಿರಲಿಲ್ಲ : ಹೀಗಾಗಿ ಸೇನಬೋವರ ಕೈಲಿ ಅದನ್ನು ಓದಲಾಗ ಲಿಲ್ಲ. ಬಿಜ್ಜಳದೊರೆಯು ಸುಮ್ಮನಾಗದೆ "ಇದನ್ನು ಓದಿದವರನ್ನು ಆನೆ ಸೇನೆ ಕುದುರೆ ಭಂಡಾರಾದಿ ಅರವತ್ತಾರು ಕರಣಗಳಿಗೆ ಮುಖ್ಯನನ್ನಾಗಿ ಮಾಡುತ್ತೇನೆ" ಎಂದು ಘೋಷಿಸಿ ದನು. ಬಸವಣ್ಣನವರು ಆ ಹೊತ್ತಿಗೆ ಸರಿಯಾಗಿ ಆಗಮಿಸಿ "ಹರನ ನಿರೂಪವ ಶಿರದ ಮೇಲಿಟ್ಟು" ಓದಿದರು. ಅದರ ಬಲದಿಂದ ಬಿಜ್ಜಳನಿಗೆ ಅರವತ್ತು ಕೋಟಿ ಸಂಪತ್ತನ್ನು ಹೊರತೆಗೆಸಿಕೊಟ್ಟರು. ಬಿಜ್ಜಳನ ಗೌರವಾದರಗಳಿಗೆ ಪಾತ್ರರಾಗಿ ಅವನ ಶಿರಪ್ರಧಾನ (ಹಿರಿಯ ದಣ್ಣಾಯಕ) ರಾದರು. ಆದರೂ ಭಕ್ತಿಮಾರ್ಗವನ್ನು ಬಿಡದೆ ಗುರುಲಿಂಗ ಜಂಗಮಕ್ಕೆ ತಮ್ಮ ತನುಮನಧನಗಳನ್ನು ಅರ್ಪಿಸಿದರು. ತಮ್ಮ ಮಹಾಮನೆಯಲ್ಲಿ ನಿತ್ಯವೂ ಲಕ್ಷದಮೇಲೆ ತೊಂಬತ್ತಾರುಸಾವಿರ ಜಂಗಮರಿಗೆ ಅವರವರ ನೇಮವನ್ನು ಅನುಸರಿಸಿ ಸೇವೆ ಮಾಡುವುದನ್ನು ವ್ರತವಾಗಿಸಿಕೊಂಡರು. ತಮ್ಮ ಭಕ್ತಿಯ ಬಲದಿಂದ ಮರ್ತ್ಯಲೋಕವನ್ನು ಪಾವನಗೊಳಿಸಿದರು. ತಾವು ಮಾಂಸಪಿಂಡವೆನಿಸದೆ ಮಂತ್ರಪಿಂಡ ವೆನಿಸಿದರು. ಪಿಸುಣರಿಂದುಂಟಾದ ಮೂವತ್ತಾರು ಬಾಧೆಯನ್ನು ನಿವಾರಿಸಿದರು ; ಎಂಬತ್ತೆಂಟು ಪವಾಡಗಳನ್ನು ಮೆರೆದರು : ಮುನ್ನೂರರವತ್ತು ಸತ್ತ ಪ್ರಾಣವನ್ನು ಎತ್ತಿದರು. ಮರದ ಮಾನಿಸರ ಕರೆದು ಓ ಎನಿಸಿ, ಉಡಿಸಿ, ಉಣಿಸಿ "ಜಂಗಮಲಿಂಗಪ್ರಾಣಿ ಸಂಗನಬಸವಣ್ಣ" ಎಂದು ಧ್ವಜವನೆತ್ತಿ ಮೆರೆದರು.

"ತನ್ನ ಪ್ರಾಣಲಿಂಗ ಅಲ್ಲಮಪ್ರಭುವಿಂಗೆ ಸಾಧ್ಯವಾಯಿತ್ತು. ಆ ಲಿಂಗವೆನಗಿನ್ನಾವ ಮುಖದಿಂ ಸಾಧ್ಯವಾದಪ್ಪುದು" ಎಂದು ಬಸವಣ್ಣನವರು ಚಿಂತಿಸುತ್ತಿರುವಾಗ ಶಿವನೇ ಪ್ರಸಾದಮುಖದಿಂದ ತಂಗಿ ನಾಗಾಂಬಿಕೆಯ ಗರ್ಭದಲ್ಲಿ ಚೆನ್ನಬಸವಣ್ಣನಾಗಿ (ಚಿಕ್ಕ ದಣ್ಣಾಯಕ) ಅವತರಿಸಿದನು. ಬಸವಣ್ಣನವರಿಂದ ಲಿಂಗವನ್ನೂ ಉಪದೇಶವನ್ನೂ ಪಡೆದು ಸರ್ವಾಂಗಲಿಂಗಿಯಾದನು. ತರುವಾಯ ಚೆನ್ನಬಸವಣ್ಣನನ್ನು ಕುರಿತು ತಮಗೆ ಪ್ರಾಣಲಿಂಗಸಂಬಂಧದ ಭೇದವನ್ನು ತಿಳಿಸಿಕೊಡಬೇಕೆಂದು ಬಸವಣ್ಣನವರು ಕೇಳಿ ಕೊಂಡರು. ಚೆನ್ನಬಸವಣ್ಣನಾದರೋ ಆ ರಹಸ್ಯವನ್ನು ಹೇಳದ ಹಾಗೆ ಹೇಳಿಕೊಟ್ಟನು. "ಜಂಗಮಮುಖದಲ್ಲಿ ನಾನು ಲಿಂಗವನ್ನು ಕಾಣುವುದು ಯಾವಾಗ" ಎಂದು ಕೇಳಿದ್ದಕ್ಕೆ

ಚೆನ್ನಬಸವಣ್ಣನು "ಅಲ್ಲಮಪ್ರಭುದೇವರ ಮುಖದಲ್ಲಿ ನಿಮ್ಮ ಇಷ್ಟಾರ್ಥ ಸಿದ್ಧಿಸುತ್ತದೆ; ಅವರನ್ನು ಈಗಲೇ ತೋರಿಸಿಕೊಡುತ್ತೇನೆ" ಎಂದನು.

## ಮಹಾಮನೆಗೆ ಪ್ರಭುದೇವನ ಪ್ರವೇಶ

ಸಿದ್ಧರಾಮನ ಜೊತೆಗೂಡಿ ಸೊನ್ನಲಿಗೆಪುರದಿಂದ ಹೊರಟಿದ್ದ ಪ್ರಭುದೇವನು ಕಲ್ಯಾಣಪುರವನ್ನು ವಂದಿಸುತ್ತ, ಸ್ತುತಿಸುತ್ತ ; ಬಸವಣ್ಣನವರನ್ನು ಕೊಂಡಾಡುತ್ತ ಕೀರ್ತಿಸುತ್ತ ಅವರ ಮಹಾಮನೆಯ ಮುಂದೆ ಬಂದುನಿಂತನು. ಆ ಕಾಲಕ್ಕೆ ಬಸವಣ್ಣನವರು ಲಿಂಗಾರ್ಚನೆಯಲ್ಲಿ ತಲ್ಲೀನರಾಗಿದ್ದರು. ತಾವು ಪೂಜಿಸುತ್ತಿದ್ದ ಲಿಂಗದಲ್ಲಿ ಪ್ರಭುದೇವನ ನಿಜಮೂರ್ತಿಯನ್ನು ಕಂಡು ಅವನನ್ನು ಕರೆತರಬೇಕೆಂದು ಪರಿಚಾರಕರನ್ನು ಅಟ್ಟಿದರು. "ದೇವಾ. ನಿಮ್ಮಡಿಗಳನು ಸಂಗನಬಸವಣ್ಣ ಬಿಜಯಂಗೆಯ್ಯ ಪೇಳಿದನು" ಎಂದರು ಪರಿಚಾರಕರು. ಪ್ರಭುದೇವನಿಗೆ ಮುನಿಸಾಯಿತು ; ಬಸವಣ್ಣನು ತಾನೇ ಬಾರದೆ ಪರಿಚಾರಕರನ್ನು ಅಟ್ಟಿದನಲ್ಲಾ ಎಂದು. ಆ ಮುನಿಸಿನಿಂದ "ಬಾರೆವು" ಎಂದುಬಿಟ್ಟನು. ವಿಷಯ ಬಸವಣ್ಣನವರಿಗೆ ಮುಟ್ಟಿತು. "ಇಲ್ಲಿಯವರೆಗೂ ಬಂದು ಗೃಹಕ್ಕೆ ಬಾರೆವು ಎಂದರೇನರ್ಥ! ಬಾರದಿದ್ದರೆ ಅವನ ಶಿರವನ್ನು ಕತ್ತರಿಸಿ ತನ್ನಿ" ಎಂದು ಆಜ್ಞಾಪಿಸಿದನು. ಪರಿಚಾರಕರು ಪ್ರಭುದೇವನ ಮೇಲೆ ಲೋಹಶಸ್ತ್ರವನ್ನು ಬೀಸಿದರೆ, ಅದು ಬಯಲಲ್ಲಿ ಬೀಸಿದಂತಾಗಿ ಅವನ ತಲೆಯನ್ನು ಕತ್ತರಿಸುವುದು ಸಾಧ್ಯವಾಗಲಿಲ್ಲ. ಆಮೇಲೆ ಭಾವಶಸ್ತ್ರದಿಂದ ಗೆದ್ದು ಅವನನ್ನು ಕರೆತರಬೇಕೆಂದು ಬಸವಣ್ಣನವರು ಮಾಡಿದ ಆಜ್ಞೆಯೂ ಫಲಕಾರಿಯಾಗಲಿಲ್ಲ.[³³]

ಆ ಸಮಯಕ್ಕೆ ಹಡಪದ ಅಪ್ಪಣ್ಣನು ಅಲ್ಲಮಸಿದ್ಧರಾಮರು ಬಂದು ನಿಂತಿರುವುದನ್ನು ಕಂಡು ಬಸವಣ್ಣನವರ ಬಳಿಗೆ ಓಡಿಬಂದು "ಬಂದಿರುವ ಶರಣರನ್ನು ಕರೆತರೋಣ ಬನ್ನಿ" ಎಂದನು. ಬಸವಣ್ಣನವರಾದರೋ ಪೂಜಾರಸಮಗ್ನರಾಗಿ "ಆ ಜಂಗಮವನೊಡಗೊಂಡು ಬನ್ನಿ" ಎಂದು ಅಪ್ಪಣ್ಣನಿಗೇ ಆಜ್ಞಾಪಿಸಿದರು. ಅಪ್ಪಣ್ಣನು ಬಂದು "ಕೃಪೆಮಾಡಾ ಗುರುವೆ" ಎಂದು ಬೇಡಿಕೊಂಡನು. ಪ್ರಭುದೇವನು ಒಲಿಯಲಿಲ್ಲ. ಮತ್ತೆ ಅಪ್ಪಣ್ಣನು ಬಸವಣ್ಣನವರಲ್ಲಿಗೆ ಓಡಿಬಂದು "ಹಿರಿಯರು ಬಂದರೆ ಇದಿರೆದ್ದು ಬಾರದವನ ಮನೆಗೆ ನಾವು ಕಾಲಿಡುವುದಿಲ್ಲ ಎಂದು ಪ್ರಭುದೇವನು ಹೇಳುತ್ತಿದ್ದಾನೆ. ದ್ವಾರವಟ್ಟದ ಮುಂದೆ ನಿಂತಿರುವ ಅವನನ್ನು ನೀವೇ ಬಿಜಯಂಗೆಯ್ಸಿಕೊಂಡು ಬನ್ನಿ" ಎಂದು ಪ್ರಾರ್ಥಿಸಿದನು. "ಅವರಿವರನ್ನು ಕರೆತರಲು ಅಟ್ಟುತ್ತಾ, ನೀವು ಕಂಡೂ ಕಾಣದ ಹಾಗೆ ಇರುವುದು ಉಚಿತವಲ್ಲ" ಎಂದು ಚೆನ್ನಬಸವಣ್ಣನೂ ಝುಂಕಿಸಿದನು. ಆಗ ಬಸವಣ್ಣನವರಿಗೆ ತಮ್ಮ ತಪ್ಪಿನ ಅರಿವಾಯಿತು. "ನವರತ್ನವ ಕಿತ್ತು ಮಡುವಿನೊಳಗೆ ಹಾಯ್ಕಿದ ಕಟಿಯಂತೆ ಆಯಿತ್ತೆನ್ನ ಭಕ್ತಿ" ಎಂದು ಭಯರಸದಲ್ಲಿ ಮುಳುಗಿ ಪ್ರಭುವನ್ನು ಸ್ವಾಗತಿಸಲು ದ್ವಾರವಟ್ಟದ ಬಳಿಗೆ ಧಾವಿಸಿ ಬಂದರು. "ಬಾರಯ್ಯಾ ಎನ್ನ ಪರಮ ಗುರುವೆ, ಅರಿಯದ ತರಳನ ಅವಗುಣವ ನೋಡುವರೆ" ಎಂದು ಕ್ಷಮಾಯಾಚನೆ ಮಾಡಿದರು. ಪ್ರಭುದೇವನ ಮುನಿಸು ತಿಳಿಯಿತು.

**ಮರುಳುಶಂಕರದೇವನ ಮಹಿಮೆ**

ಬಸವಣ್ಣನವರು ಪರಿಪರಿಯಾಗಿ ಪ್ರಭುದೇವನ ಗುಣಗಾನ ಮಾಡುತ್ತಿರಲು, ಪ್ರಭುವು "ಇನ್ನು ಸ್ತೋತ್ರ ಮಾಡಬೇಡ, ನಿನ್ನ ಧರ್ಮಕ್ಕಿಂತಲೂ ಅತಿಶಯವಾದ ಅಚ್ಚರಿಯೊಂದನ್ನು ನಾನು ಕಂಡೆ" ಎನ್ನುತ್ತ ಮರುಳುಶಂಕರದೇವನೆಂಬ ಶರಣನ ಮಹಾಮಹಿಮೆಯನ್ನು ಲೋಕಕ್ಕೆ ತೋರಿಸಿಕೊಟ್ಟನು. 'ಸತ್ಯಶರಣರ ಅಂಗಳದೊಳಗೆ ಬಿದ್ದ ಅಗುಳನ್ನು ಎತ್ತಿಕೊಂಡು ಇರುತ್ತೇನೆ' ಎಂದು ಹೇಳುತ್ತಾ ಮರುಳುಶಂಕರದೇವನು ಬಸವಣ್ಣನವರ ಮಹಾಮನೆಯ ಪ್ರಸಾದದ ಕುಳಿಯಲ್ಲಿ ಒಕ್ಕುಮಿಕ್ಕ ಶೇಷಪ್ರಸಾದವನ್ನು ಊಟಮಾಡಿಕೊಂಡು ಹನ್ನೆರಡು ವರ್ಷಗಳನ್ನು ಕಳೆದಿದ್ದನು.[23] ಅವನನ್ನು ತೋರಿಸುತ್ತ ಪ್ರಭುದೇವನು "ಪಾಪಿಯ ಕಣ್ಣಿಂಗೆ ಪರುಷ ಕಲ್ಲಾಗಿಪ್ಪಂತೆ ಇಪ್ಪರಯ್ಯ ಶಿವಶರಣರು" ಎಂದನು. ಇಷ್ಟು ಕಾಲದಿಂದ ತಮ್ಮ ಕಣ್ಣು ಮುಂದೆಯೇ ಇದ್ದರೂ ಆ ಮಹಾಮಹಿಮನ ನಿಲವನ್ನು ಅರಿಯದೆ ಭವದುಃಖಿಯಾದೆನಲ್ಲಾ ; ಸಾವಿರ ನೋಂಪಿಗಳು ಒಂದೇ ಹಾದರದಲ್ಲಿ ಅಳಿದಂತಾಯಿತಲ್ಲ ಎಂದು ಬಸವಣ್ಣನವರು ಪರಿತಪಿಸಿದರು. "ಎನ್ನ ತಪ್ಪಿಂಗೆ ಕಡೆಯಿಲ್ಲ, ತ್ರಾಹಿ ತ್ರಾಹಿ ಕಾಯಯ್ಯ" ಎಂದು ಮರುಳುಶಂಕರದೇವನನ್ನು ಬೇಡಿಕೊಂಡರು. ತನ್ನ ಗುಪ್ತಭಾವ ಪ್ರಕಟವಾದುದೇ ತನ್ನ ಮುಕ್ತಾಯದ ಕಾಲ ಎಂದು ತಿಳಿದ ಮರುಳುಶಂಕರದೇವನು ನಿರ್ವಯಲಸಮಾಧಿಯನ್ನು ಪಡೆದುಕೊಂಡನು.[24]

ಅಲ್ಲಮಪ್ರಭುವು ಸಿದ್ಧರಾಮನೊಡಗೂಡಿ ಬಸವಣ್ಣನವರ ಮಠದತ್ತ ಹೆಜ್ಜೆ ಹಾಕುವಾಗ ಕಳಶಕನ್ನಡಿಗಳಿಂದ ಇದಿರ್ಗೊಂಡು, ಮುತ್ತುಮಾಣಿಕದ ಆರತಿಯೆತ್ತಿದರು ; ಮಂಗಳಸ್ವರದಿಂದ ಹಾಡಿದರು ; ಪಂಚಮಹಾವಾದ್ಯಗಳು ಮೊಳಗಿದುವು. ಬಸವಣ್ಣನವರು ಪ್ರಭುದೇವನಿಗೆ ಕೈನೀಡಿದ್ದರು ; ಮಡಿವಾಳ ಮಾಚಿದೇವನು 'ಪಾಯಪಥಾರು' ಎಂದು ಉಗ್ಗಡಿಸುತ್ತಿದ್ದನು. ಪ್ರಭುವಾದರೊ ಸೊಡ್ಡಳ ಬಾಚರಸನ ಹೆಗಲಮೇಲೆ ಹಸ್ತವಿಟ್ಟುಕೊಂಡು ಚೆನ್ನಬಸವಣ್ಣನೊಡನೆ ನಸುನಗೆಯಿಂದ ಮಾತುಕತೆಯಾಡುತ್ತ ಏಕಾಂತದ ಮಠವನ್ನು ಮುಟ್ಟಿದನು. ಅಲ್ಲಿ ಬಸವಣ್ಣ, ಚೆನ್ನಬಸವಣ್ಣ, ಮಡಿವಾಳ ಮಾಚಿದೇವ, ಸೊಡ್ಡಳ ಬಾಚರಸ, ಹಡಪದ ಅಪ್ಪಣ್ಣಾದಿಗಳು ಅವನ ಪಾದಾರ್ಚನೆಯನ್ನು ನೆರವೇರಿಸಿದರು. "ಏಕಮೇವ ನ ದ್ವಿತೀಯಂ ಬ್ರಹ್ಮವೆಂಬ ಘನಮಹಿಮನ ಕಂಡ ಕಾಣಿಕೆಯಲ್ಲಿ" ಎಲ್ಲರ ಮನವಮನ ಬೆರಸಿತು ; ತನುತನು ಕರಗಿತು ; ಅಸಂಖ್ಯಾತ ಶರಣರೆಲ್ಲರೂ ನೆರೆದರು. ಸುಖಸಂಕಥಾವಿನೋದದಲ್ಲಿ ಪ್ರಭುದೇವನು ಓಲಗಕೊಟ್ಟನು. ಮಾಯೆಯ ಪ್ರಭಾವವನ್ನು ಕುರಿತ ಚರ್ಚೆ ನಡೆಯಿತು. ಶರಣರು ಒಬ್ಬರನ್ನೊಬ್ಬರು ಕೊಂಡಾಡಿದರು. "ಅದ್ವೈತವೆಂಬ ಶಿಶು ನನ್ನ ಕರಸ್ಥಲವನ್ನು ಬಂದು ಸೋಕಿತು ; ನನ್ನನ್ನೂ ತನ್ನ ಹಾಗೆ ಮಾಡಿಬಿಟ್ಟಿತು. ಹೀಗಾಗಿ ತಾನೆಂಬ, ಅನ್ಯವೆಂಬ ಭೇದಭಾವ ನನ್ನಲ್ಲಿ ಅಳಿಸಿಹೋಯಿತು" ಎಂದು ಪ್ರಭುದೇವನು ತನ್ನ ಆಧ್ಯಾತ್ಮಿಕ ನಿಲವನ್ನು ಪ್ರಕಟಿಸಿದನು. "ಅನಿಮಿಷನಿಗೆ ಬಸವಣ್ಣನು ಲಿಂಗವನ್ನು ಕೊಟ್ಟನು. ಆ ಲಿಂಗವು ತರುವಾಯದಲ್ಲಿ ನಿನ್ನ ಕೈಸೇರಿತು. ಈ ಮೂಲಕ ನೀನು ಬಸವಣ್ಣನ ಸಂಪ್ರದಾಯದ ಕಂದನಾದೆ, ನಾನಾದರೋ ಬಸವಣ್ಣನಿಂದ ಚೆನ್ನ

ಸಂಗಮನಾಥನೆಂಬ ಲಿಂಗವನ್ನು ಅನುಗ್ರಹಿಸಿಕೊಂಡೆ. ಹೀಗೆ ನಾನೂ ನಿನ್ನಂತೆಯೇ ಬಸವಣ್ಣನ ಸಂಪ್ರದಾಯದ ಕಂದನಾದೆ" ಎಂದು ಚೆನ್ನಬಸವಣ್ಣನು ಅಲ್ಲಮನನ್ನು ಉದ್ದೇಶಿಸಿ ಹೇಳಿದನು.

## ಸಿದ್ಧರಾಮನ ಹಿರಿಮೆಯ ಉದ್ಘಾಟನೆ

ಆ ಮಹಾನುಭಾವಗೋಷ್ಠಿಯ ನಡುವೆ ಸಿದ್ಧರಾಮನೂ ಕೂಡಿಕೊಂಡು ಮಡಿವಾಳ ಮಾಚಿದೇವನ ಗುಣಗಾನ ಮಾಡಿದನು. ಸಿದ್ಧರಾಮನು ತನ್ನ ದೇಹದ ಮೇಲೆ ಲಿಂಗವನ್ನು ಧರಿಸಿರಲಿಲ್ಲ. ಆ ಸಂಗತಿಯ ಒಳಗನ್ನೂ ತಿಳಿದಂತಾಗುತ್ತದೆ. ಸಿದ್ಧರಾಮನ ಅಂತರಂಗದ ನಿಲವನ್ನೂ ಅರಿತಂತಾಗುತ್ತದೆ ಎಂದು ಚೆನ್ನಬಸವಣ್ಣನು "ಅಂಗದಮೇಲೆ ಲಿಂಗವಿಲ್ಲವಲ್ಲ, ಏಕೆ" ಎಂದು ಪ್ರಶ್ನಿಸಿದನು. ಅದಕ್ಕೆ ಉತ್ತರವಾಗಿ ಸಿದ್ಧರಾಮನು "ನನಗೆ ಕಾಯವೆ ಬಸವಣ್ಣನಾಗಿ, ಪ್ರಾಣವೆ ಪ್ರಭುದೇವನಾಗಿರುವಾಗ, ಯಾವ ದೇಹದ ಮೇಲೆ ನಾನು ಲಿಂಗವನ್ನು ಧರಿಸಿಕೊಳ್ಳಲಿ : ನನಗೆ ಒಳಗು-ಹೊರಗು ಎಂಬುದೇ ಇಲ್ಲ" ಎಂದನು. ಆ ನಿಲವು ಅಲ್ಲಮಪ್ರಭುವಿಗೂ ಪ್ರಿಯವಾಯಿತು. ಅದನ್ನೇ ಅನುಮೋದಿಸುತ್ತ ಪ್ರಭುವು "ಆಕಾಶದಲ್ಲಿ ಏರಿಹೋಗುವವನಿಗೆ ಏಣಿಯ ಆಗತ್ಯವೇನಿದೆ ? ಸಮುದ್ರವನ್ನೇ ದಾಟಬಲ್ಲವನಿಗೆ ಹರಿಗೋಲಿನ ಹಂಗೇನಿದೆ ? ಆ ಬಗೆಯಲ್ಲಿ ನಿಸ್ಸೀಮನಾದ ಸಿದ್ಧರಾಮನಿಗೆ ಲಿಂಗಧರಿಸುವ ಆಗತ್ಯವೇನೂ ಇಲ್ಲ" ಎಂದನು. "ಸಾಧಕನು ಅಂಗವನಿಸಿರುವ ತನಕ ಲಿಂಗವು ಬೇಕಲ್ಲದೆ ತಾನೇ ಲಿಂಗವಾದವನಿಗೆ ಬೇರೆ ಲಿಂಗದ ಅಗತ್ಯವಿಲ್ಲ" ಎಂದು ಚೆನ್ನಬಸವಣ್ಣನೂ ಒಪ್ಪಿಕೊಂಡನು.[೨೫]

## ಅಕ್ಕಮಹಾದೇವಿಯ ಆಗಮನ

ಹೀಗೆ ಮಹಾಮನೆಯಲ್ಲಿ ಮಹಾನುಭಾವಗೋಷ್ಠಿಯು ಸಂಪನ್ನವಾಗುತ್ತಿದ್ದ ಸಂದರ್ಭದಲ್ಲಿ ಶರಣೆ ಅಕ್ಕಮಹಾದೇವಿಯು ಅಲ್ಲಿಗೆ ಆಗಮಿಸಿದಳು. ಅವಳು ತನ್ನ ಪೂರ್ವಜನ್ಮದಲ್ಲಿ ರುದ್ರಕನ್ನಿಕೆಯಾಗಿ ಕೈಲಾಸದಲ್ಲಿದ್ದಳು. ಶಿವನ ನಿರೂಪದಂತೆ ಮಹಾದೇವಿಯಕ್ಕ ಎಂಬ ಹೆಸರನ್ನು ತಾಳಿ, ಉಡುತಡಿಯಲ್ಲಿ ಜನಿಸಿದಳು. ಭವಿಯ ಸಂಗವನ್ನು ತೊರೆದು, ಚೆನ್ನಮಲ್ಲಿಕಾರ್ಜುನನ ಸಂಗವನ್ನು ಬಯಸಿ, ಷೋಡಶಪ್ರಾಯದ ನವಯೌವನದಲ್ಲಿಯೇ ಸರ್ವಸಂಗ ಪರಿತ್ಯಾಗಿಯಾದಳು. ದಿಗಂಬರ ಉಡುಗೆಯನ್ನು ಉಟ್ಟು, ತನ್ನ ಕೇಶಗಳೆಂಬ ವಸ್ತ್ರವನ್ನೇ ಮರೆಮಾಡಿಕೊಂಡು ದೇಶಾಂತರಗಳಲ್ಲಿ ತೊಳಲುತ್ತ ಕಲ್ಯಾಣಾಭಿಮುಖಿಯಾಗಿ ಬಂದಳು. ದಾರಿಯಲ್ಲಿ ಕಿನ್ನರಿಬೊಮ್ಮಣ್ಣನೆಂಬುವನು ಅವಳನ್ನು ಪರೀಕ್ಷಿಸಿ ನೋಡಿದನು.[೨೬] ಅಕ್ಕನಾದರೂ ತನ್ನ ಅಂತರಂಗದ ಜ್ಞಾನಾಗ್ನಿಯಿಂದ ಕಾಮನನ್ನು ಸುಟ್ಟು ಭಸ್ಮ ಮಾಡಿ, ಕಿನ್ನರಿಬೊಮ್ಮಣ್ಣನನ್ನು ಬೀಳ್ಕೊಟ್ಟು, ಕಲ್ಯಾಣನಗರಿಯನ್ನು ಬಂದು ಸೇರಿದಳು. "ನಾನು, ನೀನು ಎಂಬ ಭೇದವಳಿಸಿಕೊಂಡವರಲ್ಲದೆ ಮತ್ತಾರೂ ಕಲ್ಯಾಣವನ್ನು ಪ್ರವೇಶಿಸಲಾಗದು" ಎಂದು ಪುಳಕಗೊಳ್ಳುತ್ತ, ಮಹಾಮನೆಯನ್ನು ಹೊಕ್ಕಳು. ಅಲ್ಲಿ ಪ್ರಭುದೇವ

ಸಂಗಮನಾಥನೆಂಬ ಲಿಂಗವನ್ನು ಅನುಗ್ರಹಿಸಿಕೊಂಡೆ. ಹೀಗೆ ನಾನೂ ನಿನ್ನಂತೆಯೇ ಬಸವಣ್ಣನ ಸಂಪ್ರದಾಯದ ಕಂದನಾದೆ" ಎಂದು ಚೆನ್ನಬಸವಣ್ಣನು ಅಲ್ಲಮನನ್ನು ಉದ್ದೇಶಿಸಿ ಹೇಳಿದನು.

## ಸಿದ್ಧರಾಮನ ಹಿರಿಮೆಯ ಉದ್ಘಾಟನೆ

ಆ ಮಹಾನುಭಾವಗೋಷ್ಠಿಯ ನಡುವೆ ಸಿದ್ಧರಾಮನೂ ಕೂಡಿಕೊಂಡು ಮಡಿವಾಳ ಮಾಚಿದೇವನ ಗುಣಗಾನ ಮಾಡಿದನು. ಸಿದ್ಧರಾಮನು ತನ್ನ ದೇಹದ ಮೇಲೆ ಲಿಂಗವನ್ನು ಧರಿಸಿರಲಿಲ್ಲ. ಆ ಸಂಗತಿಯ ಒಳಗನ್ನೂ ತಿಳಿದಂತಾಗುತ್ತದೆ, ಸಿದ್ಧರಾಮನ ಅಂತರಂಗದ ನಿಲವನ್ನೂ ಅರಿತಂತಾಗುತ್ತದೆ ಎಂದು ಚೆನ್ನಬಸವಣ್ಣನು "ಅಂಗದಮೇಲೆ ಲಿಂಗವಿಲ್ಲವಲ್ಲ, ಏಕೆ" ಎಂದು ಪ್ರಶ್ನಿಸಿದನು. ಅದಕ್ಕೆ ಉತ್ತರವಾಗಿ ಸಿದ್ಧರಾಮನು "ನನಗೆ ಕಾಯವೆ ಬಸವಣ್ಣನಾಗಿ, ಪ್ರಾಣವೆ ಪ್ರಭುದೇವನಾಗಿರುವಾಗ, ಯಾವ ದೇಹದ ಮೇಲೆ ನಾನು ಲಿಂಗವನ್ನು ಧರಿಸಿಕೊಳ್ಳಲಿ ; ನನಗೆ ಒಳಗು–ಹೊರಗು ಎಂಬುದೇ ಇಲ್ಲ" ಎಂದನು. ಆ ನಿಲವು ಅಲ್ಲಮಪ್ರಭುವಿಗೂ ಪ್ರಿಯವಾಯಿತು. ಅದನ್ನೇ ಅನುಮೋದಿಸುತ್ತ ಪ್ರಭುವು "ಆಕಾಶದಲ್ಲಿ ಏರಿಹೋಗುವವನಿಗೆ ಏಣಿಯ ಅಗತ್ಯವೇನಿದೆ ? ಸಮುದ್ರವನ್ನೇ ದಾಟಬಲ್ಲವನಿಗೆ ಹರಿಗೋಲಿನ ಹಂಗೇನಿದೆ ? ಆ ಬಗೆಯಲ್ಲಿ ನಿಸ್ಸೀಮನಾದ ಸಿದ್ಧರಾಮನಿಗೆ ಲಿಂಗಧರಿಸುವ ಅಗತ್ಯವೇನೂ ಇಲ್ಲ" ಎಂದನು. "ಸಾಧಕನು ಅಂಗವೆನಿಸಿರುವ ತನಕ ಲಿಂಗವು ಬೇಕಲ್ಲದೆ ತಾನೇ ಲಿಂಗವಾದವನಿಗೆ ಬೇರೆ ಲಿಂಗದ ಅಗತ್ಯವಿಲ್ಲ" ಎಂದು ಚೆನ್ನಬಸವಣ್ಣನೂ ಒಪ್ಪಿಕೊಂಡನು.[25]

## ಅಕ್ಕಮಹಾದೇವಿಯ ಆಗಮನ

ಹೀಗೆ ಮಹಾಮನೆಯಲ್ಲಿ ಮಹಾನುಭಾವಗೋಷ್ಠಿಯು ಸಂಪನ್ನವಾಗುತ್ತಿದ್ದ ಸಂದರ್ಭದಲ್ಲಿ ಶರಣೆ ಅಕ್ಕಮಹಾದೇವಿಯು ಅಲ್ಲಿಗೆ ಆಗಮಿಸಿದಳು. ಅವಳು ತನ್ನ ಪೂರ್ವಜನ್ಮದಲ್ಲಿ ರುದ್ರಕನ್ನಿಕೆಯಾಗಿ ಕೈಲಾಸದಲ್ಲಿದ್ದಳು. ಶಿವನ ನಿರೂಪದಂತೆ ಮಹಾದೇವಿಯಕ್ಕ ಎಂಬ ಹೆಸರನ್ನು ತಾಳಿ, ಉಡುತಡಿಯಲ್ಲಿ ಜನಿಸಿದಳು. ಭವಿಯ ಸಂಗವನ್ನು ತೊರೆದು, ಚೆನ್ನಮಲ್ಲಿಕಾರ್ಜುನನ ಸಂಗವನ್ನು ಬಯಸಿ, ಷೋಡಶಪ್ರಾಯದ ನವಯೌವನದಲ್ಲಿಯೇ ಸರ್ವಸಂಗ ಪರಿತ್ಯಾಗಿಯಾದಳು. ದಿಗಂಬರ ಉಡುಗೆಯನ್ನು ಉಟ್ಟು, ತನ್ನ ಕೇಶಗಳೆಂಬ ವಸ್ತ್ರವನ್ನೇ ಮರೆಮಾಡಿಕೊಂಡು ದೇಶಾಂತರಗಳಲ್ಲಿ ತೊಳಲುತ್ತ ಕಲ್ಯಾಣಾಭಿಮುಖಿಯಾಗಿ ಬಂದಳು. ದಾರಿಯಲ್ಲಿ ಕಿನ್ನರಿಬೊಮ್ಮಣ್ಣನೆಂಬುವನು ಅವಳನ್ನು ಹರ್ಷಪಟ್ಟು ನೋಡಿದನು.[26] ಅಕ್ಕನಾದರೊ ತನ್ನ ಅಂತರಂಗದ ಜ್ಞಾನಾಗ್ನಿಯಿಂದ ಕಾಮನನ್ನು ಸುಟ್ಟು ಭಸ್ಮಮಾಡಿ, ಕಿನ್ನರಿಬೊಮ್ಮಣ್ಣನನ್ನು ಬೀಳ್ಕೊಟ್ಟು, ಕಲ್ಯಾಣನಗರಿಯನ್ನು ಬಂದು ಸೇರಿದಳು. "ನಾನು, ನೀನು ಎಂಬ ಭೇದವಳಿಸಿಕೊಂಡವರಲ್ಲದೆ ಮತ್ತಾರೂ ಕಲ್ಯಾಣವನ್ನು ಪ್ರವೇಶಿಸಲಾಗದು" ಎಂದು ಪುಳಕಗೊಳ್ಳುತ್ತ ಮಹಾಮನೆಯನ್ನು ಹೊಕ್ಕಳು. ಅಲ್ಲಿ ಪ್ರಭುದೇವ

ಹಾಗೂ ಅಸಂಖ್ಯಾತ ಅಮರಗಣಂಗಳೊಡನಿದ್ದ, ಪರಮಾನಂದ ಸಂಗಿಗಳಾಗಿದ್ದ, ಬಸವಣ್ಣನವರಿಗೆ ಸಾಷ್ಟಾಂಗ ದಂಡಪ್ರಣಾಮ ಮಾಡಿ, ಅವರನ್ನು ಕೊಂಡಾಡಿ, ಕೈಮುಗಿದು ನಿಂತಳು. ಆಗ ಬಸವಣ್ಣನವರು "ಎನ್ನ ಹೆತ್ತತಾಯಿ ಮಹಾದೇವಿಯಕ್ಕನ ನಿಲವ ನೋಡಾ ಪ್ರಭುವೆ" ಎಂದು ಪ್ರಭುದೇವನಿಗೆ ಆಕೆಯ ಪರಿಚಯ ಮಾಡಿಸಿಕೊಟ್ಟರು; ಆಕೆಯನ್ನು ಪರಿಪರಿಯಾಗಿ ಕೊಂಡಾಡಿದರು.

ಅಕ್ಕಮಹಾದೇವಿಯನ್ನು ಪರೀಕ್ಷಿಸುವ ಸಲುವಾಗಿ ಅಲ್ಲಮನು "ಹೆಣ್ಣು ಎಂದರೆ ಮುನಿಯುವ ನಮ್ಮ ಶರಣರ ಮುಂದೆ ಯೌವನವತಿಯಾದ ನೀನು ಬಂದುದಾದರೂ ಏಕೆ? ನಿನ್ನಗಂಡನು ಯಾರೆಂಬುದನ್ನು ಹೇಳುತ್ತೀಯಾದರೆ ಇಲ್ಲಿ ಕುಳಿತುಕೊ; ಅಲ್ಲದಿದ್ದರೆ ಇಲ್ಲಿಂದ ತೊಲಗು" ಎಂದು ಬಿರುಸಾಗಿಯೆ ನುಡಿದನು. ಅಕ್ಕ ವಿಚಲಿತಳಾಗಲಿಲ್ಲ. "ಚೆನ್ನಮಲ್ಲಿಕಾರ್ಜುನನೇ ನನಗೆ ಪತಿ; ಲೋಕದ ವಿಕ್ಕ ಗಂಡರೊಡನೆ ನನಗೆ ಯಾವ ಸಂಬಂಧವೂ ಇಲ್ಲ" ಎಂದು ತನ್ನ ನಿಶ್ಚಯವನ್ನು ತಿಳಿಸಿದಳು. ಪ್ರಭುದೇವನು ಒಡ್ಡಿದ ಜಟಿಲವಾದ ಆಧ್ಯಾತ್ಮಿಕ ಪ್ರಶ್ನೆಗಳಿಗೆ ಅವಳು ತನ್ನ ಅನುಭಾವ ಬಲದಿಂದ ಸಮಂಜಸವಾದ ಉತ್ತರಗಳನ್ನು ಕೊಟ್ಟಳು. ಪ್ರಭುದೇವನೇ ಮೊದಲಾಗಿ ಎಲ್ಲರೂ ಅಕ್ಕನ ಹಿರಿಮೆಯನ್ನು ಮೆಚ್ಚಿಕೊಂಡರು. ತರುವಾಯ ಅವಳು ತಾನು ಐಕ್ಯವಾಗುವ ಸ್ಥಾನ-ಕಾಲ-ಸ್ಥಿತಿಗಳು ಯಾವುವೆಂದು ತಿಳಿಸಿಕೊಡಬೇಕೆಂದು ಅಲ್ಲಮನನ್ನು ಬೇಡಿಕೊಂಡಳು. "ಶ್ರೀಕೂಟ ಗಿರಿಯಲ್ಲಿ ಕಾಣಬಾರದ ಕದಳಿಯೊಂದಿದೆ. ಅದರ ಒಳಹೊಕ್ಕು ನೋಡಿದರೆ ಅಲ್ಲೊಂದು ದಿವ್ಯಜ್ಯೋತಿ ಕಾಣಿಸುತ್ತದೆ. ಅಲ್ಲಿಗೆ ಹೋದರೆ ನಿನಗೆ ಪರಮಪದವು ಲಭಿಸುತ್ತದೆ" ಎಂದು ಅವನು ಸೂಚಿಸಿದನು. ಅದರಂತೆ ಅಕ್ಕಮಹಾದೇವಿ ಎಲ್ಲ ಶರಣರಿಂದ ಬೀಳ್ಕೊಂಡು ಶ್ರೀಕೂಟ ಮಹಾಗಿರಿಯತ್ತ ಹೆಜ್ಜೆ ಹಾಕಿದಳು.

## ಪ್ರಭುದೇವನ ತೀರ್ಥಯಾತ್ರೆ

ಇಷ್ಟಾದಮೇಲೆ ಪ್ರಭುದೇವನು ತಾನು ಮತ್ತೊಮ್ಮೆ ಬರುವೆನೆಂದು ಹೇಳಿ ಕಲ್ಯಾಣದಿಂದ ನಿರ್ಗಮಿಸಲು ಅನುವಾದನು. ಎಲ್ಲ ಶರಣರೂ ಪ್ರಭುದೇವನ ಅಗಲಿಕೆಯ ದುಃಖದಿಂದ ನೊಂದರು. ಬಸವಣ್ಣನವರಂತೂ "ಕೂಡಲಸಂಗನ ಶರಣರನ್ನು ಅಗಲುವ ಸಂಕಟಕ್ಕಿಂತ ಮರಣವೇ ಲೇಸು" ಎಂದು ಹಲುಬಿದರು. ಪ್ರಭುದೇವನು ಎಲ್ಲರನ್ನೂ ಸಮಾಧಾನಪಡಿಸಿದನು. ತನ್ನೊಡನೆ ಕರೆತಂದಿದ್ದ ಸೊನ್ನಲಿಗೆಯ ಸಿದ್ಧರಾಮನಿಗೆ ನಿಜಸಮಾಧಿಯ ನಿರ್ಣಯವನ್ನು ತಿಳಿಸಿಕೊಟ್ಟು, ಅವನ ಪಟ್ಟಣಕ್ಕೆ ಕಳುಹಿಸಿಕೊಟ್ಟನು. ತಾನು ಎಲ್ಲರ ಕೈಲೂ ಕಳುಹಿಸಿಕೊಂಡು ನಾನಾದೇಶ, ನಾನಾಗಿರಿಗಹ್ವರಾಂತರಂಗದಲ್ಲಿ ಸುಳಿದಾಡತೊಡಗಿದನು.

ತನ್ನ ದೇಶಾಟನೆಯ ಕಾಲದಲ್ಲಿ ಪ್ರಭುದೇವನು ಪೊನ್ನಾಂಬಲನಾಥನ ದರ್ಶನ ಮಾಡಿದನು. ಅಲ್ಲಿನ ಶಿವಾನುಭವಸಂಪನ್ನರನ್ನು ಜೀವನ್ಮುಕ್ತರನ್ನಾಗಿ ಮಾಡಿದನು. ಅಲ್ಲಿಂದ ರಾಮೇಶ್ವರವನ್ನು ಮುಟ್ಟಿದನು. ರಾಮನಾಥನೊಡನೆ ಸುಖಸಂಕಥಾಪ್ರಸಂಗವನ್ನು

ನಡೆಸಿ, ಅವರಿಂದ ಪೂಜೆಯನ್ನು ಸ್ವೀಕರಿಸಿದನು. ಅಲ್ಲಿಂದ ಮಹಾಬಲೇಶ್ವರನ ಸನ್ನಿಧಿಯನ್ನು ಹೊಕ್ಕು, ಮುಂದೆ ಉತ್ತರಾಭಿಮುಖಿಯಾಗಿ ನಡೆದು ಸೌರಾಷ್ಟ್ರ ಸೋಮನಾಥನನ್ನು ಕಂಡನು. ದಾರಿಯಲ್ಲಿ ತನ್ನನ್ನು ಕಂಡ, ಮಾತನಾಡಿಸಿದ, ನಮಸ್ಕರಿಸಿದ ಸರ್ವಜನರ ಭವಪಾಶ ಬಂಧನವನ್ನು ಹರಿದನು. ನಾನಾ ಪುಣ್ಯಕ್ಷೇತ್ರಗಳನ್ನು ನಿರೀಕ್ಷಿಸುತ್ತ ಅವುಗಳಿಗೆ ಪುಣ್ಯವರಗಳನ್ನು ಕೊಟ್ಟನು. ಅರವತ್ತೆಂಟು ಪುಣ್ಯಕ್ಷೇತ್ರಗಳಲ್ಲಿ ನಡೆದು, ಅವುಗಳಿಂದ ಪೂಜೆ ಸ್ವೀಕರಿಸಿದನು. ಅವುಗಳಿಗೆ ತನ್ನ ಪರಮಾನಂದರಸದೊಂಬ ನಿರ್ಮಲ ಗಂಗಾಜಲವನ್ನು ಕರುಣೆಯಿಂದ ಕೊಟ್ಟನು. ಶ್ರೀಕೇದಾರವನ್ನು ಹೊಕ್ಕು ಅಲ್ಲಿನ ಉತ್ಕಟವಾದ ಹಿಮವನ್ನು ಗೆದ್ದನು. ಅಸಂಖ್ಯಾತ ಪರ್ವತಗಳಲ್ಲಿ ತಿರುಗಿದನು ; ಅಲ್ಲಿನ ಗುಹಾಂತರಗಳಲ್ಲಿ ಪದ್ಮಾಸನದಲ್ಲಿ ಕುಳಿತು, ನಿರ್ಭಾವಪದವಿಸುಖವನ್ನು ಅನುಭವಿಸಿದನು ; ಅನಂತ ಕೋಟಿ ಬ್ರಹ್ಮಾಂಡಗಳನ್ನೆಲ್ಲ ತನ್ನ ಮಹಾಜ್ಞಾನ ಪ್ರಕಾಶದಲ್ಲಿ ಅಲಿಂಗಿಸಿ ತೊಳಗಿ ಬೆಳಗಿದನು. ಹೀಗೆಯೇ ಹನ್ನೆರಡುವರ್ಷಗಳು ಉರುಳಿ ಹೋದುವು. ಪ್ರಭುವಿನ ಜೀವನ ಲೀಲೆಯೂ ಮುಕ್ತಾಯದತ್ತ ಬಂದಿತು. ಅದನ್ನು ವಿವೇಕದಿಂದ ತಿಳಿದುಕೊಂಡ ಅವನು, ಈ ಹಿಂದೆ ಬಸವಣ್ಣನವರಿಗೆ ಮಾತುಕೊಟ್ಟಿದ್ದಂತೆ ಕಲ್ಯಾಣದತ್ತ ಹೊರಟನು.

### ಕಲ್ಯಾಣಕ್ಕೆ ಅಲ್ಲಮನ ಪುನರಾಗಮನ

ಇತ್ತ ಬಸವಣ್ಣನವರಾದರೊ ಅಲ್ಲಮಪ್ರಭುವಿನ ಬರವನ್ನೇ ಹಾರೈಸುತ್ತ, ಅವನಿಗಾಗಿ ಶೂನ್ಯಸಿಂಹಾಸನವನ್ನು ರಚಿಸಿಕೊಂಡು ದಿನಗಳನ್ನು ಎಣಿಸುತ್ತಿದ್ದರು. ಆ ಮಹಾಶರಣನನ್ನು ಕಾಣುವ ಭಾಗ್ಯ ಇನ್ನೂ ಕೂಡಿಬಂದಿಲ್ಲವಲ್ಲ ಎಂಬ ದಿವ್ಯವಿರಹದಲ್ಲಿ ಕಳವಳಿಸುತ್ತಿದ್ದರು. ಅಲ್ಲಮನ ಬರುವಿಕೆಯನ್ನು ಸೂಚಿಸುವ ಶುಭಶಕುನಗಳಾದುವು : ಅಂಗೈ ಕಡಿಯಿತು, ಕಣ್ಣು ಅದುರಿತು, ಒಂದು ಶುಭಸ್ವಪ್ನವನ್ನೂ ಕಂಡು ಅವರು ಹಿಗ್ಗಿದರು. ಮೋಳಿಗೆ ಮಾರಯ್ಯನು ತಾನೂ ಅಂತಹ ಶುಭಸ್ವಪ್ನವನ್ನು ಕಂಡುದಾಗಿ ಬಸವಣ್ಣನವರಿಗೆ ತಿಳಿಸುತ್ತ "ಕಟ್ಟು ಗುಡಿಯ ಸಂಗನ ಬಸವಣ್ಣ" ಎಂದು ಹುರಿದುಂಬಿಸಿದನು. ಎಲ್ಲ ಸಿದ್ಧತೆಗಳೂ ಆದುವು ; ಅಲ್ಲಮನ ಆಗಮನವೂ ಆಯಿತು. ಅವನನ್ನು ಗುರುತಿಸುವುದೇ ಕಷ್ಟವಾಗಿತ್ತು. ಅವನ ರೂಪು ನೋಡುವವರಿಗೆ ಬೆರಗು ಹುಟ್ಟಿಸುವಂಥದೂ ಭಯಂಕರವೂ ಆಗಿತ್ತು. ತಲೆ ಕೆದರಿಹೋಗಿತ್ತು; ಕರಸ್ಥಲದ ಲಿಂಗದ ಮೇಲೆ ನೋಟನಟ್ಟು ಬಹಿರಂಗ ಅವಧಾನವು ತಪ್ಪಿಹೋಗಿತ್ತು ; ಹುಬ್ಬು ಒಡೆದಿತ್ತು ; ಕಿವಿ ಹರಿದಿತ್ತು ; ಬೆನ್ನಿನಲ್ಲಿ ಬಾಸುಂಡೆಯೆದ್ದಿತ್ತು ; ಮೊಣಕಾಲು ಒಡೆದು ರಕ್ತಧಾರೆ ಸುರಿಯುತ್ತಿತ್ತು. ಆ ದೃಶ್ಯವನ್ನು ಕಂಡು ಬಸವಣ್ಣನವರು "ಪ್ರಭುದೇವನ ನಿಲುವು ಅತ್ಯಂತ ನಿರಾಮಯವಾದುದು" ಎಂದು ಅಚ್ಚರಿಯಲ್ಲಿ ಮುಳುಗಿ ಹೋದರು.

ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮರ ಸಮ್ಮುಖದಲ್ಲಿ ಬಸವಣ್ಣನವರು ಅಲ್ಲಮನನ್ನು ಶೂನ್ಯಸಿಂಹಾಸನದ ಮೇಲೆ ಕುಳ್ಳಿರಿಸಿದರು. ತಳವಿಲ್ಲದ ಗದ್ದುಗೆಯ ಮೇಲೆ ಒಡಲಿಲ್ಲದ ದೇವನು ಮಂಡಿಸಿದನು. ಹಡಪದ ಅಪ್ಪಣ್ಣ, ಸೊಡ್ಡಳ ಬಾಚರಸ, ಕಕ್ಕಯ್ಯ,

ಮೋಳಿಗೆ ಮಾರಿತಂದೆ, ಏಕಾಂತರಾಮ ತಂದೆ, ಶಂಕರ ದಾಸಿಮಯ್ಯ, ಮೋದರ ಕೇತಯ್ಯ, ಘಟ್ಟಿವಾಳಯ್ಯ ಮುಂತಾದ ಶರಣರು ಪ್ರಭುವನ್ನು ಸ್ತೋತ್ರಮಾಡಿದರು. ಬಸವಣ್ಣನವರಿಗೆ ಉಂಟಾದ ಸಂತೋಷವಂತೂ ಮೇರೆವೀರಿತು. "ಅಡಿ ಕಾಲುದಣಿಯವು! ನೋಡಿ ಕಣ್ಣು ದಣಿಯವು! ಹಾಡಿ ಮನ ದಣಿಯವು! ಇನ್ನೇವೆನಿನ್ನೇವೆನಯ್ಯ" (ವಚನ. ೭೧೪) ಎಂದು ಅವರು ಮೆರೆದಾಡಿದರು. ಆ ದೇವನನ್ನು ಪೂಜಿಸಿ, ಹೊಗಳಿ, ಪರಮಾನಂದಯುಕ್ತವಾದ ಸದ್ಭಕ್ತಿರಸದಲ್ಲಿ ಓಲಾಡಿದರು.

ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ಬಸವಣ್ಣನವರು ನಡೆಸಿದ ಕಾರ್ಯ ಹಿಡಿಸಲಿಲ್ಲ. ತಮ್ಮಲ್ಲಿಯೇ ಯಾರಾದರೊಬ್ಬರನ್ನು ಶೂನ್ಯಸಿಂಹಾಸನದ ಮೇಲೆ ಕೂರಿಸಿದರಾಗಿತ್ತು ಎಂದು ಅವರಿಗೆ ಅನಿಸಿತೋ ಏನೋ! ಅವರು ಬಸವಣ್ಣನವರನ್ನು ಪರಿಪರಿಯಾಗಿ ನಿಂದಿಸಿದರು. "ಈ ಬಸವಣ್ಣನೊಬ್ಬ ವ್ರತಗೇಡಿ. 'ಅರಸನನ್ನು ಕಂಡು ಪುರುಷನನ್ನು ಮರೆತರು' ಎಂಬಂತೆ ಮಾಡಿಬಿಟ್ಟನು. ಯಾರೋ ಮಹೇಂದ್ರಜಾಲಿಗನೊಬ್ಬನನ್ನು ಗದ್ದುಗೆಯ ಮೇಲೆ ಕೂರಿಸಿ, ಅವನನ್ನೇ ತನ್ನ ಪ್ರಾಣಲಿಂಗವೆಂದು ಹೊಗಳಿಕೊಂಡು ನಮ್ಮತ್ತ ತಿರುಗಿಯೂ ನೋಡಲಿಲ್ಲ. ಪ್ರಭುದೇವನಲ್ಲಿ ಅವನು ಕಂಡ ಗುಣವಾದರೂ ಏನು! ನಮ್ಮಲ್ಲಿ ಕಂಡ ದೋಷವಾದರೂ ಏನು! ಕಂಚನ್ನು ಬಿಟ್ಟು ಹಂಚನ್ನು ಕೈಗೆತ್ತಿಕೊಂಡನಲ್ಲ! ಆ ಅನಾಚಾರಿ ಅಲ್ಲಮನಿಗೂ ಈ ವ್ರತಗೇಡಿ ಬಸವನಿಗೂ ಜೋಡಿ ಸರಿಯಾಯಿತು. ಅವರು ದೇವಲೋಕ ಮರ್ತ್ಯಲೋಕಗಳೆರಡಕ್ಕೂ ಸಲ್ಲದವರು. ಅವರ ಮುಖದರ್ಶನ ಮಾಡುವುದೂ ಪಾಪಕರ" ಎಂದು ಬಾಯಿಗೆ ಬಂದುದನ್ನು ಆಡುತ್ತ, ಬಸವ-ಅಲ್ಲಮರ ಮೇಲೆ ಡಂಗುರವನಿಕ್ಕಿ ಕ್ರೋಧದಿಂದ ಅಲ್ಲಿಂದೆದ್ದು ಹೊರಟುಹೋದರು.

ಜಂಗಮರ ನಡವಳಿಕೆಯನ್ನು ಕಂಡು ಅಲ್ಲಮನಿಗೂ ಕೋಪಬಂತು. "ಆ ಜಂಗಮರೆಲ್ಲರೂ ಅಶನಕ್ಕೆ ನೆರೆದವರು : ಲಿಂಗದ ಸ್ವರೂಪವೇನೆಂಬುದನ್ನು ಅರಿತವರಲ್ಲ. ದೇಹಾತ್ಮಭಾವದಲ್ಲಿಯೇ ನಿಂತ ಅವರು ಕಳವಳಧಾರಿಗಳು. ಮದ್ಯವನ್ನುಂಡು ಮದವೆದ್ದ ಜೋಗಿಯಂತೆ ಮನಸೋ ಇಚ್ಛೆ ಮಾತನಾಡುತ್ತಿದ್ದಾರೆ" ಎಂದು ಅವರನ್ನೆಲ್ಲ ವಿಡಂಬಿಸಿದನು. ಇದಕ್ಕಿದ್ದಂತೆ ಪರಿಸ್ಥಿತಿ ಗಂಭೀರವಾಯಿತು. ಬಸವಣ್ಣನವರಂತೂ ಅತ್ಯಂತ ಅಧೀರರಾದರು : 'ಜಂಗಮ ಪ್ರಾಣಿ' ಎನಿಸಿದ್ದ ಅವರು ಧರ್ಮಸಂಕಟಕ್ಕೆ ಸಿಲುಕಿದರು. ಆ ಜಂಗಮರನ್ನು ತನ್ನಂತೆ ಮಾಡಿಕೊಳ್ಳುವುದು ಹೇಗೆ ಎಂದು ಹಲುಬುತ್ತ ಪ್ರಭುದೇವನನ್ನೇ ಕುರಿತು "ಅರಸು ಮುನಿದರೆ ನಾಡೊಳಗಿರಬಾರದು : ಪತಿ ಮುನಿದರೆ ಸತಿಗೆ ಇರಬಾರದು : ಕೂಡಲ ಸಂಗಮದೇವ, ಜಂಗಮ ಮುನಿದರೆ ನಾನೆಂತು ಬದುಕುವೆ" (ವಚನ. ೭೨೩) ಎಂದು ತಮ್ಮ ಸಂಕಟವನ್ನು ತೋಡಿಕೊಳ್ಳುತ್ತ ಅವರನ್ನು ಸಮಾಧಾನಪಡಿಸುವ ಬಗೆ ಹೇಗೆಂದು ಕೇಳಿಕೊಂಡರು.

ಬಸವಣ್ಣನವರ ಕಳವಳವನ್ನು ಕಂಡ ಅಲ್ಲಮನು ಅದ್ವೈತ ತತ್ವದ ಹಿನ್ನೆಲೆಯಲ್ಲಿ "ಎಲ್ಲರೂ ಆತ್ಮನಲ್ಲಿಯೇ ಅಡಕವಾಗಿದ್ದಾರೆ : ಆ ಜಂಗಮರು ಇದ್ದುದೂ ಇಲ್ಲ, ಹೋದುದೂ ಇಲ್ಲ : ಅವರೆಲ್ಲರೂ ನನ್ನಲ್ಲಿಯೇ ಇದ್ದಾರೆ : ಅಂಜಬೇಡ, ಅಳುಕಬೇಡ"

ಎಂದು ಸಂತೈಸಿದನು. ಆಗ ಬಸವಣ್ಣನವರು "ಈ ಅದ್ವೈತವನ್ನು ಅಂತರಂಗದಲ್ಲಿ ದೃಢಗೊಳಿಸಿಕೊಂಡಿದ್ದೇನೆ. ಆದರೆ ಬಹಿರಂಗದಲ್ಲಿ ಅವರ ದಾಸೋಹವನ್ನು ಮರೆಯಬಾರದಲ್ಲ! 'ಹಾವೂ ಸಾಯಬಾರದು, ಕೋಲೂ ಮುರಿಯಬಾರದು' ಎಂಬಂತೆ ಮಾಡು ಪ್ರಭುವೆ" ಎಂದು ಮತ್ತೆ ವಿನಂತಿಸಿಕೊಂಡರು. ಅದಕ್ಕೆ ಪ್ರಭುವು "ನೀನು ನನ್ನೊಬ್ಬನನ್ನು ಮೊದಲು ತೃಪ್ತಿಪಡಿಸು : ತರುವಾಯ ಆ ನಿನ್ನ ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮಕ್ಕೆ ತೃಪ್ತಿಯಾಗುತ್ತದೆ" ಎಂದು ಆಜ್ಞಾಪಿಸಿದನು. ಚೆನ್ನಬಸವಣ್ಣನಾದರೂ "ನಾವೇ ಹಿರಿಯರೆನ್ನುತ್ತಾರೆ : ನಾವೇ ದೇವರೆನ್ನುತ್ತಾರೆ : ಆದರೆ ಅವರು ತಮ್ಮನ್ನು ತಾವು ಅರಿತಿಲ್ಲ. ನಾನು ಮಾತ್ರ ಪ್ರಭುದೇವನ ಪಾದವನ್ನು ಬಿಡುವುದಿಲ್ಲ" ಎನ್ನುತ್ತ ಅವನ ಬೆನ್ನಲ್ಲಿ ನಿಂತನು. ಆಗಲೆ ಬಸವಣ್ಣನವರು ಶಾಂತಚಿತ್ತರಾಗಿ ಮುಂದಿನ ಕಾರ್ಯಕ್ಕೆ ಅಣಿಯಾದರು.

## ಪ್ರಭುದೇವನ ಆರೋಗಣೆ

ಅಲ್ಲಮನಿಗೆ ಉಣಲಿಕ್ಕಿ ತೃಪ್ತಿಪಡಿಸುವ ಕಾರ್ಯ ಆರಂಭವಾಯಿತು. ಬಡಿಸಿದಂತೆಲ್ಲ ಪ್ರಭುವು ಉಂಡು ಮುಗಿಸಿದನು. "ಈ ಸ್ವಾಮಿಯ ಹಸಿವು ಲೋಕಕ್ಕೆ ಹೊಸದು ; ಮೊರ ಮೊರಗಳಲ್ಲೇ ತಂದು ಬಡಿಸೋಣವಾಗಲಿ" ಎಂದು ಬಸವಣ್ಣನವರು ಆಜ್ಞಾಪಿಸಿದರು. ಭಕ್ತರೂ ಪರಿಚಾರಕರೂ ಸನ್ನದ್ಧರಾಗಿ ಹೆಡಗೆ ಹೆಡಗೆಗಳಲ್ಲಿ, ಮೊರ ಮೊರಗಳಲ್ಲಿ, ಗರಸಿ ಗೆರಸಿಗಳಲ್ಲಿ ಆಹಾರಪದಾರ್ಥಗಳನ್ನು ತಂದು ಉಣಲಿಕ್ಕ ತೊಡಗಿದರು. ಪ್ರಭುದೇವನಾದರೋ ಸರ್ವತೋಮುಖನಾಗಿ ಅವರು ಬಡಿಸಿದ್ದನ್ನೆಲ್ಲ ಕಣ್ಣುಮುಚ್ಚಿ ಬಿಚ್ಚುವಷ್ಟರಲ್ಲಿ ಮುಗಿಸಿಬಿಡುತ್ತಿದ್ದನು. ಅವನ ಆರೋಗಣೆ ವಿಚಿತ್ರವಾಗಿತ್ತು : ಮಹಾದ್ಭುತವಾಗಿತ್ತು. ಯಾವ ದಿಕ್ಕಿನಿಂದ ಆಹಾರ ತಂದರೆ ಆ ದಿಕ್ಕಿಗೇ ಬಾಯಾಗಿ, ಕೊನೆಗೆ ಬಯಲೆಲ್ಲ ಬಾಯಾಗಿ ತಂದುದನ್ನೆಲ್ಲ ಸ್ವಾಹಾಮಾಡಿಬಿಟ್ಟನು. ಬಸವಣ್ಣನವರು ಎಚ್ಚೆತ್ತುಕೊಳ್ಳಲಿಲ್ಲ. ತಮ್ಮ ಉಗ್ರಾಣದಲ್ಲಿ ಬೇಕಾದಷ್ಟು ಧಾನ್ಯಗಳ ದಾಸ್ತಾನು ಇದೆಯೆಂಬ ಅಭಿಮಾನದಲ್ಲಿಯೇ ಅವರಿದ್ದರು. ಸೊಡ್ಡಳ ಬಾಚರಸನನ್ನು ಕರೆದು "ಸಂದ ಪದಾರ್ಥ ಸಲಲಿ ; ಕೂಡಲ ಸಂಗಮದೇವರ ಆರೋಗಣೆಯ ಅವಸರಕ್ಕೆ ಸಂಚಿತ ಸಯಧಾನವ ತೆಗೆಸಿರೇ" ಎಂದು ಅಪ್ಪಣೆ ಮಾಡಿದರು. ಅರವತ್ತುಲಕ್ಷ ಖಂಡುಗ ಹೊಸಜೋಳ : ಮೂವತ್ತುಲಕ್ಷ ಖಂಡುಗ ಶಾಲಿಧಾನ್ಯ : ಹನ್ನೆರಡುಲಕ್ಷ ಖಂಡುಗ ಗೋಧಿ : ಮೂವತ್ತೆರಡುಲಕ್ಷ ಖಂಡುಗ ಕಡಲೆ : ಮೂವತ್ತುಲಕ್ಷ ಖಂಡುಗ ಹೆಸರು ; ನವಣೆ, ಹಾರಕ, ಬರಗು, ಸಾವೆ, ಉದ್ದು ಮುಂತಾದ ಧಾನ್ಯಗಳು ಐವತ್ತುಲಕ್ಷ ಖಂಡುಗ—ಈ ಧಾನ್ಯಗಳಿಂದ ಪಾಕಗೊಂಡ ಪದಾರ್ಥಗಳನ್ನು ಅಲ್ಲಮನು ತಿಂದು ತೇಗಿದನು : ಬಯಲೇ ಬಾಯ್ದೆರೆದಂತೆ ನುಂಗಿ ನೊಣೆದನು.

ಆ ಅದ್ಭುತ ಆರೋಗಣೆ ಅಷ್ಟಕ್ಕೇ ಮುಗಿಯಲಿಲ್ಲ : ಬಸವಣ್ಣನವರೂ ಸುಮ್ಮನಾಗಲಿಲ್ಲ. ಉಂಡಲಿಗೆ, ಕಡುಬು, ಮಂಡಗೆ, ಸೂಸಲು, ಬೆಲ್ಲ, ದ್ರಾಕ್ಷೆ, ಸಕ್ಕರೆ ಮುಂತಾದುವ

..., ಅಪರಾಜ, ಹೆತ್ತತುಪ್ಪ, ಹಲಸಿನಹಣ್ಣು, ಚಿಲುಪಾಲಘಟ್ಟಿಗೆ ಮುಂತಾದುವು ಮನವೇ ಮೇರೆಯೆಂಬಷ್ಟು ಪ್ರಮಾಣ : ಅಕಾಲದಲ್ಲಿ ಲಭ್ಯವಾದ ಮಾವಿನಹಣ್ಣು ಇಪ್ಪತ್ತನಾಲ್ಕುಲಕ್ಷ : ಬಾಳೆಯ ಹಣ್ಣು ಮೂವತ್ತಾರುಲಕ್ಷ—ಮುಂತಾದುವನ್ನೆಲ್ಲ ಅಲ್ಲಮನಿಗೆ ಕ್ರಮಕ್ರಮವಾಗಿ ಎಡೆ ಮಾಡಲಾಯಿತು. ತೋರದ ಮುನ್ನವೇ ಅವುಗಳನ್ನೆಲ್ಲ ಅವನು ಅರ್ಪಿಸಿಕೊಂಡು ಬಿಟ್ಟನು. ಅಲ್ಲಮನು ಆ ಪದಾರ್ಥಗಳನ್ನೆಲ್ಲ ಕೈಯಿಂದೆತ್ತಿ ಬಾಯಲ್ಲಿ ಅಗಿದು ಮತ್ತೆ ನುಂಗಬೇಕಾಗಿರಲಿಲ್ಲ. ಅವನು ಕೈಲಿ ಮುಟ್ಟಿದ ಪದಾರ್ಥಗಳು ಕೈಯೊಳಗೇ ಐಕ್ಯವಾದುವು : ನಾಲಗೆಗೆ ತಾಗಿಸಿದ ಪದಾರ್ಥಗಳು ನಾಲಗೆಯಲ್ಲೇ ಐಕ್ಯವಾದುವು : ಕಣ್ಣುಗಳಿಂದ ನೋಡಿದ ಪದಾರ್ಥಗಳು ಕಣ್ಣೊಳಗೇ ಐಕ್ಯವಾದುವು. ಬಡಿಸುವ ಪರಿಚಾರಕರು ಸೋತರೇ ಹೊರತು ಉಣ್ಣುವ ದೇವನು ಸೋಲಲಿಲ್ಲ. ಬಸವಣ್ಣನವರ ಅಳಲು ಹೇಳತೀರದು. ಅತ್ತ ಜಂಗಮರೂ ಮುನಿಸಿಕೊಂಡು ಹೋದರು : ಇತ್ತ ಒಬ್ಬ ಶರಣನಿಗೇ ತೃಪ್ತಿಪಡಿಸುವುದು ಸಾಧ್ಯವಾಗಲಿಲ್ಲ. "ಬ್ರಹ್ಮಾಂಡವನ್ನೇ ತನ್ನ ದೇಹದಲ್ಲಿ ಅಳವಡಿಸಿಕೊಂಡು ಬಂದ ಮಹಾತ್ಮನನ್ನು ಆರೋಗಣೆಯಿಂದ ತೃಪ್ತಿಪಡಿಸುತ್ತೇನೆ ಎಂಬ ಅಹಂಕಾರಕ್ಕೆ ನಾನು ತುತ್ತಾಗಿ ಕೆಟ್ಟೆನಲ್ಲಾ" ಎಂದು ಗೋಳಾಡಿದರು. ಮುಂದೇನು ಮಾಡಬೇಕೆಂದು ದಾರಿಗಾಣದೆ ಮಡಿವಾಳ ಮಾಚಯ್ಯನಲ್ಲಿ ಸಲಹೆ ಕೇಳಿದರು. "ನಿನಗೇನು ಪಿತ್ತ ತಲೆಗೇರಿತೆ ಬಸವಣ್ಣ, ಜಗದಗಲವನ್ನು ಮೀರಿ ವ್ಯಾಪಿಸಿರುವ ದೇವನಿಗೆ ಲೋಕದ ಪದಾರ್ಥಗಳನ್ನು ನೀಡಿ ತೃಪ್ತಿಪಡಿಸುತ್ತೇನೆಂಬುದು ಮರುಳುತನವಲ್ಲವೆ ! ಈ ವಿಷಯದಲ್ಲಿ ನನಗೇನೂ ತೋರುತ್ತಿಲ್ಲ : ಚೆನ್ನಬಸವಣ್ಣನನ್ನೇ ಕೇಳಿ ನೋಡು" ಎಂದನು.

ಆಗ ಚೆನ್ನಬಸವಣ್ಣನು "ಈ ಸ್ವಾಮಿಯನ್ನು ತೃಪ್ತಿಪಡಿಸಬೇಕಾದರೆ ನೀನೇ ಅನ್ನವಾಗಬೇಕು, ನಾನೇ ಮೇಲೋಗರವಾಗಬೇಕು, ಅದು ಹೊರತು ಅನ್ಯಮಾರ್ಗವಿಲ್ಲ" ಎಂದನು. ತಾನೇ ಮುಂದೆ ಬಂದು ಪ್ರಭುವಿನ ಮುಂದೆ ವಿನೀತನಾಗಿ ನಿಂತು "ಬಸವಣ್ಣನೇ ಬೋನ, ನಾನೇ ಪದಾರ್ಥ, ಸುಚಿತ್ತದಿಂದಲಾರೋಗಿಸಯ್ಯ ಪ್ರಭುವೆ" ಎಂದು ಪ್ರಾರ್ಥಿಸಿಕೊಂಡನು. ಒಡನೆಯೆ ಪ್ರಭುದೇವನು ತೃಪ್ತಿಪಡೆದನು. ಲೋಕದ ಸಾಮಗ್ರಿಗಳನ್ನು ನೀಡಿ ತೃಪ್ತಿಪಡಿಸುವ ಸಾಹಸ ಕೊನೆಗಂಡಿತು.

ಈ ಮಧ್ಯೆ ಬಸವಣ್ಣನವರು ಮುನಿಸಿನಿಂದ ಎದ್ದು ನಡೆದಿದ್ದ ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮರ ಮುನಿಸನ್ನು ಆರಿಸಬೇಕೆಂದು ಪ್ರಭುದೇವನಲ್ಲಿ ಅರಿಕೆಮಾಡಿಕೊಳ್ಳುತ್ತ "ನಿಮ್ಮ ಶರಣರ ಮನದಲ್ಲಿ ಎನ್ನಮೇಲೆ ಕರುಣ ಹುಟ್ಟಿಬಪ್ಪಂತೆ ಮಾಡಯ್ಯಾ" ಎಂದು ಕೇಳಿಕೊಂಡರು. ಪ್ರಭುವು ಜಂಗಮರನ್ನು ಝಂಕಿಸಿದನಾದರೂ, ಬಸವಣ್ಣನವರ ಆರ್ತತೆಗಾಗಿ ಕರಗುತ್ತ "ಜಂಗಮರ ಬಳಿಗೆ ಹೋಗಿ 'ಕಾಪಾಡಿ ಕಾಪಾಡಿ' ಎಂದು ಅವರ ಕಾಲಿಗೆಬಿದ್ದು ಮೊರೆಯಿಡು" ಎಂದು ಸಲಹೆಮಾಡಿದನು. ಆದರಂತೆ ಬಸವಣ್ಣನವರು

ತಾವು ಮುನಿಸಿಕೊಳ್ಳಬಾರದು, ನನ್ನ ತಪ್ಪನ್ನು ಕ್ಷಮಿಸಿ ಕೃಪೆಮಾಡಿ ಹಿಂದಕ್ಕೆ ಬರಬೇಕು. ನೀವು ಎಡಗಾಲಲ್ಲಿ ಒದ್ದರೆ ನಿಮ್ಮ ಬಲಗಾಲನ್ನು ಹಿಡಿಯುತ್ತೇನೆ, ಬಲಗಾಲಲ್ಲಿ ಒದ್ದರೆ ಎಡಗಾಲನ್ನು ಹಿಡಿಯುತ್ತೇನೆ" ಎಂದು ವಿನಯಾತಿಶಯತೆಯಿಂದ ಬೇಡಿಕೊಂಡರು. ಅತ್ತ ಅಲ್ಲಮನು ಉಂಡು ತೃಪ್ತಿಪಡೆಯುತ್ತಿದ್ದಂತೆಯೇ ಇತ್ತ ಎಲ್ಲ ಜಂಗಮರೂ ತಾವೂ ಹೊಟ್ಟೆತುಂಬ ಉಂಡವರಂತೆ ತೃಪ್ತಿಪಡೆದಿದ್ದರು. ಬಸವಣ್ಣನವರು ಸೆರಗೊಡ್ಡಿ ಬೇಡುತ್ತಿದ್ದಂತೆಯೇ ಅವರ ಮುನಿಸು ಮರೆಯಾಗಿ ಪ್ರಸನ್ನರಾದರು. ಪ್ರಭುವು ಉಂಡು ತೃಪ್ತನಾದುದರಿಂದ ಜಂಗಮಸಮುದಾಯವಷ್ಟೇ ಅಲ್ಲ, ಸಚರಾಚರವೆಲ್ಲವೂ ತಣಿಯಿತು. "ಈ ಬಗೆಯ ಮಹಿಮೆಯು ನಡೆಯುವುದು ಸಾಧ್ಯವಿಲ್ಲ" ಎಂದು ಬಿಜ್ಜಳನು ತರ್ಕ ಹೂಡಿದನು. ಆಗ ಬಸವಣ್ಣನವರು ಒಂದು ಕಪ್ಪೆಯ ಹೊಟ್ಟೆಯಲ್ಲಿ ಪ್ರಭುವು ಆರೋಗಿಸಿದ ಪದಾರ್ಥಗಳಿದ್ದುದನ್ನು ತೋರಿಸಿಕೊಟ್ಟರು.

## ಶರಣರ ಅವತಾರಸಮಾಪ್ತಿ

ಮಹಾರೋಗಣೆಯ ಬಳಿಕ ಎಲ್ಲ ಶರಣರೂ ಪ್ರಭುದೇವನ ಸ್ತೋತ್ರಮಾಡಿದರು. ಆಗ ಪ್ರಭುವು ತನ್ನ ಅವತಾರ ಮುಕ್ತಾಯಕ್ಕೆ ಬರುತ್ತಿದೆಯೆಂಬ ರಹಸ್ಯವನ್ನು ತಿಳಿಸಿ ಕೊಟ್ಟನು. "ಬದುಕಿರುವವರೆಗೂ ಭಜಿಸುತ್ತಲೇ ಇದ್ದರೆ ನಾವು ನಾವಾಗುವುದು ಯಾವಾಗ ? ನಾವು ನಾವಾದ ಬಳಿಕ ಮರ್ತ್ಯಲೋಕದ ಹಂಗು ಬೇಡ. ಇನ್ನು ನೀವೆಲ್ಲರೂ ನಿಮ್ಮ ನಿಮ್ಮ ಐಕ್ಯಸ್ಥಿತಿಯನ್ನು ಸಾಧಿಸಿಕೊಳ್ಳಿ" ಎಂದು ಶರಣರನ್ನು ಕುರಿತು ಹೇಳಿದನು. ಆಗ ಬಸವಣ್ಣನವರು "ನನ್ನ ಮನಸ್ಸಿನ ಮಲಿನತೆಯನ್ನು ತೊಳೆಯಲೆಂದೇ ನೀವು ಬಂದು ಶೂನ್ಯಸಿಂಹಾಸನದ ಮೇಲೆ ಮೂರ್ತಿಗೊಂಡಿರಿ : ನಿಮ್ಮ ಮಹಿಮೆಯನ್ನು ಪ್ರಕಟಿಸಿದಿರಿ. ನನ್ನನ್ನು ಪಾವನನನ್ನಾಗಿ ಮಾಡಿ, ಷಟ್‌ಸ್ಥಳವನ್ನು ನನ್ನ ಸರ್ವಾಂಗದಲ್ಲಿ ಪ್ರತಿಷ್ಠಾಪಿಸಿದಿರಿ. ನನ್ನನ್ನು ನಿಮ್ಮ ಹಾಗೆ ಮಾಡಿದಿರಿ. ಇನ್ನು ಮುಂದಿನ ದಾರಿಯನ್ನು ತಿಳಿಸಿಕೊಡಿ" ಎಂದು ಬೇಡಿದರು. ಆಧ್ಯಾತ್ಮಿಕ ಚರ್ಚೆ ನಡೆಯಿತು. ಎಲ್ಲ ಶರಣರೂ ತಮ್ಮ ತನು-ಮನ-ಭಾವ-ಬಯಕೆ-ನಾಮ-ಸೀಮೆಗಳು ಅಳಿದು ಆ ಪರಾತ್ಪರವಸ್ತುವಿನಲ್ಲಿ ತಾವು ಬೆರಸಿ ಬೇರಿಲ್ಲದಂತಾಗಿದ್ದೇವೆಂಬ ತಮ್ಮ ಜೀವನ್ಮುಕ್ತಸ್ಥಿತಿಯನ್ನು ವರ್ಣಿಸಿದರು.

"ಶರಣರು ಮರ್ತ್ಯಲೋಕದಲ್ಲಿ ಇರಬೇಕಾದ ಅವಧಿ ಮುಗಿದುಹೋಗಿದೆ. ಕಲಿಯುಗದಲ್ಲಿ ಇಲ್ಲಿಂದ ಮುಂದಕ್ಕೆ ಶರಣರು ಇರಬಾರದು. ಬಸವಣ್ಣನು ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡಲಿ : ಚೆನ್ನಬಸವಣ್ಣನು ಉಳುಮೆಯಲ್ಲಿ (ಉಳವಿ ಎಂಬ ಕ್ಷೇತ್ರ) ನಿಜಸ್ಥಿತಿಯನ್ನು ಪಡೆದುಕೊಳ್ಳಲಿ ; ಮಡಿವಾಳಯ್ಯ, ಸೊಡ್ಡಳ ಬಾಚರಸಾದಿ ಪ್ರಮುಖರೆಲ್ಲರೂ ನಿರ್ವಯಲ ಸಮಾಧಿಯಲ್ಲಿ ನೆಲೆಗೊಳ್ಳಲಿ. ನಾನು ಕದಳಿಯನ್ನು ಹೊಕ್ಕು ನಿರ್ವಯಲಾಗುತ್ತೇನೆ" ಎಂದು ಪ್ರಕಟಿಸಿ ಅಲ್ಲಮನು ಕಲ್ಯಾಣದಿಂದ ನಿರ್ಗಮಿಸಿದನು.

ಕದಳಿಯನ್ನು ಮುಟ್ಟಲು ಶ್ರೀಪರ್ವತದ ಹಾದಿಯಲ್ಲಿ ನಡೆದು ಹೋಗುತ್ತಿರುವಾಗ ಅಲ್ಲಮನಿಗೆ ಗೋರಕ್ಷನೆಂಬ ಸಿದ್ಧನು ಎದುರಾದನು. ಅವನು ತನ್ನ ದೇಹವನ್ನು ವಜ್ರದಂತೆ ಕಠಿಣ ಗಟ್ಟಿಗೊಳಿಸಿಕೊಂಡಿದ್ದನು. ಅವನ ದೇಹವನ್ನು ಪ್ರಭುವು ಅಸಿತಾಳಪತ್ರದಿಂದ ಕಡಿದು

ನೋಡಿ ಪರೀಕ್ಷಿಸಿ, ಅವನಿಗೆ ಉಪದೇಶ ಮಾಡಿದನು.[27] ಮುಂದೆ ಕದಳಿಯನ್ನು ಕಂಡು "ದೇಹಧಾರಿಗಳಾದವರು ಬ್ರಹ್ಮ ವಿಷ್ಣು ರುದ್ರರೆಂಬಂತೆ ಯಾರೇ ಆಗಿರಲಿ, ಮಾಯೆ ಅವರನ್ನು ಕಾಡದೆ ಬಿಡುವವಳಲ್ಲ. ನಾನಾದರೊ ಈಗ ಮಾಯೆಯನ್ನು ಮೀರಿ, ಪುಣ್ಯ ಪಾಪಗಳಿಗೆ ಹೊರತಾಗಿ, ಸಂಸಾರಸಾಗರವನ್ನು ದಾಟಿ ನಿತ್ಯನಿಜನಿವಾಸದ ಬಾಗಿಲನ್ನು ಕಂಡೆ" ಎಂದು ಹೇಳಿ, ಅದನ್ನು ಹೊಕ್ಕು ನಿರ್ವಯಲಾದನು.

**ಬಸವಣ್ಣನವರ ಐಕ್ಯ**

ಇತ್ತ ಬಸವಣ್ಣನವರು "ಇನ್ನು ಮುಂದೆ ಕಲ್ಯಾಣನಗರವು ನಾಶವಾಗುತ್ತದೆ. ಶಿವಾಚಾರದ ಅಭಿಮಾನವಿಶೇಷದಿಂದಾಗಿ ಜಗದೇವ ಮತ್ತು ಮೊಲ್ಲೆಯ ಬೊಮ್ಮಣ್ಣಗಳ ಕೈಲಿ ಬಿಜ್ಜಳನು ಸಾವನ್ನಪ್ಪುತ್ತಾನೆ. ನಾನಾದರೊ ಕರ್ತನ ಆಜ್ಞೆಯಂತೆ ಈ ಭೂಲೋಕಕ್ಕೆ ಬಂದೆ : ಮಹಾಮನೆಯನ್ನು ಕಟ್ಟಿದೆ ; ಸತ್ಯವಂತರಾದ ಶಿವಶರಣರ ಭೃತ್ಯನಾಗಿ ಅವರ ಸೇವೆ ಮಾಡಿದೆ. ಇದೀಗ ನನ್ನ ಪತಿಯಾದ ಕೂಡಲಸಂಗಮದೇವನು ತನ್ನ ಕೂಟಕ್ಕಾಗಿ ನನ್ನನ್ನು ಬರಹೇಳಿದ್ದಾನೆ : ಅದರಿಂದಾಗಿ ನಿರ್ಗಮಿಸುತ್ತಿದ್ದೇನೆ. ನಾನು ಗಣನೆಯಿಲ್ಲದ ತಪ್ಪುಗಳನ್ನು ಮಾಡಿದ್ದೇನೆ. ಸತ್ಯಶರಣರಾದ ತಾವು ಅವುಗಳನ್ನು ಚಿತ್ತಕ್ಕೆ ತರಲಾಗದು. ನಿಮ್ಮೆಲ್ಲರಿಗೂ ಶರಣುಹೇಳಿ ಬೀಳ್ಕೊಳ್ಳುತ್ತಿದ್ದೇನೆ" ಎಂದು ಶರಣರ ಮುಂದೆ ನಿವೇದಿಸಿ ಕೊಂಡರು. ತರುವಾಯ ತಮ್ಮ ಮನೆಯಲ್ಲಿದ್ದ ಧನಕನಕವಸ್ತುವಾಹನಗಳನ್ನೆಲ್ಲ ಲಿಂಗ ಜಂಗಮುಗಳ ನಡುವೆ ಹಂಚಿಬಿಟ್ಟರು. ಏಳುನೂರೆಪ್ಪತ್ತು ಅಮರಗಣಗಳಿಗೆ ನಿಜಪದ ಪ್ರಾಪ್ತಿಯನ್ನು ತಿಳಿಸಿಕೊಟ್ಟರು. ತಮ್ಮ ಸಮಯಾಚಾರದ ಮೂವತ್ತಾರುಸಾವಿರ ಜಂಗಮರನ್ನು ಚೆನ್ನಬಸವಣ್ಣನ ವಶಕ್ಕೆ ಒಪ್ಪಿಸಿದರು.[28]

ಶರಣರಿಂದ ಬೀಳ್ಕೊಂಡ ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಕಪ್ಪಡಿಕ್ಷೇತ್ರಕ್ಕೆ ಬಂದರು. ಕೂಡಲಸಂಗಮನನ್ನು ಕುರಿತು "ನಾನು ಭವಭವಾಂತರಗಳಲ್ಲಿ ಸಾಕಷ್ಟು ತೊಳಲಿ ದ್ದೇನೆ. ಹಿಂದೆ ಮಾಡಿದ ಮರಹಿನಿಂದ ಈ ಜನ್ಮ ಬಂತು. ಇನ್ನು ಮುಂದೆ ಹುಟ್ಟಲಾರೆ, ಹೊಂದಲಾರೆ. ನೀನು ಆಜ್ಞಾಪಿಸಿದ ಕಾರ್ಯವನ್ನು ಮಾಡಿಮುಗಿಸಿದ್ದೇನೆ. ಇನ್ನು ನನ್ನನ್ನು ಕೂಡಿಕೋ : ಹೃದಯಕಮಲದ ಅಂತರಾಳದ ಏಕಪೀಠದ ಸಿಂಹಾಸನದ ಮೇಲೆ ನನಗೆ ಜಾಗಕೊಡು" ಎಂದು ಬೇಡಿಕೊಂಡರು. ಸಂಗಯ್ಯದೇವರ ಹೃದಯಕಮಲದಲ್ಲಿ ಬಗಿದು ಹೊಕ್ಕು ಲಿಂಗೈಕ್ಯರಾದರು. ಆಗ ಅಕ್ಕನಾಗಾಯಿ ಬಸವಣ್ಣನವರ ಅಗಲಿಕೆಯ ದುಃಖವನ್ನು ತಾಳಲಾರದೆ ಪ್ರಲಾಪ ಮಾಡಿದಳು, ತಾನೂ ಅವರ ಬೆಂಬಳಿಯಲ್ಲಿಯೇ ಐಕ್ಯವಾದಳು. ಮಿಕ್ಕ ಶಿವಶರಣರೂ ಬಯಲನ್ನು ಬೆರೆಸಿದರು. ಏಳುನೂರೆಪ್ಪತ್ತು ಅಮರಗಣಗಳ ದಂಡು ಕೈಲಾಸಕ್ಕೆ ನಡೆಯಿತು.

## (೩) ಪ್ರಬಂಧಗುಣದ ವಿಮರ್ಶೆ

'ಶೂನ್ಯಸಂಪಾದನೆ'ಯು ಮೂಲತಃ ಪ್ರಬಂಧಕಾವ್ಯವೆಂಬಂತೆ ರೂಪುಗೊಳ್ಳದಿದ್ದರೂ ಅದರ ಅಂತರಾಳದಲ್ಲಿ ಗುಪ್ತಗಾಮಿನಿಯಂತೆ ಕಥಾವಸ್ತುವೊಂದು ಹರಿದಿದೆ. ಆ ಕಥೆ ಆದಿ

Scanned by CamScanner

ಯಿಂದ ಅಂತ್ಯದವರೆಗೆ ಏಕಘನವಾಗಿ ಹರಿದಿಲ್ಲ. ಹಲವು ಶರಣರ ಜೀವನದ ಮಾರ್ಮಿಕ ಘಟನೆಗಳು ಸುಂದರಚಿತ್ರಗಳಂತೆ ಒಂದರ ಮಗ್ಗುಲಲ್ಲೊಂದು ಇರಿಸಲ್ಪಟ್ಟಿವೆ. ಅಲ್ಲಮನೇ ಒಟ್ಟು ಕಥೆಯ ಕೇಂದ್ರಬಿಂದುವಾದ್ದರಿಂದ ಬಿಡಿಬಿಡಿಯಾದ ಚಿತ್ರಗಳು ಅವನ ಪ್ರಭಾವಲಯದಿಂದಾಗಿ ಒಂದಕ್ಕೊಂದು ಬೆಸೆದುಕೊಂಡು ಏಕಘನವಾಗುತ್ತ ಸಾಗಿವೆ. ಬೇಸಗೆಯಲ್ಲಿ ನದಿ ಬತ್ತಿಹೋಗಿದ್ದರೂ ಮೇಲಿನ ಮರಳನ್ನು ಒಂದಿಷ್ಟು ಬಗಿದು ತೆಗೆದರೆ ಒಳಜಲವು ಚಿಮ್ಮಿ ಬರುವಂತೆ, ಶರಣರ ವಚನಗಳ ಒಡಲಿನಲ್ಲಿ ಶಿವಗಣ ಪ್ರಸಾದಿಯು ಮರೆಯಾಗಿರಿಸಿರುವ ಕಥೆಯನ್ನು ಪ್ರತ್ಯೇಕವಾಗಿಟ್ಟುಕೊಂಡು ನೋಡಿದರೆ ಮಾತ್ರವೇ ಅದರ ಸೊಗಸು ಅನುಭವಕ್ಕೆ ಬರುವುದು.

ಅಲ್ಲಮನ ಉಪಸ್ಥಿತಿಯಲ್ಲಿ ನಡೆಯುವ ಅಲ್ಲಿನ ಘಟನಾವಳಿಗಳು ಹಲವು ದೃಶ್ಯಗಳಿಂದ ಕೂಡಿದ ಬೃಹನ್ನಾಟಕವೊಂದನ್ನು ಕಣ್ಣ ಮುಂದೆ ಕಡೆದು ನಿಲ್ಲಿಸುತ್ತವೆ. ಆ ನಾಟಕದ ಶೈಲಿ ಯಕ್ಷಗಾನ ಬಯಲಾಟಕ್ಕೆ ಹತ್ತಿರವಾದುದೆಂದು ಎಲ್. ಬಸವರಾಜು ಅವರು ಸೂಚಿಸಿದ್ದಾರೆ.[29] ಎಂ. ಚಿದಾನಂದಮೂರ್ತಿಯವರು ಆ ಸಂಗತಿಯನ್ನು ಮತ್ತಷ್ಟು ಸ್ಫುಟಗೊಳಿಸಿದ್ದಾರೆ.[30] ಯಕ್ಷಗಾನದಲ್ಲಿ ಪಾತ್ರಧಾರಿಗಳಲ್ಲದೆ ಭಾಗವತನೆಂಬ ವ್ಯಕ್ತಿಯು ರಂಗದ ಮೇಲೆಯೇ ಕುಳಿತಿದ್ದು, ಆಗಾಗ ಪಾತ್ರಗಳೊಡನೆ ತಾನೂ ಮಾತನಾಡಿ, ಹಾಡಿ, ಕಥೆಯ ಕೊಂಡಿಯನ್ನು ಕೂಡಿಸಿಕೊಡುತ್ತಾನೆ. ಒಂದರ್ಥದಲ್ಲಿ ಅವನೇ ಅದರ ನಿರ್ದೇಶಕ. ಶಿವಗಣ ಪ್ರಸಾದಿಯು ಘಟನೆಗಳನ್ನೂ ಪಾತ್ರಗಳನ್ನೂ ಒಂದಕ್ಕೊಂದು ಕೂಡಿಸುವ ಸಲುವಾಗಿ ತನ್ನ ಕಡೆಯಿಂದ ಬರೆದಿರುವ ಗದ್ಯದ ಮಾತುಗಳೆಲ್ಲ ಭಾಗವತನು ಮಾಡುವ ಕಾರ್ಯವಿಧಾನವನ್ನು ಹೋಲುವಂತಿರುವುದರಿಂದ, 'ಶೂನ್ಯಸಂಪಾದನೆ'ಯು ಯಕ್ಷಗಾನಕ್ಕೆ ಹತ್ತಿರವಾಗುವ ಶಿಲ್ಪವಿಧಾನವನ್ನು ಹೊಂದಿದೆ.

'ಶೂನ್ಯಸಂಪಾದನೆ'ಯು ಪ್ರಭುದೇವರ ಶೂನ್ಯಸಂಪಾದನೆ ಎಂದೇ ಕೀರ್ತಿಸಲ್ಪಟ್ಟಿದೆ. ಅದು ಆ ಕೃತಿಯಲ್ಲಿ ಅವನಿಗಿರುವ ಪ್ರಾಧಾನ್ಯವನ್ನು ಸೂಚಿಸುವಂತೆಯೂ ಇದೆ. ಅಲ್ಲಮನು ಮರ್ತ್ಯಕ್ಕೆ ಅವತರಿಸಿ ಬಂದಲ್ಲಿಂದ ಪ್ರಾರಂಭವಾದ ಕಥೆ ಅವನು ಕದಳಿಯಲ್ಲಿ ಕಣ್ಮರೆಯಾಗುವುದರೊಂದಿಗೆ ಕೊನೆಗೊಂಡಿದೆ. ಅವನ ಸಂಪರ್ಕಕ್ಕೆ ಬಂದ ಶರಣರೆಲ್ಲರೂ ಅವನಿಂದ ಪಡೆದ ಉಪದೇಶದ ಫಲವಾಗಿ ಮೋಕ್ಷ ಅಥವಾ ಲಿಂಗಾಂಗ ಸಾಮರಸ್ಯವನ್ನು ಪಡೆದುಕೊಂಡರು. ರತ್ನಾಕರವರ್ಣಿಯು ತನ್ನ 'ಭರತೇಶ ವೈಭವ'ದ ಆದಿಯಲ್ಲಿ "ಅಧ್ಯಾತ್ಮವೆ ನಿಚಿತ ಪ್ರಯೋಜನವೆನಗೆ" ಎಂದು ಹೇಳಿಕೊಂಡಿದ್ದಾನೆ. ಇಲ್ಲಿಯ ಉದ್ದೇಶವೂ ಪ್ರಯೋಜನವೂ ಅಧ್ಯಾತ್ಮವೆ : ಅದು ಶರಣರೆಲ್ಲರ ಐಕ್ಯದೊಂದಿಗೆ ಸಫಲತೆಯನ್ನು ಪಡೆದಿದೆ. ಆ ಬಗೆಯ ಸಿದ್ಧಿಯನ್ನು ಪಡೆಯಬಯಸುವವರಿಗೆ ಅಲ್ಲಿ ತತ್ತ್ವಾದರ್ಶಗಳು ನಿರೂಪಿತವಾಗಿರುವುದಲ್ಲದೆ, ಆ ತತ್ತ್ವಾದರ್ಶಗಳನ್ನು ಮೈಗೂಡಿಸಿಕೊಂಡು ಯಶಸ್ಸು ಪಡೆದ ಶರಣರ ಉದಾಹರಣೆಗಳೂ ಸಾಧಕರಿಗೆ ಸ್ಫೂರ್ತಿದಾಯಕವಾಗುವಂತಿವೆ.

'ಶೂನ್ಯಸಂಪಾದನೆ'ಯ ಕಥೆಯಲ್ಲಿ ಇತಿಹಾಸ, ಪುರಾಣ, ಪವಾಡ ಮುಂತಾದ ಎಲ್ಲವೂ ಸಮರಸಗೊಂಡಿವೆ. ಶರಣರೆಲ್ಲರೂ ಶಾಪವೇ ಮುಂತಾದ ಬಗೆಬಗೆಯ ಕಾರಣಗಳಿಂದಾಗಿ

'ಶೂನ್ಯಸಂಪಾದನೆ'ಯ ಕಥಾವಸ್ತುವಿಗೆ ತನ್ನದೇ ಆದ ಕಾವ್ಯತ್ವ ಲಭ್ಯವಾಗಿದೆ.

ಅಲ್ಲಮನ ವ್ಯಕ್ತಿತ್ವ ಭವ್ಯವೂ ಉನ್ನತವೂ ಆದುದು. ಜೀವಾತ್ಮಭಾವವನ್ನು ನೀಗಿಕೊಂಡು ಬ್ರಹ್ಮಾತ್ಮಭಾವದಲ್ಲಿ ನೆಲೆಗೊಂಡ ಅವನು ಜೀವನ್ಮುಕ್ತ. ಲೋಕಸಂಗ್ರಹಬುದ್ಧಿಯಿಂದ ಲೋಕಸಂಚಾರಮಾಡುತ್ತ ಮುಮುಕ್ಷುಗಳನ್ನು ಸಂಸಾರ ಸಾಗರದಿಂದ ಉದ್ಧರಿಸಿದನು. ಈ ಮಹಾನಾಟಕಕ್ಕೆ ಅವನೇ ನಾಯಕಮಣಿ. ಅವನೇನೂ ಹುಟ್ಟಿನಿಂದಲೇ ಸಿದ್ಧಪುರುಷನಲ್ಲ. ಮುಮುಕ್ಷುಗಳ ದೃಷ್ಟಿಯಲ್ಲಿ ಹುಟ್ಟೆಂಬುದೇ ಒಂದು ಶಾಪ : ಅದು ಭವರೋಗ. ಆ ಬಗೆಯ ಶಾಪಕ್ಕೆ ಒಳಗಾಗಿ ಕೈಲಾಸದಿಂದ ಇಳಿದು ಬಂದನೆಂಬುದು ಆ ಪುರಾಣ ಪ್ರಸಂಗಕ್ಕಿರುವ ಸಂಕೇತ. "ಮರ್ತ್ಯವೆಂಬುದು ಎನ್ನ ಕಮ್ಮಟ ! ಅಲ್ಲಿ ಇದ್ದಡೇನು ಇಲ್ಲಿ ಇದ್ದಡೇನು" ಎಂದು ಶಿವಗಣಪ್ರಸಾದಿಯು ಕಥಾರಂಭದಲ್ಲಿಯೇ ಶಿವನಿಂದ ಹೇಳಿಸಿರುವಲ್ಲಿ ಮರ್ತ್ಯಲೋಕಕ್ಕೂ ಮಾನವ ಜೀವಿತಕ್ಕೂ ಸಂದಾಯವಾಗಿರುವ ಗೌರವ ಪ್ರಕಟವಾಗಿದೆ. ಅಲ್ಲಮನು ಸಾಮಾನ್ಯರಂತೆಯೇ ಲೋಕದ ಸುಖದುಃಖಗಳಿಗೆ ಒಳಗಾದರೂ ಬೇಗನೆ ಅದರಿಂದ ಮುಕ್ತನಾದನು. ಕಾಮಲತೆಯು ಕಳೆದುಹೋಗುವುದೇ ಕಾರಣವಾಗಿ ಅವನ ಚಿತ್ತವು ವೈರಾಗ್ಯದಲ್ಲಿ ನೆಲೆಸಿತು : ಮುಂದೆ ಲೋಕವನ್ನೆಲ್ಲ ಬೆಳಗುವ ಪುಣ್ಯಮೂರ್ತಿಯಾದನು. ಪಿ. ವಿ. ನಾರಾಯಣ ಅವರು ಹೇಳಿರುವಂತೆ "ಅವನೇ ಇಲ್ಲಿ ಪ್ರಮಾಣ, ಮಿಕ್ಕವರೆಲ್ಲ ಅವನಿಂದ ಸೈ ಎನಿಸಿಕೊಳ್ಳಲು ಹೆಣಗುವವರು. ಅವನು ಪರೀಕ್ಷಕ, ಮಿಕ್ಕವರು ಪರೀಕ್ಷಾರ್ಥಿಗಳು. ಅವನು ಸ್ಥಾಯಿ, ಮಿಕ್ಕವರು ಚರರು."[31] ಅಲ್ಲಮನು ಅಧ್ಯಾತ್ಮದ ಪರಮೋಚ್ಚ ನೆಲೆಯಲ್ಲಿದ್ದರೂ ಇತರ ಶರಣರ ಸಾಧನೆ-ಸಿದ್ಧಿಗಳನ್ನು ಕಡೆಗಣಿಸಿದವನಲ್ಲ. ಮುಕ್ತಾಯಿ, ಸಿದ್ಧರಾಮ, ಅಕ್ಕಮಹಾದೇವಿ, ಬಸವಣ್ಣ, ಚೆನ್ನಬಸವಣ್ಣ ಮೊದಲಾದ ಎಲ್ಲರನ್ನೂ ಅವನು ಮುಕ್ತಕಂಠದಿಂದ ಸ್ತೋತ್ರ ಮಾಡಿದ್ದಾನೆ. ಮಿಕ್ಕ ಶರಣರೂ ಈ ಹೊಗಳಿಕೆ ಹೆಚ್ಚೇ ಆಯಿತು ಎನ್ನುವಷ್ಟುಮಟ್ಟಿಗೆ ಒಬ್ಬರನ್ನೊಬ್ಬರು ಕೊಂಡಾಡಿದ್ದಾರೆ. ಶರಣರ ಮೂಲಕ ವ್ಯಕ್ತವಾಗಿರುವ ಈ ಸೌಜನ್ಯ, ಒಬ್ಬರನ್ನೊಬ್ಬರು ಗೌರವಿಸುವ ಗುಣ ಇಂದಿನ ವಿದ್ಯಾವಂತ ಸಮಾಜಕ್ಕೊಂದು ದೊಡ್ಡ ಆದರ್ಶ. "ಆ ಹೊಗಳಿಕೆಯ ಮಾತುಗಳು ತೋರಿಕೆಯ ವಿನಯದ ನುಡಿಗಳಲ್ಲ ; ತಾತ್ತ್ವಿಕ ಏಕತೆಯ ಆಂತರಂಗಿಕ ಅನುಭಾವದಿಂದ ಮೂಡಿಬಂದವುಗಳು"[32] ಎಂದು ಎಚ್. ತಿಪ್ಪೇರುದ್ರಸ್ವಾಮಿಯವರು ಅವುಗಳ ಮರ್ಮವನ್ನು ಉಚಿತವಾಗಿ ಗುರ್ತಿಸಿದ್ದಾರೆ.

ಪ್ರಭುದೇವನ ಪಾತ್ರದ ತರುವಾಯ ಅದಕ್ಕೆ ಹೊಯ್‌ಕಯ್ಯಾಗುವಂತೆ ಶಿವಗಣಪ್ರಸಾದಿಯು ಬಸವಣ್ಣನವರ ಪಾತ್ರವನ್ನು ದಳದಳವಾಗಿ ಅರಳಿಸಿದ್ದಾನೆ. ಪ್ರಭುದೇವನ ವ್ಯಕ್ತಿತ್ವದ ವಿಶೇಷಕಾಂತಿಯನ್ನು ಬಣ್ಣಬಣ್ಣವಾಗಿ ಕ್ರೋಡೀಕರಿಸಿ ಅದನ್ನು ಕ್ರಾಂತಿ

ಪುರುಷರಾದ ಬಸವಣ್ಣನವರ ಮೇಲೆ ಹೊರಚೆಲ್ಲಿದ್ದಾನೆ: ಅವರ ಅಂದಚೆಂದಗಳನ್ನು ನಾನಾ ಕೋನಗಳಿಂದ ಪ್ರದರ್ಶಿಸಿದ್ದಾನೆ ಎಂಬ ಎಲ್. ಬಸವರಾಜು ಅವರ ಮಾತುಗಳು ಸೂತ್ರಪ್ರಾಯವಾಗಿವೆ.[33] ಅಲ್ಲಮ ಬಸವಣ್ಣನವರ ತರುವಾಯ ನಮ್ಮ ಮನಸ್ಸನ್ನು ಸೆಳೆಯುವವರೆಂದರೆ ಚೆನ್ನಬಸವಣ್ಣ ಮತ್ತು ಮಡಿವಾಳ ಮಾಚಯ್ಯ. ಸಮಸ್ಯೆಗಳು ಎದುರಾದಾಗಲೆಲ್ಲ ಅವರ ಅನುಭಾವ ದಾರಿದೀವಿಗೆಯಾಗಿದೆ.

ಅನಿಮಿಷನೆಂಬ ಗುರುವಿನಿಂದ ಅಲ್ಲಮನ ಮೋಕ್ಷಮಾರ್ಗವು ಪ್ರಶಸ್ತವಾಯಿತು. ತಾನು ಎಷ್ಟೇ ಪ್ರಬುದ್ಧನಾದರೂ ಸಾಧನೆಯ ಮಾರ್ಗದಲ್ಲಿ ಸದ್ಗುರುವೊಬ್ಬನ ಮಾರ್ಗದರ್ಶನ ಬೇಕಾಗುತ್ತದೆ ಎಂಬುದಕ್ಕೆ ಆ ಪ್ರಸಂಗ ಸಾಕ್ಷಿಯಾಗಿದೆ. "ಈ ಶ್ರೀಗುರುವಿನ ಕೈಯಲ್ಲಿ ನಾನು ಉಪದೇಶವ ಹಡೆದಹೆನು" (ಪು. ೩೬ ಗದ್ಯ) ಎಂದು ಪ್ರಭುವೇ ನಿಶ್ಚಯಿಸಿದನು. ಅದ್ವೈತದಲ್ಲಿ ನೆಲೆಗೊಂಡವನು ತಾನೇ ತಾನಾಗಿರಬೇಕು, ಮಾತು ಮೌನವಾಗಬೇಕು ಎಂದು ಹೇಳಿದರೂ ಲೋಕಸಂಗ್ರಹದಲ್ಲಿ ತೊಡಗಿದಾಗ ಮತ್ತೆ ಮಾತನ್ನೇ ಬಳಸಿ ಮಾರ್ಗದರ್ಶನ ಮಾಡಬೇಕಾಗುತ್ತದೆ ಎಂಬುದು ಮುಕ್ತಾತಾಯಿಯಾದ ಮುಕ್ತಾಯಕ್ಕನ ಪ್ರಸಂಗದಲ್ಲಿ ಸ್ಪಷ್ಟವಾಗಿದೆ. ಗುರೂಪದೇಶದಿಂದಲ್ಲದೆ ಮುಕ್ತಿ ಲಭಿಸದೆಂಬ ತತ್ತ್ವ ಅಲ್ಲಿಯೂ ಸ್ಫುಟಗೊಂಡಿದೆ. ಜ್ಞಾನದಿಂದಲ್ಲದೆ ಮೋಕ್ಷಸಾಧನೆಯಾಗದೆಂದು ಶಾಸ್ತ್ರಗಳು ಬೋಧಿಸಿವೆ. ಚಿತ್ತಶುದ್ಧಿಯಾಗುವವರೆಗೆ ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣ ಬುದ್ಧಿಯಿಂದ ಕರ್ಮ ಮಾಡಬೇಕು. ಕೊನೆಗೊಮ್ಮೆ ಆ ಕರ್ಮಗಳೂ ಕಳಚಿಹೋಗಿ ನಿಜನಿಷ್ಠೆಯಲ್ಲಿ ನಿಲ್ಲಬೇಕೆಂಬುದು ಸಿದ್ಧರಾಮನ ವೃತ್ತಾಂತದ ಮೂಲಕ ತಿಳಿಯುತ್ತದೆ. ಕೆರೆ ಕಟ್ಟೆ ಗುಡಿಗೋಪುರಗಳನ್ನು ಕಟ್ಟಿಸುತ್ತ ಕರ್ಮಯೋಗದಲ್ಲಿಯೇ ಮುಳುಗಿ ಹೋಗಿದ್ದ ಅವನನ್ನು ಪ್ರಭುದೇವನು ಜ್ಞಾನಮಾರ್ಗಪ್ರವೃತ್ತನಾಗುವಂತೆ ಮಾಡಿದನು.

ಕಲ್ಯಾಣಕ್ಕೆ ಬಂದಾಗ ಪ್ರಭುವನ್ನು ಸ್ವಾಗತಿಸಲು ಬಸವಣ್ಣನವರು ಶಿವಪೂಜೆಯಿಂದ ತಾವು ಎದ್ದುಬರಲಿಲ್ಲವಷ್ಟೆ! ಮುಂದೆ ಆ ಪ್ರಸಂಗವು ಸಂತರು ಬಂದಾಗ ಅವರ ವಿಚಾರದಲ್ಲಿ ಹೇಗೆ ನಿರಹಂಕಾರದಿಂದ ನಡೆದುಕೊಳ್ಳಬೇಕು ಎಂಬುದನ್ನು ಬೋಧಿಸುವಲ್ಲಿ ಯಶಸ್ವಿಯಾಗಿದೆ. ಮಹಾತ್ಮರು ನಮ್ಮ ಕಣ್ಣಮುಂದೆಯೇ ಇದ್ದರೂ ನಾವು ಅವರನ್ನು ಕಾಣಲಾರದವರಾಗುತ್ತೇವೆ, ಅದರ ಹಿರಿಮೆಯನ್ನು ಗುರುತಿಸುವಲ್ಲಿ ವಿಫಲರಾಗುತ್ತೇವೆ ಎಂಬುದು ಮರುಳುಶಂಕರದೇವರ ವೃತ್ತಾಂತದ ಮೂಲಕ ಚಿತ್ರಿತವಾಗಿದೆ. ಸಾಧನೆಯಲ್ಲಿ ಪರಮೋಚ್ಚಸ್ಥಿತಿಯನ್ನು ತಲುಪಿದವನನ್ನು ಮತದ ವಿಧಿನಿಷೇಧಗಳು ಕದಲಿಸಲಾರವು ಎಂಬುದು ಸಿದ್ಧರಾಮನ ಮತ್ತೊಂದು ಪ್ರಸಂಗದಲ್ಲಿ ವ್ಯಕ್ತವಾಗಿದೆ. ಸಾಧಕನಿಗೆ ಇಷ್ಟಲಿಂಗ ಬೇಕೇ ಹೊರತು ಸಿದ್ಧನಿಗೆ ಇರಲೇಬೇಕೆಂಬ ನಿಯಮವಿಲ್ಲ ಎಂಬ ರಹಸ್ಯ ಅಲ್ಲಿದೆ. ಲೋಕದ ಜನರು ತಪ್ಪು ತಿಳಿಯುವಂತಾಗಬಾರದು: ಅವರು ದಾರಿತಪ್ಪುವಂತಾಗಬಾರದು ಎಂಬುದಕ್ಕಾಗಿಯಷ್ಟೇ ಸಿದ್ಧರಾದವರೂ ವಿಧಿನಿಷೇಧಗಳನ್ನು ಪಾಲಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ಪರಿಷ್ಕರಣಕಾರರು ಸಿದ್ಧರಾಮನ ಲಿಂಗದೀಕ್ಷೆಯ ವೃತ್ತಾಂತವನ್ನು ಬೆಳೆಸಿರುವುದು.

ಅಕ್ಕಮಹಾದೇವಿಯಂತೂ ಹೆಣ್ಣೊಬ್ಬಳು ಪುರುಷನಿಗೆ ಸರಿಸಮನಾಗಿ ಆಧ್ಯಾತ್ಮದಲ್ಲಿ ಮೇಲೇರಬಲ್ಲಳೆಂಬುದಕ್ಕೆ ಸಾಕ್ಷಿಯಾಗಿದ್ದಾಳೆ. ಮೋಕ್ಷಕ್ಕೆ ಎಲ್ಲರೂ ಅರ್ಹರು, ಸ್ತ್ರೀಪುರುಷರೆಂಬ ಭೇದವಿಲ್ಲ ಎಂಬುದೂ ಅಲ್ಲಿ ಸೂಚಿತವಾಗಿದೆ. ಅಲ್ಲಮನು ದೇಶಸಂಚಾರವನ್ನು ಕೈಗೊಂಡು ಮುಮುಕ್ಷುಗಳನ್ನು ಉದ್ಧರಿಸಿದನೆಂಬುದು ಶಾಂತನೂ ಮಹಾಂತನೂ ಭವಾರ್ಣವವನ್ನು ದಾಟಿದವನೂ ಆದ ಸಂತನು ತೋರಿಸಬೇಕಾದ ಲೋಕಕಾರುಣ್ಯಕ್ಕೆ ಕನ್ನಡಿಯುಂತಿದೆ. ಅಲ್ಲಮನ ಆರೋಗಣೆಯಂತೂ ಅದ್ಭುತರಸಕ್ಕೆ ಶ್ರೇಷ್ಠ ಉದಾಹರಣೆ. ಆತ್ಮನ ಸರ್ವವ್ಯಾಪಕತೆಯನ್ನು ಸಿದ್ಧಪಡಿಸುವ ಪ್ರಸಂಗವದು. ಮಹಾಭಾರತದಲ್ಲಿ ಬರುವ ದೂರ್ವಾಸಾತಿಥ್ಯವನ್ನು ಅದು ನೆನಪಿಗೆ ತರುತ್ತದೆ. ಅಲ್ಲಮ ಹಾಗೂ ಎಲ್ಲ ಶಿವಶರಣರು ಐಕ್ಯರಾದುದು ಬದುಕಿನ ಪರಮಪುರುಷಾರ್ಥವನ್ನು ಪ್ರದರ್ಶಿಸಿದೆ. ಹೀಗೆ 'ಶೂನ್ಯಸಂಪಾದನೆ'ಯಲ್ಲಿ ಬಂದಿರುವ ಪ್ರತಿಯೊಂದು ಪ್ರಸಂಗವೂ ನಿರ್ದಿಷ್ಟವಾದ ಉದ್ದೇಶವನ್ನೂ ಪ್ರಯೋಜನವನ್ನೂ ಒಳಗೊಂಡಿದೆ. ಕಾವ್ಯವಾಗಿ ಆಸ್ವಾದನೀಯವಾಗಿರುವುದರ ಜೊತೆಗೆ ಪರಮಧರ್ಮವಾಗಿ ಬೋಧಪ್ರದವೂ ಆಗಿದೆ.

ಶಿವಗಣಪ್ರಸಾದಿಯು ಕಥಾಪ್ರಸಂಗವನ್ನು ಮುನ್ನಡೆಸಿಕೊಂಡು ಹೋಗಲು ನಡುನಡುವೆ ನುಡಿದಿರುವ ಗದ್ಯದ ಮಾತುಗಳ ಪ್ರಮಾಣ ಬಹಳ ಕಿರಿದು. ಆದರೆ ಆಡಿರುವ ಮಾತುಗಳೆಲ್ಲ 'ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು' ಎಂಬ ಗಾದೆಮಾತಿನಂತೆ ಸೂತ್ರಪ್ರಾಯವಾಗಿವೆ. ಅವುಗಳಲ್ಲಿ ಕಾವ್ಯಾತ್ಮಕಗುಣವಿದೆ. ಸರಸವಾದ ಓಟವಿದೆ. ಅಲ್ಲಮನು ಮೊದಲ ಬಾರಿ ಕಲ್ಯಾಣಕ್ಕೆ ಕಾಲಿಟ್ಟು ಬಸವಣ್ಣನವರ ಮಠದತ್ತ ಆಗಮಿಸುತ್ತಿದ್ದಾಗಿನ ವರ್ಣನೆಯನ್ನು ನೋಡಿ: "ಮುತ್ತಿನ ತೋರಣಮಂ ಕಟ್ಟಿ, ದೇವಾಂಗಮಂ ನಡೆಮಡಿಯಂ ಪಾಸಿ, ನವರತ್ನಖಚಿತದಿಂದೆಸೆವ ಮೇಲುಕಟ್ಟಂ ಕಟ್ಟಿ, ಷಡುಸಮಾರ್ಜನೆ ರಂಗವಾಲಿಯನಿಕ್ಕಿ, ಪಂಚಮಹಾವಾದ್ಯಂಗಳೊಡನೆ ಕಳಸಕನ್ನಡಿಯಿಂದಿದಿರುಗೊಂಡು, ಮುತ್ತುಮಾಣಿಕದಾರತಿಗಳಂ ಪಿಡಿದೆತ್ತಿ, ಮಂಗಳಸ್ವರದಿಂ ಪಾಡಿ, ಪರಮಹರ್ಷದಿಂ ಆ ಬಸವರಾಜದೇವರು ಕೈಗುಡೆ, ಮಡಿವಾಳ ಮಾಚಿತಂದೆಗಳು ಪಾಯವಧಾರೆಂದು ಉಗ್ಘಡಿಸೆ, ಸೊಡ್ಡಳಬಾಚರಸರ ಹೆಗಲಮೇಲೆ ಹಸ್ತಮಂ ಮಡಗಿ, ಚೆನ್ನಬಸವರಾಜದೇವರೊಡನೆ ನಸುನಗೆಯಿಂ ಪ್ರಸಂಗಿಸುತ್ತ, ಏಕಾಂತದ ಮಠಕ್ಕೆ ಬಿಜಯಂಗೆಯ್ದು ಮೂರ್ತಿಗೊಂಡಲ್ಲಿ..." (ವ. ೮೦೭ರ ಗದ್ಯ). ಅಲ್ಲಮನ ಸ್ವಾಗತಕಾಲದಲ್ಲಿ ನಡೆದ ಕ್ರಿಯೆಗಳು ಇಲ್ಲಿ ಬಿಡಿಬಿಡಿಯಾಗಿ ಚಿತ್ರಣಗೊಂಡಿವೆ. ಅಲ್ಲಮನು ನಡೆದು ಬರುತ್ತಿದ್ದ ಭಾವಭಂಗಿಯ ವರ್ಣನೆಯಂತೂ ಮನೋಹರ ಶಬ್ದಚಿತ್ರವಾಗಿದೆ. ಇಂತಹ ಹಲವು ಸಂದರ್ಭಗಳಲ್ಲಿ ಶಿವಗಣಪ್ರಸಾದಿಯ ಕವಿಹೃದಯ ಪ್ರಕಟವಾಗಿದೆ. ವಚನಗಳ ಸತತ ಮನನದಿಂದ ಆತನ ಗದ್ಯವೂ ವಚನಗಳ ಶೈಲಿಯಂತೆಯೇ ಸರಸವೂ ಲಯಬದ್ಧವೂ ಭಾವಸಾಂದ್ರವೂ ಆಗಿ ಪರಿಣಮಿಸಿದೆ. ಅವನು ಇನ್ನಷ್ಟು ವಾಚಾಳಿಯಾಗಿದ್ದರೆ ಚೆನ್ನಾಗಿತ್ತು; ಇನ್ನಷ್ಟು ಬರೆದಿದ್ದರೆ ಚೆನ್ನಾಗಿತ್ತು; ಏಕೋ ಈ ಮಿತಭಾಷಿತೆ ಎಂದು ಆಕ್ಷೇಪಿಸುವಷ್ಟುಮಟ್ಟಿಗೆ ಆ ಗದ್ಯವು ಪ್ರಭಾವಶಾಲಿಯಾಗಿದೆ.

ಹೀಗೆ 'ಶೂನ್ಯಸಂಪಾದನೆ'ಯು ಕನ್ನಡಸಾಹಿತ್ಯದ ಅನರ್ಘ್ಯ ರತ್ನಗಳಲ್ಲೊಂದು. ಶಾಸ್ತ್ರಗುಣ-ಕಾವ್ಯಗುಣ, ಮುಕ್ತಕಗುಣ-ಪ್ರಬಂಧಗುಣ—ಎಂಬೀ ಭಿನ್ನ ಗುಣಗಳನ್ನು

ಏಕೀಕರಣಗೊಳಿಸಿ ನಿರ್ವಹಿಸಿರುವ ಶಿವಗಣಪ್ರಸಾದಿಯ ಪ್ರತಿಭೆ ಮತ್ತು ಕಾರ್ಯಕ್ಷಮತೆಗಳು ಅಪೂರ್ವವಾದುವು. ಎನ್. ಎಸ್. ತಾರಾನಾಥರು ಹೇಳಿರುವಂತೆ "ವಚನಗಳು ಅಲ್ಲಿ ಸಂಕಲಿತವಾಗಿದ್ದರೂ ಅದು ಸಂಕಲನ ಗ್ರಂಥವಲ್ಲ. ಅಲ್ಲಿ ಕಥೆಯಿದೆ; ಸನ್ನಿವೇಶರಚನೆಯಿದೆ; ಪಾತ್ರಪರಿಕಲ್ಪನೆಯಿದೆ; ಧಾರ್ಮಿಕವಿಚಾರಗಳ ಪ್ರಸ್ತಾಪವಿದೆ; ಅನುಭಾವ ಅಧ್ಯಾತ್ಮಗಳ ಆವಿಷ್ಕಾರವಿದೆ."[34] "ಶೂನ್ಯಸಂಪಾದನೆ ವಚನಗಳ ಮೂಲಕವೇ ವಚನಕಾರರ ಆಲೋಚನೆ, ಸ್ವಭಾವ, ಅವರು ಎದುರಿಸಿದ ಸಮಸ್ಯೆಗಳು, ಕಂಡುಕೊಂಡ ಪರಿಹಾರ, ತಮ್ಮನ್ನು ತಿದ್ದಿಕೊಂಡ ಬಗೆ, ಸಮಾಜದ ಬಗ್ಗೆ ಇದ್ದ ಕಳಕಳಿ ಇತ್ಯಾದಿಗಳನ್ನು ಕಟ್ಟಿಕೊಡುವ ಗ್ರಂಥವಾಗಿ ಪ್ರತಿಭಾಶಾಲಿಯೊಬ್ಬನ ಒಂದು ಸಾರ್ಥಕ ಪ್ರಯೋಗವಾಗಿ, ಕನ್ನಡಸಾಹಿತ್ಯದ ಇತಿಹಾಸದಲ್ಲಿ ಗಂಭೀರವಾಗಿ ಗಮನಿಸಬೇಕಾದ ಒಂದು ಕೃತಿಯಾಗಿದೆ."[35]

ಅಲ್ಲಮಪ್ರಭುವೇ ನಾಯಕನಾಗಿರುವ ಮತ್ತೊಂದು ಕೃತಿಯೆಂದರೆ ಚಾಮರಸನ (ಸು. ೧೪೩೦) 'ಪ್ರಭುಲಿಂಗಲೀಲೆ'. ಎಂ. ಆರ್. ಶ್ರೀ. ಅವರು (೧೯೩೪) 'ಪ್ರಭುಲಿಂಗಲೀಲೆ'ಗಿಂತ 'ಶೂನ್ಯಸಂಪಾದನೆ'ಯೇ ಮೊದಲು ರಚಿತವಾದ ಕೃತಿಯೆಂದು ಸೂಚಿಸಿದ್ದರು.[36] ಎಂ. ಚಿದಾನಂದಮೂರ್ತಿಯವರು (೧೯೬೨) ಅದನ್ನು ಸಮರ್ಥಿಸಿದ್ದರೂ[37] ತೀ.ನಂ.ಶ್ರೀ. ಅವರು ಮಾತ್ರ ಅದನ್ನು ಒಪ್ಪಿಕೊಳ್ಳಲಿಲ್ಲ. "ಶಿವಗಣಪ್ರಸಾದಿ ಮಹಾದೇವಯ್ಯನ 'ಶೂನ್ಯಸಂಪಾದನೆ' ಚಾಮರಸನ 'ಪ್ರಭುಲಿಂಗಲೀಲೆ'ಗಿಂತ ಪ್ರಾಚೀನವೆಂದು ಅವರು ಪ್ರತಿಪಾದಿಸಿರುವುದನ್ನು ಓದಿದ ಮೇಲೂ ಅದಕ್ಕೆ ವಿರುದ್ಧವಾದ ನನ್ನ ಹಳೆಯ ಗ್ರಹಿಕೆಯನ್ನು ಮಾರ್ಪಡಿಸಿಕೊಳ್ಳಲು ನನಗೆ ಇನ್ನೂ ಆಗಿಲ್ಲ!" ಎಂದು ಅವರು ಬರೆದರು.[38] ಎಲ್. ಬಸವರಾಜು ಅವರು (೧೯೬೯) ಮೊದಲ ಎರಡು 'ಶೂನ್ಯಸಂಪಾದನೆ'ಗಳ ತರುವಾಯ 'ಪ್ರಭುಲಿಂಗಲೀಲೆ' ರೂಪುಗೊಂಡುದೆಂದು ವಿಶದಪಡಿಸಿದರು.[39] ಇತ್ತೀಚೆಗೆ (೧೯೮೮) ಚಿದಾನಂದಮೂರ್ತಿಯವರು 'ಪ್ರಭುಲಿಂಗಲೀಲೆ'ಯು ಶಿವಗಣಪ್ರಸಾದಿಯ ಕೃತಿಯ ತರುವಾಯದ್ದೆಂಬುದನ್ನಂತೂ ಅಚ್ಚುಕಟ್ಟಾಗಿ ಸಮರ್ಥಿಸಿದ್ದಾರೆ.[40] ಅದು ಸ್ವೀಕಾರಾರ್ಹವಾಗಿದೆ. ಈ ಹಿನ್ನೆಲೆಯಲ್ಲಿ ಶಿವಗಣಪ್ರಸಾದಿಯ ಕೃತಿಯಲ್ಲಿದ್ದ ಅಲ್ಲಮಕೇಂದ್ರಿತ ಕಥಾವಸ್ತು, ಸಂವಿಧಾನ, ಬೃಹನ್ನಾಟಕಗುಣ ಮೊದಲಾದುವು ಚಾಮರಸನನ್ನು ಆಕರ್ಷಿಸಿದುವೆಂಬುದು ಆ ಕೃತಿಯ ಪ್ರಬಂಧಗುಣದ ಹಿರಿಮೆಯನ್ನು ಸಾರುವ ಸಂಗತಿಯಾಗಿದೆ.

"ಸಂಪಾದನೆ ಎಂಬುದಕ್ಕೆ 'ಗಳಿಕೆ' ಎಂಬ ಅರ್ಥದ ಜೊತೆ ಕರ್ತೃವಿನ ಮನಸ್ಸಿನಲ್ಲಿ 'ಸಂವಾದ' ಎಂಬ ಅರ್ಥವೂ ಇರಬಹುದೆನಿಸುತ್ತದೆ. ಹೀಗಾಗಿ ಇದಕ್ಕೆ ಶೂನ್ಯದ ಗಳಿಕೆ, ಶೂನ್ಯವನ್ನು ಕುರಿತ ಸಂವಾದವೆಂದು ಎರಡು ಅರ್ಥಗಳನ್ನು ಹೇಳಬಹುದಾಗಿದೆ. ತಮಿಳಿನಲ್ಲಿ 'ಶೂನ್ಯಸಂಭಾಷಣ' ಹೆಸರಿನ ವೀರಶೈವ ಪರಿಭಾಷಾಪದವಿರುವುದನ್ನು ಇಲ್ಲಿ ನೆನೆಯಬಹುದು".[41] ಈ ಹಿನ್ನೆಲೆಯಿಂದಾಗಿ 'ಶೂನ್ಯಸಂಪಾದನೆ'ಯು ಅಪೂರ್ವವೂ ಉಜ್ವಲವೂ ಪ್ಲೇಟೋನ ಸಂಭಾಷಣೆಗಳಿಗೆ ಸಮಾನವೂ ಶಿವಾನುಭವಗೋಷ್ಠಿಯ ಮೂಲಕ ವಿಶಿಷ್ಟವೂ ಆದ ಸಂವಾದಪದ್ಧತಿಯ ಗ್ರಂಥವಾಗಿದೆ.[42]

## (೪) ಪ್ರಬಂಧಗುಣದ ವಿಸ್ತರಣೆ

'ಶೂನ್ಯಸಂಪಾದನೆ'ಯ ಪರಿಷ್ಕರಣಕಾರರು ಅದರಲ್ಲಿರುವ ತತ್ತ್ವವಿಚಾರಗಳಿಗೆ ಮನ ಸೋತಿರುವಂತೆಯೇ ಅದರ ಪ್ರಬಂಧಗುಣಕ್ಕೂ ಮಾರುಹೋಗಿದ್ದಾರೆ. ತಾವು ನೂತನ ವಾಗಿ ಬರೆದು ಸೇರಿಸಿರುವ ಪ್ರಸಂಗಗಳಲ್ಲಿ ನೂತನ ತತ್ತ್ವವಿಚಾರಗಳನ್ನು ಮಂಡಿಸಿರುವುದರ ಜೊತೆಗೆ ಸ್ವಾರಸ್ಯಕರ ಕಥಾವೃತ್ತಾಂತಗಳನ್ನೂ ಕೂಡಿಸಿಕೊಟ್ಟಿದ್ದಾರೆ. ಶೂನ್ಯಸಂಪಾದನೆ ಗಳ ಸಮಗ್ರ ಕಥಾಪರಿಚಯದ ಹಿನ್ನೆಲೆಯಲ್ಲಿ ಅವುಗಳ ಕಥಾವಸ್ತುವನ್ನು ಇಲ್ಲಿ ಸಂಗ್ರಹಿಸಿದೆ. ಅವೆಲ್ಲವೂ ಅಲ್ಲಮಪ್ರಭುವು ಮೊದಲಬಾರಿಗೆ ಕಲ್ಯಾಣಕ್ಕೆ ಬಂದು, ಮಹಾನುಭಾವಗೋಷ್ಠಿ ಯಲ್ಲಿ ಪಾಲ್ಗೊಂಡು ತರುವಾಯ ತೀರ್ಥಯಾತ್ರೆಗೆ ತೆರಳುವ ಪ್ರಸಂಗದ ಮಧ್ಯದಲ್ಲಿ ಕೂಡಿಕೊಂಡಿವೆ. ಹೆಚ್ಚು ಕಡಿಮೆ ಆ ಕಥಾಪ್ರಸಂಗಗಳಲ್ಲೂ ಪ್ರಭುದೇವನೇ ಕೇಂದ್ರಪುರುಷ ನಾಗಿದ್ದಾನೆ.

**ನುಲಿಯ ಚಂದಯ್ಯ (ಹಲಗೆದೇವ) :**[43] ನುಲಿಯ ಚಂದಯ್ಯನು ಹುಲ್ಲಿನಿಂದ ಹಗ್ಗಹೊಸೆದು, ಅದನ್ನು ಮಾರಾಟ ಮಾಡಿ, ಆ ದ್ರವ್ಯದಿಂದ ಜಂಗಮದಾಸೋಹವನ್ನು ನೆರವೇರಿಸುತ್ತಿದ್ದ ಶರಣ. ಒಂದು ದಿನ ಚಂದಯ್ಯನು ಹುಲ್ಲುಕೊಯ್ಯುತ್ತಿರುವಾಗ ಅವನ ಮಹಿಮೆಯನ್ನು ಪ್ರಕಟಿಸಬೇಕೆಂದು ಅವನು ಧರಿಸಿದ್ದ ಇಷ್ಟಲಿಂಗವು ಸರಿದು, ನೀರಿನಲ್ಲಿ ಬಿದ್ದುಹೋಯಿತು. ಜಂಗಮದಾಸೋಹವೆ ಪರಮಪದ ಎಂದು ತಿಳಿದಿದ್ದ ಅವನು 'ಬೇಕಾದರೆ ಲಿಂಗ ತಾನೇ ಬಂದೀತು' ಎಂದುಕೊಂಡು ಮನೆಯತ್ತ ಮರಳಿದನು. ಆಗ ಲಿಂಗವೇ ಪುರುಷಾಕೃತಿಯನ್ನು ತಾಳಿ ಚಂದಯ್ಯನನ್ನು ಹಿಂಬಾಲಿಸುತ್ತ ತನ್ನನ್ನು ಒಡ ಗೊಂಡು ಹೋಗಬೇಕೆಂದು ಬೇಡಿಕೊಂಡಿತು. ತರುವಾಯ ಮಡಿವಾಳ ಮಾಚಯ್ಯನ ಮಧ್ಯಸ್ಥಿಕೆಯಿಂದ ಚಂದಯ್ಯನು ಲಿಂಗವನ್ನು ಮನೆಗೆ ಕರೆದೊಯ್ದನಾದರೂ ಅದನ್ನು ಧರಿಸದೆ ಅದರ ಕೈಲೂ ಕಾಯಕಮಾಡಿಸತೊಡಗಿದನು. ಹಗ್ಗದ ಮಾರಾಟದ ಕೆಲಸ ಅದರ ಪಾಲಿಗೆ ಬಂತು. ಲಿಂಗವು ಹಗ್ಗವನ್ನು ಹೊತ್ತು ಬಸವಣ್ಣನವರ ಮನೆಗೆ ಹೋದಾಗ ಅವರು ಆ ವೃತ್ತಾಂತವನ್ನೆಲ್ಲ ತಮ್ಮ ಇಷ್ಟಲಿಂಗದಲ್ಲಿಯೇ ಕಂಡು, ಹಗ್ಗವನ್ನು ಕೊಂಡು, ಸಾವಿರ ಹೊನ್ನನ್ನು ಕೊಟ್ಟುಕಳುಹಿಸಿದರು. ಅಷ್ಟೊಂದು ದ್ರವ್ಯವನ್ನು ಕಂಡ ಚಂದಯ್ಯ ನಿಗೆ 'ಲಿಂಗವೇನು ಅದನ್ನು ಕಳವಿಂದ ತಂದಿತೋ' ಎಂಬ ಸಂದೇಹ ಹುಟ್ಟಿತು. ಮತ್ತೆ ಚಂದಯ್ಯನು ಮಡಿವಾಳ ಮಾಚಯ್ಯನನ್ನು ಕೂಡಿಕೊಂಡು, ಲಿಂಗಸಹಿತನಾಗಿ, ಅದನ್ನು ಧರಿಸುವುದೋ ಬೇಡವೋ ಎಂಬುದನ್ನು ನಿರ್ಧರಿಸಲು ಅನುಭವಮಂಟಪವನ್ನು ಹೊಕ್ಕನು. ಅಲ್ಲಿ ಅಲ್ಲಮನ ಸಮ್ಮುಖದಲ್ಲಿ ಚರ್ಚೆ ನಡೆಯಿತು. ಜಂಗಮಸೇವೆಯೇ ಸರ್ವಸ್ವವೆಂದಾದರೂ ಇಷ್ಟಲಿಂಗಧಾರಣೆಯನ್ನು ಕಡೆಗಣಿಸಲಾಗದೆಂಬ ನಿರ್ಣಯ ಅಲ್ಲಿ ಮೂಡಿಬಂದಿತು. ಅದನ್ನೊಪ್ಪಿ ಚಂದಯ್ಯನು ಮತ್ತೆ ಇಷ್ಟಲಿಂಗವನ್ನು ಧರಿಸಿಕೊಂಡನು : ಅವನ ಜಂಗಮದಾಸೋಹನಿಷ್ಠೆಯೂ ಲೋಕವಿಶ್ರುತವಾಯಿತು.

**ಆಯ್ದಕ್ಕಿ ಮಾರಯ್ಯ (ಗುಮ್ಮಳಾಪುರದ ಸಿದ್ಧಲಿಂಗದೇವ) :** ಬಸವಣ್ಣನವರ ಮಹಾಮನೆಯ ಪರಿಸರದಲ್ಲಿ ಚೆಲ್ಲಿಹೋಗಿರುತ್ತಿದ್ದ ಅಕ್ಕಿಯ ಕಾಳುಗಳನ್ನು ಆಯ್ದು ತಂದು

ಜಂಗಮದಾಸೋಹವನ್ನು ನಡೆಸುತ್ತಿದ್ದ ಶರಣನೆಂದರೆ ಆಯ್ದಕ್ಕಿ ಮಾರಯ್ಯ. ಅವನ ಮಡದಿ ಜ್ಞಾನವಂತಳಾದ ಲಕ್ಕಮ್ಮ. ಒಂದು ದಿನ ಮಾರಯ್ಯನು ಪ್ರಭುದೇವನ ಸುಜ್ಞಾನು ಭಾವ ಗೋಷ್ಠಿಗೆ ನಡೆದು, ಅಲ್ಲಿ ಕಾಯಕವೇ ಕೈಲಾಸವೆಂದು ಕೊಂಡಾಡುತ್ತ, ಅದು ಗುರುಲಿಂಗಜಂಗಮಗಳ ಸೇವೆಗಿಂತಲೂ ಮಿಗಿಲಾದುದೆಂದು ಬಣ್ಣಿಸಿದನು. ಅದಕ್ಕೆ ಅಲ್ಲಮಪ್ರಭುವು "ಕಾಯಕವನ್ನು ಮಾಡುತ್ತಲೇ ಅದಕ್ಕೆ ಮೀರಿದ ಪರಾತ್ಪರವಸ್ತುವನ್ನು ಅರಿಯಬೇಕು" ಎಂದು ಬೋಧಿಸಿದನು. ಅದು ಮಾರಯ್ಯನಿಗೆ ಇಷ್ಟವಾಯಿತು. 'ಘನಲಿಂಗದಲ್ಲಿ ಮನಮಗ್ನಯೋಗ'ವಾಗುವುದರ ಕಡೆಗೆ ಅವನ ಮನಸ್ಸು ಹರಿಯಿತು. ಅಷ್ಟು ಹೊತ್ತಿಗೆ ಅವನ ಪುಣ್ಯಾಂಗನೆ ಲಕ್ಕಮ್ಮನು ಬಂದು ಕಾಯಕಕ್ಕೆ ತಡವಾದುದರಿಂದ "ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ" ಎಂದು ಪ್ರಾರ್ಥಿಸಿದಳು. ಅದರಂತೆ ಹೋದ ಮಾರಯ್ಯನು ಎಂದಿಗಿಂತ ಹೆಚ್ಚು ಪ್ರಮಾಣದಲ್ಲಿ ಅಕ್ಕಿಯನ್ನು ಆಯ್ದು ತಂದನು. ಅದನ್ನು ಕಂಡ ಸತಿಯು "ಈಸಕ್ಕಿಯಾಸೆ ನಮಗೇಕಯ್ಯ" ಎಂದು ಹೇಳಿ, ಹೆಚ್ಚಿನದನ್ನು ತಂದ ಜಾಗಕ್ಕೇ ಸುರಿಯಿಸಿಬಿಟ್ಟಳು. ಆಸೆಪಟ್ಟು ಹೆಚ್ಚು ಹೆಚ್ಚು ಸಂಗ್ರಹ ಮಾಡುವುದು ಕಾಯಕ ತತ್ವಕ್ಕೆ ಹೊಂದುಗಡೆಯಾಗದೆಂದು ಅಸಂಗ್ರಹತತ್ವವನ್ನು ಬೋಧಿಸಿದಳು. ಅವಳ ನಿಲುವನ್ನು ಪ್ರಭುದೇವನಾದಿಯಾಗಿ ಎಲ್ಲ ಶರಣರೂ ಕೊಂಡಾಡಿದರು.

**ಮೋಳಿಗೆ ಮಾರಯ್ಯ (ಗುಳೂರು ಸಿದ್ಧವೀರಣ್ಣೊಡೆಯ) :** ಮಾರಯ್ಯನೆಂಬ ಶರಣನು ಕಾಶ್ಮೀರದೇಶಕ್ಕೆ ದೊರೆಯಾಗಿದ್ದನು. ಅವನ ಮಡದಿ ಮಹಾದೇವಮ್ಮ. ದೊರೆಯು ತನ್ನ ಸಿಂಹಾಸನವನ್ನು ತ್ಯಾಗಮಾಡಿ, ಸತಿಯೊಡಗೂಡಿ ಕಲ್ಯಾಣಕ್ಕೆ ಬಂದು ನೆಲೆಸಿದನು. ಸೌದೆಯೊಡೆದು ಮಾರುವ ಕಾಯಕವನ್ನು ಕೈಗೊಂಡು, ಜಂಗಮದಾಸೋಹ ಮಾಡುತ್ತ ದಿನಗಳೆಯುತ್ತಿದ್ದನು. ಜಂಗಮಮೂರ್ತಿಗಳು ಬಸವಣ್ಣನವರ ಮನೆಯಲ್ಲಿ ಷಡ್ರಸೋಪೇತವಾದ ಪದಾರ್ಥಗಳನ್ನು ಉಂಡರೆ, ಮೋಳಿಗಯ್ಯನ ಮನೆಗೂ ಬಂದು ಸಾಮಾನ್ಯ ಗಂಜಿಯನ್ನು ಕುಡಿದು ತೃಪ್ತರಾಗುತ್ತಿದ್ದರು. ಬಸವಣ್ಣನವರ ಮನೆಗೆ ಹೋದಾಗ ಅದರ ರುಚಿಯನ್ನು ಅತಿಶಯವಾಗಿ ಕೊಂಡಾಡುತ್ತಿದ್ದರು. ಅದು ಬಸವಣ್ಣನವರ ಕಿವಿಗೂ ಬಿತ್ತು. ಎರಡು ಜಾಳಿಗೆ ತುಂಬ ಹೊನ್ನನ್ನು ತುಂಬಿಕೊಂಡು ಮೋಳಿಗಯ್ಯನ ಮನೆಗೆ ಹೋದರು. ಆ ಹೊತ್ತಿನಲ್ಲಿ ಮೋಳಿಗಯ್ಯನಿರಲಿಲ್ಲ. ಮಹಾದೇವಮ್ಮ ಬಸವಣ್ಣನವರನ್ನು ಸತ್ಕರಿಸಿ ಗಂಜಿಯನ್ನು ಅವರಿಗೂ ಉಣಬಡಿಸಿದಳು. ಅದನ್ನುಂಡು ತೃಪ್ತರಾದ ಅವರು ತಾವು ಒಯ್ದಿದ್ದ ಹೊನ್ನನ್ನು ಮಜ್ಜನಶಾಲೆಯ ಮರೆಯಲ್ಲಿರಿಸಿ, ಮನೆಗೆ ಮರಳಿದರು. ಮಾರಯ್ಯನು ಬಂದ ಮೇಲೆ ಆ ಹೊನ್ನನ್ನು ಕಂಡು ಸಿಡಿಮಿಡಿಗೊಂಡನು. ಬಸವಣ್ಣನವರು ಮಾಡಿದ್ದೆಂದು ತಿಳಿದ ಬಳಿಕ "ಜನರನ್ನು ಮೆಚ್ಚಿಸುವ ಹಂಬಲ ಆ ಬಸವನಿಗೆ, ನಿಜ ಭಕ್ತಿಯಿಲ್ಲ" ಎಂದು ದೂರಿ, ಆ ಹೊನ್ನನ್ನೆಲ್ಲ ಇಬ್ಬರು ಜಂಗಮರಿಗೆ ದಾನವಾಗಿ ಕೊಟ್ಟುಬಿಟ್ಟನು. ತರುವಾಯ ಬಸವಣ್ಣನವರ ಮಹಾಮನೆಗೆ ಹೋಗಿ ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮರನ್ನು ಕರೆತಂದು, ಅವರ ಪಾದತೊಳೆದು, ಪೂಜೆಮಾಡಿ, ಅವರಿಗೆಲ್ಲ ಉಣಬಡಿಸಿದನು. ಅನಂತರ ಅವರ ಪಾದಜಲವನ್ನು ತನ್ನ ಮನೆಯಲ್ಲಿದ್ದ

ಕಟ್ಟಿಗೆಯ ಸೀಳುಗಳ ಮೇಲೆ ಪ್ರೋಕ್ಷಣೆ ಮಾಡಿದನು. ಅವೆಲ್ಲವೂ ಚಿನ್ನದ ದಂಡಗಳಾದುವು. ಮಾರಯ್ಯನು ಜಂಗಮರಿಗೆಲ್ಲ ಒಂದೊಂದು ಸುವರ್ಣದಂಡವನ್ನು ಕೊಟ್ಟು ಕಳುಹಿಸಿದನು. ಅದನ್ನು ಕಂಡ ಬಸವಣ್ಣನವರು "ಆ ದಂಪತಿಗಳು ಇಂತಹ ನಿರಾಶಾಮಹಾತ್ಮರು ಎಂಬುದನ್ನು ಅರಿಯದೆ ಹೋದೆನಲ್ಲ" ಎಂದು ಮರುಗಿದರು. ಎಲ್ಲ ಶರಣರೂ ಆ ದಂಪತಿಗಳ ಕಾಯಕನಿಷ್ಠೆ ಮತ್ತು ಜಂಗಮದಾಸೋಹದ ಅತಿಶಯವನ್ನು ಕೊಂಡಾಡಿದರು.

**ಘಟ್ಟಿವಾಳ ಮುದ್ದಣ್ಣ (ಬ್ಳೂಳೂರು ಸಿದ್ಧವೀರಣ್ಣೊಡೆಯ) :** ಘಟ್ಟಿವಾಳ ಮುದ್ದಣ್ಣನು ಪರಮವೈರಾಗ್ಯಮೂರ್ತಿಯೂ ನಿರಾಶಾಭರಿತನೂ ಆದ ಶರಣನಾಗಿದ್ದನು. ಒಂದು ದಿನ ಅವನು ಬಸವಣ್ಣನವರ ಮನೆಯ ಮುಂದೆ ನಿಂತು, ಅಲ್ಲಿಗೆ ಬಂದುಹೋಗುವ ಜಂಗಮಸಮೂಹವನ್ನು ಕುರಿತು "ಇವರು ತಮ್ಮ ಹೊಟ್ಟೆ ಹೊರೆದುಕೊಳ್ಳಲು ಕಾತರರಾಗಿರುವವರೇ ಹೊರತು ಜ್ಞಾನಜಂಗಮಸ್ಥಳಕ್ಕೆ ಸಲುವಳಿಯಾಗುವವರಲ್ಲ ; ಎಲ್ಲರೂ ಪ್ರತಗೇಡಿಗಳು" ಎಂದು ವಿಡಂಬಿಸಿದನು. ಅದರಿಂದ ಕೋಪಗೊಂಡ ಜಂಗಮರು ಘಟ್ಟಿವಾಳಯ್ಯನನ್ನು ನೋಯಿಸಿ, ಅವನ ಕೊರಳ ಇಷ್ಟಲಿಂಗವನ್ನು ಕಿತ್ತುಕೊಂಡರು. ಬಿರುನುಡಿಗಳನ್ನು ಆಡಲಾಗದೆಂದು ಅಲ್ಲಮಪ್ರಭುವು ಘಟ್ಟಿವಾಳಯ್ಯನಿಗೆ ಸಮಾಧಾನ ಹೇಳಿದರೂ ಅವನು ಜಂಗಮರನ್ನು ಮತ್ತೆಯೂ ಝಂಕಿಸಿದನು. ಬೆಟ್ಟದ ಗುಂಡು ಕಲ್ಲೊಂದನ್ನೇ ತಂದು ಅದನ್ನು ಹುಲ್ಲಿನ ಹಗ್ಗದಿಂದ ತನ್ನ ಕೊರಳಿಗೆ ಕಟ್ಟಿಕೊಂಡು ಪ್ರಭುದೇವಾದಿ ಶರಣರ ಸಮ್ಮುಖದಲ್ಲಿ ತನ್ನ ಜ್ಞಾನದ ನಿಲವನ್ನು ಪ್ರಕಟಿಸಿದನು. ತರುವಾಯ ಜಂಗಮರು ಆತನ ಇಷ್ಟಲಿಂಗವನ್ನು ಮರಳಿಸಿ "ಆ ಕಲ್ಲುಗುಂಡೇ ಬಚ್ಚಬರಿಯ ಪರಬ್ರಹ್ಮವೆಂದಾದರೆ ಅದೇಕೆ ನಿನ್ನ ಅಂಗೈಯೊಳಗೆ ಅಡಗಬಾರದು" ಎಂದು ಸವಾಲು ಹಾಕಿದರು. ಆಗ ಘಟ್ಟಿವಾಳಯ್ಯನು ಆ ಗುಂಡುಕಲ್ಲನ್ನು ತನ್ನ ಕರಸ್ಥಲದ ಲಿಂಗದಲ್ಲೇ ಅಡಗಿಹೋಗುವಂತೆ ಮಾಡಿದನು. ಅದನ್ನು ಕಂಡು ಎಲ್ಲ ಶರಣರೂ ಅವನನ್ನು ಕೊಂಡಾಡಿದರು. ಒಂದು ದಿನ ಆ ಘಟ್ಟಿವಾಳಯ್ಯನು ಕಲ್ಯಾಣದ ಬೀದಿಯಲ್ಲೇ ಲಿಂಗೈಕ್ಯನಾದನು. ಶರಣರು ಬಂದು ಆತನ ಸಮಾಧಿಕ್ರಿಯೆ ನಡೆಸಬೇಕೆಂದು ಶರೀರವನ್ನು ಮುಟ್ಟಿ ಎತ್ತುತ್ತಿದ್ದಂತೆ, ಅವರ ಹಸ್ತದಲ್ಲೇ ಆ ಕಾಯ ನಿರ್ವಯಲಾಯಿತು. ಅಲ್ಲಮಾದಿಗಳು ಅವನ ಹಿರಿಮೆಯನ್ನು ಕೊಂಡಾಡಿದರು. ಪರಬ್ರಹ್ಮವಸ್ತುವಿನ ಸರ್ವವ್ಯಾಪಕತೆಯನ್ನೂ ಇಷ್ಟಲಿಂಗ ಧಾರಣೆಯ ಮಹತ್ವವನ್ನೂ ಈ ಪ್ರಸಂಗವು ಸೂಚಿಸುತ್ತದೆ.

## ಸಂಖ್ಯಾಟಿಪ್ಪಣಿಗಳು

1. ಶಿವಗಣಪ್ರಸಾದಿ ಮತ್ತು ಅನ್ಯ ಪರಿಷ್ಕರಣಕಾರರ ಕಾಲವಿಚಾರ ಚರ್ಚೆಗೆ ನೋಡಿ : ಎಂ. ಚಿದಾನಂದಮೂರ್ತಿ, 'ಶೂನ್ಯಸಂಪಾದನೆಯನ್ನು ಕುರಿತು', ಮೈಸೂರು, ಪ್ರಥಮ ಮುದ್ರಣ, ೧೯೬೩, ದ್ವಿತೀಯ ಪರಿಷ್ಕೃತ ಮುದ್ರಣ, ಬೆಂಗಳೂರು, ೧೯೮೮, ಪು. ೩೪–೪೬ ; 'ಶಿವಗಣಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆ', ಆರ್. ಸಿ. ಹಿರೇಮಠ (ಸಂ.), ಧಾರವಾಡ, ೧೯೭೧, ಪ್ರಸ್ತಾವನೆ, ಪು. ೭–೧೦ ; ಎಂ. ಎಂ. ಕಲಬುರ್ಗಿ, ಶೂನ್ಯಸಂಪಾದನೆ : ಇನ್ನಷ್ಟು ವಿಚಾರಗಳು, 'ಮಾರ್ಗ', ೧, ಬೆಂಗಳೂರು, ೧೯೮೮, ಪು. ೩೭೯.

2. 'ಶಿವಗಣಪ್ರಸಾದಿ ಮಹಾದೇವಯ್ಯನ ಪ್ರಭುದೇವರ ಶೂನ್ಯಸಂಪಾದನೆ', ಚಿತ್ರದುರ್ಗ, ೧೯೬೯, ಪೀಠಿಕೆ, ಪು. ೫೫. ಅಧ್ಯಯನದ ಸೌಕರ್ಯಕ್ಕಾಗಿ ಅವರು ಒಟ್ಟು ಕೃತಿಯನ್ನು ಇಪ್ಪತ್ತೆರಡು ಭಾಗಗಳಾಗಿ ಮಾಡಿ ಸೂಕ್ತವಾದ ಶಿರೋನಾಮೆಗಳನ್ನು ಕೊಟ್ಟಿದ್ದಾರೆ. ಎಲ್. ಬಸವರಾಜು ಅವರು ಸಂಪಾದಿಸಿರುವ ಈ ಕೃತಿಯ ಪಾಠವನ್ನೇ ಉದ್ಧರಿಸಿರುವ ಎಡೆಗಳಲ್ಲೆಲ್ಲ ಬಳಸಿಕೊಳ್ಳಲಾಗಿದೆ.
3. 'ಶೂನ್ಯಸಂಪಾದನೆಯ ಪರಾಮರ್ಶೆ', ಧಾರವಾಡ, ೧೯೬೯. ಪು. ೫೬.
4. 'ಸಂಪಾದನೆಯ ಸೊಂಪು'. ಎಸಳೊಂದು, ಬೆಂಗಳೂರು, ೧೯೭೭, ಪು. ೧೭.
5. 'ಶಿವಗಣಪ್ರಸಾದಿ ಮಹಾದೇವಯ್ಯನ ಪ್ರಭುದೇವರ ಶೂನ್ಯಸಂಪಾದನೆ', ಪೂರ್ವೋಕ್ತ, ಪೀಠಿಕೆ, ಪು. ೫೦.
6. 'ಶೂನ್ಯಸಂಪಾದನೆ: ವಿವರಣಾತ್ಮಕ ಪರಿಚಯ', ಮೈಸೂರು, ೧೯೭೩, ಪು. ೨೮.
7. ಪಿ. ಜಿ. ಹಳಕಟ್ಟಿಯವರು ೧೯೩೦ರಲ್ಲಿ ಅದನ್ನು ಸಂಶೋಧಿಸಿ ಪ್ರಕಟಿಸಿದರು. ತರುವಾಯ ಸಂ. ಶಿ. ಭೂಸನೂರಮಠ ಅವರು 'ಗೂಳೂರ ಸಿದ್ಧವೀರಣ್ಣೊಡೆಯರು ಸಂಗ್ರಹಿಸಿದ ಪ್ರಭುದೇವರ ಶೂನ್ಯಸಂಪಾದನೆ' ಎಂಬ ಹೆಸರಿನಲ್ಲಿ ಅದನ್ನು ೧೯೫೮ರಲ್ಲಿ ಪ್ರಕಟಿಸಿದರು. ೧೯೬೫ರಲ್ಲಿ, ೧೯೮೬ರಲ್ಲಿ ಅದರ ಮರುಮುದ್ರಣಗಳಾದುವು. ಕರ್ನಾಟಕ ವಿಶ್ವವಿದ್ಯಾಲಯವು ಅದೇ ಕೃತಿಯ ಇಂಗ್ಲಿಷ್ ಅನುವಾದವನ್ನು ಮೂಲಸಹಿತವಾಗಿ, ವಿಸ್ತಾರವಾದ ವಿವರಣೆ-ವಿವೇಚನೆಗಳ ಸಹಿತವಾಗಿ ಐದು ಸಂಪುಟಗಳಲ್ಲಿ (೧೯೬೫-೧೯೭೨) ಪ್ರಕಟಿಸಿದೆ.
8-9. 'ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ', ಪೂರ್ವೋಕ್ತ, ಪೀಠಿಕೆ, ಪು. ೫೫: ಆ ಕೃತಿಯ ಮುನ್ನುಡಿಯಲ್ಲಿರುವ ಶ್ರೀ ಬೃಹನ್ಮಠ ಮಹಾಸಂಸ್ಥಾನದ ಮಹಾಸ್ವಾಮಿಗಳ ಮಾತು.
10. ಮೊದಲ 'ಶೂನ್ಯಸಂಪಾದನೆ'ಯ ಮತ್ತು ಅದರ ಪರಿಷ್ಕರಣಗಳಲ್ಲಿರುವ ಒಟ್ಟು ವಚನಗಳ ಸಂಖ್ಯೆಯನ್ನು ಎಲ್. ಬಸವರಾಜು ಅವರು ಎಣಿಸಿಕೊಟ್ಟಿರುವಂತೆ ಉಲ್ಲೇಖಿಸಿದೆ. ಪು. ೬೩.
11-12 'ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆ' ಪ್ರಕಟವಾಗಿದೆ. ಆರ್. ಸಿ. ಹಿರೇಮಠ (ಸಂ.), ಧಾರವಾಡ, ೧೯೭೨. ಗುಮ್ಮಳಾಪುರವು ಇಂದಿನ ತಮಿಳುನಾಡಿಗೆ ಸೇರಿರುವ ಸೇಲಂ ಜಿಲ್ಲೆಯ ಹೊಸೂರು ತಾಲ್ಲೂಕಿನ ಒಂದು ಪುಟ್ಟ ಗ್ರಾಮ. ಪ್ರಾಚೀನ ಕಾಲದಲ್ಲಿ ಅದೊಂದು ಸಾಂಸ್ಕೃತಿಕ ಮಹತ್ವದ ಪಟ್ಟಣವಾಗಿತ್ತೆಂಬುದಕ್ಕೆ ಅಲ್ಲಿ ಕೆಲವು ಕುರುಹುಗಳಿವೆಯೆಂದು ಸಂಪಾದಕರು ಈ ಕೃತಿಯ ಮುನ್ನುಡಿಯಲ್ಲಿ ಹೇಳಿದ್ದಾರೆ (ಪು. ೧೩); ಅಲ್ಲಿಯೇ ಅವರು ಸಿದ್ಧವೀರಣ್ಣೊಡೆಯನ ಗೂಳೂರು ತುಮಕೂರು ಜಿಲ್ಲೆಗೆ ಸೇರಿದ ಗ್ರಾಮವೆಂದು ಸೂಚಿಸಿದ್ದಾರೆ(ಪು.೧೭).
13-14 'ಶೂನ್ಯಸಂಪಾದನೆಯನ್ನು ಕುರಿತು', ಪೂರ್ವೋಕ್ತ, ಪು. ೧೬೪: ವಿವರಗಳಿಗೆ ನೋಡಿ: ಪು. ೧೬೮-೭೨.
15-16 'ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ', ಪೂರ್ವೋಕ್ತ, ಪು. ೫೭; ಪು. ೫೭.
17. 'ಕನ್ನಡ ಸಾಹಿತ್ಯ ಚರಿತ್ರೆ', ಮೈಸೂರು, ೧೯೫೩, ಪು. ೧೬೬.
18. 'ಶೂನ್ಯಸಂಪಾದನೆಯನ್ನು ಕುರಿತು', ಪೂರ್ವೋಕ್ತ, ಪು.೩೪
19. ಶೂನ್ಯಸಂಪಾದನೆ: ರಾಚನಿಕ ವಿವೇಚನೆ, 'ಮಾರ್ಗ', ೧, ಬೆಂಗಳೂರು, ೧೯೮೮, ಪು.೬೦೭-೦೮
20. ಶಿವನ ಶಾಪಕ್ಕೆ ಒಳಗಾಗಿ ಅಲ್ಲಮನು ಭೂಮಿಯಲ್ಲಿ ಅವತರಿಸಿದನೆಂಬುದು ಕೊನೆಯ ಇಬ್ಬರು ಪರಿಷ್ಕರಣಕಾರರಿಗೂ ಹಿಡಿಸಲಿಲ್ಲ. ಶಾಪದಿಂದ ಬಂದನೆಂದು ಹೇಳುವವನು ಇಪ್ಪತ್ತೆಂಟುಕೋಟಿ ನರಕದಲ್ಲಿ ಸೂರ್ಯಚಂದ್ರರಿರುವವರೆಗೂ ನರಕವನ್ನು ಅನುಭವಿಸುವನು. ಶಿವನ ಆನಂದ್ಯದ ನಿತ್ಯವೆನಿಸಿದ ಜಂಗಮವೆ ಭೂಲೋಕದ ಭಕ್ತರ ಹಿತಾರ್ಥವಾಗಿ ಪ್ರಭುದೇವನಾಗಿ ಅವತರಿಸಿದನು ಎಂದು ಅವರು ಈ ಪ್ರಸಂಗವನ್ನು ತಿದ್ದಿಕೊಂಡಿದ್ದಾರೆ.

21. ಗೂಳೂರು ಸಿದ್ಧವೀರಣ್ಣೊಡೆಯನ 'ಶೂನ್ಯಸಂಪಾದನೆ'ಯಲ್ಲಿ ಅಲ್ಲಮನು ಅನಿಮಿಷಯೋಗಿಯನ್ನು ಕಾಣುವುದಕ್ಕೆ ಮುನ್ನವೇ ಗೊಗ್ಗಯ್ಯನೆಂಬ ತೋಟಗಾರನಿಗೆ ಉಪದೇಶ ಮಾಡಿದನೆಂಬ ಸಂಗತಿ ನಿರೂಪಿತವಾಗಿದೆ.

22. ಗೂಳೂರು ಸಿದ್ಧವೀರಣ್ಣೊಡೆಯನು ಬಸವಣ್ಣನವರ ಪಾತ್ರಕ್ಕೆ ಹೊಂದಲಾರದೆಂಬ ಭಾವನೆಯಿಂದ ಪರಿಚಾರಕರ ಪ್ರಸಂಗವನ್ನು ಕೈಬಿಟ್ಟಿದ್ದಾನೆ. ಹಡಪದ ಅಪ್ಪಣ್ಣನೇ ಮೊದಲಿಗೆ ಬಸವಣ್ಣನವರ ಆಜ್ಞೆಯಂತೆ ಅಲ್ಲಮಪ್ರಭುವನ್ನು ಸ್ವಾಗತಿಸಲು ಬಂದನೆಂದು ಅವನು ನಿರೂಪಿಸಿದ್ದಾನೆ.

23. ವೀರಶೈವರು ಪ್ರಸಾದದ ಒಂದು ಕಣವನ್ನೂ ಹೊರಕ್ಕೆ ಎಸೆಯಬಾರದು ಎಂದಮೇಲೆ ಮರುಳಶಂಕರದೇವನಿಗೆ ಎಂಜಲ ಕುಳಿಯಲ್ಲಿ ಆಹಾರ ಸಿಕ್ಕುತ್ತಿದ್ದುದು ಹೇಗೆ ಎಂದು ಸಾ. ಶಿ. ಮರುಳಯ್ಯನವರು ಪ್ರಶ್ನಿಸಿದ್ದಾರೆ. ನೋಡಿ : 'ಶೂನ್ಯಸಂಪಾದನೆಗೊಂದು ಮುನ್ನುಡಿ', ಬೆಂಗಳೂರು, ೧೯೮೮, ಪು. ೧೨೭.

24. ಅಜಗಣ್ಣನ ಜೀವನಕ್ಕೆ ಸಂಬಂಧಿಸಿದಂತೆ ಕೆಲವು ವಿವರಗಳು ಹಲಗೆದೇವನ ಕೃತಿಯಲ್ಲಿವೆ. ಅಜಗಣ್ಣನೊಬ್ಬ ವಚನಕಾರನೂ ಆಗಿದ್ದನು ; ಆ ವಿವರಗಳು ಸ್ಫುಟಗೊಂಡಿರಲಿಲ್ಲ. ಎಂ. ಚಿದಾನಂದಮೂರ್ತಿ ಮತ್ತು ಎಸ್. ಶಿವಣ್ಣನವರು ಒಟ್ಟುಗೂಡಿ ಅವನ ಕೆಲವು ವಚನಗಳನ್ನೂ 'ಮಹಾಘನ ಸೋಮೇಶ್ವರ' ಎಂಬ ಅವನ ಅಂಕಿತವನ್ನೂ ನಿರ್ಧರಿಸಿಕೊಟ್ಟಿದ್ದಾರೆ. ವಿವರಗಳಿಗೆ ನೋಡಿ : ಅಜಗಣ್ಣನ ವಚನಗಳ ಅಭಿಜ್ಞೆ, 'ಶೂನ್ಯಸಂಪಾದನೆಯನ್ನು ಕುರಿತು', ಪೂರ್ವೋಕ್ತ, ಪು. ೧೯೫–೨೨೦.

25. ಹಲಗೆದೇವ ಮುಂತಾದ ಪರಿಷ್ಕರಣಕಾರರು ಸಿದ್ಧರಾಮನಿಗೆ ಲಿಂಗದೀಕ್ಷೆಯಾಯಿತೆಂದು ಬಣ್ಣಿಸಿ ಆ ಪ್ರಸಂಗವನ್ನು ವಿಸ್ತರಿಸಿದ್ದಾರೆ. ಅಂತಹ ಬಣ್ಣನೆಗಾಗಿಯೇ ತಾವು 'ಶೂನ್ಯಸಂಪಾದನೆ'ಯನ್ನು ಪರಿಷ್ಕರಿಸಬೇಕಾಯಿತೆಂದು ಅವರು ಹೇಳಿಕೊಂಡಿದ್ದಾರೆ. ಅಲ್ಲಮನ ಜೀವನ ಕಥೆಯನ್ನು ಪರಿಷ್ಕರಿಸುವುದೂ ಅವರ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ.

26. ಹಲಗೆದೇವನು ಕಿನ್ನರಿ ಬೊಮ್ಮಣ್ಣನ ಈ ಪ್ರಸಂಗವನ್ನು ಹೀಗೆ ವಿಸ್ತರಿಸಿದ್ದಾನೆ: ಕಿನ್ನರಿ ಬೊಮ್ಮಣ್ಣನು ಅಕ್ಕನನ್ನು ಕಂಡಾಗ "ಈಕೆ ಲಿಂಗಾನುಭಾವಸಂಪನ್ನೆಯಾದರೆ ಗುರು, ತಾಯಿ ಎಂದೇ ಭಾವಿಸಿ ಅವಳಿಗೆ ಶರಣು ಎನ್ನುತ್ತೇನೆ: ಹಾಗಲ್ಲದೆ ದೇಹಲಜ್ಜಾಭಿಮಾನ ಉಳ್ಳವಳಾದರೆ ಹೆಣ್ಣೆಂದು ಅವಳ ಕೈಹಿಡಿಯುತ್ತೇನೆ" ಎಂದು ನಿಶ್ಚಯಿಸಿ ಅವಳನ್ನು ತುಡುಕಿ ಹಿಡಿದನು. ಅಕ್ಕನಾದರೊ "ನನ್ನ ಶರೀರವನ್ನು ನಿನಗೆ ಒಪ್ಪಿಸಿದ್ದೇನೆ, ಮನಬಂದಂತೆ ಮಾಡಿಕೊ" ಎಂದಳು. ಆಗ ಬೊಮ್ಮಣ್ಣನು "ಸರ್ವಾಂಗಸ್ಥಾನಮಾನಂಗಳಂ ಪರುಷಿಸಿ ನೋಡಲು, ದೇಹಾಭಿಮಾನಗಳಿಲ್ಲದಿರಲಾತಂ, ಯೋನಿಯೊಳಂಗುಲಿ ಪ್ರವೇಶವಂ ಮಾಡುವಲ್ಲಿ ಚಿದ್ಭಸ್ಮ ಪೊದಗಲಾತಂ ನಡುಗಿ ಭೀತಾತುರ"ನಾಗಿ ಅವಳಿಗೆ ಶರಣಾಗತನಾದನು. ನೋಡಿ : ಎಲ್. ಬಸವರಾಜು, 'ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ', ಪೂರ್ವೋಕ್ತ, ಪುಟ ೧೬೦ರ ಅಡಿಟಿಪ್ಪಣಿ.

27. ಅಲ್ಲಮಪ್ರಭು ಮತ್ತು ಗೋರಕ್ಷರ ನಡುವೆ ಸಂವಾದ ನಡೆಯಿತೆಂದು ಗೂಳೂರು ಸಿದ್ಧವೀರಣ್ಣೊಡೆಯನು ಆ ಪ್ರಸಂಗವನ್ನು ಕೊಂಚ ಹಿಗ್ಗಿಸಿದ್ದಾನೆ.

28. ಬಿಜ್ಜಳನ ಕೊಲೆಗೆ ಬಸವಣ್ಣನವರೇ ಪ್ರೇರಣೆ ನೀಡಿದರೆಂದು ಗೂಳೂರು ಸಿದ್ಧವೀರಣ್ಣೊಡೆಯನು (ಸಂ. ಶಿ. ಭೂಸನೂರಮಠರು ಸಂಪಾದಿಸಿರುವ ಕೃತಿ, ಪು. ೩೯೪–೯೫) ಬಣ್ಣಿಸಿದ್ದಾನೆ. ಬಿಜ್ಜಳನು ಹರಳಯ್ಯ-ಮಧುವಯ್ಯಗಳ ಚಾರಿತ್ರ್ಯದಲ್ಲಿ ತಪ್ಪನ್ನು ಕಂಡು ಅವರ ಕಣ್ಣುಗಳನ್ನು ತೆಗೆಸಿದನು. ಇದರಿಂದ ಕೋಪಗೊಂಡ ಬಸವಣ್ಣನವರು "ಶಿವದ್ರೋಹಿ ಬಿಜ್ಜಳನನ್ನು ಕೊಂದು ಸತ್ಯವನ್ನು ಮೆರೆ" ಎಂದು ಜಗದೇವನಿಗೆ ಆಜ್ಞೆಮಾಡಿದರು. ಕಲ್ಯಾಣದಲ್ಲಿ ಕೋಲಾಹಲ

ವಾಯಿತು. ಜಗದೇವನು ಆಗಲೆ ಮೊಲ್ಲೆಯ ಬ್ರಹ್ಮಯ್ಯನನ್ನು ಕೂಡಿಕೊಂಡು ಗದ್ದುಗೆಯ ಮೇಲೆ ಮಂಡಿಸಿದ್ದ ಬಿಜ್ಜಳನನ್ನು ಕೊಂದು ಇಬ್ಬರೂ ಶಿವಲೋಕವನ್ನು ಹೊಂದಿದರು. ಆ ಸುದ್ದಿಯನ್ನು ಕೇಳಿ ಬಸವಣ್ಣನವರು ಸಂತೋಷಪಟ್ಟು ಕೂಡಲಿಗೆಗೆ ನಡೆದರು ಎಂದು ಅವನು ವಿವರಿಸಿದ್ದಾನೆ. ಶಿವಗಣಪ್ರಸಾದಿಯಲ್ಲಿಲ್ಲದ ಈ ಹೆಚ್ಚಿನ ವಿವರಣೆಯಿಂದ ಬಸವಣ್ಣನವರ ಪಾತ್ರಕ್ಕೆ ಅಪಚಾರವೆಸಗಿದಂತಾಗಿದೆ.

29. 'ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ', ಪೂರ್ವೋಕ್ತ, ಪು. ೪೧.
30. 'ಶೂನ್ಯಸಂಪಾದನೆಯನ್ನು ಕುರಿತು', ಪೂರ್ವೋಕ್ತ, ಪುಟ ೧೭೯–೮೦.
31. 'ಶೂನ್ಯಸಂಪಾದನೆ'ಯ ಬಂಧವೈಶಿಷ್ಟ್ಯ, 'ವಚನ ನಿರ್ವಚನ', ಬೆಂಗಳೂರು, ೧೯೯೦, ಪುಟ ೧೮೪.
32. 'ಶೂನ್ಯಸಂಪಾದನೆ : ವಿವರಣಾತ್ಮಕ ಪರಿಚಯ', ಪೂರ್ವೋಕ್ತ, ಪು. ೧೮೪.
33. 'ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ', ಪೂರ್ವೋಕ್ತ, ಪು. ೪೩.
34. ಶಿವಗಣಪ್ರಸಾದಿ ಮಹಾದೇವಯ್ಯ, 'ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ', ೫, ಮೈಸೂರು, ೧೯೮೧, ಪು. ೭೮೯.
35. ಎಂ. ಚಿದಾನಂದಮೂರ್ತಿ, 'ವಚನ ಸಾಹಿತ್ಯ', ಬೆಂಗಳೂರು, ೧೯೭೫, ಪು. ೨೦೭.
36. 'ಪ್ರಭುಲಿಂಗಲೀಲೆಯ ಸಂಗ್ರಹ', ಮೈಸೂರು, ೧೯೩೪, ಪೀಠಿಕೆ, ಪು. ೪೩.
37-38 'ಶೂನ್ಯಸಂಪಾದನೆಯನ್ನು ಕುರಿತು', ಪೂರ್ವೋಕ್ತ, ಪು. ೪೩; ಅದೇ ಕೃತಿಗೆ ತೀನಂಶ್ರೀ ಅವರು ಬರೆದ ಮುನ್ನುಡಿಯಲ್ಲಿರುವ ಮಾತು, ಪು. ೪.
39. 'ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ', ಪೂರ್ವೋಕ್ತ. ಪು. ೪೮–೪೯.
40. 'ಶೂನ್ಯಸಂಪಾದನೆಯನ್ನು ಕುರಿತು', ಪೂರ್ವೋಕ್ತ, ಪು. ೧೮೬–೧೯೪.
41. ಎಂ. ಎಂ. ಕಲಬುರ್ಗಿ, ವಚನಗಳ ಸಂಗ್ರಹ, ಸಂಕಲನ, ಸಂಪಾದನ, 'ಮಾರ್ಗ' ೧, ಪೂರ್ವೋಕ್ತ, ಪು. ೩೭೧.
42. ರಂ. ಶ್ರೀ. ಮುಗಳಿ. 'ಕನ್ನಡ ಸಾಹಿತ್ಯ ಚರಿತ್ರೆ'. ಪೂರ್ವೋಕ್ತ, ಪು. ೧೬೬.
43. ನೋಡಿ : ಎಲ್. ಬಸವರಾಜು, 'ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ', ಅನುಬಂಧ ೧, ನುಲಿಚಂದಯ್ಯಗಳ ಸಂಪಾದನೆ.

# ಸಾಹಿತ್ಯಚರಿತ್ರೆಯ ಆಕರ : ತಾರಾವಳಿ, ಸ್ವರವಚನಗಳು

ಎನ್. ಬಸವಾರಾಧ್ಯ

ಸಾಹಿತ್ಯಚರಿತ್ರೆಯ ಆಕರಸಾಮಗ್ರಿ ವಿವಿಧವಾದುದು. ಅವುಗಳಲ್ಲಿ ಶಾಸನಗಳು, ಕೈಫಿಯತ್ತುಗಳು, ಬಖೈರುಗಳು, ಸ್ಥಳಪುರಾಣಗಳು, ಅಪ್ರಕಟಿತ ಹಸ್ತಪ್ರತಿಗಳು, ನಕ್ಷತ್ರ ಮಾಲಿಕೆಗಳು, ನಾಂದಿಪದ್ಯಗಳು, ಮುಕ್ತಕಗಳು, ಲಾಲಿಪದಗಳು, ಜೋಗುಳ ಪದಗಳು, ಸೋಬಾನೆಗಳು, ಲಾವಣಿಗಳು, ಬಿರುದಾವಳಿಗಳು, ಬೊಲ್ಲಿಗಳು, ತಾರಾವಳಿಗಳು, ಸ್ವರ ವಚನಗಳು—ಇವೇ ಮೊದಲಾದುವು ಸೇರುತ್ತವೆ.

ಪ್ರಸ್ತುತ ತಾರಾವಳಿ ಮತ್ತು ಸ್ವರವಚನ ಸಾಹಿತ್ಯ ಈ ದೃಷ್ಟಿಯಿಂದ ಅಮೂಲ್ಯ. ಆದರೆ ಈ ಪ್ರಕಾರಗಳು ಸಾಹಿತ್ಯದ ಇತರ ಪ್ರಕಾರಗಳಂತೆ ಪ್ರಸಿದ್ಧವಾಗಿಲ್ಲ ; ಬಹುಪಾಲು ಪ್ರಕಟವಾಗಿಲ್ಲ. ಆದುದರಿಂದ ಈ ಪ್ರಕಾರಗಳ ಬಗೆಗೆ ವಿವರವಾದ ಅಧ್ಯಯನ ಅಗತ್ಯ.

ತಾರಾವಳಿ ಸಾಹಿತ್ಯ ಸುಮಾರು ಹದಿನೈದನೆಯ ಶತಮಾನದಿಂದ ಈಚೆಗೆ ಬೆಳಕಿಗೆ ಬರಲು ಪ್ರಾರಂಭವಾಯಿತೆಂದು ಭಾವಿಸಬಹುದಾಗಿದೆ. ಬಹುಶಃ ವೀರಶೈವ ಕವಿಗಳೇ ಇದರ ಆದ್ಯಪ್ರವರ್ತಕರು. ಈವರೆಗೆ ಉಪಲಬ್ಧವಾಗಿರುವ ತಾರಾವಳಿಗಳೆಲ್ಲ ಬಹುಮಟ್ಟಿಗೆ ಶಿವಶರಣರಿಗೇ ಸಂಬಂಧಿಸಿವೆ.

ಈ ಸಾಹಿತ್ಯ ಪ್ರಕಾರದ ಸ್ವರೂಪವೇನು ? ತಾರಾವಳಿಗಳಲ್ಲಿ ಕೆಲವನ್ನು ಸಂಪಾದಿಸಿರುವ ಎಂ. ಎಸ್. ಬಸವರಾಜಯ್ಯನವರ ಮಾತು : "ತಾರೆ ಎಂದರೆ ನಕ್ಷತ್ರ. ಸಂಸ್ಕೃತದ ತಾರಾ ಎಂಬ ಪದವೇ ತಾರೆಯಾಗಿದೆ. ಆವಳಿ ಎಂದರೆ ಪಂಕ್ತಿ, ಸಾಲು, ಮಾಲಿಕೆ. ತಾರೆಗಳ ಆವಳಿ ತಾರಾವಳಿ. ವರ್ಣಾವಳಿ ವರ್ಣಮಾಲಿಕೆಗಳಂತೆ, ತಾರೆ (ನಕ್ಷತ್ರ)ಗಳು ಜ್ಯೋತಿಶ್ಶಾಸ್ತ್ರದಲ್ಲಿ ಇಪ್ಪತ್ತೇಳು ಇರುತ್ತವೆ. ಅವೇ ಅಶ್ವಿನ್ಯಾದಿ ರೇವತ್ಯಂತ ನಕ್ಷತ್ರ(ತಾರೆ)ಗಳು. ಜನ್ಮ ನಕ್ಷತ್ರಾನುಸಾರವಾಗಿ ನಾಮಕರಣ ಮಾಡುವ ಸಂಪ್ರದಾಯವು ಭಾರತೀಯರಿಗೆ ಬಹು ಹಳೆಯದು. ಪ್ರಕೃತ ಸಾಹಿತ್ಯಪ್ರಕಾರವಾದ 'ತಾರಾವಳಿ' ಎಂಬ ನಾಮಕರಣವು ಇಪ್ಪತ್ತೇಳು ನಕ್ಷತ್ರಗಳ (ಪದಗಳ) ಸಂಕೇತವಾಗಿ ಮಾತ್ರ ಪ್ರಾಪ್ತವಾಗಿದೆ. ಕೇವಲ ೨೭ ಪದಗಳಲ್ಲಿ ಓರ್ವ ಮಹಿತವ್ಯಕ್ತಿಯ, ಓರ್ವ ಮಹಿತಳ ಅಥವಾ ಒಂದು ಪೂಜ್ಯವಸ್ತುವಿನ ಸಮಗ್ರವಿಚಾರವನ್ನು ಸಂಕ್ಷಿಪ್ತವಾಗಿ ಆಣಿಮುತ್ತುಗಳಂತಹ ಸುಶ್ರಾವ್ಯ ತಾನುಬದ್ಧ

(ರಾಗ–ಕನ್ನಡ ಕಾಂಬೋಧಿ) ಕಾವ್ಯವಾಣಿಯಲ್ಲಿ ಬರೆದು ಮುಗಿಸತಕ್ಕ ಸಾಹಿತ್ಯವಾಗಿರುತ್ತದೆ." (ತಾರಾವಳಿ, ಸಂಪುಟ ೧: ಪ್ರಸ್ತಾವನೆ ಪುಟ IV)

ತಾರಾವಳೀಸಾಹಿತ್ಯ ಸ್ತೋತ್ರಪ್ರಧಾನವಾದುದು. ಈ ತಾರಾವಳಿಯ ಉಗಮ ವಿಕಾಸ ಉದ್ದೇಶ ಸ್ಪಷ್ಟಗೊಂಡಿಲ್ಲ. ಅಂತೆಯೇ ತಾರಾವಳಿ ಹೆಸರಿನಲ್ಲಿ ರಚಿತವಾಗಿರುವ 'ಗಗನ ತಾರಾವಳಿ' ಮುಂತಾದುವಕ್ಕೂ ಈ ಶಿವಶರಣರ ತಾರಾವಳಿಗಳಿಗೂ ಇರುವ ಸಾಮ್ಯ ವೈಷಮ್ಯಗಳು ವ್ಯಕ್ತವಾಗಿಲ್ಲ. ಇದು ಎಂತಾದರೂ ಇರಲಿ. ಈ ತಾರಾವಳಿಗಳು ಸ್ಥಳೀಯ ಇತಿಹಾಸವನ್ನು ಅರಿತುಕೊಳ್ಳುವಲ್ಲಿ ನೆರವಾಗುತ್ತವೆ. ಅಲ್ಲದೆ ಐತಿಹಾಸಿಕ ಮತ್ತು ಧಾರ್ಮಿಕ ಕ್ಷೇತ್ರಕ್ಕೆ ಹೊಸಸಾಮಗ್ರಿಗಳನ್ನು ಈ ತಾರಾವಳಿಗಳು ಒದಗಿಸುತ್ತವೆ. ಭಾವೈಕ್ಯಸಾಧನೆಗೂ ಇವು ನೆರವಾಗುತ್ತವೆ ಎಂಬುದು ಇವುಗಳ ಅವಲೋಕನದಿಂದ ತಿಳಿದು ಬರುತ್ತದೆ. ಈ ದೃಷ್ಟಿಯಿಂದ ಸಾಹಿತ್ಯಚರಿತ್ರೆಯ ರಚನೆಗೆ ಪೂರಕ ಮಾಹಿತಿ ದೊರಕಿದಂತಾಗುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ವೈವಿತ್ತ ವಚನಸಾಹಿತ್ಯ ಸಾಹಿತ್ಯಚರಿತ್ರೆಯಲ್ಲಿ ಬಹು ಪ್ರಮುಖವಾದುದು. ಈ ವಚನಸಾಹಿತ್ಯದ ಒಂದು ಪ್ರಕಾರವಾದ ಸ್ವರವಚನಗಳು ಗಮನಾರ್ಹವಾಗಿವೆ. ಈ ಸ್ವರವಚನಗಳು ಕಾಲದೃಷ್ಟಿಯಿಂದ ಈಚಿನವುಗಳಾದರೂ ಧಾರ್ಮಿಕ ಮತ್ತು ರಾಜಕೀಯ ಸಂಗತಿಗಳಿಂದ ಇವು ಮುಖ್ಯವಾಗಿವೆ. ಈ ಸ್ವರವಚನಗಳ ಸ್ವರೂಪವನ್ನು ಅರಿತುಕೊಳ್ಳುವುದು ಅಗತ್ಯವಾಗಿದೆ. ಕೆಸ್ತೂರ ದೇವರ ಸ್ವರವಚನಗಳನ್ನು ಸಂಪಾದಿಸಿರುವ ಎಂ. ಎಸ್. ಸುಂಕಾಪುರ ಅವರು ಹೀಗೆಂದಿದ್ದಾರೆ (ಪ್ರಸ್ತಾವನೆ, ಪು ೧) :

"ವಚನವೆಂಬುದು ಗದ್ಯಮುಖಿಯಾಗಿರುವಂತೆ ಪದ್ಯಮುಖಿಯೂ ಆಗಿದೆ. ಆದ್ದರಿಂದ ವಚನಸಾಹಿತ್ಯವನ್ನು ವೀರಶೈವ ಕವಿಗಳು ವಚನ, ಸ್ವರವಚನ—ಎಂದು ಇಬ್ಬಗೆಯಾಗಿ ಕರೆಯುತ್ತ ಬಂದಿದ್ದಾರೆ. ಸ್ವರವಚನವೆಂದರೆ ಅವರ ದೃಷ್ಟಿಯಲ್ಲಿ ರಾಗತಾಳಕ್ಕೊಡಂಬಟ್ಟ ಪದ್ಯವೆಂದೇ ಅರ್ಥ. ಸ್ವರವಚನಗಳನ್ನು ಅವರು ಗೀತ, ಪದ, ಹಾಡು ಎಂದು ಕರೆದಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಈ ಹಾಡುಗಳು ಪಲ್ಲ, ಅನುಪಲ್ಲಗಳನ್ನು ಹೊಂದಿದ್ದು ಹೇಳುವ ವಿಷಯಕ್ಕೆ ಅನುಗುಣವಾಗಿ ಬೇಕಾದಷ್ಟು ಪದ್ಯಗಳನ್ನು ಹೊಂದಿರುತ್ತವೆ. ಬಳಸಿಕೊಂಡ ಪದ್ಯಸಂಖ್ಯೆಗಳ ಮೇಲಿಂದ ಅವಕ್ಕೆ ತಾರಾವಳಿ, ಅಷ್ಟಕ, ಶತಕ ಮುಂತಾಗಿ ಹೆಸರಿಸಿದ್ದಾರೆ. ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ, ಅಷ್ಟಪದಿ ಮುಂತಾದುವುಗಳನ್ನು ಈ ಹಾಡುಗಳ ರಚನೆಗೆ ಬಳಸಿಕೊಂಡುದು ವೈವಿಧ್ಯಕ್ಕೆ ಮಾರ್ಗಮಾಡಿಕೊಟ್ಟಿದೆಯೆಂದೇ ಹೇಳಬೇಕು.

"ಸದ್ಯಕ್ಕೆ ತಿಳಿದ ಮಟ್ಟಿಗೆ ಹನ್ನೆರಡನೆಯ ಶತಮಾನದ ಶರಣರು ವಚನಗಳನ್ನು ಬರೆಯುವುದರ ಜೊತೆಗೆ ಹಾಡು (ಸ್ವರವಚನ)ಗಳನ್ನು ರಚಿಸಿದ್ದಾರೆ. ಅವರಲ್ಲಿ ಬಸವಣ್ಣ ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಪ್ರಭುದೇವ, ಸಕಲೇಶ ಮಾದರಸ, ನೀಲಲೋಚನೆ, ಶಂಕರದಾಸಿಮಯ್ಯ, ಮಡಿವಾಳ ಮಾಚಿದೇವ, ಅಜಗಣ್ಣ, ಹಾವಿನಹಾಳ ಕಲ್ಲಯ್ಯ, ಗಜೇಶ ಮಸಣಯ್ಯ ಮೊದಲಾದವರು ಪ್ರಮುಖರಾಗಿದ್ದಾರೆ. ವೀರಶೈವ ಧರ್ಮದಲ್ಲಿ ಅಡಕವಾಗಿರುವ ತತ್ತ್ವ, ನೀತಿ, ಭಕ್ತಿ, ಆಚಾರ, ವಿಚಾರ, ಶಿವಯೋಗಗಳನ್ನು

…ಬರೆದಿರುವ ಎಂದು ಹೇಳಲಾಗಿದೆ. ಅಲ್ಲದೆ ಬಸವಣ್ಣನವರ ಹಿರಿಯ ಸಮಕಾಲೀನನಾದ ಸಕಲೇಶ ಮಾದರಸನೇ ಸ್ವರವಚನಗಳನ್ನು ರಚಿಸಿದವರಲ್ಲಿ ಮೊದಲಿಗನೆಂದೂ ಅಭಿಪ್ರಾಯಪಡಲಾಗಿದೆ. ವಾಸ್ತವವಾಗಿ ಬಸವಾದಿ ಪ್ರಮಥರು ಸ್ವರವಚನಗಳನ್ನು ಬರೆದಿರುವಂತೆ ಎಲ್ಲಿಯೂ ಉಕ್ತವಾಗಿಲ್ಲ. ಅಷ್ಟೇ ಅಲ್ಲ, ಹಸ್ತಪ್ರತಿಗಳಲ್ಲಿ ಇವರ ವಚನಗಳನ್ನು ಸ್ವರವಚನಗಳೆಂದು ಹೇಳಿರುವುದು ಎಲ್ಲಿಯೂ ಕಂಡುಬಂದಿಲ್ಲ. ಹದಿನಾರನೆಯ ಶತಮಾನದ ಈಚಿನ ಹಸ್ತಪ್ರತಿಗಳಲ್ಲಿ ಸ್ವರವಚನಗಳ ಉಲ್ಲೇಖವಿದೆ. ಕೇವಲ ಹಾಡುವುದಕ್ಕಾಗಿ ಸ್ವರವಚನಗಳು ರಚಿತವಾಗಿವೆ ಎಂಬುದು ನಿರ್ವಿವಾದ. ಈ ವಚನಗಳಲ್ಲಿ ಪ್ರಾಸ ಅನುಪ್ರಾಸಗಳನ್ನು ರಾಗತಾಳಗಳನ್ನೂ ಪರಿಪಾಲಿಸಿಕೊಂಡು ಬಂದಿರುವುದರಿಂದ ಇವು ಹಾಡುವುದಕ್ಕಾಗಿಯೇ ರಚಿತವಾದ ಹಾಡುಗಳೆಂಬುದು ಸ್ಪಷ್ಟವಾಗುತ್ತದೆ. ಇದು ಎಂತಾದರೂ ಇರಲಿ ಈ ವಚನಗಳಲ್ಲಿನ ಹಲವಾರು ಉಲ್ಲೇಖಗಳಿಂದ ಸಾಹಿತ್ಯಚರಿತ್ರೆಗೆ ಮಹತ್ತರವಾದ ಮಾಹಿತಿ ಲಭ್ಯವಾಗಿರುವುದಂತೂ ಸ್ಪಷ್ಟವಾಗಿದೆ.

ತಾರಾವಳಿ ಮತ್ತು ಸ್ವರವಚನ ಪ್ರಕಾರಗಳು ಸಾಹಿತ್ಯಚರಿತ್ರೆಯ ರಚನೆಗೆ ಎಷ್ಟರ ಮಟ್ಟಿಗೆ ನೆರವಾಗಬಲ್ಲವು ಎಂಬುದನ್ನು ಒಂದೆರಡು ದೃಷ್ಟಾಂತಗಳಿಂದ ಅರಿತುಕೊಳ್ಳಬಹುದಾಗಿದೆ. ಇಮ್ಮಡಿ ಮುರಿಗಾ ಗುರುಸಿದ್ಧ ವಿರಚಿತ ಮುರಿಗೆ ತಾರಾವಳಿಯಲ್ಲಿನ ಚಾರಿತ್ರಿಕಾಂಶಗಳು ಹಲವು ದೃಷ್ಟಿಗಳಿಂದ ಪ್ರಮುಖವಾಗಿವೆ. ಮುರಿಗೆ ದೇಶಿಕೇಂದ್ರರು ಮೈಸೂರು ರಾಜರ ಸಭೆಯಲ್ಲಿ ಲಿಂಗಾಚಾರವಾದವನ್ನು ಮಂಡಿಸಿದುದು ; ದುರಾಚಾರಿ ಜಂಗಮರಿಗೆ ಕರುಣೆದೋರಿ ಬೋಧಿಸಿ ಪರಿವರ್ತಿಸಿದುದು ; ಭಾಗಾನಗರದ ಬಾದಷಹನ ಭಕ್ತಿಗೆ ಪಾತ್ರವಾದುದು : ಲಿಂಗಸಂಸ್ಕಾರ ಮಾಡಿ ಕೈಹಿಡಿದು ಸದಾಚಾರದಿಂದ ಬಾಳುತ್ತಿದ್ದ ಗದುಗಿನ ಬಣಜಿಗನೊಬ್ಬನ ಭಕ್ತಿ ಬಿನ್ನಹವನ್ನು ಸ್ವೀಕರಿಸಿದುದು ; ಗದುಗಿನ ಬಣಜಿಗರು ಎದುರಾದಾಗ ಅವರ ಗರ್ವಭಂಗ ಮಾಡಿ ಶಿವಧರ್ಮದ ನಿಲವಿನ ನೈಜ ನಿರೂಪಣೆ ಮಾಡಿದುದು ; ಖೂನಿಯ ಆರೋಪ ಹೊರಿಸಿದ ಸಿಂಗೇರಿಯ ದುಷ್ಟರನ್ನು ಮೆಟ್ಟಿ ಗದುಗಿನ ದಾಕಿನ ದೇಸಾಯಿಯಿಂದ ವಿಜಯಪ್ರಶಸ್ತಿ ಸ್ವೀಕರಿಸಿದುದು ; ಹರಪನಹಳ್ಳಿಯ ಬಸವಭೂಪಾಲ, ಸುಧಾಪುರದ (ಸೋದೆ) ಸದಾಶಿವನೃಪ, ಗುತ್ತೊಳಲಪುರದ ಬಸವರಾಯ, ಘಣೆಪುರದ ಪ್ರವೀರಭೂಪ, ಲಕ್ಷ್ಮೇಶ್ವರದ ಕೆಂಚಣಗೌಡ, ಕಳ್ಳಹುಣಸೆಯ ದೇವಣಗೌಡ—ಇವರೇ ಮೊದಲಾದವರಿಗೆ ಅನುಗ್ರಹಮಾಡಿದುದು ; ಚಿಮ್ಮಲಗಿರಿ ದುರ್ಗ (ಚಿತ್ರದುರ್ಗ) ದಲ್ಲಿ ನೆಲಸಿ ಅನುಗ್ರಹಿಸಬೇಕೆಂದು ಭಕ್ತಿಯಿಂದ ಪ್ರಾರ್ಥಿಸಿಕೊಂಡ ಚಿತ್ರದುರ್ಗದ ಮದಕೇರಿ ಕಸ್ತೂರಿ ಭರಮಭೂಪಾಲನಿಗೆ ಕೃಪೆದೋರಿ ಅಲ್ಲಿಯ ನೆಲ್ಲಿಯ

ಕಾಯಿ ಸಿದ್ಧೇಶ್ವರನ ಗವಿಯಲ್ಲಿ ನಿಂದುದು ; ತಮ್ಮ ಭಕ್ತರಿಗೆ ಮೊದಲೇ ಸೂಚಿಸಿದ್ದಂತೆ ಸ್ವಭಾನು ಸಂವತ್ಸರದ ಅಧಿಕ ಶ್ರಾವಣ ಶುದ್ಧ ಬಿದಿಗೆ ಸೋಮವಾರ ರಾತ್ರಿ ಮೂರೂವರೆ ಘಂಟೆಗೆ ಲಿಂಗೈಕ್ಯರಾದುದು—ಇವೇ ಮೊದಲಾದ ಮಾಹಿತಿಗಳು ದಾಖಲಾಗಿವೆ.

ಸುವ್ವಿಯ ಮಲ್ಲ ಎಂಬುವವನು 'ತೋಂಟದ ಸಿದ್ಧಲಿಂಗೇಶ್ವರನ ತಾರಾವಳಿ'ಯನ್ನೂ 'ಸಿದ್ಧೇಶ್ವರನ ಸಾಂಗತ್ಯ'ವನ್ನೂ ಬರೆದಿದ್ದಾನೆ. ಈತನ ತಾರಾವಳಿಯಲ್ಲಿ ಅಂದಿನ ವಾದ್ಯಗಳ ಹೆಸರುಗಳನ್ನೂ ಸ್ತ್ರೀಯರ ವಸ್ತ್ರಾಭರಣಗಳ ವಿವರಗಳನ್ನೂ ಕೊಟ್ಟಿದ್ದಾನೆ. ಹಾಗಲವಾಡಿ ರಾಜರಿಗೂ ಸಿದ್ಧೇಶ್ವರನಿಗೂ ಇದ್ದ ನಿಕಟಸಂಬಂಧವನ್ನೂ ಕಗ್ಗೆರೆ ಮತ್ತು ಎಡೆಯೂರುಗಳ ದೊರೆ ಬಸವೇಂದ್ರ, ಆತನ ರಾಣಿ ಗಂಗಾಂಬಿಕೆ ಎಂಬ ವಿಚಾರವನ್ನೂ ತಿಳಿಸಿದ್ದಾನೆ. ಇವು ಈ ತಾರಾವಳಿಯ ವಿಶೇಷಾಂಶಗಳು.

ಸ್ವರವಚನಗಳು ಸಾಹಿತ್ಯಚರಿತ್ರೆಗೆ ತಮ್ಮದೇ ಆದ ವಿಶಿಷ್ಟ ಮಾಹಿತಿಯನ್ನು ಒದಗಿಸಿವೆ ಎಂಬುದರಲ್ಲಿ ಸಂದೇಹವಿಲ್ಲ. ಕಡಕೋಳ ಮಡಿವಾಳೇಶ್ವರರ ಸ್ವರವಚನಗಳು ವಿಶಿಷ್ಟವಾದುವು. ಮಡಿವಾಳೇಶ್ವರರು ಮಹಾಂತರು. ಇವರ ಜೀವನದಲ್ಲಿ ಹಾಸುಹೊಕ್ಕಾದವರು ಹಲವಾರು ಮಂದಿ. ಧರ್ಮಸಮನ್ವಯ ದೃಷ್ಟಿಯಿಂದ ಇವರ ವಚನಗಳು ಪ್ರಸ್ತುತವಾಗಿವೆ. ಜೇವರ್ಗಿ ತಾಲ್ಲೂಕಿನ ಚೆನ್ನೂರ ಜಲಾಲಸಾಹೇಬ ಎಂಬುವನು "ಜಂಗಮನಾದ ಮೇಲೆ ಮನ ಲಿಂಗಮಾಡಿಕೊಂಡಿರಬೇಕು" ಎಂದು ಹಾಡಿದಾಗ ಮಡಿವಾಳಪ್ಪನವರು ಕೊಟ್ಟ ಪ್ರತ್ಯುತ್ತರ :

ಫಕೀರನಾಗಬೇಕಾದರೆ ಮನ ಧಿಕ್ಕಾರ ಮಾಡಿಕೊಂಡಿರಬೇಕೋ
ಸತ್ಯ ಉಳಿದು ಅಸತ್ಯವ ಕಡಿದು ಖತಲ್‌ರಾತ್ರಿ ಮಾಡಿರಬೇಕೋ
ಜೀತಪೀರ ಮಹಾಂತೇಶನ ಭಜಿಸುತ ನುತಿಸುತಾಲಯದೊಳಾಡಲಿ ಬೇಕೋ
ಸಬ್ ಕಹತೇ ಈಶ್ವರ ಅಲ್ಲಾ । ಇದರ ಬೇಫ್ ಯಾರಿಗೆ ತಿಳಿಯಲಿಲ್ಲ.॥ ॥ ಪಲ್ಲ ॥

ನಿರಾಕಾರ ಸೇ ಆಕಾರ ಹುವೇ। ವೇದಶಾಸ್ತ್ರಕ್ಕೆ ನಿಲುಕಿಲ್ಲ।
ಹಿಂದೂ ಮುಸ್ಲಮಾನ ಶಾಸ್ತ್ರ ಪಡತ ಹೈ। ಗುರುಮನಿ ಕೀಲ ಸಿಗಲಿಲ್ಲ ॥ ೧ ॥

ಲಾಯಕೆ ಗುರುಕು ಜಬ್ ಢೂಂಡ್ ಲಾಂಕೇ। ಏನು ಬೇಡಿದ್ದು ಕೊಡಬೇಕಲ್ಲಾ।
ತನು ಮನಧನ ಲೋಭ ಛೋಡಕರ್। ಆಗಬೇಕು ಗುರುವಿನ ಚೇಲಾ॥ ॥ ೨ ॥

ಹಮ್‌ಭಿ ಕಹತೇ ತುಮ್‌ಭಿ ಕಹತೇ। ಮೂಡಬ್ಯಾಡರಿ ಮ್ಯಾಲಿನ ಶೀಲ
ಗುರು ಮಡಿವಾಳನ ಹೋಕರೆ। ಬೂಲೆ ತೊಳಿಯಬೇಕರಿ ಒಳಗಿನ ಮೈಲಾ ॥೩॥

ಭಾವೈಕ್ಯದ ದೃಷ್ಟಿಯಿಂದ ಈ ಸಾಹಿತ್ಯಪ್ರಕಾರ ಮಹತ್ತರವಾದ ಪಾತ್ರವನ್ನು ನಿರ್ವಹಿಸಬಲ್ಲುದು. ಇದೇ ಅಲ್ಲದೆ ಪರವಾದಿ ಗಜಾಂಕುಶ ತಾರಾವಳಿ, ಪ್ರಭುನಟನ ತಾರಾವಳಿ, ಶಿಂಶುಮಾರನ ತಾರಾವಳಿ, ಗಣಂಗಳ ತಾರಾವಳಿ, ಜಂಗಮ ತಾರಾವಳಿ, ಲಿಂಗ ವಿಕಳಾವಸ್ಥೆಯ ವಚನಗಳು, ಲಿಂಗಸೂತ್ರದ ವಚನಗಳು, ಲಿಂಗಸ್ತೋತ್ರದ ವಚನಗಳು, ಸುಖಸಂಪಾದನೆಯ ವಚನಗಳು, ಸಕೀಲವಚನಗಳು, ಪಂಚಪರಮೇಷ್ಠಿಗಳ ಜೊಳ್ಳಿ, ಕೋಮಟಿಗರ ಜಾತಿ ಕೈಫಿಯತ್ತು, ದೇವೇಗೌಡನ ಹಳ್ಳಿಯ ಕೈಫಿಯತ್ತು, ಗುಂಡು

ಇವೇ ಮೊದಲಾದ ಪ್ರಕಾರಗಳು ಸಾಹಿತ್ಯಚರಿತ್ರೆಯ ರಚನೆಗೆ ಮೂಲ ಮತ್ತು ಪೂರಕ ಆಕರ ಸಾಮಗ್ರಿಯನ್ನು ಒದಗಿಸುವುದರಲ್ಲಿ ಸಂದೇಹವಿಲ್ಲ, ತಾರಾವಳಿ ಮತ್ತು ಸ್ವರವಚನ ಸಾಹಿತ್ಯ ಸ್ತೋತ್ರಪ್ರಧಾನವಾದ ಸಾಹಿತ್ಯವಾದರೂ ಇವುಗಳಲ್ಲಿ ನಿಹಿತವಾಗಿರುವ ಸ್ಥಳೀಯ ಐತಿಹಾಸಿಕ ಮಾಹಿತಿ, ವಿಶೇಷಸಂಗತಿಗಳು ಅಮೂಲ್ಯವಾದುವು.

ಪ್ರಶಸ್ತಿಗಳ ಸುವ್ವಿ, ಜಯಸ್ತೋತ್ರ ಬಿರುದಾವಳಿ ವಿವರ, ನೋಂಪಿಕಥೆಗಳು—

ಪ್ರಸ್ತುತ ಸಾಹಿತ್ಯಪ್ರಕಾರಗಳು ಧಾರ್ಮಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಐತಿಹಾಸಿಕ—ಇವುಗಳ ಬಗೆಗೆ ಪೂರಕ ಆಕರಸಾಮಗ್ರಿಯನ್ನು ಒದಗಿಸುತ್ತವೆ. ಅನೇಕ ಹೊಸ ವಿಷಯಗಳು ಬೆಳಕಿಗೆ ಬರುತ್ತವೆ. ಸಾಹಿತ್ಯಚರಿತ್ರೆಯ ಪುನರ್ನಿರ್ಮಾಣದಲ್ಲಿ ತಾರಾವಳಿ ಮತ್ತು ಸ್ವರವಚನಗಳು ತಮ್ಮವೇ ಆದ ವಿಶಿಷ್ಟಪಾತ್ರವನ್ನು ನಿರ್ವಹಿಸಿವೆ.

**ಬಿ. ಎಸ್. ಸಣ್ಣಯ್ಯ**

**ಕವಿ, ಕಾವ್ಯ :** ಇದು ಮನ್ಮಥನೆಂಬ ಅಪರನಾಮವನ್ನು ಹೊಂದಿರುವ ಪ್ರದ್ಯುಮ್ನನ ಕಥೆ. ನೇಮಿನಾಥನ ಚರಿತೆಯಲ್ಲಿ ಬರುವ ಪ್ರದ್ಯುಮ್ನನ ಉಪಕಥೆಯೇ ಈ ಕಾವ್ಯದ ವಸ್ತು. ಆದುದರಿಂದಲೇ ಕವಿ ಪ್ರತಿ ಆಶ್ವಾಸದ ಕೊನೆಯಲ್ಲಿಯೂ

ಇದು ನೇಮಿಜಿನರಾಜಕ್ರಮಬಿಸರುಹ । ಮಧುಪಾಯಮಾನವಿಲಾಸ
ಮದನಚಕ್ರೇಶನ ಪುಣ್ಯಚರಿತ್ರದೊಳ್ । ಮೊದಲಾಶ್ವಾಸಮೊಪ್ಪಿದುದು (೧-೬೬)

ಎಂಬಂತೆ ಒಕ್ಕಣಿಸುತ್ತಾನೆ.

ಈ ಕೃತಿಯಾಗಲಿ ಇದರ ಕರ್ತೃವಾಗಲಿ ಇದುವರೆಗೆ ಕನ್ನಡ ಸಾಹಿತ್ಯಕ್ಕೆ ಪರಿಚಿತವಾಗಿಲ್ಲ. ಶ್ರವಣಬೆಳಗೊಳದ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮಿಜಿಯವರು ಇತ್ತೀಚಿಗೆ ಸಂಗ್ರಹಿಸಿರುವ ಕೆಲವು ಅಪೂರ್ವ ಕೃತಿಗಳಲ್ಲಿ ಇದು ಸೇರಿದೆ.

೧೨ ಆಶ್ವಾಸಗಳನ್ನೂ ೧೯೨೧ ಪದ್ಯಗಳನ್ನೂ ಒಂದು ವಚನಭಾಗವನ್ನೂ ಒಳಗೊಂಡಿರುವ ಈ ಸಾಂಗತ್ಯ ಕೃತಿಯಲ್ಲಿ ಕೆಲವು ವೃತ್ತಗಳೂ ಇವೆ. ಇರುವ ೧೨ ಆಶ್ವಾಸಗಳಲ್ಲಿ ಹನ್ನೊಂದನ್ನು ಕಥಾನಿರೂಪಣೆಗೂ ಕೊನೆಯ ಒಂದನ್ನು ಸ್ವವಿಷಯಕ್ಕೂ ಕವಿ ಉಪಯೋಗಿಸಿದ್ದಾನೆ. ಆದರೆ ತನ್ನ ಕಾಲದ ವಿಚಾರವಾಗಿ ಏನನ್ನೂ ಹೇಳುವುದಿಲ್ಲ. ೧೨ನೆಯ ಆಶ್ವಾಸದ ಮೊದಲಲ್ಲಿ

ಕಾಮಚಕ್ರೇಶನೀ ಪರಿಯೊಳು ಮಾಂಗಲ್ಯ । ಭಾಮಿನಿಯೊಡಗೂಡಿದನು
ಆ ಮಹಿಮನ ಕಥೆವೇಳಿದೆನ್ನಯ ಜನ್ಮ । ಭೂಮಿಯನಾನುಸುರುವೆನು (೧೨-೨)

ಎಂದು ಹೇಳಿ, ಮುಂದೆ ಹೀಗೆಂದಿದೆ : ದೇವಗಿರಿಯ ದಕ್ಷಿಣಕ್ಕೆ ಹೊಯ್ಸಳ ದೇಶವಿದೆ; ಅದರ ಮಧ್ಯದಲ್ಲಿ ಕನಕಗಿರಿ ; ಈ ಕನಕಾಚಲದ ಮೂಡಗಡೆ ಇರುವ ಮಲಯ ಗ್ರಾಮವು ದೈವಭಕ್ತರಿಂದ ಪಂಡಿತರಿಂದ ಸಕಲಶಾಸ್ತ್ರಕೋವಿದರಿಂದ ತುಂಬಿದೆ.

ಆತನ ಸುತ ದೇವರಸನು ಜಿನಪಂಕ। ಜಾತಾಂಘ್ರಿಭೃಂಗನು ನಾನು
ಈ ತೆಱದಿಂ ಸದ್ಭಕ್ತಿಯಿಂ ತವೆ ಮಾನ। ಕೇತನ ಕಥೆವೇಳಿದೆನು (೧೨-೨೬)

ಅಂಬುಜಾಸ್ತ್ರನ ಕಥೆವೇಳ್ದೆನು ಭವ್ಯೌಘ। ಸಭೆಗೆ ಕಾಲಕ್ಷೇಪವಾಗಿ
ಶುಭಪರಿಣಾಮದೊದವು ದೊರಕಲಿಯೆಂ। ದಭವನ ಕಥೆವೇಳಿದೆನು (೧೨-೨೭)

—ಎಂದು ತನ್ನ ಕೃತಿರಚನೆಯ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾನೆ.

ಈ ವಿವರಗಳಿಂದ ಕವಿ ದೇವರಸನು ಕನಕಗಿರಿಯ ಮೂಡಣ ದಿಕ್ಕಿನಲ್ಲಿರುವ ಮಲಯ ಗ್ರಾಮದವನೆಂದೂ ಬ್ರಹ್ಮನೆಂಬವನ ಮಗನೆಂದೂ ವ್ಯಕ್ತವಾಗುತ್ತದೆ. ಇಲ್ಲಿ ಬರುವ ಕನಕಗಿರಿ ಮಲಯಗ್ರಾಮಗಳನ್ನು ಗಮನಿಸಿದರೆ, ಚಾಮರಾಜನಗರ ತಾಲ್ಲೂಕಿನಲ್ಲಿರುವ ಜೈನಕ್ಷೇತ್ರವಾದ ಮಲೆಯೂರಿನವರಿರಬಹುದೆಂದು ಹೇಳಬಹುದಾಗಿದೆ. ಇದಕ್ಕೆ ಪೂರಕ ವಾಗಿ ದೇವರಸನು ಸ್ತುತಿಸುವ ವಿಜಯಜಿನ ಮತ್ತು ಪಾರ್ಶ್ವನಾಥ ಪ್ರತಿಮೆಗಳು ಕನಕಗಿರಿ ಯಲ್ಲಿರುವುದೂ ಒಂದಾಗಿದೆ. ಮಲೆಯೂರಿನವನಾದ ದೇವಚಂದ್ರನ 'ರಾಜಾವಳಿ ಕಥಾ ಸಾರ'ದಲ್ಲಿ ಬರುವ "ಈ ಮಲೆಯೂರ ಗ್ರಾಮಮಂ ಈ ಗಿರಿಯ ವಿಜಯಜಿನ ಪ್ರತಿಮೆಯ ಪೂಜಾರ್ಥವಾಗಿ ಸರ್ವಮಾನ್ಯವಾಗಿ ಕೊಡುವೆನೆಂದು...ಮಲೆಯೂರ ಗ್ರಾಮಮಂ ಶಾಸನದತ್ತವಾಗಿ ಕೊಟ್ಟ" (ಪು. ೨೦೦-೧), "ಕನಕಗಿರಿಯೊಳ್ ತಮ್ಮ ನಿಷಿಧಿಯ ದೀಪ ಮಾಲೆಯ ತೋರಣಗಂಬಂಗಳಂ ಮಾಡಿಸಿ ಚತುಸ್ಸಂಗಮಂ ಪಾರ್ಶ್ವಪ್ರತಿಮೆಯೆಂಬ ಪ್ರತಿಮೆಯಂ ಚತುಸ್ಸಂಗಸಹಿತಂ ಮಾಡಿಸಿದರಾ ಕಾಲದೊಳ್" (ಪು. ೨೦೧) ಎಂಬು ವನ್ನು ಗಮನಿಸಬಹುದು.

'ರಾಜಾವಳಿ ಕಥಾಸಾರ'ದಲ್ಲಿ ದೇವರಸ, ಕರಣಿಕ ದೇವರಸ, ದೇವರಸೋಪಾಧ್ಯಾಯ ಎಂಬ ಹೆಸರುಗಳು ಕಂಡುಬರುತ್ತವೆ. ಇವುಗಳಲ್ಲಿ "ಮಹಿಸೂರೊಳು ನಿಂದೆಮ್ಮ ಪಿತಾ ಮಹಂ ದೇವರಸಂ ಕನಕಗಿರಿಯ ಪದ್ಮಾವತಿ ಮಹಾದೇವಿ ಎಮಗಿಷ್ಟ ದೇವರಾದುದರಿಂ ದೇವರ ಸೇವೆಯಂ ಮಾಡಿಬರುವಲ್ಲಿ" (ಪು. ೨೨೪) ಎಂಬ ಹೇಳಿಕೆಯಲ್ಲಿ ಬರುವ ದೇವ ರಸನೇ ದೇವಚಂದ್ರನ ಪಿತಾಮಹನಿರಬಹುದು. ೧೭೭೦–೧೮೪೧ರವರೆಗಿದ್ದ ದೇವ ಚಂದ್ರನ ಪಿತಾಮಹ ಈ ದೇವರಸಕವಿ ಎಂದು ಹೇಳುವುದಾದರೆ ಎರಡು ತಲೆಮಾರಿನಷ್ಟು ಹಿಂದಿನವನಾದ ಈತನ ಕಾಲವನ್ನು ಸು. ೧೭೫೦ ಎಂದು ನಿರ್ಣಯಿಸಬಹುದು. ಆದರೆ ಈತನು ದೇವಚಂದ್ರನ ಪಿತಾಮಹನೇ ಎಂದು ಹೇಳಲು ಸಾಕಷ್ಟು ಆಧಾರಗಳಿಲ್ಲ.

ಕವಿಯ ಕಾಲನಿರ್ಣಯಕ್ಕೆ ಇದು ಬಾಹ್ಯಕಾರಣವಾದರೆ, ಆಂತರಿಕವಾಗಿ

ಹಲಗೆ ಬಳಪವಿಡಿಯದ ಪದವಿಟ್ಟದ । ನಳಿದು ಬರೆಯದಗ್ಗಳಿಕೆ
ಬಳಸಿಹ ಲೇಖಕರ್ಗಳ ಕಂಠಪತ್ರ । ದೊಳುಲುಹುಗುಂದದಗ್ಗಳಿಕೆ (೯–೫೬)

ಎಂಬುದರಿಂದಾಗಿ, ಸು. ೧೫ನೆಯ ಶತಮಾನದಲ್ಲಿದ್ದ ಕುಮಾರವ್ಯಾಸನಿಗಿಂತ ಈಚೆಗಿದ್ದವ ನೆಂದು ಹೇಳಬಹುದು. ಜೊತೆಗೆ ಈತನು ಸ್ತುತಿಸಿರುವ ಕವಿಗಳಲ್ಲಿ ರತ್ನಾಕರನೇ ಕೊನೆಯವ ನಾಗಿದ್ದಾನೆ. ಎಂದರೆ ೧೫೫೭ರಲ್ಲಿದ್ದ ರತ್ನಾಕರನಿಗಿಂತ ಈಚಿನವನಾಗುತ್ತಾನೆ. ಹಸ್ತ ಪ್ರತಿಯ ಲಿಪಿವಿನ್ಯಾಸ ಸಾಕಷ್ಟು ಪ್ರಾಚೀನವಾಗಿ ಕಂಡುಬರುತ್ತದೆ. ಈ ಎಲ್ಲ ದೃಷ್ಟಿ

ಯಿಂದ ದೇವರಸನ ಕಾಲವನ್ನು ಸು. ೧೬೫೦ ಎಂದು ನಿರ್ಧರಿಸಬಹುದಾಗಿದೆ.

ಆದಿಯ ೨೪ ಪದ್ಯಗಳಲ್ಲಿ ೨೪ ತೀರ್ಥಂಕರರನ್ನು ಸ್ತುತಿಸಿರುವ ಕವಿಯು ವಿಜಯನ್ನೂ ಪಾರ್ಶ್ವನಾಥ ಬೆಳುಗುಳದ ಭುಜಬಲಿಗಳನ್ನೂ ಪಂಚಾಚಾರ್ಯರನ್ನೂ ಸರಸ್ವತಿಯನ್ನೂ ಪ್ರಾರ್ಥಿಸುತ್ತಾನೆ. ಅನಂತರ ಪೂಜ್ಯಪಾದ ಶ್ರುತಕೀರ್ತಿ ಗಜಗ ಗುಣವರ್ಮ ರುದ್ರಭಟ್ಟ ವಿಜಯ ಪಂಪ ಪೊನ್ನ ಜನ್ನ ನೇಮಿಚಂದ್ರ ಸುಜನೋತ್ತಂಸ ಅಸಗ ಮಧುರ ಅಗ್ಗಳ ರತ್ನಾಕರರನ್ನು ನೆನೆಯುತ್ತಾನೆ. ಆಕರದ ಬಗೆಗೆ ಇದು ಸೂಚನೆ :

> ಪೂರ್ವಶಾಸ್ತ್ರಂಗಳೊಳಗೆ ಕಂತುಚಕ್ರೇಶ। ನೋರ್ವನ ಕಥೆಯನೆ ನೋಡಿ
> ಉರ್ವರೆಗಿದು ಹೊಸತೆಂಬಂತೆ ಪೇಳುವೆ। ಸರ್ವಜನರು ಕೇಳುವುದು (೧-೫೨)

**ಕಥಾಸಾರ :** ಇಂದ್ರನಿರ್ಮಿತ ದ್ವಾರಾವತೀ ನಗರ ಸಕಲ ಸಂಪತ್ತುಗಳಿಂದ ಕೂಡಿದ್ದಿತು. ಅಲ್ಲಿನ ರಾಜನಾದ ಕೃಷ್ಣನು ಅಷ್ಟೈಶ್ವರ್ಯಗಳಿಂದ ಕೂಡಿ ರಾಜ್ಯಪರಿಪಾಲನೆ ಮಾಡುತ್ತಿದ್ದನು. ಅಣ್ಣ ಬಲಭದ್ರನೂ ತಮ್ಮ ಕೃಷ್ಣನೂ ಎರಡು ಕಲ್ಪವೃಕ್ಷಗಳಂತೆ ಮೆರೆಯುತ್ತಿದ್ದರು ; ಕೃಷ್ಣನಿಗೆ ದೀಪಾಯನ ಮತ್ತು ಗೋವಿಂದ ಎಂಬಿಬ್ಬರು ತಮ್ಮಂದಿರಿದ್ದರು. ಕೃಷ್ಣನು ರುಗ್ಮಿಣಿ ಸತ್ಯಭಾಮೆ ಎಂಬ ಪತ್ನಿಯರೊಡನೆ ಸುಖಸಂಕಥಾವಿನೋದಗಳಿಂದ ಕಾಲಕಳೆಯುತ್ತಿರಲು,ರುಗ್ಮಿಣಿಗೆ ಗಂಡುಮಗುವೊಂದು ಜನಿಸಿತು. ಆತನ ಪೂರ್ವವೈರಿಯಾದ ಧೂಮಕೇತುವೆಂಬುವನು ಮಗುವನ್ನು ಎತ್ತಿಕೊಂಡು ಹೋಗಿ ಕಾಡಿನಲ್ಲಿ ಬಿಸಾಡಿದನು. ಮಗುವನ್ನು ಕಾಣದೆ ಚಿಂತಿತಳಾದಳು ರುಗ್ಮಿಣಿ. ಹದಿನಾರು ವರ್ಷಗಳ ನಂತರ ಮಗನು ಹಿಂದಿರುಗುವನೆಂಬ ಅಶರೀರವಾಣಿಯಾಯಿತು. ಕಾಳಶಂಬರ—ಹೇಮಮಾಲೆ ಎಂಬ ಖೇಚರ ದಂಪತಿಗಳು ವಿಹಾರಾರ್ಥವಾಗಿ ಪುಷ್ಪಕ ವಿಮಾನದಲ್ಲಿ ಹೋಗುತ್ತಾ ಕಲ್ಲುಗುಂಡುಗಳ ಮಧ್ಯೆ ಬಿದ್ದಿದ್ದ ಮಗುವನ್ನು ಕಂಡು ಎತ್ತಿಕೊಂಡು ಹೋಗಿ ಮನ್ಮಥನೆಂದು ನಾಮಕರಣಮಾಡಿ ಸಾಕಿ ಸಲಹಿದರು. ಸಕಲ ವಿದ್ಯೆಗಳಲ್ಲಿಯೂ ಪಾರಂಗತನಾದ ಪ್ರದ್ಯುಮ್ನನಿಗೆ ಕಾಳಶಂಬರನು ಯುವರಾಜ ಪಟ್ಟಗಟ್ಟಿದನು. ಕಾಳಶಂಬರನಿಗೆ ಶತ್ರುವಾದ ಅಗ್ನಿರಾಜನೆಂಬುವನನ್ನು ಪ್ರದ್ಯುಮ್ನನು ಸದೆಬಡಿದನು.

ಪ್ರದ್ಯುಮ್ನನ ರೂಪಯೌವನಗಳಿಗೆ ಮನಸೋತ ಸಾಕುತಾಯಿ ಕಾಂಚನಮಾಲೆ ಆತನನ್ನು ಕೂಡಬಯಸಿದಳು. ಅದಕ್ಕಾಗಿ ತನಗೆ ದೊರೆತಿದ್ದ ಪ್ರಜ್ಞಪ್ತಿವಿದ್ಯೆಯನ್ನು ಪ್ರದ್ಯುಮ್ನನಿಗೆ ನೀಡಿದಳು. ಅದನ್ನು ಸ್ವೀಕರಿಸಿದ ಆತನು ಆ ವಿದ್ಯೆಯನ್ನು ಸಾಧಿಸಲು ವಿಜಯಾರ್ಧಪರ್ವತಕ್ಕೆ ತೆರಳಿದನು. ಅಲ್ಲಿದ್ದ ಮುನಿಗಳಿಗೆ ವಂದಿಸಿ ತನ್ನ ಭವಾವಳಿಯ ವಿವರವನ್ನು ತಿಳಿಸಬೇಕೆಂದು ಕೇಳಿಕೊಂಡನು. ಅದನ್ನು ಮುನಿಗಳು ಹೀಗೆ ವಿವರಿಸಿದರು :

ಸ್ವೀಕರಿಸಿ ತಪಸ್ಸು ಮಾಡಿ ಮುಕ್ತಿ ಪಡೆದರು. ಅವರಲ್ಲಿ ಮಧುವೆಂಬುವನೇ ರುಗ್ಮಿಣಿಯ ಮಗನಾಗಿ ಕಾಳಶಂಬರನಿಗೆ ದೊರೆತು ಪ್ರದ್ಯುಮ್ನನಾದನು.

ಇದನ್ನು ತಿಳಿದ ಪ್ರದ್ಯುಮ್ನನು ಪಟ್ಟಣಕ್ಕೆ ಹಿಂದಿರುಗಿದನು. ಪ್ರದ್ಯುಮ್ನನಿಂದ ತಿರಸ್ಕೃತಳಾದ ಕಾಂಚನಮಾಲೆ ಆವನ ಮೇಲೆ ಪತಿಗೆ ಚಾಡಿಹೇಳಿದಳು. ತಾನು ಸಾಕಿದ ಮಗನೇ ತನ್ನನ್ನು ಬಲಾತ್ಕಾರದಿಂದ ಕೂಡ ಬಯಸಿದನೆಂಬ ಆಕೆಯ ದೂರಿನಿಂದ ಕುಪಿತನಾದ ಕಾಳಶಂಬರನು ಪ್ರದ್ಯುಮ್ನನನ್ನು ಕೊಲ್ಲಲು ತನ್ನ ಇತರ ಮಕ್ಕಳಿಗೆ ಆಣತಿಯಿತ್ತನು. ಪ್ರದ್ಯುಮ್ನನ ಶೌರ್ಯ ಸಾಹಸಗಳನ್ನರಿತ ವಜ್ರದಾಡಾದ್ಯರು ಆತನನ್ನು ಉಪಾಯದಿಂದ ಕೊಲ್ಲಬಯಸಿ ಅನೇಕ ಭೀಕರ ಸ್ಥಳಗಳಿಗೆ ಕರೆದೊಯ್ದರು. ಎಲ್ಲೆಡೆಯೂ ಪ್ರದ್ಯುಮ್ನನು ಜಯಶಾಲಿಯಾಗಿ ಅನೇಕ ದಿವ್ಯವಸ್ತುಗಳನ್ನು ಪಡೆದನು. ಕೊನೆಗೆ ಆತನು ವಜ್ರದಾಡಾದಿಗಳನ್ನು ನಾಗಪಾಶದಿಂದ ಬಿಗಿದುದನ್ನು ತಿಳಿದ ಕಾಳಶಂಬರನು ಮಗನ ಮೇಲೆ ಯುದ್ಧಕ್ಕೆ ನಿಂತನು. ನಾರದನು ನಿಜಸಂಗತಿಯನ್ನು ತಿಳಿಸಿ, ಆತನನ್ನು ಸಮಾಧಾನಪಡಿಸಿದನು. ಇದರಿಂದ ಲಜ್ಜಿತೆಯಾದ ಕಾಂಚನಮಾಲೆಯು ಜಿನದೀಕ್ಷೆಯನ್ನು ಕೈಗೊಂಡಳು; ಕಾಳಶಂಬರನು ಪ್ರದ್ಯುಮ್ನನನ್ನು ದ್ವಾರಾವತಿಗೆ ಬೀಳ್ಕೊಂಡನು. ನಾರದನೊಡನೆ ದ್ವಾರಾವತಿಗೆ ಹಿಂತಿರುಗುತ್ತಿದ್ದ ಪ್ರದ್ಯುಮ್ನನು ಕೌರವನ ಮಗಳಾದ ಉದಧಿಯನ್ನು ವೇಷಾಂತರದಿಂದ ಎತ್ತಿಕೊಂಡು ಹೋದನು. ಆತನನ್ನು ಬೆನ್ನಟ್ಟಿದ ಕೌರವಸೈನ್ಯವು ಸೋಲಪ್ಪಿತು.

ದ್ವಾರಾವತಿಯನ್ನು ಹೊಕ್ಕ ಪ್ರದ್ಯುಮ್ನ ತನ್ನ ಅತಿಮಾನಸ ವಿದ್ಯೆಗಳಿಂದ ಅನೇಕ ಸೋಜಿಗಗಳನ್ನುಂಟುಮಾಡಿದನು. ನಾರದನಿಂದ ನಿಜಸಂಗತಿಯನ್ನು ತಿಳಿದ ರುಗ್ಮಿಣಿಯೇ ಮೊದಲಾದೆಲ್ಲರೂ ಸಂತಸಪಟ್ಟರು. ಉದಧಿಯೊಡನೆ ಆತನ ಮದುವೆ ವಿಜೃಂಭಣೆಯಿಂದ ನೆರವೇರಿತು. ಇತ್ತ ಕೈಟಭದೇವನು ಜಂಭಾವತಿಯ ಉದರದಲ್ಲಿ ಜನಿಸಿ ಶಂಭುಕುಮಾರನಾಗಿ ಸರ್ವವಿದ್ಯೆಗಳಲ್ಲಿ ಪಾರಂಗತನಾಗಿ ಪ್ರದ್ಯುಮ್ನನಿಗೆ ಸರಿಮಿಗಿಲಾಗಿ ಮೆರೆದನು.

ರುಗ್ಮಿಣಿಯು ಮಗನಿಗೆ ತನ್ನ ಸಹೋದರನಾದ ರುಗ್ಮಿಣನ ಮಗಳನ್ನು ಮದುವೆಮಾಡಿಕೊಳ್ಳಬಯಸಿದಳು, ರುಗ್ಮಿಣನು ತನ್ನ ತಂದೆಯನ್ನು ಕೊಂದು ತಂಗಿಯನ್ನು ಅಪಹರಿಸಿಕೊಂಡು ಹೋದವನ ಮಗನಿಗೆ ಮಗಳನ್ನು ಕೊಡುವುದಕ್ಕಿಂತ ಮಾತಂಗನಿಗೆ ಕೊಡುವುದು ಲೇಸೆಂದನು. ಇದನ್ನು ತಿಳಿದ ಪ್ರದ್ಯುಮ್ನನು ಶಂಭುಕುಮಾರನೊಡನೆ ಮಾತಂಗವೇಷದಿಂದ ಹೋಗಿ ಆಕೆಯನ್ನು ದ್ವಾರಾವತಿಗೆ ಕೊಂಡೊಯ್ದನು. ನಾರದನ ಒಡಂಬಡಿಕೆಯಿಂದ ರುಗ್ಮಿಣನು ದ್ವಾರಾವತಿಗೆ ಬಂದು ಮಗಳನ್ನು ಪ್ರದ್ಯುಮ್ನನಿಗೆ ಧಾರೆಯೆರೆದನು. ಪ್ರದ್ಯುಮ್ನನು ಪತ್ನಿಯರೊಡನೆ ಸುಖವಾಗಿದ್ದನು.

ಇತ್ತ ನೇಮಿಜಿನೇಶನಿಗೆ ಉತ್ತಮ ಧ್ಯಾನಫಲದಿಂದ ಕೇವಲಜ್ಞಾನ ಲಭಿಸಿತು. ಇದನ್ನು ತಿಳಿದ ಇಂದ್ರನು ಸಮವಸರಣರಚನೆಗೆ ಏರ್ಪಾಟುಮಾಡಿ, ತಾನು ದೇವತೆಗಳೊಡನೆ ಬಂದು ಜಿನನನ್ನು ಪೂಜಿಸಿದನು. ಅನಂತರ ಸಮವಸರಣವು ದ್ವಾರಾವತಿಯ ರೇವತಿಯೆಂಬ ಉಪವನದಲ್ಲಿ ನಿಲ್ಲಲು ಕೃಷ್ಣನು ಪರಿವಾರಸಮೇತ ಬಂದು ಪೂಜಿಸಿ ಸ್ತುತಿಸಿ

ದನು. ಅನಂತರ ಅಲ್ಲಿದ್ದ ಮುನಿಗಳಿಂದ ಧರ್ಮಾಗಮದ ವಿವರವನ್ನು ಕೇಳಿ ತಿಳಿದನು. ರುಗ್ಮಿಣಿಯು ತನ್ನ ಮುನ್ನಿನ ಜನ್ಮವಿವರವನ್ನು ತಿಳಿಸಬೇಕೆನ್ನಲು ಮುನಿಗಳು ಪೂರ್ವದಲ್ಲಿ ಆಕೆಯು ಲಕ್ಷ್ಮೀಮತಿಯಾಗಿದ್ದು ಇಲಿ ಹಂದಿ ಬೆಕ್ಕು ಮೊದಲಾದ ಜನ್ಮಗಳಲ್ಲಿ ಸಂಚರಿಸಿ, ಇಂದು ರುಗ್ಮಿಣಿಯಾಗಿರುವುದನ್ನು ತಿಳಿಸಿದರು. ಬಳಿಕ ಬಲರಾಮನು ಕೃಷ್ಣನಿಗಿರುವ ಸಿರಿ ಸೌಭಾಗ್ಯಗಳು ಚಿರವಾಗಿ ನಿಲ್ಲುವುವೇ ಎಂದು ಕೇಳಿದನು. ಆಗ ಮುನಿಗಳು ಸುರೆಗುಡಿದ ದೀಪಾಯನನಿಂದ ದ್ವಾರಾವತಿಯು ಸುಟ್ಟು ಹೋಗುವುದೆಂದೂ ಜರತ್ಕುಮಾರನ ಬಾಣದಿಂದ ಕೃಷ್ಣನು ಸಾಯುವನೆಂದೂ ಹೇಳಲು, ಸಭೆಯು ಸ್ತಂಭೀಭೂತವಾಯಿತು. ಕೃಷ್ಣನು ಉತ್ಸರ್ಪಣಕಾಲದಲ್ಲಿ ತೀರ್ಥಂಕರನಾಗುವನೆಂದೂ ಬಲರಾಮನು ಹರಿಯ ಮರಣದ ದುಃಖದಿಂದ ಸತ್ತು ಮತ್ತೆ ಹುಟ್ಟಿ ಕರ್ಮವನ್ನು ಕಳೆದುಕೊಂಡು ತೀರ್ಥಂಕರನಾಗುವನೆಂದೂ ಹೇಳಿದರು. ತನ್ನಿಂದ ದ್ವಾರಾವತಿ ನಾಶವಾಗುವುದನ್ನು ತಿಳಿದ ದೀಪಾಯನನು ಜಿನದೀಕ್ಷೆಯನ್ನು ಕೈಗೊಂಡು ತಪಸ್ಸಿಗೆ ತೆರಳಿದನು. ಜರತ್ಕುಮಾರನು ತನ್ನ ಬಾಣದಿಂದ ಹರಿಗೇಕೆ ಮರಣವಾಗಬೇಕೆಂದವನೇ ಬಾಣವನ್ನು ಸಮುದ್ರದಲ್ಲೆಸೆದು ಪಟ್ಟಣವನ್ನು ಬಿಟ್ಟನು. ಕೃಷ್ಣನು ಪಟ್ಟಣದಲ್ಲಿದ್ದ ಸುರೆಯೆಲ್ಲವನ್ನೂ ಹೊರಗೆ ಚೆಲ್ಲಿಸಿದನು.

ದೀಪಾಯನ ಜರತ್ಕುಮಾರರು ಪಟ್ಟಣವನ್ನು ಬಿಟ್ಟುಹೋಗಲು ಪ್ರದ್ಯುಮ್ನನಿಗೆ ವೈರಾಗ್ಯವುಂಟಾಯಿತು. ಈ ಸಂಸಾರದುಃಖದಿಂದ ಪಾರಾಗಬಯಸಿದ ಆತನು ಸಕಲ ಸಂಪತ್ತುಗಳನ್ನೂ ತ್ಯಜಿಸಿ ತಪಸ್ಸಿಗೆ ಹೊರಟನು. ತಾಯಿ ಮತ್ತು ಪತ್ನಿಯರು ಪರಿಪರಿಯಾಗಿ ಬೇಡಿಕೊಂಡರೂ ಆತನು ತನ್ನ ದೃಢಮನಸ್ಸಿನಿಂದ ಅವರೆಲ್ಲರನ್ನೂ ಸಂತೈಸಿ, ಕೃಷ್ಣ ಬಲರಾಮರನ್ನು ಒಡಂಬಡಿಸಿ ಆರು ಸಾವಿರ ಪತ್ನಿಯರು ಮತ್ತು ಶಂಭುಕುಮಾರನೊಡನೆ ಜಿನದೀಕ್ಷೆಯನ್ನು ಕೈಗೊಂಡನು. ಅವರೆಲ್ಲರೂ ತಮ್ಮ ತಮ್ಮ ಪರಿಣಾಮಕ್ಕನುಗುಣವಾಗಿ ಸುರಲೋಕದಲ್ಲಿ ಜನಿಸಿದರು.

**ವಿಮರ್ಶೆ :** ಕಥೆ ಚಿಕ್ಕದಾದರೂ ವಿಸ್ತಾರವಾದ ವರ್ಣನೆಗಳ ಮೂಲಕ ಕವಿ ಕಾವ್ಯವನ್ನು ಹಿಗ್ಗಿಸಿದ್ದಾನೆ. ವರ್ಣನೆಗಳು ಅತಿಯೆನಿಸಿದರೂ ಸಹಜವಾಗಿವೆ. ವಿಷಯವನ್ನು ವಿವರಿಸುವ ಚಾತುರ್ಯ, ಸಹೃದಯರನ್ನು ರಂಜಿಸುವ ಕಲಾತ್ಮಕತೆ ಈತನಲ್ಲಿ ಕಂಡುಬರುತ್ತದೆ. ಬಗೆಬಗೆಯ ಮರಗಳು, ಹಕ್ಕಿಗಳು, ಹೂವುಗಳು, ಹಣ್ಣುಗಳು ಮೊದಲಾದುವೆಲ್ಲವೂ ಕವಿಯ ಲೇಖನಿಯಲ್ಲಿ ರೂಪುಗೊಂಡಿವೆ; ಕೋಟೆಕೊತ್ತಲಗಳು, ನೆಲ್ಲಿನ ಗದ್ದೆಗಳು, ವಿವಿಧ ಧಾನ್ಯಗಳ ಬೆಳೆಯು ಆರೈಕೆಗೆ ಹಾಗೂ ರಕ್ಷಣೆಗೆ ನಿಂತ ಸುಂದರ ಲಲನೆಯರ ಚಿತ್ರ ಓದುಗರ ಮನ ಸೆಳೆಯುತ್ತದೆ.

ರುಗ್ಮಿಣಿಯ ದಿನಚರಿಯನ್ನು ವಿವರವಾಗಿ ದಾಖಲಿಸುವಲ್ಲಿ ಆದರ್ಶ ಸತಿಯರು ನಡೆದುಕೊಳ್ಳಬೇಕಾದ ನೀತಿನಿರೂಪಣೆಯಿದೆ. ವಿಂದು ಮುಡಿಯುಟ್ಟ ಆಕೆಯು ಚೈತ್ಯಾಲಯಕ್ಕೆ ನಡೆದು ಜಿನನನ್ನು ಪೂಜಿಸಿ ಸ್ತುತಿಸುವುದು, ಮುನಿನಿಕರಕ್ಕೆ ವಂದಿಸಿ ಧರ್ಮಾಗಮಗಳನ್ನು ಕೇಳಿ ಹರ್ಷಗೊಳ್ಳುವುದು, ಸದನಕ್ಕೆ ಹಿಂದಿರುಗಿ ಆಹಾರವನ್ನು ಸೇವಿಸಿ ಪತಿಗೆ ವೀಳೆಯವಿತ್ತು ತಾನೂ ಸೇವಿಸಿ ಓಲಗಶಾಲೆಯಲ್ಲಿ ಕುಳಿತು ಯುವತಿಯರು ನುಡಿಸುವ ವೀಣಾದಿ

ಸಂಗೀತ ಕೇಳುವುದು. ಯುವತಿಯರು ಜೈನಪುರಾಣಗಳನ್ನು ಓದಲು ಅದರರ್ಥಗಳನ್ನು ತಾನೇ ವಿವರಿಸುವುದು. ಸಂಜೆಯಾಗಲು ಸಂಧ್ಯಾಕ್ರಿಯೆಗಳನ್ನು ಪೂರೈಸಿ ಬಂದ ಕೃಷ್ಣನನ್ನು ಸಂಧಿಸುವುದು—ಮೊದಲಾದ ದಿನಚರಿಯ ವರ್ಣನೆಯಲ್ಲಿ ಕವಿಯ ಆದರ್ಶಜೀವನದ ಬಯಕೆ, ಆ ಕಾಲದ ಜೈನಸಮಾಜದ ಸ್ತ್ರೀಪುರುಷರ ಚರ್ಯೆ ವ್ಯಕ್ತವಾಗುತ್ತದೆ.

ಮುಂದೆ ರುಗ್ಮಿಣಿ ಕೃಷ್ಣರ ಸಮಾಗಮದ ವರ್ಣನೆ ಸಾಕಷ್ಟು ವಿಸ್ತಾರವಾಗಿ, ರತ್ನಾಕರ ವರ್ಣಿಯ ಧಾಟಿಯನ್ನೇ ಹಿಡಿದಿದೆ. ಅನಂತರ ರುಗ್ಮಿಣಿಯ ಗರ್ಭಚಿಹ್ನೆಗಳು, ಪ್ರದ್ಯುಮ್ನನ ಜನನ, ಅರಣ್ಯದಲ್ಲಿ ಬಿಸುಟ ಸಂದರ್ಭದಲ್ಲಿ ಬರುವ ಆ ಕಾಡಿನ ವರ್ಣನೆಗಳು ಸಹಜ ಸುಂದರವಾಗಿವೆ.

ಅಗ್ನಿರಾಜ ಮತ್ತು ಪ್ರದ್ಯುಮ್ನರ ಕಾಳಗದಲ್ಲಿ ಯುದ್ಧವರ್ಣನೆಯ ಹರಹನ್ನು ಕಾಣಬಹುದು.

> ಸುರಿವ ಕರುಳನೊತ್ತುತಲೆಡಗೈಯೊಳು । ಭರದಿಂದ ಬಲಗೈಯೊಳಗೆ
> ಸುರಗಿವಿಡಿದು ತಿವಿದಾಡಿದರಾ ಧುರ । ಧರೆಯೆ ಇಳು ಪಟುಭಟರುಗಳು (೪–೧೬)
>
> ಗಿರಿಗಳ್ಗೆ ಗಱಿಮೂಡಿದವೊಲು ಕೆಲಬರು । ಕರಿಯನೇಱಿ ಬವರದಲಿ
> ಭರದೊಳು ಬಂದು ತಾಗಿದವರಾಹವ । ಧರೆಯೊಳು ಕಡುಗೋಪದಿಂದ (೪–೨೯)

ಎಂಬಿವೇ ವರ್ಣನೆಗಳಲ್ಲಿ ಯುದ್ಧದ ಭೀಕರತೆಯನ್ನೂ ವರ್ಣನೆಯಲ್ಲಿನ ಸರಳತೆಯನ್ನೂ ಗುರುತಿಸಬಹುದು.

ದಿವ್ಯವಸ್ತುಗಳನ್ನು ಪಡೆದ ಪ್ರದ್ಯುಮ್ನನ ಶೌರ್ಯಸಾಹಸಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಿದರೂ ಪರಿಣಾಮಕಾರಿಯಾಗಿ ಕಂಡುಬರುತ್ತವೆ :

> ಅಲರ್ವಿಲ್ಲನದಱೊಳಪೊಕ್ಕಲ್ಲಿರುತಿರ್ಪ । ಜಲರಕ್ಕಸನ ಬೆದಱಿಸಿ
> ಸುಲಲಿತಮಪ್ಪಾ ಕಾಮಚಕ್ರಮನಾಗ । ತಳೆದು ತಿರುಗಿ ಬರಲೊಡನೆ (೫–೧೭೭)

ಹೀಗೆ ಒಂದೊಂದು ಸಂದರ್ಭಕ್ಕೆ ಒಂದೊಂದು ಪದ್ಯವನ್ನು ಮಾತ್ರ ವಿನ್ಯಾಸಲಾಗಿಟ್ಟರೂ ಪ್ರದ್ಯುಮ್ನನ ಸಾಹಸದ ವ್ಯಕ್ತಿತ್ವಕ್ಕೆ ಯಾವ ಕೊರತೆಯೂ ಉಂಟಾಗುವುದಿಲ್ಲ.

ಪ್ರದ್ಯುಮ್ನನ ವೇಷಾಂತರಗಳು, ಮಾಯಾವಿದ್ಯೆಯ ಸಹಾಯದಿಂದ ನಡೆಸಿದ ಅತಿಶಯಗಳು ನಿರರ್ಗಳವಾಗಿ ಮುಂದುವರಿಯುತ್ತವೆ ; ವರ್ಣನೆಯಲ್ಲಿ ಕಾಠಿನ್ಯವಾಗಲಿ ಅಸ್ಪಷ್ಟತೆಯಾಗಲಿ ಕಂಡುಬರುವುದಿಲ್ಲ. ಉದಾ.ಗೆ:

> ಬಿಗುಹ ಬಿಡಿಸಿ ಕಟಿಸೂತ್ರವ ಮೇಗಡೆ । ತೆಗೆದಾ ಜನ್ನಿವಾರವನು
> ಅಗಣಿತ ಕೃತಕನು ಪದ್ಮಾಸನದೊಳು । ಮಿಗೆ ಹರಿಸದಿ ಕುಳಿತವನು (೬–೦೨೩)
>
> ತಲೆಸುತ್ತ ತೆಗೆದಾ ಪತ್ರಭಾಜನವನು । ಜಲದಿಂದ ಪ್ರಕ್ಷಾಲಿಸಿಯೆ
> ಸುಲಭದೇವನುಮಾಗಿ ಕುಳ್ಳಿರಲಾತಗೆ । ಲಲನೆಯರುಗಳಿಕ್ಕಿದರು (೬–೦೨೪)

ರುಗ್ಮಿಣಿಯು ತನ್ನ ಅಣ್ಣ ರುಗ್ಮಿಣನ ಮಗಳನ್ನು ಮಗನಿಗೆ ಮದುವೆ ಮಾಡಿಕೊಳ್ಳುವ ಪ್ರಯತ್ನ, ರುಗ್ಮಿಣನಿಂದ ತಿರಸ್ಕಾರ, ಅದಕ್ಕಾಗಿ ಪ್ರದ್ಯುಮ್ನನು ಮಾತಂಗವೇಷ ಧರಿಸಿ ಪಟ್ಟಣಪ್ರವೇಶ ಮಾಡುವುದು, ಅಲ್ಲಿ ಬರುವ ವಿದರ್ಭೆಯ ವರ್ಣನೆ ಸೊಗಸಾಗಿ ಚಿತ್ರಿತ

ವಾಗಿವೆ. ನಡುಗೇರಿಯಲ್ಲಿ ಹೋಗುತ್ತಿದ್ದ ಮಾತಂಗರನ್ನು ನೋಡಲು ವಿದರ್ಭೆಯು ಸೌಧಾಗ್ರವನ್ನೇರಿದುದನ್ನು ಹೀಗೆ ವರ್ಣಿಸಿದೆ :

> ಅರ್ಣವದೊಳು ಪುಟ್ಟಿ ವಿಧು ಮೂಡಗಡೆಯ ಸು । ವರ್ಣಗಿರಿಯನೇಱುವಂತೆ
> ಪೂರ್ಣಚಂದ್ರಾನನೆಯತಿಹರುಷದೊಳಾ । ಸ್ವರ್ಣಹರ್ಮ್ಯವನೇಱಿದಳು (೮–೪೨)

ಆಕೆಯ ರೂಪುಲಾವಣ್ಯಗಳ ವರ್ಣನೆಯಲ್ಲದೆ, ಆಕೆಯೊಡನೆ ತೆರಳಿದ ಸಖಿಯರ ಚಿತ್ರವೂ ಸಾಕಷ್ಟು ವಿಸ್ತಾರವಾಗಿ ರಂಜನೀಯವಾಗಿದೆ.

ಪ್ರದ್ಯುಮ್ನ ಶಂಭುಕುಮಾರರು ಧರಿಸಿದ ಕೊರವಿಯರ ರೂಪು ಹೀಗಿತ್ತು :

> ಸೀರುದಲೆಯ ಕಣಕಾಲಿಂದ ಮೇಲುಟ್ಟ । ಸೀರೆಯ ಕೈಯೊಳು ಸೆಳೆಯ
> ಮಾರನು ವಿಗಡರೂಪವ ಧರಿಸಿಯೆಕೊಂ । ಡೋರಂತೆ ಬಂದನಾ ಪುರಕೆ (೮–೬೫)

> ಚೆನ್ನೊಳು ಕಟ್ಟಿದ ಕಿಱುಗೂಸು ಕಣ್ಣಾಱು । ತನ್ನ ಕಂಕುಳ ಗೂಡೆಸಹಿತ
> ಚೆನ್ನೆಯ ನೋಡುವೆನೆಂದಾಗ ಬಂದನು । ತನ್ನನುಜಾತಸಹಿತಲಿ (೮–೬೬)

ಅವರು ವಿದರ್ಭೆಯನ್ನು ಸಂಧಿಸುವುದು, ಅವಳನ್ನು ಆಕಾಶಮಾರ್ಗದಿಂದ ಕೊಂಡೊಯ್ದು ದ್ವಾರಾವತಿಯನ್ನು ಸೇರಿ ಮದುವೆನಿಲ್ಲುವುದೇ ಮೊದಲಾದುವೆಲ್ಲವೂ ಸರಳ ಸುಂದರವಾಗಿ ನಿರೂಪಿತವಾಗಿವೆ.

ವಿವಾಹವಿಧಿಯನ್ನು ಅತ್ಯಂತ ಜಾಣ್ಮೆಯಿಂದ ಎಳೆಎಳೆಯಾಗಿ ಬಿಡಿಸಿದೆ. ವಿವಿಧ ದೇಶದ ರಾಜರಿಗೆ ಕಳುಹಿಸಿದ ಆಮಂತ್ರಣ, ರಾಜಪರಿವಾರ ಬಂದ ರೀತಿ, ಅವರನ್ನು ಬರಮಾಡಿಕೊಳ್ಳುವುದು, ವಿವಾಹಮಂಟಪದ ವೈಭವ ನೋಡುವ ಜನರಿಗೆ ಅತ್ಯಂತ ರಮ್ಯವಾಗಿ ಕಾಣುತ್ತವೆ. ಹಸೆಮಣೆಯ ಮೇಲೆ ಪಂಚಧಾನ್ಯವನ್ನು ತಳಿದು ವಧುವನ್ನು ಕುಳ್ಳಿರಿಸುವುದು, ಎಣ್ಣೆಯೊತ್ತುವುದು, ಮಿಂದ ಮೇಲೆ ದೇವಾಂಗವಸ್ತ್ರವನ್ನುಡಿಸಿ 'ತಳಿಗೆದಂಬುಲ'ದಿಂದ ನಿವಾಳಿಸುವುದು, ಧೂಪವಿಕ್ಕಿ ಮುಡಿಗಟ್ಟುವುದು, ತಿಲಕ ಕಣ್ಕಪ್ಪುಗಳನ್ನಿಟ್ಟು ಆಭರಣಗಳನ್ನು ತೊಡಿಸಿ ಅಲಂಕಾರಮಾಡಿ ಚಪ್ಪರಕ್ಕೆ ಕರೆತರುವವರೆಗಿನ ಚಿತ್ರಣ ಬಹುಮನೋಜ್ಞವಾಗಿದೆ. ಕನ್ಯಾವರಣವನ್ನು ರಚಿಸುವುದು, ಶುಭಲಗ್ನದಲ್ಲಿ ತೆರೆದೆಗೆಯುವುದು, ಹಾಲು ತುಪ್ಪಗಳಿಂದ ದಂಪತಿಗಳ ಕೈದೊಳೆಯುವುದೇ ಮೊದಲಾದ ಸಂಪ್ರದಾಯಬದ್ಧವಾಗಿ ನಡೆಯುವ ಎಲ್ಲ ವಿಧಿವಿಧಾನಗಳನ್ನೂ ಕವಿ ಇಲ್ಲಿ ನಿರೂಪಿಸಿದ್ದಾನೆ.

ಪಟ್ಟಣದಲ್ಲಿ ಜಿನಗೃಹಗಳೂ ಜೈನತತ್ವವೇತ್ತರೂ ಹಲವು ಶಾಸ್ತ್ರಗಳಲ್ಲಿ ಪರಿಣತರಾದವರು ಮಂತ್ರವಾದಿಗಳು ಜ್ಯೋತಿಷ್ಕರು ಕವಿ ವಾದಿ ವಾಗ್ಮಿಗಳೂ ಇದ್ದುದನ್ನು ನಿರೂಪಿಸಿ, ವೈದ್ಯರ ವಿಷಯವಾಗಿ ಹೇಳುತ್ತ,

> ಚರಕ ಸುಶ್ರುತ ಬಾಹಟ ಮತ್ತಾವು । ಗ್ರತರಣಿ ಕಲ್ಯಾಣಕಾರಕವು
> ಭರದಿಂದಾತ್ರೇಯ ಮೊದಲಾದ ಸಂಹಿತೆ । ಯಿರವ ಬಲ್ಲವರಲ್ಲಿಹರು (೯–೪೫)

ಎಂದು ವಿವರಿಸುತ್ತಾನೆ.

ಕಾವ್ಯಾಂಗದಲ್ಲೊಂದೆಂದು ಪರಿಗಣಿತವಾಗಿರುವ ಸೂಳೆಗೇರಿಯು ವರ್ಣನೆಯೂ ಸಾಕಷ್ಟು ವಿಸ್ತಾರವಾಗಿ ಬಂದಿದೆ. ಸಂಗೀತ ನೃತ್ಯ ವರ್ಣನೆಗಳೂ ಸಂಕ್ಷಿಪ್ತವಾಗಿ ಬಂದಿವೆ. ಇವುಗಳಲ್ಲಿ ರಸಾನುಭವಕ್ಕಿಂತ.

ಸಿಂಹಲೀಲೆ ವೀರವಿಕ್ರಮ ಶ್ರೀರಂಗ । ಸಿಂಹವಿಕ್ರಮ ವರ್ಣಭಿನ್ನ
ಸಿಂಹನಾದನ ಜಯನಂದನ ಪ್ರತಿತಾಳ । ಸಿಂಹನಂದನ ವಿದ್ಯುಮಾಳಿ ೬-೧೧೬

ಶುಕತುಂಡ ಸುಪಾತಕ ತ್ರಿಪತಾಕ ಕ ।ಟಕಮುಖಿ ಕರ್ತರಿಮುಖಿವು
ಮುಖಿದೇಹಯುಷ್ಟಿ ಶಿಖರಿಗತಿ ಚತುರಾ ।ಷ್ಟಕ ತಾಮ್ರಚೂಡಾದಿಗಳು ೬-೧೨೮

ಎಂಬಂತಹ ವರ್ಣನೆಗಳಿಂದ ತನ್ನ ಪಾಂಡಿತ್ಯವನ್ನೇ ಹೆಚ್ಚು ಮೆರೆದಿದ್ದಾನೆ.

ನೇಮಿನಾಥನ ಸಮವಸರಣದ ವರ್ಣನೆ ಸಂಕ್ಷಿಪ್ತವಾದರೂ ಪರಿಣಾಮಕಾರಿಯಾಗಿದೆ. ಅಲ್ಲಿನ ಮುನಿಗಳಿಂದ ರುಗ್ಮಿಣಿ ಬಲರಾಮಾದಿಗಳಿಗೆ ತಮ್ಮ ಭವಾವಳಿಯನ್ನೂ ಮುಂದಿನ ಆಗುಹೋಗುಗಳನ್ನೂ ವಿವರಿಸುವುದು ಹೃದಯಂಗಮವಾಗಿದೆ. ದೀಪಾಯನ ಜರತ್ಕುಮಾರರು ಪಟ್ಟಣದಿಂದ ತೆರಳಿದ ಮೇಲೆ. ವೈರಾಗ್ಯಪರನಾದ ಪ್ರದ್ಯುಮ್ನನು ಸಂಸಾರವನ್ನು ತೊರೆಯುವ ಸನ್ನಿವೇಶದ ವರ್ಣನೆ ತುಂಬಾ ಸೊಗಸಾಗಿದೆ. ತಾಯಿ ಮಗನ ನಡುವೆ ನಡೆಯುವ ದೀರ್ಘಸಂವಾದ ಮನಮುಟ್ಟುವಂತಿದೆ.

ಎಲೆ ಸುತ ನೀನೆನ್ನನೀ ದುಃಖಾನಲ । ನೊಳು ದಹನವ ಮಾಡುವುದು
ಸಲುವುದೆ ತಾಯ ಮನಕೆ ನೋವು ಮಾಳ್ಪುದು । ನಳಿನಾಸ್ತ್ರ ನಿನಗಿದು ಗುಣವೆ
(೧೧-೩೦)

ಎಲೆ ಸುತ ನಿನ್ನ ಬಿಡುವುದಾಗದೆಂದೆನೆ । ಲಲನೆಗಿಂತೆಂದನಾ ಕಂತು
ಬಲುಪಿಂದ ಜವನೆಳೆದೊಯ್ವಾಗ ಬಿಡುವುದು। ಸಲೆ ಘಟಿಪ್ಪುದೆ ತಾಯಿ ನಿನಗೆ (೧೧-೩೧)

ಇಂತಹ ವರ್ಣನೆಗಳಲ್ಲಿ ಸಂವಾದದ ನಾಟಕೀಯತೆಯನ್ನು ಕಾಣುತ್ತೇವೆ. ಹೀಗೆ ತಾಯಿಯನ್ನು ಸಮಾಧಾನಪಡಿಸಿದ ಪ್ರದ್ಯುಮ್ನನಿಗೆ ತನ್ನ ಸಹಧರ್ಮಿಣಿಯರ ದುಃಖಪೂರಿತ ಮಾತುಗಳು ಎದುರಾಗುತ್ತವೆ. ಇಲ್ಲೆಲ್ಲಾ ಶೋಕರಸದ ತೀವ್ರತೆಯನ್ನು ಕಾಣುತ್ತೇವೆ.

ಒಟ್ಟಿನಲ್ಲಿ ದೇವರಸನು ತನ್ನ ಕಾವ್ಯವನ್ನು ಸರಳ ಸುಂದರ ರೀತಿಯಲ್ಲಿ ರಚಿಸಿದ್ದಾನೆ; ಇದರಲ್ಲಿ ಅನುಭವ ಪ್ರತಿಭೆಗಳ ಸಮ್ಮಿಳಿತವಿದೆ. ಕಥಾವರ್ಣನೆಗೆ ಪೂರಕವಾಗಿ 'ಬಾಳೆಯು ಮರಗಳು ಹಲವಿದ್ದೊಡೇನೊಂದು ಬಾಲಗಜಕೆ ಸಾಹಸವೆ', 'ಏಸು ಬಲ್ಲಿಹ ಕರಿಯಾಗಲೊಂದು ಮಜಿಕೇಸರಿಗಿದಿರಲ್ಲ', 'ಕಿಚ್ಚಿನೊಡನೆ ಸರಸವೆ'—ಎಂಬಂತಹ ಕೆಲವು ನಾಡನುಡಿಗಳನ್ನು ಬಳಸಿದ್ದಾನೆ. ಪದಗಳನ್ನು ಉಪಯೋಗಿಸುವಾಗಲೂ ತನ್ನ ವೈಯಕ್ತಿಕ ಪ್ರತಿಭೆಯನ್ನು ತೋರಿಸಿದ್ದಾನೆ.

ಕಾವ್ಯಾಂಗದಲ್ಲೊಂದೆಂದು ಪರಿಗಣಿತವಾಗಿರುವ ಸೂಳೆಗೇರಿಯ ವರ್ಣನೆಯಂ ಸಾಕಷ್ಟು ವಿಸ್ತಾರವಾಗಿ ಬಂದಿದೆ. ಸಂಗೀತ ನೃತ್ಯ ವರ್ಣನೆಗಳೂ ಸಂಕ್ಷಿಪ್ತವಾಗಿ ಬಂದಿವೆ. ಇವುಗಳಲ್ಲಿ ರಸಾನುಭವಕ್ಕಿಂತ,

ಸಿಂಹಲೀಲೆ ವೀರವಿಕ್ರಮ ಶ್ರೀರಂಗ । ಸಿಂಹವಿಕ್ರಮ ವರ್ಣಭಿನ್ನ
ಸಿಂಹನಾದನ ಜಯನಂದನ ಪ್ರತಿತಾಳ । ಸಿಂಹನಂದನ ವಿದ್ಯುಮಾಳಿ ೯–೧೧೬

ಶುಕತುಂಡ ಸುಪಾತಕ ತ್ರಿಪತಾಕ ಕ ।ಟಕಮುಖ ಕರ್ತರಿಮುಖವು
ಮುಖದೇಹಯಷ್ಟಿ ಶಿಖರಿಗತಿ ಚತುರಾ ।ಪ್ಪಕ ತಾಮ್ರಚೊಡಾದಿಗಳು ೯–೧೨೮

ಎಂಬಂತಹ ವರ್ಣನೆಗಳಿಂದ ತನ್ನ ಪಾಂಡಿತ್ಯವನ್ನೇ ಹೆಚ್ಚು ಮೆರೆದಿದ್ದಾನೆ.

ನೇಮಿನಾಥನ ಸಮವಸರಣದ ವರ್ಣನೆ ಸಂಕ್ಷಿಪ್ತವಾದರೂ ಪರಿಣಾಮಕಾರಿಯಾಗಿದೆ. ಅಲ್ಲಿನ ಮುನಿಗಳಿಂದ ರುಗ್ಮಿಣಿ ಬಲರಾಮಾದಿಗಳಿಗೆ ತಮ್ಮ ಭವಾವಳಿಯನ್ನೂ ಮುಂದಿನ ಆಗುಹೋಗುಗಳನ್ನೂ ವಿವರಿಸುವುದು ಹೃದಯಂಗಮವಾಗಿದೆ. ದೀಪಾಯನ ಜರತ್ಕು ಮಾರರು ಪಟ್ಟಣದಿಂದ ತೆರಳಿದ ಮೇಲೆ. ವೈರಾಗ್ಯಪರನಾದ ಪ್ರದ್ಯುಮ್ನನು ಸಂಸಾರ ವನ್ನು ತೊರೆಯುವ ಸನ್ನಿವೇಶದ ವರ್ಣನೆ ತುಂಬಾ ಸೊಗಸಾಗಿದೆ. ತಾಯಿ ಮಗನ ನಡುವೆ ನಡೆಯುವ ದೀರ್ಘಸಂವಾದ ಮನಮುಟ್ಟುವಂತಿದೆ.

ಎಲೆ ಸುತ ನೀನೆನ್ನನೀ ದುಃಖಾನಲ । ನೊಳು ದಹನವ ಮಾಡುವುದು
ಸಲುವುದೆ ತಾಯ ಮನಕೆ ನೋವು ಮಾಳ್ಪುದು । ನಳಿನಾಸ್ತ್ರ ನಿನಗಿದು ಗುಣವೆ
(೧೧–೩೦)

ಎಲೆ ಸುತ ನಿನ್ನ ಬಿಡುವುದಾಗದೆಂದೆನೆ । ಲಲನೆಗಿಂತೆಂದನಾ ಕಂತು
ಬಲುಪಿಂದ ಜವನೆಳೆದೊಯ್ವಾಗ ಬಿಡುವುದು। ಸಲೆ ಘಟಿಪುದೆ ತಾಯಿ ನಿನಗೆ (೧೧-೩೧)

ಇಂತಹ ವರ್ಣನೆಗಳಲ್ಲಿ ಸಂವಾದದ ನಾಟಕೀಯತೆಯನ್ನು ಕಾಣುತ್ತೇವೆ. ಹೀಗೆ ತಾಯಿ ಯನ್ನು ಸಮಾಧಾನಪಡಿಸಿದ ಪ್ರದ್ಯುಮ್ನನಿಗೆ ತನ್ನ ಸಹಧರ್ಮಿಣಿಯರ ದುಃಖಪೂರಿತ ಮಾತುಗಳು ಎದುರಾಗುತ್ತವೆ. ಇಲ್ಲೆಲ್ಲಾ ಶೋಕರಸದ ತೀವ್ರತೆಯನ್ನು ಕಾಣುತ್ತೇವೆ.

ಒಟ್ಟಿನಲ್ಲಿ ದೇವರಸನು ತನ್ನ ಕಾವ್ಯವನ್ನು ಸರಳ ಸುಂದರ ರೀತಿಯಲ್ಲಿ ರಚಿಸಿದ್ದಾನೆ; ಇದರಲ್ಲಿ ಅನುಭವ ಪ್ರತಿಭೆಗಳ ಸಮ್ಮಿಳಿತವಿದೆ. ಕಥಾವರ್ಣನೆಗೆ ಪೂರಕವಾಗಿ 'ಬಾಳೆಯ ಮರೆಗಳು ಹಲವಿದ್ದೊಡೇನೊಂದು ಬಾಲಗಜಕೆ ಸಾಹಸವ', 'ಏಸು ಬಲ್ಲಿಹ ಕರಿಯಾಗ ಲೊಂದು ಮಜ಼ಿಕೇಸರಿಗಿದಿರಲ್ಲ', 'ಕಿಚ್ಚಿನೊಡನೆ ಸರಸವೆ'—ಎಂಬಂತಹ ಕೆಲವು ನಾಡ ನುಡಿಗಳನ್ನು ಬಳಸಿದ್ದಾನೆ. ಪದಗಳನ್ನು ಉಪಯೋಗಿಸುವಾಗಲೂ ತನ್ನ ವೈಯಕ್ತಿಕ ಪ್ರತಿಭೆಯನ್ನು ತೋರಿಸಿದ್ದಾನೆ.

# ಸೋಮೇಕಟ್ಟೆ ಚೆನ್ನವೀರಸ್ವಾಮಿಯ ಕೃತಿಗಳು

ಎಸ್. ಶಿವಣ್ಣ

'ಗುರು ಚೆನ್ನಬಸವೇಶ' ಅಂಕಿತದ ಸೋಮೇಕಟ್ಟೆ ಚೆನ್ನವೀರಸ್ವಾಮಿ (ಸು. ೧೬೦೦) ತುಮಕೂರಿನ ಸೋಮೇಕಟ್ಟೆ ಮಠದ ಪರಂಪರೆಗೆ ಸೇರಿದ ಮಠಾಧೀಶ. ಈತ ತನ್ನ ಸ್ವರವಚನವೊಂದರಲ್ಲಿ ತುಮಕೂರನ್ನು ಹೆಸರಿಸಿದ್ದು, ಆ ಸ್ವರವಚನದ ಪಲ್ಲವಿ ಹಾಗೂ ಉಲ್ಲೇಖಿದ ಭಾಗ ಇಂತಿವೆ (ಓ. ೩೫೩/೧೪ : ೨೧ ಹಿಂ. ಬೃಹನ್ಮಠ, ಚಿತ್ರದುರ್ಗ):

ರಾಗ : ನಾಮರಾಮಕ್ರೀ

ಪಾಡಮ್ಮ ಪರಮಪಾವನ ಯತಿವರನ
ರೂಢಿಗಪ್ರತಿಮನೆನಿಪ ಗುರುವರನ ನೀ
ಪಾಡಮ್ಮ ಪರಮಪಾವನ ಯತಿವರನ ॥ ಪಲ್ಲ ॥

ಆನೆಯ ನುಡಿಯ ಕೊನೆಯ ಸಾಲು

ತುಮಕೂರ ಬಸವನ ವರಭೂಮಿಯಲ್ಲಿ ನೆಲಸಿಹ ಶುಭಕರನ

ಓಲೆ ಕಟ್ಟೊಂದು ಹೊನ್ನವಳ್ಳಿ ಕರಿಸಿದ್ಧೇಶ್ವರಮಠದ ಸಂಗ್ರಹದಲ್ಲಿದ್ದು, ಈತನ ೧೮ ವಿಧದ ರಚನೆಗಳನ್ನು ಒಳಕೊಂಡಿದೆ, ಅದು. ಅಲ್ಲದೆ ಅಲ್ಲಿಯೇ ಈತನ ಸು. ೮೦ ಸ್ವರ ವಚನಗಳನ್ನುಳ್ಳ ಓಲೆಕಟ್ಟೊಂದು ಸಹ ಲಭ್ಯವಿದೆ (ಈ ಕಟ್ಟುಗಳನ್ನು ಪರಿಶೀಲಿಸಲು ಸಹಾಯ ನೀಡಿದ ಕುಪ್ಪೂರು ಗದ್ದಿಗೆ ಶ್ರೀಗಳಿಗೂ ಕರಿಸಿದ್ಧೇಶ್ವರ ಮಠದ ಶ್ರೀಗಳಿಗೂ ಸಾ. ಶಿ. ಮರುಳಯ್ಯನವರಿಗೂ ನಾನು ಕೃತಜ್ಞ). ಇವಲ್ಲದೆ ಇನ್ನೂ ಹೆಚ್ಚಿನ ಕೃತಿಗಳು ಬೇರೆಡೆ ಕಂಡುಬಂದಿದ್ದು, ಇವನ್ನು ಪರಿಶೀಲಿಸಿ, ಈ ಮುಂದಿನಂತೆ ಉಪಲಬ್ಧ ಕೃತಿಗಳನ್ನು ಹೆಸರಿಸಿದೆ.

(೧) ಅಪರಾಧಸ್ತೋತ್ರ : ಹಾಡಿನ ರೂಪದಲ್ಲಿದೆ (ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಸೂಚಿ, ಸಂ. ೬, ೧೯೯೨, ಪು. ೧೧–೧೨ ; ಸಂ. ೮, ೧೯೯೨, ಪು. ೧೨–೧೩) (೨) ಅಮ್ಮಗಳ ತ್ರಿವಿಧಿ : ೫೫ ತ್ರಿಪದಿಗಳು (ಓ. ೮೮/೧೫, ಹೊನ್ನವಳ್ಳಿ). (೩) ಅಷ್ಟಾವರಣ ತ್ರಿವಿಧಿ : ೧೬ ತ್ರಿಪದಿಗಳು (ಓ. ೮೮/೧, ಅದೇ). (೪) ಅಷ್ಟೋತ್ತರ ಶತಕಂದ : ೧೦೯ ಕಂದಗಳು (ಓ. ೮೮/೨, ಅದೇ). (೫) ಆಚರಣೆಯ ತ್ರಿವಿಧಿ : ೫೯ ತ್ರಿಪದಿಗಳು (ಓ. ೮೮/೫, ಅದೇ ; ಸಂ. ಪಂ. ನಾಗಭೂಷಣಶಾಸ್ತ್ರಿ, ಧಾರವಾಡ, ೧೯೬೬ : ಶಿವಾನು

ಲಿಂಗದ ಚರಿತೆ : ೨೩ ಭಾಮಿನಿ ಷಟ್ಪದಿಗಳು (ಓ. ಗರಿ ೩೦–
೬೮, ೧–೪). (೬) ಇಷ್ಟಲಿಂಗದ ಚರಿತೆ : ೨೩ ಭಾಮಿನಿ ಷಟ್ಪದಿಗಳು (ಓ. ಗರಿ ೩೦–
೩೧ ಮು., ಕೊಟ್ಟೂರಮಠ, ಹೊಸಪೇಟೆ). (೭) ಗಣತಾರಾವಳಿ : ಪಲ್ಲ ಮತ್ತು ೫
ನುಡಿಗಳು (ಸಂ. ವೀರಣ್ಣ ರಾಜೂರ, ಬಸವಪಥ, ೩–೨, ೧೯೮೧ : ಸಂ. ಎಂ. ಎಸ್.
ಬಸವರಾಜಯ್ಯ, ತಾರಾವಳಿ ಸಂಪುಟ ೩, ೧೯೮೯). (೮) ಗಿರಿಜಮ್ಮನ ತ್ರಿವಿಧಿ : ೫೩
ತ್ರಿಪದಿಗಳು (ಓ. ೮೮/೮, ಹೊನ್ನವಳ್ಳಿ). (೯) ಗುರುಕರುಣದ ತ್ರಿವಿಧಿ : ೫೫ ತ್ರಿಪದಿ
ಗಳು (ಓ. ೮೮/೯, ಅದೇ). (೧೦) ಗುರುಕರುಣಾಮೃತ : ಪ+೩೩ ಅ., ಭೋಗಷಟ್ಪದಿ
(ಓ. ೮೮/೧೬, ಅದೇ: ಸಂ. ಚೆನ್ನಮಲ್ಲಿಕಾರ್ಜುನ, ಸದ್ಧರ್ಮದೀಪಿಕೆ, ೨–೩). (೧೧) ಗುರು
ಚೆನ್ನಬಸವರಗಳೆ : ೭೩+೧ ಕಂದ (ಓ. ೮೮/೧೦, ಹೊನ್ನವಳ್ಳಿ). (೧೨) ಗುರುಲಿಂಗದ
ರಗಳೆ : ೭೧+೭+೧ ಕಂದ (ಓ. ೮೮/೧೬ ಅದೇ). (೧೩) ಗುರುಸ್ತೋತ್ರ : ಪ
(ಬಿ. ೨೮೯/೨, ಗದುಗಿನ ತೋಂಟದಾರ್ಯ ಮಠ). (೧೪) ಚೆನ್ನಬಸವೇಶ್ವರ ಷಟ್ಪದ :
೧೬ ವಾರ್ಧಕ ಷಟ್ಪದಿಗಳು (ಓ. ೮೮/೧೧, ಹೊನ್ನವಳ್ಳಿ). (೧೫) ಚೆನ್ನಬಸವೇಶ್ವರ
ತ್ರಿವಿಧಿ : ೮೩ ತ್ರಿಪದಿಗಳು (ಓ. ೮೮/೭, ಅದೇ). (೧೬) ಪಾದಪೂಜೆ ವಚನ : (?).
(೧೭) ಭೈರವೇಶ್ವರನ ತಾರಾವಳಿ : ಪ+ ೧೫ ನುಡಿಗಳು (ಸಂ. ಎಸ್. ಶಿವಣ್ಣ,
ಕಸಾಪ., ೭೦–೧, ೧೯೮೫ : ಎಂ. ಎಸ್. ಬಸವರಾಜಯ್ಯ, ತಾರಾವಳಿ, ಸಂಪುಟ ೩,
೧೯೮೯). (೧೮) ಪುರಾತನ ದೇವಿಯರ ತ್ರಿವಿಧಿ : ೫೪ ತ್ರಿಪದಿಗಳು (ಸಂ. ಚೆನ್ನ
ಮಲ್ಲಿಕಾರ್ಜುನ, ಹಾವೇರಿ, ೧೯೩೩). (೧೯) ಮಂತ್ರಮಹಾತ್ಮೆಯ ರಗಳೆ (ಓ. ೮೮/೧೮,
ಹೊನ್ನವಳ್ಳಿ, ಅಪೂರ್ಣ ; ಎಚ್.ಜಿ. ಸಿದ್ಧಲಿಂಗಯ್ಯ, ಅತ್ತಿಬೆಲೆ). (೨೦) ವ್ಯಾಲಪದ :
ಪ+೨೧ ನುಡಿಗಳು (ಓ, ೮೮/೧೨, ಹೊನ್ನವಳ್ಳಿ). (೨೧) ಶರಣಚರಿತೆ : ೨೩ ತ್ರಿಪದಿ
ಗಳು (ಓ. ೮೮/೧೩ ; ಅದೇ) (೨೨) ಶಿವಯೋಗಾನಂದ ತ್ರಿವಿಧಿ : ೭೧ ತ್ರಿಪದಿಗಳು+
೧ ಕಂದ (ಓ. ೮೮/೬ ; ಅದೇ). (೨೩) ಸ್ವರವಚನಗಳು : (ಓ. ೮೮/೩, ೧೫, ೧೮, ೨೦,
ಅದೇ). (೨೪) ಹರಗಣಂಗಳ ಚರಿತೆ : ೩೩೫ ತ್ರಿಪದಿಗಳು (ಓ. ೮೮/೧೪, ಅದೇ).

# ಬಸವಪ್ಪಶಾಸ್ತ್ರಿಗಳ 'ನೀತಿಸಾರಸಂಗ್ರಹ'

ಎಚ್. ವಿ. ನಾಗರಾಜರಾವ್

ಬಸವಪ್ಪಶಾಸ್ತ್ರಿಗಳ ಕೃತಿ 'ನೀತಿಸಾರಸಂಗ್ರಹ'ದ ಬಗೆಗೆ ಒಂದೆರಡು ವಿಷಯಗಳನ್ನು ವಿದ್ವಾಂಸರ ಅವಗಾಹನೆಗೆ ತರುವುದು ಪ್ರಕೃತ ಲೇಖನದ ಉದ್ದೇಶ.

ಎಂ. ಜಿ. ನಂಜುಂಡಾರಾಧ್ಯರು 'ಬಸವಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳು' ಎಂಬ ಗ್ರಂಥವನ್ನು ಸಂಪಾದಿಸಿ ೧೯೭೭ರಲ್ಲಿ ಪ್ರಕಟಪಡಿಸಿದ್ದಾರೆ. ಈ ಗ್ರಂಥದಲ್ಲಿ ಅವರು ನೀತಿಸಾರಸಂಗ್ರಹವನ್ನು ಶಾಸ್ತ್ರಿಗಳ ಸ್ವತಂತ್ರ ಕೃತಿಗಳಲ್ಲಿ ಸೇರಿಸಿದ್ದಾರೆ (ಪು. ೧೩೫–೫೬). ಗ್ರಂಥಾದಿಯಲ್ಲಿ ಶಾಸ್ತ್ರಿಗಳು ಪೀಠಿಕಾರೂಪದಲ್ಲಿ ಕೊಟ್ಟಿರುವ ಪದ್ಯ ಇದ್ದು, ಇದು ಸ್ವತಂತ್ರಕೃತಿಯೆಂಬ ಭಾವವನ್ನು ಮೂಡಿಸುವ ರೀತಿಯಲ್ಲಿರುವುದು ಕಾರಣವಾಗಿರಬಹುದು. ಆ ಪದ್ಯ ಹೀಗಿದೆ :

ನುತಗುಣ ಚಾಮಮಹೀಪತಿ
ಮತಿಸಚಿವ ನೃಸಿಂಹವರ್ಯನುತ್ಸಾಹಿಸೆ ಸ
ನ್ನುತ ನೀತಿಸಾರಸಂಗ್ರಹ
ಕೃತಿಯಂ ಬಸವಪ್ಪಶಾಸ್ತ್ರಿ ತಾಂ ವಿರಚಿಸಿದಂ ॥

ಈ ಗ್ರಂಥವು ಸರಳ ಭಾಷೆಯಲ್ಲಿ ಆಕರ್ಷಕ ಶೈಲಿಯಲ್ಲಿ, ಉತ್ತಮವಾದ ನೀತಿಯನ್ನು ರಸವತ್ತಾಗಿ ನಿರೂಪಿಸುತ್ತದೆ. ಇದನ್ನು ಓದುತ್ತಿದ್ದಾಗ ಕೆಲವು ಪದ್ಯಗಳು ಮತ್ತೆಲ್ಲೋ ಓದಿದ್ದ ಪದ್ಯಗಳ ಪ್ರತಿಧ್ವನಿಯಂತೆ ಈ ಲೇಖಕನಿಗೆ ತೋರಿದುವು ; ಕೆಲವು ಪದ್ಯಗಳ ಮೂಲ ಸಂಸ್ಕೃತದಲ್ಲಿರುವುದು ನೆನಪಿಗೆ ಬಂತು. ಅಂಥ ಒಂದೆರಡು ಪದ್ಯಗಳು ಸುಪ್ರಸಿದ್ಧವಾದ ಸುಭಾಷಿತಗಳು. ಉದಾಗೆ:

ಫಲಭಾರದಿಂದೆ ಬಾಳೆಗ
ಳೆಳೆಗೆರಗುಗುಮಬ್ದಮಂಬುಭರದಿಂ ಜೋಲ್ಗುಂ ।
ಸಲೆ ಸಿರಿವೆತ್ತುಂ ವಿನಯಂ
ದಳೆದಿರ್ಪರ್ ಜಗದೊಳುತ್ತಮರ್ಗದು ಸಾಜಂ ॥ (ಪ. ೮೩)

ಎಂಬ ಪದ್ಯವು

ಭವಂತಿ ನಮ್ರಾಸ್ತರವಃ ಫಲೋದ್ಗಮೈಃ
ನವಾಂಬುಭಿರ್ದೂರವಿಲಂಬಿನೋ ಘನಾಃ

ಅನುದ್ಧತಾಃ ಸತ್ಪುರುಷಾಃ ಸಮೃದ್ಧಿಭಿಃ
ಸ್ವಭಾವ ಏವೈಷ ಪರೋಪಕಾರಿಣಾಮ್ ॥

ಎಂಬ ಪದ್ಯದ ಸಾಕ್ಷಾತ್ ಅನುವಾದ. ಇದು ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ದ ೫ನೆಯ ಅಂಕದಲ್ಲಿದೆ. ಸ್ವಾರಸ್ಯವೆಂದರೆ ಇದೇ ಪದ್ಯವನ್ನು ಬಸವಪ್ಪಶಾಸ್ತ್ರಿಗಳು 'ಕರ್ಣಾಟಕ ಶಾಕುಂತಲನಾಟಕಂ' ರಚಿಸುವಾಗ ಸ್ವಲ್ಪ ಭಿನ್ನವಾಗಿ ಅನುವಾದಿಸಿದ್ದಾರೆ. ಅಲ್ಲಿರುವ ಈ ಪದ್ಯದ ಅನುವಾದವಿಂತಿದೆ :

ಫಲಭರದೆ ತರ್ಗುಗುಂ ತರು
ಜಲಂಗಳಿಂ ಜೋಲ್ದಪವು ಘನಂಗಳ್ ಸಿರಿಯಿಂ
ತಲೆವಾಗಿ ನಡೆವರುತ್ತಮ
ರಿಳೆಯಲ್ಲಿ ಪರೋಪಕಾರಿಗಳ್ಗಿದು ಸಾಜಂ ॥

ಒಂದು ಕಡೆ 'ತರು' ಎಂಬ ಸಾಮಾನ್ಯವಾಚಕವಿದ್ದರೆ, ಮತ್ತೊಂದು ಕಡೆ, 'ಬಾಳೆ' ಎಂಬ ವೃಕ್ಷವಿಶೇಷವಾಚಕವಿದೆ. ಇದು ಬಿಟ್ಟರೆ ಬೇರೆ ವ್ಯತ್ಯಾಸವಿಲ್ಲ.

ಇದೇ ರೀತಿ ಇನ್ನೊಂದು ಪದ್ಯವನ್ನು ನೋಡೋಣ :

ಪತಿಗನುಕೂಲೆಯೆನಿಪ್ಪಾ
ಸತಿಯೇ ಸತಿ ಪಿತನ ಗುಣದಿ ತೋಷಿಪ ಸುತನೇ ।
ಸುತನಾಪತ್ತಿನೊಳೊಲವಿಂ
ಪತಿಕರಿಸುತ ಪೊರೆವ ಸಖನೆ ಸಖಿನುರ್ವರೆಯೊಳ್ ॥ (೯೬)

ಇದು 'ಸುಭಾಷಿತ ರತ್ನಭಾಂಡಾಗಾರ'ದಲ್ಲಿರುವ ಈ ಒಂದು ಪದ್ಯದ ಅನುವಾದ :

ಯಃ ಪ್ರೀಣಯೇತ್ ಸುಚರಿತ್ರೈಃ ಪಿತರಂ ಸ ಪುತ್ರೋ
ಯದ್ ಭರ್ತುರೇವ ಹಿತಮಿಚ್ಛತಿ ತತ್ ಕಲತ್ರಮ್
ತನ್ಮಿತ್ರಮಾಪದಿ ಸುಖೇ ಚ ಸಮಕ್ರಿಯಂ ಯ
ದೇತತ್ತ್ರಯಂ ಜಗತಿ ಪುಣ್ಯಕೃತೋ ಲಭಂತೇ ॥

ಶಾಸ್ತ್ರಿಗಳು ಸಂಸ್ಕೃತಪದ್ಯದಲ್ಲಿರುವ ಮೂರು ಸಾಲುಗಳ ಅರ್ಥವನ್ನು ಅನುವಾದಿಸಿ, ಅದರ ೪ನೆಯ ಸಾಲಿನಲ್ಲಿರುವ "ಈ ಮೂರನ್ನು ಪುಣ್ಯವಂತರು ಪಡೆಯುತ್ತಾರೆ" ಎಂಬ ಅಂಶವನ್ನು ಮಾತ್ರ ಬಿಟ್ಟಿದ್ದಾರೆ.

ಮತ್ತೊಂದು ಉದಾಹರಣೆ

ಶ್ರುತಿಮತಮೆ ಬೇರೆ ಬಗೆಯಲ್
ಸ್ಮೃತಿಮತಮೇ ಬೇರೆ ಬೇರೆ ಪೇಳ್ದಮುನೀಂದ್ರರ್ ।
ಮತಮೇಂ ಮಹಾಜನಂಗಳ
ಗತಿವಿಡಿದಾಚರಿಪ ಮತಮೆ ಸಂಮತಮಲ್ತೇ ॥(೧೦೨)

ಗತಿವಿಡಿದಾಚರಿಪ ಮತಮೆ ಸಂಮತಮಲ್ತೇ ॥(೧೦೨)

ಇದರ ಮೂಲವೂ 'ಸುಭಾಷಿತ ರತ್ನಭಾಂಡಾಗಾರ'ದಲ್ಲಿದೆ.

ಶ್ರುತಿರ್ವಿಭಿನ್ನಾ ಸ್ಮೃತಯಶ್ಚ ಭಿನ್ನಾ
ನೈಕೋ ಮುನಿರ್ಯಸ್ಯ ಮತಂ ಪ್ರಮಾಣಮ್ ।

ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಂ
ಮಹಾಜನೋ ಯೇನ ಗತಃ ಸ ಪಂಥಾಃ ॥

ಈ ಪದ್ಯದ ಮೂರನೆಯ ಸಾಲಿನಲ್ಲಿರುವ "ಧರ್ಮದ ತತ್ತ್ವ ಗುಹೆಯಲ್ಲಿ ಗೂಢವಾಗಿ ಇಡಲ್ಪಟ್ಟಿದೆ" ಎಂಬ ಅಂಶವು ಶಾಸ್ತ್ರಿಗಳ ಅನುವಾದದಲ್ಲಿ ಬಿಟ್ಟುಹೋಗಿದೆ. ಇದರಿಂದ ಕೊನೆಯ ಸಾಲಿನಲ್ಲಿ ಪ್ರತಿಪಾದಿತವಾಗಿರುವ ನೀತಿಗೆ ಪುಷ್ಟಿ ಕಡಿಮೆಯಾಗಿದೆ. ಹೀಗೆಯೇ

ಚಿರಕಾಲಮಿರುವೆನೆನ್ನುತೆ
ಪಿರಿದಾರ್ಜಿಸಬೇಕು ಧನಮುಮಂ ವಿದ್ಯೆಯುಮಂ ।
ಸರಿರಂ ಕ್ಷಣಭಂಗುರಮೆಂ
ದರಿದಾರ್ಜಿಸಬೇಕು ಧರ್ಮಮಂ ನೀತಿವಿದರ್ ॥

—ಎಂಬ ಪದ್ಯವು

ಅಜರಾಮರವತ್ ಪ್ರಾಜ್ಞೋ ವಿದ್ಯಾಮರ್ಥಂ ಚ ಸಾಧಯೇತ್
ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ॥

—ಎಂಬ ಪದ್ಯದ ಭಾವಾನುವಾದವೆಂಬುದು ಸ್ಪಷ್ಟ. ಮೂಲದಲ್ಲಿ "ಮೃತ್ಯು ನಮ್ಮ ಕೂದಲನ್ನು ಆಗಲೇ ಹಿಡಿದೆಳೆಯುತ್ತಿದ್ದಾನೆಂದು ಭಾವಿಸಿ ಧರ್ಮವನ್ನಾಚರಿಸಬೇಕು" ಎಂದು ಆಲಂಕಾರಿಕವಾಗಿ ಹೇಳಿರುವುದನ್ನು ಶಾಸ್ತ್ರಿಗಳು ವಾಚ್ಯೀಕರಿಸಿ, "ಸರಿರಂ ಕ್ಷಣ ಭಂಗುರಮೆಂದರಿದಾರ್ಜಿಸಬೇಕು ಧರ್ಮಮಂ" ಎಂದು ನಿರೂಪಿಸಿದ್ದಾರೆ.

ಹೀಗೆ ಹಲವು ಪದ್ಯಗಳು ಪ್ರಸಿದ್ಧ ಗ್ರಂಥಗಳಲ್ಲಿ ಕಂಡುಬರುವ ಸುಭಾಷಿತಗಳ ಅನುವಾದಗಳೆಂದು ಸ್ಪಷ್ಟವಾಗುವುದು. ಅನಂತರ ನೀಲಕಂಠದೀಕ್ಷಿತರ 'ಸಭಾರಂಜನಶತಕ'ವನ್ನು ಅವಲೋಕಿಸಿದಾಗ, ಬಸವಪ್ಪಶಾಸ್ತ್ರಿಗಳು ಅಲ್ಲಿನ ಅನೇಕ ಪದ್ಯಗಳನ್ನು ಯಥಾವತ್ತಾಗಿ ಅನುವಾದಿಸಿ 'ನೀತಿಸಾರಸಂಗ್ರಹ'ದಲ್ಲಿ ಸೇರಿಸಿರುವುದು ಸ್ಪಷ್ಟವಾಗಿ ಗೋಚರಿಸಿತು. ತುಲನೆಗಾಗಿ ಕೆಲವು ಪದ್ಯಗಳನ್ನು ಕೆಳಗೆ ಅಕ್ಕಪಕ್ಕದಲ್ಲಿ ಕೊಟ್ಟಿದೆ.

| | | |
|---|---|---|
| ಸಕಲ ಕಲಾವಿತ್ಸುಕವಿ<br>ಪ್ರಕರದೆ ನೃಪಸಭೆ ವಿರಾಜಿಸುಗುಮಲ್ಲದೆ ಸ<br>ನ್ಮುಕುರಸ್ತಂಭವಿತಾನ<br>ಪ್ರಕಟಿತಚಿತ್ರಂಗಳಿಂದದೇಂ ರಂಜಿಕುಮೇ ॥ | ಷಡ್ದರ್ಶನೀ ಪರಿಜ್ಞಾನ<br>ಮಂಡಿತೈರಿವ ಪಂಡಿತೈಃ ।<br>ಸ್ತಂಭೈಶ್ಚಿತ್ರೈರ್ವಿತಾನೈಶ್ಚ<br>ಸಭಾ ಕಿಮವಭಾಸತೇ ॥ | ೧ |
| ಪಲವುಂ ಬಗೆಯ ಮನುಷ್ಯರ್<br>ನೆಲೆಸಿರ್ದೊಡಮೇಂ ಬುಧರ್ಕಳಿಲ್ಲದ ನಾಡಂ<br>ಜಲರುಹಸಖನೊಗೆಯದ ಕ<br>ತ್ತಲೆಗಾಡಿಂಗೆಣೆಯೆನುತ್ತೆ ಪೇಳ್ದಪರಾರ್ಯರ್ ॥ | ಸಂತಿ ಸರ್ವವಿಧಾ ಮರ್ತ್ಯಾಃ<br>ನ ಸಂತ್ಯೇಕೇ ವಿಪಶ್ಚಿತಃ ।<br>ಅಸೂರ್ಯೇಣೇವ ಲೋಕೇನ<br>ಕಿಂ ತೇನ ವಿಷಯೇಣ ನಃ ॥ | ೨ |
| ಮಾನವಜನ್ಮದೊಳೊಗೆದುಂ<br>ಜ್ಞಾನಮನಾನದವರಕಟ ಪಶುವಾಗಿರಲೆ<br>ತ್ತಾನುಂ ಲೇಸೇಕೆನಲ<br>ಜ್ಞಾನದಿನಪ್ಪೆಡರು ಪಶುತೆಯಿಂದಡಸುಗುಮೇ ॥ | ಅಪಿ ಮಾನುಷ್ಯಕಂ ಲಬ್ಧ್ವಾ<br>ಭವಂತಿ ಜ್ಞಾನಿನೋ ನ ಯೇ ।<br>ಪಶುತೈವ ವರಂ ತೇಷಾಂ<br>ಪ್ರತ್ಯವಾಯಾಪ್ರವರ್ತನಾತ್ ॥ | ೩ |

| | | |
|---|---|---|
| ಉದಿಸುಗೆ ಪಲವುಂ ಭಾಸ್ಕರ | ಉದ್ಯಂತು ಶತಮಾದಿತ್ಯಾ | |
| ರುದಿಸುಗೆ ಪಲವುಂ ಕಠೋರಪೀಯೂಷಕರರ್ | ಉದ್ಯಂತು ಶತಮಿಂದವಃ । | |
| ಸದಸದ್ವಿವೇಕಪರ ಕೋ | ನ ವಿನಾ ವಿದುಷಾಂ ವಾಕ್ಯೈಃ | |
| ವಿದವಾಕ್ಯದಿನಲ್ಲದಳಿಯದಂತಸ್ಥ ತಮಂ ॥ | ನಶ್ಯತ್ಯಾಭ್ಯಂತರಂ ತಮಃ ॥ | ೩ |
| ಜ್ಞಾನೇಂದ್ರಿಯದಿಂ ದೇಹಂ | ತತ್ರ ತತ್ರ ಸ್ಥಿತೈರ್ಜ್ಞಾನ | |
| ಶಾನೆಯೆಂದದೊಳೆ ಶಿಳಿದ ಜನರಿಂ ದೇಶಂ | ಕರಣೈರಿವ ವಿಗ್ರಹಃ । | |
| ಭೂಸುತಮಾಗೆಸೆವುದು ಬುಧ | ವಿದ್ವದ್ಭಿಃ ಶೋಭತೇ ದೇಶಃ | |
| ಹೀನಮದಾಗಿರ್ಪ ನಾಡಮಂಗಳಮಲ್ತೇ ॥ | ತೈರ್ವಿಹೀನಸ್ತ್ವಮಂಗಲಃ ॥ | ೧೧ |
| ಕಾಣೆಪುದಾವುದದಾವುದು | ಕಿಂ ಪರೋಕ್ಷಂ ಕಿಮಧ್ಯಕ್ಷಂ | |
| ಕಾಣಿಸದಾವುದದು ಸುಲಭಮುಂ ದುರ್ಲಭಮುಂ | ಕಿಂ ಲಭ್ಯಂ ಕಿಂ ನು ದುರ್ಲಭಮ್ । | |
| ಕ್ಷೋಣಿಯ ವಸ್ತುಗಳೆಲ್ಲಂ | ಸರ್ವಮೈಂದ್ರಿಯಿಕಂ ವಸ್ತು | |
| ಪಾಣಿಗತಂ ಗಡ ಮಹಾತ್ಮರಾದವರ್ಗೆ ವಲಂ ॥ | ಸರ್ವಂ ಕರಗತಂ ಸತಾಮ್ ॥ | ೮ |

ಮೇಲೆ ಕೆಲವು ಉದಾಹರಣೆಗಳನ್ನು ಮಾತ್ರ ಕೊಟ್ಟಿದೆ. 'ನೀತಿಸಾರಸಂಗ್ರಹ'ದಲ್ಲಿರುವ ೧೨೦ ಪದ್ಯಗಳಲ್ಲಿ ೬೬ ಪದ್ಯಗಳು 'ಸಭಾರಂಜನ ಶತಕ'ದಲ್ಲಿರುವ ಪದ್ಯಗಳ ಅನುವಾದ ವೆಂಬುದು ಈ ಎರಡು ಗ್ರಂಥಗಳನ್ನೂ ತೌಲನಿಕವಾಗಿ ನೋಡಿದರೆ ಗೋಚರವಾಗುತ್ತದೆ. ಶಾಸ್ತ್ರಿಗಳ 'ನೀತಿಸಾರಸಂಗ್ರಹ'ದಿಂದಲೇ ಪ್ರಭಾವಿತರಾಗಿ ನೀಲಕಂಠದೀಕ್ಷಿತರು ಏಕೆ ತಮ್ಮ ಗ್ರಂಥವನ್ನು ರಚಿಸಿರಬಾರದು—ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ನೀಲಕಂಠ ದೀಕ್ಷಿತರ ಕಾಲ ನಿರ್ವಿವಾದವಾಗಿ ೧೭ನೆಯ ಶತಮಾನದ ಪೂರ್ವಾರ್ಧ.

ಇತರ ಪದ್ಯಗಳೂ ವಿವಿಧ ಸಂಸ್ಕೃತ ಗ್ರಂಥಗಳಲ್ಲಿರುವ ಸುಭಾಷಿತಗಳ ಪೂರ್ಣ ಅಥವಾ ಭಾಗಶಃ ಅನುವಾದ. ನೀತಿಸಾರಸಂಗ್ರಹ ಎಂಬ ಹೆಸರೇ ಈ ಅಂಶವನ್ನು ಸೂಚ್ಯವಾಗಿ ತಿಳಿಸುವುದು. ಅಂಬಿಲ್ ನರಸಿಂಹಯ್ಯಂಗಾರ್ಯರು, ಶಾಸ್ತ್ರಿಗಳು ಆಗಾಗ ಹೇಳುತ್ತಿದ್ದ ಸ್ವಾರಸ್ಯಪೂರ್ಣ ಸಂಸ್ಕೃತಸುಭಾಷಿತಗಳನ್ನು ಕೇಳಿ ಅವನ್ನು ಕನ್ನಡಿಸುವಂತೆ ವಿನಂತಿಸಿರ ಬೇಕು. ಆಗ ಶಾಸ್ತ್ರಿಗಳು ಪದ್ಯಗಳನ್ನು ಅನುವಾದಿಸಿ ಒಟ್ಟಿಗೆ ಸೇರಿಸಿ 'ನೀತಿಸಾರಸಂಗ್ರಹ' ಎಂಬ ಹೆಸರನ್ನಿಟ್ಟಿರಬಹುದು.

'ನೀತಿಸಾರಸಂಗ್ರಹ'ವನ್ನು ಬಸವಪ್ಪಶಾಸ್ತ್ರಿಗಳ ಸ್ವತಂತ್ರಗ್ರಂಥವೆಂದು ಪರಿಗಣಿಸದೆ, ಅವರ ಅನುವಾದಗಳೊಡನೆ ಸೇರಿಸುವುದು ಉಚಿತ.

| | | |
|---|---|---|
| ಉದಿಸುಗೆ ಪಲವುಂ ಭಾಸ್ಕರ | ಉದ್ಯಂತು ಶತಮಾದಿತ್ಯಾ | |
| ರುದಿಸುಗೆ ಪಲವುಂ ಕಠೋರಪೀಯೂಷಕರರ್ | ಉದ್ಯಂತು ಶತಮಿಂದವಃ । | |
| ಸದಸದ್ವಿವೇಕಪರ ಕೋ | ನ ವಿನಾ ವಿದುಷಾಂ ವಾಕ್ಯೈಃ | |
| ವಿದವಾಕ್ಯದಿನಲ್ಲದಳಿಯದಂತಸ್ಥ ತಮಂ ॥ | ನಶ್ಯತ್ಯಾಭ್ಯಂತರಂ ತಮಃ ॥ | ೩ |
| ಜ್ಞಾನೇಂದ್ರಿಯದಿಂ ದೇಹಂ | ತತ್ರ ತತ್ರ ಸ್ಥಿತೈರ್ಜ್ಞಾನ | |
| ತಾನೆಸೆವಂದದೊಳೆ ತಿಳಿದ ಜನರಿಂ ದೇಶಂ | ಕರಣೈರಿವ ವಿಗ್ರಹಃ । | |
| ಭೂನುತಮಾಗೆಸೆವುದು ಬುಧ | ವಿದ್ವದ್ಭಿಃ ಶೋಭತೇ ದೇಶಃ | |
| ಹೀನಮದಾಗಿರ್ಪ ನಾಡಮಂಗಳಮಲ್ತೇ ॥ | ತೈರ್ವಿಹೀನಸ್ತ್ವಮಂಗಲಃ ॥ | ೧೧ |
| ಕಾಣಿಪುದಾವುದದಾವುದು | ಕಿಂ ಪರೋಕ್ಷಂ ಕಿಮಧ್ಯಕ್ಷಂ | |
| ಕಾಣಿಸದಾವುದದು ಸುಲಭಮುಂ ದುರ್ಲಭಮುಂ | ಕಿಂ ಲಭ್ಯಂ ಕಿಂ ನು ದುರ್ಲಭಮ್ । | |
| ಕ್ಷೋಣಿಯ ವಸ್ತುಗಳೆಲ್ಲಂ | ಸರ್ವಮೈಂದ್ರಿಯಿಕಂ ವಸ್ತು | |
| ಪಾಣಿಗತಂ ಗಡ ಮಹಾತ್ಮರಾದವರ್ಗೆ ವಲಂ ॥ | ಸರ್ವಂ ಕರಗತಂ ಸತಾಮ್ ॥ | ೮ |

ಮೇಲೆ ಕೆಲವು ಉದಾಹರಣೆಗಳನ್ನು ಮಾತ್ರ ಕೊಟ್ಟಿದೆ. 'ನೀತಿಸಾರಸಂಗ್ರಹ'ದಲ್ಲಿರುವ ೧೨೦ ಪದ್ಯಗಳಲ್ಲಿ ೬೬ ಪದ್ಯಗಳು 'ಸಭಾರಂಜನ ಶತಕ'ದಲ್ಲಿರುವ ಪದ್ಯಗಳ ಅನುವಾದ ವೆಂಬುದು ಈ ಎರಡು ಗ್ರಂಥಗಳನ್ನೂ ತೌಲನಿಕವಾಗಿ ನೋಡಿದರೆ ಗೋಚರವಾಗುತ್ತದೆ.

ಶಾಸ್ತ್ರಿಗಳ 'ನೀತಿಸಾರಸಂಗ್ರಹ'ದಿಂದಲೇ ಪ್ರಭಾವಿತರಾಗಿ ನೀಲಕಂಠದೀಕ್ಷಿತರು ಏಕೆ ತಮ್ಮ ಗ್ರಂಥವನ್ನು ರಚಿಸಿರಬಾರದು—ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ನೀಲಕಂಠ ದೀಕ್ಷಿತರ ಕಾಲ ನಿರ್ವಿವಾದವಾಗಿ ೧೭ನೆಯ ಶತಮಾನದ ಪೂರ್ವಾರ್ಧ.

ಇತರ ಪದ್ಯಗಳೂ ವಿವಿಧ ಸಂಸ್ಕೃತ ಗ್ರಂಥಗಳಲ್ಲಿರುವ ಸುಭಾಷಿತಗಳ ಪೂರ್ಣ ಅಥವಾ ಭಾಗಶಃ ಅನುವಾದ. ನೀತಿಸಾರಸಂಗ್ರಹ ಎಂಬ ಹೆಸರೇ ಈ ಅಂಶವನ್ನು ಸೂಚ್ಯವಾಗಿ ತಿಳಿಸುವುದು. ಅಂಬಿಲ್ ನರಸಿಂಹಯ್ಯಂಗಾರ್ಯರು, ಶಾಸ್ತ್ರಿಗಳು ಆಗಾಗ ಹೇಳುತ್ತಿದ್ದ ಸ್ವಾರಸ್ಯಪೂರ್ಣ ಸಂಸ್ಕೃತಸುಭಾಷಿತಗಳನ್ನು ಕೇಳಿ ಅವನ್ನು ಕನ್ನಡಿಸುವಂತೆ ವಿನಂತಿಸಿರ ಬೇಕು. ಆಗ ಶಾಸ್ತ್ರಿಗಳು ಪದ್ಯಗಳನ್ನು ಅನುವಾದಿಸಿ ಒಟ್ಟಿಗೆ ಸೇರಿಸಿ 'ನೀತಿಸಾರಸಂಗ್ರಹ' ಎಂಬ ಹೆಸರನ್ನಿಟ್ಟಿರಬಹುದು.

'ನೀತಿಸಾರಸಂಗ್ರಹ'ವನ್ನು ಬಸವಪ್ಪಶಾಸ್ತ್ರಿಗಳ ಸ್ವತಂತ್ರಗ್ರಂಥವೆಂದು ಪರಿಗಣಿಸದೆ, ಅವರ ಅನುವಾದಗಳೊಡನೆ ಸೇರಿಸುವುದು ಉಚಿತ.

# ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅನುಭಾವ

**ಗುರುಲಿಂಗ ಕಾಪಸೆ**

ಅನುಭಾವವೆಂಬುದು ಆತ್ಮವಿದ್ಯೆ, ಆತ್ಮ ಅಥವಾ ಪರಮಾತ್ಮ ತತ್ತ್ವದಲ್ಲಿ ದೃಷ್ಟಿಯಿರಿಸಿ, ನಿರಂತರ ಸಾಧನೆಯಿಂದ ಆತ್ಮ (ಪರಮಾತ್ಮ) ಸಾಕ್ಷಾತ್ಕಾರ ಮಾಡಿಕೊಳ್ಳುವುದು ಶರಣರ, ದಾಸರ, ಸಂತರ ಚರಮಗುರಿ. ಸಾಧನೆಯ ವಿವಿಧ ಘಟ್ಟಗಳಲ್ಲಿ ಹಾಗೂ ಸಿದ್ಧಿಯ ಅನುಭವದಲ್ಲಿ ಇಂಥ ಮಹಾನುಭಾವರು ನುಡಿದುದು ಅನುಭಾವ ಸಾಹಿತ್ಯವಾಗುತ್ತದೆ; ಹಾಡಿದುದು ಅನುಭಾವ ಕಾವ್ಯವಾಗುತ್ತದೆ. ವೇದೋಪನಿಷತ್ಕಾಲದಿಂದಲೂ ಇಂಥ ಸಾಹಿತ್ಯ ನಮ್ಮಲ್ಲಿರುವುದು ಎಲ್ಲರಿಗೂ ತಿಳಿದಿರುವ ವಿಷಯ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಶರಣರು, ಸಂತರು ಇದ್ದಾರೆಯೇ ? ಇದು ಮೂಲಭೂತವಾಗಿರುವ ಪ್ರಶ್ನೆ. ನವೋದಯ ತಲೆಮಾರಿನಲ್ಲಿರುವ ಅನೇಕ ಧೀಮಂತ ಸಾಹಿತಿಗಳು ನಮಗೆ ಪರಿಚಿತರಾಗಿರುವುದು ತಮ್ಮ ಲೌಕಿಕ ಸಾಹಿತ್ಯ ಸೃಷ್ಟಿಯಿಂದಲೇ. ಮಧುರಚೆನ್ನರೊಬ್ಬರು ಮಾತ್ರ ಈ ಮಾತಿಗೆ ಹೊರತಾಗುತ್ತಾರೆ. ವಸ್ತುಸ್ಥಿತಿ ಹೀಗಿದ್ದರೂ ಅನುಭಾವದ ಪರಂಪರೆ ನಮ್ಮ ಸಾಹಿತಿಗಳಿಂದ, ಹೆಚ್ಚಾಗಿ ಕವಿಗಳಿಂದ, ಮುಂದುವರಿದಿದ್ದುದನ್ನು ನಾವು ಧಾರಾಳವಾಗಿಯೇ ಗುರುತಿಸಲು ಸಾಧ್ಯವಿದೆ.

ಭಗವದ್‌ಗೀತೆಯನ್ನೊಳಗೊಂಡು ಶರಣಸಾಹಿತ್ಯ ಮತ್ತು ದಾಸಸಾಹಿತ್ಯವನ್ನು ಅಭ್ಯಸಿಸಿದ ಕನ್ನಡದ ನವೋದಯ ಕವಿಗಳ ಮೇಲೆ ಶ್ರೀರಾಮಕೃಷ್ಣ ಪರಮಹಂಸರ, ಶ್ರೀ ಅರವಿಂದರ ಪ್ರಭಾವವೂ ಸಾಕಷ್ಟಿದೆ. ಲೌಕಿಕ ವಿಷಯಗಳಿಗೆ ಸಾಂಸ್ಕೃತಿಕ ಕಾಳಜಿಯಿಂದ ಸ್ಪಂದಿಸಿದ ಈ ತಲೆಮಾರಿನ ಕವಿಗಳು ಆಧ್ಯಾತ್ಮಿಕ ಚಿಂತನೆಯಿಂದ ಅನುಭಾವಿಕ ನೆಲೆಯಲ್ಲಿಯೂ ಅರ್ಥಪೂರ್ಣವಾಗಿಯೇ ಸ್ಪಂದಿಸಿರುವರು. "ಪ್ರತಿಯೊಬ್ಬ ಕವಿಯಲ್ಲಿ ಅನುಭಾವದ ಅಂಶವಿದ್ದೇ ಇರುತ್ತದೆ" ಎಂದು ನುಡಿದ ವಿ. ಕೃ. ಗೋಕಾಕರ ಮಾತು ನವೋದಯ ಕವಿಗಳನ್ನೇ ದೃಷ್ಟಿಯಲ್ಲಿರಿಸಿಕೊಂಡು ಹೇಳಿದುದಾಗಿದೆ.

ಅನುಭಾವ ಸಾಧನೆಗೆ ಮುಖ್ಯವಾದ ಮಾರ್ಗಗಳು ಎರಡು : ೧. ಭಕ್ತಿಮಾರ್ಗ, ೨. ಸಾಧನಮಾರ್ಗ ಅಥವಾ ತಪಸ್ಯಾಮಾರ್ಗ. ಭಕ್ತಿಮಾರ್ಗದಲ್ಲಿ ಶ್ರದ್ಧೆ, ಸಮರ್ಪಣ ಭಾವಗಳು ಮುಖ್ಯವಾಗಿದ್ದರೆ, ಸಾಧನಮಾರ್ಗದಲ್ಲಿ ವ್ರತ, ನಿಯಮಗಳಿರುತ್ತವೆ. ಪಾತಂಜಲಿ ಹೇಳುವ ಅಷ್ಟಾಂಗಯೋಗವು ಇಲ್ಲಿ ಮಹತ್ವದ್ದು. ಗುರುಕೃಪೆ, ದೇವಾನುಗ್ರಹಕ್ಕಾಗಿ ನಿರಂತರವಾದ ಪ್ರಾರ್ಥನೆ ನಡೆದು, ತನ್ನನ್ನು ತಾನು ಅರಿತುಕೊಳ್ಳುವವರೆಗೆ

# ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅನುಭಾವ

**ಗುರುಲಿಂಗ ಕಾಪಸೆ**

ಅನುಭಾವವೆಂಬುದು ಆತ್ಮವಿದ್ಯೆ, ಆತ್ಮ ಅಥವಾ ಪರಮಾತ್ಮ ತತ್ತ್ವದಲ್ಲಿ ದೃಷ್ಟಿಯಿರಿಸಿ, ನಿರಂತರ ಸಾಧನೆಯಿಂದ ಆತ್ಮ (ಪರಮಾತ್ಮ) ಸಾಕ್ಷಾತ್ಕಾರ ಮಾಡಿಕೊಳ್ಳುವುದು ಶರಣರ, ದಾಸರ, ಸಂತರ ಚರಮಗುರಿ. ಸಾಧನೆಯ ವಿವಿಧ ಘಟ್ಟಗಳಲ್ಲಿ ಹಾಗೂ ಸಿದ್ಧಿಯ ಅನುಭವದಲ್ಲಿ ಇಂಥ ಮಹಾನುಭಾವರು ನುಡಿದುದು ಅನುಭಾವ ಸಾಹಿತ್ಯವಾಗುತ್ತದೆ; ಹಾಡಿದುದು ಅನುಭಾವ ಕಾವ್ಯವಾಗುತ್ತದೆ. ವೇದೋಪನಿಷತ್ಕಾಲದಿಂದಲೂ ಇಂಥ ಸಾಹಿತ್ಯ ನಮ್ಮಲ್ಲಿರುವುದು ಎಲ್ಲರಿಗೂ ತಿಳಿದಿರುವ ವಿಷಯ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಶರಣರು, ಸಂತರು ಇದ್ದಾರೆಯೇ? ಇದು ಮೂಲಭೂತವಾಗಿರುವ ಪ್ರಶ್ನೆ. ನವೋದಯ ತಲೆಮಾರಿನಲ್ಲಿರುವ ಅನೇಕ ಧೀಮಂತ ಸಾಹಿತಿಗಳು ನಮಗೆ ಪರಿಚಿತರಾಗಿರುವುದು ತಮ್ಮ ಲೌಕಿಕ ಸಾಹಿತ್ಯ ಸೃಷ್ಟಿಯಿಂದಲೇ. ಮಧುರಚೆನ್ನರೊಬ್ಬರು ಮಾತ್ರ ಈ ಮಾತಿಗೆ ಹೊರತಾಗುತ್ತಾರೆ. ವಸ್ತುಸ್ಥಿತಿ ಹೀಗಿದ್ದರೂ ಅನುಭಾವದ ಪರಂಪರೆ ನಮ್ಮ ಸಾಹಿತಿಗಳಿಂದ, ಹೆಚ್ಚಾಗಿ ಕವಿಗಳಿಂದ, ಮುಂದುವರಿದಿದ್ದುದನ್ನು ನಾವು ಧಾರಾಳವಾಗಿಯೇ ಗುರುತಿಸಲು ಸಾಧ್ಯವಿದೆ.

ಭಗವದ್ಗೀತೆಯನ್ನೊಳಗೊಂಡು ಶರಣಸಾಹಿತ್ಯ ಮತ್ತು ದಾಸಸಾಹಿತ್ಯವನ್ನು ಅಭ್ಯಸಿಸಿದ ಕನ್ನಡದ ನವೋದಯ ಕವಿಗಳ ಮೇಲೆ ಶ್ರೀರಾಮಕೃಷ್ಣ ಪರಮಹಂಸರ, ಶ್ರೀ ಅರವಿಂದರ ಪ್ರಭಾವವೂ ಸಾಕಷ್ಟಿದೆ. ಲೌಕಿಕ ವಿಷಯಗಳಿಗೆ ಸಾಂಸ್ಕೃತಿಕ ಕಾಳಜಿಯಿಂದ ಸ್ಪಂದಿಸಿದ ಈ ತಲೆಮಾರಿನ ಕವಿಗಳು ಆಧ್ಯಾತ್ಮಿಕ ಚಿಂತನೆಯಿಂದ ಅನುಭಾವಿಕ ನೆಲೆಯಲ್ಲಿಯೂ ಅರ್ಥಪೂರ್ಣವಾಗಿಯೇ ಸ್ಪಂದಿಸಿರುವರು. "ಪ್ರತಿಯೊಬ್ಬ ಕವಿಯಲ್ಲಿ ಅನುಭಾವದ ಅಂಶವಿದ್ದೇ ಇರುತ್ತದೆ" ಎಂದು ನುಡಿದ ವಿ. ಕೃ. ಗೋಕಾಕರ ಮಾತು ನವೋದಯ ಕವಿಗಳನ್ನೇ ದೃಷ್ಟಿಯಲ್ಲಿರಿಸಿಕೊಂಡು ಹೇಳಿದುದಾಗಿದೆ.

ಅನುಭಾವ ಸಾಧನೆಗೆ ಮುಖ್ಯವಾದ ಮಾರ್ಗಗಳು ಎರಡು: ೧. ಭಕ್ತಿಮಾರ್ಗ, ೨. ಸಾಧನಮಾರ್ಗ ಅಥವಾ ತಪಸ್ಯಾಮಾರ್ಗ. ಭಕ್ತಿಮಾರ್ಗದಲ್ಲಿ ಶ್ರದ್ಧೆ, ಸಮರ್ಪಣ ಭಾವಗಳು ಮುಖ್ಯವಾಗಿದ್ದರೆ, ಸಾಧನಮಾರ್ಗದಲ್ಲಿ ವ್ರತ, ನಿಯಮಗಳಿರುತ್ತವೆ. ಪಾತಂಜಲಿ ಹೇಳುವ ಅಷ್ಟಾಂಗಯೋಗವು ಇಲ್ಲಿ ಮಹತ್ವದ್ದು. ಗುರುಕೃಪೆ, ದೇವಾನುಗ್ರಹಕ್ಕಾಗಿ ನಿರಂತರವಾದ ಪ್ರಾರ್ಥನೆ ನಡೆದು, ತನ್ನನ್ನು ತಾನು ಅರಿತುಕೊಳ್ಳುವವರೆಗೆ

ದೈವೀಪ್ರಜ್ಞೆಯಲ್ಲಿ (Divine consciousness) [illegible]
ಅಂದರೆ ದೈವೀಪ್ರಜ್ಞೆಯಲ್ಲಿ ನಡೆಯಬೇಕಾಗುತ್ತದೆ. ಅನುಭಾವ ಕವಿ ತನ್ನ ಸಾಧನೆಯು ಅಂದಂದಿನ ವರೆಗೆ ಸಾಧನೆ ನಡೆಯಬೇಕಾಗುತ್ತದೆ. ಅನುಭವಗಳನ್ನು ಅಭಿವ್ಯಕ್ತಗೊಳಿಸುತ್ತ ಹೋಗುತ್ತಾನೆ. ಅವನ ಅನುಭವವು ಭಾವನಿಷ್ಠ (Subjective) ಆಗಿರುವುದರಿಂದ ಅದನ್ನು ಕಾರ್ಯರೂಪಕ್ಕೆ ತರುವಾಗ ಸಂಕೇತ, ಪ್ರತಿಮೆಗಳನ್ನು ಅನಿವಾರ್ಯವಾಗಿ ಆಶ್ರಯಿಸಬೇಕಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಬೆಡಗಿನ ರೂಪವನ್ನು ಅವನ ಕಾವ್ಯ ಪಡೆದುಕೊಳ್ಳುತ್ತದೆ.

ಆಧುನಿಕ ಸಾಹಿತ್ಯ ಕಾವ್ಯ, ಕತೆ, ಕಾದಂಬರಿ, ನಾಟಕ ಇತ್ಯಾದಿ ಪ್ರಕಾರಗಳಲ್ಲಿ ಬೆಳೆದಿದ್ದರೂ ಸಾಧನೆಯ ರೂಪದ ಅನುಭಾವದ ವಸ್ತು ಎಲ್ಲ ಪ್ರಕಾರಗಳನ್ನೂ ವ್ಯಾಪಿಸಿಲ್ಲ. ಮಹಾತ್ಮರ ಜೀವನವನ್ನು ವಸ್ತುವಾಗಿರಿಸಿಕೊಂಡ ಕತೆ, ಕಾದಂಬರಿ, ನಾಟಕಗಳಲ್ಲಿ ಅದು ತಕ್ಕಮಟ್ಟಿಗೆ ಪ್ರಕಟವಾಗಿದೆ. ನಿಜಗುಣ ಶಿವಯೋಗಿ, ಅಲ್ಲಮಪ್ರಭು, ಅಕ್ಕಮಹಾದೇವಿ ಈ ಮೊದಲಾದವರನ್ನು ಕುರಿತಾದ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಅನುಭಾವಕ್ಕಿಂತ ಚಾರಿತ್ರಿಕ ಅಂಶಗಳೇ ಹೆಚ್ಚಾಗಿರುವುದನ್ನು ಕಾಣಬಹುದು. ಇದು ಆ ಆ ಪ್ರಕಾರಗಳಲ್ಲಿ ಸಹಜವಾದದ್ದೂ ಅಹುದು. ಈ ಬಗೆಯ ಕಾರ್ಯವನ್ನು ಹರಿಹರ, ರಾಘವಾಂಕ, ಚಾಮರಸ ಮೊದಲಾದ ಕವಿಗಳು ತಮ್ಮ ಕಾವ್ಯನಿರ್ಮಿತಿಯಲ್ಲಿ ಬಹಳ ದಿನಗಳ ಹಿಂದೆಯೇ ಮಾಡಿದ್ದುಂಟು. 'ಸಾರಿ ಪೇಳುವೆ ಕೃಷ್ಣಕಥೆಯನು' ಎಂದು ನುಡಿದ ಕುಮಾರವ್ಯಾಸ ಮಹಾಭಾರತದ ವ್ಯಕ್ತಿಗಳಿಗೆ ಹೊಸಜೀವ ತುಂಬಿದ್ದಲ್ಲದೆ ತನ್ನ ಭಕ್ತಿಪಾರಮ್ಯವನ್ನೂ ವ್ಯಕ್ತಪಡಿಸಿದ್ದುಂಟು. ಅಲ್ಲಿಗಲ್ಲಿಗೆ ಕಾವ್ಯದ ನೆಯ್ಗೆಯಲ್ಲಿ ಆಧ್ಯಾತ್ಮಿಕ, ಅನುಭವದ ಎಳೆಗಳು ಕಂಡುಬರುತ್ತಲೇ ಇವೆ.

ಇಪ್ಪತ್ತನೆಯ ಶತಮಾನದಲ್ಲಿ ಶರಣರಂತೆ, ದಾಸರಂತೆ ಬಾಳುವ ವ್ಯಕ್ತಿಗಳು ನಾಡಿನ ಯಾವುದೋ ಒಂದು ಮೂಲೆಯಲ್ಲಿ, ಗ್ರಾಮೀಣ ಪ್ರದೇಶದಲ್ಲಿ ಕಣ್ಣಿಗೆ ಬೀಳುತ್ತಾರೆ. ಅವರದೇ ಆದ ಸಾಧನೆಯೊಂದಿದ್ದು, ಅವರು ತಮ್ಮ ತಮ್ಮ ಸುತ್ತುಮುತ್ತಲಿನ ಜನರ ಮೇಲೆ ಪ್ರಭಾವ ಬೀರಿದವರೂ ಆಗಿರುತ್ತಾರೆ. ಅಂಥವರ ಜೀವನವು ಕತೆ, ಕಾದಂಬರಿಗಳಿಗೆ ವಸ್ತುವಾಗಿ ಬಂದಿದ್ದುದು ಅಪರೂಪ. ಎಚ್. ತಿಪ್ಪೇರುದ್ರಸ್ವಾಮಿಗಳ 'ಜಡದಲ್ಲಿ ಜಂಗಮ' ಅಂಥ ಕಾದಂಬರಿಗಳಲ್ಲೊಂದೆಂದು ಹೇಳಬಹುದಾದರೂ ಕಾದಂಬರಿಯ ವಸ್ತು ಹದಿನೇಳನೆಯ ಶತಮಾನದ್ದು. ಜೀವನಚರಿತ್ರೆ ಪ್ರಕಾರದಲ್ಲಿ ಶ್ರೀರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಶಾರದಾಮಣಿದೇವಿ, ಶ್ರೀ

ಉತ್ತಂಗಿ, ಸಂ. ಶಿ. ಭೂಸನೂರಮಠ ಮುಂತಾದವರ ಬರವಣಿಗೆಯಲ್ಲಿಯೂ ಅನುಭಾವ ಚಿಂತನೀಯ ವಿಷಯವಾಗಿರುವುದು ಮಹತ್ವದ ಸಂಗತಿಯಾಗಿದೆ.

ಡಿ.ವಿ.ಜಿ. ಕುವೆಂಪು, ಬೇಂದ್ರೆ ಮುಂತಾದವರು ಆಧ್ಯಾತ್ಮಿಕ ಸಾಧನೆಗೆ ಹೊಸ ರೂಪ ಕೊಡಲು ಯತ್ನಿಸಿದ್ದೂ ಕಂಡುಬರುತ್ತದೆ. 'ಭಕ್ತಿ' ಎಂಬುದನ್ನು ತಮ್ಮದೇ ಆದ ರೀತಿಯಲ್ಲಿ ವಿವರಿಸಿದ ಡಿ.ವಿ.ಜಿ.ಯವರು 'ಬಾಳಿಗೊಂದು ನಂಬಿಕೆ' ಎಂಬ ಪುಸ್ತಕದಲ್ಲಿ "ಭಕ್ತಿಯೆಂಬುದು ಬರಿ ಮನಸ್ಸಿನ ತಳಮಳವಲ್ಲ ; ಪುರುಷಶಕ್ತಿಯ ಪ್ರಯೋಗವೂ ಹೌದು. ಭಕ್ತಿಯೆಂಬುದು ಎದೆಯಿಂದ ಗಂಟಲಿನ ದ್ವಾರಾ ಹರಿದು ಬರುವ-ಒಂದು ರಸ-ಎಂಬುದು ಹಳೆಯ ಭಾವನೆ. ಭಕ್ತಿಯೆಂಬುದು ತಲೆಯಿಂದ ಕೈಗಳ ದ್ವಾರಾ ಹರಿದು ಬರುವ ಆತ್ಮಶಕ್ತಿ ಎಂಬುದು ನಮ್ಮ ಭಾವನೆ. ಭಕ್ತಿಗೆ ಹೃದಯವೊಂದೇ ಪೀಠವೆಂದು ಪೂರ್ವದ ಭಾವನೆ ; ಭಕ್ತಿಯ ಒಂದು ಪಾದ ಹೃದಯದಲ್ಲಿ, ಇನ್ನೊಂದು ಪಾದ ಬುದ್ಧಿಯಲ್ಲಿ ನಿಂತಿರುತ್ತದೆಂದು ನಮ್ಮ ಭಾವನೆ. ಭಕ್ತಿ ದೇವರಿಗೆ ತಲುಪಬೇಕೆಂಬುದು ತಲುಪತಕ್ಕುದೆಂದು ನಮ್ಮ ಭಾವನೆ. ಭಕ್ತಿ ದೇವರು ಸೃಷ್ಟಿಮಾಡಿರುವ ದೇವರ ಪ್ರತ್ಯಕ್ಷ ಕಾರ್ಯವಾದ–ಜೀವಲೋಕಕ್ಕೆ ತಲುಪಬೇಕಾದದ್ದೆಂದು ನಮ್ಮ ಭಾವನೆ..." ಲೋಕಹಿತಕಾರಕವಾದ, ಕಾಯಕನಿಷ್ಠವಾದ ಭಕ್ತಿಯನ್ನು ಬಸವಣ್ಣನವರೂ ಅವರ ಸಮಕಾಲೀನರೂ ಬೋಧಿಸಿದ್ದರು. ಡಿ.ವಿ.ಜಿ.ಯವರು ಅಂತಹದೇ ವಿಚಾರವನ್ನು ಇನ್ನೊಂದು ವಿಧದಿಂದ ಹೇಳಿದ್ದುಂಟು. ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ' ಬದುಕಿನ ಆದರ್ಶದ ಗಣಿಯಾಗಿರುವಂತೆ ಆಧ್ಯಾತ್ಮಿಕ ಭಾವಗಳನ್ನೂ ಅಲ್ಲಿಗಲ್ಲಿಗೆ ಮಿಂಚಿಸುತ್ತದೆ.

> ಜೀವಜಡ ಪ್ರಪಂಚವನದಾವುದೋ । ಆವರಿಸಿಕೊಂಡುಮೊಳನೆರೆದುಮಿಹುದಂತೆ ।
> ಭಾವಕೊಳಪಡದಂತೆ ಅಳತೆಗಳವಡದಂತೆ । ಆ ವಿಶೇಷಕೆ ಮಣಿಯೋ ಮಂಕುತಿಮ್ಮ ॥
> .................................................
> ಬಹುವಾಗಲೆಳಸಿ ತಾನೊಬ್ಬಂಟಿ ಬೊಮ್ಮ ನಿಜ । ಮಹಿಮೆಯಿಂ ಸೃಜಿಸಿ ವಿಶ್ವವನಿಲ್ಲಿ ನಿಲಿಸಿ ।
> ವಹಿಸಿ ಜೀವಿತೆಯ ಮಾಯೆಯ ಸರಸವಿರಸದಲಿ । ವಿಹರಿಪನು ನಿರ್ಲಿಪ್ತ ಮಂಕುತಿಮ್ಮ ॥

ಕುವೆಂಪು ಅವರು ಕಾವ್ಯ ಸೃಷ್ಟಿಗೆ ಸಂಬಂಧಿಸಿದಂತೆ ವಿಭೂತಿ ತತ್ತ್ವ, ದರ್ಶನ ತತ್ತ್ವ, ಪೂರ್ಣದೃಷ್ಟಿ, ಭೂಮಾನುಭೂತಿಗಳನ್ನು ಹೇಳುವಾಗ ಆಧ್ಯಾತ್ಮಿಕ ಸ್ತರದಲ್ಲಿಯೇ ನಿಂತು ಮಾತನಾಡುತ್ತಾರೆ. 'ಕವಿಯಲ್ಲಿ ವಿಭೂತಿ' ಎಂಬ ಪ್ರಬಂಧದಲ್ಲಿ ಪ್ರಶಂಸೆ, ಪೂಜೆ, ಆರಾಧನೆ, ಉಪಾಸನೆಗಳನ್ನು ವಿವರಿಸುತ್ತ "ಪೂಜಾವಸ್ತು ಆದರ್ಶವಾಗಿ ಪರಿಣಮಿಸುತ್ತದೆ, ತನ್ನ ಆಕಾಂಕ್ಷೆಯ ಆತ್ಮಶ್ರೀಯನ್ನು ಪಡೆದಿರುವ ಆ ವ್ಯಕ್ತಿ ಪೂಜ್ಯನಾಗುತ್ತಾನೆ. ಬರಿಯ ಊರ್ಧ್ವಮುಖವಾಗಿರುವ ಆಕಾಂಕ್ಷೆ ಸಾಧನೆಯ ರೂಪಕ್ಕೆ ತಿರುಗಿ ಊರ್ಧ್ವಯಾತ್ರಾರೂಪಿಯಾದೊಡನೆ ಪೂಜೆ ಆರಾಧನೆಯಾಗುತ್ತದೆ. ಆರಾಧನಾಭಾವನೆ ಉಜ್ವಲವಾಗಿ ತಪಸ್ಯಾರೂಪಕ್ಕೆ ತಿರುಗಿದರೆ ಉಪಾಸನೆಯಾಗುತ್ತದೆ. ಉಪಾಸನೆ ತುತ್ತತುದಿಗೆ ತಲ್ಲೀನತಾರೂಪದ ಸಾಕ್ಷಾತ್ಕಾರದಲ್ಲಿ ಪರ್ಯವಸಾನ ಹೊಂದುತ್ತದೆ. ಆಗ ಸಾಧಕನಿಗೆ ಸಿದ್ಧಿಯಾಯಿತೆಂದು ಹೇಳುತ್ತೇವೆ. ಸಿದ್ಧಿಯೆಂದರೆ ನಿಸ್ತರಂಗವಾದ ನಿರಪೇಕ್ಷವಾದ

ಪೂರ್ಣತಾವಿಶ್ರಾಂತಿ, ತಾದಾತ್ಮ್ಯಶಾಂತಿ". ಇಲ್ಲಿಯು ಉಪಾಸನೆ ಅನುಭಾವದ ಒಂದು ಮಹತ್ವದ ಘಟ್ಟವೇ ಆಗಿದೆ. ಇದಕ್ಕೆ ಪೂರಕವಾಗಿ ಕುವೆಂಪು ಅವರ ಕವಿತೆಯ "ಹಾರೈಸು, ಹಾರೈಸು, ಹಾರೈಸು ಜೀವ ! ಹಾರೈಸು ನೀನಾಗುವನ್ನೆಗಂ ದೇವ !" ಎಂಬ ಚರಣಗಳನ್ನು ಗಮನಿಸಬೇಕು.

ಬೇಂದ್ರೆಯವರು ತಮ್ಮ ಸಾಧನೆ ಆಧ್ಯಾತ್ಮಿಕಸಾಧನೆಯೇ ಎಂಬುದನ್ನು ಹೀಗೆ ಖಚಿತ ಪಡಿಸುತ್ತಾರೆ: "ವಿಷಯಗಳಾಚೆ ಇಂದ್ರಿಯಗಳಿವೆ. ಇಂದ್ರಿಯಗಳಾಚೆ ಮನ ; ಮನದಾಚೆ ಬುದ್ಧಿ ; ಬುದ್ಧಿಯಾಚೆಗೆ ಸಃ ರಸಃ ; ರಸೋ ವೈ ಸಃ ! ರಸೋಽಸ್ಮಿತೆಯ ಸಾಧನೆ ಅಂಬಿಕಾತನಯದತ್ತನ ಕಾವ್ಯ. ಸೋಹಂ ದಾಸೋಹಂಗಳ ಮಧ್ಯ ರಸೋಹಂ ಮಾರ್ಗ ಇದು. ಆಲಯವಾದ, ಬಯಲವಾದ ಇವೆರಡೂ ದೃಷ್ಟಿವಾದದ ಕವಲು. ದೃಷ್ಟಿ ವಿಶೇಷಕ್ಕೆ ಬುದ್ಧಿ ವಿಶೇಷವು ಕಾರಣ. ಈ ದೃಷ್ಟಿ ವಿಶೇಷಗಳನ್ನು ನಿನ್ನೊಳಗೊ ಪರಿಯೇ, ನಿನ್ನೊಳಗೊ ಪರನೇ ಎಂಬ ಪರಿ-ಹರರ ಸಂಗಮ ಸಾಮರಸ್ಯ ಕಾಣಬೇಕೆಂಬುದು ಅಂ–ದತ್ತನ ಪುಂಡರೀಕ ವಿಠ್ಠಲ ನಿಲುವು."

ಹೀಗೆ ಸಾಧನೆಯ ಸ್ವರೂಪದಲ್ಲಿಯೇ ನಮ್ಮ ಮಹತ್ವದ ಕವಿಗಳ ಜೀವನ ಸಾಗಿದ್ದರಿಂದ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅನುಭಾವವು ಮೂಡುವಂತಾಯಿತು. ಅದು ವಿಶೇಷವಾಗಿ ಕಾವ್ಯದಲ್ಲಿಯೇ ಪ್ರಕಟವಾಗಿರುವುದನ್ನು ಕೆಲವು ಉದಾಹರಣೆಗಳಿಂದ ಇಲ್ಲಿ ಗಮನಿಸ ಲಾಗುವುದು.

ಬೇಂದ್ರೆ, ಕುವೆಂಪು, ಪುತಿನ ಅವರು ನವೋದಯ ಕಾವ್ಯದ ರತ್ನತ್ರಯರೆಂಬುದು ಈಗ ಎಲ್ಲರಿಗೂ ತಿಳಿದಿರುವ ಸಂಗತಿ. ಬೇಂದ್ರೆ ಮತ್ತು ಕುವೆಂಪು ಅವರ ಕಾವ್ಯದ ವಸ್ತುವೈವಿಧ್ಯ ಬಹು ವ್ಯಾಪಕವಾದುದು. ನಮಗಿಲ್ಲಿ ಪ್ರಸ್ತುತವಾದುದು ಅವರು ಕಾವ್ಯವಾಗಿಸಿದ ಅನುಭಾವ. ಬೇಂದ್ರೆಯವರು ಶ್ರೀಮಾತಾರವಿಂದರ ಭಕ್ತರಾಗಿ, ಭಾರತೀಯ ಪರಂಪರೆ ಯಲ್ಲಿ ಹಲವು ತತ್ತ್ವ ಸಿದ್ಧಾಂತಗಳ ಸಾರವನ್ನು ಹೀರಿಕೊಂಡವರಾಗಿ, ಎ.ಇ. ಅವರಂಥ ಪಾಶ್ಚಾತ್ಯ ದ್ರಷ್ಟಾರ ಕವಿಯ ಅನುಭಾವದ ನಿಲುವಿಗೆ ಮಾರುಹೋದವರಾಗಿ, ಸ್ವಯಂ ಸಾಧಕರೂ ಆಗಿ ಆರಂಭದಿಂದಲೂ ಎಲ್ಲ ಬಗೆಯ ಕಾವ್ಯಸೃಷ್ಟಿಯೊಂದಿಗೆ ಅನುಭಾವ ಕಾವ್ಯವನ್ನೂ ಸೃಷ್ಟಿಸುತ್ತ ಬಂದಿರುವರು. ಅವರು ತಮ್ಮ ಜೀವನದ ಕೊನೆ-ಕೊನೆಯ ಘಟ್ಟ ದಲ್ಲಿ ಬರೆದ ಕಾವ್ಯದಲ್ಲಿ ಅದೇ ಪ್ರಮುಖವಾಗಿರುವುದನ್ನೂ ನಾವು ಕಾಣುತ್ತೇವೆ.

ಬೇಂದ್ರೆಯವರ ಪ್ರಥಮಸಂಕಲನವಾದ 'ಗರಿ'ಯಲ್ಲಿ ಅವರ ಅನುಭಾವಿಕ ದೃಷ್ಟಿ ಕಾರ್ಯ ಮಾಡಿದ್ದುದರ ಕುರುಹುಗಳಿವೆ. ಅವರ ಅತ್ಯಂತ ಪ್ರಸಿದ್ಧವಾದ 'ಬೆಳಕು' ಕವಿತೆ ನಿಸರ್ಗ ಅನುಭಾವವಾದ (Nature Mysticim)ಕ್ಕೆ ಒಂದು ನಿದರ್ಶನವೆಂದು ಹೇಳ ಬಹುದು. ಪ್ರಕೃತಿಯ ಅನನ್ಯವಾದ ವರ್ಣನೆಯಲ್ಲಿಯೇ ಅನುಭಾವಪ್ರಜ್ಞೆ ಕಾರ್ಯ ಮಾಡುತ್ತದೆ. ಅಂದರೆ ಐಂದ್ರಿಯಿಕ ಅನುಭವವು ಇಂದ್ರಿಯಾತೀತವಾದದನ್ನು ಧ್ವನಿಸು ತ್ತದೆ.

ಕಂಡಿತು ಕಣ್ಣು ಸವಿದಿತು ನಾಲಗೆ
ಪಡೆದೀತೀ ದೇಹ
ಸ್ಪರ್ಶಾ ಪಡೆದೀತೀ ದೇಹ
ಕೇಳಿತು ಕಿವಿಯು ಮೂಸಿತು ಮೂಗು
ತನ್ಮಯವೀ ಗೇಹಾ
ದೇವರ-ದೀ ಮನಸಿನ ಗೇಹಾ

ಅರಿಯದು ಅಳವು ತಿಳಿಯದು ಮನವು
ಕಾಣsದೋ ಬಣ್ಣಾ
ಕಣ್ಣಿಗೆ ಕಾಣsದೋ ಬಣ್ಣಾ
ಶಾಂತಿ ರಸವೇ ಪ್ರೀತಿಯಿಂದ
ಮೈದೋರಿತಣ್ಣಾ
ಇದು ಬರಿ-ಬೆಳಗಲ್ಲೊ ಅಣ್ಣಾ

ಪ್ರಸ್ತುತ ಕವಿತೆಯ ಕೊನೆಯ ಚರಣವನ್ನು ಓದಿ ಮುಗಿಸುತ್ತಿರುವಂತೆ ಅನುಭಾವದ ದಟ್ಟಛಾಯೆ ನಮ್ಮನ್ನು ಆವರಿಸಿ ಬಿಡುತ್ತದೆ. ಬೇಂದ್ರೆಯವರ ಪ್ರಕೃತಿಗೀತಗಳ ಅನುಭವ ಈ ರೀತಿಯದಾದರೆ, ಪ್ರಣಯಗೀತಗಳ ಅನುಭವ ಇನ್ನೊಂದು ರೀತಿಯದು. ಸಕೃದ್ದರ್ಶನಕ್ಕೆ ಪ್ರಣಯಗೀತಗಳಾಗಿ ತೋರುವ ಅವರ ಹಲವು ಕವಿತೆಗಳು ಪ್ರಕೃತಿ-ಪುರುಷರ ಅನಂತಪ್ರಣಯವನ್ನೂ ಭಕ್ತ-ಭಗವಂತರ ಅನನ್ಯ ಸಾಮರಸ್ಯವನ್ನೂ ಪ್ರತಿಬಿಂಬಿಸುತ್ತವೆ. ಬೇರೆ ಕೆಲವು ಕವಿತೆಗಳು ದೇವನ ಅಸ್ತಿತ್ವವನ್ನೊ, ಆದಿಶಕ್ತಿ ಮಹಾಮಾತೆಯ ಇರುವಿಕೆಯನ್ನೊ ಸಾಕ್ಷಾತ್ತಾಗಿ ಚಿತ್ರಿಸುತ್ತವೆ. ಶ್ರದ್ಧೆ, ನಿಷ್ಠೆಗಳಿಂದ ಕೂಡಿದ ಕೆಲವು ಪ್ರಾರ್ಥನಾಗೀತಗಳೂ ಇವೆ. ಸ್ವಾನುಭಾವಯುಕ್ತವಾದ ಅನುಭಾವದ ತಿಳಿವನ್ನು ಬಿಚ್ಚಿಟ್ಟಿರುವಂತಹ ವಿಶಿಷ್ಟ ಗೀತಗಳೂ ಕೆಲವಿವೆ.

ದೇವನ ಅಸ್ತಿತ್ವವನ್ನು ಜೀವನದ ವಿವಿಧಸ್ತರಗಳಲ್ಲಿ ಗುರುತಿಸಿ, ಆಹ್ವಾನಿಸುವ 'ಬಾ ಕೈ ತಾ' ಎಂಬ ಕವಿತೆಯನ್ನಿಲ್ಲಿ ನೋಡಬಹುದು.

ಮನಸಿನಲ್ಲಿ ಹೊಳೆದವನೆ
ಕನಸಿನಲ್ಲಿ ಬೆಳೆದವನೆ
ಜೀವನವನೆ ತಳೆದವನೆ
ಎಲ್ಲಿರುವೆ ಬಾ

ಚೆಲುವಿನಲ್ಲಿ ಮಾಗಿರುವೆ
ಒಲವಿನಲ್ಲಿ ಬಾಗಿರುವೆ
ಜಗದ ರೂಪವಾಗಿರುವೆ
ಕೈಗೆ ಕೈ ತಾ

ಬಹಳ ಸಲುಗೆಯಿಂದ ಒಬ್ಬ ನಲ್ಲೆ ತನ್ನ ನಲ್ಲನನ್ನು ಕರೆಯುತ್ತಿರುವಂತೆ ಇಲ್ಲಿ ದೇವರನ್ನು ಭಕ್ತಕವಿ ಒರಮಾಡಿಕೊಳ್ಳುತ್ತಿರುವುದು ಕಂಡುಬರುತ್ತದೆ. ಇದು ಬೇಂದ್ರೆಯವರಲ್ಲಿಯ ಮಧುರ-ಭಕ್ತಿಗೆ ಒಂದು ಕುರುಹು.

ಬೇಂದ್ರೆಯವರ ಇತರ ಕವನ ಸಂಕಲನಗಳಲ್ಲಿಯೂ ಇಂಥ ಕವಿತೆಗಳು ಅಲ್ಲಿಗಲ್ಲಿಗೆ ದೊರೆಯುತ್ತವೆ. 'ಗಂಗಾವತರಣ' ಸಂಗ್ರಹದಲ್ಲಿ 'ಅನುಭಾವ ಗೀತಗಳು' ಒಂದೆಡೆಯಲ್ಲಿ ಸಿಗುತ್ತವೆ. ಇದೇ ಸಂಕಲನದಲ್ಲಿ 'ಪ್ರಾರ್ಥನೆ ಮತ್ತು ಸ್ತೋತ್ರಗಳು' ಇವೆ. 'ತತ್ತ್ವದೃಷ್ಟಿ'ಯ ಕವಿತೆಗಳೂ ಇವೆ. ದಿವ್ಯಮಾತೆಯನ್ನು ಆಹ್ವಾನಿಸುವ ರೀತಿಯಲ್ಲಿಯೇ 'ಗಂಗಾವತರಣ' ಒಂದು ಪ್ರತಿಮಾನಿಷ್ಠ ಕವಿತೆಯಾಗಿ ಮೂಡಿಬಂದಿದೆ. 'ತುಂಬಿ'ಯಲ್ಲಿ 'ಗುರುವಿನಿಂದ ತುಂಬಿ, ಅರವಿಂದ ತುಂಬಿ' ಎಂದಾಗ ಶ್ರೀ ಅರವಿಂದರ ನೆನಪು ಬಂದು ಬಿಡುತ್ತದೆ. 'ಶ್ರೀಮಾತೆ ತುಂಬಿ' ಎಂಬುದು ಸಹಜವಾಗಿಯೇ ಶ್ರೀಮಾತಾಶ್ರದ್ಧೆಯನ್ನು ಸ್ಪಷ್ಟಪಡಿಸುತ್ತದೆ.

'ಗಂಗಾವತರಣ'ದ ನಂತರ ಬಂದ ಬೇಂದ್ರೆಯವರ ಕವನ ಸಂಕಲನಗಳಲ್ಲಿ ಆಧ್ಯಾತ್ಮಿಕತೆ ಹೆಚ್ಚಾಗಿಯೇ ಕಂಡುಬರುತ್ತದೆ. 'ಮುಕ್ತಕಂಠ' 'ಹೃದಯ ಸಮುದ್ರ'ಗಳನ್ನೊಳಗೊಂಡು 'ಶ್ರೀಮಾತಾ' 'ನಾಕುತಂತಿ'ಗಳಲ್ಲಿಯೂ, ಶೀರ ಇತ್ತೀಚಿನ ಸಂಕಲನಗಳಾದ 'ಚತುರೋಕ್ತಿ' 'ಪರಾಕಿ'ಗಳಲ್ಲಿಯೂ ಅನುಭಾವದ ಕವಿತೆಗಳಿರುವುದನ್ನು ಕಾಣಬಹುದು. 'ಚತುರೋಕ್ತಿ'ಯ ಕವಿತೆಗಳು ಬೆಡಗಿನ ವಚನಗಳಂತೆ ಹೊಸರುಚಿಯನ್ನು ನೀಡುತ್ತವೆ. ಉದಾ :

೧) ಹರಿ-ಹರಾ ತಿರುಗು ಗರಾಗರಾ
ಮುಖಾನೆ ಇಲ್ಲ ಮೂಗ್ಯಾಕ ?
ಮೈನ ಇಲ್ಲ ಡೂಗ್ಯಾಕ ?

ಮಂಗ ಅಂತ್ಕು ತಂದೇ ಕೆಂಪು
ಮಂಡೂಕ ಅಂತ್ಕು ತಂದೇ ತಂಪು
ಗೂಳಿ ಅಂತ್ಕು ತಂದೇ ಸಂಪು.
ಜಾತ್ರಿಗೆ ಜನಿವಾರ ಹಾಕಿಲ್ಲಾ

ಯಾತ್ರಿಗೆ ಪನಿವಾರ ಹಂಚಿಲ್ಲಾ
ಕಲ್ಲಿಗೆ ತಂತಿ ಕಟ್ಟಿಲ್ಲಾ
ತಂತೀದು ಸುಂತಿ ಮಾಡಿಲ್ಲಾ.

೨) ಎರಡು ಮಾಡಿದಂವಾ ಒಂದ ಮಾಡಲಾರನ ?
ರಾಮಾ ಕೃಷ್ಣಾ ಹರಿ
ಮುತ್ತಿಗ್ಯಾಕ ಬಂಗಾರದ ಒರಿ ?
....................
ಹುಟ್ಟಿಕ ಇಲ್ಲಾ ಉಳಿಯೋದೇನು ?
ನೀರಕ ಇಲ್ಲಾ ತಿಳಿಯೋದೇನು ?
ಊರಕ ಇಲ್ಲಾ ಬಳಿಯೋದೇನು ?
ಮೂರಕ ಇಲ್ಲಾ ಕಳಿಯೋದೇನು ?

ಇಂಥ ಕವಿತೆಗಳು ಕೇಳಲಿಕ್ಕೆ ಸೊಗಸಾಗಿ ಕಂಡರೂ ಅರ್ಥೈಸಲು ಸುಲಭವಾಗಿರುವುದಿಲ್ಲ. ಲಕ್ಷ್ಯಾರ್ಥ, ವ್ಯಂಗ್ಯಾರ್ಥಗಳನ್ನು ಮೀರಿದ ಅನುಭಾವದ ಅರ್ಥ ಇವುಗಳಿಗಿರುತ್ತದೆ.

ಮತ್ಸ್ಯ ಕೂರ್ಮ ಅಂತ ಯಾಕ ಬಟ್ಟು ಮಡಚತೀರಿ?
ಭಗವಂತ ಹತ್ತೂ ಕಡಗೀ
ಹತ್ತೂ ಬೆರಳ ಮಡಿಚಿ ಹಣಿಗಿ ಹಚ್ಚಿರಿ
ಬಯಲೆಲ್ಲಾ ದೇವರುಡಿಗೀ...

ಅಂಬಿಕಾತನಯನೊಳಗ ನಂಬಿಕಿ ಬೊಳಗಸ್ಯಾವ
ಹತ್ತು ಸಾವಿರದ ನಾಮ!
ಒಂದೊಂದು ನಾಮದಾಗ ಸಾವಿರದ ನಾಮ ಅವಃ
ಕಾಮ ಆಗ್ಯಽದ ಪ್ರೇಮ

ಒಂದು ವಿಶಿಷ್ಟವಾದ ರೀತಿಯಲ್ಲಿ ಬೇಂದ್ರೆಯವರ ಸಾಧನೆಯನ್ನು ಇಂಥ ಕವಿತೆಗಳು ಧ್ವನಿಸುತ್ತವೆ. ಆದರಿಂದಾಗಿ ಪರಕವಿಯಾಗಿ ಲೌಕಿಕರಿಗೆ ಪ್ರಿಯವಾಗಿರುವ ಈ ಕವಿ ಅನುಭಾವಕವಿಯಾಗಿ ಮುಮುಕ್ಷುಗಳ ಹತ್ತಿರಕ್ಕೂ ಬಂದುಬಿಡುತ್ತಾರೆ. ಇದು ಬೇಂದ್ರೆಯವರ ವೈಶಿಷ್ಟ್ಯ.

ಕುವೆಂಪು ಅವರು ಮುಖ್ಯವಾಗಿ ನಿಸರ್ಗಭಕ್ತರಾದರೂ ಶ್ರೀರಾಮಕೃಷ್ಣ ಪರಮಹಂಸರ, ಸ್ವಾಮಿ ವಿವೇಕಾನಂದರ ಆಧ್ಯಾತ್ಮಿಕ ಆದರ್ಶವನ್ನು ಸ್ವೀಕರಿಸಿದವರು. ಜೊತೆಗೆ ಶ್ರೀ ಅರವಿಂದರ ತತ್ತ್ವಜ್ಞಾನವನ್ನು ಅಳವಡಿಸಿಕೊಂಡವರು. ವಿಶ್ವದ ಮಹಾಕವಿಗಳ, ವಿಭೂತಿ ಪುರುಷರ ಸಾಧನೆ, ಸಿದ್ಧಾಂತಗಳನ್ನು ಅರಿತವರು. ಹೀಗಿರುವ ಅವರ ವ್ಯಕ್ತಿತ್ವವು ಅವರ ಕಾವ್ಯದ ಭೂಮಾನುಭೂತಿಗೂ ದಿವ್ಯಾನುಭೂತಿಗೂ ಮೂಲಭಿತ್ತಿಯಾಗಿದೆ. ಕುವೆಂಪು ಅವರ ಜೀವನವನ್ನು ಹತ್ತಿರದಿಂದ ನೋಡಿದ ದೇ. ಜವರೇಗೌಡರು "ಆಧ್ಯಾತ್ಮಿಕಸಾಧನೆ ಮತ್ತು ಅದರ ಅಭಿವ್ಯಕ್ತಿಗೆ ನೆರವಾಗುವ ಕಾವ್ಯಜೀವನ ಈ ಮಹಾಕವಿಯ ಜೀವನ ದರ್ಶನದ ಎರಡು ಕಣ್ಣುಗಳಾಗಿವೆ" ಎಂದಿರುವುದನ್ನು ಇಲ್ಲಿ ನೆನೆಯಬಹುದು.

ನಿನ್ನ ಬಾಂದಳದಂತೆ ನನ್ನ ಮನವಿರಲಿ
ನಿನ್ನ ಸಾಗರದಂತೆ ನನ್ನ ಎದೆಯಿರಲಿ
...................
ನಿನ್ನಾತ್ಮದಾನಂದ ನನ್ನದಾಗಿರಲಿ
ನಿನ್ನೊಳಿರುವಾ ಶಾಂತಿ ನನ್ನೆಡೆಗೆ ಬರಲಿ

ಹೀಗೆ ಆರಂಭವಾಗುವ ಕುವೆಂಪು ಅವರ ಶ್ರದ್ಧೆ ಅವರ ಜೀವನದೊಂದಿಗೆ ಬೆಳೆಯುತ್ತ ಪಕ್ವವಾಗುತ್ತ ಹೋಗುತ್ತದೆ.

ಅರಳಿತೀ ವನಸುಮವು ನಿನಗಾಗಿ ಹರಿಯೇ
ತ್ವರೆಯಿಂದ ಬಂದಿದನು ಸ್ವೀಕರಿಸು ದೊರೆಯೇ

ಎಂಬಲ್ಲಿ— ನನ್ನನು ನಿನ್ನಯ ಕೊಳಲನು ಮಾಡು
ಹೇ ಜೀವೇಶನೆ ಬೇಡುವೆನು
ನಿನ್ನಯ ಸವಿಗೊರಲುಸಿರನು ನೀಡು
ವಿಧವಿಧ ರಾಗವ ಹಾಡುವೆನು.

ಕುವೆಂಪು ಅವರ ಬೇರೆ ಬೇರೆ ಕವನ ಸಂಗ್ರಹಗಳಲ್ಲಿ ಎದ್ದು ಕಾಣುವ ಅವರ ಆಧ್ಯಾತ್ಮಿಕ ಭಾವ 'ಅಗ್ನಿಹಂಸ'ದಲ್ಲಿ ಅನುಭಾವದ ಸ್ರೋತವಾಗಿ ಪ್ರಕಟಗೊಂಡಿದೆ. ಹಲವು ಸಂಗ್ರಹಗಳಲ್ಲಿ ಚದರಿ ಹೋದ ಕುವೆಂಪು ಅವರ ಆಧ್ಯಾತ್ಮಿಕಕವನಗಳನ್ನು ಒಂದೆಡೆಗೆ ಸೇರಿಸಿ, 'ಪ್ರಾರ್ಥನಾಗೀತಾಂಜಲಿ'ಯನ್ನು ಆಮೇಲೆ ಪ್ರಕಟಿಸಿದ್ದುಂಟು. ಕುವೆಂಪು ಅವರ ಭಕ್ತಿಯ ವೈಶಿಷ್ಟ್ಯವನ್ನು ಗುರುತಿಸಲು 'ಪ್ರಾರ್ಥನಾ ಗೀತಾಂಜಲಿ'ಯ ಕೆಲವು ಪದ್ಯದ ಚರಣಗಳನ್ನು ನೋಡಬಹುದು :

ನನ್ನೆದೆಯ ಬಾನಿನಲಿ
ಧ್ರುವತಾರೆ ನೀನಿರಲು
ದಾರಿ ತಪ್ಪಿದರೇನು
ದಿಕ್ಕು ತಪ್ಪೆನು ನಾನು
ಜೀವಯಾತ್ರೆಯಲಿ...

ಎಲ್ಲ ಅನಿಶ್ಚಯ ! ಒಂದೆ ಸುನಿಶ್ಚಯ
ನಿನ್ನ ಅಚಿಂತ್ಯ ಅಪಾರದಯಾ...

ನಿನ್ನ ಆಶೀರ್ವಾದಪರಿವೇಷ ಸುತ್ತಿರಲಿ
ನನ್ನನು ಸದಾ
ನನ್ನ ಭಕ್ತಿಯ ಬಳ್ಳಿ ಮಲರಾಂತು ಸುತ್ತಿರಲಿ
ನಿನ್ನನು ಸದಾ

ಹೀಗೆ ಬೇರೆ ಬೇರೆ ಕವಿತೆಗಳಲ್ಲಿ ಕುವೆಂಪು ಅವರ ಅಚಲಶ್ರದ್ಧೆ, ನಿಷ್ಠೆ, ಸಮರ್ಪಣ ಭಾವಗಳು ಸೂರೆಗೊಂಡಿವೆ. ಶ್ರೀ ಅರವಿಂದರು ಸಾಧನೆಯ ಹಂತದಲ್ಲಿ ಅಭೀಪ್ಸೆ (Aspiration), ತ್ಯಾಗ (Rejection), ಸಮರ್ಪಣ (Surrender)ಗಳಿಗೆ ಮಹತ್ವದ ಸ್ಥಾನವನ್ನು ಈಯುತ್ತಾರೆ. ಅವೆಲ್ಲ ಕುವೆಂಪು ಅವರಲ್ಲಿ ಘನೀಭೂತವಾಗಿರುವುದು ಕಂಡುಬರುತ್ತದೆ. 'ಓ ನನ್ನ ಚೇತನ, ಆಗು ನೀ ಅನಿಕೇತನ' ಎಂದು ಹೃದಯತುಂಬಿ ಹಾರೈಸುವ ಈ ಕವಿಯ ಆಧ್ಯಾತ್ಮಿಕ ವಿಶೇಷತೆಯನ್ನು ಗುರುತಿಸುತ್ತ ಪ್ರಭುಶಂಕರ ಅವರು "ಶ್ರೀರಾಮಕೃಷ್ಣ ಪರಮಹಂಸರು ಸಮನ್ವಯಮೂರ್ತಿ. ಸರ್ವಧರ್ಮ, ಸರ್ವ ಸಾಧನಮಾರ್ಗಗಳ ಸುಮಧುರಸಮನ್ವಯವನ್ನು ಮೈಗೊಂಡು ಮೂಡಿದ ಅವರ ಪ್ರಭಾವ ಶ್ರೀ ಕುವೆಂಪು ಅವರ ದೃಷ್ಟಿಯಲ್ಲಿಯೂ ಸಮನ್ವಯವನ್ನು ತಂದಿದೆ. ಎಲ್ಲವೂ ಪರಮನ ಕೃಪೆ, ಪರಮನ ಆರಾಧನೆ ಎನ್ನುವ ಭಾವ ಇವರ ಕಿರುಗವಿತೆಗಳಿಂದ ಹಿಡಿದು ಈ ಯುಗದ ಮೇರುಕೃತಿಯಾದ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದವರೆಗೆ ಎಲ್ಲ ಕಡೆಯಲ್ಲಿಯೂ ಸರ್ವವ್ಯಾಪಿಯಾಗಿದೆ" ಎಂದಿದ್ದಾರೆ. ಕುವೆಂಪುಕಾವ್ಯವನ್ನು ಲಕ್ಷ್ಯಗೊಟ್ಟು ಓದುವವರಿಗೆ ಈ ಮಾತು ಯಥಾರ್ಥವಾಗಿ ತೋರದಿರದು.

ಪು.ತಿ.ನ. ಅವರು ತಮ್ಮ ಭಾವಗೀತಗಳಿಗೆ ಪ್ರಕೃತಿ ಮತ್ತು ಪ್ರಕೃತಿಮಧ್ಯಗತವಾದ ಮಾನವ–ಈ ಎರಡು ವಿಷಯಗಳನ್ನು ಹೆಚ್ಚಾಗಿ ಅನುಭವಿಸುವ ಸುಖದುಃಖಗಳನ್ನು

ಕಾವ್ಯವಸ್ತುವನ್ನಾಗಿರಿಸಿಕೊಂಡಿದ್ದರೂ, ಎಂ. ಹಿರಿಯಣ್ಣನವರು ಹೇಳುವಂತೆ, "ಅವುಗಳಿರಡಕ್ಕೂ ಅಂತರ್ಯಾಮಿಯಾದ ಅವುಗಳನ್ನು ಮೀರಿರುವ ಅಪ್ರಮೇಯ ಮಹಿಮನಾದ ಪರಮೇಶ್ವರನನ್ನು ನಮ್ಮ ನೆನಪಿಗೆ ತರದೆ ಈ ಗೀತೆಗಳು ('ಮಾಂದಳಿರು' ಸಂಕಲನದಲ್ಲಿಯ ಗೀತೆಗಳು) ಪ್ರಾಯಿಕವಾಗಿ ವಿಶ್ರಾಂತಗೊಳ್ಳುವುದಿಲ್ಲ." ಈ ಅಭಿಪ್ರಾಯವನ್ನು ಗಮನಿಸಿದಾಗ ಪು.ತಿ.ನ. ಅವರ ಕಾವ್ಯದ ಮೂಲಧೋರಣೆ ಏನೆಂಬುದು ವಿದಿತವಾಗುತ್ತದೆ. 'ಮಾಂದಳಿರು' ಸಂಕಲನದಲ್ಲಿಯ 'ಉಷಃಕಾಲದಲ್ಲಿ' ಎಂಬ ಕವಿತೆಯ ಕೊನೆಗೆ :

ವಿಶ್ವದೊಡೆಯ ದುರಿತಗಳನು
ದೂರ ಮಾಡಿಸೈ
ಅವುದೆಮ್ಮ ಶಿವವೊ, ತಂದೆ
ಅದನು ಕರುಣಿಸೈ

ಜ್ಞಾನದೀಪ ಹೊತ್ತಿಸೈ
ಬಾಳಬಟ್ಟೆ ಕಾಣಿಸೈ
ಆತ್ಮಶಿವಕೆ ನಿನ್ನ ಇಚ್ಛೆ-
ಗೆನ್ನ ಬಾಳ ಹೊಂದಿಸೈ

ಪ್ರಸ್ತುತ ಪ್ರಾರ್ಥನೆಯಲ್ಲಿ ಪು.ತಿ.ನ ಅವರ ಭಕ್ತಿಭಾವವನ್ನು ಸಹಜವಾಗಿ ಗುರುತಿಸಬಹುದು.

ಪು.ತಿ.ನ ಅವರದು ಪರಂಪರಾಗತವಾದ ನಂಬಿಕೆಯ ಜೀವನ. ಅವರ ಹರಿಯ ಶ್ರದ್ಧೆ ವಿವಿಧರೂಪಗಳಲ್ಲಿ ಪ್ರಕಟವಾಗುತ್ತಲೇ ಹೋಗುತ್ತದೆ. 'ಎನ್ನ ಮೋಹವ ಮೀರಿ ನಿಂದಿರುವೆ ಹರಿಯೆ' ಎಂದಿದ್ದರೂ ಅದರ ಮೋಹಕತೆಯೇನೂ ಕಡಿಮೆಯಾಗಿಲ್ಲ.

'ಮಲೆದೇಗುಲ' ಕಾವ್ಯಗುಚ್ಛದಲ್ಲಿ ಅವರು ಕಂಡ 'ಸತ್ಯ ಸುಂದರ ಸಚ್ಚಿದಾನಂದ ಸ್ವರೂಪಂ' ನಮ್ಮ ಗಮನವನ್ನು ಸೆಳೆಯುತ್ತದೆ.

ಜೀವವಿದು ಆತ್ಮರೂಪರವಾಗದಂತಿರುವ ರಸದ ಚಿಲುಮೆ
ಜಡದ ಚಿತ್ತದ ಮುದದ ಮೊನೆಗೇರಿಸಲು ಬಗೆದ ಸಿದ್ಧರೊಲುಮೆ

ಈ ವರ್ಣನೆಯಲ್ಲಿ 'ಚಿತ್ತದ ಮುದದ ಮೊನೆಗೇರಿಸುವ' ಸಿದ್ಧರ ಒಲುಮೆಯಲ್ಲಿ ಯೌಗಿಕ ನಿಲುವಿರುವುದನ್ನು ಕಾಣಬಹುದು. "ಸರ್ವಂ ಹರಿಮಯಮೆಂಬಭಯಮೀವ ನಾರಣಶರಣಂ" ಎಂಬಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮಂ' ಎಂಬ ಸಾಕ್ಷಾತ್ಕಾರದ ಬಿಂಬವೇ ಇದೆ. ಅವರ ಈಚಿನ 'ಶ್ರೀಹರಿಚರಿತ' ಅವರ ಆಧ್ಯಾತ್ಮಿಕ ಶ್ರದ್ಧೆಯ ಪ್ರತಿಬಿಂಬವಾಗಿ ಮೂಡಿದುದನ್ನು ಕಾಣಬಹುದು.

ನವೋದಯ ತಲೆಮಾರಿನ ಪ್ರಮುಖ ಕವಿಗಳೆನಿಸಿದ ಶ್ರೀನಿವಾಸ, ಡಿ.ವಿ.ಜಿ. ಗೋಕಾಕ ಇತ್ಯಾದಿ ಕವಿಗಳ ಕವಿತೆಗಳಲ್ಲಿಯೂ ಅನುಭಾವದ ಗುಣ ಇದ್ದೇ ಇದೆ. ಶ್ರೀನಿವಾಸರಲ್ಲಿ ಧಾರ್ಮಿಕಭಾವವಾಗಿ, ಡಿ.ವಿ.ಜಿ. ಅವರಲ್ಲಿ ವೈಚಾರಿಕಚೇತನವಾಗಿ, ವಿನಾಯಕರಲ್ಲಿ ಪ್ರಯೋಗಶೀಲತೆಯ ಒಳಗೇ ಮಿಡಿಯುವ ಪರಂಪರಾಗತಶ್ರದ್ಧೆಯಾಗಿ ಆಧ್ಯಾತ್ಮ ಮೂಡಿ ಬಂದಿದ್ದುದನ್ನು ಕಾಣಬಹುದು.

ಎನ್ನ ಹೃದಯದಿ ನಿಂದು ಎಲ್ಲ ಬದುಕಲಿ ಕಂಡು
ಎನ್ನ ಬದುಕನು ಒಳ್ಳಿದಕೆ ತಿದ್ದಿ ಪೊರೆಯುತಿಹ
ಸನ್ನುತಾ ಗುರುದೇವ ಲೋಕೇಶ ನಿನ್ನಡಿಗೆ
ಪನ್ನಗಾದ್ರಿ ನಿವಾಸ, ನಮಿಸುವೆನು ತಂದೆ

ಹೀಗೆ ಲೋಕೇಶನನ್ನು ಸ್ತುತಿಸುವ ಶ್ರೀನಿವಾಸರ 'ರಾಮನವಮಿ' ಕಥಾನಕವಾಗಿಯೂ ದೈವೀಶ್ರದ್ಧೆಯನ್ನು ಪ್ರಕಟಪಡಿಸುತ್ತದೆ.

ವಿನಾಯಕರು ತಮ್ಮ ಮಹಾಕಾವ್ಯ 'ಭಾರತ ಸಿಂಧುರಶ್ಮಿ'ಯ ಪೀಠಿಕೆಯಲ್ಲಿ 'ನಗರ ಮಧ್ಯದಲಿ ತಪಶ್ಚರಣಾಗೈವ ತಪಸ್ವಿ' ಎಂದು ತಮ್ಮನ್ನು ತಾವು ಗುರುತಿಸಿಕೊಂಡಿದ್ದುದ ರಲ್ಲಿ ಉತ್ಪ್ರೇಕ್ಷೆಯೇನೂ ಇಲ್ಲ. ಅವರು ಎಷ್ಟೇ ವೈಚಾರಿಕ ಎತ್ತರಕ್ಕೇರಿದರೂ ಅವರ ದೈವೀಶ್ರದ್ಧೆಯ ಬೇರುಗಳು ಗಟ್ಟಿಮುಟ್ಟಾಗಿಯೆ ಇವೆ.

ಬದುಕಿಸಿದೆ ನೀನೆನ್ನ, ಯಾವ ಬದುಕೇನೆನಗೆ
ನಿನ್ನಾಣತಿಯೆ ನನ್ನ ಜೀವಿತದ ಗುರಿಯು . . .
ನೀ ಕಾಣದಿರಲೇನು ? ಮನಗಂಡಿಹೆನು ನಿನ್ನ
ದನಿಯನಾಲಿಸಿದೆ ನಿನ್ನ ಮನವ ತಿಳಿದೆ
ನಿಗಮಗೋಚರ ! ನಿನ್ನ ದಾಸಾನುದಾಸನಿಹೆ
ನಿನ್ನ ಪದಪದ್ಮದಲ್ಲಿ ಹುಟ್ಟಿ ಬೆಳೆದೆ.

ಇದು ವಿನಾಯಕರು ಮನಗಂಡ, ದಾಸಾನುದಾಸನಾದ ರೀತಿ. ಭಗವಂತನ ಪದಪದ್ಮ ದಲ್ಲಿಯೇ ಹುಟ್ಟಿ ಬೆಳೆದ ಅವರ ಸಾಧನೆಗೆಲ್ಲ ಆತನ ಆಣತಿಯೇ ಮೂಲಧನವೆಂಬುದನ್ನ ರಿತವರು ಅವರು. 'ದ್ಯಾವಾ ಪೃಥಿವಿ' ಕವಿತೆಗಳಲ್ಲಿ, ಅವರ ಇತರ ಕವನಸಂಕಲನಗಳಲ್ಲಿ ಅಧ್ಯಾತ್ಮಿಕ ಜಿಜ್ಞಾಸೆಯೂ, ಅನುಭಾವದ ಸ್ವರಗಳೂ ಕಂಡುಬರುತ್ತವೆ.

ಹೊಸಗನ್ನಡದಲ್ಲಿ ಅನುಭಾವಕ್ಕೇ ತಮ್ಮನ್ನು ಮೀಸಲಿರಿಸಿದವರು ಮಧುರಚೆನ್ನರು. ಆ ದೃಷ್ಟಿಯಿಂದ ಅವರ ಕಾವ್ಯವನ್ನು ಮೀಸಲುಕಾವ್ಯವೆಂದು ಗುರುತಿಸಬಹುದು. ಮಧುರಚೆನ್ನರ ಬದುಕು ಮತ್ತು ಸಾಹಿತ್ಯಗಳಲ್ಲಿ ಹರಿಹರನ ನಿಷ್ಠೆಯಿದ್ದು, ಅವರೇ ಹೇಳಿ ಕೊಂಡಂತೆ ರತ್ನಾಕರವರ್ಣಿಯಂತೆ ಅವರಿಗೆ ಅಧ್ಯಾತ್ಮವೇ ನಿಚಿತ ಪ್ರಯೋಜನವಾಗಿತ್ತು.

ಮಧುರಚೆನ್ನರದು ಮಧುರಭಕ್ತಿ. ಅದಕ್ಕೆ ನಿದರ್ಶನ ಅವರ 'ನನ್ನ ನಲ್ಲ' ಎಂಬ ನೀಳ್ಗ ವನ. ಅವರ ಇತರ ಕವಿತೆಗಳಲ್ಲಿಯೂ ಈ ಭಾವ ವ್ಯಕ್ತವಾಗಿರುವುದನ್ನು ಕಾಣಬಹುದು.

ಮಧುರಚೆನ್ನರ ಅನುಭಾವ ಗೀತೆಗಳಲ್ಲಿ ಅವರ ಸಾಧನೆಯ ವಿವಿಧ ಹಂತಗಳೂ ಪ್ರಕಟ ವಾಗಿವೆ. 'ನನ್ನ ನಲ್ಲ' ನೀಳ್ಗವಿತೆಯಲ್ಲಿ

ಹನ್ನೆರಡು ತುಂಬಿಲ್ಲ ಕನ್ನಿಕ್ಕೆ ನಾನಂದು
ನನ್ನ ನಲ್ಲನ ಕತೆಗೆ ಮರುಳಗೊಂಡೆ
ಇನ್ನೇನು ಹೇಳುವೆನು ಇಂದಿಗಿಪ್ಪತ್ತಾರು
ಈಸೊಂದು ದಿನಕೊರಗಿ ಗೊತ್ತುಗಂಡೆ . . .

ದೇವರಾಯನ ಹೊರಹೋಕೆ ಕೇಳದೆನಿನ್ನು
ನಾನೇಕೆ ಸಂಚುಸುಂಗಿದೆನೆ ತಾಯಿ
ಯಾವ ಕಡೆಗೂ ಮಗ್ಗುಲೂರಗೊಡದವನ್ನಯ್ಯ
ಈ ನೋವ ನಾ ತಾಳಲೆಂತೆ ತಾಯಿ

ಹನ್ನೆರಡರ ಕಿರುಪ್ರಾಯದಲ್ಲಿ ದೇವರನ್ನು ಕಾಣುವ ಹಂಬಲಹರಿಸಿಕೊಂಡ ಕವಿ, ಇಪ್ಪತ್ತಾರರ ಯೌವನದಲ್ಲಿ ದೇವನ ಅಸ್ತಿತ್ವವನ್ನು ಒಂದು ಪದ್ಯದಲ್ಲಿ ತಿಳಿಸಿದರೆ, ಇನ್ನೊಂದರಲ್ಲಿ ದೇವರಾಯನ ಪಡೆಯುವಲ್ಲಿ ತಾವು ಅನುಭವಿಸಿದ ತಳಮಳವನ್ನು ವ್ಯಕ್ತಪಡಿಸಿದ್ದಾರೆ. ಯಾರುಯಾರನ್ನೋ ದೇವರನ್ನು ತೋರಿಸಿರೆಂದು ಕೇಳಿಕೊಂಡಿದ್ದುದೂ ಈ ಕವಿತೆಯಲ್ಲಿ ಸುದೀರ್ಘವಾಗಿಯೇ ಚಿತ್ರಿತವಾಗಿದೆ. ನವಿಲು, ಮೀನು, ಹೊನ್ನು, ಕೋಗಿಲೆ, ಗಿಳಿ ಮುಂತಾದವುಗಳಿಂದಲೂ ದೇವನ ಕುರುಹು ತಿಳಿಯಲು ಅಲ್ಲರಿದುದು, ಕಾವ್ಯದಲ್ಲಿ ಮನೋಜ್ಞವಾಗಿಯೇ ಮೂಡಿಬಂದಿದೆ. ಇಲ್ಲಿಯ ಭಾವ ಮಹಾದೇವಿಯಕ್ಕನನ್ನು ನೆನಪಿಸಿಯೂ ಸ್ವತಂತ್ರವಾಗಿರುವುದನ್ನು ಕಾಣಬಹುದು.

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ.
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ.

ಇದು ಮಧುರಚೆನ್ನರು ಪಡೆದ ಒಂದು ದಿವ್ಯಾನುಭವ. ಆಧ್ಯಾತ್ಮಸಾಧನೆಯಲ್ಲಿಯೇ ಸಂಪೂರ್ಣವಾಗಿ ಅದ್ದಿತೆಗೆದ ಈ ಕಾವ್ಯವನ್ನು ಕುರಿತು ಬರೆಯುತ್ತ ವಿ. ಕೃ. ಗೋಕಾಕ ಅವರು "ಶ್ರೀಮಧುರಚೆನ್ನರ ನನ್ನ ನಲ್ಲವೆಂಬ ನೀಳ್ಗವನವು ವಿಶ್ವದ ಯಾವುದೇ ಉಜ್ವಲವಾದ ಅನುಭಾವಗೀತದೊಡನೆ ಸರಿಯಾಗಿ ನಿಲ್ಲಬಲ್ಲದು. ಅನುಭಾವಗೀತದ ಹೊಸಪರಿಯನ್ನೊಂದು ಅವರು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಕನ್ನಡಿಗರು ಹೆಮ್ಮೆ ಪಡುವಂತಹ ಕೃತಿಯಿದು" ಎಂದಿದ್ದಾರೆ. ಮಧುರಚೆನ್ನರ 'ನೋಂಪಿ', 'ಕೆಸರೊಳಗಿನ ಕಮಲ', 'ದೇವತಾಪೃಥಿವಿ' ಈ ಮೊದಲಾದ ಕವಿತೆಗಳಲ್ಲಿ ಅವರ ಪಾರಮಾರ್ಥಿಕ ತುಡಿತ ವಿಶೇಷವಾಗಿಯೇ ವ್ಯಕ್ತವಾಗಿದೆ.

ಬೇಂದ್ರೆ, ಕುವೆಂಪು, ಮಧುರಚೆನ್ನರ ತಲೆಮಾರಿನನಂತರ ನಮಗೆ ಅನುಭಾವ ಕೇಂದ್ರಿತ ಕಾವ್ಯ ದೊರೆಯುವುದಿಲ್ಲ. ಜಿ. ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿ, ಗಂಗಾಧರ ಚಿತ್ತಾಲ ಇವರೆಲ್ಲ ಸ್ವಭಾವತಃ ಚಿಂತನಶೀಲರು. ತೀರ ಪ್ರಾರಂಭದಲ್ಲಿ ಇವರು ಗಿರುವ ಪರಂಪರೆಯ ಹಿನ್ನೆಲೆಯಲ್ಲಿ ಶ್ರದ್ಧೆಯ ಪ್ರತಿಬಿಂಬಗಳಾದ ಭಾವಗೀತೆಗಳನ್ನು ಸೃಷ್ಟಿಸಿದ್ದರೂ ಅದೇ ಸ್ಥಾಯಿಯಾಗಿ ಅವರಲ್ಲಿ ಉಳಿದಿಲ್ಲ. ಯಾಕೆಂದರೆ ಕಾವ್ಯಧೋರಣೆ, ಜೀವನದೃಷ್ಟಿಗಳು ಬದಲಾದ ಸಂದರ್ಭದಲ್ಲಿ ಇವರೆಲ್ಲರ ಕಾವ್ಯ ಸಮಾಜಮುಖಿಯಾಗಿ ಸ್ಪಂದಿಸತೊಡಗಿತು.

ಎಸ್. ವಿ. ರಂಗಣ್ಣ, ಎಸ್. ವಿ. ಪರಮೇಶ್ವರ ಭಟ್ಟ, ಸಿದ್ಧಯ್ಯ ಪುರಾಣಿಕರು [illegible]

ರೂಪವನ್ನು ...
ಮುಖಿಗಳಾಗಿ ಆತ್ಮತತ್ತ್ವದ ...

ಗಾಢ ಭಯಭಕ್ತಿ ಅನೂನ ಆನಂದಗಳ
ಮಿಶ್ರ ಮೋಹದಲ್ಲಿ ಮುಳುಗಿರುವಾಗ
ಮಾತು ಬೆಳ್ಳಿಯಾದರೆ ಮೌನ ಬಂಗಾರವಯ್ಯ
ಆಗ ನೀನು ಮೌನಾರ್ಚನೆಯಿಂದ
ಪೂಜಿಸಿಕೊಳ್ಳುವೆಯಯ್ಯ
ಪುರುಷೋತ್ತಮ ರಂಗಯೋಗಿ

ಎಂಬ ಎಸ್. ವಿ. ರಂಗಣ್ಣನವರ ವಚನವೊಂದರಲ್ಲಿ,

ನನ್ನ ರೋಗಕೆ ನಿನ್ನ ಪ್ರಾರ್ಥನೆಯೇ ಮದ್ದು
ಮದ್ದು ಮಾತ್ರವಲ್ಲ ಅದೇ ಅಮದ್ದು ಸದಾಶಿವ ಗುರು

ನಾನು ಮನೆಯಲ್ಲಿರಬೇಕು, ಮನದಲ್ಲಿ ನೀನಿರಬೇಕು
ನಾನಿಲ್ಲದ ಮನೆ ನೀನಿಲ್ಲದ ಮನದಂತೆ ಸದಾಶಿವ ಗುರು

ಎಂಬ ಎಸ್. ವಿ. ಪರಮೇಶ್ವರ ಭಟ್ಟರ ವಚನಗಳಲ್ಲಿ,

ನಾನು ನೀನಾಗುವುದು ನನಗೆ ಸಾಧ್ಯವಾಗಲಿಲ್ಲ
ನೀನು ನಾನಾಗುವುದು ನಿನಗೂ ಸಾಧ್ಯವಾಗಲಿಲ್ಲವೇನಯ್ಯ
ನನ್ನಲ್ಲಿರುವ ನಿನ್ನನ್ನು ಕೆಳಗೊತ್ತಿಹನು ನಾನೆಂಬ ಅಸುರ
ಅವನನ್ನು ಕೆಳಗೊತ್ತಿ ಮೆಟ್ಟಿ ನೀನು ನಾನಾಗಯ್ಯ ಸ್ವತಂತ್ರಧೀರ ಸಿದ್ಧೇಶ್ವರ

ಎಂಬ ಸಿದ್ಧಯ್ಯ ಪುರಾಣಿಕರು ನಿವೇದಿಸುವ ವಚನದಲ್ಲಿ, ತಮ್ಮ ಅಂತರಂಗದ ಆತ್ಮತತ್ತ್ವವನ್ನು ಜಾಗರಿಸಿಕೊಳ್ಳುವ ಹವಣಿಕೆಯಿರುವುದು ಕಂಡುಬರುತ್ತದೆ. ಈ ವಚನಕಾರರಲ್ಲಿ ಸಾಮಾಜಿಕ ಪ್ರಜ್ಞೆಯೇ ಎದ್ದು ಕಾಣುತ್ತಿದ್ದರೂ ಆಧ್ಯಾತ್ಮಿಕ ದೃಷ್ಟಿ ಅಲ್ಲಿಗಲ್ಲಿಗೆ ತನ್ನ ವಿಶೇಷತೆಯನ್ನು ಉಳಿಸಿಕೊಂಡು ಬಂದಿರುವುದು ಮಹತ್ವದ ಮಾತಾಗಿದೆ.

ಅಂತರ್ಮುಖಿಯಾಗಿರುವ, ಚಿಂತನಶೀಲರಾಗಿರುವ ಸೃಷ್ಟಿಯ ಅಗಮ್ಯ ಅಗೋಚರ ಅಗಾಧ ಶಕ್ತಿಯು ವಿವಿಧ ರೂಪಗಳನ್ನು ವಿಸ್ಮಯಾನಂದಗಳಿಂದ ನಿರೀಕ್ಷಿಸುವ ಶಕ್ತಿಯುಳ್ಳ ವ್ಯಕ್ತಿಗಳಲ್ಲಿ ಅನುಭಾವದ ಅಂಶ ಇದ್ದೇ ಇರುತ್ತದೆ. ಎಲ್ಲ ಬಗೆಯ ಸಾಮಾಜಿಕ ಅವ್ಯವಸ್ಥೆಗಳಲ್ಲಿ, ಅಸ್ವಸ್ಥತೆಗಳಲ್ಲಿ, ಶ್ರೀರಾಮಕೃಷ್ಣಾಶ್ರಮ, ಶ್ರೀ ಅರವಿಂದಾಶ್ರಮ ಮುಂತಾದವುಗಳು ಭಾರತೀಯರ ಶ್ರದ್ಧೆ, ನಿಷ್ಠೆಗಳನ್ನು ಉಳಿಸಿಕೊಂಡು ಬರುತ್ತಿವೆ. ಎಂಥ ಭೌತಿಕವಾದ, ಲೌಕಿಕವಾದಗಳು ಬಳಕೆಗೆ ಬಂದರೂ ಪ್ರೀತಿ, ಅಂತಃಕರಣ, ದಯೆ, ದಾನಗಳು ಬತ್ತತಕ್ಕ ಗುಣಗಳಲ್ಲ. ಅವೇ ನಿಜವಾಗಿ ಮಾನವೀಯಮೌಲ್ಯಗಳು. ಈ ಮೌಲ್ಯಗಳಿಗೆ ಪ್ರೇರಕವಾದದ್ದು ... ದೇವಭಾವ ಮತ್ತು ಶಿವಚಿಂತನೆ. ನವೋದಯದ ... ಮಾನತೆ'ಯನ್ನು

ಮರೆಯ ನಿಧಾನದಂತೆ ಉಳಿದುಕೊಂಡುಬಿಟ್ಟಿದೆ. ಸಮಸ್ತ ಸೃಷ್ಟಿಯ ಸೂತ್ರಚಾಲಕ ಶಕ್ತಿಯ ಅರಿವು ಮತ್ತೆ ಮೂಡಿಬಂದಾಗ, ಅನುಭಾವಕಾವ್ಯದ ಪುನರಾವೃತ್ತಿಯಾಗುವುದರಲ್ಲಿ ಸಂದೇಹವಿಲ್ಲ. ಅಂಥ ಕಾಲಕ್ಕಾಗಿ ಕಾಯುವುದು ಸದ್ಯದ ಸ್ಥಿತಿಯಲ್ಲಿ ಅಸಂಗತವೆನಿಸಿದರೂ, ಹೆಣ್ಣು-ಗಂಡು, ಬಡವ-ಬಲ್ಲಿದ, ಮೇಲು-ಕೀಳು—ಈ ವಿಷಮತೆಗಳನ್ನು ಸಂಪೂರ್ಣವಾಗಿ ತೊಡೆದು ಹಾಕುವ ಅನುಭಾವಜೀವನ 'ಸಕಲಜೀವಾತ್ಮರಿಗೆ ಲೇಸನೆ ಬಯಸುವ' ಮಹತ್ವಾಕಾಂಕ್ಷೆಯುಳ್ಳದ್ದಾದ್ದರಿಂದ, ಅದು ಯಾವಾಗಲೂ ಅಪೇಕ್ಷಣೀಯವಾದದ್ದು.

ರಾಷ್ಟ್ರಪತಿಗಳ ಪ್ರಶಸ್ತಿ ಪ್ರದಾನ, ಸನ್ಮಾನ್ಯ ಶ್ರೀ ನೀಲಂ ಸಂಜೀವರೆಡ್ಡಿ ಅವರಿಂದ (1979)



ರಾಜ್ಯ ಸರಕಾರ ಪುರಸ್ಕಾರ ಪ್ರದಾನ, ಮಾನ್ಯ ಸಚಿವೆ ನಾಗಮ್ಮ ಕೇಶವಮೂರ್ತಿ ಅವರಿಂದ (1982)



ಶ್ರೀ ಸತ್ಯಸಾಯಿ ಇನ್‌ಸ್ಟಿಟ್ಯೂಟ್ ಆಫ್ ಹೈಯರ್ ಲರ್ನಿಂಗ್, ಪ್ರಶಾಂತಿ ನಿಲಯದ
ಘಟಿಕೋತ್ಸವದಲ್ಲಿ ಶ್ರೀ ಶ್ರೀ ಸತ್ಯಸಾಯಿಬಾಬಾ ಅವರೊಡನೆ (1986)

ರಾಜ್ಯಪಾಲರಾದ ಸನ್ಮಾನ್ಯ ಶ್ರೀ ಪಿ. ವೆಂಕಟಸುಬ್ಬಯ್ಯ ಅವರಿಂದ
ಕನ್ನಡ ರಾಜ್ಯೋತ್ಸವ ಪ್ರಶಸ್ತಿಪ್ರದಾನ (1989)

# ಭಾರತೀಯ ತತ್ತ್ವಶಾಸ್ತ್ರದಲ್ಲಿ 'ವಿಶೇಷ'

ಸಿ. ಎಚ್. ಶ್ರೀನಿವಾಸಮೂರ್ತಿ

ಭಾರತೀಯ ದಾರ್ಶನಿಕ ಪರಂಪರೆಯಲ್ಲಿ ಎರಡು ದರ್ಶನಗಳು 'ವಿಶೇಷ' ಎಂಬ ಹೆಸರಿನಿಂದ ಎರಡು ವಿಭಿನ್ನವಾದ ಪ್ರಮೇಯಗಳನ್ನು ಪ್ರತಿಪಾದಿಸಿವೆ. ವೈಶೇಷಿಕ ಮತ್ತು ವೇದಾಂತದ ಮಾಧ್ವಪಂಥಗಳೇ ಆ ಎರಡು ದರ್ಶನಗಳು.

(೧) ಒಂದೇ ಮೂಲದ್ರವ್ಯದಿಂದ ಉತ್ಪನ್ನವಾದ ಅನೇಕ ಪದಾರ್ಥಗಳು. (ಉದಾ : ಮಣ್ಣಿನಿಂದ ತಯಾರಾದ ಘಟಕಗಳು) ಪರಸ್ಪರ ಭಿನ್ನವಾಗಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಅವು ಏಕೆ ಭಿನ್ನವಾಗಿವೆ ಎಂಬ ಪ್ರಶ್ನೆಗೆ ಉತ್ತರವನ್ನು ಹುಡುಕುತ್ತಾ ವೈಶೇಷಿಕರು ಹೀಗೆ ಆಲೋಚಿಸಿದರು :

ಅವು ಬೇರೆಬೇರೆ ಅವಯವಗಳಿಂದ ಉತ್ಪನ್ನವಾಗಿವೆ ; ಆದ್ದರಿಂದ ಭಿನ್ನವಾಗಿವೆ. ಉದಾ : ಕ ಘಟ ಮತ್ತು ಚ ಘಟ ಒಂದು ಘಟ. ಒಂದು ಘಟ ಎರಡು ಅವಯವಗಳ ಜೋಡಣೆಯಿಂದ ಉತ್ಪನ್ನವಾಗುತ್ತದೆ. ಕ ಘಟದ ಉತ್ಪಾದನೆಗೆ ಕಾರಣವಾದ ಅವಯವಗಳೇ ಬೇರೆ, ಚ ಘಟದ ಉತ್ಪಾದನೆಗೆ ಕಾರಣವಾದ ಅವಯವಗಳೇ ಬೇರೆ. ಆದ್ದರಿಂದ ಕ ಘಟ ಮತ್ತು ಚ ಘಟಗಳು ಪರಸ್ಪರ ಭಿನ್ನವಾಗಿವೆ. ಹೀಗೆಯೇ, ಅವಯವಗಳ ಅವಯವಗಳು ಬೇರೆ ಬೇರೆಯಾದ್ದರಿಂದ ಅವಯವಗಳು ಪರಸ್ಪರ ಭಿನ್ನವಾಗಿವೆ. ಹೀಗೆ ದ್ವ್ಯಣುಕ[1]ದವರೆಗೆ ಭೇದದ ಕಾರಣಗಳನ್ನು ಗುರುತಿಸಬಹುದು. ಎರಡು ದ್ವ್ಯಣುಕಗಳು ಭಿನ್ನವಾಗಿರಲು ಅವುಗಳ ಅವಯವಗಳಾದ ಪರಮಾಣುಗಳ ಭೇದವೇ ಕಾರಣ. ಪರಮಾಣುಗಳಿಗೆ ಅವಯವಗಳಿಲ್ಲವಾದುದರಿಂದ ಒಂದೇ ಸ್ವಭಾವದ ಪರಮಾಣುಗಳು ಪರಸ್ಪರ ಭಿನ್ನವಾಗಿರಲು ಬೇರೆ ಏನೋ ಕಾರಣವು ಇರಬೇಕು. ಹೀಗೆ ಆಲೋಚಿಸಿದ ವೈಶೇಷಿಕರು ಈ ಕಾರಣಕ್ಕೆ 'ವಿಶೇಷ' ಎಂಬ ಹೆಸರನ್ನು ಕೊಟ್ಟರು. ಇದು ಅನ್ವರ್ಥನಾಮ. ಭೇದವನ್ನು ಉಂಟು ಮಾಡುವ ಅಥವಾ ಭೇದಕ್ಕೆ ಕಾರಣವಾದ ಸಂಗತಿ ಎಂದು ಈ ಶಬ್ದದ ಅರ್ಥ[2]. ಶ್ರೀಧರನ 'ನ್ಯಾಯಕಂದಲಿ'ಯಲ್ಲಿಯೂ ಇದೇ ಅರ್ಥವಿದೆ.[3] ಎಲ್ಲ ಪರಮಾಣುಗಳಲ್ಲೂ ಈ 'ವಿಶೇಷ'ವು ಇದೆ. ಪರಮಾಣುಗಳು ಅನಂತವಾದುದರಿಂದ ವಿಶೇಷಗಳೂ ಅನಂತ. 'ವಿಶೇಷ'ಗಳಲ್ಲಿ ಇರುವ ಪರಸ್ಪರ ಭೇದಕ್ಕೆ ಏನು ಕಾರಣ ? ಬೇರೆ ಏನಾದರೂ ಕಾರಣವಿದ್ದರೆ ಆ ಕಾರಣಗಳಲ್ಲಿರುವ ಪರಸ್ಪರಭೇದಕ್ಕೆ ಬೇರೆ ಯಾವುದೋ ಕಾರಣವಿದೆ ಎಂದು ಕಲ್ಪಿಸಬೇಕಾಗುತ್ತದೆ. ಹೀಗೆ ಭೇದಕಾರಣಗಳ ಪರಂಪರೆ ನಿಲ್ಲದೆ ಬೆಳೆಯುತ್ತಾ ಹೋಗುತ್ತದೆ. ಈ ಸ್ಥಿತಿಗೆ

ಅನವಸ್ಥಾ ಎಂದು ಹೆಸರು. ಈ ದೋಷದ ಪರಿಹಾರಕ್ಕಾಗಿ ಪರಮಾಣುಗಳ ಪರಸ್ಪರ ಭೇದಕ್ಕೆ ಕಾರಣವಾದ ವಿಶೇಷಗಳ ಪರಸ್ಪರ ಭೇದಕ್ಕೆ ಬೇರೆ ಏನೂ ಕಾರಣವಿಲ್ಲ; ಆ ವಿಶೇಷಗಳೇ ತಮ್ಮಲ್ಲಿರುವ ಪರಸ್ಪರ ಭೇದಕ್ಕೆ ಕಾರಣ. ಅರ್ಥಾತ್, ವಿಶೇಷಗಳು ಸ್ವನಿರ್ವಾಹಕ. ಹೀಗೆ ವೈಶೇಷಿಕರು ಚಿಂತಿಸಿದ್ದಾರೆ.[4]

(೨) ವೇದಾಂತದರ್ಶನದಲ್ಲಿ ಮಧ್ವಾಚಾರ್ಯರು ಪ್ರತಿಪಾದಿಸಿದ 'ವಿಶೇಷ' ಇದಕ್ಕಿಂತ ಭಿನ್ನವಾದುದು. ಪ್ರಾಯಶಃ ಸಕಲ ಭಾರತೀಯ ದರ್ಶನಗಳೂ ಚರ್ಚಿಸಿರುವ ಸಮಸ್ಯೆಯೊಂದಕ್ಕೆ ಮಧ್ವರು ಪ್ರತಿಪಾದಿಸಿದ ಪರಿಹಾರವೇ ಅವರ 'ವಿಶೇಷ' ತತ್ವ. ಅದರ ವಿವರಣೆ ಹೀಗೆ:

ಲೋಕದ ಸಕಲಪದಾರ್ಥಗಳನ್ನೂ ಸ್ಥೂಲವಾಗಿ ದ್ರವ್ಯ ಮತ್ತು ಗುಣ ಎಂದು ದಾರ್ಶನಿಕರು ವರ್ಗೀಕರಿಸಿದ್ದಾರೆ. ಇದಲ್ಲದೆ ಬೇರೆ ಕೆಲವು ಪದಾರ್ಥಗಳನ್ನೂ ಬೇರೆಬೇರೆ ದಾರ್ಶನಿಕರು ಒಪ್ಪಿದ್ದಾರೆ. ಉದಾ: ಕರ್ಮ, ಸಾಮಾನ್ಯ, ಸಮವಾಯ, ಪುದ್ಗಲ ಇತ್ಯಾದಿ.

ದ್ರವ್ಯದಲ್ಲಿ ಗುಣಗಳು ಇರುತ್ತವೆ. ಈ ಗುಣಗಳು ಎರಡು ವಿಧ. ದ್ರವ್ಯವು ಇರುವವರೆಗೂ ಇರುವ ಗುಣಗಳು ಮತ್ತು ದ್ರವ್ಯವು ಇರುವವರೆಗೂ ಇರದ, ಮೊದಲೇ ನಾಶವಾಗುವ ಗುಣಗಳು. ಹಾಲಿನ ಬಿಳಿಬಣ್ಣ, ಸಕ್ಕರೆಯ ಸಿಹಿ ಮೊದಲನೆಯ ವಿಧಕ್ಕೆ ಉದಾಹರಣೆ; ಮಾವಿನ ಹುಳಿ, ಎಲೆಯ ಕೆಂಪು ಎರಡನೆಯ ವಿಧಕ್ಕೆ ಉದಾಹರಣೆ.

ದ್ರವ್ಯವು ಇರುವವರೆಗೂ ಇರುವ ಗುಣಗಳನ್ನು ದ್ರವ್ಯದಿಂದ ಬೇರ್ಪಡಿಸಲಾಗುವುದಿಲ್ಲ. ಹಾಲಿನ ಬಿಳುಪನ್ನು ಹಾಲಿನಿಂದ ಬೇರ್ಪಡಿಸಲಾಗುವುದಿಲ್ಲ. ಇಂತಹ ದ್ರವ್ಯ-ಗುಣಗಳು ಅಭಿನ್ನವೋ? ಪರಸ್ಪರ ಭಿನ್ನವೋ? ಅಥವಾ ಭಿನ್ನಾಭಿನ್ನವೋ? ಈ ಪ್ರಶ್ನೆಯನ್ನು ಇನ್ನೊಂದು ರೀತಿಯಲ್ಲಿ ಕೇಳಬಹುದು: ದ್ರವ್ಯವಿರುವವರೆಗೂ ಇರುವ ಗುಣ ಮತ್ತು ಅದರ ಧರ್ಮಿ(ದ್ರವ್ಯ)ಗಳಿಗೆ ಅಭೇದ? ಭೇದ? ಅಥವಾ ಭೇದಾಭೇದ? ಈ ಪ್ರಶ್ನೆಯ ಬಗ್ಗೆ ಜಿಜ್ಞಾಸೆಯನ್ನು ನಡೆಸಿದ ದಾರ್ಶನಿಕರು ಮೂರರಲ್ಲಿ ಒಂದು ಕಲ್ಪವನ್ನು ಒಪ್ಪಿದ್ದಾರೆ.

ಜೈನದರ್ಶನ ಮತ್ತು ಪೂರ್ವಮೀಮಾಂಸಾದರ್ಶನದ ಭಾಟ್ಟಪಂಥಗಳು ಭೇದಾಭೇದವನ್ನೂ ನ್ಯಾಯವೈಶೇಷಿಕ, ಪೂರ್ವಮೀಮಾಂಸೆಯ ಪ್ರಾಭಾಕರಪಂಥ, ರಾಮಾನುಜ ದರ್ಶನಗಳು ಭೇದವನ್ನೂ ಸಾಂಖ್ಯ, ಶಂಕರ, ಮಧ್ವದರ್ಶನಗಳು ಅಭೇದವನ್ನೂ ಅಂಗೀಕರಿಸುತ್ತವೆ. ಬೌದ್ಧದರ್ಶನದ ವೈಭಾಷಿಕ ಸೌತ್ರಾಂತಿಕ ಪಂಥದವರು ಕ್ರಮವಾಗಿ ಕೇವಲ ಗುಣಗಳನ್ನು, ಕೇವಲದ್ರವ್ಯವನ್ನು ಅಂಗೀಕರಿಸುತ್ತಾರೆ. ಯೋಗಾಚಾರ ಮತ್ತು ಮಾಧ್ಯಮಿಕರು ಎರಡನ್ನೂಅಂಗೀಕರಿಸುವುದಿಲ್ಲ. ಆದ್ದರಿಂದ ಈ ದರ್ಶನಗಳಲ್ಲಿ, ದ್ರವ್ಯಗುಣಗಳು ಭಿನ್ನವೆ ಇತ್ಯಾದಿ ಪ್ರಶ್ನೆಯೇ ಇಲ್ಲ.

## ಭೇದಾಭೇದ ಸಮರ್ಥನೆ

ದ್ರವ್ಯ ಮತ್ತು ಗುಣಗಳು ಏಕಕಾಲದಲ್ಲಿ ಒಂದೇ ಜಾಗದಲ್ಲಿ ಇರುವುದರಿಂದ ಅವು

ಅಭಿನ್ನ. ಆದರೆ ಬೇರೆ ಬೇರೆ ಹೆಸರುಗಳು ಅವುಗಳಿಗಿವೆ. ಆ ಹೆಸರುಗಳು ಪರ್ಯಾಯ ಪದಗಳಲ್ಲ. 'ಹಾಲಿನ ಬಿಳುಪು' ಮೊದಲಾದ ಅಬಾಧಿತ ವ್ಯವಹಾರವಿದೆ.[5] ಆದ್ದರಿಂದ ಅವುಗಳು ಭಿನ್ನವೂ ಆಗಿವೆ.[6] ಹೀಗೆ ಜೈನದರ್ಶನವು ಭೇದಾಭೇದವನ್ನು ಸಮರ್ಥಿಸುತ್ತದೆ.

ಧರ್ಮಿಯಿಂದ ಅಭಿನ್ನವಾದ ಎರಡು ಧರ್ಮ(ಗುಣ)ಗಳು ತಾವೂ ಅಭಿನ್ನವಾಗಬೇಕಾಗುವುದು ಅನಿವಾರ್ಯ.[7] ಹಾಲಿನ ಬಣ್ಣ ಮತ್ತು ಮಾಧುರ್ಯ ಹಾಲಿನಿಂದ ಅಭಿನ್ನವಾದರೆ ಬಣ್ಣ ಮತ್ತು ಮಾಧುರ್ಯಗಳೂ ಅಭಿನ್ನವಾಗಬೇಕಾಗುತ್ತದೆ. ಆದರೆ ಅವುಗಳು ಭಿನ್ನ. ಆದ್ದರಿಂದ ಅವು ಹಾಲಿನಿಂದ ಭಿನ್ನವಾಗಿರಲೇಬೇಕು. ಆದ್ದರಿಂದ ದ್ರವ್ಯ-ಗುಣಗಳಿಗೆ ಭೇದ. 'ಈ ವಸ್ತು ಚೆನ್ನಾಗಿದೆ' ಎಂದು ತೋರಿದಾಗ, ಅದು ಚೆನ್ನಾಗಿರಲು ಅದರ ಗುಣಗಳೇ ಕಾರಣವಾದುದರಿಂದ ಅವುಗಳು ದ್ರವ್ಯದಿಂದ ಅಭಿನ್ನವಾಗಿವೆ. ಆದ್ದರಿಂದ ದ್ರವ್ಯ–ಗುಣಗಳಿಗೆ ಭೇಧಾಭೇದ. ಇದು ಭಾಟ್ಟದರ್ಶನದ ಸಮರ್ಥನೆ.[8]

## ಭೇದ ಸಮರ್ಥನೆ

ದ್ರವ್ಯದ ಜ್ಞಾನವು ಉಂಟಾದರೂ ಗುಣದ ಜ್ಞಾನವು ಉಂಟಾಗದ ಸಂದರ್ಭಗಳು ಸಾಕಷ್ಟು ಇವೆ. ಗಾಳಿಯು ಬೀಸುತ್ತಿರುವಾಗ ದೂರದಲ್ಲಿರುವ ದ್ರವ್ಯದ ವಾಸನೆಯನ್ನು ಗ್ರಹಿಸುತ್ತೇವೆ. ಆದರೆ ವಾಸನೆಯನ್ನು ಹೊಂದಿರುವ ದ್ರವ್ಯದ ಜ್ಞಾನವು ಉಂಟಾಗುವುದಿಲ್ಲ. ಹುಟ್ಟುಕುರುಡನು ಸ್ಪರ್ಶದಿಂದ ದ್ರವ್ಯವನ್ನು ಮಾತ್ರ ತಿಳಿಯುತ್ತಾನೆ. ಅದರ ರೂಪ ಮೊದಲಾದ ಗುಣಗಳ ಜ್ಞಾನವು ಅವನಿಗೆ ಆಗುವುದೇ ಇಲ್ಲ. ಗಜಜ್ಞಾನಕ್ಕೆ ವಿಷಯವಾಗದ ಅಶ್ವವು ಗಜದಿಂದ ಭಿನ್ನವಾಗಿರುವಂತೆ ದ್ರವ್ಯಜ್ಞಾನಕ್ಕೆ ವಿಷಯವಾಗದ ಗುಣ ಮತ್ತು ಗುಣಜ್ಞಾನಕ್ಕೆ ವಿಷಯವಾಗದ ದ್ರವ್ಯ ಪರಸ್ಪರಭಿನ್ನವೇ. ಇದು ಪ್ರಾಭಾಕರರು ಭೇದದ ಸಮರ್ಥನೆಗೆ ಹೇಳಿರುವ ತರ್ಕ.[9]

ನ್ಯಾಯ-ವೈಶೇಷಿಕ ಮತ್ತು ರಾಮಾನುಜ ದರ್ಶನಗಳು[10] ಭೇದಕ್ಕೆ ಸಮರ್ಥನೆಯನ್ನು ತೋರಿಸಿರುವಂತೆ ಕಾಣುವುದಿಲ್ಲ. ದ್ರವ್ಯ-ಗುಣಗಳ ಭೇದ ಸರ್ವಾನುಭವಸಿದ್ಧವಾದ ಅತಿಸ್ಪಷ್ಟವಾದ ಸಂಗತಿಯೆಂದು ಈ ದರ್ಶನಗಳು ಸಮರ್ಥನೆಯನ್ನು ದಾಖಲಿಸದಿರಬಹುದು. ಪ್ರಸಿದ್ಧವಾದ ಎರಡು ಸಮರ್ಥನೆಗಳು ಹೀಗಿವೆ :

(೧) ದ್ರವ್ಯವಾಚಕ ಮತ್ತು ಗುಣವಾಚಕ ಶಬ್ದಗಳು, ಸಿಂಹವಾಚಕಗಳಾದ ಪಂಚಾಸ್ಯ, ಕೇಸರೀ, ಹರಿಶಬ್ದಗಳಂತೆ ಪರ್ಯಾಯಗಳಲ್ಲ, ಅಪರ್ಯಾಯಶಬ್ದವಾಚ್ಯಗಳಾದ ಅರ್ಥಗಳು ಪರಸ್ಪರ ಭಿನ್ನ. ಅಶ್ವ ಮತ್ತು ಗಜ ಶಬ್ದವಾಚ್ಯಗಳಾದ ಕುದುರೆ ಮತ್ತು ಆನೆಗಳು ಪರಸ್ಪರ ಭಿನ್ನ.

(೨) ಪರಸ್ಪರ ಭಿನ್ನವಾದ ವಸ್ತುಗಳಿಗೆ ಮಾತ್ರ ಸಂಬಂಧವಿರುತ್ತದೆ. ಸಂಬಂಧವನ್ನು ತಿಳಿಸಬೇಕಾದಾಗ ಷಷ್ಠೀವಿಭಕ್ತಿಯನ್ನು ಪ್ರಯೋಗಿಸುತ್ತೇವೆ. ಚೈತ್ರನ ಮನೆ ಎಂಬ ವಾಕ್ಯದಲ್ಲಿರುವ ಷಷ್ಠೀವಿಭಕ್ತಿಯು ಚೈತ್ರ ಮತ್ತು ಮನೆಗಳ ಸಂಬಂಧವನ್ನು ಬೋಧಿಸು

ಅಭಿನ್ನ. ಆದರೆ ಬೇರೆ ಬೇರೆ ಹೆಸರುಗಳು ಅವುಗಳಿಗಿವೆ. ಆ ಹೆಸರುಗಳು ಪರ್ಯಾಯ ಪದಗಳಲ್ಲ. 'ಹಾಲಿನ ಬಿಳುಪು' ಮೊದಲಾದ ಅಬಾಧಿತ ವ್ಯವಹಾರವಿದೆ.[5] ಆದ್ದರಿಂದ ಅವುಗಳು ಭಿನ್ನವೂ ಆಗಿವೆ.[6] ಹೀಗೆ ಜೈನದರ್ಶನವು ಭೇದಾಭೇದವನ್ನು ಸಮರ್ಥಿಸುತ್ತದೆ.

ಧರ್ಮಿಯಿಂದ ಅಭಿನ್ನವಾದ ಎರಡು ಧರ್ಮ(ಗುಣ)ಗಳು ತಾವೂ ಅಭಿನ್ನವಾಗಬೇಕಾಗುವುದು ಅನಿವಾರ್ಯ.[7] ಹಾಲಿನ ಬಣ್ಣ ಮತ್ತು ಮಾಧುರ್ಯ ಹಾಲಿನಿಂದ ಅಭಿನ್ನವಾದರೆ ಬಣ್ಣ ಮತ್ತು ಮಾಧುರ್ಯಗಳೂ ಅಭಿನ್ನವಾಗಬೇಕಾಗುತ್ತದೆ. ಆದರೆ ಅವುಗಳು ಭಿನ್ನ. ಆದ್ದರಿಂದ ಅವು ಹಾಲಿನಿಂದ ಭಿನ್ನವಾಗಿರಲೇಬೇಕು. ಆದ್ದರಿಂದ ದ್ರವ್ಯ-ಗುಣಗಳಿಗೆ ಭೇದ. 'ಈ ವಸ್ತು ಚೆನ್ನಾಗಿದೆ' ಎಂದು ತೋರಿದಾಗ, ಅದು ಚೆನ್ನಾಗಿರಲು ಅದರ ಗುಣಗಳೇ ಕಾರಣವಾದುದರಿಂದ ಅವುಗಳು ದ್ರವ್ಯದಿಂದ ಅಭಿನ್ನವಾಗಿವೆ. ಆದ್ದರಿಂದ ದ್ರವ್ಯ–ಗುಣಗಳಿಗೆ ಭೇಧಾಭೇದ. ಇದು ಭಾಟ್ಟದರ್ಶನದ ಸಮರ್ಥನೆ.[8]

## ಭೇದ ಸಮರ್ಥನೆ

ದ್ರವ್ಯದ ಜ್ಞಾನವು ಉಂಟಾದರೂ ಗುಣದ ಜ್ಞಾನವು ಉಂಟಾಗದ ಸಂದರ್ಭಗಳು ಸಾಕಷ್ಟು ಇವೆ. ಗಾಳಿಯು ಬೀಸುತ್ತಿರುವಾಗ ದೂರದಲ್ಲಿರುವ ದ್ರವ್ಯದ ವಾಸನೆಯನ್ನು ಗ್ರಹಿಸುತ್ತೇವೆ. ಆದರೆ ವಾಸನೆಯನ್ನು ಹೊಂದಿರುವ ದ್ರವ್ಯದ ಜ್ಞಾನವು ಉಂಟಾಗುವುದಿಲ್ಲ. ಹುಟ್ಟುಕುರುಡನು ಸ್ಪರ್ಶದಿಂದ ದ್ರವ್ಯವನ್ನು ಮಾತ್ರ ತಿಳಿಯುತ್ತಾನೆ. ಅದರ ರೂಪ ಮೊದಲಾದ ಗುಣಗಳ ಜ್ಞಾನವು ಅವನಿಗೆ ಆಗುವುದೇ ಇಲ್ಲ. ಗಜಜ್ಞಾನಕ್ಕೆ ವಿಷಯವಾಗದ ಅಶ್ವವು ಗಜದಿಂದ ಭಿನ್ನವಾಗಿರುವಂತೆ ದ್ರವ್ಯಜ್ಞಾನಕ್ಕೆ ವಿಷಯವಾಗದ ಗುಣ ಮತ್ತು ಗುಣಜ್ಞಾನಕ್ಕೆ ವಿಷಯವಾಗದ ದ್ರವ್ಯ ಪರಸ್ಪರಭಿನ್ನವೇ. ಇದು ಪ್ರಾಭಾಕರರು ಭೇದದ ಸಮರ್ಥನೆಗೆ ಹೇಳಿರುವ ತರ್ಕ.[9]

ನ್ಯಾಯ-ವೈಶೇಷಿಕ ಮತ್ತು ರಾಮಾನುಜ ದರ್ಶನಗಳು[10] ಭೇದಕ್ಕೆ ಸಮರ್ಥನೆಯನ್ನು ತೋರಿಸಿರುವಂತೆ ಕಾಣುವುದಿಲ್ಲ. ದ್ರವ್ಯ-ಗುಣಗಳ ಭೇದ ಸರ್ವಾನುಭವಸಿದ್ಧವಾದ ಅತಿಸ್ಪಷ್ಟವಾದ ಸಂಗತಿಯೆಂದು ಈ ದರ್ಶನಗಳು ಸಮರ್ಥನೆಯನ್ನು ದಾಖಲಿಸದಿರಬಹುದು. ಪ್ರಸಿದ್ಧವಾದ ಎರಡು ಸಮರ್ಥನೆಗಳು ಹೀಗಿವೆ :

(೧) ದ್ರವ್ಯವಾಚಕ ಮತ್ತು ಗುಣವಾಚಕ ಶಬ್ದಗಳು, ಸಿಂಹವಾಚಕಗಳಾದ ಪಂಚಾಸ್ಯ, ಕೇಸರೀ, ಹರಿಶಬ್ದಗಳಂತೆ ಪರ್ಯಾಯಗಳಲ್ಲ. ಅಪರ್ಯಾಯಶಬ್ದವಾಚ್ಯಗಳಾದ ಅರ್ಥಗಳು ಪರಸ್ಪರ ಭಿನ್ನ. ಅಶ್ವ ಮತ್ತು ಗಜ ಶಬ್ದವಾಚ್ಯಗಳಾದ ಕುದುರೆ ಮತ್ತು ಆನೆಗಳು ಪರಸ್ಪರ ಭಿನ್ನ.

(೨) ಪರಸ್ಪರ ಭಿನ್ನವಾದ ವಸ್ತುಗಳಿಗೆ ಮಾತ್ರ ಸಂಬಂಧವಿರುತ್ತದೆ. ಸಂಬಂಧವನ್ನು ತಿಳಿಸಬೇಕಾದಾಗ ಷಷ್ಠೀವಿಭಕ್ತಿಯನ್ನು ಪ್ರಯೋಗಿಸುತ್ತೇವೆ. ಚೈತ್ರನ ಮನೆ ಎಂಬ ವಾಕ್ಯದಲ್ಲಿರುವ ಷಷ್ಠೀವಿಭಕ್ತಿಯು ಚೈತ್ರ ಮತ್ತು ಮನೆಗಳ ಸಂಬಂಧವನ್ನು ಬೋಧಿಸು

ತ್ತದೆ. ಸಂಬಂಧಿಗಳಾದ ಚೈತ್ರ ಮತ್ತು ಮನೆಗಳಿಗೆ ಪರಸ್ಪರ ಭೇದವಿದೆ. ಇದರಂತೆ ದ್ರವ್ಯ ಮತ್ತು ಗುಣಗಳ ಸಂಬಂಧವನ್ನು ಸೂಚಿಸುವ ಷಷ್ಠೀ ಪ್ರಯೋಗವಿದೆ. ಹೂವಿನ ಬಣ್ಣ, ಹಾಲಿನ ಸಿಹಿ ಇತ್ಯಾದಿ. ಆದ್ದರಿಂದ ದ್ರವ್ಯ ಮತ್ತು ಗುಣಗಳಿಗೆ ಪರಸ್ಪರ ಭೇದ ವಿದೆ.

ದ್ರವ್ಯ ಮತ್ತು ಗುಣಗಳು ಪರಸ್ಪರ ಭಿನ್ನವಾಗಿದ್ದರೂ ಸಂಬಂಧವೊಂದು ಅವುಗಳನ್ನು ಸರ್ವದಾ ಅವಿಭಕ್ತವಾಗಿರುವಂತೆ ಬೆಸೆದಿದೆ ಎಂದು ನ್ಯಾಯವೈಶೇಷಿಕರು ಹೇಳುತ್ತಾರೆ. ಈ ಸಂಬಂಧಕ್ಕೆ ಸಮವಾಯ ಎಂದು ಹೆಸರು.

ಭಿನ್ನವಾದ ದ್ರವ್ಯ ಮತ್ತು ಗುಣಗಳು ಸಹಜವಾಗಿಯೇ ಅವಿಭಕ್ತವಾಗಿವೆ. ಅವುಗಳ ನಡುವೆ ಪ್ರತ್ಯೇಕವಾದ ಸಂಬಂಧವೇನೂ ಇಲ್ಲ ಎಂದು ರಾಮಾನುಜರು ಹೇಳುತ್ತಾರೆ. ಸಹಜವಾದ ಅವಿಭಕ್ತಸ್ಥಿತಿಯನ್ನೇ ಸಂಬಂಧವೆಂದು ಅವರು ಪರಿಗಣಿಸಿದ್ದಾರೆ.[11]

## ಅಭೇದ ಸಮರ್ಥನೆ

ದ್ರವ್ಯ ಮತ್ತು ಗುಣಗಳು ಪ್ರತ್ಯೇಕವಾಗಿ ಜ್ಞಾನಗೋಚರವಾಗುವುದಿಲ್ಲ. ಅವುಗಳು ಪ್ರತ್ಯೇಕವಾಗಿ ಹುಟ್ಟುವುದೂ ಇಲ್ಲ. ಜೊತೆಗೇ ಹುಟ್ಟುತ್ತವೆ. ಆದ್ದರಿಂದ ಅವುಗಳಿಗೆ ಅಭೇದ. ಇದು ಸಾಂಖ್ಯರ ವಾದ.[12]

ಬೆಂಕಿ ಮತ್ತು ಹೊಗೆಗಳಿಗೆ ಪರಸ್ಪರ ಭೇದವು ಗೋಚರವಾಗುವಂತೆ ದ್ರವ್ಯ ಮತ್ತು ಗುಣಗಳಿಗೆ ಭೇದವು ಗೋಚರವಾಗುವುದಿಲ್ಲ. ಬಿಳಿಕಂಬಳಿ, ರೋಹಿಣಿ ಎಂಬ ಹಸು, ನೀಲಕಮಲ—ಈ ಪ್ರಯೋಗಗಳಲ್ಲಿ ದ್ರವ್ಯಗಳಾದ ಕಂಬಳಿ, ಹಸು ಮತ್ತು ಕಮಲಗಳೇ ಬಿಳಿ, ರೋಹಿಣಿ ಮತ್ತು ನೀಲ ಎಂದು ಹೇಳಲ್ಪಟ್ಟಿವೆ. ಆದ್ದರಿಂದ ಅವುಗಳಿಗೆ ಭೇದ ವಿಲ್ಲ. ಗುಣವು ದ್ರವ್ಯಸ್ವರೂಪವೇ.[13] ಇದು ಅದ್ವೈತದರ್ಶನದ ಅಭೇದಸಮರ್ಥನೆ.

ದ್ರವ್ಯ ಮತ್ತು ಗುಣಗಳು ಎರಡು ಬೆರಳುಗಳಂತೆ ಭಿನ್ನವಾಗಿ ತೋರುವುದೇ ಇಲ್ಲ. ಅಭಿನ್ನವಾಗಿಯೇ ತೋರುತ್ತವೆ. ನೀಲಕಮಲ ಎಂದೇ ಎಲ್ಲರಿಗೂ ಪ್ರತೀತಿಯು ಇದೆ. ಈ ಪ್ರತೀತಿಯನ್ನು ಬಾಧಿಸುವ ನೀಲವು ಕಮಲವಲ್ಲ ಎಂಬ ಪ್ರತೀತಿ ಇಲ್ಲವೇ ಇಲ್ಲ. ಆದ್ದರಿಂದ ದ್ರವ್ಯ–ಗುಣಗಳ ಅಭೇದ ಪ್ರತ್ಯಕ್ಷಸಿದ್ಧ. ಹೀಗೆ ಮಧ್ವದರ್ಶನವು ಅಭೇದ ವನ್ನು ಸಮರ್ಥಿಸುತ್ತದೆ.[14]

ಮೇಲಿನ ವಿವರಣೆಯಿಂದ ದ್ರವ್ಯ-ಗುಣಗಳಿಗೆ ಭೇದಾಭೇದ, ಪರಸ್ಪರಭೇದ ಮತ್ತು ಅಭೇದ ಎಂಬ ಮೂರೂ ವಿಚಾರಗಳು ತರ್ಕಬದ್ಧವಾಗಿರುವಂತೆ ಕಾಣುತ್ತವೆ. ಆದರೆ ಮೂರು ವಿಚಾರಗಳೂ ದೋಷಯುಕ್ತವೂ ಆಗಿವೆ. ಭೇದಾಭೇದ ಪರಸ್ಪರವಿರುದ್ಧ. ವಿರುದ್ಧವಾದ ಎರಡು ಸಂಗತಿಗಳು ಒಂದೇ ಕಡೆ ಇರುವುದು ಹೇಗೆ ? ಭೇದವು ಅನವಸ್ಥಾ ದೋಷವನ್ನು ಹೊಂದಿದೆ. ಇದರ ವಿವರಣೆ ಮುಂದೆ ಬರುತ್ತದೆ. ಅಭೇದವು ನಿಜವಾದರೆ ಪ್ರಾಭಾಕರರು ಹೇಳಿದಂತೆ ದ್ರವ್ಯದ ಜ್ಞಾನವಿಲ್ಲದೆ ಕೇವಲ ಗುಣದ ಜ್ಞಾನ ಅಥವಾ ಗುಣದ ಜ್ಞಾನವಿಲ್ಲದೆ ಕೇವಲ ದ್ರವ್ಯದ ಜ್ಞಾನ ಹೇಗೆ ಸಾಧ್ಯ ? ಅಪರ್ಯಾಯವಾಚ್ಯ

ಪಾಶ್ಚಾತ್ತ್ಯ ಮತ್ತು ಷಷ್ಠೀ ಪ್ರಯೋಗಗಳು ಹೇಗೆ ಸಾಧ್ಯ ? (ಅ) 'ಭೇದ'ವು ಭಾರತೀಯ ದರ್ಶನಗಳಲ್ಲಿ ಬಹಳ ಚರ್ಚಿತವಾದ ಪ್ರಮೇಯ. 'ಅಲ್ಲ' ಎಂಬ ಪ್ರತೀತಿಗೆ ವಿಷಯವಾದ ಸಂಗತಿಯೇ ಭೇದ. ಹಸು ಕುದುರೆಯಲ್ಲ, ಚೈತ್ರ ಮೈತ್ರನಲ್ಲ ಮೊದಲಾದ ಅಸಂಖ್ಯ ಪ್ರತೀತಿಗಳು ಪ್ರತಿಯೊಬ್ಬರಿಗೂ ಇವೆ. ಈ 'ಅಲ್ಲ' ಎಂಬ ಪ್ರತೀತಿಗಳಿಗೆ ಹಸು-ಕುದುರೆ, ಚೈತ್ರ-ಮೈತ್ರ ಮೊದಲಾದವರ ಭೇದವೇ ವಿಷಯ. ಈ ಪ್ರತೀತಿಗಳು ಅಬಾಧಿತವಾದು ದರಿಂದ ಪ್ರಮಾಣ. ಆದ್ದರಿಂದ ಭೇದವು ಪ್ರಾಮಾಣಿಕ.

ಈ ಭೇದವು ಪ್ರಪಂಚವನ್ನು ಸತ್ಯ ಎಂದು ಒಪ್ಪುವ ಸಾಂಖ್ಯ-ಯೋಗ, ನ್ಯಾಯ-ವೈಶೇಷಿಕ, ಪ್ರಾಭಾಕರ, ರಾಮಾನುಜ ಮತ್ತು ಮಧ್ವದರ್ಶನಗಳ ಅಡಿಗಲ್ಲು. ಅನಂತ ಚೇತನಾಚೇತನಾತ್ಮಕ ಪದಾರ್ಥಗಳ ಸಮುದಾಯವೇ ಪ್ರಪಂಚ. ಅಸತ್ಯವಸ್ತು ಗಳ ಸಮುದಾಯವು ಪ್ರಪಂಚವಲ್ಲ. ಕಪ್ಪೆಚಿಪ್ಪಿನ ಬೆಳ್ಳಿ, ರಜ್ಜುಸರ್ಪ, ಮರುಮರೀ ಚಿಕೆ, ಮೊಲದ ಕೊಂಬು ಇವುಗಳನ್ನು ಪ್ರಪಂಚದ ಘಟಕಗಳೆಂದು ಯಾರೂ ಹೇಳುವುದಿಲ್ಲ. ಆದ್ದರಿಂದ ಪ್ರಪಂಚವೆನಿಸಿಕೊಳ್ಳಲು ಅನಂತವಸ್ತುಗಳು ಸತ್ಯವಾಗಿರಬೇಕು. ಪದಾರ್ಥ ಗಳು ಪರಸ್ಪರ ಭಿನ್ನವಾಗಿದ್ದರೆ ಮಾತ್ರ ಅವು ಅನಂತವಾಗಲು ಮತ್ತು ಸತ್ಯವಾಗಿರಲು ಸಾಧ್ಯ. ಅಭಿನ್ನವಾದರೆ ಪ್ರಪಂಚವೇ ಇಲ್ಲದಂತಾಗುವುದು. ಅರ್ಥಾತ್ ಅಸತ್ ಆಗು ವುದು. ಆದ್ದರಿಂದ ಪ್ರಪಂಚಸತ್ಯತ್ವವಾದಿಗಳಿಗೆ ಭೇದ ಅತ್ಯಂತ ಆವಶ್ಯಕವಾದ ಪ್ರಮೇಯ. ಬೌದ್ಧ ಮತ್ತು ಅದ್ವೈತದರ್ಶನಗಳು ಭೇದವನ್ನು ನಿರಾಕರಿಸುತ್ತವೆ. ಅವರ ನಿರಾಕರಣೆ ಹೀಗಿದೆ :

ಯಾವ ವಸ್ತುವಿನಲ್ಲಿ ಭೇದವಿದೆಯೋ ಅದು ಭೇದದ ಧರ್ಮಿ. ಉದಾ : ಹಸುವಿನಲ್ಲಿ ಇತರ ಸಕಲವಸ್ತುಗಳ ಭೇದವು ಇದೆ. ಹಸು ಈ ಭೇದದ ಧರ್ಮಿ. ಧರ್ಮಿಯಲ್ಲಿರುವ ಭೇದವು ಧರ್ಮಿಯಿಂದ ಭಿನ್ನವೊ ? ಅಭಿನ್ನವೊ ? ಭಿನ್ನಾಭಿನ್ನವೊ ? ಭಿನ್ನವಾದರೆ ಧರ್ಮಿ ಮತ್ತು ಭೇದಗಳ ಈ ಭೇದವು ಎರಡನೆಯ ಭೇದವಾಗುತ್ತದೆ. ಹೀಗೆಯೇ ಎರ ಡನೆಯ ಭೇದ ಮತ್ತು ಅದರ ಧರ್ಮಿಗಳಿಗೂ ಭೇದವನ್ನು ಅಂಗೀಕರಿಸಬೇಕಾಗುತ್ತದೆ. ಈ ಭೇದವು ಮೂರನೆಯ ಭೇದವಾಗುತ್ತದೆ. ಹೀಗೆ ಭೇದದ ಕೊನೆಯಿಲ್ಲದ ಪರಂಪರೆ ಯನ್ನು ಒಪ್ಪಬೇಕಾಗುತ್ತದೆ. ಇಂತಹ ಪರಂಪರೆಗೆ ಅನವಸ್ಥಾ ಎಂದು ಹೆಸರು. ಧರ್ಮಿ ಯಲ್ಲಿರುವ ಭೇದವು ಧರ್ಮಿಯಿಂದ ಭಿನ್ನಾಭಿನ್ನವಾದರೂ ಹೀಗೆಯೇ ಅನವಸ್ಥಾ ದೋಷವು ಉಂಟಾಗುವುದರಿಂದ ಭೇದವು ಧರ್ಮಿಯಿಂದ ಭಿನ್ನ ಎಂಬ ವಿಚಾರವು ಸರಿಯಲ್ಲ.[15]

ಅಭಿನ್ನವಾದರೆ ಧರ್ಮಿಜ್ಞಾನ ಮತ್ತು ಭೇದಜ್ಞಾನಗಳಲ್ಲಿ ವೈಷಮ್ಯವಿರಬಾರದು. ಆದರೆ ಅದು ಇದೆ. ಅದು ಹೀಗೆ : ಗಜ ಮತ್ತು ಅಶ್ವಗಳ ಜ್ಞಾನವಿದ್ದವನಿಗೆ ಮಾತ್ರ ಅಶ್ವದಿಂದ ಗಜವು, ಗಜದಿಂದ ಅಶ್ವವು ಭಿನ್ನ ಎಂಬ ಜ್ಞಾನವು ಉಂಟಾಗುತ್ತದೆ. ಮೊದಲನೆಯ ಉದಾಹರಣೆಯಲ್ಲಿ ಅಶ್ವವು ಪ್ರತಿಯೋಗಿ ಮತ್ತು ಗಜವು ಧರ್ಮಿ. ಎರಡನೆಯ ಉದಾಹರಣೆಯಲ್ಲಿ ಗಜವು ಪ್ರತಿಯೋಗಿ ಮತ್ತು ಅಶ್ವವು ಧರ್ಮಿ. ಧರ್ಮಿ

ಅಭಿಜ್ಞಾಸ
ಮತ್ತು ಪ್ರತಿಯೋಗಿಗಳ ಜ್ಞಾನವಿಲ್ಲದವನಿಗೆ ಭೇದದ ಜ್ಞಾನವು ಬರುವುದೇ ಇಲ್ಲ. ಗಜ ಮತ್ತು ಅಶ್ವಗಳ ಜ್ಞಾನವು ಉಂಟಾಗಲು ಹೀಗೆ ಧರ್ಮಿ ಪ್ರತಿಯೋಗಿಗಳ ಜ್ಞಾನದ ಅಪೇಕ್ಷೆ ಇಲ್ಲ. ಆದ್ದರಿಂದ ಧರ್ಮಿಜ್ಞಾನವು ನಿರಪೇಕ್ಷ, ಭೇದಜ್ಞಾನವು ಸಾಪೇಕ್ಷ. ಧರ್ಮಿಯ ಜ್ಞಾನವು ನಿರಪೇಕ್ಷವಾಗಿರುವಾಗ ಧರ್ಮಿಯಿಂದ ಅಭಿನ್ನವಾದ, ಅಂದರೆ ಅದರ ಸ್ವರೂಪವೇ ಆಗಿರುವ ಭೇದದ ಜ್ಞಾನವು ಸಾಪೇಕ್ಷವಾಗುವುದು ಹೇಗೆ ಸಾಧ್ಯ? ಸಾಪೇಕ್ಷತ್ವ ಮತ್ತು ನಿರಪೇಕ್ಷತ್ವಗಳು ಪರಸ್ಪರ ವಿರುದ್ಧ. ಆದ್ದರಿಂದ ಭೇದವು ವಸ್ತುವಿನಿಂದ ಅಭಿನ್ನವಾಗಿರಲು ಸಾಧ್ಯವಿಲ್ಲ. ಇದಲ್ಲದೆ, ಭೇದವು ಧರ್ಮಿಸ್ವರೂಪವಾದರೆ ಧರ್ಮಿ ಮಾತ್ರವೇ ಇದೆ, ಭೇದವಿಲ್ಲ ಎಂದು ಅಥವಾ ಭೇದಮಾತ್ರವೇ ಇದೆ, ಧರ್ಮಿ ಇಲ್ಲ ಎಂದು ಅರ್ಥಾತ್ ಸಿದ್ಧವಾಗುತ್ತದೆ. ಭೇದ ಮತ್ತು ಧರ್ಮಿಗಳ ಪ್ರತ್ಯೇಕ ಅಸ್ತಿತ್ವವೇ ಸಿದ್ಧವಾಗುವುದಿಲ್ಲ. ಭೇದ ಮತ್ತು ಧರ್ಮಿಗಳು ಒಂದೇ ಆದುದರಿಂದ ಈ ಶಬ್ದಗಳು ಪರ್ಯಾಯವಾಗಬೇಕಾದೀತು. ಆದ್ದರಿಂದ ಭೇದವು ಧರ್ಮಿಯಿಂದ ಅಭಿನ್ನವಾಗಿರಲು ಸಾಧ್ಯವಿಲ್ಲ.

ಧರ್ಮಿಯಿಂದ ಭಿನ್ನವೋ, ಅಭಿನ್ನವೋ, ಭಿನ್ನಾಭಿನ್ನವೋ ಆಗಿರದೆ ಭೇದದ ಅಸ್ತಿತ್ವವೇ ಸಾಧ್ಯವಿಲ್ಲ. ಆದ್ದರಿಂದ ಭೇದವೇ ಇಲ್ಲ. ಇದು ಭೇದವನ್ನು ನಿರಾಕರಿಸುವ ವರ ವಾದ.

ಸಾಂಖ್ಯ ಮೊದಲಾದ ದಾರ್ಶನಿಕರು ಈ ಸಮಸ್ಯೆಯನ್ನು ಪರಿಹರಿಸದೆ ಭೇದವನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ದಾರ್ಶನಿಕವಾಗಿ ಅಭೇದವೇ ಪ್ರಬಲ ಎಂದು ಕಂಡು ಬರುತ್ತದೆ.

ಮಧ್ವಾಚಾರ್ಯರು ದ್ರವ್ಯ—ಗುಣಗಳಿಗೆ ಮತ್ತು ಭೇದ-ಧರ್ಮಿಗಳಿಗೆ ಸಂಬಂಧಿಸಿದ ಈ ಸಮಸ್ಯೆಗೆ ತಮ್ಮದೆ ಆದ ಪರಿಹಾರವನ್ನು ಸೂಚಿಸಿದ್ದಾರೆ. ಅವರು ದ್ರವ್ಯ-ಗುಣಗಳಿಗೆ, ಭೇದ–ಧರ್ಮಿಗಳಿಗೆ ಅಭೇದವನ್ನು ಒಪ್ಪಿದ್ದಾರೆ. ಅಭೇದಪಕ್ಷಕ್ಕೆ ಇರುವ ಅನುಪಪತ್ತಿಗಳ ಪರಿಹಾರವನ್ನು ಚಿಂತಿಸಿದ್ದಾರೆ.

ಅವರ ಚಿಂತನೆ ಹೀಗಿದೆ : ಸಮಸ್ಯೆಯು ಇದೆ ಎಂಬ ಕಾರಣದಿಂದ ವಸ್ತುಗಳ ಅಸ್ತಿತ್ವವನ್ನೇ ಅಲ್ಲಗಳೆಯುವುದು ಸರಿಯಲ್ಲ. ಅವುಗಳು ಅನುಭವಸಿದ್ಧವಾಗಿವೆ. ದ್ರವ್ಯ-ಗುಣಗಳು ಅವಿಭಾಜ್ಯವಾಗಿರುವುದು ಅನುಭವಸಿದ್ಧ ; ಅವುಗಳ ಭೇದಕಾರ್ಯವೂ ಅನುಭವಸಿದ್ಧ : ಇದು ಹೇಗೆ ? ಎಂಬ ಪ್ರಶ್ನೆಗೆ ನಮಗೆ ತಿಳಿದಿರುವ ಸಂಗತಿಗಳಿಂದ ಉತ್ತರವು ದೊರೆಯುತ್ತಿಲ್ಲ. ಆದ್ದರಿಂದ ಇಂತಹ ಸ್ಥಿತಿಯನ್ನು ಸಾಧ್ಯವಾಗಿಸುವ ಬೇರೆ ತತ್ವವೊಂದು ಇರಬೇಕು.[17] ಹೀಗೆ ಚಿಂತಿಸಿದ ಮಧ್ವರು ದ್ರವ್ಯ-ಗುಣಗಳಿಗೆ ಅಭೇದವಿದ್ದರೂ ಭೇದಕಾರ್ಯವನ್ನು ನಡೆಸಿಕೊಡುವ ಶಕ್ತಿಯೊಂದು ಪದಾರ್ಥಗಳಲ್ಲಿ ಇದೆ; ಭೇದ-ಧರ್ಮಿಗಳಿಗೆ ಅಭೇದವಿದ್ದರೂ ಒಂದು ಸಾಪೇಕ್ಷವೂ ಇನ್ನೊಂದು ನಿರಪೇಕ್ಷವೂ ಆಗಿರಲು ಕಾರಣವಾದ ಶಕ್ತಿಯೊಂದು ಧರ್ಮಿಯಲ್ಲಿ ಇದೆ; ಭೇದವಿಲ್ಲದ ಕಡೆ ಪ್ರಾಮಾಣಿಕವಾದ ಭೇದಕಾರ್ಯವನ್ನು ನಿರ್ವಹಿಸುವ ಈ ಶಕ್ತಿ ಭೇದದ ಪ್ರತಿನಿಧಿ ಎಂದು ತೀರ್ಮಾನಿಸಿ

ದರು.[18] ಈ ಶಕ್ತಿಗೆ 'ವಿಶೇಷ' ಎಂಬ ಹೆಸರನ್ನು ಕೊಟ್ಟರು. ಈ ಶಬ್ದಕ್ಕೆ 'ವ್ಯತ್ಯಾಸವನ್ನು ಮಾಡುವ' ಎಂದು ಅರ್ಥ. ಭೇದಪ್ರತಿನಿಧಿ ಶಕ್ತಿಯು ಅಭಿನ್ನವಾದ ದ್ರವ್ಯ-ಗುಣಗಳಿಗೆ ಮತ್ತು ಭೇದ-ಧರ್ಮಿಗಳಿಗೆ ಸಂಬಂಧಪಟ್ಟ ಭೇದಕಾರ್ಯಗಳು ನಡೆಯಲು ಕಾರಣವಾದು ದರಿಂದ ಇದಕ್ಕೆ ವಿಶೇಷ ಎಂಬ ಹೆಸರು ಅನ್ವರ್ಥವಾಗಿದೆ. ಭೇದಪ್ರತಿನಿಧಿಯಾದ ಈ ಶಕ್ತಿಯು ಭೇದ-ಧರ್ಮಿಗಳು ಅಭಿನ್ನವಾದರೂ ಅವುಗಳ ಪ್ರತ್ಯೇಕ ಅಸ್ತಿತ್ವವನ್ನು ರಕ್ಷಿಸುತ್ತದೆ. ಹೀಗೆಯೇ ದ್ರವ್ಯ-ಗುಣಗಳ ಪ್ರತ್ಯೇಕ ಅಸ್ತಿತ್ವವನ್ನು ರಕ್ಷಿಸುತ್ತದೆ. ಈ ಶಬ್ದಗಳ ಅಪರ್ಯಾಯತ್ವವನ್ನೂ ಇದು ರಕ್ಷಿಸುತ್ತದೆ. ಭೇದವು ಸಾಪೇಕ್ಷವೂ, ಧರ್ಮಿಯು ನಿರಪೇಕ್ಷವೂ ಆಗಿರುವಂತೆ ಮಾಡುತ್ತದೆ.

ಹೀಗೆ ಈ 'ವಿಶೇಷ' ತತ್ತ್ವವು ಭಾರತೀಯ ದಾರ್ಶನಿಕ ರಂಗದಲ್ಲಿ ದೀರ್ಘಕಾಲದಿಂದ ಇದ್ದ ಮುಖ್ಯಸಮಸ್ಯೆಯೊಂದನ್ನು ಪರಿಹರಿಸಿದೆ. ಭೇದದ ಬಗ್ಗೆ ಕೇಳಲಾಗಿದ್ದ ಪ್ರಶ್ನೆಗಳಿಗೆ ಉತ್ತರವು ಈ ತತ್ತ್ವದಿಂದ ದೊರೆತಿರುವುದರಿಂದ ಭೇದವು ಪ್ರಬಲವಾಗಿದೆ. ಇದರಿಂದ ಪ್ರಪಂಚಸತ್ಯತ್ವವನ್ನು ಅಂಗೀಕರಿಸುವ ಸಾಂಖ್ಯ-ಯೋಗ, ನ್ಯಾಯ-ವೈಶೇಷಿಕ, ಮೀಮಾಂಸಾ, ರಾಮಾನುಜ ಮತ್ತು ಮಧ್ವ ದರ್ಶನಗಳು ಬಲವಾಗಿ ನಿಲ್ಲುವಂತಾಗಿದೆ.

## ಭಕ್ತಿಯ ತಾತ್ತ್ವಿಕ ತಳಹದಿ

ರಾಮಾನುಜ ಮತ್ತು ಮಧ್ವದರ್ಶನಗಳು ಬ್ರಹ್ಮನಿಗೆ ಅನಂತಗುಣಗಳು ಇವೆಯೆಂದು ಹೇಳುತ್ತವೆ. ಬ್ರಹ್ಮ ಮತ್ತು ಅವನ ಗುಣಗಳಿಗೆ ಭೇದವನ್ನು ರಾಮಾನುಜರು ಅಂಗೀಕರಿಸುತ್ತಾರೆ. ಮಾಧ್ವರು ಅಭೇದವನ್ನು ಅಂಗೀಕರಿಸುತ್ತಾರೆ. ಬ್ರಹ್ಮ ಮತ್ತು ಅವನ ಗುಣಗಳಗೆ ಭೇದವಿದ್ದರೆ, ಆ ಗುಣಗಳು ಜಡವೋ, ಚೇತನವೋ ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಜಡ ಎಂದು ಹೇಳುವುದು ಸರಿಯಲ್ಲ. ಜಡ ಅಪೂರ್ಣ. ಅಪೂರ್ಣದ ಸಂಬಂಧವನ್ನು ಹೊಂದಿದವನು ಪೂರ್ಣನಾಗಿರಲು ಸಾಧ್ಯವಿಲ್ಲ. ಆದ್ದರಿಂದ ಅವುಗಳು ಚೇತನವಾಗಿರಬೇಕು. ಆಗ ಬ್ರಹ್ಮನಿಗೆ ಅನಂತಗುಣಗಳಿವೆ ಎಂಬ ಮಾತಿಗೆ ಅನಂತಚೇತನಗಳ ಸಂಬಂಧವಿದೆಯೆಂದು ಅರ್ಥವಾಗುತ್ತದೆ. ಈ ಚೇತನಾತ್ಮಕ ಗುಣಗಳು ಅಪೂರ್ಣವಾದರೆ ಬ್ರಹ್ಮನ ಪೂರ್ಣತ್ವಕ್ಕೆ ಭಂಗವುಂಟಾಗುತ್ತದೆ. ಆದ್ದರಿಂದ ಈ ಚೇತನಾತ್ಮಕಗುಣಗಳು ಪೂರ್ಣ ಎಂದು ಹೇಳಬೇಕು. ಇದರಿಂದ ಪೂರ್ಣವಾದ ಅನಂತಚೇತನಗಳು ಇವೆಯೆಂದು ಹೇಳಿದಂತಾಗುತ್ತದೆ. ಜಗತ್ತಿನ ಸೃಷ್ಟಿಸ್ಥಿತಿ ಸಂಹಾರ ಕರ್ತೃತ್ವವೇ ಪೂರ್ಣತ್ವಕ್ಕೆ ಕಾರಣವಾದ ಅಂಶವಾದುದರಿಂದ ಎಲ್ಲ ಚೇತನಗಳೂ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುತ್ತಾರೆಂದು ಹೇಳಿದಂತಾಗುತ್ತದೆ. ಇದು ಕೇವಲ ಅವ್ಯವಸ್ಥೆ.[19]

ಆದ್ದರಿಂದ ಬ್ರಹ್ಮ ಮತ್ತು ಅವನ ಗುಣಗಳಿಗೆ ಅಭೇದವೇ ಇರಬೇಕು. ಆಗ ಮೇಲೆ ವಿವರಿಸಿದ ಯಾವ ಸಮಸ್ಯೆಯೂ ಇರುವುದಿಲ್ಲ. ಆದರೆ ಬ್ರಹ್ಮನಿಂದ ಅವನ ಗುಣಗಳು ಅಭಿನ್ನವಾದರೆ ಅವು ಅನಂತವಾಗಿರುವುದು ಹೇಗೆ? ಬ್ರಹ್ಮ ಮತ್ತು ಅವನ ಗುಣಗಳು ಪ್ರತ್ಯೇಕವಾದ ಅಸ್ತಿತ್ವವನ್ನು ಹೊಂದಿರುವುದು ಹೇಗೆ? ಈ ಸಮಸ್ಯೆಗಳು ಉದ್ಭವಿಸು

ತ್ತವೆ. ಭೇದಪ್ರತಿನಿಧಿ 'ವಿಶೇಷ'ವು ಈ ಸಮಸ್ಯೆಯನ್ನು ಪರಿಹರಿಸುತ್ತದೆ. ಬ್ರಹ್ಮನ ಏಕತ್ವ ಮತ್ತು ಅವನ ಗುಣಗಳ ಅನಂತತ್ವ, ಬ್ರಹ್ಮನ ಮತ್ತು ಅವನ ಗುಣಗಳ ಪ್ರತ್ಯೇಕ ಅಸ್ತಿತ್ವಗಳು ಭೇದಕಾರ್ಯ. ಅಭೇದವಿರುವ ಕಡೆ ಕೆಲವು ಭೇದಕಾರ್ಯವನ್ನು ನಿರ್ವಹಿ ಸುವ ಶಕ್ತಿಯೇ 'ವಿಶೇಷ'. ಬ್ರಹ್ಮನಲ್ಲಿ ಈ 'ವಿಶೇಷ'ವು ಇರುವುದರಿಂದ ಈ ಭೇದ ಕಾರ್ಯಗಳು ನಡೆಯುತ್ತವೆ. ಅನಂತಗುಣಗಳು ಇದ್ದರೆ ಮಾತ್ರ ಅವನಲ್ಲಿ ಭಕ್ತಿಯು ಹುಟ್ಟಲು ಸಾಧ್ಯವಾದೀತು. ವಿವೇಕಿಗಳು ಸಣ್ಣ ಕಾರಣಗಳಿಗಾಗಿ ವ್ಯಕ್ತಿಗಳನ್ನು ಅಥವಾ ವಸ್ತುಗಳನ್ನು ಪ್ರೀತಿಸುವುದಿಲ್ಲ. ಆದ್ದರಿಂದ ಅನಂತಗುಣಗಳು ಭಕ್ತಿಯ ತಾತ್ವಿಕ ತಳ ಹದಿ. ಅವುಗಳು ಅನಂತವಾಗಿರಲು 'ವಿಶೇಷ' ಅವಶ್ಯಕ. ಆದ್ದರಿಂದ 'ವಿಶೇಷ' ಭಕ್ತಿಗೆ ತಾತ್ತ್ವಿಕ ತಳಹದಿಯನ್ನು ಒದಗಿಸಿರುವ ಪ್ರಮೇಯ.

ಮಧ್ವದರ್ಶನವು ಪ್ರತಿಪಾದಿಸಿದ ಈ 'ವಿಶೇಷ'ವನ್ನು ಅದ್ವೈತ ದಾರ್ಶನಿಕರಾದ ಮಧುಸೂದನ ಸರಸ್ವತಿ ಮತ್ತು ಅಪ್ಪಯ್ಯ ದೀಕ್ಷಿತರು, ವಿಶಿಷ್ಟಾದ್ವೈತ ದಾರ್ಶನಿಕರಾದ ಪರಕಾಲಯತಿಗಳು ಖಂಡಿಸಿದ್ದಾರೆ. ವೇದಾಂತ ದೇಶಿಕರು ಬ್ರಹ್ಮ ಮತ್ತು ಅವನ ಗುಣ ಗಳಿಗೆ ಅಭೇದವೆಂಬ ವಿಚಾರವನ್ನು ಖಂಡಿಸಿದ್ದಾರೆ. ತರಂಗಿಣಿ ರಾಮಾಚಾರ್ಯ ಮೊದ ಲಾದ ಮಾಧ್ವದಾರ್ಶನಿಕರು ಈ ಆಕ್ಷೇಪಗಳಿಗೆ ಉತ್ತರವನ್ನು ಕೊಟ್ಟಿದ್ದಾರೆ.

ಎಂ. ಹಿರಿಯಣ್ಣ ಅವರು ತಮ್ಮ The Essentials of Indian Philosophy ಯಲ್ಲಿ ಈ ವಿಶೇಷದ ಬಗ್ಗೆ, "but we cannot say the solution is more satisfactory" ಎಂದು ಹೇಳಿದ್ದಾರೆ. ಅವರು ತಮ್ಮ ಈ ಅಭಿಪ್ರಾಯಕ್ಕೆ ಕಾರಣ ವನ್ನೇನೂ ಕೊಟ್ಟಿಲ್ಲ. ಭೇದಾಭೇದಗಳಿಗೆ ವಿರೋಧವಿರುವಂತೆ ಅಭೇದ ಮತ್ತು ಭೇದ ಪ್ರತಿನಿಧಿಗಳಿಗೆ ವಿರೋಧವೇನೂ ಇರಬೇಕಿಲ್ಲ. ಈ ವಿಚಾರವನ್ನೂ, 'ವಿಶೇಷ'ದ ಸ್ವನಿರ್ವಾಹಕತ್ವವನ್ನೂ, ಸಕಲದಾರ್ಶನಿಕರೂ ಇದನ್ನು ಅಂಗೀಕರಿಸುವ ಅನಿವಾರ್ಯತೆ ಯನ್ನೂ, 'ಸಮವಾಯ'ವನ್ನು ಅಂಗೀಕರಿಸುವ ನ್ಯಾಯ-ವೈಶೇಷಿಕರೂ ಈ ವಿಶೇಷವನ್ನು ಅಂಗೀಕರಿಸಲೇಬೇಕಾದ ಆವಶ್ಯಕತೆಯೆನ್ನೂ, ಇದನ್ನು ಅಂಗೀಕರಿಸಿದನಂತರ 'ಸಮ ವಾಯ'ದ ನಿರರ್ಥಕತೆಯನ್ನೂ, ಜಯತೀರ್ಥರು ತಮ್ಮ 'ನ್ಯಾಯಸುಧಾ' ಗ್ರಂಥದಲ್ಲಿ ವಿವರವಾಗಿ ಪ್ರತಿಪಾದಿಸಿದ್ದಾರೆ.

ಪ್ರಾಯಶಃ ಎಲ್ಲ ಭಾರತೀಯದರ್ಶನಗಳಿಗೆ ಸಂಬಂಧಿಸಿದ ಭೇದ ಮತ್ತು ದ್ರವ್ಯ-ಗುಣ ಗಳ ಸಂಬಂಧದ ಜಟಿಲಸಮಸ್ಯೆಯ ಪರಿಹಾರವೆಂದು ಗುರುತಿಸಲ್ಪಟ್ಟಿರುವ, ಬಹು ದಾರ್ಶನಿಕರ ಗಮನವನ್ನು ಸೆಳೆದಿರುವ 'ವಿಶೇಷ' ತತ್ವವು ದರ್ಶನದ ವಿದ್ಯಾರ್ಥಿಗಳು ಉಪೇಕ್ಷಿಸಬಾರದ ಒಂದು ಮುಖ್ಯ ಪ್ರಮೇಯ,

## ಟಿಪ್ಪಣಿಗಳು

1. ಎರಡು ಪರಮಾಣುಗಳು ಸೇರಿ ಉತ್ಪನ್ನವಾದ ವಸ್ತುವಿಗೆ ದ್ವ್ಯಣುಕ ಎಂದು ಹೆಸರು.
2. ಅಂತೇಷು ಭವಾಃ ಅಂತ್ಯಾಃ ಸ್ವಾಶ್ರಯವಿಶೇಷಕತ್ವಾತ್ ವಿಶೇಷಃ

—ಪ್ರಶಸ್ತಪಾದ, ಪ್ರಶಸ್ತಪಾದಭಾಷ್ಯ, ವಿ. ಎಸ್.ಎಸ್. ಬೆನಾರಸ್ ೧೯೭೫, ಪು. ೩೨

3. ಅಂತೇಷು ಭವಾ ಅಂತ್ಯಾ ಇತಿ. ಉತ್ಪಾದವಿನಾಶಯೋರಂತೇವಸ್ಥಿತತ್ವಾದಂತಶಬ್ದವಾಚ್ಯಾನಿ ನಿತ್ಯದ್ರವ್ಯಾಣಿ, ತೇಷು ಭವಾಃ ಸ್ಥಿತಾಃ ಇತ್ಯರ್ಥಃ. ಸ್ವಾಶ್ರಯಸ್ಯ ಸರ್ವತೋ ವಿಶೇಷಕತ್ವಾತ್ ಭೇದಕತ್ವಾತ್ ವಿಶೇಷಾಃ—ಶ್ರೀಧರ, ನ್ಯಾಯಕಂದಲೀ, ವಿ.ಎಸ್.ಎಸ್. ೧೮೯೫ ಬೆನಾರಸ್ ಪು. ೩೨೩

4. ಘಟಾದೀನಾಂ ದ್ವ್ಯಣುಕಪರ್ಯಂತಾನಾಂ ತತ್ತದವಯವಭೇದಾತ್ ಪರಸ್ಪರಂ ಭೇದಃ. ಪರಮಾಣೂನಾಂ ಪರಸ್ಪರಭೇದಕೋ ವಿಶೇಷ ಏವ ಸತು ಸ್ವತ ಏವ ವ್ಯಾವೃತ್ತಃ. ತೇನ ತತ್ರ ವಿಶೇಷಾಂತರಾಪೇಕ್ಷಾ ನಾಸ್ತಿ ಇತ್ಯರ್ಥಃ—ವಿಶ್ವನಾಥಪಂಚಾನನ, ಮುಕ್ತಾವಲೀ. ಬಾಲ ಮನೋರಮಾ ಸೀರಿಸ್ ೬, ಮದ್ರಾಸ್ ೧೯೨೩, ಪು. ೧೧೯

5. 'ಹಾಲಿನ ಬಿಳುಪು' ಎಂಬ ಪ್ರಯೋಗದಲ್ಲಿ 'ಹಾಲಿನ' ಎಂಬ ಪದ ಷಷ್ಠೀವಿಭಕ್ತಿಯಲ್ಲಿದೆ. ಷಷ್ಠೀ ವಿಭಕ್ತಿಯು ಭಿನ್ನವಾದ ಎರಡು ವಸ್ತುಗಳ ಸಂಬಂಧವನ್ನು ಬೋಧಿಸುತ್ತದೆ. 'ಚೈತ್ರನ ಮನೆ' ಎಂಬ ಪ್ರಯೋಗದಂತೆ. ಚೈತ್ರನಿಗೂ ಮನೆಗೂ ಭೇದವಷ್ಟೇ. ಅದರಂತೆ ಹಾಲು ಮತ್ತು ಅದರ ಬಣ್ಣ ಭಿನ್ನ. ಈ ಪ್ರಯೋಗವನ್ನು ತಪ್ಪು ಎಂದು ಸಾಧಿಸುವ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ಇದು ಅಬಾಧಿತ.

6. ವರ್ಣರಸಗಂಧಸ್ಪರ್ಶಾಃ ಪರಮಾಣೋಃ ಪ್ರರೂಪ್ಯಂತೇ. ತೇ ಚ ಪರಮಾಣೋರವಿಭಕ್ತ ಪ್ರದೇಶತ್ವೇನಾನನ್ಯತ್ವೇಪಿ, ಸಂಜ್ಞಾವ್ಯಪದೇಶನಿಬಂಧನೈರ್ವಿಶೇಷೈರನ್ಯತ್ವಂ ಪ್ರಕಾಶಯಂತಿ.
—ಅಮೃತ ಚಂದ್ರಾಚಾರ್ಯ, 'ತತ್ವಪ್ರದೀಪಿಕಾ', ಭಾರತೀಯ ಜ್ಞಾನಪೀಠ, ನವದೆಹಲಿ ೧೯೭೫ ಪು. ೧೬೧

7. ಯದ್ ಯದಭಿನ್ನಾಭಿನ್ನಂ ತತ್ ತದಭಿನ್ನಮ್ ।

8. ಯತ್ರ ಹಿ ಮಧುರಮಿದಂ ದ್ರವ್ಯಮಿತ್ಯೇವಂ ದ್ರವ್ಯಸ್ಯ ಮಧುರತ್ವೇನ ರೂಪೇಣ ನಿರೂಪಣಂ ಕ್ರಿಯತೆ ತತ್ರ ರೂಪರಸಯೋಃ ಪರಸ್ಪರಂ ಭೇದಾತ್ ಮಧುರತ್ವೇನ ನಿರೂಪ್ಯಮಾಣಸ್ಯ ದ್ರವ್ಯಸ್ಯಾಪಿ ರೂಪಾದಿಭ್ಯೋ ಭೇದೋವಭಾಸತೇ.ಯತ್ರ ಚ ಅಭ್ಯರ್ಹಮಿದಂ ದ್ರವ್ಯಮಿತ್ಯೇವಂ ದ್ರವ್ಯತ್ವೇನೈವ ರೂಪೇಣ ನಿರೂಪಣಂ ಕ್ರಿಯತೆ ತತ್ರ ರೂಪಾದಿಭ್ಯೋಽಭೇದೋಽಪ್ಯವ ಭಾಸತೇ. ಕೇನಾಪಿ ಗುಣೇನ ಸಾಮಾನ್ಯಾಧಿಕರಣ್ಯಾಭಾವಾತ್.
—ಪಿ. ಎನ್. ಸುದರ್ಶನಾಚಾರ್ಯ, 'ಪ್ರಕಾಶ', ವಿದ್ಯಾವಿಲಾಸ್‌ಪ್ರೆಸ್. ಕಾಶಿ ೧೯೬೪ ಪು. ೩೯೫

9. ಕ್ವಚಿದ್ ದ್ರವ್ಯಾಗ್ರಹಣೇಽಪಿ ರೂಪಾದೀನಾಂ ಗ್ರಹಣಂ, ರೂಪಾದ್ಯಗ್ರಹಣೇಽಪಿ ದ್ರವ್ಯಸ್ಯ ಇತಿ ನಾಸ್ತಿ ದ್ರವ್ಯಗುಣಯೋರ್ಗ್ರಹಣಂ ಪ್ರತಿ ನಿಯಮಃ—ಶಾಲಿಕನಾಥ, 'ಪ್ರಕರಣ ಪಂಚಿಕಾ', ಬಿ.ಎಚ್.ಯು. ದರ್ಶನ ಸೀರೀಸ್—೪, ೧೯೬೧ ಪು. ೧೬೦

10. ಅವಸ್ಥಾವತ್ ದ್ರವ್ಯಮ್. ತದ್‌ವ್ಯತಿರಿಕ್ತಮದ್ರವ್ಯಮ್. ಇದಂ ಚಾದ್ರವ್ಯಂ ದ್ರವ್ಯಾದತ್ಯಂತ ಭಿನ್ನಮ್. ನ ಪುನಃ ಕೌಮಾರಿಲಜೈನಾದಿವತ್ ಭಿನ್ನಾಭಿನ್ನಮ್—ವೆಂಕಟನಾಥ ದೇಶಿಕ, ತತ್ವಮುಕ್ತಾಕಲಾಪಸರ್ವಾರ್ಥಸಿದ್ಧಿ, ಮೆಡಿಕಲ್ ಹಾಲ್ ಪ್ರೆಸ್, ಕಾಶಿ, ೧೯೦೦, ಪು. ೫೯೦

11. ಭವತಾ ಯಯೋರಯುತಸಿದ್ಧ್ಯಾ ಸಮವಾಯಃ ಕಲ್ಪ್ಯತೇ ತಯೋರಯುತಸಿದ್ಧಿರೇವ ಸಂಬಂಧಃ—ವೆಂಕಟನಾಥ ದೇಶಿಕ, 'ತತ್ವಮುಕ್ತಾಕಲಾಪಸರ್ವಾರ್ಥಸಿದ್ಧಿ', ಪು. ೫೯೦

12. ಸಂವಿತ್ಯುತ್ಪತ್ತಿಸತ್ತಾನಾಂ ಭೇದೇನಾನವಭಾಸನಾತ್ ।
ಧರ್ಮೋಽಸೌ ಧರ್ಮ್ಯಭಿನ್ನಃ ಸ್ಯಾದಿತಿ ಸಾಂಖ್ಯವ್ಯವಸ್ಥಿತಿಃ ॥
—ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ, 'ಮಾನಮೇಯರಹಸ್ಯಶ್ಲೋಕವಾರ್ತಿಕ' ಮೈಸೂರು. ಪು. ೧೬೦–೧೬೧

13. ಶುಕ್ಲಃ ಕಂಬಲಃ, ರೋಹಿಣೀ ಧೇನುಃ, ನೀಲಮುತ್ಪಲಮಿತಿ ದ್ರವ್ಯಸ್ಯೈವ ತಸ್ಯ ತಸ್ಯ ತೇನ ತೇನ ವಿಶೇಷಣೇನ ಪ್ರತೀಯಮಾನತ್ವಾನ್ನೈವ ದ್ರವ್ಯಗುಣಯೋರಗ್ನಿಧೂಮಯೋರಿವ ಭೇದಪ್ರತೀತಿರಸ್ತಿ. ತಸ್ಮಾತ್ ದ್ರವ್ಯಾತ್ಮಕತಾ ಗುಣಸ್ಯ—ಶಂಕರಾಚಾರ್ಯ, 'ಬ್ರಹ್ಮಸೂತ್ರ ಭಾಷ್ಯ, ೭.೭.೧೩

14. ಪಟಸ್ತುಶೌಕ್ಲ್ಯಂ ತಾವನ್ನ ಭಿದ್ಯೇತೇ. ಅಂಗುಲೀದ್ವಯವತ್ ಭೇದೇನ ಅನುಪಲಂಭಾತ್, ನಾಪಿ ಕುಂಡಮಿವ ಪಟೋಧಿಕರಣತ್ವೇನ ಬದರಾಣೀವ ಶೌಕ್ಲ್ಯಮಾಧೇಯತ್ವೇನ ಪರಿಸ್ಫುರತಿ, ಕಿಂ ನಾಮ ? ತದೇವ ತದಿತಿ ನ ಚೈಷಾ ಪ್ರತೀತಿರ್ಭ್ರಾಂತಿಃ ಬಾಧಕಾಭಾವಾತ್, ಶೌಕ್ಲ್ಯಪಟಯೋರ್ಭೇದಾವಗಾಹಿನೀ ಪ್ರತ್ಯಕ್ಷಪ್ರತೀತಿರ್ಹಿ ಬಾಧಿತಾ ಭವೇತ್ ನ ಚ ಭೇದಾವಗಾಹಿನೀ ಪ್ರತ್ಯಕ್ಷಪ್ರತೀತಿರಸ್ತೀತ್ಯುಕ್ತಮ್. ತೇನ ಪ್ರತ್ಯಕ್ಷತ ಏವ ಸಿದ್ಧಃ ಪಟಶೌಕ್ಲ್ಯಯೋರಭೇದಃ. —ಜಯತೀರ್ಥ, 'ನ್ಯಾಯಸುಧಾ', ನಿರ್ಣಯಸಾಗರ್ ಪ್ರೆಸ್, ಬೊಂಬಾಯಿ ೧೮೬೭ ಪು. ೧೦೬

15. ಭೇದಸ್ಯ ವಸ್ತುನೋ ಭೇದೇ, ಭೇದಾಭೇದೇ ಚ ತಸ್ಯ, ತಸ್ಯ ಭೇದಾದ್ ವಸ್ತುನಶ್ಚ ಅನ್ಯೋನ್ಯೋ ಭೇದ ಇತಿ ಅನವಸ್ಥಾನಾತ್ ನ ಕಶ್ಚಿತ್ ಭೇದೋ ವಸ್ತು ಸಂಸ್ಪೃಶೇತ್ ವಿಮುಕ್ತಾತ್ಮಯತಿ, 'ಇಷ್ಟಸಿದ್ಧಿ.'

16. ಸಾಪೇಕ್ಷತ್ವಾತ್ ಸಾವಧೇಶ್ಚ ನ ರೂಪಂ ವಸ್ತುನೋ ಭಿದಾ—ಚಿತ್ಸುಖಿ, 'ತತ್ತ್ವಪ್ರದೀಪಿಕಾ', ನಿರ್ಣಯಸಾಗರ್‌ಪ್ರೆಸ್, ಬೊಂಬಾಯಿ ೧೯೧೫, ಪು. ೧೬೭

17. ಹೀಗೆ ಚಿಂತಿಸುವುದು ಚಿಂತಕರ ಕ್ರಮ. ಇಂತಹ ಚಿಂತನೆಯಿಂದಲೇ ಭೂಮಿಯ ಗುರುತ್ವಾಕರ್ಷಣತತ್ತ್ವವನ್ನು ತಿಳಿಯಲು ಸಾಧ್ಯವಾಯಿತಲ್ಲವೇ ?

18. ಭೇದಹೀನೇ ತ್ವಪರ್ಯಾಯಶಬ್ದಾಂತರನಿಯಾಮಕಃ ।
ವಿಶೇಷೋ ನಾಮ ಕಥಿತಃ ಸೋಽಸ್ತಿ ವಸ್ತ್ವಶೇಷತಃ ॥

—ಮಧ್ವಾಚಾರ್ಯ, 'ಅನುವ್ಯಾಖ್ಯಾನ', ಸರ್ವಮೂಲಗ್ರಂಥ, ಪುಸ್ತಕ ೧, ಎ. ಬಿ. ಎಮ್. ಎಮ್. ಬೆಂಗಳೂರು, ೧೯೬೭, ಪು. ೯

ಯದೇತಭೇದಭೇದಕಾರ್ಯ ಪ್ರತೀತ್ಯೋರನ್ಯಥಾನುಪಪತ್ತ್ಯಾ ನಿರ್ಭೇದೇಽಪಿ ಪಟೇ ಅಸ್ತಿ ಕಶ್ಚಿದತಿಶಯಃ ಭೇದಪ್ರತಿನಿಧಿಃ, ಯದ್ವಶಾದಿದಂ ಸರ್ವಂ ಸಮಂಜಸಂ ಸ್ಯಾದಿತ್ಯೇವ ಕಲ್ಪನೀಯಮ್. ಸ ಚಾತಿಶಯಃ ಅಭಿನ್ನೇಽಪಿ ವಿಶೇಷಕತ್ವಾದ್ ವಿಶೇಷ ಇತಿ ಗೀಯತೇ ।

—ಜಯತೀರ್ಥ, 'ನ್ಯಾಯಸುಧಾ', ನಿರ್ಣಯಸಾಗರ್ ಪ್ರೆಸ್, ಬೊಂಬಾಯಿ, ೧೮೬೭, ಪು.೧೦೬

"It is in this crossing or intersection of identity and difference that Madhva finds clue and justification for his concept of *Viśesas* to bridge the gulf between substance and attributes and preserve the basic unity of experience without in any manner sacrificing the numerous distinctions demanded and drawn by the necesssities of scientific usage and practical utility"

B. N. K. Sharma, *Philosophy of Madhvacharya*, Bharatiya Vidya Bhavan, Bombay, 1962, p. 47

19. we cannot have two supreme and unlimited beings.–S. Radhakrishnan, *Indian Philosophy*, vol. I., p. 90

# ಕೆ. ಕೃಷ್ಣಮೂರ್ತಿಯವರ ಸಂಸ್ಕೃತ ನಾಟಕಾನುವಾದಗಳು

ಲಕ್ಷ್ಮೀನಾರಾಯಣ ಅರೋರಾ

ಕನ್ನಡ ಭಾಷಾಸಾಹಿತ್ಯಗಳ ಬೆಳವಣಿಗೆಯಲ್ಲಿ ಸಂಸ್ಕೃತಭಾಷಾ ಸಾಹಿತ್ಯಗಳು ವಹಿಸಿರುವ ಪಾತ್ರ ಎಂದಿನಿಂದಲೂ ಮಹತ್ತರವಾದುದು. ಕನ್ನಡ ಸಾಹಿತ್ಯದ ಮೊದಲ ಕಾಲದಿಂದ ಇಂದಿನವರೆಗೆ ಪ್ರೇರಣೆ, ಪ್ರಭಾವ, ಅನುವಾದ ಇಂಥ ಹಲವಾರು ರೀತಿಗಳಲ್ಲಿ ಸಂಸ್ಕೃತ ಸಾಹಿತ್ಯಸಾರವನ್ನು ಮೈಗೂಡಿಸಿಕೊಂಡು ನಮ್ಮಲ್ಲಿ ಕೃತಿಗಳು ಹೊರಬರುತ್ತಾ ಬಂದಿವೆ. ಕನ್ನಡ ಬರಹಗಾರರಿಗೆ ಸಂಸ್ಕೃತ ಒಂದು ದೃಷ್ಟಿಯಲ್ಲಿ ತಮ್ಮ ಸಾಹಿತ್ಯಶ್ರದ್ಧೆ ಮತ್ತು ಪ್ರೀತಿಯನ್ನು ವ್ಯಕ್ತಪಡಿಸಲು ಸುಲಭಲಭ್ಯವಾದ ಆಕರವೆನಿಸಿದರೆ ಇನ್ನೊಂದೆಡೆಯಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ದೇಶಕಾಲಾದಿಗಳನ್ನು ಮೀರಿ ಬೆಳೆದಿರುವ ಅನೇಕ ಅಭಿಜಾತ ಕೃತಿಗಳು ತಮ್ಮವೇ ವಿಶಿಷ್ಟ ಸಾಹಿತ್ಯಗುಣಗಳಿಂದ ನಿರಂತರವಾಗಿ ಅವರಿಗೆ ಪ್ರಲೋಭನೆಯನ್ನು ತೋರುತ್ತಿರುವುದರ ಜೊತೆಗೆ ಸವಾಲುಗಳನ್ನೂ ಒಡ್ಡುತ್ತಾ ಬಂದಿವೆ.

ಸಂಸ್ಕೃತ ನಾಟಕಕಾರರಲ್ಲಿ ಪ್ರಮುಖರಾಗಿರುವ ಅಶ್ವಘೋಷ, ಭಾಸ, ಶೂದ್ರಕ, ಕಾಳಿದಾಸ, ವಿಶಾಖದತ್ತ, ಹರ್ಷವರ್ಧನ, ಭವಭೂತಿ, ಭಟ್ಟನಾರಾಯಣ ಮುಂತಾದವರು ಕನ್ನಡ ಸಾಹಿತ್ಯದ ಬರಹಗಾರರಿಗೆ ಓದುಗರಿಗೆ ಪ್ರಿಯವೆನಿಸಿದ್ದಾರೆ. ಹಾಗಾಗಿ ಅವರ ನಾಟಕಗಳು ನಮ್ಮಲ್ಲಿ ನಾಟಕಾನುವಾದಗಳ ಮಾಲೆಯನ್ನೇ ಸೃಷ್ಟಿಸಿವೆ. ಕೆಲವು ನಾಟಕಗಳು ಮೂಲೋಪಾದಿಯಲ್ಲಿ ಗದ್ಯಪದ್ಯಗಳಿಂದ ಕೂಡಿದ್ದರೆ ಕೆಲವು ಕೇವಲ ಗದ್ಯರೂಪದಲ್ಲಷ್ಟೆ ದೊರೆಯುತ್ತವೆ. ಕೆಲವಾರು ನಾಟಕಗಳು ಮರುಭಾಷಾಂತರಗಳನ್ನು (Multiple translations) ಹೊಂದಿರುವುದು ಅವುಗಳ ಮತ್ತು ಆ ನಾಟಕಕಾರರ ಜನಪ್ರಿಯತೆಗೆ ಕುರುಹಾಗಿದೆ.

ಕನ್ನಡ ಓದುಗರಿಗೆ ಸಂಸ್ಕೃತ ಸಾಹಿತ್ಯದ ಸೊಬಗನ್ನು, ಶ್ರೇಷ್ಠತೆಯನ್ನು, ವಾಗ್ವಿಲಾಸ ವೈಖರಿಗಳನ್ನು, ಪಾಂಡಿತ್ಯ ಪ್ರೌಢಿಮೆಗಳನ್ನು ಪರಿಚಯ ಮಾಡಿಕೊಟ್ಟ ಮಹನೀಯರಲ್ಲಿ ಕೆ. ಕೃಷ್ಣಮೂರ್ತಿಯವರ ಹೆಸರನ್ನು ತುಂಬ ಗೌರವದಿಂದ ಸ್ಮರಿಸಬೇಕಾಗುತ್ತದೆ. ಒಂದು ಕಡೆ ಅವರು ಸಂಸ್ಕೃತದ ಕಾವ್ಯಮೀಮಾಂಸಾಗ್ರಂಥಗಳನ್ನು ಕನ್ನಡಕ್ಕೆ ತಂದುಕೊಟ್ಟಿದ್ದಾರಾದರೆ, ಇನ್ನೊಂದೆಡೆ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿ ಅತ್ಯುತ್ತಮವಾದ ಸೇವೆ

ಸಲ್ಲಿಸಿದ್ದಾರೆ. ಕನ್ನಡ ಸಾಹಿತ್ಯದ ಪ್ರಸಕ್ತಿಯಲ್ಲಿ ಸಂಸ್ಕೃತ ರಾಯಭಾರಿಯಂತಿದ್ದಾರೆ.

ಕೃಷ್ಣಮೂರ್ತಿಯವರಲ್ಲಿ ಪ್ರತಿಭೆ, ಪಾಂಡಿತ್ಯ ಹಾಗೂ ಕ್ರಿಯಾಶೀಲತೆಗಳು ಮುಪ್ಪುರಿಗೊಂಡಿವೆ. ಸಂಸ್ಕೃತ ಶಾಸ್ತ್ರಗ್ರಂಥಗಳನ್ನು—ಅಷ್ಟೇ ಏಕೆ ಯಾವುದೇ ಶಾಸ್ತ್ರಗ್ರಂಥವನ್ನು—ಇನ್ನೊಂದು ಭಾಷೆಗೆ ಅನುವಾದ ಮಾಡುವುದು, ವ್ಯಾಖ್ಯಾನ ಮಾಡುವುದು, ಅವುಗಳ ಬಗೆಗೆ ಅಧಿಕಾರವಾಣಿಯಿಂದ ವಿಮರ್ಶೆ ಮಾಡುವುದು ಕಷ್ಟಸಾಧ್ಯವಾದ ಕೆಲಸ. ಇವುಗಳ ಹಿನ್ನೆಲೆಯಲ್ಲಿ ಅಪಾರ ಪರಿಶ್ರಮ ಮತ್ತು ಸಾಧನೆ ಎದ್ದುಕಾಣುತ್ತದೆ. ಸಾಮಾನ್ಯವಾಗಿ ಸಾಹಿತ್ಯದ ಹೆದ್ದಾರಿಯಲ್ಲಿ ಸೃಜನಶೀಲ ಸಾಹಿತ್ಯ ಮತ್ತು ಶಾಸ್ತ್ರಸಾಹಿತ್ಯ ಇವೆರಡು ಪ್ರಮುಖ ಕವಲುದಾರಿಗಳು. ಬರಹಗಾರ ಯಾವುದಾದರೂ ಒಂದು ಜಾಡು ಹಿಡಿದು ಹೋಗಿ ಸಾಧನೆ ನಡೆಸಬೇಕಾಗುತ್ತದೆ, ಸಿದ್ಧಿ ಪಡೆಯಬೇಕಾಗುತ್ತದೆ. ಎರಡೂ ಹಾದಿಗಳಲ್ಲಿ ಒಟ್ಟಿಗೆ ಹೆಜ್ಜೆಯಿಡುವುದು ಕಷ್ಟ. ಕೃಷ್ಣಮೂರ್ತಿಯವರಾದರೊ ಶಾಸ್ತ್ರಸಾಹಿತ್ಯದ—ವಿಶೇಷವಾಗಿ ಕಾವ್ಯಮೀಮಾಂಸೆ–ಕಡೆ ತಮ್ಮ ವಿಶೇಷ ಗಮನ ಹರಿಸಿದರಾದರೂ ಸಂಸ್ಕೃತದ ಸೃಜನಶೀಲ ಸಾಹಿತ್ಯ ಕೃತಿಗಳನ್ನು ವಿಮರ್ಶಾತ್ಮಕವಾಗಿ ಪರಿಚಯಮಾಡಿಕೊಟ್ಟು, ಅನುವಾದ ಮಾಡಿಕೊಟ್ಟು ಪ್ರಶಂಸನೀಯವೆನಿಸಬಹುದಾದ ಕೈಂಕರ್ಯ ಸಲ್ಲಿಸಿದ್ದಾರೆ.

ಕೃಷ್ಣಮೂರ್ತಿಯವರು ಮಾಡಿರುವ ಸಂಸ್ಕೃತ ನಾಟಕಾನುವಾದಗಳ ಸ್ಥೂಲಪರಿಚಯವನ್ನು ಮಾಡಿಕೊಡುವುದು ಈ ಲೇಖನದ ಉದ್ದೇಶ. ಲೇಖಕರು ಕೆಲವು ಮಂದಿ ಸಂಸ್ಕೃತ ನಾಟಕಕಾರರ ಮತ್ತು ಅವರ ಕೃತಿಗಳ ಪರಿಚಯವನ್ನು ಪ್ರಸಾರ ಭಾಷಣಗಳ ಹಾಗೂ ಕಿರುಪುಸ್ತಕಗಳ ಮೂಲಕ ಮಾಡಿಕೊಟ್ಟಿದ್ದರೆ, ಇನ್ನು ಕೆಲವು ಕೃತಿಗಳನ್ನು ನೇರವಾಗಿ ಕನ್ನಡಕ್ಕೆ ಭಾಷಾಂತರ ಮಾಡಿಕೊಟ್ಟಿದ್ದಾರೆ.

ಸಂಸ್ಕೃತ ನಾಟಕಕಾರರಲ್ಲಿ ಅತ್ಯಂತ ಜನಪ್ರಿಯನೂ ಪ್ರತಿಭಾಸಂಪನ್ನನೂ ಆದ ಕಾಳಿದಾಸ ಮಹಾಕವಿಯ ನಾಟಕಗಳ ಪರಿಚಯ ಕೃಷ್ಣಮೂರ್ತಿಯವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಕ್ಕೆ ಮಾಡಿದ ಪ್ರಚಾರೋಪನ್ಯಾಸ 'ಕಾಳಿದಾಸನ ನಾಟಕಗಳು' (ಪ್ರಕಟಣೆ ೧೯೬೨) ಪುಸ್ತಕದಲ್ಲಿ ದೊರೆಯುತ್ತದೆ. ಲೇಖಕರು ಕಾಳಿದಾಸನ ಶಾಕುಂತಲವನ್ನು ಅನುವಾದಿಸಿರುವುದೇ ಅಲ್ಲದೆ ಡಿ. ಎನ್. ಶಾನುಭಾಗರೊಡಗೂಡಿ ೧೯೭೨ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕಾಗಿ ಮಾಳವಿಕಾಗ್ನಿಮಿತ್ರ ನಾಟಕವನ್ನು ಸಂಪಾದಿಸಿ ಪ್ರಕಟಿಸಿದ್ದರು. ಶ್ರೀಯುತರು ಕಾಳಿದಾಸನ ಕುಮಾರಸಂಭವ ಮಹಾಕಾವ್ಯದ ಐದನೆಯ ಸರ್ಗವನ್ನೂ (೧೯೭೪) ಡಿ. ಎನ್. ಶಾನುಭಾಗರ ಜೊತೆ ಮೇಘದೂತವನ್ನೂ (೧೯೭೬) ಕರ್ನಾಟಕ ವಿಶ್ವವಿದ್ಯಾಲಯಕ್ಕಾಗಿ ಸಂಪಾದಿಸಿಕೊಟ್ಟಿರುದುದನ್ನು ಇಲ್ಲಿ ದಾಖಲಿಸಬಹುದು.

ಭವಭೂತಿಯನ್ನು ಕುರಿತಂತೆ ೧೯೫೨ರಲ್ಲಿ ಕೃಷ್ಣಮೂರ್ತಿಯವರು ಕರ್ನಾಟಕ ವಿಶ್ವವಿದ್ಯಾಲಯದ ವತಿಯಿಂದ ಉಪನ್ಯಾಸವೊಂದನ್ನು ಕಿರುಪುಸ್ತಕವಾಗಿ ಹೊರತಂದಿದ್ದರು. ಭವಭೂತಿಯ 'ಉತ್ತರರಾಮಚರಿತ' ಸಂಸ್ಕೃತ ಸಾಹಿತ್ಯದಲ್ಲಿ ಕರುಣರಸವನ್ನು ಪ್ರಧಾನವಾಗಿ ಪ್ರತಿಪಾದಿಸುವ ಅನರ್ಘ್ಯರತ್ನ. ಕೃತಿಯ ಕನ್ನಡಾನುವಾದವನ್ನು ೧೯೫೭

ರಲ್ಲಿ ಕೃಷ್ಣಮೂರ್ತಿಯವರು ಶಾರದಾಮಂದಿರದ ಮೂಲಕ ಪ್ರಕಟಿಸಿದರು. ಎ. ಆರ್. ಕೃಷ್ಣಶಾಸ್ತ್ರಿಯವರು ಉಲ್ಲೇಖಿಸುವಂತೆ “ಭವಭೂತಿ ಒಬ್ಬ ದೊಡ್ಡ ವಿದ್ವತ್ಕವಿ ; ಶಾಸ್ತ್ರ ಸಾಹಿತ್ಯಗಳಲ್ಲಿ ನಿಷ್ಣಾತನಾದ ಪಂಡಿತ : ಸಂಸ್ಕೃತ ಭಾಷೆಯಲ್ಲಿ ಅವನಿಗೆ ಅಪೂರ್ವ ಸಾಮರ್ಥ್ಯ. ಎಂಥ ಸೂಕ್ಷ್ಮ ವಿಷಯವನ್ನಾಗಲಿ, ಯಾವ ಅರ್ಥದ ಎಂಥ ಛಾಯೆಯನ್ನಾಗಲಿ ಅವನು ಖಚಿತವಾಗಿ ಹೇಳಬಲ್ಲನು ; ಅವನ ಮಾತಿನಲ್ಲಿ ಪ್ರೌಢಿಮೆ ಇದೆ. ಉದಾರತೆ ಇದೆ. ಅರ್ಥಗೌರವವಿದೆ. ವಾಗ್ವೈದಗ್ಧ್ಯವಿದೆ. ಅದರಲ್ಲಿ ಬರದ ಬೆಡಗು ಸೌಂದರ್ಯ ಶಯ್ಯೆ ಗುಂಫಗಳು ಇಲ್ಲ. ಸಂಗ್ರಹವಾಗಿ ಹೇಳಬೇಕೆಂದರೆ ಅವನು ತಾನೇ ಹೇಳಿಕೊಂಡಿರುವಂತೆ ‘ವಶ್ಯವಾಕ್’ ”. ಇಂಥ ಕವಿಯನ್ನು ಇನ್ನೊಂದು ಭಾಷೆಗೆ ಅನುವಾದಿಸಬೇಕಾದರೆ ಅನುವಾದಕನಿಗೆ ಅತ್ಯಂತ ಹೆಚ್ಚಿನ ಮಟ್ಟದ ಸೂಕ್ಷ್ಮಜ್ಞತೆ ಬೇಕಾಗುತ್ತದೆ. ಕೇಂದ್ರ ಸಾಹಿತ್ಯ ಅಕಾದೆಮಿಯವರು ಪ್ರಕಟಿಸಿದ ಜಿ. ಕೆ. ಭಟ್ ಅವರ ‘ಭವಭೂತಿ’ ಕೃತಿಯನ್ನು ಸಹ ಕೃಷ್ಣಮೂರ್ತಿಯವರು ಕನ್ನಡಕ್ಕೆ ಅನುವಾದ ಮಾಡಿಕೊಟ್ಟಿದ್ದಾರೆ (೧೯೮೪). ಅಂತೆಯೆ ಕರ್ನಾಟಕ ವಿಶ್ವವಿದ್ಯಾಲಯಕ್ಕಾಗಿ ಶ್ರೀಯುತರು ಬಿ. ಆರ್. ಮೋಡಕರೊಡಗೂಡಿ ‘ಉತ್ತರರಾಮಚರಿತೆ’ಯನ್ನು ವಿದ್ಯಾರ್ಥಿಗಳ ಸಲುವಾಗಿ ಸಂಪಾದಿಸಿ ಕೊಟ್ಟಿದ್ದಾರೆ.

ಸಂಸ್ಕೃತದ ಅತ್ಯಂತ ಪ್ರಾಚೀನ ಹಾಗೂ ಶ್ರೇಷ್ಠ ಕವಿಗಳ ಸಾಲಿನಲ್ಲಿ ಬರುವವನು ಭಾಸಮಹಾಕವಿ. ಭಾಸನ ‘ಪ್ರತಿಮಾನಾಟಕ’ ತನ್ನ ಉತ್ಕೃಷ್ಟ ಸಾಹಿತ್ಯಗುಣಗಳಿಂದಾಗಿ ಸರ್ವಜನಾದರಣೀಯವಾದುದು. ಸರಸ್ವತಿಯ ‘ಹಾಸ’ನೆಂದು ಖ್ಯಾತಿವೆತ್ತಿರುವ ಭಾಸನ ಈ ಕೃತಿ ಸಂಸ್ಕೃತ ಸಾಹಿತ್ಯದಲ್ಲಿ ಒಂದು ರಸಘಟ್ಟ. ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ‘ಭಾಸಕವಿ’ಯಲ್ಲಿ ಶ್ಲಾಘಿಸಿರುವಂತೆ ಈ ನಾಟಕ ಸಹೃದಯ ಮನಸ್ಸನ್ನು ಆಳವಾಗಿ ಮುಟ್ಟಿ ಭವ್ಯವಾದ ಕೌಟುಂಬಿಕ ಸಂಸ್ಕೃತಿಯ ಮಧುರದರ್ಶನವನ್ನು ಮೂಡಿಸುವಂತಿದೆ : “ಪ್ರತಿಮಾನಾಟಕದ ಕಥಾಭಾಗವು ರಾಮಾಯಣದ್ದೆ ಆದರೂ ಅದರ ವಸ್ತುಕಲ್ಪನೆ, ಸಂವಿಧಾನ ರಚನೆ, ಪಾತ್ರಪ್ರದರ್ಶನ, ರಸಪರಿಪೋಷಣಗಳೆಲ್ಲವೂ ಬೇರೆಯಾಗಿವೆ. ಇವೆಲ್ಲದರ ಫಲವಾಗಿ ಪ್ರತಿಮಾನಾಟಕವು, ಕರುಣರಸ ಪ್ಲಾವಿತವಾದರೂ, ತನ್ನೊಳಗೆ ಒಂದು ಅಪೂರ್ವ ಪ್ರೇಮಸಂಸಾರವನ್ನು ಚಿತ್ರಿಸಿದೆ. ಅಳುವ ಕಣ್ಣಿನಲ್ಲಿ ಬೆಳಗುವ ಹೃದಯವು ಪ್ರತಿಫಲಿಸಿದೆ. ರಾಮನು ಪರಿಪಕ್ವಮತಿಯೂ ಉಪಶಾಂತನೂ ಕುಟುಂಬದ ಜನರನ್ನು ಅವರವರ ಸ್ವಭಾವಕ್ಕೆ ತಕ್ಕಂತೆ ಹಿಡಿದು ತಿದ್ದಿ ನಡೆಸಬಲ್ಲ ಅನುಭವಸ್ಥನೂ ಆದ ಮನೆಯ ಯಜಮಾನ. ಸೀತೆಯು ಮೈದುನರನ್ನು ಮಕ್ಕಳಂತೆಯೂ, ಅತ್ತೆಯರನ್ನು ತಾಯಿಯಂತೆಯೂ ಆದರಿಸುತ್ತ ಗಂಡನಿಗೆ ಅನುಕೂಲಳಾಗಿದ್ದ ಸಹಧರ್ಮಿಣಿ—ಸುಖಕ್ಕಿಂತ ಹೆಚ್ಚಾಗಿ ಕಷ್ಟದಲ್ಲಿ ಸಹಧರ್ಮಿಣಿ. ಭರತ ಲಕ್ಷ್ಮಣರು ರಾಮನಿಗೆ ಎರಡು ತೋಳುಗಳಂತಿದ್ದ ಪ್ರಾಣಪ್ರಿಯರಾದ ಸೋದರರು . . . ಕೌಸಲ್ಯಾದಿಗಳು ಅಕ್ಕತಂಗಿಯರಂತೆ ಅನ್ಯೋನ್ಯವಾಗಿದ್ದುಕೊಂಡು ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದ ಹಿರಿಯರು. ಈ ಕುಟುಂಬವು ಭಾಸನ ಪ್ರತಿಭಾಪ್ರಭಾವದಿಂದ ನಿಷ್ಕಂಟಕವೂ ನಿಷ್ಕಳಂಕವೂ ಆದ ಪ್ರೇಮ

ಸಂಸಾರವಾಗಿ ಬೆಳಗುತ್ತಿದೆ. ಇದನ್ನು ಭಾವಿಸಿದ ಕವಿಯ ಮನೋಧರ್ಮವು ಅತ್ಯಂತ ಮಧುರವಾದದ್ದು" ('ಭಾಸಕವಿ' ಪು. ೮೭-೮೮). ಕೃಷ್ಣಮೂರ್ತಿಯವರು ಅನುವಾದಿಸಿದ 'ಕನ್ನಡ ಪ್ರತಿಮಾನಾಟಕ' ೧೯೫೪ರಲ್ಲಿ ಮೈಸೂರು ಶಾರದಾಮಂದಿರದಿಂದ ಹೊರಬಂತು. ಕೃಷ್ಣಮೂರ್ತಿಯವರ ಬಹಳಷ್ಟು ಸಂಸ್ಕೃತಾನುವಾದಗಳನ್ನು ಪ್ರಕಟಿಸಿದ ಶ್ರೇಯಸ್ಸು ಶಾರದಾಮಂದಿರದ ಒಡೆಯರಾದ ಎಚ್. ಎಂ. ಶಂಕರನಾರಾಯಣರಾಯರಿಗೆ ಸಲ್ಲಬೇಕು. ಇದೇ ರೀತಿಯಲ್ಲಿ ೧೯೫೮ರಲ್ಲಿ ಕೃಷ್ಣಮೂರ್ತಿಯವರ ಭಾಸನಾಟಕಾನುವಾದ 'ಕನ್ನಡ ಯಜ್ಞಫಲ' ಸಹ ಹೊರಬಂತು. 'ಯಜ್ಞಫಲ'ದ ಕರ್ತೃತ್ವದ ಬಗೆಗಿನ ಚರ್ಚೆಯನ್ನು ಸ್ವಲ್ಪ ಬದಿಗಿಡೋಣವಾದರೂ ಆ ನಾಟಕ 'ಪ್ರತಿಮಾನಾಟಕ'ದಷ್ಟು ಶ್ರೇಷ್ಠವಾಗಿಲ್ಲ, ಖ್ಯಾತಿಪೆತ್ತಿಲ್ಲ.

ಶೂದ್ರಕನ 'ಮೃಚ್ಛಕಟಿಕ'ವನ್ನು ಕೃಷ್ಣಮೂರ್ತಿಯವರು 'ಕನ್ನಡ ಮೃಚ್ಛಕಟಿಕ' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ಚಾರುದತ್ತ ವಸಂತಸೇನೆಯರ ಈ ಕಥಾವಸ್ತು ಸಾಹಿತ್ಯಾಸಕ್ತರಿಗೆ ತುಂಬ ಪ್ರಿಯವಾದುದು. 'ಮೃಚ್ಛಕಟಿಕ'ದ ಉಪಾದೇಯತೆಯನ್ನು ಕುರಿತಂತೆ ಈ ಮಾತುಗಳು ಗಮನಾರ್ಹ : "ಪ್ರಧಾನ ಪಾತ್ರಗಳಲ್ಲಿಯೂ ಅವರ ಚರಿತ್ರೆಯಲ್ಲಿಯೂ ವಿವೇಕವಿರುವಂತೆಯೇ ಗೌಣಪಾತ್ರಗಳಲ್ಲಿಯೂಅವರ ಚರಿತ್ರೆಯಲ್ಲಿಯೂ ವಿಶೇಷತೆಯಿದೆ. ಈ ನಾಟಕದ ಪಾತ್ರಗಳಲ್ಲಿರುವ ವೈವಿಧ್ಯ ವ್ಯಕ್ತಿತ್ವಗಳು ಪ್ರಾಯಶಃ ಮತ್ಯಾವ ಸಂಸ್ಕೃತ ನಾಟಕದಲ್ಲಿಯೂ ಇರಲಾರದು. ವಿಟ, ಚೇಟ, ವಿದೂಷಕರ ಮಾತಿರಲಿ ; ಜೂಜುಕೋರ, ಕಳ್ಳ, ಧೂರ್ತ, ಪಟಿಂಗ, ಚಂಡಾಲ ಮುಂತಾದವರನ್ನು ನಾಟಕಕರ್ತನು ಇದರ ಸಂವಿಧಾನದಲ್ಲಿ ಜೋಡಿಸಿ ಕಥೆಯನ್ನು ಗೆಲುವಾಗಿ ಮಾಡಿದ್ದಾನೆ. ಶಕಾರನೂ ಅವನ ವಿಲಕ್ಷಣವಾದ ಹಾಸ್ಯವೂ ಬರುವುದು ಇದರಲ್ಲಿಯೇ. ವಿದೂಷಕನ ಹಾಸ್ಯವು ಮಿಕ್ಕನಾಟಕಗಳಲ್ಲಿರುವಂತೆ ಕೇವಲ ಅವನ ಹೊಟ್ಟೆಬಾಕತನದ ಆಧಾರದ ಮೇಲೆ ಹುಟ್ಟಿದ್ದಲ್ಲ; ಮೃಚ್ಛಕಟಿಕಕಾರನ ಹಾಸ್ಯವು ಸಂಪ್ರದಾಯಬದ್ಧವಲ್ಲ, ಕ್ಲಿಷ್ಟವಲ್ಲ, ಒಂದು ತೆರದ್ದಲ್ಲ. ಈ ನಾಟಕವು ಶೃಂಗಾರ ಪ್ರಧಾನವೆನ್ನಬೇಕಾದರೂ ಇದರಲ್ಲಿ ಬರುವ ನೈಜವಾದ ಸರ್ವತೋಮುಖವಾದ ಹಾಸ್ಯವು ಪಾಶ್ಚಾತ್ಯ ಗ್ರಂಥಗಳ ಪ್ರಸಿದ್ಧ ಹಾಸ್ಯದೊಡನೆ ಸರಿದೂಗಬಲ್ಲದು . . . ಈ ನಾಟಕವನ್ನು ಓದುತ್ತಿದ್ದರೆ, ನಗುತ್ತ, ಅಳುತ್ತ, ಜಗಳವಾಡುತ್ತ, ಮಹಾಸಮಾರಂಭಗಳಲ್ಲಿ ಬೆರೆಯುತ್ತ, ಗಡಿಬಿಡಿಯಿಂದ ಓಡಾಡುತ್ತ ಇರುವ ಹಲವು ಹದಿನೆಂಟು ಜಾತಿಯ ಜನರು ತುಂಬಿದ ಮಹಾನಗರವು ಕಣ್ಣಿಗೆ ಕಟ್ಟಿದಂತಾಗುತ್ತದೆ" (ಕೃಷ್ಣಶಾಸ್ತ್ರಿ ಎ. ಆರ್. 'ಸಂಸ್ಕೃತ ನಾಟಕ' ಪು. ೧೧೮-೧೧೯).

ಭಾಸನ 'ಪ್ರತಿಮಾನಾಟಕ' ಮತ್ತು 'ಯಜ್ಞಫಲ'ಗಳನ್ನೆ ಅಲ್ಲದೆ, ಕೃಷ್ಣಮೂರ್ತಿಯವರು ಆತನ ಏಕಾಂಕ ನಾಟಕಗಳನ್ನು ಸಹ ಕನ್ನಡಕ್ಕೆ ಅನುವಾದಿಸಿದ್ದಾರೆ. ಆದರೆ ಇದು ಕೇವಲ ಗದ್ಯಾನುವಾದವಷ್ಟೆ. ಮಧ್ಯಮವ್ಯಾಯೋಗ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ ಮತ್ತು ಊರುಭಂಗಗಳು ಅವರ 'ಭಾಸನ ಏಕಾಂಕ ನಾಟಕಗಳು' ಎಂಬ ಹೊತ್ತಗೆಯಲ್ಲಿ ಸೇರಿವೆ. ಅಲ್ಲದೆ ಕೇಂದ್ರ ಸಾಹಿತ್ಯ ಅಕಾದೆಮಿಗಾಗಿ ಶ್ರೀಯುತರು

ವಿ. ವೆಂಕಟಾಚಲಂ ಅವರ 'ಭಾಸ' ಎಂಬ ಕೃತಿಯನ್ನು ಈಚೆಗೆ (೧೯೯೨) ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದಾರೆ.

ವಿಶಾಖದತ್ತನ 'ಮುದ್ರಾರಾಕ್ಷಸ' ಹಾಗೂ ಶಕ್ತಿಭದ್ರನ 'ಆಶ್ಚರ್ಯ ಚೂಡಾಮಣಿ' ಕೃಷ್ಣಮೂರ್ತಿಯವರು ಅನುವಾದಿಸಿ ಕೊಟ್ಟಿರುವ ಮತ್ತೆರಡು ನಾಟಕಗಳು. ಈ ಪೈಕಿ 'ಮುದ್ರಾರಾಕ್ಷಸ ಕಥಾಸಾರ' (೧೯೫೯) ನೇರ ನಾಟಕಾನುವಾದವಲ್ಲವಾದರೂ ನಾಟಕದ ಕಥೆಯನ್ನು ಗದ್ಯರೂಪದಲ್ಲಿ ಅಳವಡಿಸಿಕೊಂಡಿದೆ. 'ಕನ್ನಡ ಆಶ್ಚರ್ಯಚೂಡಾಮಣಿ' (೧೯೫೯) ಶಕ್ತಿಭದ್ರನ ನಾಟಕದ ಅನುವಾದ. 'ಮುದ್ರಾರಾಕ್ಷಸ'ದ ಕಥಾವಸ್ತುವಂತೂ ತುಂಬ ಪ್ರಸಿದ್ಧವಾದುದು. ನಿಶಿತಮತಿ ರಾಜನೀತಿಜ್ಞ ಪ್ರಚಂಡ ಚಾಣಕ್ಯನನ್ನೂ ಅವನ ಶಿಷ್ಯ ಚಂದ್ರಗುಪ್ತನನ್ನೂ ಅರಿಯದವರಾರು ? ಶೈಲಿಯಲ್ಲಿ ಋಜುತ್ವವನ್ನೂ ಬಿಗಿಯನ್ನೂ ಹೊಂದಿರುವ ನಾಟಕ ಇದಾದರೂ ಬರವಣಿಗೆಯಲ್ಲಿ ಜಟಿಲತೆ ಕಂಡುಬರುವುದಿಲ್ಲ. ನಾಟಕ ಸರಳವಾದ ಚಲನಶೀಲತೆಯುಳ್ಳದ್ದು. ಶಕ್ತಿಭದ್ರನ 'ಆಶ್ಚರ್ಯಚೂಡಾಮಣಿ' ಸುಲಭ ಶೈಲಿಯ ಹೆಚ್ಚು ವರ್ಣನೆಯಿಲ್ಲದ ನಾಟಕ. ಈ ನಾಟಕದ ವಿಚಾರವಾಗಿ ಕೆಲವು ಮಾತು ಗಳನ್ನು ಗಮನಿಸಬಹುದು: "ಇದು ರಾಮಾಯಣ ನಾಟಕಗಳಲ್ಲಿ ಸಣ್ಣದು. ಇದನ್ನು ಕವಿ ರಂಗದೃಷ್ಟಿಯಿಂದ ಬರೆದಂತಿದೆ–ವರ್ಣನೆ ಅತಿಯಾಗಿಲ್ಲ; ಪದ್ಯಗಳು ೧೪೯ ಮಾತ್ರ. ಶೈಲಿ ಸುಲಭವಾಗಿದೆ. ಕಥಾಸಂಗ್ರಹದಲ್ಲಿ ಕೌಶಲವೂ ಪಾತ್ರಗಳಲ್ಲಿ ಜೀವಕಳೆಯೂ ಅವರ ಮಾತಿನಲ್ಲಿ ಸರಳತೆಯೂ ಇದೆ. ಕೃತಕ ಚಮತ್ಕಾರದ ಪ್ರಯತ್ನವಿದ್ದರೂ ಒಟ್ಟಿನಲ್ಲಿ ಭಾಸನ ನಾಟಕದ ಛಾಯೆ ಇದ್ದು ಮಹಾವೀರಚರಿತಾದಿಗಳನ್ನು ಓದಿ ಭಾರಯಿಸಿದ ಬುದ್ಧಿ ಸ್ವಲ್ಪ ಹಗುರವಾಗುತ್ತದೆ. ವೀರಾದ್ಭುತಗಳೆರಡೂ ಕವಿಗೆ ಉದ್ದಿಷ್ಟವಾಗಿದ್ದರೂ ವೀರಕ್ಕಿಂತ ಅದ್ಭುತವೇ ಹೆಚ್ಚಾಗಿದೆ." (ಕೃಷ್ಣಶಾಸ್ತ್ರಿ ಎ. ಆರ್. 'ಸಂಸ್ಕೃತ ನಾಟಕ' ಪು. ೨೮೫).

ಕೃಷ್ಣಮೂರ್ತಿಯವರು ಸಂಸ್ಕೃತದಿಂದ ಅನುವಾದಿಸಿರುವ ನಾಟಕಗಳ ಬಗೆಗೆ ಎರಡೆರಡು ಮಾತುಗಳ ಪರಿಚಯವನ್ನು ಈ ಮೇಲ್ಕಂಡಂತೆ ಮಾಡಿಕೊಂಡ ಅನಂತರ ಅವರ ಭಾಷಾಂತರದ ಬಗೆಗೆ ಸ್ಥೂಲವಾಗಿ ಚರ್ಚೆಮಾಡಬಹುದು. ಅವರು ಪರಿಭಾವಿಸುವಂತೆ "ಕಾಳಿದಾಸ ಬೇಡುವ 'ವಾಗರ್ಥಪ್ರತಿಪತ್ತಿ' ಅನುವಾದಕನಿಗೆ ಕವಿಗಿಂತ ಇನ್ನೂ ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿಯೇ ಬೇಕು. ಕವಿಗೆ ಪ್ರತಿಭೆ ಹೇಗೋ ಅನುವಾದಕರಿಗೆ ಸಹೃದಯತೆ ಹಾಗೇ ಮೂಲಸತ್ವ. ಇವಲ್ಲದೆ ಕವಿಯ ರಸದೃಷ್ಟಿ ಅನುವಾದಕನ ಸವಿಮರ್ಶ ರಸಿಕತೆ ಯೊಡನೆ ಸ್ಪರ್ಧೆಗೊಡುತ್ತದೆ. ಕವಿಯ ಮೂಲಪ್ರತಿಭೆ, ವಿಶಾಲವ್ಯುತ್ಪತ್ತಿ, ಕವಿತಾಭ್ಯಾಸ ಗಳಿಂದ ರಸಪೂರ್ಣವೂ ಚಮತ್ಕಾರಪೂರ್ಣವೂ ಆದ ಕಾವ್ಯ ಹುಟ್ಟುವಂತೆ ಭಾವಯಿತ್ರಿ ಪ್ರತಿಭೆ, ವಾಗರ್ಥ ಪ್ರಭುತ್ವ, ಸಂತತ ಪ್ರಯತ್ನ ಮೂರು ಮುಪ್ಪುರಿಯಾದಾಗ ಒಂದು ಉತ್ತಮ ಅನುವಾದ ಮೂಡುತ್ತದೆ. ಹೊಸ ಸೃಷ್ಟಿ ಒಂದು ಸಾಹಿತ್ಯದ ಸಂಪತ್ತೆನಿಸು ವಂತೆಯೇ ಉತ್ತಮ ಅನುವಾದ ಕೂಡ ಆ ಸಾಹಿತ್ಯಕ್ಕೆ ಶ್ರೀಮಂತಿಕೆಯನ್ನು ತರುವ ಒಂದು ಪ್ರಣಾಲಿಯೇ ಸರಿ" (ಪ್ರಬುದ್ಧ ಕರ್ಣಾಟಕ, ಚಿನ್ನದ ಸಂಪುಟ, ಪು. ೫೫೦).

ಸಹೃದಯನಾದ ಪ್ರತಿಭಾಸಂಪನ್ನನಾದ ರಸದೃಷ್ಟಿಯುಳ್ಳ ವ್ಯಕ್ತಿಯೇ ಸಾಹಿತ್ಯಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಉತ್ತಮ ಅನುವಾದಕನಾಗಬಲ್ಲ.

ಒಳ್ಳೆಯ ಅನುವಾದಗಳನ್ನು ಕುರಿತಂತೆ ಕೃಷ್ಣಮೂರ್ತಿಯವರು ಆಡಿರುವ ಮಾತುಗಳು ಗಮನಾರ್ಹವಾಗಿವೆ : "ಉತ್ತಮ ಕಾವ್ಯಗಳು ಎಷ್ಟು ವಿರಲವೊ ಉತ್ತಮ ಅನುವಾದಗಳು ಅಷ್ಟೇ ಅಪೂರ್ವ. ಸಾಹಿತ್ಯ. ವ್ಯಾಕರಣ ಇವುಗಳಲ್ಲಿ ಕೇವಲ ಪಾಂಡಿತ್ಯವಿದ್ದರೆ ಒಂದು ಬಗೆಯ ಕವಿತ್ವ, ಒಂದು ಬಗೆಯ ಅನುವಾದ, ಎರಡೂ ಸಾಧ್ಯ. ಆದರೆ ಇವು ಅಲ್ಪಾಯುಷಿಗಳು...ಒಬ್ಬನ ರಚನೆ ಅವನ ಮನೆಯಲ್ಲಿಯೆ ನಿಲ್ಲುತ್ತದೆ ; ಇನ್ನೊಬ್ಬನದು ಅವನ ಗೆಳೆಯನ ಮನೆಯವರೆಗೆ ಹೋಗುತ್ತದೆ. ಆದರೆ ರಸಿಕರ ರಸನಾಗ್ರದಲ್ಲಿ ಚಿರಜೀವಿಯಾಗಿ ವಿಶ್ವಯಾತ್ರೆ ಮಾಡುವ ರಚನೆಯ ಸಂಖ್ಯೆ ಎಷ್ಟು ಸಣ್ಣದು !" (ಅಲ್ಲಿಂದಲೇ ಉದ್ಧೃತ). ಲೇಖಕರು ಹೇಳಿರುವಂತೆ ಉತ್ತಮ ಸಾಹಿತ್ಯಕೃತಿಗಳಂತೆ ಉತ್ತಮ ಭಾಷಾಂತರಗಳು ಸಹ ಅಪರೂಪವಾಗಿ ದೊರೆಯುವಂತಹವು. ಆದರೂ ಒಳ್ಳೆಯ ಸಾಹಿತ್ಯ ಕೃತಿಗಳು ದೊರೆಯುವಷ್ಟು ಸಂಖ್ಯೆಯಲ್ಲಿ ಒಳ್ಳೆಯ ಅನುವಾದಗಳು ಖಂಡಿತ ದೊರೆಯಲಾರವೆನಿಸುತ್ತದೆ. ಏಕೆಂದರೆ ಅನುವಾದ ಮಾಡುವ ಕೆಲಸದ ಸ್ವರೂಪವೆ ಅಂತಹದು.

ಕನ್ನಡದಲ್ಲಿ ಸಂಸ್ಕೃತ ನಾಟಕಗಳನ್ನು ಅನುವಾದ ಮಾಡುವ ಹಿಂದಿದ್ದ ಪ್ರೇರಣೆಯನ್ನು ಕುರಿತಂತೆ ಕೃಷ್ಣಮೂರ್ತಿಯವರು ಹೀಗೆ ಹೇಳುತ್ತಾರೆ : "ಪ್ರಾಚೀನರ ಪ್ರೌಢ ಕಾವ್ಯಪರಂಪರೆ ಎಂದರೆ ಚಂಪು. ಇದು ಪಂಡಿತರ ಅಧ್ಯಯನಕ್ಕೆ, ಅನುಕರಣದಿಂದ ಪಾಂಡಿತ್ಯ ಪ್ರದರ್ಶನಕ್ಕೆ ಉಳಿದಿತ್ತೇ ಹೊರತು ಕವಿಸ್ಫೂರ್ತಿಯ ಸಹಜಾಭಿವ್ಯಕ್ತಿಗೆ ಸಾಧನವಾಗಿ ಉಳಿದಿರಲಿಲ್ಲ. ವಿವಿಧ ಷಟ್ಪದಿ, ಚೌಪದಿ ಪ್ರಕಾರಗಳು ಕಥಾನಿರೂಪಣೆ, ನೀತಿಬೋಧೆ ಇವಕ್ಕೆ ಸೀಮಿತವಾಗಿದ್ದವು. ಕನ್ನಡ ನಾಟಕ ಸಂಪ್ರದಾಯವೆಂಬುದೇ ಇರಲಿಲ್ಲ. ಈ ಕೊರತೆಯನ್ನು ನೀಗಿಸಲೆಂದು ಪ್ರೌಢಶಾಲೆಯಲ್ಲಿ ಕನ್ನಡ ಸಂಸ್ಕೃತವನ್ನು ಕಲಿಸುತ್ತಿದ್ದ ಅಧ್ಯಾಪಕರೆಲ್ಲರೂ ಒಂದಿಲ್ಲೊಂದು ಸಂಸ್ಕೃತಕಾವ್ಯ ಇಲ್ಲವೆ ನಾಟಕವನ್ನು ಕನ್ನಡಿಸುವುದರಲ್ಲಿ ಉತ್ಸಾಹ ತೋರಿಸಿದರು. ಅತ್ತ ರಾಜಾಸ್ಥಾನದಲ್ಲಿ ಪ್ರಶಂಸೆ ಇತ್ತ ಮಿತ್ರ ಪಂಡಿತರ ಮಂಡಳಿಯಲ್ಲಿ ಮನ್ನಣೆ—ಇವೇ ಅವರ ಮುಖ್ಯ ಗುರಿಗಳು. ಪದ್ಯಗಳ ಅನುವಾದಕ್ಕೆ ಕಂದವೃತ್ತಗಳ ಶೈಲಿ, ಗದ್ಯಾನುವಾದಕ್ಕೆ ಉದ್ದುದ್ದ ವಾಕ್ಯಗಳ ಒಂದು ಕೃತಕ ಶೈಲಿ ಇವು ಅವರ ಮುಖ್ಯ ಅನುವಾದ ರೀತಿ. ಸಾಮಾನ್ಯ ಕನ್ನಡಿಗರಿಗೆ ಇದರಿಂದ ಮೂಲಕೃತಿಯ ರಸಾಸ್ವಾದ ಉಂಟಾಗಬೇಕು ಎಂಬ ಪರಿವೆ ಅಷ್ಟಾಗಿ ಇಲ್ಲದ ಕಾರಣ ಈ ಪಂಡಿತರ ರಚನೆಗಳು ಪ್ರಾಯಿಕವಾಗಿ ಪ್ರಚಾರಕ್ಕೆ ಬರಲಿಲ್ಲ. ಆದರೆ ಪ್ರಾಚೀನ ಕವಿಸಂಪ್ರದಾಯ ಗತಸತ್ವವಾಗಿ, ಪಾಶ್ಚಾತ್ಯರ ವಿಚಾರ ಸಂಪರ್ಕದಿಂದ ನವಯುಗದ ಸುಪ್ರಭಾತ ಬೆಳಕಾಗುವ ಮುನ್ನ, ಸುಮಾರು ಕಾಲುಶತಮಾನ ಅವಧಿಯನ್ನು ಅನುಕರಣಪಂಡಿತರ ಅನುವಾದ ಯುಗವೆಂದೇ ಕರೆದರೂ ಸಲ್ಲುತ್ತದೆ. ಏಕೆಂದರೆ ಇವರ ಸಂಖ್ಯೆ ಇನ್ನೂರಕ್ಕೆ ಕಡಮೆ ಇಲ್ಲ. ಸಂಸ್ಕೃತದ ಎಲ್ಲ ಮಹಾಕಾವ್ಯಗಳನ್ನೂ. ಪ್ರಸಿದ್ಧವಾದ ಎಲ್ಲ ನಾಟಕಗಳನ್ನೂ, ಈ ಯುಗದವರು ಕನ್ನಡಿಸಲು ಪ್ರಯತ್ನಪಟ್ಟಿದ್ದಾರೆ" (ಪ್ರ.ಕ., ಪೂರ್ವೋಕ್ತ, ಪು. ೫೫೦).

ಪ್ರಸಿದ್ಧವಾದ ಸಂಸ್ಕೃತ ನಾಟಕಗಳು ಮತ್ತೆ ಮತ್ತೆ ಅನುವಾದಕ್ಕೆ ಒಳಪಡಬೇಕಾಗಿ ಬಂದ ಆವಶ್ಯಕತೆಯು, ಅನಿವಾರ್ಯತೆಯು ಕಾರಣಗಳನ್ನು ಈ ಹಿನ್ನೆಲೆ ಸ್ಪಷ್ಟಪಡಿಸುತ್ತದೆ. ಆ ಕಾಲದಲ್ಲಿ ಬಂದ ನಾಟಕಗಳ ಪೈಕಿ ಬಸವಪ್ಪಶಾಸ್ತ್ರಿಗಳ 'ಶಾಕುಂತಲ', ಧೋಂಡೊ ನರಸಿಂಹ ಮುಳಬಾಗಿಲರ 'ಮೃಚ್ಛಕಟಿಕ' ಇಂಥ ಕೆಲವೇ ಕೃತಿಗಳನ್ನು ಬಿಟ್ಟರೆ ಉಳಿದವುಗಳಲ್ಲಿ ಏನೋ ಒಂದು ಬಗೆಯ ಕೃತಕವಾದ, ಕ್ಲಿಷ್ಟವಾದ, ನಿಸ್ಸಾರವಾದ ಕನ್ನಡ ಬಳಕೆಯನ್ನು ನೋಡಬಹುದು. ಪಾನ್ಯಂ ಸುಂದರಶಾಸ್ತ್ರಿಗಳು ಮಾಡಿರುವ 'ಪಂಚತಂತ್ರ'ದ ಒಂದು ಪದ್ಯವನ್ನು ಉದಾಹರಿಸಿ ಕೃಷ್ಣಮೂರ್ತಿಯವರು ವಿಮರ್ಶಿಸಿದ್ದಾರೆ. "ಇದು ಬರಿಯ ಸಪ್ಪೆ, ಇಲ್ಲಿ ಶಬ್ದದಲ್ಲಾಗಲಿ ಅರ್ಥದಲ್ಲಾಗಲಿ ಎಳ್ಳಷ್ಟಾದರೂ ಸಾಹಿತ್ಯ ಸಂವೇದನೆ ಇಲ್ಲ; ರಸದೃಷ್ಟಿ ದೂರವೇ ಉಳಿಯಿತು." (ಪ್ರ.ಕ., ಪೂರ್ವೋಕ್ತ, ಪು. ೫೫೧).

ಭಾಷಾಂತರ ಕೈಂಕರ್ಯದ ಬಗೆಗೆ ಕೃಷ್ಣಮೂರ್ತಿಯವರಿಗೆ ಇರುವ ವಿಶೇಷ ಆಸಕ್ತಿ ಹಾಗೂ ಭಾಷಾಂತರದ ತೌಲನಿಕ ವಿಮರ್ಶೆ ಮಾಡುವ ವಿಧಾನಗಳನ್ನು ಕುರಿತಂತೆ ಮೇಲ್ಕಂಡ ಲೇಖನದಲ್ಲಿ ನಮೂನೆಗಳನ್ನು ಕಾಣಬಹುದು. ಲೇಖಕರು ತಮ್ಮ 'ಪ್ರತಿಮಾ ನಾಟಕ'ದ ಮುನ್ನುಡಿಯಲ್ಲಿ ಹೇಳಿರುವ ಮಾತುಗಳು ಸಂಸ್ಕೃತ ನಾಟಕಗಳನ್ನು ಅನುವಾದಿಸುವ ಹಿನ್ನೆಲೆಯಲ್ಲಿರುವ ಮೂಲಪ್ರೇರಣೆಯನ್ನು ತಿಳಿಸುತ್ತವೆ: "ಸಂಸ್ಕೃತ ನಾಟಕಗಳು ಆದರ್ಶಜೀವನದ ಕನ್ನಡಿಗಳಾಗಿರುವುವಲ್ಲದೆ, ಗದ್ಯಪದ್ಯಮಯವಾಗಿಯೂ, ಪದ್ಯದಲ್ಲಿ ಒಂದು ಪ್ರಯತ್ನಸಾಧ್ಯವಾದ ಶೋಭಾತಿಶಯವನ್ನು ಪಡೆದೂ ಇರುತ್ತವೆ. ಇಂದಿನ ಭಾಷೆಗೆ ಆ ನಾಟಕಗಳನ್ನು ಭಾಷಾಂತರಿಸುವಾಗ ಪದ್ಯವನ್ನೂ ಆಡುವ ಮಾತಿನ ಗದ್ಯದಲ್ಲಿ ಬರೆದರೆ ಮೂಲದ ಅರ್ಥಸೊಗಸಿಗೆ ಲೋಪ ಬರುವುದೆಂದೇ ನನ್ನ ಭಾವನೆ. ಇಂದಿನ ಪದ್ಯಗಳಲ್ಲೂ ಭಾಷೆಯು ಮರ್ಯಾದೆ ನೂತನವಾದಷ್ಟೂ ಈ ದೋಷ ಬರುವುದೆಂದೇ ನನ್ನ ಎಣಿಕೆ. ಆದರೆ ಹಿಂದಿನ ಕಂದ ವೃತ್ತಗಳಲ್ಲಿ ಪ್ರಾಸನಿಯಮಕ್ಕಾಗಿ ಮೂಲದಲ್ಲಿಲ್ಲದ್ದನ್ನು ಸೇರಿಸುವ, ಇದ್ದದ್ದನ್ನು ಬಿಡುವ, ಅವಶ್ಯಕತೆ ತಲೆದೋರುತ್ತದೆ. ಆದ್ದರಿಂದ ಆದಷ್ಟು ಮಟ್ಟಿಗೆ ಈ ಇಬ್ಬಗೆಯ ದೋಷಗಳೂ ಕಡಿಮೆಯಾಗಲೆನ್ನುವ ಉದ್ದೇಶದಿಂದ ದ್ವಿತೀಯಾಕ್ಷರ ಪ್ರಾಸನಿಯಮವನ್ನು ಪಾಲಿಸಲೇಬೇಕೆಂಬ ನಿಯಮವನ್ನು ಮೀರಿ ಕಂದ ವೃತ್ತಗಳಲ್ಲಿ ನಾಟಕದ ಪದ್ಯಗಳನ್ನು ಭಾಷಾಂತರಿಸಿದ್ದೇನೆ" ('ಕನ್ನಡ ಪ್ರತಿಮಾನಾಟಕ', ಅರಿಕೆ, ಪು. V).

'ಮೃಚ್ಛಕಟಿಕ'ದ ಪ್ರಾರಂಭದಲ್ಲಿರುವ ಅರಿಕೆಯಲ್ಲಿ ಕೃಷ್ಣಮೂರ್ತಿಯವರು ತಮ್ಮ ಆ ಅನುವಾದಕ್ಕೆ ಕಾರಣಗಳನ್ನು ಕೊಡುತ್ತಾರೆ: "ಈಗಾಗಲೆ ಕಳೆದ ಶತಮಾನದಲ್ಲಿ ಬರೆದ ಇದರ ಎರಡು ಕನ್ನಡ ಭಾಷಾಂತರಗಳು ಇಂದು ಅನುಪಲಬ್ಧವಾಗಿರುವುದಲ್ಲದೆ ಹಳಗನ್ನಡ ಪ್ರಚುರವೆನಿಸುವುದರಿಂದ, ಈ ಶತಮಾನದಲ್ಲಿ ಬರೆದ ನಂಜನಗೂಡು ಸುಬ್ಬಾಶಾಸ್ತ್ರಿಗಳ ಅನುವಾದವು ಮೂಲದ ಸಂಗ್ರಹರೂಪವಾಗಿರುವುದರಿಂದ, ಇಂದಿನ ಭಾಷಾ ಮರ್ಯಾದೆಗೆ ಒಗ್ಗುವಂತೆ ಮೂಲದ ಸಮಗ್ರ ಭಾಷಾಂತರದ ಅಗತ್ಯವುಂಟೆಂದು ಬಗೆದು ಇದನ್ನು ಬರೆಯಲಾಗಿದೆ.... ಪುನರುಜ್ಜೀವಿತವಾಗುತ್ತಿರುವ ಕನ್ನಡ ರಂಗಭೂಮಿಯಲ್ಲಿ

ಈ ನಾಟಕದ ಪ್ರಯೋಗಕ್ಕೆ ಮತ್ತೆ ಸ್ಥಾನ ದೊರೆಯುವುದೆಂದು ನಾನು ನಂಬಲು ಅಭಿಜ್ಞಾನ ನಾಟಕದ ನಿರುಪಮ ಸೊಬಗೇ ಕಾರಣ . . . ಪಂಡಿತರಂತೆ ಸಾಮಾನ್ಯ ಪ್ರೇಕ್ಷಕರಿಗೂ ಪ್ರಿಯವಾಗಬೇಕೆಂಬ ಉದ್ದೇಶದಿಂದ ಈ ಹೊಸ ಭಾಷಾಂತರವನ್ನು ಮಾಡಿದೆ. . . ಈ ನಾಟಕ ಉಳಿದ ಸಂಸ್ಕೃತ ನಾಟಕಗಳಿಗೆ ಗಾತ್ರದಲ್ಲಿ ದ್ವಿಗುಣವಾಗಿರುವಂತೆ, ರಂಗೋಚಿತವಾದ ಶೈಲಿಯಲ್ಲಿ ಶತಗುಣವಾಗಿಯೂ, ಸರ್ವಜನಾಕರ್ಷಣೆಯಲ್ಲಿ ಸಹಸ್ರಗುಣವಾಗಿಯೂ ಇದೆ. ಮೂಲದ ಸ್ವಾರಸ್ಯ ಭಾಷಾಂತರದಲ್ಲಿ ಅಚ್ಚಳಿಯದಂತೆ ಮೂಡಿಬರುವುದು ಅಸಂಭವವೇ ಸರಿ. ಕಡೆಗೂ . . . ಯಥಾಶಕ್ತಿ ಸಾಹಸಕ್ಕೆ ಕೈಹಾಕಿದ್ದೇನೆ" ('ಕನ್ನಡ ಮೃಚ್ಛಕಟಿಕ', ಅರಿಕೆ ಪು. iii, iv.)

ಈ ಯಾವ ನಾಟಕಾನುವಾದಗಳ ಪ್ರಾರಂಭದಲ್ಲಾಗಲಿ, ಹಾಗೆಯೆ 'ಕನ್ನಡ ಯಜ್ಞಫಲ'ದ ಮೊದಲಿನಲ್ಲಿಯೆ ಆಗಲಿ ಅನುವಾದಕರು ಸಂಸ್ಕೃತ ನಾಟಕಾನುವಾದದ ಕಷ್ಟಸುಖಗಳನ್ನು, ಸಮಸ್ಯೆಗಳನ್ನು, ಸವಾಲುಗಳನ್ನು ಕುರಿತು ಪ್ರಾಸ್ತಾವಿಕ ಚರ್ಚೆಮಾಡಿದ್ದರೆ ತುಂಬ ಉಪಯುಕ್ತವಾಗುತ್ತಿತ್ತು ಎನಿಸುತ್ತದೆ. ಏಕೆಂದರೆ ಅನುವಾದದ ಸಮಸ್ಯೆಗಳನ್ನು ಕ್ರಿಯಾಶೀಲ ಅನುವಾದಕರು ಹೆಚ್ಚು ಸಮರ್ಥವಾಗಿ ವಿಶ್ಲೇಷಣೆ ಮಾಡಬಲ್ಲರು. ಭಾಷಾಂತರವನ್ನು ಕುರಿತಂತೆ ಸೈದ್ಧಾಂತಿಕ ಅಧ್ಯಯನ ಬೆಳೆಯಬೇಕಾದರೆ ಈ ಬಗೆಯ ಪ್ರಾಸ್ತಾವಿಕ ಚರ್ಚೆಗಳು ತುಂಬ ಆವಶ್ಯಕ. ಕಡೇ ಪಕ್ಷ ಆಸಕ್ತರ ಅನುಕೂಲಕ್ಕಾಗಿ ನಮ್ಮ ಭಾಷಾಂತರಕಾರರು ಆಯಾ ಪುಸ್ತಕದ ಅನುವಾದಕ್ಕೆ ಸಂಬಂಧಿಸಿದಂತೆ ತಮಗೆ ಎದುರಾಗುವ ವಿಶಿಷ್ಟ ಸಮಸ್ಯೆಗಳನ್ನು ಕುರಿತು ಬೆನ್ನುಪುಟಗಳಲ್ಲಾದರೂ ಚರ್ಚೆಮಾಡುವ ಪದ್ಧತಿಯನ್ನು ರೂಢಿಗೆ ತರುವುದು ಸೂಕ್ತವೆನಿಸುತ್ತದೆ. ಅನುವಾದಕರ ಮನಸ್ಸಿನಲ್ಲಿ ತತ್ಕಾಲಕ್ಕೆ ನಡೆಯುವ ಚಿಂತನಮಂಥನಗಳು ಬರವಣಿಗೆಗೆ ಇಳಿಯಬೇಕು.

ಕೃಷ್ಣಮೂರ್ತಿಯವರು ಭಾಸಕವಿಯ ಮಧ್ಯಮವ್ಯಾಯೋಗ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ ಮತ್ತು ಊರುಭಂಗಗಳನ್ನು ಗದ್ಯಾನುವಾದ ಮಾಡಿದ್ದಾರೆ. ಸಂಸ್ಕೃತ ನಾಟಕಗಳನ್ನು ಮೂಲದಲ್ಲಿರುವಂತೆ ಗದ್ಯಪದ್ಯದ ರೀತಿಯಲ್ಲಿ ಅನುವಾದ ಮಾಡುವುದು ಸೂಕ್ತವೆಂದು ಪರಿಭಾವಿಸಿದ್ದ ಪ್ರಸಕ್ತ ಅನುವಾದಕರು ಈ ಗದ್ಯಾನುವಾದಗಳ ಸಮರ್ಥನೆಯಲ್ಲಿ ಏನೂ ಹೇಳಲು ಹೋಗಿಲ್ಲ. ಅಂದಹಾಗೆ ಪ್ರಕಾಶಕರಾದ ಮಾನ್ಯ ಶಂಕರನಾರಾಯಣರಾಯರು ಮಧ್ಯಮವ್ಯಾಯೋಗದ ಮೊದಲ ಮಾತಿನಲ್ಲಿ ಆಡಿರುವ ಮಾತುಗಳನ್ನು ಗಮನಿಸಬಹುದು. "ಗದ್ಯಪದ್ಯಾತ್ಮಕವಾಗಿರುವ ಸಂಸ್ಕೃತ ನಾಟಕಗಳನ್ನು ಕನ್ನಡದಲ್ಲಿಯೂ ಗದ್ಯಪದ್ಯಾತ್ಮಕವಾಗಿಯೆ—ಅದು ಹಳಗನ್ನಡವಾಗಲಿ ಹೊಸಗನ್ನಡವಾಗಲಿ—ಅನುವಾದ ಮಾಡುವ ರೂಢಿ ಬಂದಿದೆ. ಪದ್ಯಗಳನ್ನು ಓದಿ ಅರ್ಥಮಾಡಿಕೊಳ್ಳುವುದು ಕಷ್ಟ. ಇದಕ್ಕೆ ಪಾಂಡಿತ್ಯವೂ ಕಾಲವೂ ಬೇಕು. ಕಾಲವ್ಯವಧಾನವಿಲ್ಲದೆ, ಸಂಸ್ಕೃತ ನಾಟಕಗಳನ್ನು ಪರಿಚಯ ಮಾಡಿಕೊಳ್ಳಲು ಬಯಸುವವರಿಗೆ ಈ ನಾಟಕಗಳ ಗದ್ಯಾನುವಾದಗಳೇ ಉಪಯುಕ್ತವಾಗುತ್ತವೆ. ಈ ದೃಷ್ಟಿಯನ್ನಿಟ್ಟು

ಕೊಂಡು ಡಾ. ಕೃಷ್ಣಮೂರ್ತಿಗಳಿಂದ ಸಂಸ್ಕೃತದ ಮುಖ್ಯ ನಾಟಕಗಳ ಗದ್ಯಾನುವಾದಗಳನ್ನು ಹೊರತರಲು ಸಂಕಲ್ಪಿಸಿದೆ."

ಈಗ ಕೃಷ್ಣಮೂರ್ತಿಯವರ ಅನುವಾದದ ಒಂದೆರಡು ನಮೂನೆಗಳನ್ನು ನೋಡಬಹುದು. ಶೂದ್ರಕನ 'ಮೃಚ್ಛಕಟಿಕಮ್' ನಾಟಕದಿಂದ ಈ ಪದ್ಯವನ್ನು ಉದಾಹರಿಸೋಣ.

ಉದಯತಿ ಹಿ ಶಶಾಂಕಃ ಕಾಮಿನೀಗಂಡ ಪಾಂಡು
ಗ್ರ್ರಹಗಣಪರಿವಾರೋ ರಾಜಮಾರ್ಗಪ್ರದೀಪಃ ।
ತಿಮಿರನಿಕರ ಮಧ್ಯೋ ರಶ್ಮಯೋ ಯಸ್ಯಗೌರಾಃ
ಸ್ರತಜಲ ಇವ ಪಂಕೇ ಕ್ಷೀರಧಾರಾಃ ಪತಂತಿ ॥

ಈ ಮೂಲವನ್ನು ನಂ. ಸುಬ್ಬಾಶಾಸ್ತ್ರಿಗಳು ತಮ್ಮ 'ಕರ್ಣಾಟಕ ಮೃಚ್ಛಕಟಿಕ ಪ್ರಕರಣಂ'ನಲ್ಲಿ (1949) ಹೀಗೆ ಅನುವಾದಿಸಿದ್ದಾರೆ :

ತರುಣೀ ಕಪೋಲ ಪಾಂಡುರ ।
ಕರನೀಯ ಮೃತಾಂಶುವುದಯಿಕುಂಗಡ ಜೊನ್ನಂ ॥
ಮೆರೆಗುಂ ಕಳ್ತಲೆಯೊಳ್ ಸುರು ।
ಚಿರಮೆನಿಪಾ ಪಾಲಧಾರೆ ಕೆಸರೊಳೆಗೆಸೆವೊಲ್॥

ಇದೇ ಪದ್ಯ ಮುಳಬಾಗಲ ಅವರ 'ಮೃಚ್ಛಕಟಿಕ'ದಲ್ಲಿ (೧೯೫೧) ಈ ರೀತಿ ಬಂದಿದೆ :

ರಾಜಮಾರ್ಗಕ್ಕೆ ದೀವಟಿಗೆಯಂತಿರುವ ಚಂದ್ರನು ಉದಯವನ್ನು ಹೊಂದುತ್ತಿದ್ದಾನೆ. ವಿರಹಿಣಿ ಸ್ತ್ರೀಯ ಗಲ್ಲಗಳಂತೆ ಚಂದ್ರನು ಬಿಳುಪಾಗಿರುತ್ತಾನೆ. ಗ್ರಹನಕ್ಷತ್ರ ಪರಿವಾರವು ಆತನ ಸುತ್ತಲೂ ಮೂಡಿರುತ್ತದೆ. ಮಣ್ಣಿನ ರಾಡೆಯಲ್ಲಿ ಹಾಲಿನ ಧಾರೆಗಳಂತೆ ಕತ್ತಲೆಯಲ್ಲಿ ಶುಭ್ರವಾದ ಚಂದ್ರ ಕಿರಣಗಳು ಪಸರಿಸುತ್ತವೆ.

ನಂ. ಸುಬ್ಬಾಶಾಸ್ತ್ರಿಗಳದು ಕೇವಲ ಭಾವಾನುವಾದವಷ್ಟೆ. 'ರಾಜಮಾರ್ಗಪ್ರದೀಪ' ಎಂಬ ಮಾತು ಅನುವಾದದಲ್ಲಿ ಬಿಟ್ಟುಹೋಗಿದೆ. ಮೂಲದ 'ಗ್ರಹಗಣಪರಿವಾರ'ಕ್ಕೂ ಗ್ರಹಣವಾಗಿದೆ. ಮುಳಬಾಗಲರ ಅನುವಾದ ಮೂಲನಿಷ್ಠವಾಗಿದ್ದರೂ ಕೇವಲ ಗದ್ಯವಾಗಿ ಇರುವುದರಿಂದ ಪದ್ಯದಲ್ಲಿ ಎದ್ದುಕಾಣುವ ಸೌಂದರ್ಯ ಮರೆಯಾಗಿದೆ.

ಕೃಷ್ಣಮೂರ್ತಿಯವರು ಇದೇ ಪದ್ಯವನ್ನು ಹೀಗೆ ಅನುವಾದಿಸಿದ್ದಾರೆ (೧೯೫೮).

ಉದಯಿಸುವನಿದೊ ಚಂದ್ರಂ ಕಾಮಿನೀಗಂಡಶುಭ್ರಂ
ಗ್ರಹಗಣಪರಿವಾರಂ ರಾಜಮಾರ್ಗಪ್ರದೀಪಂ ;
ಬಿಳಿಯ ಕಿರಣಜಾಲಂ ಕಳ್ತಲೊಳ್ ಕೂಡುತೀಗಳ್
ಪೊಳೆವುವು ಹಸಿಮಣ್ಣೊಳ್ ಕ್ಷೀರಧಾರಾಸಮಾನಂ

ಈ ಅನುವಾದ ಮೂಲಕ್ಕೆ ಸಾಕಷ್ಟುಮಟ್ಟಿಗೆ ಹತ್ತಿರವಾಗಿದೆ. ಮೂಲದ ಪ್ರತಿಯೊಂದು ಪದವನ್ನೂ 'ಹಿ', 'ಇವ' ಇಂಥ ರೂಪಗಳನ್ನೂ ಅನುವಾದಿಸುವಲ್ಲಿ ಸಹ ಲೇಖಕರು ಎಚ್ಚರಿಕೆ ವಹಿಸಿದ್ದಾರೆ. ಭಾಷೆ ಸರಳವಾಗಿದ್ದು ಸುಲಭಗ್ರಾಹ್ಯವಾಗಿದೆ.

ಮೂಲದ 'ಇಕಾನಮಿ'ಯನ್ನು ಸಹ ಬಹಳಷ್ಟು ಮಟ್ಟಿಗೆ ಕಾಪಾಡಿಕೊಂಡಿದೆ. ಆದರೆ ಸಂಸ್ಕೃತವನ್ನು ಅನುವಾದ ಮಾಡುವವರಿಗೆಲ್ಲ ಸಮಷ್ಟಿ ಪದಗಳು ಸವಾಲಾಗುವಂತೆ ಇಲ್ಲಿಯೂ 'ಕಾಮಿನೀಗಂಡಶುಭ್ರಂ' 'ಗ್ರಹಣಪರಿವಾರಂ' 'ರಾಜಮಾರ್ಗಪ್ರದೀಪಂ', 'ಕ್ಷೀರಧಾರಾಸಮಾನಂ' ಎಂಬಂಥ ಮಾತುಗಳು ಹೆಚ್ಚುಕಡಮೆ ಹಾಗೆಯೇ ಉಳಿದು ಬಂದಿವೆ, ಹೀಗೇ ಉಳಿಸಿಕೊಂಡರೆ ಕನ್ನಡದ ನಡೆಗೆ ಹೊರೆಯಾಗುತ್ತದೆ ; ಬಿಡಿಸಿ ಬರೆದರೆ ಬಂಧ ಹಾಳಾಗುತ್ತದೆ, ಛಂದಸ್ಸನ್ನು ಹೊಂದಿಸುವುದು ಕಷ್ಟವಾಗುತ್ತದೆ; ಬಿಡಿಸಿ ಬರೆದಷ್ಟೂ ಮೂಲದ ಸೌಂದರ್ಯ ಮುಕ್ಕಾಗುತ್ತದೆ. ಎಲ್ಲ ಅನುವಾದಕರ ಪಾಲಿಗೆ ಇದೊಂದು ಬಗೆಯ ಉಭಯಸಂಕಟ. ಈ ಸಮಸ್ಯೆಯ ಪರಿಹಾರಕ್ಕೆ ಎಂಬಂತೆ ಪ್ರಸಕ್ತ ಅನುವಾದಕರು ಕಡೆಯ ಎರಡು ಪಾದಗಳಲ್ಲಿ ಕನ್ನಡದ ಬಳಕೆಯತ್ತ ಹೆಚ್ಚು ಒಲವು ತೋರಿಸಿರುವುದನ್ನು ಕಾಣಬಹುದು.

ಮೂಲನಾಟಕಕಾರ 'ಪಾಂಡು' ಎಂದು ಬಳಸಿರುವುದನ್ನು ಶಾಸ್ತ್ರಿಗಳು 'ಪಾಂಡು' ಎಂದೂ ಮುಳಬಾಗಲರು 'ಬಿಳುಪು' ಎಂದೂ ಕೃಷ್ಣಮೂರ್ತಿಯವರು 'ಶುಭ್ರಂ' ಎಂದೂ ಬಳಕೆ ಮಾಡಿದ್ದಾರೆ. ನಾಟಕದಲ್ಲಿ ವಸಂತಸೇನೆ ಮೊದಲ ಬಾರಿಗೆ ಆಗಷ್ಟೆ ಚಾರುದತ್ತನನ್ನು ಅಕಸ್ಮಾತ್ತಾಗಿ ಭೇಟಿಯಾಗಿರುತ್ತಾಳೆ. ಅವನ ವಿಚಾರವಾಗಿ ಅವಳು ಕೇಳಿಬಲ್ಲಳು. ಅವನ ಸಜ್ಜನಿಕೆ ತುಂಬಿದ ನಡೆವಳಿಕೆ ಅವಳಲ್ಲಿ ಅನುರಾಗದ ಅಲೆಗಳನ್ನು ಎಬ್ಬಿಸುತ್ತದೆ. ತನ್ನ ಆಭರಣಗಳನ್ನು ಚಾರುದತ್ತನಲ್ಲಿ ನ್ಯಾಸವಾಗಿಟ್ಟು ವಸಂತಸೇನೆ ಅವರ ರಕ್ಷಣೆಯಲ್ಲಿ ತನ್ನ ಮನೆಯತ್ತ ತೆರಳುವಳು. ಆಗ ಎಣ್ಣೆಯಿಲ್ಲದೆ (ಇದು ಚಾರುದತ್ತನ ದಾರಿದ್ರ್ಯವನ್ನು ಸೂಚಿಸುತ್ತದೆ) ದೀಪಗಳು ಹತ್ತದೆ ಹೋದಾಗ ಚಾರುದತ್ತ ಸುತ್ತಲೂ ಹರಡಿದ್ದ ಹುಣ್ಣಿಮೆಯ ಬೆಳಕನ್ನು ನೋಡಿ ಮೇಲ್ಕಂಡಂತೆ ಬಣ್ಣಿಸುತ್ತಾನೆ. ಇಲ್ಲಿ ವಸಂತಸೇನೆಯ ಅನುರಾಗ ಮೊದಲ ಹಂತದ್ದು. ಆದರೆ ಆ ವೇಳೆಗಾಗಲೆ ಅವಳು ಚಾರುದತ್ತನ ವಿಚಾರವಾಗಿ ಕೇಳಿ ಅವನನ್ನು ಪ್ರತ್ಯಕ್ಷವಾಗಿ ನೋಡದೆಯೆ ಏಕಮುಖ ಪ್ರೇಮದಿಂದ ವಿರಹಿಣಿಯಾಗಿರಲೂ ಸಾಧ್ಯ. ಶಾಸ್ತ್ರಿಗಳ 'ಪಾಂಡು' ಎಂಬ ಬಳಕೆ ಅನುವಾದದ ಕಾಲಕ್ಕೆ ಅಷ್ಟಾಗಿ ಅರ್ಥವತ್ತಾಗಿದೆ ಎನಿಸುವುದಿಲ್ಲ. ಮುಳಬಾಗಲರಂತೂ ವಸಂತಸೇನೆ ಅಷ್ಟರಲ್ಲೇ ವಿರಹಿಣಿಯಾಗಿ ಅವಳ ಮುಖ ಬಿಳಿಚಿಕೊಂಡಿತ್ತೆಂದು ಭಾವಿಸಿದರು ಎನಿಸುತ್ತದೆ. ಕೃಷ್ಣಮೂರ್ತಿಯವರಾದರೋ ಆ ಅನುರಾಗದಿಂದ ವಸಂತಸೇನೆಯೆಂಬ ಕಾಮಿನಿಯ ಕೆನ್ನೆಯಲ್ಲಿ ಶುಭ್ರತೆಯನ್ನು ಕಾಣುತ್ತಾರಾದ್ದರಿಂದ ಅದೇ ಹೆಚ್ಚು ಸಮಂಜಸವೆನಿಸುತ್ತದೆ. ಹಾಗೆಯೆ 'ಪಂಕೇಕ್ಷೀರಧಾರಾ ಪತಂತಿ' ಎಂಬುದನ್ನು ಶಾಸ್ತ್ರಿಗಳು 'ಪಾಲಧಾರೆಕೆಸರೊಳಗೆಸೆವೋಲ್' ಎಂದೂ ಮುಳಬಾಗಲರು 'ಮಣ್ಣಿನ ರಾಡಿಯಲ್ಲಿ ಹಾಲಿನ ಧಾರೆಗಳಂತೆ' ಎಂದೂ ಕೃಷ್ಣ-ಮೂರ್ತಿಯವರು 'ಹಸಿಮಣ್ಣೊಳ್ ಕ್ಷೀರಧಾರಾಸಮಾನಂ' ಎಂದೂ ಅನುವಾದಿಸಿದ್ದಾರೆ. 'ಪಂಕ' ಎಂದರೆ ಕೆಸರು ಎಂಬುದೇನೊ ಸರಿಯೆ, ಆದರೆ ಕೆಸರಿನಲ್ಲಿ ಇಲ್ಲವೆ ಮಣ್ಣಿನ ರಾಡಿಯಲ್ಲಿ ಹಾಲಿನ ಧಾರೆ ಹರಿಯುವ ಕಲ್ಪನೆ ಅಷ್ಟು ಸೊಗಸಾಗಿ ಕಾಣುವುದಿಲ್ಲ. ಅಲ್ಲಲ್ಲಿ ದಾರಿಯಲ್ಲಿದ್ದ ಕೆಸರು ತುಂಬಿದ ನೀರಿನ ಮೇಲೆ ಚಂದ್ರನ ಬಿಳಿ ಕಿರಣಗಳು ಬೀಳುತ್ತಿದ್ದು

ದರಿಂದ ಪ್ರತಿಫಲನಗೊಳ್ಳುತ್ತಿದ್ದುದರಿಂದ ಓಡಾಡಲು ಅನುಕೂಲವಾಗಿತ್ತು ಎಂದು ಮೂಲಲೇಖಕನ ಭಾವವಾಗಿದ್ದಿರಬೇಕು. ಈ ಹಿನ್ನೆಲೆಯಲ್ಲಿ ಮೊದಲಿಬ್ಬರು ಅನುವಾದಕರ ಬಳಕೆ ಸೂಕ್ತವೆನಿಸುವುದಿಲ್ಲ, ಕೃಷ್ಣಮೂರ್ತಿಯವರ 'ಹಸಿಮಣ್ಣು' ಎಂಬ ಬಳಕೆ ಸಂದರ್ಭೋಚಿತವಾಗಿದೆ. ಆದರೆ 'ಹಸಿಮಣ್ಣೊಳ್' ಎಂಬ ಅಚ್ಚಕನ್ನಡದ ಬಳಕೆಯೊಡನೆ 'ಕ್ಷೀರಧಾರಾಸಮಾನಂ' ಎಂಬ ಸಂಸ್ಕೃತದ ಕಡುಬು ಮೈಗೆ ಹಿಡಿದೀತೆ ?

ಹೀಗೆಯೆ 'ಪ್ರತಿಮಾ ನಾಟಕ'ದಿಂದ ಒಂದು ಮಾದರಿಯನ್ನು ನೋಡೋಣ. ನಾಟಕದ ಎರಡನೇ ಅಂಕದ ಪ್ರಾರಂಭದಲ್ಲಿ ಸೀತೆ ಮತ್ತು ಲಕ್ಷ್ಮಣರೊಡಗೂಡಿ ಶ್ರೀರಾಮಚಂದ್ರ ವನವಾಸಕ್ಕೆ ತೆರಳಿರುತ್ತಾನೆ. ದಶರಥ ಮಹಾರಾಜ ಪುತ್ರವಿಯೋಗದಿಂದ ಜರ್ಜರಿತನಾಗಿ ಶಿಥಿಲಗೊಂಡು ಮಲಗಿದ್ದಾನೆ. ರಾಮನಿಲ್ಲದೆ ಶೂನ್ಯವಾಗಿ ಕಾಣುತ್ತಿರುವ ಅಯೋಧ್ಯೆಯ ವರ್ಣನೆಯನ್ನು ಕಾಂಚುಕೀಯ ಹೀಗೆ ಮಾಡುತ್ತಿದ್ದಾನೆ:

ನಾಗೇಂದ್ರಾಯವಸಾಭಿಲಾಷ ವಿಮುಖಾಃ ಸಾಸ್ರೇಕ್ಷಣಾ ವಾಜಿನೋ
ಹೇಷಾಶೂನ್ಯಮುಖಾಃ ಸವೃದ್ಧವನಿತಾಬಾಲಾಶ್ಚ ಪೌರಾಜನಾಃ ।
ತ್ಯಕ್ತಾಹಾರಕಥಾಃ ಸುದೀನವದನಾಃ ಕ್ರಂದಂತ ಉಚ್ಚೈರ್ದಿಶಾ
ರಾಮೋಯಾತಿ ಯಯಾ ಸದಾರಸಹಜಸ್ತಾಮೇವ ಪಶ್ಯಂತ್ಯಮೀ ॥

(ಪ್ರತಿಮಾನಾಟಕ ಅಂಕ ೨ ಪದ್ಯ ೨)

ಮೈಸೂರು ಸೀತಾರಾಮಶಾಸ್ತ್ರಿಗಳು ಇದನ್ನು ಹೀಗೆ ಅನುವಾದಿಸಿದ್ದಾರೆ (೧೯೨೯) :

ದ್ವಿರದಂ ವಾಂಛಿಸದಿರ್ಕುಮಾಗುಳುಣಿಸಂ ಬಾಷ್ಪಂಗಳಂ ಸೂಸುತುಂ
ತುರಂಗ ಹೇಷಿತಮಿಲ್ಲದಿರ್ಪುವು ಪುರಸ್ತ್ರೀಬಾಲವೃದ್ಧರ್ಕ್ಕಳಿ
ಲ್ಲರುಮಾಹಾರ ಕಥಾದಿಯಂ ತೊಱೆದು ದೈನ್ಯಂಗೊಂಡಬಿಲ್ಲಾರ್ದುನೋ
ಟ್ಟಿರಿವರ್ ಜಾನಕಿ ಲಕ್ಷ್ಮಣಂ ಬೆರಸು ರಾಮಂ ಪೋಗುವಾ ದಿಕ್ಕನೇ

ಇದೇ ಪದ್ಯ ಕೆ. ಕೃಷ್ಣಮೂರ್ತಿಗಳ ಅನುವಾದದಲ್ಲಿ ಹೀಗೆ ಬರುತ್ತದೆ (೧೯೫೪) :

ಮೇವಿನೊಳಾಸೆಯಿಲ್ಲ ಕರಿಗಳ್ಗೆನೆ ಕಂಬನಿದೋರಿ ವಾಜಿಗಳ್
ಗೈಯವು ಹೇಷೆಯಂ ಪುರಜನರ್ ತರುಣೀಶಿಶುವೃದ್ಧರೆಲ್ಲರುಂ
ಭೋಜನ ವಾರ್ತೆಯಂ ತೊರೆದು ದೀನಮುಖರ್ ದನಿಯೆತ್ತಿ ರೋಧಿಸು
ತ್ತಂಗನೆಸೋದರರ್ವೆರಸು ರಾಘವನೈದುವ ದಿಕ್ಕನೀಕ್ಷಿಪರ್

ಎಸ್. ವಿ. ಪರಮೇಶ್ವರಭಟ್ಟರು ಇವೇ ಸಾಲುಗಳನ್ನು ಹೀಗೆ ಕನ್ನಡಿಸಿದ್ದಾರೆ (೧೯೭೫) :

ಮೇವಿನ ಮೇಲಿನ ಆಸೆಯ ಸಲೆ ತೊರೆದಿವೆ ಪೇರಾನೆಗಳು
ಕೆನೆಯದೆ ನಿಂತಿವೆ ಕಣ್ಣೀರ್ಗರೆಯುತಲಿದೊ ಈ ಕುದುರೆಗಳು
ಮುದುಕರು ಮಕ್ಕಳು ಹೆಂಗಸರೆಲ್ಲರ ಜತೆಯೊಳು ಇದೊ ಪೌರವರು
ಮಾತನು ಆಡದೆ ಉಣ್ಣದೆ ಮಲಗದೆ ಎತ್ತಿದ ದನಿಯೊಳು ಅಳುತಿಹರು
ರಾಮನು ಸೀತಾಲಕ್ಷ್ಮಣಸಹಿತನು ಹೋದಾ ದಿಕ್ಕನೆ ನೋಡುವರು

ಎಂ. ವಾಸುದೇವಭಟ್ಟರ ಗದ್ಯಾನುವಾದದಲ್ಲಿ ಈ ಸಾಲುಗಳು ಹೀಗೆ ಬಂದಿವೆ (೧೯೭೫).

(ಅಯ್ಯೋ ! ರಾಜಕುಮಾರರು ಹೊರಟು ಹೋದಂದಿನಿಂದ ಅಯೋಧ್ಯೆ ಶೂನ್ಯವಾದಂತೆ ತೋರುತ್ತದೆ) ಚತುರಂಗಬಲದ ಆನೆಗಳು ಕಣ್ಣೀರು ಸುರಿಸುತ್ತಾ ಮೇವನ್ನು ತ್ಯಜಿಸಿವೆ. ಕುದುರೆಗಳು ಕೆನೆಯುವುದನ್ನು ಬಿಟ್ಟಿವೆ. ಹೆಂಗಸರು, ಮಕ್ಕಳು, ಮುದುಕರು ಎಂಬ ಭೇದವಿಲ್ಲದೆ ಪೌರರೆಲ್ಲ ಆಹಾರದ ಗೊಡವೆ ಬಿಟ್ಟು ಅಳುಮೋರೆಯಿಂದ ಕೂಗುತ್ತಾ ಇದ್ದಾರೆ. ಪತ್ನೀ ಸೋದರ ಸಹಿತರಾಗಿ ಕುಮಾರರು ಹೊರಟ:ಹೋದ ದಿಕ್ಕನ್ನೇ ನೋಡುತ್ತಿದ್ದಾರೆ.

ಎಲ್. ಬಸವರಾಜು ಅವರು ಒಂದು ರೀತಿಯ ಸಂಕ್ಷೇಪಾನುವಾದ ಅಥವಾ ಸಾರಾನುವಾದ ಮಾಡಿರುವುದರಿಂದ ಕಥೆಯ ಓಟಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ಹಾಗಾಗಿ ಅವರ 'ರಾಮಾಯಣ ನಾಟಕ ತ್ರಿವೇಣಿ'ಯಲ್ಲಿ (೧೯೫೮) ಈ ಪದ್ಯವನ್ನು ಕೈಬಿಟ್ಟಿದ್ದಾರೆ.

ಈ ಅನುವಾದಗಳ ಪೈಕಿ ಇವತ್ತಿಗೆ ಮೈಸೂರು ಸೀತಾರಾಮಶಾಸ್ತ್ರಿಗಳ ವೃತ್ತ ಹಳಗನ್ನಡದಲ್ಲಿದ್ದು ಸಾಮಾನ್ಯ ಓದುಗರಿಗೆ ಸುಲಭಗ್ರಾಹ್ಯವಲ್ಲ. ಅವರ ಅನುವಾದ ಮೂಲನಿಷ್ಠವಾಗಿದೆ. ಆನೆ ಎಂಬುದಕ್ಕೆ ಶಾಸ್ತ್ರಿಗಳು ಪ್ರಾಸಸೌಲಭ್ಯಕ್ಕಾಗಿ 'ದ್ವಿರದ' (ಎರಡು ದಂತಗಳುಳ್ಳದ್ದು) ಎಂಬ ವಿರಳಪದಪ್ರಯೋಗ ಮಾಡಿದ್ದಾರ. ಅವರ 'ಹೇಷಿತ' 'ಆಹಾರಕಥಾ' ಇಂಥವು ಮೂಲದಿಂದ ಯಥಾವತ್ತಾಗಿ ತೆಗೆದುಕೊಂಡ ಪ್ರಯೋಗಗಳು.

ಕೃಷ್ಣಮೂರ್ತಿಯವರ ಭಾಷಾಂತರ ಉಳಿದವುಗಳಿಗಿಂತ ಹೆಚ್ಚು ಅಚ್ಚುಕಟ್ಟಾಗಿದೆ. ಅವರ ಭಾಷಾಶೈಲಿ ಪ್ರವಹನಶೀಲವಾಗಿದೆ, 'ದ್ವಿರದಂವಾಂಛಿಸದಿರ್ಕುವಿಾಗಳುಣಿಸಂ' ಎಂಬ ಶಾಸ್ತ್ರಿಗಳ ಹಳೆಯ ಭಾಷೆ 'ಮೇವಿನೊಳಾಸೆಯಿಲ್ಲ ಕರಿಗಳ್ಗೆ' ಎಂಬಷ್ಟು ಹೊಸತಾಗಿದೆ. 'ಸದಾರ ಸಹಜ' ಎಂಬ ಮೂಲದ ಪ್ರಯೋಗ ಸೀತೆ ಮತ್ತು ಲಕ್ಷ್ಮಣರೊಡನೆ ರಾಮನಿಗಿರುವ ಅನುಬಂಧವನ್ನು ಹೊರಗೆಡುವುವಲ್ಲಿ ಸಮರ್ಥವಾಗಿದೆ. ಕೃಷ್ಣಮೂರ್ತಿಯವರು ಈ ಸೂಕ್ಷ್ಮವನ್ನು 'ಅಂಗನೆ ಸೋದರ' ಎಂದು ಅನುವಾದಿಸಿದರೆ ಶಾಸ್ತ್ರಿಯವರಂ 'ಜಾನಕಿ ಲಕ್ಷ್ಮಣ' ಎಂದೇ ಹೆಸರುಗಳನ್ನು ತೆಗೆದುಕೊಂಡಿದ್ದಾರೆ. ಪರಮೇಶ್ವರ ಭಟ್ಟರು ಸಹ ಹೆಸರುಗಳನ್ನೇ ಹೇಳಿದ್ದಾರೆ.

ಪರಮೇಶ್ವರಭಟ್ಟರ ಅನುವಾದ ಎಂದಿನಂತೆ ಹಿಗ್ಗಿದೆ. ಮೂಲಕ್ಕಿಂತ ಉಬ್ಬಿದರೂ ಅವರ ಅನುವಾದದಲ್ಲಿ ಗೇಯತೆ ಹರಿವು ಕಂಡುಬರುತ್ತದೆ. ಮೊದಲು ಬಂದ ಅನುವಾದಗಳಿಗಿಂತ ಹೆಚ್ಚು ಗ್ರಾಹ್ಯವಾಗುವಂತೆ ಅವರು ಅನುವಾದಿಸುವಲ್ಲಿ ಪ್ರಯತ್ನಶೀಲರಾಗಿದ್ದಾರೆ. ಮೇವು, ಕೆನ್ನೆ, ಕಣ್ಣೆರ್ಗರೆ, ಮುದುಕರು, ಮಕ್ಕಳು, ಹೆಂಗಸರು, ಆಡದೆ, ಉಣ್ಣದೆ ಮಲಗದೆ, ಎತ್ತಿದ ದನಿ ಇಂಥ ಕನ್ನಡ ಪದಗಳ ನೇರ ಪ್ರಯೋಗದಿಂದ ಭಟ್ಟರು ಓದುಗರಿಗೆ ಹೆಚ್ಚು ಹತ್ತಿರವಾಗುತ್ತಾರೆ. ಆದರೆ ಅಗಲವಾದ ಉದ್ದವಾದ ಚೌಕಟ್ಟಿನಲ್ಲಿ ಹರಿಯುವ ಭಟ್ಟರ ಅನುವಾದ ಮೂಲದಲ್ಲಿಲ್ಲದ ಪದಗಳನ್ನು, ಡ್ರೈಡನ್ ಹೇಳುವಂತೆ, ಪರಿಭಾವಿಸಿಕೊಂಡು ಸೇರಿಸಿಕೊಂಡಿದೆ. ವಿಸ್ತಾರದೋಷ ಅವರ ಅನುವಾದವನ್ನು ಉದ್ದಕ್ಕೂ ಕಾಡುತ್ತದೆ. ಆದರೆ ಪ್ರಸಕ್ತಪದ್ಯ ಇಂಥ ದೋಷದಿಂದ ('ಮಾತನು ಆಡದೆ, ಮಲಗದೆ, ಇಂಥವನ್ನು ಹೊರತುಪಡಿಸಿದರೆ) ಬಹುಮಟ್ಟಿಗೆ ಮುಕ್ತವಾಗಿದೆಯೆನಿಸುತ್ತದೆ.

ವಾಸುದೇವಭಟ್ಟರ ಪಾಲಿಗೆ ಗದ್ಯಾನುವಾದ ಸಮಸ್ಯೆಯಾಗಬಾರದಿತ್ತು. ಆದರೂ ಅವರು ಕೆಲವೆಡೆಗಳಲ್ಲಿ ಮೂಲಕ್ಕಿಂತ ಆಜುಬಾಜಿನಲ್ಲಿ ಹೋಗುತ್ತಾರೆ. ಉದಾಹರಣೆಗೆ ಇಲ್ಲಿ 'ನಾಗೇಂದ್ರಾಃ' ಎಂಬುದಕ್ಕೆ 'ಚತುರಂಗಬಲದ ಆನೆಗಳು' ಎಂದಿದ್ದಾರೆ. 'ಅಳು ಮೊರೆಯಿಂದ ಕೂಗುತ್ತಾ ಇದ್ದಾರೆ' ಎಂಬ ವಾಸುದೇವಭಟ್ಟರ ಪ್ರಯೋಗ ಉಚಿತವಾಗಿಲ್ಲ. 'ಅಳುಮೊರೆ' ಅಸಹಾಯಕತೆಯನ್ನು, ಸಪ್ಪೆತನವನ್ನು ತೋರಿಸುತ್ತದೆ. ಈ ಪದ ಜೋಡಣೆ ಸೂಕ್ತವೆನಿಸುವುದಿಲ್ಲ. ಮೂಲದಲ್ಲಿ ಕವಿ ಕುದುರೆಗಳು ಕಣ್ಣಿನಲ್ಲಿ ನೀರುತುಂಬಿ ಕೊಂಡು ಕೆನೆಯುವುದನ್ನು ಬಿಟ್ಟಿವೆ ಎಂದು ಬರೆದಿದ್ದರೆ, ಭಟ್ಟರು ಆನೆಗಳ ಕಣ್ಣಿನಲ್ಲಿ ನೀರು ತರಿಸಿದ್ದಾರೆ ! ಆನೆಗಳೂ ಅತ್ತಿರಬಹುದು. ಯಾರು ಇಲ್ಲ ಅನ್ನುತ್ತಾರೆ ? ಆದರೆ ಅನುವಾದ ಮೂಲದ ಜಾಡಿನಲ್ಲಿ ಸಾಗಬೇಡವೆ !

'ಯಜ್ಞಫಲ' ನಾಟಕದಿಂದ ಒಂದು ಪದ್ಯವನ್ನು ಆಯ್ದು ಕೆ. ಕೃಷ್ಣಮೂರ್ತಿ ಯವರ ಮತ್ತು ಪರಮೇಶ್ವರಭಟ್ಟರ ಅನುವಾದದ ಧೋರಣೆಗಳಲ್ಲಿ ವ್ಯತ್ಯಾಸವನ್ನು ಮನಗಾಣಬಹುದು. ನಾಟಕದ ಮೊದಲನೆ ಅಂಕದಲ್ಲಿ ತನ್ನ ರಾಜ್ಯದಲ್ಲಿ ಶಾಂತ ಪರಿಸ್ಥಿತಿ ನೆಲೆಸಿರುವುದರ ವಿಚಾರವಾಗಿ ದಶರಥ ಮಹಾರಾಜ ಈ ಮಾತುಗಳನ್ನು ಆಡುತ್ತಾನೆ.

ರಾಜ್ಯೇ ನಾಸ್ತಿ ರಿಪುರ್ಭಯಂ ಪ್ರಕೃತಯೋ ಧರ್ಮಾರ್ಥಸಂಪದ್ಯುತಾಃ  
ನಾಭಿದ್ಯಾ ನ ರುಜೋ ನ ಚಾಪಮರಣಂ ನೈವಾತ್ರ ಕಾಶ್ಚಿಚ್ಛುಚಃ ।  
ಕಾಲೇ ವರ್ಷತಿ ವಾರಿದಃ ಕೃಷಿಫಲಂ ನಾಲ್ಪಂ ನ ಚೈವೇತಯ  
ಸ್ತತ್ಸರ್ವಂ ಸುಕೃತೇನ ಮೇಽತ್ರ ವಿಹಿತಂ ದೈವಾನುಕೂಲ್ಯಾತ್ತಥಾ ॥

ಕೃಷ್ಣಮೂರ್ತಿಯವರು ಆಯ್ಕೆ ಮಾಡಿಕೊಂಡಿರುವ ಛಂದಸ್ಸಿನಲ್ಲಿ ಮೂಲವನ್ನು ಯಥಾವತ್ತಾಗಿ ಅಳವಡಿಸುವ ಅನುಕೂಲತೆಗಳಿವೆ. ಹಾಗಾಗಿ ಅವರು ಮೂಲವನ್ನು ನಿಷ್ಠೆಯಿಂದ ನೆರಳಿನಂತೆ ಅನುಸರಿಸಿದ್ದಾರೆ. ಅವರ ಅನುವಾದವನ್ನು ನೋಡಿ.

ರಿಪುಭಯವಿಲ್ಲ ರಾಜ್ಯದೊಳು, ಧರ್ಮಸಮೃದ್ಧಿಸಮೇತರೆಲ್ಲ ಸತ್  
ಪ್ರಜೆಗಳಿನಲ್ಕೆ, ರೋಗವಪಮೃತ್ಯು ಮಹಾದುರಿತಂಗಳಿಲ್ಲ, ಶೋ  
ಕದ ಹೆಸರಿಲ್ಲ, ಮತ್ತೆ ಮಳೆಯುಂ ಬೆಳೆಯುಂ ಸುಖಸಮೃದ್ಧವೀತಿಬಾ  
ಧೆಯು ನೆರಳಿಲ್ಲ, ಪುಣ್ಯವಶದಿಂ ವಿಧಿಯಿಂತನುಕೂಲಮೆನ್ನಯಾ ॥

ಪರಮೇಶ್ವರ ಭಟ್ಟರು ತಮ್ಮದೇ ಆದ ಪರಿಣಾಮವನ್ನು ತರುವ ಉದ್ದೇಶದಿಂದಲೋ ಏನೋ, ಮೊದಲನೆಯ ಸಾಲಿನ ಎರಡನೆಯ ಭಾಗವನ್ನು ಮೊದಲಿಗೂ, ಮೊದಲನೆಯ ಭಾಗವನ್ನು ಅನಂತರವೂ ಬರೆದಿದ್ದಾರೆ. ಛಂದಸ್ಸು ಅವರ ಅನುವಾದದಲ್ಲಿ ಹಿಗ್ಗುವ ಸ್ವಭಾವವನ್ನು ಪಡೆದಿರುವುದರಿಂದ ಸ್ವಲ್ಪ ಒತ್ತುಗಳು, 'ಊರುಗೋಲಿನಂತೆ' ಕೆಲಸ ಮಾಡುವ ಕೆಲವಾರು ಪದಗಳು ನುಸುಳಿವೆ. ಭಟ್ಟರ ಅನುವಾದ ಹೀಗಿದೆ :

ಜನರು ಸಲೆ ಧರ್ಮಾರ್ಥಸಂಪದ್ಭರಿತರಿರ್ಪರು  
ರಾಜ್ಯದೊಳು ರಿಪುಭಯವೊಂದಿನಿಸಿಲ್ಲವು

ಪರರ ಸಿರಿಯುಪಹರಣವಿಲ್ಲವು ರೋಗ ಮೇಣಾಪ
ಮರಣವಿಲ್ಲವು ದುಃಖವೇನೊಂದಿಲ್ಲವು
ಮುಗಿಲು ಕಾಲದೆ ಮಳೆಯು ಕರೆವುದು ಕೃಷಿಯುಫಲಮು
ತ್ರ್ಯಧಿಕಮಿರ್ಪುದು ಈತಿಬಾಧೆಗಳಿಲ್ಲವು
ಇಂತಿದೆಲ್ಲವು ನನ್ನ ಪುಣ್ಯದ ಫಲದಿನೆಂಬೆನು
ದೈವವೂ ಆಹ ನನಗೆ ತಾನನುಕೂಲವು

ಭಟ್ಟರ ಅನುವಾದ ಸೊಗಸಾಗಿದೆ. 'ಮುಗಿಲು ಕಾಲದೆ ಮಳೆಯು ಕರೆವುದು...' ಸೊಗಸಾದ ಭಾವಗೀತೆಯಂತೆ ತೋರುತ್ತದೆ, ಓದಿಸಿಕೊಂಡು ಹೋಗುತ್ತದೆ. ಭಟ್ಟರು ಸ್ವತಃ ಕನ್ನಡದ ಉತ್ತಮ ಕವಿಗಳಲ್ಲೊಬ್ಬರಾಗಿರುವುದರಿಂದ ಕಾವ್ಯತ್ವಕ್ಕೆ, ಗೇಯತೆಗೆ ಪ್ರಾಶಸ್ತ್ಯ ನೀಡಿರುವುದು ಸಮಂಜಸವೇ ಆಗಿದೆ.

ಕೃಷ್ಣಮೂರ್ತಿಯವರ ಗದ್ಯಾನುವಾದಕ್ಕೆ ಉದಾಹರಣೆಯೊಂದನ್ನು ಕೊಟ್ಟು ಈ ಪ್ರಬಂಧವನ್ನು ಮುಕ್ತಾಯ ಮಾಡಬಹುದೆನಿಸುತ್ತದೆ. ಭಾಸಕವಿಯ 'ಊರುಭಂಗ' ನಾಟಕದಲ್ಲಿ ಭೀಮ ದುರ್ಯೋಧನರ ನಡುವೆ ನಡೆಯುತ್ತಿದ್ದ ಘೋರವಾದ ಗದಾ ಯುದ್ಧವನ್ನು ಭಟರು ಬಣ್ಣಿಸುತ್ತಿದ್ದಾರೆ. ಮೂರನೆಯ ಭಟನ ಈ ಮಾತುಗಳನ್ನು ನೋಡಿ.

ಮೂರನೆಯ ಭಟ

ಓ, ಸನ್ನೆಯನ್ನು ಗ್ರಹಿಸಿದ ಭೀಮನು ಸಮಾಧಾನಗೊಂಡಿದ್ದಾನೆ, ಹುಬ್ಬನ್ನು ಗಂಟಿಕ್ಕಿದ್ದಾನೆ; ಹಣೆಯ ಹಳ್ಳದ ಮೇಲೆ ಸೂಸುವ ಬೆವರನ್ನು ಕೈಯಿಂದ ಒರೆಸುತ್ತಿದ್ದಾನೆ; ಭೀಷಣ ಮುಖ ಮುದ್ರೆಯನ್ನು ತಳೆದು ಚಿತ್ರಾಂಗದವೆನಿಸಿದ ತನ್ನ ಗದೆಯನ್ನು ತೋಳಿನಿಂದ ಎತ್ತಿದ್ದಾನೆ. ಕೆಳಗೆ ಬಿದ್ದು ಸೊರಗಿದ ಮಗನನ್ನು ನೋಡಿ ಮರುಗಿದ ವಾಯುದೇವನೆ ಮತ್ತೆ ಬಲವಿತ್ತನೋ ಎನಿಸುವಂತಿದೆ. ಅಂತೂ ಗರ್ಜಿಸುತ್ತ ಮಹಾಸಿಂಹದಂತೆ ಕಣ್ಣರಳಿಸಿ ಭೂಮಿಯಿಂದ ಮತ್ತೆ ಮೇಲಕ್ಕೆ ಎದ್ದು ನಿಲ್ಲುತ್ತಿದ್ದಾನೆ.

ಕೃಷ್ಣಮೂರ್ತಿಯವರ ಚೊಕ್ಕವಾದ ಗದ್ಯಾನುವಾದಕ್ಕೆ ಅವರ ಶಾಸ್ತ್ರಗಂಥಗಳಲ್ಲಿ, ನಾಟಕಗಳಲ್ಲಿ ಹಾಗೂ ವಿಶೇಷವಾಗಿ ಭಾಸನ ಏಕಾಂಕ ನಾಟಕಗಳ ಅನುವಾದಗಳಲ್ಲಿ ವಿಪುಲವಾಗಿ ಉದಾಹರಣೆಗಳನ್ನು ನೋಡಬಹುದು.

# ದಾಸಸಾಹಿತ್ಯಕ್ಕೆ ಧಾರವಾಡ ಜಿಲ್ಲೆಯ ಕೊಡುಗೆ

ಎನ್ಕೆ

೧

ದಾಸಸಾಹಿತ್ಯ ಎಂದೊಡನೆಯೆ ಭಕ್ತಿ, ತ್ಯಾಗ, ವಿರಕ್ತಿಗಳಿಂದ ಕೂಡಿದ ಅವಿರತ ಜೀವನದ ಅಭಿವ್ಯಕ್ತಿಯ ಸಾಹಿತ್ಯ ಎಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ಈ ಭಕ್ತಿ ಹರಿಭಕ್ತಿ, ಈ ದಾಸಸಾಹಿತ್ಯ ಹರಿದಾಸ ಸಾಹಿತ್ಯ ಎಂಬ ಕಲ್ಪನೆ ಎದ್ದು ಕಾಣುತ್ತದೆ. ಹರಿಯ ಭಕ್ತಿ ಎಂದರೆ ಹರನ ದ್ವೇಷ ಎಂಬುದು ಮೂರ್ಖತನವಾದೀತು.

ಭಕ್ತಿದೇವಿ 'ಕರ್ಣಾಟೇ ವೃದ್ಧಿಂಗತಾ' ಎಂದು ಪದ್ಮಪುರಾಣದಲ್ಲಿ ನಾರದರ ಮುಂದೆ ತಂತಾನೆ ಹೇಳಿಕೊಳ್ಳುತ್ತಾಳೆ. ವಸುದೇವ ಪುತ್ರನಾದ ವಾಸುದೇವ ಕೃಷ್ಣನು ಭಾಗವತ ಧರ್ಮವನ್ನು ಸಂಸ್ಥಾಪಿಸಿದ. ಮಹಾಭಾರತವು ಬೆಳೆದಂತೆ ಭಾಗವತ ಧರ್ಮ ಸಂಸ್ಥಾಪಕನಾದ ವಾಸುದೇವನು ಭಗವಾನ್ ವಾಸುದೇವನಾದ. ಮಹಾಭಾರತದ ಶಾಂತಿಪರ್ವದ ನಾರಾಯಣೀಯ ಭಾಗದಲ್ಲಿ ಪರಬ್ರಹ್ಮನೆ ವಿಷ್ಣು, ಕೃಷ್ಣ ವಾಸುದೇವನ ರೂಪದಿಂದ ಕರೆಯಲ್ಪಡುತ್ತಾನೆ ; ಈತನೆ ಸೃಷ್ಟಿ, ಸ್ಥಿತಿ, ಲಯಗಳಿಗೂ ಕಾರಣಕರ್ತ ಎಂದು ನಂಬಿಗೆ ಬೆಳೆಯಿತು.

ಶ್ರೀಕೃಷ್ಣನನ್ನು ಕೊಂಡಾಡಿದ ರುದ್ರಭಟ್ಟ, ಕುಮಾರವ್ಯಾಸ, ಲಕ್ಷ್ಮೀಶ, ಚೌಂಡರಸ, ಚಾಟುವಿಠ್ಠಲ (ನಿತ್ಯಾತ್ಮಯೋಗಿ) ಮೊದಲಾದ ಭಕ್ತಿಕವಿಗಳಲ್ಲಿ ಕುಮಾರವ್ಯಾಸನೇ ಮೇಲುಗೈ. ಕುಮಾರವ್ಯಾಸ ಧಾರವಾಡ ಜಿಲ್ಲೆಯವನು. ಕನ್ನಡ ಆದಿಕವಿ ಪಂಪನೂ ಅಣ್ಣಿಗೇರಿಯಲ್ಲಿ ಹುಟ್ಟಿದ. ಪುಲಿಗೆರೆಯ (ಲಕ್ಷ್ಮೇಶ್ವರದ) ತಿರುಳ್ಗನ್ನಡದಲ್ಲಿ ಕಾವ್ಯ ರಚಿಸಿದ. ಈ ಅಣ್ಣಿಗೇರಿ, ಪುಲಿಗೆರೆಗಳ ಸಂಬಂಧದಿಂದಾಗಿ ಪಂಪನೂ ಧಾರವಾಡ ಜಿಲ್ಲೆಯವನೆ. ಆದರೆ ಪಂಪ ಶ್ರೀಕೃಷ್ಣನನ್ನು ಜೈನ ಧರ್ಮದ ದೃಷ್ಟಿಕೋನದಿಂದ ನೋಡಿದ್ದರಿಂದ ಶ್ರೀಕೃಷ್ಣ ಅವನಿಗೆ ಬರಿಯ ಮಾನವೀಯ ಕೃಷ್ಣನಾಗಿ ಮಾತ್ರ ಕಂಡ. ಕುಮಾರವ್ಯಾಸನಿಗೆ ಇಡಿಯ ಮಹಾಭಾರತವೆ 'ಕೃಷ್ಣನ ಕಥೆ' ಆಯಿತು ; 'ಪದುಮನಾಭನ ಮಹಿಮೆ'ಯಾಯಿತು. ಭಾಗವತಮುಕುಟಮಣಿ ವಿದುರನಂತೆ ಕುಮಾರವ್ಯಾಸನೂ ಹರಿಮಹಿಮೆಯನ್ನು ಬಣ್ಣಿಸುತ್ತ ಹೊಲಬುದಪ್ಪುತ್ತಾನೆ. ವಿದುರನ ಉನ್ಮಾದಕಭಕ್ತಿ, ದ್ರೌಪದಿಯ ಆರ್ತಭಕ್ತಿ, ಭೀಷ್ಮರ ವೀರಭಕ್ತಿ, ಪಾರ್ಥನ ಮಧುರಭಕ್ತಿ, ದುರ್ಯೋಧನನ ವೈರಭಕ್ತಿ ಕುಮಾರವ್ಯಾಸನ ದರ್ಶನದಲ್ಲಿ ಒಂದೊಂದು ಮಾದರಿಯ ಭಕ್ತಿಯ ಚಿತ್ರ. ಸ್ವತಃ ಕುಮಾರವ್ಯಾಸನೇ ಪರಮಭಾಗವತೋತ್ತಮ, ಮಹಾಭಾರತ ಕಥೆಯ ನಾಯಕ

ಶ್ರೀಕೃಷ್ಣನ ಅವತಾರಕಾರ್ಯವೆಂದರೆ. ಭಾಗವತಧರ್ಮವನ್ನು ಪ್ರತಿಷ್ಠಾಪಿಸುವುದು. ಇದಕ್ಕಾಗಿಯೆ ಕುರುಕ್ಷೇತ್ರ ಯುದ್ಧ: ಕುರುಕ್ಷೇತ್ರವನ್ನು ಭಕ್ತಿಯ ಧರ್ಮಕ್ಷೇತ್ರವಾಗಿ ಪರಿವರ್ತಿಸಿ, ಕುಮಾರವ್ಯಾಸನ ಕೃಷ್ಣ ದ್ವಾರಕೆಗೆ ತೆರಳುತ್ತಾನೆ.

ಕುಮಾರವ್ಯಾಸ ದಾಸಶ್ರೇಷ್ಠ, ಭಾಗವತಶ್ರೇಷ್ಠ, ಭಕ್ತಕವಿಶ್ರೇಷ್ಠ. ಆದುದರಿಂದ ಒಂದು ರೀತಿ ಕನ್ನಡ ದಾಸಸಾಹಿತ್ಯದ ಕಾರಣಕರ್ತನೆಂದೂ ಹೇಳಬಹುದು. ಆತನ ಭಾಮಿನೀಷಟ್ಪದಿಯ ಝೇಂಕಾರ, ಭಕ್ತಿಯ ಓಂಕಾರನಾದದಿಂದ ತರಂಗಿಸುತ್ತದೆ. ಕೀರ್ತನೆಯ ಲಯ-ಛಂದಗಳಲ್ಲಿ ಆತ ಕೃತಿರಚನೆ ಮಾಡಿರದಿದ್ದರೂ, ಆತನ ಷಟ್ಪದಿ ಕಾವ್ಯವನ್ನು ಗಮಕದ ಬೆಡಗಿನಲ್ಲಿ ಭಕ್ತಿಸ್ವಾರಸ್ಯವಾಗಿ ಹೇಳಬಹುದಾಗಿದೆ. ಆದುದರಿಂದ ನರಹರಿತೀರ್ಥರಿಗೂ ತೀರ್ಥರೂಪನಾಗಿದ್ದಾನೆ, ಈ ಗದುಗಿನ ವೀರ ನಾರಾಯಣನ ಕಿಂಕರ. ಕುಮಾರವ್ಯಾಸ ಧಾರವಾಡ ಜಿಲ್ಲೆಯವನು ಎಂಬ ದೃಷ್ಟಿಯಿಂದ ದಾಸರ ಭಕ್ತಿಯ ಸಾಹಿತ್ಯದ ಪ್ರಾದುರ್ಭಾವಕ್ಕೆ ಧಾರವಾಡ ಜಿಲ್ಲೆಯ ಗದುಗೇ ಗಂಗೋತ್ರಿ ಎಂದು ಹೇಳಬಹುದಾಗಿದೆ.

ಭಗವಂತನೆಂಬ ಒಂದು ಪರಮಪೂಜ್ಯವಸ್ತುವಿನ ಕಲ್ಪನೆ ಮೂಡಿದಾಗಲೇ ಭಕ್ತನೆಂಬ ಪೂಜಕನೂ ನಿರ್ಮಾಣವಾದ; ಭಾಗವತಧರ್ಮ ಅವತಾರ ಮಾಡಿತು. ವ್ಯಾಸಮಹರ್ಷಿಗಳ ಪುತ್ರ ಭಾಗವತಪುರಾಣಕರ್ತ ಶುಕಾಚಾರ್ಯರು ಭಾಗವತಕೀರ್ತನೆ ಮಾಡಿದಾಗ ಪ್ರಹ್ಲಾದನು ತಾಳವನ್ನೂ, ಉದ್ಧವನು ಕಾಂಸ್ಯವನ್ನೂ, ನಾರದರು ವೀಣೆಯನ್ನೂ, ಇಂದ್ರನು ಮೃದಂಗವನ್ನೂ ಬಾರಿಸಿದರಂತೆ; ಎಂದರೆ ಭಕ್ತವೃಂದದ ಒಂದು ವಾದ್ಯ ವೃಂದವೆ ನಡೆಯಿತೆನ್ನಬೇಕು. ಅರ್ಜುನನೇ ರಾಗಾಲಾಪನೆ ಮಾಡಿದನಂತೆ. ಸನಕಾದಿಗಳು ಕರತಾಡನಪೂರ್ವಕ ಜಯಘೋಷ ಮಾಡಿದರಂತೆ. ಭಾಗವತ ಭಕ್ತಿಯ ಪುರಾಣ ನಿದರ್ಶನ ಇದು.

ಕುಮಾರವ್ಯಾಸನ ಮೇಲೆ 'ಭಾಗವತ ಪುರಾಣ'ದ ಪ್ರಭಾವವೂ 'ಹರಿವಂಶದ' ಪ್ರಭಾವವೂ ಶ್ರೀಕೃಷ್ಣನ ಮಾಹಾತ್ಮ್ಯವನ್ನು ಚಿತ್ರಿಸುವಲ್ಲಿ ಸಾಕಷ್ಟು ಉಂಟಾಗಿದೆ. ತಾನು ವೀರನಾರಾಯಣನ ಕಿಂಕರ, ತನ್ನ ಕಾವ್ಯವು ತುಳಸಿಯ ಉದಕದಂತೆ ಎಂದು ನುಡಿಯುವ ಉಕ್ತಿಗಳಲ್ಲಿ ದಾಸ್ಯಭಾವ, ಭಕ್ತಿಭಾವಗಳ ಪಾರಮ್ಯವನ್ನು ಕಾಣುತ್ತೇವೆ. ಅಂತೂ ಕುಮಾರವ್ಯಾಸನು ದಾಸಸಾಹಿತ್ಯದ ಮೈಲುಗಲ್ಲುಗಳನ್ನು ನೆಡಲು ದಾರಿ ಹಾಕಿಕೊಟ್ಟನು.

ನಿಜ; ವಿಜಾಪುರ, ರಾಯಚೂರು, ಬಳ್ಳಾರಿ ಜಿಲೆಗಳಷ್ಟು ಬಹುಸಂಖ್ಯೆಯ ಹರಿದಾಸರು ಧಾರವಾಡದಲ್ಲಿ ಆಗಿಹೋಗಿರಲಿಕ್ಕಿಲ್ಲ. ಆದರೆ ಆಗಿಹೋದ ಕೆಲವೇ ದಾಸರು ಬಿಟ್ಟುಹೋದ ಕೀರ್ತನೆಗಳು, ಕೊಟ್ಟುಹೋದ ಕಾಣ್ಕೆಗಳು, ಇಟ್ಟುಹೋದ ಗುರುತುಗಳು ಮೆಟ್ಟಿಹೋದ ದಾರಿಯ ಹೆಜ್ಜೆಗಳು ವೈಶಿಷ್ಟ್ಯಪೂರ್ಣವಾಗಿವೆ. ಇದಕ್ಕೆ ದೃಷ್ಟಾಂತ ಕೊಡಬೇಕಾದರೆ ಒಬ್ಬ ಕನಕದಾಸರು, ಒಬ್ಬ ಕರ್ಜಗಿಯ ದಾಸರು, ಒಬ್ಬ ಹೆಳವನ ಕಟ್ಟೆಯ ಗಿರಿಯಮ್ಮ, ಒಬ್ಬ ಧಾರವಾಡದ ಅಣ್ಣಿಯ್ಯದಾಸರು ಸಾಕು; ಇನ್ನೊಬ್ಬ ಧಾರವಾಡದ

ಶಾಂತಕವಿಗಳು ಸಾಕು. ಇವರ ಹೊರತಾಗಿ ಇನ್ನೂ ಕೆಲವರಿದ್ದಾರೆ. ಅವರಲ್ಲಿ ಅಡವೀ ದಾಸರು, ಮಾರಪ್ಪದಾಸರು, ಬೇಲೂರು ವೆಂಕಟಸುಬ್ಬದಾಸರು, ಹುಯಿಲಗೋಳ ನಾರಾಯಣರಾಯರು, ನಾಟಕ ಕಂಪನಿಯ ವಾಮನ್‌ರಾವ್ ಮಾಸ್ತರರು, ಗುತ್ತಲದ ಹನುಮೇಶವಿಠ್ಠಲರು, ಸುಬ್ಬುದಾಸರು–ಅವರ ಶಿಷ್ಯರು–ಇವರೆಲ್ಲ ಧಾರವಾಡ ಜಿಲ್ಲೆಯವರೆ ಆಗಿದ್ದಾರೆ. ಇವರಲ್ಲಿ ಹಲವಾರು ಕೀರ್ತನಕಾರರು ಕಾಲೊಳಗೆ ಗೆಜ್ಜೆಕಟ್ಟಿ, ಕೈಯಲ್ಲಿ ತಂಬೂರಿ ಹಿಡಿದು, ಗೋಪಾಳಬುಟ್ಟಿ ಧರಿಸಿ, ಶಾಟಿಯ ಮುಂಡಾಸ ಸುತ್ತಿ ದಾಸರಾಗಿ ಮನೆಮನೆ ಸಂಚರಿಸಿದವರಲ್ಲ, ಆದರೆ ಮನೆಯಲ್ಲಿದ್ದುಕೊಂಡೇ ಕಾವ್ಯಾರ್ಥದ ಕೀರ್ತನೆಗಳನ್ನು ರಚಿಸಿ ತಮ್ಮಿಷ್ಟಕ್ಕೆ ತಾವು ಹಾಡಿಕೊಂಡವರು. ಅಣ್ಣಯ್ಯದಾಸರು, ಶಾಂತ ಕವಿಗಳು ಮಾತ್ರ ದಾಸರಂತೆ ತಂಬೂರಿ ಧರಿಸಿ, ಅದನ್ನು ಕೈಯಿಂದ ಮೀಟಿ, ದಾಸಯ್ಯನಂತೆ ಕೀರ್ತನೆಗಳನ್ನು ಹಾಡಿದವರು.

೨

ಕನಕದಾಸರದು ಒಂದು ಸಂಕೀರ್ಣ ವ್ಯಕ್ತಿತ್ವ. ಧಾರವಾಡ ಜಿಲ್ಲೆಯ ಬಾಡ ಗ್ರಾಮದಲ್ಲಿ ಜನಿಸಿದರು. ಕಾಗಿನೆಲೆಯಲ್ಲಿ ಸಮಾಧಿ ಹೊಂದಿದರು. ವಿಜಯನಗರದ ಕೃಷ್ಣದೇವರಾಯನ (೧೫೦೯–೧೫೨೯) ರಾಜವೈಭವವನ್ನು ಕಣ್ಣಾರೆನೋಡಿ, ಹಾಡಿದರು! ರಕ್ಕಸತಂಗಡಗಿ ಕಾಳಗದಲ್ಲಿ ವಿಜಯನಗರದ ವೈಭವದ ಶಿಖರವು ಉರುಳಿ, ರಾಜ್ಯವು ನುಚ್ಚುನೂರಾದುದನ್ನು ಕಂಡರು. ಎಂದರೆ ಕನಕದಾಸರು ವಿಜಯನಗರರಾಜ್ಯವು ಅಳಿದ ಮೇಲೆಯೂ ಒಂದು ತಪದ ಕಾಲವನ್ನು ಬದುಕಿದವರು. ಪುರಂದರದಾಸರು ಹಂಪೆಯಲ್ಲಿ ೧೫೬೪ರಲ್ಲಿ ಸಮಾಧಿ ಹೊಂದಿದ ದುರಂತಕ್ಕೂ ಸಾಕ್ಷಿಯಾಗಿ ನಿಂತವರು ಕನಕದಾಸರು. ಆಮೇಲೆ ಪುರಂದರರು ಮೀಟಿದ ತಂಬೂರಿಯನ್ನು ತಿರುಪತಿಯ ತಿಮ್ಮಪ್ಪನ ಅಡಿಗಳಿಗೆ ಅರ್ಪಿಸಿದರೆಂದೂ ತಿಳಿಯುತ್ತದೆ. ಪುರಂದರದಾಸರು ೧೪೮೪ರಲ್ಲಿ ಜನಿಸಿ ೧೫೬೪ರಲ್ಲಿ ಸಮಾಧಿ ಹೊಂದಿದರೆ, ಕನಕದಾಸರು ಸುಮಾರು ೧೪೮೮ರಲ್ಲಿ ಜನಿಸಿ, ೧೫೭೮ರಲ್ಲಿ ಸಮಾಧಿ ಹೊಂದಿದರು ಎಂದು ತಿಳಿಯುವುದು ಸಮಂಜಸವೆನಿಸುತ್ತದೆ. ಬಿ. ಶಿವಮೂರ್ತಿ ಶಾಸ್ತ್ರಿಯವರು ಇತರರೊಡನೆ ತಾವು ಸಂಪಾದಿಸಿದ 'ಕನಕದಾಸರ ಕೀರ್ತನೆಗಳು' ಮುನ್ನುಡಿಯಲ್ಲಿ ಇವರ ಜೀವಿತ ಕಾಲ ೧೫೦೮–೧೬೦೬ ಎಂದಿರುವುದಕ್ಕೆ ಆಧಾರ ಕೊಟ್ಟಿಲ್ಲ. ಪುರಂದರದಾಸರು ೮೦ ವರ್ಷ ಕಾಲ ಬಾಳಿದರೆ, ಕನಕದಾಸರು ೯೦ ವರ್ಷ ಕಾಲ ಬಾಳಿದರು. ಅರ್ಥಾತ್ ಪುರಂದರದಾಸರ ತರುವಾಯ ಹತ್ತು ವರ್ಷ ಕಾಲ ಬದುಕಿ ಸಮಕಾಲೀನ ದೌರ್ಭಾಗ್ಯವನ್ನು ಕಣ್ಣಾರೆ ನೋಡಬೇಕಾಯಿತು.

ಕನಕದಾಸರ ವ್ಯಕ್ತಿತ್ವದಂತೆ ಅವರ ಜೀವನವೂ ಒಂದು ಸಂಕೀರ್ಣತೆಯ ಮೊತ್ತವೇ ಆಗಿದೆ. ಸಂಕೀರ್ಣತೆಯಷ್ಟೆ ಸಂದಿಗ್ಧತೆಯ ಮೊತ್ತವೂ ಆಗಿದೆ. ಇವರೇನು ಕುರುಬರೊ, ಬೇಡರೊ, ಇಲ್ಲವೆ ನಾಯಕರೊ ಅಥವಾ ಕಬ್ಬಿಲಿಗರೊ ಸ್ಪಷ್ಟವಾಗಿಲ್ಲ. "ನಾವು ಕುರುಬರು ನಮ್ಮ ದೇವರು ಬೀರಯ್ಯ। ಕಾವ ನಮ್ಮಜ್ಜ ನರಕುರಿ ಹಿಂಡುಗಳ" ಎಂದು ಕನಕದಾಸರೇ ಹೇಳಿಕೊಂಡಿದ್ದರೂ 'ನರಕುರಿ ಹಿಂಡುಗಳ ಕಾವ ನಮ್ಮಜ್ಜ' ಎಂದು ರೂಪಕಾರ್ಥದಲ್ಲಿ

ಹೇಳಿರುವುದರಿಂದ ದಾಸರು ಸ್ವತಃ ಕುರುಬರಾಗಿರಲಿಲ್ಲ ಎಂಬ ಒಂದು ಅಭಿಪ್ರಾಯವೂ ಇದೆ. ಆದರೂ ಇನ್ನೊಂದೆಡೆಯಲ್ಲಿ ಕನಕದಾಸರೇ ಹೀಗೆ ಹೇಳುತ್ತಾರೆ :

> ನಾರದರ ಅಂಶವೆ ಪುರಂದರ ದಾಸರು, ನಾ ಯಮನು ಮುಂದೆ ಮಾಂಡವ್ಯ
> ಶಾಪದಿಂದ ಎರಡು ಜನ್ಮ ಶೂದ್ರಯೋನಿಯಲ್ಲಿ ಪೊಕ್ಕೆನು, ಒಂದು ಜನುಮ
> ವಿದುರನಾಗಿ, ಕುರುಬರ ಕುಲದಲ್ಲೀಗ ಪುಟ್ಟಿದೆ. ಎನಗೆ ಈ ಜನ್ಮದಲಿ ಮುಕುತಿ ಎಂತೆಂಬೆ ॥

"ದಾಸರ ನಿಂದಿಸಬೇಡವೊ ಮನುಜಾ ಹರಿದಾಸರ ನಿಂದಿಸಬೇಡ" ಎಂಬ ಪುರಂದರ ಕೀರ್ತನೆಯೊಂದರಲ್ಲಿ "ಕಬ್ಬಿಲಿಗ ಕನಕದಾಸರು" ಎಂಬ ಮಾತೊಂದು ಬರುತ್ತದೆ. ಇದರಿಂದ ಕನಕದಾಸರು ಕಬ್ಬಿಲಿಗ ಎಂದರೆ ಬೆಸ್ತರವ, ನಾವಿಕ, ಬೇಡ ಎಂದೂ ಕಿಟ್ಟೆಲ್ ಕೋಶದಲ್ಲಿ ಅರ್ಥ ಕೊಟ್ಟಿದೆ. ಆದರೆ 'ದಾಸರ ನಿಂದಿಸಬೇಡವೊ ಮನುಜ' ಎಂಬ ಪದವು ಪುರಂದರದಾಸರ ಸ್ವಂತ ರಚನೆ ಹೌದೆ ಅಲ್ಲವೆ ಎಂಬ ಉದ್ಗಾರವೂ ಇದೆ. ಕನಕದಾಸರ ಜಾತಿ ಯಾವುದೇ ಇರಲಿ–

'ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ ?'– ಎಂದು ಪ್ರಶ್ನಿಸುವ ರೀತಿಯಲ್ಲಿಯೇ ಮಡಿವಂತರಿಗೊಂದು ಸವಾಲು ಇದೆ.

> ಹರಿಯೆ ಸರ್ವೋತ್ತಮ ಹರಿಯೆ ಸರ್ವೇಶ್ವರ ಹರಿಮಯವೆಲ್ಲವೆನುತ ತಿಳಿದು ।
> ಸಿರಿಕಾಗಿನೆಲೆಯಾದಿ ಕೇಶವರಾಯನ ಚರಣಕಮಲವ ಕೀರ್ತಿಸುವನೆ ಕುಲಜ ॥

ಎಂದು ಮಾಧ್ವತತ್ವ ಪ್ರಣಾಳಿಯ ಮೇರೆಗೆ ಹರಿಸರ್ವೋತ್ತಮತ್ವವನ್ನು ತಿಳಿದವನೆ ಕುಲಜ ಎಂದು ಸಾರಿದ್ದಾರೆ. 'ಆತ್ಮ ಯಾವ ಕುಲ ?' ಎಂದು ಕನಕದಾಸರು ಎತ್ತಿದ ಪ್ರಶ್ನೆಗೆ ಸಂಪ್ರದಾಯಶಿಷ್ಟರು ಉತ್ತರಿಸಬೇಕು.

> ಆತ್ಮ ಯಾವ ಕುಲ ಜೀವ ಯಾವ ಕುಲ ತತ್ವೇಂದ್ರಿಯಗಳ ಕುಲ ಪೇಳಿರಯ್ಯ ।
> ಆತ್ಮಾಂತರಾತ್ಮ ನೆಲೆಯಾದಿಕೇಶವ ಆತನೊಲಿದ ಮೇಲೆ ಯಾತರ ಕುಲವಯ್ಯ ॥

ಎಂತಹ ಎತ್ತರದ ನಿಲುವು ಇದು ! ಒಬ್ಬ ನರಗುರಿ ನುಡಿವ ಮಾತೆ ಇದು ? ಕನಕದಾಸರು ಸಂಸ್ಕಾರವಂತ ಜೀವ, ವಿಕಾಸಗೊಂಡ ಜೀವ ಎಂದು ಹೇಳಬೇಕು.

ಕನಕನ ತಂದೆ-ತಾಯಿ ಬೀರಪ್ಪ-ಬಚ್ಚಮ್ಮ. ಇವರು ಹೆಚ್ಚು ಸಂಸ್ಕಾರ ಪಡೆದ ದಂಪತಿಗಳಾಗಿದ್ದಿರಬೇಕು. ಬಾಡ ಗ್ರಾಮದ ಒಬ್ಬ ದಣ್ಣಾಯಕ ಶೌರ್ಯದಷ್ಟೆ ಸಿರಿಯಲ್ಲಿಯೂ ದೈವಾನುಗ್ರಹೀತನಾದವನಾಗಿರಬೇಕು. ಆ ದೈವಾನುಗ್ರಹದಿಂದಲೆ ಪುತ್ರಸಂತಾನ ಪ್ರಾಪ್ತಿಯೂ ಆಯಿತು. ತಿಮ್ಮಪ್ಪನೆಂದು ನಾಮಕರಣವೂ ಆಯಿತು. ತಿಮ್ಮಪ್ಪ ದೊಡ್ಡವನಾದ. ತಂದೆಯಂತೆ ದಣ್ಣಾಯಕನೂ ಆದ, ಆತನ ತರುವಾಯ. ಆದರೆ ಈ ಶಿಶುವಿಗೆ ಯಾವಾಗಲೂ 'ನೀನು ದಾಸನಾಗು' ಎಂದು ಶ್ರೀಹರಿಯ ಕರೆ ! ಆದರೂ ಚೆಲುವೆಯಾದ ಹೆಂಡತಿ, ವಾತ್ಸಲ್ಯದ ಮಗ, ಕೈಯಲ್ಲಿ ಒಡೆತನ ; ಸಂಸಾರ ವಿಮುಖತೆಗೆ ಅವಕಾಶವಿಲ್ಲ. ಕಾವ್ಯಸಾಹಿತ್ಯದತ್ತ ವಿಶೇಷ ಒಲವು. ಒಮ್ಮೆ ಭೂಮಿ ಅಗೆಸುತ್ತಿದ್ದಾಗ ಹೊನ್ನ ಕೊಪ್ಪರಿಗೆ ಸಿಕ್ಕು ಧನಿಕನಾದ, ಕನಕನಾದ ತಿಮ್ಮಪ್ಪ. ದೇವರ

ಪ್ರೇರಣೆ. ದೊರೆತ ದ್ರವ್ಯವೆಲ್ಲ ಬಡಬಗ್ಗರಿಗೆ ದಾನಮಾಡಿಬಿಟ್ಟ. ಅದು ತನ್ನ ಗಳಿಕೆಯ ಧನವಲ್ಲ, ಅದರ ಮೇಲೆ ತನಗೆ ಒಡೆತನವಿಲ್ಲ ಎಂದು ಭಾವಿಸಿದನು. ಕನಕಪ್ರಾಪ್ತಿಯಿಂದಾಗಿ ಅಂದು ತಿಮ್ಮಪ್ಪನಿಗೆ 'ಕನಕ'ನೆಂದು ರೂಢನಾಮವಾಯಿತು.

ಬದುಕಿನಲ್ಲಿ ಒಂದು ತೀವ್ರವಾದ ತಿರುವು ಬರುವವರೆಗೂ ಹರಿದಾಸರಲ್ಲಿ ವೈರಾಗ್ಯ ಭಾವ ಮೂಡುವುದಿಲ್ಲ. ಆಗ ಭಕ್ತಿ ಸೂಸುತ್ತದೆ. ತಂಬೂರಿ ಕಾವ್ಯವನ್ನು ಹಾಡುತ್ತದೆ. ಕನಕನ ತಂದೆ ಕಣ್ಮರೆಯಾದ. ತಾಯಿ ಅಸುನೀಗಿದಳು. ಚೆಲುವೆಯಾದ ಹೆಂಡತಿಯೂ ಕೈಬಿಟ್ಟಳು. ಇದ್ದ ಒಬ್ಬ ಸುಂದರ ಮಗನೂ ಸ್ವರ್ಗಸ್ಥನಾದ. ಇಷ್ಟೆ ಅಲ್ಲ. ಪರದಾಳಿಯ ಹೊಡೆತಕ್ಕೆ ಮರಣಾಂತಿಕ ಗಾಯ. ದೈವೀಕೃಪೆಯಿಂದಲೇ ಚೇತರಿಸಿಕೊಂಡಿದ್ದ ಕನಕ; ಹರಿದಾಸನಾಗಿ ಹೊಸ ಜನ್ಮ ಪಡೆದ. ಹರಿಯ ಮಹಿಮೆಯನ್ನು ಹಾಡಿದ :

ರಣದೊಳಗೆ ದೇಹವ ಖಂಡತುಂಡವ ಮಾಡಿ
ರಣವನುತ್ತರಿಸಿ ಮರಣ ತೋರಿದೆ ॥

ಪ್ರಣವಗೋಚರನಾಗಿ ಲೀಲೆಯಿಂದಲಿ ಬಂದು
ಹೆಣಕೆ ಪ್ರಾಣವನು ತಂದಿತ್ತ ಮಹಾತುಮನೆ ॥

ತೂಂತಿಕೊಂಡೆವು ಬೆನ್ನಲೊಸರುವ ರೋಹಿತಕೆ
ಅಂತ್ಯಮುಖಿ ಗ್ರಹಗಳನ್ನು ಕಳಚಿ ಬಿಸುಟೆ ॥

ಅಲ್ಲಿಂದ ಭಗವಂತನಿಗೆ ತನ್ನನ್ನೇ ತಾನು ಅರ್ಪಿಸಿಕೊಂಡು ಕನಕನಾಯಕ ಕನಕದಾಸನಾದ: ಕೀರ್ತನೆಗಳನ್ನು ರಚಿಸಿದ, ಕಾವ್ಯಗಳನ್ನು ರಚಿಸಿದ, 'ಮುಂಡಿಗೆ'ಗಳನ್ನು ನಿರ್ಮಿಸಿದ. ಇದು ಕನಕದಾಸರ ಕಾವ್ಯ-ಕೀರ್ತನ ಸಂಕೀರ್ಣತೆ. ಹರಿದಾಸರು ಕನಕದಾಸರಂತೆ ಕಾವ್ಯಗಳನ್ನು ರಚಿಸಿರುವುದು ದುರ್ಲಭ. 'ಮೋಹನ ತರಂಗಿಣಿ' ಬಹುಶಃ ಕನಕರು ಕನಕದಾಸರಾಗುವ ಮೊದಲಿನ ಅಥವಾ ದಾಸರಾದ ಹೊಸತರಲ್ಲಿ ರಚಿತವಾದ ಕಾವ್ಯವಿರಬೇಕು. ಉಷಾ ಅನಿರುದ್ಧರ ಭಾಗವತ ಪೌರಾಣಿಕ ಪವಾಡಮಯ ವೈವಾಹಿಕ ಕಥೆಯನ್ನು ನಿರೂಪಿಸಿರುವ ಈ ಸಾಂಗತ್ಯಕಾವ್ಯ ವಿಜಯನಗರದ ಕೃಷ್ಣದೇವರಾಯನ ಕಾಲದ ರಾಜವೈಭವಕ್ಕೆ ದರ್ಪಣ ಹಿಡಿದಂತಿದೆ. ಆಗಿನ ಅರಮನೆ, ಕರುಮಾಡಗಳು, ರತ್ನರಾಶಿಗಳನ್ನಿಟ್ಟು ಮಾರುವ ಬೀದಿಯ ಅಂಗಡಿಗಳು, ಸಾಮಾಜಿಕ ಜೀವನದ ರೀತಿ-ನೀತಿ ಪ್ರತಿಚಿತ್ರಿತವಾಗಿವೆ. ಕನ್ನಡ ಕಾವ್ಯ ಪರಂಪರೆಗೆ ಇದು ಕನಕದಾಸರ ಒಂದು ವಿಶಿಷ್ಟ ಕೊಡುಗೆ. ಪೌರಾಣಿಕತೆಯಲ್ಲಿ ಐತಿಹಾಸಿಕ ಪ್ರಜ್ಞೆಯನ್ನು ತೋರಿದ ಕನಕದಾಸರ ಪ್ರತಿಭೆಗೆ 'ಮೋಹನ ತರಂಗಿಣಿ' ಸಮುಚಿತ ನಿದರ್ಶನವಾಗಿದೆ. ಇವರ 'ಹರಿಭಕ್ತಿಸಾರ' ಭಕ್ತಿರಸದ ಒಂದು ಶತಕ ಕಾವ್ಯವಾಗಿದೆ. ಇದು ಭಾಮಿನೀ ಷಟ್ಪದಿಯಲ್ಲಿದೆ. 'ನಳಚರಿತ್ರೆ' ಜನಪ್ರಿಯ ಭಾಮಿನೀ ಷಟ್ಪದಿಯ ಕಾವ್ಯ. ಆದರೆ 'ರಾಮಧಾನ್ಯಚರಿತೆ' ಕನಕದಾಸರ ಅಪೂರ್ವ ಕಲ್ಪನೆಯ ಒಂದು ರೂಪಕಾತ್ಮಕ (allegory) ಕಾವ್ಯವಾಗಿದೆ. ಈ ರೂಪಕದ ಮೂಲಕ ಕವಿ ಬಡವರ-ಸಿರಿವಂತರ ತೌಲನಿಕ ಚಿತ್ರಣವನ್ನು ಚಿತ್ತಾಕರ್ಷಕವಾಗಿ ನೀಡಿದ್ದಾನೆ. ನೆಲ್ಲು ಸಿರಿವಂತರ ಧಾನ್ಯ. ನರೆದಲಿಗ (ರಾಗಿ) ಬಡವರ ಆಹಾರ.

ಈ ಬಡವರ ಧಾನ್ಯವನ್ನು ಬೆಡಗಿನಿಂದ ಎತ್ತಿ ಹಿಡಿಯುವ ಕನಕದಾಸರ ಕಲ್ಪನಾ ವೈಖರಿಗೆ ತಲೆದೂಗುತ್ತೇವೆ. ನೆಲ್ಲು-ಸರೆದಲೆಗರ ವಾಗ್ವಾದದ ವ್ಯಾಜದಲ್ಲಿ ಕನಕದಾಸರು ಸಮಾಜ ಸಮತಾವಾದದ ಭಾವನೆಯನ್ನು, ಕೆಳವರ್ಗದವರ ಕೈವಾಡವನ್ನು ಚಾತುರ್ಯ ದಿಂದ ಚಿತ್ರಿಸಿದ್ದಾರೆ.

ಕನಕದಾಸರೇ ದಾಸಪರಂಪರೆಗೆ ಧಾರವಾಡ ಜಿಲ್ಲೆ ಅರ್ಪಿಸಿದ ಸಂಕೀರ್ಣ, ಸಮನ್ವಯ ತತ್ವಗಳ ಪ್ರತೀಕದ ಮಹಾಪ್ರಸಾದ! ಕುರುಬರ ಡೊಳ್ಳಿನ ಪದಗಳ ಗ್ರಾಮ್ಯಶೈಲಿಯ ಕೀರ್ತನೆಗಳಿಂದ, ಗ್ರಂಥಸ್ಥ ಶೈಲಿಯ ಸಾಂಪ್ರದಾಯಿಕ ಆದರೂ ಸಮಕಾಲೀನ ಐತಿಹಾಸಿಕ ಪ್ರಜ್ಞೆಯ ಕಾವ್ಯದವರೆಗೆ, ಕನಕರ ಸಂಕೀರ್ಣತೆಯ ವ್ಯಾಪ್ತಿ ಇದೆ. 'ದೇವಿ ನಮ್ಮ ದೇವರು ಬಂದಾರು ಬನ್ನಿರಿ' ಎಂದು ಡೊಳ್ಳಿನ ಪದದ ಧಾಟಿಯಲ್ಲಿ ಹಾಡಿದ ದಾಸರು, 'ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ' ಎಂದು ಅನುಭಾವದ ಒಗಟುಹಾಡನ್ನೂ ಹಾಡಿದ್ದಾರೆ.

ಕನಕದಾಸರ ಸಮನ್ವಯತೆಯನ್ನು ಅವರ ನಿಲುವಿನಲ್ಲಿಯೆ ಕಾಣಬಹುದಾಗಿದೆ. ರಾಮಾನುಜೀಯ ಮತದ ತಿರುಮಲೆ ತಾತಾಚಾರ್ಯರ ಅನುಗ್ರಹ ಪಡೆದು ರಾಮಾನುಜೀಯ ಮತದಲ್ಲಿ ರಚನೆಗಳನ್ನು ಮಾಡಿದ್ದಾರೆ. 'ಆರು ಬಲ್ಲರು ಹರಿಹರರ ಮಹಿಮೆಯನು' ಎಂದು ಹಾಡಿ, 'ಸದಾಶಿವನ ದಾಸನಾಗಬೇಕು' ಎಂದು ಬೋಧಿಸಿ ದ್ದಾರೆ. ಉಡುಪಿಯ ಶ್ರೀಕೃಷ್ಣನ ದೇವಾಲಯದ ಜಾತೀಯ ಗೋಡೆಯನ್ನು ತಮ್ಮ ಕ್ಷ-ಕಿರಣದ ತೀಕ್ಷ್ಣ ದೃಷ್ಟಿಯಿಂದ ಭೇದಿಸಿ, ಬೋಧಿಸಿ, ತಿರುಪತಿ ತಿಮ್ಮಪ್ಪನ ಕೃಪೆಯನ್ನು ಯಾಚಿಸಿ, ಹನುಮ–ಭೀಮ–ಮಧ್ವರ ಅವತಾರ ಮಹಾತ್ಮೆಯನ್ನು ಶ್ರೀಮನ್ಮಧ್ವಾಚಾರ್ಯರಲ್ಲಿ ಮೊಳವಿಸಿ, ಕೀರ್ತನೆಮಾಡಿ, ಕನಕದಾಸರು ತಮ್ಮ ವಿಶಾಲ ಮನೋಭಾವ,. ಸಮದೃಷ್ಟಿ, ಸಮಷ್ಟಿದರ್ಶನಗಳ ಒಂದು ವೈಶಿಷ್ಟ್ಯವನ್ನು ಮೆರೆದಿದ್ದಾರೆ. "ಕನಕದಾಸರು ಶೈವ, ಶ್ರೀವೈಷ್ಣವ ಮತ್ತು ದ್ವೈತ ಮತಗಳಲ್ಲಿ ಯಾವುದೊಂದನ್ನು ತಿರಸ್ಕರಿಸದೆ ಎಲ್ಲವುಗಳಲ್ಲಿಯ ಭಕ್ತಿತತ್ವ ಮಾತ್ರ ಒಪ್ಪಿ ಅದಕ್ಕೆ ಅಳವಡಿಸಿಕೊಂಡರೆಂಬುದು ಸತ್ಯ. ಈ ಮೂರು ಮತತತ್ವಗಳಲ್ಲಿಯ ಉತ್ತಮಾಂಶಗಳಿಂದ ಸಂಸ್ಕಾರಗೊಂಡು ಪರಿಪಕ್ವವ್ಯಕ್ತಿತ್ವ ಪಡೆದಿದ್ದ ದಾಸರು, ಪರಮ ಭಾಗವತರು, ಮತಸಮನ್ವಯ ಸಾಧನೆಯ ಗುರಿ ಹೊಂದಿದ್ದ ಮಹಾನುಭಾವರು ಎಂದು ಧಾರಳವಾಗಿ ಹೇಳಬಹುದು"—ಎಂದು ಜ್ಯೋತಿ ಹೊಸೂರು ಅವರು ನುಡಿದಿರುವುದು ಮನನೀಯವಾಗಿದೆ. (ಕನಕಕಿರಣ ದ್ವಿತೀಯ ಮುದ್ರಣ. ಪು. ೪೯.), ಕನಕದಾಸರು ಪರಮಭಾಗವತರು, ಅಷ್ಟೇ ಅಲ್ಲ ಪರಮಭಾಗವತ ಕಲ್ಪತರು. ಇವರು ತಾತಾಚಾರ್ಯರಿಂದಾಗಲಿ ವ್ಯಾಸರಾಯರಿಂದಾಗಲಿ ಯಾವುದೇ ಅಂಕಿತವನ್ನು ಸ್ವೀಕರಿಸಿರಲಿಲ್ಲ. 'ಏತ್ಮಲ' ಎಂಬ ಮುದ್ರಿಕೆ ಇವರ ಕೀರ್ತನೆ ಗಳಿಗಿಲ್ಲ.

ಇಂದ್ರಿಯಾಣಿ ಪರಾಣ್ಯಾಹುಃ ಇಂದ್ರಿಯೇಭ್ಯಃ ಪರಂಮನಃ।
ಮನಸಸ್ತು ಪರಾಬುದ್ಧಿಃ ಯೋ ಬುದ್ಧೇಃ ಪರತಸ್ತು ಸಃ॥

ಎಂಬ ಗೀತಾಶ್ಲೋಕವನ್ನು—"ನಯನ ಬುದ್ಧಿಯು ಒಳಗೊ ಬುದ್ಧಿ ನಯನದ ಒಳಗೊ ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ" ಎಂಬ ಚರಣಗಳೊಡನೆ ಹೋಲಿಸಿ ನೋಡಬಹುದು. 'ಬಯಲು ಆಲಯದೊಳಗೋ' ಎಂಬ ಮಾತು ನಿಜ, ಏಕೆಂದರೆ ದೇಹದಲ್ಲಿ ಬಯಲು ಆಕಾರವಿದೆ. ಬಯಲಲ್ಲಿ ಈ ಪಾರ್ಥಿವ ದೇಹವಿದೆ. ಬಯಲು, ದೇಹದ ಆಲಯ ಎರಡೂ ಆತನಲ್ಲಿ. 'ನೀ ಮಾಯೆಯೊಳಗೊ' ಇದು ನಿಜ. ಆ ದೈವೀಮಾಯೆಯೆ ಈ ಬಾಹ್ಯಸೃಷ್ಟಿಯ ಸೃಜನಶಕ್ತಿ. ಇಂತಹ ಉದಾತ್ತತತ್ವ, ಒಬ್ಬ ಕನಕದಾಸರ ಅಂತಃಕರಣದಿಂದ ಆವಿಷ್ಕಾರಗೊಳ್ಳಬೇಕಾದರೆ, ಆ ಜೀವಸಂಸ್ಕಾರ ಯಾವ ಒಂದು ಉನ್ನತ ಮಟ್ಟದ್ದಾಗಿರಬೇಕು!

ಕನಕದಾಸರ ಕೀರ್ತನೆಗಳ ತುಂಬ ಇಂತಹ ಉದಾತ್ತತತ್ವ, ತಿರುಳಾಗಿ ಹುರುಳಾಗಿ ಅರಳಿರುವುದನ್ನು ನೋಡಬಹುದು, ಆದರೆ ಸಾಮಾಜಿಕ ಸಮಕಾಲೀನ ಚಿತ್ರಣದಲ್ಲಿ, ಡಂಭಾಚಾರವನ್ನು ವಿಡಂಬಿಸುವಲ್ಲಿ ಕನಕದಾಸರ ಕನ್ನಡ ಗ್ರಾಮ್ಯಭಾಷೆಯ ಬಳಕೆಯ ಶೈಲಿಯನ್ನು ತಳೆಯುತ್ತದೆ. "ಎಲ್ಲಾರು ಮಾಡೋದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ" "ಹ್ಯಾಂಗ ನೀ ದಾಸನಾದಿ ಪ್ರಾಣಿ", "ಕುಣಿದು ಹರಿಯ ಮುಂದೆ ಮಣಿದು ಸಜ್ಜನರ ಪದಕೆ ಅಣಿಮಾದ್ಯಷ್ಟಸಿದ್ಧಿ ಕೈಗೊಳ್ಳದವನಾಗಿ" ಎಂಬ ಕೀರ್ತನೆಯಾಗಲಿ "ಡೊಂಕು ಬಾಲದ ನಾಯಕರೆ ನೀವೆಲ್ಲೆಲ್ಲೂಟಾ ಮಾಡಿದಿರಿ" ಎಂಬ ಕೀರ್ತನೆಯಾಗಲಿ ದಾಸರ ಸಾಮಾಜಿಕ ವಿಡಂಬನೆಗೆ ಉದಾರಣೆಯಾಗಿವೆ. "ತಲ್ಲಣಿಸದಿರು ಕಂಡ್ಯ, ತಾಳು ಮನವೆ", 'ಕುಲಕುಲವೆಂದು ಬಡಿದಾಡದಿರಿ', 'ಬಾಗಿಲನು ತೆರೆದಿ ಸೇವೆಯನು ಕೊಡು', 'ಬದುದೆನು ಬದುಕಿದೆನು' ಮೊದಲಾದ ಕೀರ್ತನೆಗಳು ಜನಪ್ರಿಯವಾಗಿವೆ. 'ಆಸೆ ತೊರೆದ ಮೇಲೆ ದಾಸನಾಗುತ್ತಾನೆ' ಎಂಬಂತೆ ಕನಕದಾಸರು ಬದುಕಿನಲ್ಲಿ ತನ್ನದು ತನ್ನವರು ಎಂಬವರನ್ನು ಕಳೆದುಕೊಂಡ ಮೇಲೆ 'ತನು ನಿನ್ನದು ಜೀವನ ನಿನ್ನದು ಸ್ವಾಮಿ' ಎಂಬ ಸಮರ್ಪಣಭಾವವನ್ನು ಬಾಳಿನುದ್ದಕ್ಕೂ ಬದುಕಿದರು. 'ಬಾಯಿ ನಾರಿದ ಮೇಲೆ ಏಕಾಂತವೆ! ತಾಯಿ ತೀರಿದ ಮೇಲೆ ತೌರಾಸೆಯೆ?' 'ದಾಸ ದಾಸರ ಮನೆಯ ದಾಸಿಯು', 'ಗೊಲ್ಲರ ಮನೆಯ ಪೊಕ್ಕು ಗುಲ್ಲು ಮಾಡುವುದೇನೆಲ', 'ಬೈ ಬೈ ತನಕ ಊಟದ ಕೆಲಸ ಉಂಡ ಮೇಲೆ ಶಯನ', 'ಹೇಗಿದ್ದು ಹೇಗಾದೆಯೊ ಆತ್ಮ', 'ನನ್ನವ್ವ ಕಲ್ಲ ಬಿಡೆ ಈ ಧೋತ್ರವ ಚನ್ನಾಗಿ ಒಗೆಯಬೇಕು'—ಎಂದೆಲ್ಲ ಕೀರ್ತನಗಳಲ್ಲಿ ದಾಸರ ಸೂಕ್ಷ್ಮ ನಿರೀಕ್ಷಣ ಬುದ್ಧಿ, ಅಯೋಗ್ಯರನ್ನು ಕಂಡು 'ಅಯ್ಯೋ ಪಾಪ' ಎನ್ನುವ ಮರುಕ ಮಾರ್ಮಿಕವಾಗಿ ಮೂಡಿ ಬಂದಿದೆ.

ದಾಸರ 'ಮುಂಡಿಗೆ'ಗಳೆಂದು ಖ್ಯಾತವಾದ ರಚನೆಗಳಲ್ಲಿ ಪ್ರತಿಮೆ ಪ್ರತೀಕಗಳನ್ನು ಸಾಂಕೇತಿಕ ಆಧ್ಯಾತ್ಮಿಕ ಅರ್ಥವೈಚಿತ್ರ್ಯಗಳನ್ನು ಕಾಣುತ್ತೇವೆ. 'ಒಂದೇ ಹೂವಿಗೆ ಒಂದೇ ನಾಳವು ಚಂದಮಾಮಾ! ತುಂಬಿ ನಾಳ ತುರಿ ತುಂಬಿ ಭಾನುಪ್ರಭೆ ಚಂದಮಾಮಾ' ಎಂಬ ಉಕ್ತಿವೈಚಿತ್ರ್ಯ, 'ಹಲವು ಜೀವನವ ಒಂದೆಲೆ ನುಂಗಿತು! ನೆಲೆಯಾದಿಕೇಶವ ರಾಯ ಬಲ್ಲನೀ ಬೆಡಗ'. ಎಂಬ ಸಾಲಿನ ಸ್ವಾರಸ್ಯ, 'ಕೆಂಪು ಮೂಗಿನ ಪಕ್ಷಿ ತಂಪಿನೊಳಕಾ

ವುದು'. 'ಪಕ್ಷಿ ಬಂದಿದೆ ಗಂಡಭೇರುಂಡ' ತನ್ನ ಕುಕ್ಷಿಯೊಳೀ ಕೇಳು ಜಗವನಿಂಬಿಟ್ಟಂಥ' 'ಮರವ ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ' ಎಂದೆಲ್ಲ ಕೀರ್ತನೆಗಳ ಮುಡಿಗೆಯನ್ನು ಬಿಡಿಸಿ ಅರ್ಥ ಮಾಡಿದಾಗ ಮುಂಡಿಗೆಯು ತಿಂದ ಸ್ವಾದ ಸವಿಯುತ್ತೇವೆ.

'ಹುತ್ತದೊಳಾಡುವ ಸರ್ಪ ಮತ್ತಗಜವ ನುಂಗಿತು
ಉತ್ತರ ದಿಶೆಯೊಳೂ ಬೆಳುದಿಂಗಳಾಯಿತಯ್ಯ'

ಇಲ್ಲಿ ಹುತ್ತದೊಳಾಡುವ ಸರ್ಪವೆಂದರೆ ಕುಂಡಲಿನಿ, ಮತ್ತಗಜವೆಂದರೆ ಮದ ತುಂಬಿದ ಅಹಂಕಾರಭಾವನೆ, ಉತ್ತರದಿಶೆಯೆಂದರೆ ವೃದ್ಧಾಪ್ಯ. ವೃದ್ಧಾಪ್ಯದಲ್ಲಿ 'ಬುದ್ಧಿ ಮಾಗಿ ಬಿಸಿಲು ಬೆಳ್ದಿಂಗಳಾದಂತೆ. ಅದರಂತೆಯೆ, 'ಅಂಗಡಿಬೀದಿಯೊಳೊಂದು ಆಕಳ ಕರು ನುಂಗಿತು' ! ಎಂಬಲ್ಲಿ, ಆಕಳು ಎಂದರೆ ಜೀವ, ಕರು ಎಂದರೆ ತನ್ನ ಮರಿಯನ್ನೆ ತಿಂದು ಬದುಕುವ ಹಸಿವು ಎಂದರ್ಥ ಮಾಡಬಹುದು. ಮುಂಡಿಗೆಯು ಮುಟ್ಟಿದ ಮುಷ್ಟಿಯನ್ನು ಬಿಚ್ಚಿದಾಗ ಮೂರು ಲೋಕಗಳ ಸೃಷ್ಟಿ ಸ್ಥಿತಿ ಲಯಗಳ ಸಂಕೇತಾರ್ಥ, ಸಂಖ್ಯೆಯಾಗಿ ಹೊಳೆದೀತು, ಪ್ರತಿಮೆಯ ಮೂಲಕ ಹೊಳೆದೀತು.

ಧಾರವಾಡ ಜಿಲ್ಲೆಯ ಪ್ರಥಮ ಕಾಣ್ಕೆ ಕನಕದಾಸರು. ಅವರ ಪ್ರತಿಭಾಸೂರ್ಯನ ಪ್ರತಿಬಿಂಬವನ್ನು ಮಾತ್ರ ನೀರಿನಲ್ಲಿ ಕಂಡಿದ್ದೇವಷ್ಟೆ. ಅವರ ವ್ಯಕ್ತಿತ್ವ, ಬುದ್ಧಿ, ಬದುಕು, ಎಲ್ಲವೂ ಸಂಕೀರ್ಣಮಯ. ಅವರ ದೃಷ್ಟಿ, ಅವರ ನಿಲವು, ಅವರ ಸದ್ಭಾವ ಎಲ್ಲವೂ ಸಮನ್ವಯಮಯ.

೩

ಕನಕದಾಸರ ತರುವಾಯ, ಸಂತ ಮಹಿಳೆಯಾಗಿ 'ಕರ್ನಾಟಕದ ಮೀರಾಬಾಯಿ' ಎಂದು ಹೆಸರಾದ ಧಾರವಾಡ ಜಿಲ್ಲೆಯ ರಾಣೇಬೆನ್ನೂರು ಮಳೆಬೆನ್ನೂರಗಳ ಹೆಳವನಕಟ್ಟಿ ಗಿರಿಯಮ್ಮ ನಮ್ಮ ಗಮನ ಸೆಳೆಯುತ್ತಾಳೆ. ಸುಮಾರು ಎರಡುನೂರು ವರ್ಷಗಳ ಗಿರಿಯಮ್ಮನು ಒಬ್ಬ ಪವಾಡವ್ಯಕ್ತಿಯಾಗಿ, ಕವಯಿತ್ರಿಯಾಗಿ, ಭಕ್ತಿಗೀತೆಗಳ ರಚಯಿತ ಳಾಗಿ ನಾಡಿನಲ್ಲಿ ತನ್ನ ಕೀರ್ತಿ ಬೀರಿದಳು. ಗಿರಿಯಮ್ಮನ ಬಗ್ಗೆ ಪವಾಡಾತ್ಮಕ ಕಥೆಗಳಿವೆ.

ಈಕೆ ಮಳೆಬೆನ್ನೂರು ಬಳಿ ಇರುವ ಹೆಳವನಕಟ್ಟೆಯ ರಂಗನಾಥ ದೇವಾಲಯಕ್ಕೆ ನಿತ್ಯವೂ ನಡೆದುಕೊಳ್ಳುವಳು ; ರಂಗನಾಥಸ್ವಾಮಿಗೆ ಅನನ್ಯ ಭಕ್ತಿಯಿಂದ ಸೇವೆಸಲ್ಲಿಸು ವಳು. ಇದರಿಂದಾಗಿ ಕಾವ್ಯ, ಕೀರ್ತನೆಗಳನ್ನು ರಚಿಸುವಂಥ ಸಿದ್ಧಿ ಗಿರಿಯಮ್ಮನಿಗೆ ಪ್ರಾಪ್ತವಾಯಿತು. ರಂಗನಾಥಸ್ವಾಮಿಯ ಸಾಕ್ಷಾತ್ಕಾರವನ್ನು ಪಡೆದ ಪುಣ್ಯಜೀವಿ ಗಿರಿಯಮ್ಮ. ಆಕೆಯ ಪುಣ್ಯಪ್ರಸಾದದಿಂದ, ವರದಹಸ್ತದಿಂದ ಕುರುಡನಿಗೆ ಕಣ್ಣು ಬಂದ ವೆಂದೂ ಹೆಳವನಿಗೆ ಕಾಲು ಬಂದವೆಂದೂ ಪ್ರತೀತಿ. ಗಿರಿಯಮ್ಮ ಒಡನುಡಿದದ್ದೆಲ್ಲ ಘಟಿಸುತ್ತಿದ್ದಿತೆಂದೂ ಹೇಳುತ್ತಾರೆ.

ಗಿರಿಯಮ್ಮನಿಗೆ ದೈವೀಪ್ರೇರಣೆಯುಂಟಾಗಿ ಕಾವ್ಯರಚನೆಯ ಶಕ್ತಿಯುಂಟಾಗಲು, ಸಾಂಗತ್ಯದ ಛಂದಸ್ಸಿನಲ್ಲಿ ಚಂದ್ರಹಾಸನಕಥೆ, ಕಾಳಿಯಮರ್ದನ ಕಥೆಗಳನ್ನು ರಚಿಸಿದಳು.

ಮುಂದೆ ನಾಡಿನಲ್ಲೆಲ್ಲಾ ಈಕೆಯ ಸಾಂಗತ್ಯಗಳು ಶ್ರದ್ಧಾವಂತ ಮಹಿಳೆಯರ ಬಾಯಲ್ಲಿ ನಲಿದಾಡಿದವು.

ಗಿರಿಯಮ್ಮ ಕರ್ನಾಟಕದ ಮೀರಾಬಾಯಿ ಎನ್ನುವುದಕ್ಕೆ ಒಂದು ಕಾರಣವಿದೆ. ರಾಣೇಬೆನ್ನೂರಿನ ಗಿರಿಯಮ್ಮನನ್ನು ಮಳೇಬೆನ್ನೂರಿನ ಶಾನುಭೋಗರ ಮನೆಗೆ ಕೊಟ್ಟಿತ್ತು. ಆದರೆ ಗಿರಿಯಮ್ಮ ಪತಿಯ ಅಂಗಸ್ಪರ್ಶ ಕೂಡ ಇಲ್ಲದೆ ದೈವಭಕ್ತಳಾಗಿ ರಂಗನಾಥನ ಸೇವೆ ಧ್ಯಾನಗಳಲ್ಲಿ ತೊಡಗಿರುವಳು. ಅತ್ತೆಮನೆಯಲ್ಲಿ ಅಡಿಗೆ ಕೆಲಸಮಾಡಿ, ಓರಗಿತ್ತಿಯರ ಹಂಗಿಗೆ ಗುರಿಯಾಗಿ, ಅನೇಕ ವಿಧವಾಗಿ ಅವಸ್ಥೆಪಟ್ಟರೂ ಆಕೆ ಎಲ್ಲವನ್ನೂ ತಾಳ್ಮೆಯಿಂದ ಸಹಿಸಿಕೊಂಡು ರಂಗನಾಥನ ಧ್ಯಾನದಲ್ಲಿ ಲೀನಳಾಗುವಳು. ಈಕೆಯ ಸಿದ್ಧಿಸಾಧನೆಗಳು ಲೋಕಕಲ್ಯಾಣಕಾರಿಯಾಗಿ ವರ್ಧಿಸುತ್ತಿರುವುದನ್ನು ಇದೇ ಓರಗಿತ್ತಿಯರು ಕಣ್ಣೆದುರಿಗೇ ಕಾಣುತ್ತಿದ್ದರೂ ಆಕೆಯನ್ನು ಆಡಿಕೊಳ್ಳುವುದನ್ನು ಮಾತ್ರ ನಿಲ್ಲಿಸಲಿಲ್ಲ. ಗಂಡ ಶಾನುಭೋಗ ತಿಪ್ಪರಸನು ಮಾತ್ರ ಗಿರಿಯಮ್ಮನನ್ನು ಅವಳ ಪಾಡಿಗೆ ಬಿಟ್ಟುಬಿಟ್ಟನಷ್ಟೆ ಅಲ್ಲ, ಆಕೆ ವಂದ್ಯಳೆಂಬ ಭಾವನೆಯಿಂದ ಆಕೆಯನ್ನು ವಂದಿಸಿ, ಗೌರವದಿಂದ ನಡೆಸಿಕೊಳ್ಳುತ್ತಿದ್ದ. ಸುಮತೀಂದ್ರ ಸ್ವಾಮಿಗಳು ಗಿರಿಯಮ್ಮನ ಹಸ್ತದಲ್ಲಿ ಶಂಖಚಕ್ರಗಳಿದ್ದುದ್ದನ್ನು ಕಂಡು "ಶ್ರೀಹರಿಯೆ ಚಕ್ರಾಂಕನ ಮಾಡಿರುವ ನಿನ್ನಂಥವಳಿಗೆ ತಪ್ತಮುದ್ರಾಧಾರಣ ಕೊಡುವ ಅಧಿಕಾರ ನಮಗೆಲ್ಲಿಯದು" ಎಂದು ಉದ್ಗಾರ ತೆಗೆದರಂತೆ.

ಗಿರಿಯಮ್ಮನು ತನ್ನ ಪುಣ್ಯವನ್ನೆಲ್ಲ ಜನತೆಯ ಕ್ಷೇಮಕ್ಕಾಗಿ ಧಾರೆಯೆರೆದಳೆಂಬ ಸಂಗತಿಯನ್ನು ಆಕೆಯ ರಚನೆಗಳಿಂದಲೆ ತಿಳಿಯಬಹುದಾಗಿದೆ. ಒಮ್ಮೆ ಮಳೆಯಿಲ್ಲದೆ ಜನ ಕಂಗೆಟ್ಟು ಗಿರಿಯಮ್ಮನಲ್ಲಿ ಮೊರೆಯಿಟ್ಟಾಗ ಆಕೆ ಭಕ್ತಿಯಿಂದ ಗೀತವೊಂದನ್ನು ರಚಿಸಿ, ಪರಮಾತ್ಮನಲ್ಲಿ ಮೊರೆಯಿಟ್ಟು ಹಾಡಿದಾಗ ಮಳೆ ಧಾರೆಗಟ್ಟು ಸುರಿಯಿತಂತೆ. ಆ ಗೀತ

ಮಳೆಯ ದಯಮಾಡೋ ರಂಗ ನಿಮ್ಮ
ಕರುಣ ತಪ್ಪಿದರೆ ಉಳಿಯದು ಲೋಕ ॥ ಪ ॥

—ಎಂದು ಮೊದಲಾಗುತ್ತದೆ.

ಈ ಸರಳ ರಚನೆಯು ರಸಾಲಭಾವ ಹೃದಯವನ್ನು ಮುಟ್ಟುವಂಥ ಸ್ಪರ್ಶದ ಶಕ್ತಿಯನ್ನು ಪಡೆದಿದೆ. "ನಿಮ್ಮ ಕರುಣ ತಪ್ಪಿದರೆ ಉಳಿಯದು ಲೋಕ" ಎಂದು "ಇಂದು ಪುರಂದರಗೆ ಹೇಳಿ ವೃಷ್ಟಿಯ ತರಿಸೋ" ಎಂದು ಬೇಡಿಕೊಳ್ಳುವ ಬಗೆ ಎಷ್ಟು ಉತ್ಕಟ ಭಕ್ತಿಯನ್ನು ಅಭಿವ್ಯಕ್ತಪಡಿಸುತ್ತದೆ! ಗಿರಿಯಮ್ಮನ ಪವಾಡ ಕಾರ್ಯಗಳು ಏನೇ ಇರಲಿ, ಅದರಲ್ಲಿ ಎಷ್ಟೇ ಉತ್ಪ್ರೇಕ್ಷೆ ಇರಲಿ ಆದರೆ ಎರಡುನೂರು ವರ್ಷಗಳ ಹಿಂದೆ ಮುಂದೆ ರಾಣೇಬೆನ್ನೂರು ಮಳೇಬೆನ್ನೂರಿನ ಹೆಳವನಕಟ್ಟೆಯ ಒಬ್ಬ ಶಾಲಾಶಿಕ್ಷಣವಿಲ್ಲದಂತಹ ಮಹಿಳೆ ಇಂತಹ ಲಲಿತವಾದ ಕನ್ನಡದಲ್ಲಿ ಕೃತಿಗಳನ್ನು ರಚಿಸಿದಳೆಂಬ ನಿಜಸಂಗತಿಯೆ ಒಂದು ಪವಾಡ ಎಂದು ನಾವು ಹೇಳಬಹುದಾಗಿದೆ. ಹದಿನೆಂಟನೆಯ ಶತಮಾನದ ಕನ್ನಡ ಸಾಹಿತ್ಯವೆಂದರೆ ಕಗ್ಗತ್ತಲೆಯ ಕಾಲ ಎಂದ ಸಾಹಿತ್ಯ ಚರಿತ್ರಕಾರರು ಇತಿಹಾಸ ಬರೆದಾಗ, ಹೆಳವನಕಟ್ಟೆಯ ಗಿರಿಯಮ್ಮನಂಥ ಒಬ್ಬ ಕವಯಿತ್ರಿ, ಸಂತ ಮಹಿಳೆ, ಸಾಧ್ವೀಕೀರ್ತನಕಾರ್ತಿ ಇಂತಹ

ಕಾವ್ಯಸಾಹಿತ್ಯವನ್ನು, ಭಕ್ತಿಸಾಹಿತ್ಯವನ್ನು, ಅಸಮರ್ಥ್ಯವಾದ ರಸರಚನೆಗಳನ್ನು, ಹೇಗೆ ನಿರ್ಮಿಸಲು ಸಮರ್ಥಳಾದಳು ? ಈಕೆ ಕಲಿತುದೆಲ್ಲಿ, ಕಾವ್ಯಾಭ್ಯಾಸಮಾಡಿದ್ದೆಲ್ಲಿ, ಸಾಂಗತ್ಯ ರಚನೆಯಲ್ಲಿ ಹೊನ್ನಮ್ಮನ 'ಹದಿಬದೆಯ ಧರ್ಮ' ಓದಿ ಪ್ರೇರಣೆಪಡೆದು 'ಚಂದ್ರಹಾಸ' ಕಥೆಯನ್ನು ನಿರೂಪಿಸಿದಳೇ ಎಂಬ ಪ್ರಶ್ನೆಗಳು ಸಂದಿಗ್ಧವಾಗಿಯೇ ಉಳಿದಿರುವಾಗ, ಇದಕ್ಕೆ ನಾವು ಪವಾಡ ಎನ್ನಬೇಕು. ಇದಕ್ಕೆ ನಾವು ರಂಗನಾಥನ ಸಾಕ್ಷಾತ್ಕಾರ ಎನ್ನಬೇಕು. ಇದಕ್ಕೆ ನಾವು 'ಕುಜಿತ್ರೋದದೆಯಂ ಕಾವ್ಯಪ್ರಯೋಗಪರಿಣತಮತಿ' ಎನ್ನಬೇಕು.

ಒಮ್ಮೆ ರಂಗನಾಥ ಸ್ವಾಮಿಯ ಮೂರ್ತಿಯ ಬೆರಳಿಗೆ ತೊಡಿಸಿದ್ದ ಚಿನ್ನದುಂಗುರ ಕಾಣೆಯಾಯಿತಂತೆ. ಅರ್ಚಕನ ಮೇಲೆ ಸಂಶಯವುಂಟಾದಾಗ ಆತ ಬಂದು ಗಿರಿಯಮ್ಮನವರ ಮೊರೆಹೊಕ್ಕ. ಗಿರಿಯಮ್ಮ ರಂಗನಾಥನನ್ನು ಪ್ರಾರ್ಥಿಸಿದಳು.

ಹೊನ್ನು ತಾ ಗುಬ್ಬಿ ಹೊನ್ನು ತಾ । ನಮ್ಮ
ಚಿನ್ಮಯ ಮೂರುತಿ ಚಲುವ ರಂಗನ ಕೈಗೆ । ಹೊನ್ನ ಉಂಗುರ ತಾ...

ಹೀಗೆ ಗಿರಿಯಮ್ಮ ಹಾಡು ರಚಿಸಿ ಬೇಡಿಕೊಂಡಾಗ, ಗುಬ್ಬಿಯೊಂದು ಬಾಯಲ್ಲಿ ಕಚ್ಚಿದ್ದ ಉಂಗುರವನ್ನು ಚೆಲ್ಲಿ ಹೋಯಿತಂತೆ! ಗುಬ್ಬಿಯೊಂದು ಚಿನ್ನದ ಉಂಗುರ ಧಾನ್ಯವೆಂದು ಕಚ್ಚಿಕೊಂಡು ಹೋಗಿರಬೇಕು. ಮುಂದೆ ಅದು ಉಪಯೋಗಿಯಲ್ಲದ ವಸ್ತುವೆಂದು ಕಂಡುಬಂದಾಗ ಚೆಲ್ಲಿಹೋಗಿದ್ದು ನಿಜವಿರಬೇಕು. ಆದರೆ ಸಂದರ್ಭವನ್ನು ಪವಾಡಾತ್ಮಕವಾಗಿ ಜನ ಕಾಣುವ ಉತ್ಪ್ರೇಕ್ಷೆಯ ರೀತಿ, ಗಿರಿಯಮ್ಮನ ಘನತೆಯನ್ನು ಬಣ್ಣಿಸಿ ಹೇಳುತ್ತದೆ.

ಗಿರಿಯಮ್ಮನ ಕೃತಿಗಳ ಮಹತಿಯಿಂದಾಗಿಯೆ ಆಕೆಯ ಜೀವನದಲ್ಲಿಯ ಹಿನ್ನೆಲೆಯ ಸಂಗತಿಗಳಿಗೆ ಪವಾಡಮಹಾತ್ಮೆ ಬಂದಿರಬೇಕು. ಭಕ್ತಿ ತೀವ್ರವಾದಾಗ, ಭಾವನೆ ಗಾಢವಾದಾಗ ಭಾಷೆ ತಾನಾಗಿಯೇ ಪುಟಿದು ಬರುತ್ತದೆ. ಧಾರವಾಡ ಜಿಲ್ಲೆ ಪೇಶ್ವೆಯವರ ಆಳ್ವಿಕೆಯಲ್ಲಿ ಕನ್ನಡಿಗರ ಮಾತೃಭಾಷೆ ವನವಾಸ ದೇಶಾಂತರಗಳನ್ನು ಅನುಭವಿಸುತ್ತಿರುವಾಗ, ಆ ಕಾಲದಲ್ಲಿ ಗಿರಿಯಮ್ಮ ಕನ್ನಡದ ಸಿರಿಯನ್ನು ಸುಗ್ಗಿಯ ಕಾಲವೆಂಬಂತೆ ಹೆಚ್ಚಿಸಿದ ಒಂದು ಅದ್ಭುತಕ್ಕೆ ನಾವು ಬೆರಗಾಗುತ್ತೇವೆ. ಪುಂಗನೂರಿನ ರಾಜಕುಮಾರನು ದೈವದುರ್ವಿಪಾಕದಿಂದ ಅಂಧತ್ವ ಪಡೆದ. ವೆಂಕಟಪತಿಯ ಸೇವೆಯಿಂದ ಒಂದು ಕಣ್ಣು ಪಡೆದನಂತೆ. ಇನ್ನೊಂದು ಕಣ್ಣನ್ನು ಗಿರಿಯಮ್ಮನಿತ್ತಳಂತೆ. ವೆಂಕಟಗಿರಿಯ ಆದೇಶದ ಮೇರೆಗೆ ಆ ಸಂದರ್ಭದಲ್ಲಿ ಗಿರಿಯಮ್ಮನು ರಂಗನಾಥನನ್ನು ಬೇಡಿಕೊಂಡು ಹಾಡಿದಳಂತೆ.

'ನೀನೆ ಗತಿಯೆಂದು ಬಂದ ಭಕ್ತನ ಕಣ್ಣನೋವು, ತಿದ್ದಿ ನಿಜವ ತೋರಿಸಯ್ಯ' ಎಂದು ಬೇಡಿದಳಂತೆ. ಕಲ್ಲೊಳು ಕಾಂತೆಯ ಮಾಡಿ ಕಾದ ಕಥೆ ಪುರಾಣಕಾಲದ ಪವಾಡವಾಗಿರಬಹುದು. ಇದನ್ನು ಈಗ ಮಾಡಿತೋರಿಸು, ಆಗ ನಿನ್ನ ದೊಡ್ಡವನೆಂದು ಹೊಗಳುವೆ ಎಂದು ಶರ್ತು ಹಾಕಿದಾಗ, ಸ್ವಾಮಿ ಪುಂಗನೂರಿನ ರಾಜಕುಮಾರನ ಅಂಧತ್ವ ಕಳೆದನಂತೆ! ತನ್ನ ದೊಡ್ಡಸ್ತನವನ್ನು ಕಾಪಾಡಿಕೊಳ್ಳಬೇಕೆಂಬ ಕಾತರ ಪರಮಾತ್ಮನಿಗೂ ಉಂಟು. ಗಿರಿಯಮ್ಮ ಪರಮಾತ್ಮನನ್ನು ವಾತ್ಸಲ್ಯ ಭಾವದಿಂದ ಕಂಡು, ಸುಮತೀಂದ್ರ ಸ್ವಾಮಿಗಳು

ವರ್ಣಿಸಿದಂತೆ ಯಶೋದೆಯಂತೆಯೇ ಹಾಡಿದ್ದಾಳೆ. ಹರಿದಾಸರಂತೆ ಸಾವಿರಾರು ಕೀರ್ತನೆಗಳನ್ನು ರಚಿಸಿದ್ದರೂ ಈಕೆಯ ಭಕ್ತಿಕಾವ್ಯದಲ್ಲಿ ಮಧ್ವತತ್ವದ ವಿಸ್ತಾರವಾಗಲಿ, ತಾರತಮ್ಯ ವಿವೇಚನೆಯಾಗಲಿ ಕಂಡುಬರುವುದಿಲ್ಲ. ಹರಿಭಕ್ತಿಯಂತೆ ಶಿವಭಕ್ತಿಯೂ ಗಿರಿಯಮ್ಮನ ಗೀತೆಗಳ ವೈಶಿಷ್ಟ್ಯ. ತೌರುಮನೆಯವರು ಮೈಲಾರಲಿಂಗನ ಭಕ್ತರಾಗಿದ್ದ ರಿಂದ, ಗಿರಿಯಮ್ಮ ಮೈಲಾರನ ಸ್ತೋತ್ರವನ್ನು ಮಾಡಿದ್ದಾಳೆ. ಮಾರುತಿಯ ಸ್ತೋತ್ರ ದಲ್ಲಿ ಹನುಮ–ಭೀಮ–ಮಧ್ವ ಅವತಾರಗಳ ಪ್ರಸಕ್ತಿ ಇಲ್ಲ.

ಗಿರಿಯಮ್ಮನು ಕೊನೆಯ ದಿನಗಳಲ್ಲಿ ಹೊನ್ನಾಳಿಗೆ ಸಮೀಪದ ಕಮ್ಮಾರಗಟ್ಟೆಯೆಂಬ ತುಂಗಭದ್ರಾತೀರ ಪ್ರದೇಶದಲ್ಲಿರುವ ಮಾರುತೀ ದೇವಸ್ಥಾನವನ್ನು ಕಟ್ಟಿಸಿ, ಕೊನೆಗೆ ತುಂಗಭದ್ರೆಯ ಮಡಿಲಲ್ಲೇ ಐಕ್ಯ ಹೊಂದಿದಳು ಎಂದು ಹೇಳುತ್ತಾರೆ.

ವರದಾನದೀ ತೀರದ ಕರ್ಜಗಿಯಲ್ಲಿ ದಾಸಪ್ಪ ಎಂಬ ವಿದ್ವಾಂಸರು ವೇದ ವೇದಾಂತ ಪಂಡಿತರಾಗಿ ಮೆರೆಯುತ್ತಿದ್ದರು. ಆದರೆ ಇಂತಹ ಪ್ರಕಾಂಡ ಪಂಡಿತರೂ ಕವಿತ್ವಶಕ್ತಿ ಉಳ್ಳವರೂ ಆದ ದಾಸಪ್ಪನವರು ವಿಲಾಸೀ ಜೀವನದಲ್ಲಿ ತಮ್ಮ ವಾಙ್ಮಯ ಸಾಧನೆ ಯನ್ನೆಲ್ಲ ವ್ಯರ್ಥಗೊಳಿಸಿಬಿಟ್ಟಿದ್ದರು.

ಹೀಗೆ ಜ್ಞಾನಕ್ಕೂ ಆಚಾರಕ್ಕೂ ತಾಳಮೇಳವಿಲ್ಲದ ದಾಸಪ್ಪನ ಬದುಕಿನಲ್ಲಿ ಒಂದು ಪರಿವರ್ತನೆಯ ಕಾಲ ಬಂತು! ಮಂದಭಾಗ್ಯನೆಡೆಗೆ ಪುಣ್ಯದ ಮಂದರಪರ್ವತವೆ ನಡೆತಂ ದಂತೆ ಜಗನ್ನಾಥದಾಸರು ಪ್ರಾಣೇಶದಾಸರೊಂದಿಗೆ ವಿದ್ವತ್ತಿಗೆ ಆಗರವೆನಿಸಿದ ಕರ್ಜಗಿಗೆ ನಡೆತಂದರು. ಅದೇ 'ಹರಿಕಥಾಮೃತಸಾರ'ವನ್ನು ರಚಿಸಿ ಪೂರೈಸಿದ್ದರು. ಕಾವ್ಯ ಸಿದ್ಧಾಂತ ಗಳ ಸಮರಸ ಸಂಗಮವೆನಿಸಿದ ಈ ಅಪೂರ್ವಗ್ರಂಥಕ್ಕೆ ಫಲಶ್ರುತಿ ಸಂಧಿಯನ್ನು ಬರೆಯು ವಂಥ ಬಲ್ಲಿದರನ್ನರಸುತ್ತ ಜಗನ್ನಾಥದಾಸರು ದಯಮಾಡಿಸಿದರು. ಊರವರ ಅಭಿ ಪ್ರಾಯದಲ್ಲಿ ಕರ್ಜಗಿ ದಾಸಪ್ಪನ ಪಾಂಡಿತ್ಯ ವಿಚಾರವೇನೋ ಪ್ರಶಂಸನೀಯವೆನಿಸಿತ್ತು; ಆದರೆ ಆತನ ಪುರುಷ ಆಚಾರವು ವ್ಯಸನದೂಷಿತವಾಗಿತ್ತು.

ಜಗನ್ನಾಥದಾಸರು ಒಂದು ಉಪಾಯವನ್ನು ಯೋಚಿಸಿದರು. ಕರ್ಜಗಿಯಲ್ಲಿ ಒಂದು ವಿದ್ವದ್ಗೋಷ್ಠಿಯನ್ನು ಕರೆದರು. ಪ್ರಾಜ್ಞ ಸಭಿಕರ ಮುಂದೆ ಹದಿನಾರು ಪ್ರಶ್ನೆಗಳ ಒಂದು ಮಾಲಿಕೆಯನ್ನು ಮಂಡಿಸಿ ಅದನ್ನು ಉತ್ತರಿಸಲು ಆಹ್ವಾನ ನೀಡಿದರು. ಜಗನ್ನಾಥ ದಾಸರ ಮುಂದೆ ಯಾವ ವಿದ್ವಾಂಸರೂ ಎದ್ದು ನಿಲ್ಲುವ ಧೈರ್ಯ ಮಾಡಲಿಲ್ಲ. ಆದರೆ ರಸಿಕ ದಾಸಪ್ಪ ತಾನು ಉತ್ತರಿಸುವುದಕ್ಕೆ ಎದ್ದು ನಿಂತ. ಹರಿಕಥಾಮೃತಸಾರದಲ್ಲಿ ಅಡಕವಾದ ಪ್ರಮೇಯಗಳನ್ನು ಒಳಗೊಂಡ ಆ ಹದಿನಾರು ಪ್ರಶ್ನೆಗಳಿಗೆ ದಾಸಪ್ಪ ಸುಲಭವಾಗಿ ಉತ್ತರಿಸಿದ. ಜಗನ್ನಾಥದಾಸರಿಗೆ ತುಂಬ ಸಂತೋಷವಾಯಿತು. ವಿಲಾಸಿಯ ಹೊರಲೇಪದಲ್ಲಿ ಅಡಗಿದ ಮಿಸುನಿಯಂದದ ವಿದ್ವತ್‌ಚೇತನವನ್ನು ಜಗನ್ನಾಥದಾಸರು ಕಂಡುಹಿಡಿದರು. ಆದರೆ ಒಂದು ಹಿತವಾದ ಮಾತನ್ನು ಹೇಳಿದರು. "ದಾಸಪ್ಪ, ನಿನ್ನ ಜ್ಞಾನಕ್ಕೂ ಅನುಷ್ಠಾನಕ್ಕೂ ಮೇಳವಿಲ್ಲ. ಮೊದಲು ತಾಳ ಹಿಡಿ; ನಿನ್ನ ಅಂತರಂಗ–ಬಹಿ ರಂಗಗಳಿಗೆ ಮೇಳವಾಗಲಿ" ಎಂದರು.

ವೇಷ ಬಿಟ್ಟು. ವರದಾನದಿಯಲ್ಲಿ ಮುಳುಗುಹಾಕಿ ಬದಲಾಯಿಸಿದ ...ದವನೇ ತನ್ನ ಜಗನ್ನಾಥದಾಸರಿಗೆ ಸಾಷ್ಟಾಂಗಹಾಕಿದ. ಕೈಯಲ್ಲಿ ತಂಬೂರಿ ಧರಿಸಿದ, ತಾಳ ಹಿಡಿದ ದಾಸಪ್ಪ ದಾಸಯ್ಯನಾಗಿದ್ದ. ಜಗನ್ನಾಥದಾಸರು ದಾಸಪ್ಪನನ್ನು ಆಶೀರ್ವದಿಸಿದರು. 'ಶ್ರೀದ ವಿಠ್ಠಲ' ಎಂಬ ಅಂಕಿತವಿತ್ತು ಅನುಗ್ರಹಿಸಿದರು.

ಶ್ರೀದ ವಿಠ್ಠಲರು ಮೊದಲು ಹರಿಕಥಾಮೃತಸಾರಕ್ಕೆ ಸೊಗಸಾದ ಫಲಶ್ರುತಿಯ ಸಂಧಿಯನ್ನು ರಚಿಸಿದರು. ಗುರುಗಳ ಮೆಚ್ಚುಗೆಯನ್ನು ಗಳಿಸಿದರು. ಮುಂದೆ 'ಶ್ರೀದ ವಿಠ್ಠಲ' ಎಂಬ ಮುದ್ರಿಕೆಯಿಂದ ಅನೇಕ ಸ್ತೋತ್ರ ಕೀರ್ತನೆಗಳನ್ನು ರಚಿಸಿದರು. ಅವರ ರಸವತ್ತಾದ ರಚನೆಗಳು ಭಕ್ತಿಯ ಬೆಡಗಿನಿಂದ, ಕಾವ್ಯದ ಕಡುವಿನಿಂದ ಬೆಳಗಿದವು. ಶ್ರೀದ ದಾಸರು ರಚಿಸಿರುವ ರಾಯರ ಮೇಲಿನ ಹಾಡುಗಳು ರಾಯರ ಭಕ್ತರಿಗಂತೂ ವಿಶೇಷ ಮೆಚ್ಚುಗೆಯಾದವು. "ರಾಘವೇಂದ್ರ ಗುರುರಾಯರ ಸೇವಿಸಿರೊ ಸೌಖ್ಯದಿ ಜೀವಿಸಿರೊ"—ಬಹಳ ಸುಲಭವಾದ ಭಾಷೆ; ಅಷ್ಟೆ ಸುಲಭವಾದ ಧಾಟಿ.

೧೭೨೭ ರಿಂದ ೧೮೦೯ರ ವರೆಗೆ ಬಾಳಿದ ಜಗನ್ನಾಥದಾಸರ ಸಮಕಾಲೀನರೆಂದ ಮೇಲೆ, ಕರ್ಜಗಿ ದಾಸಪ್ಪನವರು ಎರಡುನೂರು ವರ್ಷಕ್ಕಿಂತ ಮುಂಚೆ ಆಗಿ ಹೋಗಿರಬೇಕು. ಈಗ ಸುಮಾರು ಎರಡುನೂರು ವರ್ಷಗಳ ಹಿಂದೆ ಧಾರವಾಡ ಜಿಲ್ಲೆಯ ಹೆಬ್ಬಳ್ಳಿಯ ಶ್ರೀಮಂತ ವರ್ಗದ ಸಂಕರ್ಷಣಾಚಾರ್ಯರು ಧಾರವಾಡದ ಮಂಗಳವಾರಪೇಟೆಯ ವಿಠ್ಠಲಮಂದಿರದಲ್ಲಿ ಕುಳಿತು ಜಗನ್ನಾಥದಾಸರ 'ಹರಿಕಥಾಮೃತಸಾರ'ಕ್ಕೆ ಟೀಕೆ ಬರೆದುದನ್ನು ಮರೆಯುವಂತಿಲ್ಲ. ವಿಠ್ಠಲಮಂದಿರದಲ್ಲಿ ಅವರು ಆತು ಕುಳಿತುಕೊಳ್ಳುತ್ತಿದ್ದ ಕಂಭ ಇಂದಿಗೂ ಸಾಕ್ಷಿ ನುಡಿಯುತ್ತಿದೆ.

೫

ಧಾರವಾಡ ನಗರ ದಾಸಸಾಹಿತ್ಯಕ್ಕೆ ಸಲ್ಲಿಸಿದ ಕಾಣಿಕೆಯ ಗಾತ್ರ, ಗುಣಮಟ್ಟವನ್ನು ಸೂಚಿಸುವ ಒಂದು ಅಳತೆಗೋಲು, ಧಾರವಾಡದ ಶ್ರೀನಿಧಿ ವಿಠ್ಠಲರ ಸಾಧನೆ. ತಿರುಪತಿ ತಿಮ್ಮಪ್ಪನ ಹರಿಕಾರರಾಗಿ, ಗೃಹಸ್ಥರಾಗಿ ದಾಸವೃತ್ತಿಯನ್ನು ನಡೆಸುತ್ತಿದ್ದ ದೀಪದ ಅಣ್ಣಯ್ಯಾಚಾರ್ಯರು ಮನೆವರೆಗೂ ನಡೆತಂದು ಅಂಕಿತ ನೀಡಿ ಅನುಗ್ರಹಿಸಿದ ಶ್ರೀಪತಿ ವಿಠ್ಠಲಾಂಕಿತ ಹರಪನಹಳ್ಳಿ ವೆಂಕಟದಾಸರ ಶಿಷ್ಯರು.

ಸು. ೧೮೦೦ರಲ್ಲಿ ಜನಿಸಿದ ಅಣ್ಣಯ್ಯಾಚಾರ್ಯರು ಧಾರವಾಡದಲ್ಲಿ ಜ್ಞಾನ-ಭಕ್ತಿಗಳ ನಂದಾದೀಪವನ್ನು ನಿಲ್ಲಿಸಿ ದೀಪದ ಮನೆತನವೆಂಬ ಪುಣ್ಯಖ್ಯಾತಿಯನ್ನು ಉಳಿಸಿ ಹೋಗಿದ್ದಾರೆ. ಇಂದಿಗೂ ಧಾರವಾಡದ ಮಂಗಳವಾರಪೇಟೆಯ ದರೋಗಾಗಲ್ಲಿಯ ಮೂಲೆಗೆ ಒಂದು ಚಿಕ್ಕ ತಿರುಪತಿ ಸ್ಥಾನವೆನಿಸಿ, ತನ್ನ ಪ್ರಾಚೀನ ಮಹಾತ್ಮೆಯ ಐತಿಹಾಸಿಕ ಕುರುಹುಗಳನ್ನು ಉಳಿಸಿಕೊಂಡು ದೀಪದವರ ಮಹಾಮನೆ ಎದ್ದು ಕಾಣುತ್ತದೆ.

... ಕುರಿತು ... ಕರಣವನ್ನು

ಒಂದಿಷ್ಟು ಅಭಿಮಾನದಿಂದ ಹೇಳಿದರೆ, ಅದು ಅತಿಪ್ರಸಂಗವೆಂದು ಅನಿಸಲಾರದೆಂದು ಭಾವಿಸುತ್ತೇನೆ. ಶ್ರೀನಿಧಿ ವಿಠ್ಠಲರೆಂದರೆ, ದೀಪದ ಅಣ್ಣಯ್ಯಾಚಾರ್ಯರ ಮೊಮ್ಮಗ ದೀಪದ ಶ್ರೀ ರಾಮಚಂದ್ರರಾಯರು ಈ ಮನೆತನದ ದೀಪಟಗೆಯಾಗಿ ನಮ್ಮ ಅಜ್ಜನ ಅಜ್ಜನ ಅಜರಾಮರ ಕೀರ್ತಿಯು ಕುರುಹುಗಳ ಮೇಲೆ ಖಚಿತವಾದ ಕ್ಷ-ಕಿರಣದ ಬೆಳಕುಬೀರಿ ಮಾತನಾಡುತ್ತಾರೆ. ಇವರ ಮನೆಯ ಕಂಭವೂ ಒಂದು ಕತೆ ಹೇಳುತ್ತಿದೆ. ಇವರ ಮನೆಯ ಭಾವಿ ಅಣ್ಣಯ್ಯಾಚಾರ್ಯರ ಭಕ್ತಿಯ ಆಳವನ್ನೂ ಕಾವ್ಯದ ಸೆಲೆಯನ್ನೂ ಬೀರುತ್ತಿದೆ. ಇನ್ನು ಇವರ ದೇವರ ಮನೆಯೊ ತಿರುಪತಿ ವೆಂಕಟರಮಣನ ಅಸ್ಥಾನ: ಎತ್ತರದ ಪೀಠದ ಮೇಲೆ ಎಸೆಯುವ ಚಿನ್ನದ ಕಟ್ಟಿನ ಚಂದನದ ಮೂರ್ತಿಯೆ ಪ್ರಸನ್ನ ವೆಂಕಟರಮಣನ ಪ್ರತಿಮೆ ! ಪ್ರತಿವರುಷವೂ ಪಯಣದ ಮೇಲೆ ಪಯಣ ಮಾಡುತ್ತ, ಶಿಷ್ಯರು-ಮಡದಿ ಮಕ್ಕಳು ಸಮೇತರಾಗಿ ಕುದುರೆಯ ಮೇಲೆ ತಮ್ಮ ನಿತ್ಯ ಅರ್ಚನಾ ಅನುಷ್ಠಾನ ಸಾಮಗ್ರಿಯೆಲ್ಲವನ್ನೂ ಹಲ್ಲಣಿಸಿಕೊಂಡು ತಿರುಪತಿಯ ಪುಣ್ಯ ಪಯಣ ಮಾಡಿ ಬರುವ ಅವಿಚ್ಛಿನ್ನ ರೂಢಿಯನ್ನಿಟ್ಟುಕೊಂಡಿದ್ದ ಅಣ್ಣಯ್ಯಾಚಾರ್ಯರು ಜರೆಯ ಜೀರ್ಣಾವಸ್ಥೆಯಿಂದಾಗಿ ಸೋತ ಮನಸ್ಸಿನಿಂದ 'ಸ್ವಾಮಿ ಈ ಶೈಥಿಲ್ಯದಲ್ಲಿ ನಿನ್ನ ದರ್ಶನ ಯಾತ್ರೆ ಹೇಗೆ ಸಾಧ್ಯವಾದೀತೋ ಎಂದು ಯೋಚನೆಯಾಗಿದೆ'—ಎಂದು ಅನನ್ಯಭಕ್ತಿಯಿಂದ ಮೊರೆಯಿಟ್ಟಾಗ 'ಚಿಂತೆ ಬೇಡ, ನಾನೇ ನಿನ್ನಲ್ಲಿ ಬರುತ್ತೇನೆ' ಎಂದು ಸ್ವಪ್ನ ಸಂದೇಶ ದೊರಕಿತು. ಆಚಾರ್ಯರಿಗೆ ಸ್ವಾಮಿ ತಾನೇ ಹೇಗೆ ಬರುತ್ತಾನೆ ಎಂಬ ಗೂಢ ಬಿತ್ತು. ಸ್ವಾಮಿಪುಷ್ಕರಣಿಯಲ್ಲಿ ಸ್ನಾನ ಮಾಡಲು ಮುಚ್ಚಿದ ಕಣ್ಣು ಮೂಗು ಹಿಡಿದುಕೊಂಡು ಮುಳುಗುಹಾಕಿ ಏಳುವಾಗ ಏನೊ ಒಂದು ವಸ್ತು ತೇಲುತ್ತ ಬಂದು ತಲೆ ತಟ್ಟಿತು. ಕೈಯಲ್ಲಿ ಎತ್ತಿಕೊಂಡು ನೋಡುತ್ತಾರೆ. ಶ್ರೀನಿವಾಸನ ಉತ್ತರವೆ ಕೈಯಲ್ಲಿದೆ. ಸೊಗಸಾದ ಚಂದದ ಮೂರ್ತಿ ! ವೆಂಕಟಪತಿ ಲಕ್ಷಣವಾಗಿ ಕಂಗೊಳಿಸುತ್ತಿದ್ದಾನೆ. ಆನಂದದ ಉನ್ಮಾದ—'ಆನಖ ಆನಂದ, ಆಶಿಖ ಆನಂದ' ಎಂಬಂತೆ ತಿರುಪತಿ ವೆಂಕಟರಮಣ ಸಮೇತವಾಗಿ, ಬ್ರಹ್ಮದೇವರು ತಿರುಪತಿ ದೇವಸ್ಥಾನದಲ್ಲಿ ನಿಲ್ಲಿಸಿದ ನಂದಾದೀಪದಿಂದ ತಮ್ಮ ದೀಪವನ್ನು ಬೆಳಗಿಸಿಕೊಂಡು ಅದು ನಂದದಂತೆ ತಮ್ಮ ಬೆಳಕು ಕಂದೀಲದಲ್ಲಿ ಭದ್ರವಾಗಿಸಿಕೊಂಡು ಧಾರವಾಡದ ಮಂಗಳವಾರಪೇಟೆಯ ಆಗಿನ ಖಾಜಿ ಓಣಿಯ ತಮ್ಮ ಮನೆಮನೆವರೆಗೂ ಭಕ್ತಿದೀಪವಾಗಿ, ಜ್ಞಾನದೀಪವಾಗಿ ನಂದದ ಆ ನಂದಾದೀಪವನ್ನು ತಂದು ದೇವರ ಮನೆಯಲ್ಲಿ ಸ್ಥಾಪಿಸಿದರು. ಅಂದಿನಿಂದ ಅಣ್ಣಯ್ಯಾಚಾರ್ಯರ ಮನೆ ದೀಪದವರ ಮನೆಯೆಂಬ ಕೀರ್ತಿಯಿಂದ ಬೆಳಗಿತು. ವೆಂಕಟರಮಣನು ದೀಪದವರ ಮನೆಯಲ್ಲಿ ವಿಶ್ರಮಿಸಿರಲು, ಪದ್ಮಾವತಿಯು ಬರಬೇಡವೆ ? ಆ ಭವ್ಯ ನಡುಮನೆಯಲ್ಲಿ ದೇವರ ಮನೆಯ ಎದುರಿನ ಕಂಭದಲ್ಲಿಯೆ ಒಡಮೂಡಿದಳು ಭಾಗ್ಯಲಕ್ಷ್ಮಿ. ಇದಕ್ಕೆ ಸಾಕ್ಷಿ ಏನು ? ಅದೇ ಕಂಭಕ್ಕೆ ಕಟ್ಟಿದ ಅಣ್ಣಯ್ಯಾಚಾರ್ಯರ ಕುದುರೆ ನೀರು ಹುಲ್ಲು ಸೇವಿಸಲಿಲ್ಲ; ಯಾರೋ ಶಾಸ್ತ್ರಬಲ್ಲವರು ಕಣಿ ಹೇಳಿದರು—ಈ ಕಂಬದಲ್ಲಿ ಕನಕಲಕ್ಷ್ಮಿ ಮೂಡಿದ್ದಾಳೆ, ಕುದುರೆಯನ್ನು ಇನ್ನೊಂದು ಕಂಭಕ್ಕೆ ಕಟ್ಟಿರಿ ಎಂದು. ಸರಿ ಕುದುರೆಯನ್ನು

ಇನ್ನೊಂದು ಕಂಭಕ್ಕೆ ಕಟ್ಟಿದರು. ಕುದುರೆ ಆತುರದಿಂದ ಮೇವು ಹುಲ್ಲು ತಿಂದು ನೀರು ಕುಡಿಯಿತು. ಇವೆಲ್ಲ ದಂತಕಥೆ ಎನಿಸಿದರೂ ಶ್ರದ್ಧಾತ್ಮರಿಗೆ ಪುರಾವೆ ಇತಿಹಾಸವಾಗುತ್ತದೆ.

ಅಣ್ಣಯ್ಯಾಚಾರ್ಯರು ಶ್ರೀಪತಿ ವಿಠ್ಠಲಾಂಕಿತ ಹರಪನಹಳ್ಳಿ ವೆಂಕಟದಾಸರಿಂದ ಅನುಗ್ರಹಿತರಾಗಿ 'ಶ್ರೀನಿಧಿ ವಿಠ್ಠಲ' ಎಂಬ ಅಂಕಿತ ಪಡೆದರಷ್ಟೆ! ಅಂಕಿತ ನೀಡಿದ ಶ್ರೀಪತಿ ವಿಠ್ಠಲರು ಮಹಿಮಾನ್ವಿತರು; ಗದ್ವಾಲಿನ ವಿಜಯದಾಸರು, ಮಾನ್ವಿಯ ಜಗನ್ನಾಥ ದಾಸರು, ಆದವಾನಿಯ ವೇಣುಗೋಪಾಲದಾಸರ ಪರಂಪರೆಯಲ್ಲಿ ಬೆಳೆದುಬಂದವರು. ಅಣ್ಣಯ್ಯಾಚಾರ್ಯರ—ಶ್ರೀಪತಿ ವಿಟ್ಠಲಾಚಾರ್ಯರ ಸಮಾಗಮದ ಸನ್ನಿವೇಶ ಕುತೂಹಲಕರ. ಶಿಷ್ಯನೊಬ್ಬನನ್ನು ಹುಡುಕಿಕೊಂಡು ಗುರು ಹೊರಟಾಗ ಗುರುವೊಬ್ಬನ ಶೋಧದಲ್ಲಿದ್ದ ಶಿಷ್ಯ ಇದೇ ಗುರುವನ್ನು ಸಂಧಿಸಿ, ಸಾಷ್ಟಾಂಗ ಹಾಕಿ ದಾಸದೀಕ್ಷೆ ಬೇಡಿದ. 'ಶ್ರೀ ನಿಧಿ ವಿಠ್ಠಲ' ಎಂಬ ಅಂಕಿತ ಪ್ರದಾನ ಮಾಡಿದ ಸನ್ನಿವೇಶವೂ ಪುಲಕತರುವಂಥದೇ ಆಗಿತ್ತು. ಗೃಹಸ್ಥರಾಗಿದ್ದ ಅಣ್ಣಯ್ಯಾಚಾರ್ಯರ ಒಬ್ಬ ಮಗ ಗೋವಿಂದಾಚಾರ್ಯ, ಬ್ರಹ್ಮಚರ್ಯೆಯಲ್ಲಿಯೆ ಅರ್ಪಿತ ದಾಸಜೀವನ ನಡೆಸಿದ. ಇನ್ನೊಬ್ಬ ಮಗ ಬಿಂದಾಚಾರ್ಯ ಸಂಸಾರಿಗನಾಗಿದ್ದ. ಆತನ ಮಗನೇ ದೀಪದ ರಾಜಾಚಾರ್ಯ. ಈಗಿನ ಧಾರವಾಡದ ಮನೆ ದೀಪದ ರಾಜಾಚಾರ್ಯರ ಮನೆಯೆಂದೇ ಖ್ಯಾತಿ ಪಡೆದಿದೆ.

ಈಗಿನ ತಲೆಮಾರಿನ ದೀಪದ ರಾಮಚಂದ್ರರಾಯರು ಅವರ ಧರ್ಮಪತ್ನಿ ಶ್ರೀಮತಿ ಪ್ರಮಿಳಾಬಾಯಿ, ರಾಮಚಂದ್ರರಾಯರ ಅಕ್ಕ-ತಮ್ಮ ಹಿರಿಯರ ಹಿರಿಮೆಯನ್ನು ಕಥೆ ಮಾಡಿ ಹೇಳುತ್ತಾರೆ. ಶ್ರೀಮತಿ ಪ್ರಮಿಳಾಬಾಯಿ ಶ್ರೀನಿಧಿದಾಸರ ಕೀರ್ತನೆಗಳನ್ನು ಹಾಡುತ್ತಿರಬೇಕು. ತಮ್ಮ ಕಲಾಕೌಶಲ್ಯದಿಂದ ಮಾಧ್ವ ಪ್ರಮೇಯ ಪಟಗಳನ್ನೂ ಖಗೋಲ ಭೂಗೋಲ ಪಟಗಳನ್ನೂ ಬ್ರಹ್ಮಾಂಡ ಚಿತ್ರಗಳನ್ನೂ ಅಮೋಘವಾದ ರೀತಿಯಲ್ಲಿ ಬರೆದು ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ. ರಾಮಚಂದ್ರರಾಯರು ದಾಸಭಾವದಿಂದಲೆ ಬ್ರಾಹ್ಮಣಸಮಾಜ ಸೇವೆಗೆ ಟೊಂಕ ಕಟ್ಟಿ ದುಡಿಯುತ್ತಿದ್ದಾರೆ.

ಶ್ರೀನಿಧಿ ವಿಠ್ಠಲರ ಬಹಳಷ್ಟು ಕೀರ್ತನೆಗಳು ಇಂದು ದೊರಕುತ್ತಿಲ್ಲ. ದೀಪದ ರಾಮಚಂದ್ರರಾಯರು ಅಣ್ಣಯ್ಯಾಚಾರ್ಯರ ಕಡತಗಳನ್ನೆಲ್ಲ ಕಾಪಾಡಿಕೊಂಡು ಬಂದಿದ್ದಾರೆ. ಅವರ ಕೀರ್ತನೆಗಳನ್ನೆಲ್ಲ ದೊರಕಿಸಿಕೊಟ್ಟರೆ ದಾಸಸಾಹಿತ್ಯಕ್ಕೆ ಅಜರಾಮರ ಸೇವೆ ಸಲ್ಲಿಸಿದಂತಾಗುತ್ತದೆ. "ಸೂರ್ಯಾಂತರ್ಗತ ನಾರಾಯಣ ಪಾಹಿ। ಆರ್ಯ ಮಾರುತಿ ಪಂಚಪ್ರಾಣ॥" ಎಂಬ ಕೀರ್ತನೆಯನ್ನು ನಿದರ್ಶನಾರ್ಥನಾಗಿ ನೋಡಬಹುದು. 'ತಪನ ಕೋಟಿ ಪ್ರಕಾಶ ಬಲವುಳ್ಳ। ಕಪಿಲರೂಪನೆ ಜ್ಞಾನದಾಯಕ" ಎಂಬ ಸಾಲು, ದಾಸರ ಪ್ರೌಢಿಮೆಯ ಶೈಲಿಗೆ ಸಾಕ್ಷಿ ನುಡಿಯುತ್ತದೆ.

ಶ್ರೀನಿಧಿ ವಿಠ್ಠಲರ ಶಿಷ್ಯರಲ್ಲಿ ಶ್ರೀವರ ವಿಠ್ಠಲ ಎಂದರೆ ಸವದಿ ರಾಮಚಂದ್ರಪ್ಪ, ತಂದೆ ಶ್ರೀನಿಧಿ ವಿಠ್ಠಲ ಎಂದರೆ ಅಣ್ಣಯ್ಯಾಚಾರ್ಯರ ಹಿರಿಯಮಗ ಗೋವಿಂದಾಚಾರ್ಯ, ತೀರ್ಥಪಾದ ವಿಠ್ಠಲ ಎಂದರೆ ಕರ್ಜಗಿ ತೀರ್ಥಪ್ಪ ಇವರು ಮುಖ್ಯರಾಗಿದ್ದಾರೆ.

೬

ಧಾರವಾಡ ಜಿಲ್ಲೆ ದಾಸಸಾಹಿತ್ಯಕ್ಕೆ ಸಲ್ಲಿಸಿದ ಕೊಡುಗೆ ಬಹುಮುಖವಾದುದ್ದು, ದಾಸ ದೀಕ್ಷೆ ಧರಿಸಿ, ಗುರುಗಳಿಂದ ಅಂಕಿತ ಪಡೆದು, ಕೀರ್ತನೆಗಳನ್ನು ರಚಿಸಿ, ಕಾಲಲ್ಲಿ ಗೆಜ್ಜೆ, ಕೈಯಲ್ಲಿ ತಾಳ ತಂಬೂರಿ ಹಿಡಿದು ದಾಸವೃತ್ತಿಯನ್ನು ಕೈಗೊಂಡವರು; ದಾಸವೃತ್ತಿ ಇಲ್ಲದಿದ್ದರೂ ಅಂಕಿತ ಪಡೆಯದಿದ್ದರೂ ತಾವೇ ತಮ್ಮ ಮುದ್ರಿಕೆ ಇಟ್ಟುಕೊಂಡು ಬರಿ ಕೀರ್ತನೆಗಳನ್ನು ರಚಿಸಿದವರು; ದಾಸಸಾಹಿತ್ಯ ಸಂಶೋಧಕರಾಗಿ ತಮ್ಮ ವಿದ್ವತ್ತಿನಿಂದ ಕಾಣ್ಕೆ ನೀಡಿದವರು; ಮಧ್ವವಾಙ್ಮಯಕ್ಕೆ ವಾಕ್ಯಾರ್ಥ ಟೀಕೆಟಿಪ್ಪಣಿ ಬರೆದವರು; ಮಧ್ವವಾಙ್ಮಯ ಪಂಡಿತರು—ಹೀಗೆಲ್ಲ ವಿವಿಧ ಮುಖದ ಕಾಣ್ಕೆ ಸಲ್ಲಿಸಿದವರೆಲ್ಲರೂ ಧಾರವಾಡ ಜಿಲ್ಲೆಯವರೆ ಆಗಿದ್ದಾರೆ. ಇಂದಿಗೂ ಜೀವಂತವಾಗಿ ಉಳಿದು ಅನೇಕ ಮಹತ್ವದ ಮಹನೀಯರು ದಾಸಸಾಹಿತ್ಯಕ್ಕೆ ಒಂದಿಲ್ಲೊಂದು ರೀತಿ ತಮ್ಮ ಕೊಡುಗೆಗಳನ್ನು ನೀಡುತ್ತಲೆ ಇದ್ದಾರೆ.

ಧಾರವಾಡ ಜಿಲ್ಲೆಯ ಇತರ ದಾಸಸಾಹಿತ್ಯ ರಚಯಿತರಲ್ಲಿ 'ಶಾಂತೇಶ ವಿಠ್ಠಲ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದ ಕನ್ನಡದ ಆಧುನಿಕತೆಯ ಆದ್ಯಕವಿ, ನಾಟಕಕಾರ, ಕೀರ್ತನಕಾರ, ಬ್ಯಾಡಗಿ ಶಾಂತೇನಹಳ್ಳಿ ಶಾಂತೇಶನ ಭಕ್ತನಾದ ಶಾಂತಕವಿಗಳನ್ನು ಧಾರವಾಡ ಮರೆಯುವಂತಿಲ್ಲ. ಧಾರವಾಡ ಜಿಲ್ಲೆಯ ರೋಣದವರಾಗಿದ್ದ ಬೇಲೂರು ಕೇಶವದಾಸರ ತಂದೆ ಬೇಲೂರು ವೆಂಕಟಸುಬ್ಬದಾಸರು, 'ಕದರಮುಂಡಲಗಿ (ಬ್ಯಾಡಗಿ) ಹನುಮಯ್ಯ' ಎಂಬ ಮುದ್ರಿಕೆಯಿಂದ ಮಾಡಿದ ಅವಿಸ್ಮರಣೀಯ ದಾಸರು 'ಶ್ರೀ ವಿಠ್ಠಲದಾಸರು' ಹುಂಡೇಕಾರದಾಸರು (ಜಗನ್ನಾಥದಾಸರ ಮೂರನೆಯ ಶಿಷ್ಯರು), ಅಣ್ಣಿಗೇರಿಯ ಗೋಪತಿವಿಠ್ಠಲ, ಮನೋಹರ ವಿಠ್ಠಲರೆಂದು ಅಂಕಿತ ಧರಿಸಿದ ಜಗನ್ನಾಥ ದಾಸರ ಶಿಷ್ಯ ಬೂರಲದಿನ್ನಿ ನಾರಪ್ಪನವರು, ಕಾಂತೇಶನಾಯಕ ಪ್ರಾಣದೇವರ ಉಪಾಸಕ ಕದರಮುಂಡಲಗಿ ದಾಸರು (ಮೇಲೆ ವಿವರಿಸಿದ 'ಕದರಮುಂಡಲಗಿ ಹನುಮಯ್ಯ' ಎಂಬ ಅಂಕಿತದವರೇ ಇರಬೇಕು), ಏರಿಶೇಷಾಚಾರ್ಯರು (ಧಾರವಾಡದ ಏರಿ ಮನೆತನಕ್ಕೆ ಸಂಬಂಧಿಸಿದವರಿರಬೇಕು), ಧಾರವಾಡದ ಬಳಿ ಹೆಬ್ಬಳ್ಳಿಯ ಜಹಗೀರ್‌ದಾರ ಮನೆತನದ ಪಂಡಿತ ಪ್ರಮದೆಯಾದ ತುಳಸಾಬಾಯಿ, ಬಿದರಳ್ಳಿಯ ದಾಸರು, ಕಮಲಾಪುರ ಭೀಮ ರಾಯರು, ದೂರಪ್ಪದಾಸರು, ಗುತ್ತಲದ ಹನುಮೇಶ ವಿಠ್ಠಲ—ಇವರು ಬುರ್ಲಿ ಮನೆತನ ದವರು. ಸರಕಾರಿ ನೌಕರಿ ಮಾಡುತ್ತಲೆ ಹರಿಭಕ್ತಿಯ ಉತ್ಕಟತೆಯಿಂದ ರಚನೆಗಳನ್ನು ಮಾಡಿದವರು; ಹರಿಕಥಾಮೃತಸಾರಕ್ಕೆ ವಿವರಣೆಯನ್ನು ಬರೆದಿದ್ದು ಆ ಹಸ್ತಪ್ರತಿ ಅವರ ಮರಿ ಮಗ ವೆಂಕಟೇಶ ಬುರ್ಲಿ ಎಂಬ ಖ್ಯಾತ, ಹಿಂದುಸ್ಥಾನೀ ಗಾಯಕ ಅವರ ಬಳಿ ಇದೆ; 'ಸಿರಿರಮಣನ ಚರಣಕೆರಗಿ ಬೇಡುವೆ ನಾನು'. ಧಾರವಾಡದಲ್ಲಿ ಸಂಸ್ಕೃತ ಪಾಠಶಾಲೆ ಸ್ಥಾಪಿತವಾದಾಗ ರಚಿಸಿದ 'ಚಿರಕಾಲವಿರಲಿ ಸಂಸ್ಕೃತ ಪಾಠಶಾಲಾ' ಎಂದು ಮೊದಲಾಗುತ್ತ 'ಸುತ್ತಮುತ್ತ ನೋಡಿದತ್ತ ಕೆರೆಬಾವಿಗಳು। ಮತ್ತು ರಮಣೀಯವಾದನದಿಂದಲು ಇತ್ತ ನೋಡಲು ಹರಿಯ ದತ್ತಮಂದಿರ ಅನ್ನ। ಛತ್ರದಿಂದಲಿ ಪರಮ ಶೋಭೆ

ಕಾಂಬುದು' ಎಂಬ ನೈಜ ಚಿತ್ರಣವನ್ನು ಮೂಡಿಸುತ್ತದೆ. ಗದುಗಿನ ವೀರನಾರಾಯಣನ ಭಕ್ತರಾದ ಹುಯಿಲಗೋಳ ನಾರಾಯಣರಾಯರು ನಾಟಕಗಳಲ್ಲದೆ ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆ. ಮೊನ್ನೆ ಮೊನ್ನೆ ಇವು ಪ್ರಕಟವಾಗಿವೆ. ಕೆಲವು ಧ್ವನಿಮುದ್ರಿತವಾಗಿವೆ. 'ಪ್ರಾಣದೇವಾಕಾವುದಮ್ಮ। ಜೀವೋತ್ತಮ॥ ಜಾಣರೊಳು ಜಾಣ ನೀ। ತ್ರಾಣದೊಳಗೆ ಸುತ್ರಾಣ। ಕಾಣೆ ನಿನಗೆ ಸರಿಸಮಾನ। ಕ್ಷೋಣಿಯಲಿ ಹನುಮಾನ' ಎಂಬ ಗೀತದಂತಹ ಅನೇಕ ಚೆಲುವಾದ ಗೀತೆಗಳು ಈ ನಾಡ ಹಾಡಿನ ರಚಯಿತರ ಲೇಖನಿಯಿಂದ ಹೊಮ್ಮಿವೆ. ಇವರೇ ಮೊದಲಾದ ಕೀರ್ತನಕಾರರು ಧಾರವಾಡ ಜಿಲ್ಲೆಗೆ ಹೆಸರನ್ನು ತಂದವರು.

ಧಾರವಾಡ ಹರಿದಾಸ ಸಾಹಿತ್ಯದ ಉತ್ಕರ್ಷಕ್ಕೆ ಉಗಮಸ್ಥಾನವಾಗಿದೆ. ಇಲ್ಲಿ ಬೆಟಗೇರಿ ಕೃಷ್ಣಶರ್ಮರು, ಬೆಂಗೇರಿ ಹುಚ್ಚರಾಯರು, ಕಮಲಾಪುರ ಶಾಂತರಾಯರು, ಬುರ್ಲಿ ಬಿಂದು ಮಾಧವರು, ರಾಘವೇಂದ್ರಾಚಾರ್ಯ ಪಂಚಮುಖಿಯರು ಸಾಮೂಹಿಕವಾಗಿ ದಾಸಸಾಹಿತ್ಯದ ಗಣಿಯನ್ನು ಅಗೆದು ಚಿನ್ನವನ್ನು ಹೊರತೆಗೆದು ದುಡಿದವರು. ಪಂಢರಿನಾಥ ಆಚಾರ್ಯ ಗಲಗಲಿ ಅವರು 'ಮಧ್ವವಾಙ್ಮಯ ತಪಸ್ವಿಗಳು' ಎಂಬ ಬೃಹತ್ ಶೋಧಗ್ರಂಥವನ್ನು ತಯಾರಿಸುವಲ್ಲಿಯೇ ವಾಙ್ಮಯ ತಪಸ್ಸನ್ನು ಮಾಡಿದ್ದಾರೆ. ಅವರ ವಾಙ್ಮಯ ನಿರ್ಮಿತಿ, ವಾಕ್‌ಶಕ್ತಿ, ವಾಗ್ದೇವಿಯ ಆರಾಧನೆ ಎಲ್ಲವೂ ಸ್ತುತ್ಯವಾಗಿವೆ. ಧಾರವಾಡದ ಮಂಗಳವಾರಪೇಟೆ ಶುಕ್ರವಾರಪೇಟೆಗಳು ವೈಷ್ಣವ ಬ್ರಾಹ್ಮಣರ ಅಗ್ರಹಾರಗಳಂತಿದ್ದು, ಇಲ್ಲಿ ರಾಘವೇಂದ್ರ ಸ್ವಾಮಿಗಳ ಮಠ, ನರಸಿಂಹ ದೇವಸ್ಥಾನ, ವಿಠೋಬ ದೇವಸ್ಥಾನ, ಮುದಿಮಾರುತಿ ದೇವಸ್ಥಾನ, ವೆಂಕಟೇಶ್ವರ ದೇವಸ್ಥಾನ, ಹನುಮಂತದೇವರು, ಹೊಸ ಎಲ್ಲಾಪುರದ ಪ್ರಾಚೀನ ಪ್ರಾಣದೇವರು ಈ ದೇವರ ಭಕ್ತರು ಹರಿಭಕ್ತಿಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಧಾರವಾಡ ಜಿಲ್ಲೆಯಲ್ಲಿ ಮುಖ್ಯವಾಗಿ ಗದಗ, ರಾಣೆಬೆನ್ನೂರು, ಕರ್ಜಗಿ, ಕದರಮಂಡಲಗಿ, ಸಾತೇನಹಳ್ಳಿ, ಮುಂಡರಗಿ, ಹಾನಗಲ್, (ಇಲ್ಲಿ ಜಮುಖಂಡಿ ಆಚಾರ್ಯರು ಇದ್ದರು.), ಅಣ್ಣಿಗೇರಿ, ಗಜೇಂದ್ರಗಡ, ಬಂಕಾಪುರ, ಅಗಡಿ, ರಟ್ಟೆಹಳ್ಳಿ, ನರೇಗಲ್, ಗುತ್ತಲ, ಚಿಕ್ಕೆರೂರು ಇವೆಲ್ಲ ವೈಷ್ಣವ ಪಂಥದ ನೆಲವೀಡಾಗಿ ತಮ್ಮ ಕೊಡುಗೆ ಸಲ್ಲಿಸಿವೆ. ಸವಣೂರು, ಹೊಸರಿತ್ತಿ, ಬಾಡ, ಕಾಗಿನೆಲೆ ಪುಣ್ಯ ವೃಂದಾವನಗಳು ದೇವಸ್ಥಾನಗಳಿಂದಲೂ ಜಾಗೃತಿಯನ್ನುಂಟುಮಾಡಿ ಭಕ್ತಿಯ ಬೀಡುಗಳಾಗಿವೆ.

ಮಧ್ವಪಂಡಿತರಲ್ಲಿ ಹುಬ್ಬಳ್ಳಿಯ ನರಸಿಂಹಾಚಾರ್ಯ ಅಣ್ಣಿಗೇರಿ, ಧಾರವಾಡದ ಭೀಮಾಚಾರ್ಯ ಮುದ್ದಾಪುರ, ಹಾವನೂರು ಬಿಂದಾಚಾರ್ಯ, ಜಾಗಿರದಾರ ಬಿಂದು ಮಾಧವಾಚಾರ್ಯ, ಅನಂತಾಚಾರ್ಯ ಬಾಗಲಕೋಟೆ, ನಾರಾಯಣಾಚಾರ್ಯ ಹಾವನೂರ, ಕೃಷ್ಣಾಚಾರ್ಯ ಪಾಚಪ್ಪಾಪುರ, ಹುಚ್ಚಾಚಾರ್ಯ, ವಡವಿ ಭೀಮಾಚಾರ್ಯ, ಮುನವಳ್ಳಿ ಸುಬ್ಬಣ್ಣಾಚಾರ್ಯ ಶೇಷಗಿರಿ, ನಾರಾಯಣಾಚಾರ್ಯ ಪಾಮಾಡಿ, ಗದುಗಿನ ಶ್ರೀನಿವಾಸಾಚಾರ್ಯ ಹೊಂಬಾಳಿ ಮೊದಲಾದವರನ್ನು ನೆನೆಯಬೇಕು.

ಧಾರವಾಡ ಪುರಾಣೇತಿಹಾಸ ಕಾಲದಿಂದಲೂ ಪ್ರಸಿದ್ಧ ಕದಂಬ, ಚಾಲುಕ್ಯ, ರಾಷ್ಟ್ರಕೂಟ, ರಟ್ಟ, ದೇವಗಿರಿ ಯಾದವರ ಆಧಿಪತ್ಯಕ್ಕೆ ಒಳಪಟ್ಟು, ವಿಜಯನಗರ ಕಾಲದಲ್ಲಿ ದಾಸ ಸಾಹಿತ್ಯಕ್ಕೆ ಜೀವಕಳೆ ಬಂತು. ಮುಂದೆ ವಿಜಾಪುರದ ಆದಿಲ್ ಶಾಹಿ ಈ ನಾಡನ್ನು ವಶಪಡಿಸಿಕೊಂಡು ಔರಂಗಜೇಬನ ಮಗನ ಅಧೀನದ ಬಳಿಕ, ೧೭೫೫ರಲ್ಲಿ ಪೇಶ್ವೆ ಅವರ ವಶ. ೧೭೭೪ರಲ್ಲಿ ಮೈಸೂರಿನ ಹೈದರನ ವಶ, ೧೮೧೮ರಲ್ಲಿ ಬ್ರಿಟೀಷ ಆಡಳಿತಕ್ಕೆ ಬಂತು. ಇದು ಏನಿದ್ದರೂ ಧಾರವಾಡ ಜಿಲ್ಲೆ ಕಾಲಕಾಲಕ್ಕೆ ಭಕ್ತಿಯ ಜಾಗೃತಿಗಾಗಿ ದುಡಿದಿದೆ. ೫೫೩.

ವೇದಗಳಲ್ಲಿ ಸ್ವರಗಳು ಮಹತ್ತರವಾದ ಸ್ಥಾನವನ್ನು ಪಡೆದಿವೆ. ಸ್ವರಗಳನ್ನು ಪ್ರತ್ಯೇಕಿಸಿ ವೇದೋಚ್ಚಾರಣೆ ಮಾಡುವಂತಿಲ್ಲ. ಏಕೆಂದರೆ ಸ್ವರಗಳು ವೇದದ ಅರ್ಥನಿರ್ಣಾಯಕಗಳೂ ಆಗಿವೆ. ಆದ್ದರಿಂದಲೇ ಸ್ವರಗಳನ್ನು ವ್ಯತ್ಯಾಸವಾಗಿ ಉಚ್ಚರಿಸುವಂತಿಲ್ಲ. ಸ್ವರೋಚ್ಚಾರಣೆ ವ್ಯತ್ಯಾಸವಾದರೆ ಅರ್ಥವೂ ವ್ಯತ್ಯಾಸವಾಗಿ ಉದ್ದಿಷ್ಟ ಅರ್ಥವು ಅದರಿಂದ ಬಾರದೆ ಅನರ್ಥವು ಉಂಟಾಗುತ್ತದೆ ಎಂದು ಹೇಳಲಾಗಿದೆ. 'ಇಂದ್ರಶತ್ರುರ್ವರ್ಧಸ್ವ' ಎಂಬ ಮಂತ್ರವನ್ನು ಅಂತೋದಾತ್ತವಾಗಿ 'ಇಂದ್ರಶತ್ರುರ್ವರ್ಧಸ್ವ' ಎಂದು ಹೇಳಬೇಕಾ
— — —
ಗಿತ್ತು. ಆಗ ಷಷ್ಠೀತತ್ಪುರುಷ ಸಮಾಸವಾಗಿ 'ಇಂದ್ರಸ್ಯ ಶತ್ರುಃವರ್ಧಸ್ವ' (ಇಂದ್ರನ ಸಂಹಾರಕನು ವೃದ್ಧಿಸಲಿ) ಎಂಬ ಉದ್ದಿಷ್ಟಾರ್ಥವು ಉಂಟಾಗುತ್ತಿತ್ತು.[1] ಆದರೆ ಅಜಾಗರೂಕತೆಯಿಂದ ಈ ಮಂತ್ರವನ್ನು ಆದ್ಯುದಾತ್ತವಾಗಿ 'ಇಂದ್ರಶತ್ರುರ್ವರ್ಧಸ್ವ' ಎಂದು ಪಠಿಸಿದ ನಿಮಿತ್ತ ಬಹುವ್ರೀಹಿ ಸಮಾಸವಾಗಿ[2] 'ಇಂದ್ರಃ ಶತ್ರುಃ ಯಸ್ಯ ಸಃ' (ಇಂದ್ರನು ಸಂಹಾರಕನು ಯಾರಿಗೋ ಅವನು ವೃದ್ಧಿಸಲಿ ಅಂದರೆ ಇಂದ್ರನಿಂದ ಸಂಹರಿಸಲ್ಪಡುವವನು ವೃದ್ಧಿಸಲಿ) ಎಂದಾಗಿ, ವೃತ್ರಾಸುರನು ಇಂದ್ರನನ್ನು ಸಂಹಾರಮಾಡುವ ಬದಲು ಇಂದ್ರನಿಂದ ವೃತ್ರಾಸುರನೇ ಸಂಹಾರಮಾಡಲ್ಪಟ್ಟನು ಎಂಬ ಆಖ್ಯಾಯಿಕೆಯು ತೈತ್ತಿರೀಯ ಸಂಹಿತೆ (೨.೫.೨)ಯಲ್ಲಿ ಉಕ್ತವಾಗಿದೆ. ಇದೇ ಅಭಿಪ್ರಾಯವನ್ನು ಪಾಣಿನಿಯ ಶಿಕ್ಷೆಯಲ್ಲಿಯೂ ಕಾಣಬಹುದಾಗಿದೆ :

ಮಂತ್ರೋ ಹೀನಃ ಸ್ವರತೋ ವರ್ಣತೋ ವಾ
ಮಿಥ್ಯಾಪ್ರಯುಕ್ತೋ ನ ತಮರ್ಥಮಾಹ ।
ಸ ವಾಗ್ವಜ್ರೋ ಯಜಮಾನಂ ಹಿನಸ್ತಿ
ಯಥೇಂದ್ರಶತ್ರುಃ ಸ್ವರತೋಽಪರಾಧಾತ್॥ (ಪಾ.ಶಿ.೫೨)

ಈ ಮೇಲಿನ ಅಂಶಗಳಿಂದ ಸ್ವರಗಳು ವೇದಮಂತ್ರಗಳ ಅರ್ಥನಿರ್ಣಾಯಕಗಳಾಗಿರುವ ಅಂಶ ಗಮನಕ್ಕೆ ಬರುತ್ತದೆ. ಸ್ವರಗಳು ವೇದಾರ್ಥನಿರ್ಣಾಯಕ ಎಂಬುದನ್ನು ನಿರುಕ್ತಕಾರನು 'ಸ್ವರ್ಯಂತೇ ಅರ್ಥಾಃ ಏಭಿಃ' (ಈ ಸ್ವರಗಳಿಂದ ಅರ್ಥಗಳು ಸ್ಫುರಿಸುತ್ತವೆ)

ಎಂಬ ಮಾತಿನಿಂದ ಸ್ಪಷ್ಟಪಡಿಸಿದ್ದಾನೆ. ಇದನ್ನೇ ಋಗ್ವೇದ ಭಾಷ್ಯಕಾರ ವೇಂಕಟ ಮಾಧವನೂ ಹೇಳಿರುತ್ತಾನೆ :

> ಅಂಧಕಾರೇ ದೀಪಶಿಖಾಭಿಃ ಗಚ್ಛನ್ನಸ್ಖಲತಿ ಕ್ವಚಿತ್।
> ಏವಂ ಸ್ವರೈಃ ಪ್ರಣೀತಾನಾಂ ಭವಂತಿ ಅರ್ಥಾಃ ಸ್ಫುಟಾಃ ಇತಿ॥

(ಕತ್ತಲೆಯಿರುವಲ್ಲಿ ಬೆಳಕಿನೊಂದಿಗೆ ಹೋದರೆ ಬೀಳುವುದಿಲ್ಲ. ಅದರಂತೆಯೇ ಸ್ವರಸಹಿತ ವೇದೋಚ್ಚಾರಣೆಯಿಂದ ವೇದಾರ್ಥಗಳು ಸ್ಫುಟವಾಗಿ ಆಗುತ್ತವೆ.)

ಪಾಠಕನು ಪಠಿಸಿದಂತೆ ವೇದಮಂತ್ರಗಳು ಉಚ್ಚಾರಣೆಗೆ ಅನುಗುಣವಾಗಿ ಫಲವನ್ನು ಕೊಡುವುವು ಎಂಬುದು ಮೇಲಿನ ಕಥಾಭಾಗದಿಂದ ಅರಿವಾಗುವುದು. ಇಂತಹ ಮಹತೀ ಶಕ್ತಿ ವೇದಮಂತ್ರಗಳಿಗಿದೆ ಎಂಬುದು ನಮ್ಮ ಪೂರ್ವಜರ ದೃಢವಾದ ಅಭಿಮತ. 'ಧ್ಯಾನಸ್ಥಾಃ ವರದಾ ಮಂತ್ರಾಃ ಸ್ಥಾನಸ್ಥಾಸ್ತು ಫಲಪ್ರದಾಃ' ಎಂಬ ಪ್ರಸಿದ್ಧವಾದ ಉಕ್ತಿಯೂ ಸಹ ಅದನ್ನೇ ಬೋಧಿಸುತ್ತದೆ. ಹೀಗೆ ವೇದಗಳಲ್ಲಿಯ ಸ್ವರಗಳು ಬಹಳ ಮಹತ್ತ್ವವನ್ನು ಪಡೆದಿವೆ. ಸಸ್ವರವಲ್ಲದ ವೇದೋಚ್ಚಾರಣೆಯು ಉದ್ದಿಷ್ಟಫಲವನ್ನು ಕೊಡಲಾರದು.

## ಸ್ವರಗಳು ಹಾಗೂ ಅವುಗಳ ಸ್ವರೂಪ

ವೈದಿಕ ಸ್ವರಗಳು ಉದಾತ್ತ, ಅನುದಾತ್ತ ಹಾಗೂ ಸ್ವರಿತಗಳೆಂದು ಮುಖ್ಯವಾಗಿ ಮೂರು ಬಗೆ.[3] ಇವುಗಳಲ್ಲದೆ ಉದಾತ್ತತರ, ಅನುದಾತ್ತತರ, ಮತ್ತು ಪ್ರಚಯಗಳೆಂದು ಇನ್ನೂ ಮೂರು ಅವುಗಳ ಮಾರ್ಪಾಡಿನ ಸ್ವರಗಳಿವೆ. ಉದಾತ್ತ ಅನುದಾತ್ತ ಸ್ವರಿತಸ್ವರಗಳು ಅಲ್ಪಸ್ವಲ್ಪ ಬೇರೆಯ ಶ್ರುತಿಯಲ್ಲಿ ಉಚ್ಚಾರಗೊಂಡು ಕ್ರಮವಾಗಿ ಉದಾತ್ತತರ, ಅನುದಾತ್ತತರ, ಪ್ರಚಯುಗಳೆಂಬ ಸ್ವರಗಳಾಗುತ್ತವೆ. ಆದ್ದರಿಂದ ಇವುಗಳನ್ನು ಮುಖ್ಯಸ್ವರಗಳೆಂದು ಪರಿಗಣಿಸುವುದಿಲ್ಲ. ಉದಾತ್ತವೆಂಬ ಸ್ವರಕ್ಕೆ ಪ್ರಕೃತಿಸ್ವರವೆಂದು ಅನುದಾತ್ತತರವೆಂಬ ಸ್ವರಕ್ಕೆ ಸನ್ನತರವೆಂದೂ ಪ್ರಚಯಸ್ವರಕ್ಕೆ ಏಕಶ್ರುತಿ ಎಂದೂ ಬೇರೆ ಹೆಸರುಗಳಿವೆ. ಸ್ವರಗಳು ಅವುಗಳ ಹೆಸರೇ ತಿಳಿಸುವಂತೆ ಯಾವಾಗಲೂ ಸ್ವರಾಕ್ಷರಗಳ (ಅಚ್) ಧರ್ಮ. ಸ್ವರವೆಂದರೆ ಇಲ್ಲಿ ಧ್ವನಿಯ ಏರಿಳಿತಗಳು ಎಂದು ಸಾಮಾನ್ಯವಾಗಿ ಹೇಳಬಹುದು.

**ಉದಾತ್ತಸ್ವರ :** ತಮ್ಮ ತಮ್ಮ ಭಾಗಗಳಿಗೆ ಅನುಗುಣವಾಗಿ ತಾಲ್ವಾದಿ ಸ್ಥಾನಗಳ ಮೇಲ್ಭಾಗಗಳಲ್ಲಿ ಉಚ್ಚಾರಗೊಳ್ಳುವ ಸ್ವರಾಕ್ಷರಗಳೇ ಉದಾತ್ತಸ್ವರಗಳು.[4] ಉದಾತ್ತ ಉಚ್ಚಸ್ವರ; ಆದರೆ ಅದು ವೇದದಲ್ಲಿ ಸಮುಪಟ್ಟದ ಮಧ್ಯಮಸ್ವರವಾಗಿ ಪಠಿತವಾಗುತ್ತದೆ. ಲಿಖಿತರೂಪದ ಪಾಠದಲ್ಲಿ (ಬರವಣಿಗೆಯಲ್ಲಿ) ಈ ಸ್ವರಕ್ಕೆ ಯಾವ ಚಿಹ್ನೆಯನ್ನೂ ಉಪಯೋಗಿಸುವುದಿಲ್ಲ. ಲಿಖಿತಪಾಠದಲ್ಲಿ ಯಾವ ಚಿಹ್ನೆಯೂ ಇಲ್ಲದ ಯಾವ ಸ್ವರಾಕ್ಷರವಿದೆಯೋ ಅದೇ ಉದಾತ್ತಸ್ವರ ಎಂದು ಗುರುತಿಸಲಾಗಿದೆ. ಕೆಲವೆಡೆ ಈ ಉದಾತ್ತಸ್ವರವು ತನ್ನ ಶ್ರುತಿಗಿಂತ ಸ್ವಲ್ಪ ಮೇಲಿನ ಶ್ರುತಿಯಲ್ಲಿ ಉಚ್ಚರಿತವಾಗುವುದು. ಆಗ ಈ ಸ್ವರವನ್ನು **'ಉದಾತ್ತತರ'** ಎಂದು ಕರೆಯಲಾಗುವುದು.

ಎಂಬ ಮಾತಿನಿಂದ ಸ್ಪಷ್ಟಪಡಿಸಿದ್ದಾನೆ. ಇದನ್ನೇ ಋಗ್ವೇದ ಭಾಷ್ಯಕಾರ ವೇಂಕಟ ಮಾಧವನೂ ಹೇಳಿರುತ್ತಾನೆ :

> ಅಂಧಕಾರೇ ದೀಪಶಿಖಾಭಿಃ ಗಚ್ಛನ್ನಸ್ಖಲತಿ ಕ್ವಚಿತ್।
> ಏವಂ ಸ್ವರೈಃ ಪ್ರಣೀತಾನಾಂ ಭವಂತಿ ಅರ್ಥಾಃ ಸ್ಫುಟಾಃ ಇತಿ॥

(ಕತ್ತಲೆಯಿರುವಲ್ಲಿ ಬೆಳಕಿನೊಂದಿಗೆ ಹೋದರೆ ಬೀಳುವುದಿಲ್ಲ. ಅದರಂತೆಯೇ ಸ್ವರಸಹಿತ ವೇದೋಚ್ಚಾರಣೆಯಿಂದ ವೇದಾರ್ಥಗಳು ಸ್ಫುಟವಾಗಿ ಆಗುತ್ತವೆ.)

ಪಾಠಕನು ಪಠಿಸಿದಂತೆ ವೇದಮಂತ್ರಗಳು ಉಚ್ಚಾರಣೆಗೆ ಅನುಗುಣವಾಗಿ ಫಲವನ್ನು ಕೊಡುವುವು ಎಂಬುದು ಮೇಲಿನ ಕಥಾಭಾಗದಿಂದ ಅರಿವಾಗುವುದು. ಇಂತಹ ಮಹತೀ ಶಕ್ತಿ ವೇದಮಂತ್ರಗಳಿಗಿದೆ ಎಂಬುದು ನಮ್ಮ ಪೂರ್ವಜರ ದೃಢವಾದ ಅಭಿಮತ. 'ಧ್ಯಾನಸ್ಥಾಃ ವರದಾ ಮಂತ್ರಾಃ ಸ್ಥಾನಸ್ಥಾಸ್ತು ಫಲಪ್ರದಾಃ' ಎಂಬ ಪ್ರಸಿದ್ಧವಾದ ಉಕ್ತಿಯೂ ಸಹ ಅದನ್ನೇ ಬೋಧಿಸುತ್ತದೆ. ಹೀಗೆ ವೇದಗಳಲ್ಲಿಯ ಸ್ವರಗಳು ಬಹಳ ಮಹತ್ತ್ವವನ್ನು ಪಡೆದಿವೆ. ಸಸ್ವರವಲ್ಲದ ವೇದೋಚ್ಚಾರಣೆಯು ಉದ್ದಿಷ್ಟಫಲವನ್ನು ಕೊಡಲಾರದು.

## ಸ್ವರಗಳು ಹಾಗೂ ಅವುಗಳ ಸ್ವರೂಪ

ವೈದಿಕ ಸ್ವರಗಳು ಉದಾತ್ತ, ಅನುದಾತ್ತಹಾಗೂ ಸ್ವರಿತಗಳೆಂದು ಮುಖ್ಯವಾಗಿ ಮೂರು ಬಗೆ.[3] ಇವುಗಳಲ್ಲದೆ ಉದಾತ್ತತರ, ಅನುದಾತ್ತತರ, ಮತ್ತು ಪ್ರಚಯುಗಳೆಂದು ಇನ್ನೂ ಮೂರು ಅವುಗಳ ಮಾರ್ಪಾಡಿನ ಸ್ವರಗಳಿವೆ. ಉದಾತ್ತ ಅನುದಾತ್ತ ಸ್ವರಿತಸ್ವರಗಳು ಅಲ್ಪಸ್ವಲ್ಪ ಬೇರೆಯ ಶ್ರುತಿಯಲ್ಲಿ ಉಚ್ಚಾರಗೊಂಡು ಕ್ರಮವಾಗಿ ಉದಾತ್ತತರ, ಅನುದಾತ್ತತರ, ಪ್ರಚಯುಗಳೆಂಬ ಸ್ವರಗಳಾಗುತ್ತವೆ. ಆದ್ದರಿಂದ ಇವುಗಳನ್ನು ಮುಖ್ಯಸ್ವರಗಳೆಂದು ಪರಿಗಣಿಸುವುದಿಲ್ಲ. ಉದಾತ್ತವೆಂಬ ಸ್ವರಕ್ಕೆ ಪ್ರಕೃತಿಸ್ವರವೆಂದು ಅನುದಾತ್ತತರವೆಂಬ ಸ್ವರಕ್ಕೆ ಸನ್ನತರವೆಂದೂ ಪ್ರಚಯುಸ್ವರಕ್ಕೆ ಏಕಶ್ರುತಿ ಎಂದೂ ಬೇರೆ ಹೆಸರುಗಳಿವೆ. ಸ್ವರಗಳು ಅವುಗಳ ಹೆಸರೇ ತಿಳಿಸುವಂತೆ ಯಾವಾಗಲೂ ಸ್ವರಾಕ್ಷರಗಳ (ಅಚ್) ಧರ್ಮ. ಸ್ವರವೆಂದರೆ ಇಲ್ಲಿ ಧ್ವನಿಯ ಏರಿಳಿತಗಳು ಎಂದು ಸಾಮಾನ್ಯವಾಗಿ ಹೇಳಬಹುದು.

**ಉದಾತ್ತಸ್ವರ :** ತಮ್ಮ ತಮ್ಮ ಭಾಗಗಳಿಗೆ ಅನುಗುಣವಾಗಿ ತಾಲ್ವಾದಿ ಸ್ಥಾನಗಳ ಮೇಲ್ಭಾಗಗಳಲ್ಲಿ ಉಚ್ಚಾರಗೊಳ್ಳುವ ಸ್ವರಾಕ್ಷರಗಳೇ ಉದಾತ್ತಸ್ವರಗಳು.[4] ಉದಾತ್ತ ಉಚ್ಚಸ್ವರ; ಆದರೆ ಅದು ವೇದದಲ್ಲಿ ಸಮಮಟ್ಟದ ಮಧ್ಯಮಸ್ವರವಾಗಿ ಪಠಿತವಾಗುತ್ತದೆ. ಲಿಖಿತರೂಪದ ಪಾಠದಲ್ಲಿ (ಬರವಣಿಗೆಯಲ್ಲಿ) ಈ ಸ್ವರಕ್ಕೆ ಯಾವ ಚಿಹ್ನೆಯನ್ನೂ ಉಪಯೋಗಿಸುವುದಿಲ್ಲ. ಲಿಖಿತಪಾಠದಲ್ಲಿ ಯಾವ ಚಿಹ್ನೆಯೂ ಇಲ್ಲದ ಯಾವ ಸ್ವರಾಕ್ಷರವಿದೆಯೋ ಅದೇ ಉದಾತ್ತಸ್ವರ ಎಂದು ಗುರುತಿಸಲಾಗಿದೆ. ಕೆಲವೆಡೆ ಈ ಉದಾತ್ತ ಸ್ವರವು ತನ್ನ ಶ್ರುತಿಗಿಂತ ಸ್ವಲ್ಪ ಮೇಲಿನ ಶ್ರುತಿಯಲ್ಲಿ ಉಚ್ಚರಿತವಾಗುವುದು. ಆಗ ಈ ಸ್ವರವನ್ನು **'ಉದಾತ್ತತರ'** ಎಂದು ಕರೆಯಲಾಗುವುದು.

**ಅನುದಾತ್ತಸ್ವರ :** ಉದಾತ್ತಸ್ವರಕ್ಕಿಂತ ಕೆಳಗಿನ ಶ್ರುತಿಯಲ್ಲಿ (ಧ್ವನಿಯಲ್ಲಿ) ಉಚ್ಚರಿತವಾಗುವ ಸ್ವರವೇ 'ಅನುದಾತ್ತಸ್ವರ' ಎಂದು ಗುರುತಿಸಿದ್ದಾರೆ.[5] ಲಿಖಿತ ರೂಪದ ಪಾಠದಲ್ಲಿ ಈ ಸ್ವರದ ಕೆಳಗಡೆ ಒಂದು ಅಡ್ಡಗೆರೆ ಹಾಕಲಾಗುವುದು [—]. ಕೆಲವು ಸಂದರ್ಭಗಳಲ್ಲಿ ಈ ಸ್ವರದ ಶ್ರುತಿಗಿಂತಲೂ ಇನ್ನೂ ಕೆಳಗಿನ ಶ್ರುತಿಯಲ್ಲಿ ಇದನ್ನು ಉಚ್ಚರಿಸಲಾಗುವುದು. ಆ ಶ್ರುತಿಯನ್ನು **'ಅನುದಾತ್ತತರ'** ಎಂದು ಕರೆದಿದ್ದಾರೆ.[6] ಈ ಅನುದಾತ್ತತರಕ್ಕೆ 'ಸನ್ನತರ' ಎಂದೂ ಹೆಸರಿದೆ.

**ಸ್ವರಿತಸ್ವರ :** ಉದಾತ್ತಕ್ಕಿಂತಲೂ ಸ್ವಲ್ಪ ಮೇಲಿನ ಶ್ರುತಿಯಲ್ಲಿ ಉಚ್ಚಾರವಾಗುವ ಸ್ವರವೇ 'ಸ್ವರಿತಸ್ವರ' ಎಂದು ಹೇಳಲಾಗಿದೆ. ಲಿಖಿತರೂಪದ ಪಾಠದಲ್ಲಿ ಸ್ವರಿತಾಕ್ಷರವನ್ನು ತಿಳಿಸಲು ಅದರ ಮೇಲ್ಭಾಗದಲ್ಲಿ ಒಂದು ಉದ್ದಗೀಟನ್ನು ಹಾಕಲಾಗುವುದು [ | ]. ಸ್ವರಿತದ ಮುಂದಿರುವ (ಲಿಖಿತ ಪಾಠದಲ್ಲಿ ಯಾವ ಚಿಹ್ನೆಯನ್ನೂ ಬಳಸದ ಸ್ವರಿತಸ್ವರದ ಮುಂದಿನ) ಸ್ವರಾಕ್ಷರಗಳೆಲ್ಲ **'ಪ್ರಚಯ'** ಎಂದು ಉಲ್ಲೇಖಿಸಿದ್ದಾರೆ. ಸ್ವರಿತದ ಅನಂತರದಲ್ಲಿ ಬರುವ ಅನುದಾತ್ತಗಳೇ ಉದಾತ್ತದ ಶ್ರುತಿಯನ್ನು ಪಡೆದು ಪ್ರಚಯ ಎನಿಸಿಕೊಳ್ಳುತ್ತವೆ.[7]

**ಕಂಪ :** ಎರಡು ಸ್ವರಾಕ್ಷರಗಳು ಮಿಲಿತವಾದಾಗ ಪೂರ್ವಸ್ವರಕ್ಕೆ ಬರುವ ಉಚ್ಚಾರಣೆಗೆ 'ಕಂಪ' ಎನ್ನುವರು[8] (ಒಮ್ಮೆಲೇ ಎರಡು ಸ್ವರಿತಾಕ್ಷರಗಳನ್ನು ಉಚ್ಚರಿಸುವಾಗ ಮಧ್ಯೆ ಬೇರೆ ಸ್ವರವೊಂದನ್ನು ಉಚ್ಚರಿಸಬೇಕಾಗುವುದು. ಇಲ್ಲದಿದ್ದರೆ ಎರಡು ಸ್ವರಿತಾಕ್ಷರಗಳನ್ನು ಗುರುತಿಸಲಾಗದು. ಇದರಿಂದ ಎರಡು ಸ್ವರಿತಾಕ್ಷರಗಳ ಮಧ್ಯೆ ಉದಾತ್ತಾದಿ ಸ್ವರಗಳು ಬರುತ್ತವೆ). ಈ ಕಂಪವು ಹ್ರಸ್ವಕಂಪ ಹಾಗೂ ದೀರ್ಘಕಂಪ ಎಂಬುದಾಗಿ ಎರಡು ಬಗೆ. ಲಿಖಿತ ಪಾಠದಲ್ಲಿ ಹ್ರಸ್ವಕಂಪಕ್ಕೆ (१) ಚಿಹ್ನೆಯನ್ನೂ ದೀರ್ಘಕಂಪಕ್ಕೆ (३) ಚಿಹ್ನೆಯನ್ನೂ ಬರೆಯುತ್ತಾರೆ.

ಇನ್ನು ಮುಂದೆ ಕ್ರಮವಾಗಿ ಉದಾತ್ತಾನುದಾತ್ತಾದಿ ಸ್ವರಗಳ ಉಚ್ಚಾರಣೆಯ ಸಂದರ್ಭಗಳನ್ನು ಸೋದಾಹರಣವಾಗಿಯೂ ಸಾಧಾರವಾಗಿಯೂ ಸ್ಥೂಲವಾಗಿ ವಿವರಿಸಲಾಗುವುದು.

### ೧. ಉದಾತ್ತಸ್ವರ

(೧) ಉದಾತ್ತಸ್ವರವು ಬರುವ ಸಂದರ್ಭವಿದ್ದಾಗ ಒಂದು ಪದದಲ್ಲಿ ಒಂದೇ ಉದಾತ್ತ ಸ್ವರವು ಬರುತ್ತದೆ.[9] ಆದರೆ ದೇವತಾದ್ವಂದ್ವ ಪದದಲ್ಲಿ ಅಂದರೆ ಎರಡು ದೇವತೆಗಳ ಹೆಸರಿರುವ ಪದವೊಂದರಲ್ಲಿ, ಒಂದೇ ಪದವಾಗಿದ್ದರೂ ಎರಡು ಉದಾತ್ತಸ್ವರಗಳು ಬರುತ್ತವೆ.[10]

ಉದಾ.—ದ್ಯಾವಾ ಪೃಥಿವೀ (ಋಗ್ವೇದ, ೧.೩೫.೯)

'ದ್ಯೌಶ್ಚ ಪೃಥಿವೀ ಚ' ಎಂದು ಇದರ ವಿಗ್ರಹ. ಈ ಪದದಲ್ಲಿ ಎರಡು ದೇವತೆ (ದ್ಯೌಃ ಮತ್ತು ಪೃಥಿವೀ)ಗಳ ಹೆಸರು ಬಂದಿದೆ. ಇದರಿಂದ ಇದು ದೇವತಾದ್ವಂದ್ವ ಪದ. ಆದ್ದರಿಂದ ನಿಯಮಕ್ಕನುಗುಣವಾಗಿ 'ದ್ಯಾ' ಮತ್ತು 'ವೀ' ಎಂಬೆರಡು ಅಕ್ಷರಗಳು ಉದಾತ್ತಯುಕ್ತವಾಗಿವೆ.

(೨) ಕ್ರಿಯಾಪದವು ಪಾದದ ಆದಿಯಲ್ಲಾಗಲಿ ಅಥವಾ ವಾಕ್ಯದ ಆದಿಯಲ್ಲಾಗಲಿ ಇದ್ದರೆ ಅಂತಹ ಕ್ರಿಯಾಪದವು ಒಂದು ಉದಾತ್ತಸ್ವರವನ್ನು ಪಡೆಯುವುದು.[11]

ಉದಾ —ಯಾತಿ ದೇವಃ ಪ್ರವತಾ ಯಾತ್ಯುದ್ವತಾ (ಋ. ೧.೩೫.೩)

ಈ ಉದಾಹರಣೆಯಲ್ಲಿ 'ಯಾತಿ...ಯಾತಿ' ಎಂದು ಎರಡು ಕ್ರಿಯಾಪದಗಳಿವೆ. ಮೊದಲನೆಯ 'ಯಾತಿ' ಎಂಬ ಕ್ರಿಯಾಪದವು ಪಾದದ ಆದಿಯಲ್ಲಿರುವುದು. ಎರಡನೆಯ 'ಯಾತಿ' ಎಂಬ ಕ್ರಿಯಾಪದವು ವಾಕ್ಯದ ಆದಿಯಲ್ಲಿರುವುದು. ಇದರಿಂದ ನಿಯಮಾನುಸಾರ ಎರಡೂ ಕ್ರಿಯಾಪದದಲ್ಲಿರುವ 'ಯಾ(ಆ)' ಎಂಬ ಅಕ್ಷರಕ್ಕೆ ಉದಾತ್ತಸ್ವರ ಬಂದಿರುವುದು.

(೩) ಯಚ್ಛಬ್ದವಿರುವ ಅಧೀನ ವಾಕ್ಯದಲ್ಲಿ ಕ್ರಿಯಾಪದಕ್ಕೆ ಒಂದು ಉದಾತ್ತ ಸ್ವರವು ಬರುತ್ತದೆ.[12] ಇಂತಹ ವಾಕ್ಯದಲ್ಲಿ ಕ್ರಿಯಾಪದವು ಪಾದದ ಆದಿಯಲ್ಲಿ ಅಥವಾ ವಾಕ್ಯದ ಆದಿಯಲ್ಲಿ ಇರಬೇಕಾಗಿಲ್ಲ.

ಉದಾ—ಯಃ ಪಾರ್ಥಿವಾನಿ ವಿಮಮೇ ರಜಾಂಸಿ (ಋ. ೧.೧೫೪.೧)

ಈ ಮೇಲಿನ ವಾಕ್ಯದಲ್ಲಿ 'ಯಃ' ಎಂಬುದು ಯಚ್ಛಬ್ದರೂಪ. 'ವಿಮಮೇ' ಎಂಬುದು ಕ್ರಿಯಾಪದ. ಈ ಕ್ರಿಯಾಪದವು ಪಾದಾದಿಯಲ್ಲಾಗಲಿ ಅಥವಾ ವಾಕ್ಯದ ಆದಿಯಲ್ಲಾಗಲಿ ಇಲ್ಲ. ಆದರೂ ಈ ವಾಕ್ಯದಲ್ಲಿ ಯಚ್ಛಬ್ದ ಪ್ರಯೋಗವಿರುವುದರಿಂದ ನಿಯಮಕ್ಕನುಗುಣವಾಗಿ 'ವಿಮಮೇ' ಎಂಬ ಕ್ರಿಯಾಪದದಲ್ಲಿರುವ ಮಕಾರೋತ್ತರ 'ಏ'ಕಾರಕ್ಕೆ ಒಂದು ಉದಾತ್ತಸ್ವರ ಬಂದಿದೆ.

(೪) ಚ, ಚೇತ್, ಹಿ ಮತ್ತು ಕುವಿತ್‌ಗಳೆಂಬ ಪದ (ನಿಪಾತ)ಗಳಲ್ಲಿ ಯಾವುದೇ ಒಂದು ವಾಕ್ಯವೊಂದರಲ್ಲಿ ಪ್ರಯೋಗಗೊಂಡರೂ ಆ ವಾಕ್ಯದಲ್ಲಿಯ ಕ್ರಿಯಾಪದವು ಒಂದು ಉದಾತ್ತಸ್ವರದಿಂದ ಕೂಡಿರುವುದು.[13]

ಉದಾ—

ಚಕಾರಕ್ಕೆ—ಜ್ಯೋಕ್ಚ ಸೂರ್ಯಂ ದೃಶೇ (ತೈತ್ತಿರೀಯ ಆರಣ್ಯಕ, ೪.೪.೬)

'ಹಿ' ಎಂಬುದಕ್ಕೆ—ಭೂಯಸೀರ್ಹಿ ದೇವತಾಃ ಪ್ರೀಣಾತಿ

(ತೈತ್ತಿರೀಯ ಸಂಹಿತೆ, ೨.೬.೬)

ಚೇತ್—ನಾವ್ಮಾ ಚೇದ್ಧ್ಯಯೇತೇ (ತೈತ್ತಿರೀಯ ಬ್ರಾಹ್ಮಣ. ೩.೮.೩)

ಕುವಿತ್—ಕುವಿತ್ಸ ದೇವೀಃ ಸನಯೋ ನವೋ ವಾ

ಯಾಮೋ ಬಭೂಯಾದುಷಸೋ ವೋ ಅದ್ಯ (ಋ. ೪.೫೧.೪)

ಈ ಮೇಲಿನ ವಾಕ್ಯಗಳಲ್ಲಿ ಕ್ರಮವಾಗಿ ದೃಶೇ, ಪ್ರೀಣಾತಿ, ಧ್ಯಯೇತೇ ಹಾಗೂ ಬಭೂಯಾತ್ ಎಂಬ ಪದಗಳು ಕ್ರಿಯಾಪದಗಳು. 'ತಿಙ್ಙತಿಙಃ' ಎಂಬ ನಿಯಮಕ್ಕನುಗುಣವಾಗಿ ಈ ಕ್ರಿಯಾಪದಗಳೆಲ್ಲ ಸರ್ವಾನುದಾತ್ತವಾಗಿ ಇರಬೇಕಿತ್ತು. ಆದರೆ ಈ ಮೇಲಿನ ವಾಕ್ಯಗಳಲ್ಲಿ ಕ್ರಮವಾಗಿ ಚ, ಹಿ, ಚೇತ್, ಕುವಿತ್‌ಗಳೆಂಬ ನಿಪಾತಗಳು ಇರುವುದರಿಂದ ಆ ಕ್ರಿಯಾಪದಗಳು ಸರ್ವಾನುದಾತ್ತವಾಗದೇ ಒಂದೊಂದು ಉದಾತ್ತಶ್ರುತಿಯುಕ್ತವಾಗಿವೆ. (ಶೇ. ಣಾ,ಧ್ಯ,ಯಾ).

(೫) ಸಮಾಸಪದಗಳಲ್ಲಿ ಒಂದು ಉದಾತ್ತಸ್ವರವು ಇರುತ್ತದೆ. ಮತ್ತು ಸಾಮಾನ್ಯವಾಗಿ ಅದು ಅಂತ್ಯದಲ್ಲಿ ಬರುತ್ತದೆ.[14] ಆದರೆ ಬಹುವ್ರೀಹಿಸಮಾಸದಲ್ಲಿ ಮಾತ್ರ ಪೂರ್ವಪದವು ಪ್ರಕೃತಿಸ್ವರವನ್ನು ಹೊಂದುವುದು.[15]

ಉದಾಹರಣೆಗಳು :

(ಅ) ಆದಿತ್ಯಗ್ರಹಃ...(ತೈತ್ತಿರೀಯ ಸಂಹಿತಾ, ೬.೫.೧೦.೧)

ಇದು ತತ್ಪುರುಷ ಸಮಾಸ. 'ಆದಿತ್ಯಸ್ಯ ಗ್ರಹಃ' ಎಂಬುದು ವಿಗ್ರಹವಾಕ್ಯ.

(ಆ) ವಿಶ್ವಾಮಿತ್ರಜಮದಗ್ನೀ ವಸಿಷ್ಠೇನ...(ತೈ.ಸಂ. ೩.೧.೭.೩)

ಇದು ದ್ವಂದ್ವಸಮಾಸ. 'ವಿಶ್ವಾಮಿತ್ರಶ್ಚ ಜಮದಗ್ನಿಶ್ಚ' ಎಂಬುದು ಅದರ ವಿಗ್ರಹ.

(ಇ) ಅವಾಂತರದೀಕ್ಷಯಾ...(ತೈ.ಸಂ. ೬.೨.೨.೭)

ಇದು ಕರ್ಮಧಾರಯ ಸಮಾಸ. 'ಅವಾಂತರಾ ಚಾಸೌ ದೀಕ್ಷಾ ಚ ತಯಾ' ಎಂಬುದು ಅದರ ವಿಗ್ರಹ.

(ಈ) ಅರ್ಧಮಾಸಾಃ...(ತೈತ್ತಿರೀಯ ಬ್ರಾಹ್ಮಣ, ೩.೭.೫.೪)

ಇದು ಅವ್ಯಯೀಭಾವ ಸಮಾಸ. 'ಮಾಸಾನಾಂ ಅರ್ಧಂ' ಎಂದು ಇದರ ವಿಗ್ರಹ.

(ಉ) ಹಿರಣ್ಯಶಮ್ಯಂ...(ಋ. ೧.೩೫.೪)

ಇದು ಬಹುವ್ರೀಹಿ ಸಮಾಸ. 'ಹಿರಣ್ಯಂ ಶಮ್ಯಂ ಯಸ್ಯ ಸಃ' ಎಂದು ಇದರ ವಿಗ್ರಹವಾಕ್ಯ.

ಈ ಮೇಲಿನ ಮೊದಲ ನಾಲ್ಕು ಉದಾಹರಣೆಗಳಲ್ಲಿ ಸಮಾಸಾಂತ (ಹಃ, ಗ್ನೀ, ಕ್ಷ,

Scanned by CamScanner

ಸಾಃ) ಉದಾತ್ತಸ್ವರಗಳನ್ನು ಕಾಣಬಹುದಾಗಿದೆ. ಐದನೆಯ ಉದಾಹರಣೆಯು ಬಹುವ್ರೀಹಿ ಸಮಾಸಕ್ಕೆ ಲಕ್ಷ್ಯ. ನಿಯಮಾನುಸಾರ ಅಲ್ಲಿ ಪೂರ್ವಪದವು ಪ್ರಕೃತಿಸ್ವರಯುಕ್ತವಾಗಿದೆ. ಅದರಲ್ಲಿ 'ಹಿ (ಇ)' ವರ್ಣವು ಉದಾತ್ತಸ್ವರ. ರೇಫವು ಸ್ವರಿತ ಸ್ವರ. ಉಳಿದ ವರ್ಣಗಳು ಪ್ರಚಯ.

(೬) ಪಾದದ ಆದಿಯಲ್ಲಿರುವ ಸಂಬೋಧನಾ ವಿಭಕ್ತಿಗೆ ಸರ್ವಾನುದಾತ್ತ ಬರುವ ಬದಲು ಒಂದು ಉದಾತ್ತಸ್ವರವು ಬರುತ್ತದೆ.[16]

ಉದಾ.—ವಾಯೋ ವೀಹಿ ಸ್ತೋಕಾನಾಂ (ತೈ.ಸಂ., ೧.೩.೯.೨)

ಇಲ್ಲಿ 'ವಾಯೋ' ಎಂಬುದು ಸಂಬೋಧನಾಪದ. ಅದು ಪಾದಾದಿಯಲ್ಲಿದೆ. ಇದರಿಂದ ಸರ್ವಾನುದಾತ್ತವಾಗುವ ಬದಲು ಒಂದು ಉದಾತ್ತಸ್ವರಯುಕ್ತವಾಗಿದೆ. 'ವಾ(ಅ)' ಎಂಬುದು ಉದಾತ್ತಸ್ವರ.

(೭) ಸ್ವರಸಂಧಿಗಳಲ್ಲಿ ಎರಡು ಸ್ವರಾಕ್ಷರಗಳು ಸೇರಿ ಒಂದು ಸ್ವರವು ಏಕಾದೇಶವಾಗಿ ಬರುವುದು. ಸಂಧಿಯಾಗುವ ಪೂರ್ವಪದಾಂತ್ಯಸ್ವರ ಹಾಗೂ ಉತ್ತರಪದಾದಿಯ ಸ್ವರಗಳು ಪರಸ್ಪರ ವಿಭಿನ್ನ ಸ್ವರಾಕ್ಷರಗಳಾದರೂ ಅವೆರಡೂ ಸ್ವರಗಳಿಗೆ ಸಂಧಿಕಾರ್ಯವಾದಾಗ ಒಂದು ಉದಾತ್ತಸ್ವರವು ಏಕಾದೇಶವಾಗಿ ಬರುತ್ತದೆ.[17]

ಉದಾ.—ಯಃ ಶಶ್ವತೋ ಮಹ್ಯೇನೋ... (ಋ., ೨.೧೨.೧೦)

ಇಲ್ಲಿ 'ಮಹಿ ಏನಃ' ಎಂದು ವ್ಯಸ್ತಪದಗಳು. ಪೂರ್ವಪದದ ಅಂತ್ಯವರ್ಣ 'ಹಿ(ಇ)' ಎಂಬುದು ಸ್ವರಿತಸ್ವರವಾಗಿದೆ. ಉತ್ತರಪದದ ಮೊದಲ ವರ್ಣ 'ಏ' ಎಂಬುದು ಉದಾತ್ತಸ್ವರವಾಗಿದೆ. ಸಂಧಿಕಾರ್ಯವಾದಾಗ ಉದಾತ್ತಸ್ವರವೊಂದೇ ಉಳಿದಿದೆ.

## ೨. ಅನುದಾತ್ತ ಸ್ವರ

(೧) ಅನುದಾತ್ತವು ಒಂದು ಪದದಲ್ಲಿ ಒಂದೇ ಬರಬೇಕೆಂಬ ನಿಯಮವೇನೂ ಇಲ್ಲ. ಆ ಪದದಲ್ಲಿರುವ ಸ್ವರಾಕ್ಷರಗಳಿಗೆ ಅನುಗುಣವಾಗಿ ಎಷ್ಟು ಅನುದಾತ್ತಗಳು ಬೇಕಾದರೂ ಬರಬಹುದು.[18]

(೨) ಪಾದಾದಿಯಲ್ಲಿಲ್ಲದ ಅಥವಾ ವಾಕ್ಯಾದಿಯಲ್ಲಿಲ್ಲದ ಆ ವಾಕ್ಯದ ಪ್ರಧಾನ ಕ್ರಿಯಾಪದವು ಸರ್ವಾನುದಾತ್ತವಾಗಿರುವುದು.[19]

ಉದಾ.—ಆ ದೇವೋ ಯಾತಿ ಸವಿತಾ ಪರಾವತಃ (ಋ. ೧.೩೫.೩)

ಈ ವಾಕ್ಯದಲ್ಲಿ 'ಯಾತಿ' ಎಂಬುದು ಕ್ರಿಯಾಪದ. ಅದು ವಾಕ್ಯದ ಅಥವಾ ಪಾದದ ಆರಂಭದಲ್ಲಿಲ್ಲ. ಇದರಿಂದ ಅದು ನಿಯಮಾನುಸಾರ ಸರ್ವಾನುದಾತ್ತವಾಗಿದೆ. 'ಯಾತಿ'

ಕ್ರಿಯಾಪದದ ಹಿಂದೆ ಉದಾತ್ತಸ್ವರವಿರುವುದರಿಂದ ಸಂಹಿತಾಪಾಠದಲ್ಲಿ 'ಯಾತಿ'ಯ ಮೊದಲ ಸ್ವರ ಸ್ವರಿತವಾಗಿದೆ.

(೩) ಪಾದದ ಆದಿಯಲ್ಲಿಲ್ಲದ ಸಂಬೋಧನಾ ಪ್ರಥಮಾಂತ ಶಬ್ದವು ಸರ್ವಾನುದಾತ್ತ ಸ್ವರಯುಕ್ತವಾಗುವುದು.[20]

ಉದಾ : ಯೋ ಅಪಾಂ ನೇತಾ ಸ ಜನಾಸ ಇಂದ್ರಃ (ಋ. ೨.೧೨.೭)

ಇಲ್ಲಿ ಸಂಬೋಧನಾ ಪ್ರಥಮಾಂತವು 'ಜನಾಸ' ಎಂಬ ಪದ. ಇದು ಪಾದಾದಿಯಲ್ಲಿಲ್ಲ. ಇದರಿಂದ ಅದಕ್ಕೆ ನಿಯಮಾನುಗುಣವಾಗಿ ಸರ್ವಾನುದಾತ್ತಸ್ವರ ಬಂದಿದೆ.

**ಅನುದಾತ್ತತರ :** ಸ್ವರಿತ ಸ್ವರದ ಮುಂದೆ ಇರುವ ಎಲ್ಲ ಸ್ವರವರ್ಣಗಳನ್ನೂ 'ಪ್ರಚಯ' ಎಂದು ಕರೆದಿದ್ದಾರೆ. ಲಿಖಿತ ಪಾಠದಲ್ಲಿ ಇದಕ್ಕೆ ಯಾವ ಚಿಹ್ನೆಯೂ ಇರುವುದಿಲ್ಲ. ಇಂತಹ ಪ್ರಚಯ ಸ್ವರಗಳ ಮುಂದೆ ಒಂದು ಉದಾತ್ತಸ್ವರ ಬಂದರೆ, ಆ ಉದಾತ್ತಸ್ವರದ ಹಿಂದಿನ ಸ್ವರವರ್ಣಗಳನ್ನು 'ಅನುದಾತ್ತತರ' ಎಂದು ಕರೆಯಲಾಗುವುದು. 'ಸನ್ನತರ' ಎಂಬುದು ಇದರ ನಾಮಾಂತರ. ಇದನ್ನು ಅನುದಾತ್ತಸ್ವರಕ್ಕಿಂತಲೂ ಇನ್ನೂ ಕೆಳಗಿನ ಧ್ವನಿಯಲ್ಲಿ ಉಚ್ಚರಿಸಲಾಗುವುದು. ಅನುದಾತ್ತತರ (ಸನ್ನತರ)ವೇ ಎಲ್ಲ ಶ್ರುತಿಗಿಂತ ಅತ್ಯಂತ ಕೆಳಗಿನ ಶ್ರುತಿಯಾಗಿದೆ.[21] ಲಿಖಿತಪಾಠದಲ್ಲಿ ಅನುದಾತ್ತದ ಚಿಹ್ನೆಯನ್ನೇ ಪಡೆದಿರುತ್ತದೆ.

ಉದಾ : ಇ ಮಂ ಮೇ ಗಂಗೇಯಮುನೇಸರಸ್ವತಿ ಶುತುದ್ರಿಸ್ತೋಮಂ (ತೈ. ಆ. ೧೦.೧)

ಈ ಮೇಲಿನ ವಾಕ್ಯದಲ್ಲಿ 'ಮೇ' ಎಂಬ ವರ್ಣದ ಮುಂದಿರುವ ('ಗ'ದಿಂದ ಪ್ರಾರಂಭವಾಗಿ 'ಸ್ವ'ದ ವರೆಗೆ) ಇರುವ ಎಲ್ಲ ಸ್ವರವರ್ಣಗಳೂ ಪ್ರಚಯಗಳು. ಅದರ ಮುಂದಿರುವ 'ತಿ' ವರ್ಣವು ಅನುದಾತ್ತತರ ಎಂದು ತಿಳಿಯಬೇಕು. ಏಕೆಂದರೆ ಅದರ ಮುಂದಿನ ವರ್ಣ 'ಶು' ಎಂಬುದು ಉದಾತ್ತವಾಗಿದೆ. ಅನುದಾತ್ತತರ ಎಂದೆನಿಸಿದ 'ತಿ' ವರ್ಣವು ಅನುದಾತ್ತದ ಚಿಹ್ನೆಯನ್ನೇ ಪಡೆದಿದೆ. ಆದರೂ ಅದು ಅನುದಾತ್ತಕ್ಕಿಂತ ಕೆಳಗಿನ ಧ್ವನಿಯಲ್ಲಿ ಉಚ್ಚರಿತವಾಗುವುದು.

## ೩. ಸ್ವರಿತ ಸ್ವರ

ಹ್ರಸ್ವಾಕ್ಷರವು ಸ್ವರಿತವಾದರೆ ಅದನ್ನು ಅನಿತ್ಯಸ್ವರಿತವೆಂದೂ ದೀರ್ಘಾಕ್ಷರವು ಸ್ವರಿತವಾದರೆ ಅದನ್ನು ನಿತ್ಯಸ್ವರಿತ ಎಂದೂ ಗುರುತಿಸಿದ್ದಾರೆ. ಸ್ವರಿತಸ್ವರವು ಜಾತ್ಯ, ಸಂಧಿಜ, ಉದಾತ್ತಪೂರ್ವಗಳೆಂದು ವಿಭಾಗಗೊಂಡಿದೆ. ಜಾತ್ಯಸ್ವರಿತವು ಅಪೂರ್ವ ಹಾಗೂ ನೀಚಪೂರ್ವವೆಂದು ಭೇದವನ್ನೂ ಸಂಧಿಜ ಸ್ವರಿತಸ್ವರವು ಪ್ರಶ್ಲಿಷ್ಟ, ಕ್ಷೈಪ್ರ, ಅಭಿನಿಹಿತ ಗಳೆಂಬ ವಿಭಾಗಗಳನ್ನೂ ಉದಾತ್ತಪೂರ್ವಸ್ವರಿತಸ್ವರವು ವೈವೃತಿ, ತೈರೋವ್ಯಂಜನ ಮತ್ತು ತೈರೋವಗ್ರಹಗಳೆಂಬ ವಿಭೇದಗಳನ್ನೂ ಪಡೆದಿವೆ.[22]

**(೧) ಜಾತ್ಯ ಸ್ವರಿತ:** ಜಾತ್ಯವೆಂದರೆ ವಕಾರ ಮತ್ತು ಯಕಾರಗಳಿಂದ ಕೂಡಿದ ಸಂಯುಕ್ತಾಕ್ಷರಗಳು ಎಂಬುದೊಂದು ಸಾಮಾನ್ಯನಿಯಮ. ಇದು ನಿತ್ಯಸ್ವರಿತ ಹಾಗೂ ಸ್ವತಂತ್ರಸ್ವರ.[23] ಇಲ್ಲಿ ಸಂಧಿಕಾರ್ಯವು ಆಂತರಿಕವಾಗಿ ನಡೆಯುತ್ತದೆ. ಇದು ಯಾವಾಗಲೂ 'ಯ್' ಅಥವಾ 'ವ್'ಕಾರಗಳೊಡನೆ ಸೇರಿದ 'ಇಕ್' (ಇ, ಉ, ಋ, ಲೃ) ಸ್ವರಾಕ್ಷರಗಳಿರುವ ಸ್ಥಳಗಳಲ್ಲಿ ಮಾತ್ರ ಬರುತ್ತದೆ. ಜಾತ್ಯಸ್ವರಿತದ ಪೂರ್ವದಲ್ಲಿ ಯಾವ ಸ್ವರವೂ ಇಲ್ಲದಿದ್ದರೆ ಅದನ್ನು ಅಪೂರ್ವ ಜಾತ್ಯಸ್ವರಿತವೆಂದೂ ಜಾತ್ಯಸ್ವರಿತದ ಪೂರ್ವದಲ್ಲಿ ಅನುದಾತ್ತಸ್ವರವಿದ್ದರೆ ಅದನ್ನು ನೀಚಪೂರ್ವ ಜಾತ್ಯಸ್ವರಿತವೆಂದೂ ಹೇಳಲಾಗಿದೆ.

ಉದಾ. : ಕ್ವ ಸ್ವಿದಾಸಾಂ ಕತ್ರಮಾ. . . (ಋ. ೪.೫೧.೬)

ಪ್ರಸೋಮಾಸಃ ಸ್ವಾಧ್ಯಾಃ (ಯಜು. ೬.೮.೨೦.೫)

ಈ ಮೇಲಿನ ಎರಡು ಉದಾಹರಣೆಗಳಲ್ಲಿ ಮೊದಲನೆಯದು ಅಪೂರ್ವಕ್ಕೂ ಎರಡನೆಯದು ನೀಚಪೂರ್ವಕ್ಕೂ ದೃಷ್ಟಾಂತಗಳಾಗಿವೆ. ಮೊದಲನೆಯದರಲ್ಲಿ ಸ್ವರಿತಸ್ವರದ ಮೊದಲು ಯಾವ ಸ್ವರವರ್ಣವೂ ಇಲ್ಲ. ಎರಡನೆಯ ಉದಾಹರಣೆಯಲ್ಲಿ ಸ್ವರಿತಸ್ವರದ ಪೂರ್ವದಲ್ಲಿ ಅನುದಾತ್ತಸ್ವರವು ಬಂದಿದೆ. ಇದು ಯಕಾರ ಅಥವಾ ವಕಾರಗಳಿಂದ ಕೂಡಿದ ಸಂಯುಕ್ತಾಕ್ಷರಗಳ ಸಂದರ್ಭವೇ ಆಗಿದೆ (ಕ್ವ, ಧ್ಯಾಃ).

**(೨) ಸಂಧಿಜ ಸ್ವರಿತ ಸ್ವರ[24]:** ಇದು ಪ್ರಶ್ಲಿಷ್ಟ, ಕ್ಷೈಪ್ರ, ಅಭಿನಿಹತಗಳೆಂದು ಮೂರು ಬಗೆಯಾಗಿದೆ. ಸವರ್ಣದೀರ್ಘ ಸಂಧಿಯಾಗಿ ; ಆ ಏಕಾದೇಶಗೊಂಡ ವರ್ಣಕ್ಕೆ ಸ್ವರಿತ ಬಂದರೆ ಅದನ್ನು ಪ್ರಶ್ಲಿಷ್ಟಸ್ವರಿತ[25] ಎಂದು ಕರೆದಿದ್ದಾರೆ.

ಉದಾ. : ದಿವೀವ ಚಕ್ಷುರಾತತಂ (ಋ. ೧.೧೫೪.೫)

ಇಲ್ಲಿ 'ದಿವಿ + ಇವ' ಎಂಬುದು ವಿಭಾಗ. ಪೂರ್ವಪದ ಅಂತ್ಯವರ್ಣ ಹಾಗೂ ಉತ್ತರಪದ ಆದಿವರ್ಣಗಳಿಗೆ ಸಂಧಿಕಾರ್ಯಗೊಂಡು ಏಕಾದೇಶವಾಗಿ 'ಈ' ವರ್ಣ ಬಂದಿದೆ. ಇದು ಸವರ್ಣದೀರ್ಘ ಸಂಧಿ. ಏಕಾದೇಶವಾಗಿ ಬಂದ 'ಈ' ವರ್ಣಕ್ಕೆ ಸ್ವರಿತಸ್ವರ ಬಂದಿದೆ. ಇದರಿಂದ ನಿಯಮಕ್ಕನುಗುಣವಾಗಿ ಇದು ಪ್ರಶ್ಲಿಷ್ಟಸ್ವರಿತ.

ಪೂರ್ವ ಹಾಗೂ ಪರಗಳಲ್ಲಿ ಇರುವ ಸ್ವರಾಕ್ಷರಗಳು ಹ್ರಸ್ವ 'ಇ' ಕಾರವೇ ಆಗಿರಬೇಕೆಂಬ ನಿಯಮವಿದೆ. ಅ, ಉ, ಋಕಾರಗಳು ಆಗಿರಬಾರದು.[26]

ಕ್ಷೈಪ್ರಸ್ವರಿತವೂ ಸಹ ಜಾತ್ಯಸ್ವರಿತದಂತೆ ಯಣ್ ಸಂಧಿಯ ಸಂದರ್ಭದಲ್ಲಿಯೇ ಬರುವಂತಹುದು. ಆದರೆ ಜಾತ್ಯಸ್ವರಿತದಂತೆ ಇದು ನಿತ್ಯಸ್ವರಿತವಲ್ಲ.ಅಲ್ಲಿ ಸಂಧಿಕಾರ್ಯ ಆಂತರಿಕವಾದರೆ ಕ್ಷೈಪ್ರಸ್ವರಿತ[27]ದಲ್ಲಿ ಸಂಧಿಕಾರ್ಯ ಬಾಹ್ಯವಾದುದು. ಇವುಗಳೇ ಜಾತ್ಯಕ್ಕೂ ಕ್ಷೈಪ್ರಕ್ಕೂ ಇರುವ ವ್ಯತ್ಯಾಸ.

ಉದಾ. : ವ್ಯಕ್ಷ್ಯತ್ಕುಭಃ (ಋ. ೧.೩೫.೧)

ಏ + ಅಖ್ಯತ್’ ಎಂಬುದು ಪದವಿಭಾಗ. ಇಲ್ಲಿ ಉದಾತ್ತ ಹಾಗೂ ಅನುದಾತ್ತಗಳು ಸೇರಿ ಸಂಧಿಕಾರ್ಯವಾದಾಗ ಒಂದು ಸ್ವರಿತಸ್ವರ ಬಂದಿದೆ.

ಏಕಾರ ಓಕಾರಗಳ ಪರದಲ್ಲಿ ಇರುವ ಅಕಾರವು ಲೋಪವಾಗಿ ಪೂರ್ವರೂಪವೇ ಉಳಿದು ಸಂಧ್ಯಕ್ಷರಕ್ಕೆ ಸ್ವರಿತಸ್ವರ ಬಂದರೆ ಅದನ್ನು ‘ಅಭಿನಿಹತಸ್ವರಿತ’[28] ಎಂದು ಗುರುತಿಸಲಾಗಿದೆ.

ಉದಾ. : ತೇऽವರ್ಧಂತ ಸ್ವತ ವಸೋ ಮಹಿತ್ವನಾ (ತೈ. ಸಂ. ೪.೧.೧೧)

ಈ ವಾಕ್ಯದಲ್ಲಿರುವ ‘ತೇऽವರ್ಧಂತ’ ಎಂಬುದು ಪೂರ್ವರೂಪ ಸಂಧಿಯಾದ ಪದ್ಯ. ‘ತೇ + ಅವರ್ಧಂತ’ ಎಂಬುದು ವಿಭಾಗ. ಪೂರ್ವರೂಪ ಅಚ್ ವರ್ಣಕ್ಕೆ (ಅಕಾರಲೋಪವಾಗಿ) ಸ್ವರಿತಸ್ವರ ಬಂದಿದೆ. ಆದ್ದರಿಂದ ಇದು ಅಭಿನಿಹತ ಸ್ವರಿತ ಸ್ವರ.

**(೩) ಉದಾತ್ತಪೂರ್ವಸ್ವರಿತ:** ಒಂದು ಪದದಲ್ಲಿ ಸ್ವರಿತದ ಪೂರ್ವವರ್ಣ ಉದಾತ್ತವಾಗಿದ್ದು, ಅದರ ಪರದಲ್ಲಿ ಇರುವ ಅನುದಾತ್ತವು ಆ ಪೂರ್ವ ಉದಾತ್ತವನ್ನು ಅವಲಂಬಿಸಿ ಸ್ವರಿತವಾದರೆ ಅದು ಉದಾತ್ತಪೂರ್ವ ಸ್ವರಿತ ಎಂದು ಗುರುತಿಸಿದ್ದಾರೆ. ಇದು ವೈವೃತಿ, ತೈರೋವ್ಯಂಜನ, ತೈರೋವಗ್ರಹಗಳೆಂಬ ಒಳಭೇದಗಳನ್ನು ಹೊಂದಿದೆ.

ಎರಡು ಸ್ವರಗಳ (ಉಚ್ಚಾರಣೆಯ) ಮಧ್ಯೆ ವ್ಯವಧಾನವಿದ್ದರೆ ಅದನ್ನು ‘ವಿವೃತಿ’ ಎನ್ನುತ್ತಾರೆ. ಉದಾತ್ತಪೂರ್ವ ಸ್ವರಿತ ಬಂದ ಸಂದರ್ಭದಲ್ಲಿ ವಿವೃತಿಯು (ವ್ಯವಧಾನ) ಇದ್ದರೆ, ಅದು ‘ವೈವೃತಿ ಉದಾತ್ತಪೂರ್ವ ಸ್ವರಿತ.’[29]

ಉದಾ. : ಯ ಉ ತ್ರಿಧಾತು ಪೃಥಿವೀ ಮುತದ್ಯಾಂ (ಋ. ೧.೧೫೪.೪)

ಈ ಉದಾಹರಣೆಯಲ್ಲಿ ‘ಯ (ಅ)’ ಉದಾತ್ತವಾಗಿ ಮುಂದಿನ ‘ಉ’ ಸ್ವರಿತವಾಗಿದೆ. ಇವೆರಡು ವರ್ಣಗಳ ಮಧ್ಯೆ ವ್ಯವಧಾನವೂ ಇದೆ. ಇದರಿಂದ ಇದು ‘ವೈವೃತಿ ಉದಾತ್ತ ಪೂರ್ವ ಸ್ವರಿತ’ ಸ್ವರ.

ಎರಡು ವ್ಯಂಜನಗಳ ಮಧ್ಯೆ ವ್ಯವಧಾನವಿದ್ದು ಅಲ್ಲಿ ಉದಾತ್ತಪೂರ್ವ ಸ್ವರಿತ ಸ್ವರ ಬಂದರೆ, ಅದು ‘ತೈರೋವ್ಯಂಜನ ಉದಾತ್ತಪೂರ್ವ ಸ್ವರಿತ’[30] ಸ್ವರ.

ಉದಾ. : ಅಗ್ನಿಮೀಳೇ ಪುರೋऽಹಿತಂ... (ಋ. ೧.೧.೧)

ಇಲ್ಲಿ ‘ಗ್ನಿ(ಇ)’ ಉದಾತ್ತಸ್ವರಿತ ಮತ್ತು ‘ಈಳೇ’ ಎನ್ನುವಲ್ಲಿ ‘ಈ’ ಕಾರವು ಸ್ವರಿತವಾಗಿವೆ. ‘ಮ್’ ಮತ್ತು ‘ಳೇ’ ಎಂಬೆರಡು ವ್ಯಂಜನ ವರ್ಣಗಳ ಮಧ್ಯೆ ‘ಈ’ ಎಂಬ ಸ್ವರಾಕ್ಷರವಿದ್ದು, ಅದು ಸ್ವರಿತವೂ ಆಗಿ ವ್ಯವಧಾನಯುಕ್ತವಾಗಿದೆ. ಇದರಿಂದ ಅದು ‘ತೈರೋವ್ಯಂಜನ ಉದಾತ್ತಪೂರ್ವ ಸ್ವರಿತ.’

ಅವಗ್ರಹ ಪದವೊಂದರಲ್ಲಿ ಉದಾತ್ತಪೂರ್ವಸ್ವರಿತ ಬಂದರೆ ಅದನ್ನು ‘ತೈರೋವಗ್ರಹ ಉದಾತ್ತಪೂರ್ವ ಸ್ವರಿತ’ ಎಂದು ಕರೆದಿದ್ದಾರೆ.[31] ವೈದಿಕ ಪರಿಭಾಷೆಯಲ್ಲಿ ಸಮಾಸ

ಪದದ ಪೂರ್ವಪದಕ್ಕೆ 'ಅವಗ್ರಹ' ಎಂಬ ಸಂಜ್ಞೆಯಿದೆ. ಲೌಕಿಕಸಂಸ್ಕೃತದಲ್ಲಿ ಪೂರ್ವ ರೂಪ ಸಂಧಿಯನ್ನು ತಿಳಿಸಲು ಬಳಕೆಯಲ್ಲಿರುವ ಅವಗ್ರಹ ಇದಲ್ಲ.

ಉದಾ. : ಅಗ್ನಿಮೀಳೇ ಪುರೋಹಿತಂ (ಋ. ೧.೧.೧)

ಈ ವಾಕ್ಯದಲ್ಲಿರುವ 'ಪುರೋಹಿತಂ' ಎಂಬ ಪದದಲ್ಲಿ 'ಪುರಃ' ಎಂಬುದು ಸಮಾಸದ ಪೂರ್ವಪದವಾದ್ದರಿಂದ ಅದು ಅವಗ್ರಹ. 'ಹಿ(ಇ)' ಎಂಬ ವರ್ಣ ಸ್ವರಿತ. ಸ್ವರಿತದ ಹಿಂದಿನ ವರ್ಣ 'ರ(ಅ)'ವು ಉದಾತ್ತ ಸ್ವರಯುಕ್ತವಾಗಿದೆ. ಇದರಿಂದ ನಿಯಮಾನುಸಾರ ಇದು 'ತೈರೋವಗ್ರಹ ಉದಾತ್ತಪೂರ್ವಸ್ವರಿತ.'

**ಕಂಪ :** ಇದು ನಿತ್ಯಸ್ವರಿತ. ಉದಾತ್ತ ಅಥವಾ ಸ್ವರಿತ ಸ್ವರಗಳಲ್ಲಿ ಯಾವುದಾದರೊಂದು ಸ್ವರವು ಈ ಹಿಂದೆ ಹೇಳಿದ ಜಾತ್ಯ, ಅಭಿನಿಹತ, ಕ್ಷೈಪ್ರ, ಪ್ರಶ್ಲಿಷ್ಟ ಸ್ವರಗಳ ಯಾವುದಾದರೊಂದು ಸ್ವರದ ಮುಂದೆ ಬಂದರೆ ಜಾತ್ಯಾದಿ ಸ್ವರಿತ ಸ್ವರಗಳು ಕಂಪ ಯುಕ್ತವಾಗುತ್ತವೆ.[32]

ಉದಾ. : ಕ್ವ ೧ ಸ್ಯ ತೇ ರುದ್ರ... (ಋ. ೨.೩೩.೭)

ಈ ಮೇಲಿನ 'ಕ್ವ (ಅ)' ಎಂಬಲ್ಲಿ ಮೊದಲು ಉದಾತ್ತವೂ ಆಮೇಲೆ ಅನುದಾತ್ತವೂ ಅನಂತರ ಸ್ವರಿತವೂ ಒಂದೇ ಸ್ವರಕ್ಕೆ ಬಂದು ಕಂಪವುಂಟಾಗಿದೆ. ಇದು ಹ್ರಸ್ವ ಜಾತ್ಯ ಸ್ವರಿತ ಕಂಪಕ್ಕೆ ಉದಾಹರಣೆ.

ಉದಾ. :

೧) ವ್ಯ ೧ ಸ್ಮ ದ್ವೇಷೋ ವಿತರಂ ವ್ಯಹಃ (ಋ. ೨.೩೩.೨)

೨) ತಾಇನ್ನ್ವೇ ೩ ವ ಸುಮನಾ ಸಮಾನೀ (ಋ. ೪.೫೧.೯)

೩) ಕ್ವೇ ೩ ದಾನೀಂ ಸೂರ್ಯಃ ಕಶ್ಚಿಕೇತ (ಋ. ೧.೩೫.೭)

ಈ ಮೇಲಿನವು ಕ್ರಮವಾಗಿ ಹ್ರಸ್ವಕ್ಷೈಪ್ರಸ್ವರಿತ ಕಂಪಕ್ಕೂ ದೀರ್ಘಕ್ಷೈಪ್ರಸ್ವರಿತ ಕಂಪಕ್ಕೂ, ದೀರ್ಘಪ್ರಶ್ಲಿಷ್ಟಸ್ವರಿತಕಂಪಕ್ಕೂ ಉದಾಹರಣೆಗಳು. ವ್ಯ, ನ್ವೇ, ಕ್ವೇ ಎಂಬ ವರ್ಣಗಳು ಇಲ್ಲಿ ಕಂಪಗಳು. 'ಏಕಶ್ರುತಿ' ಎಂದೂ ಕರೆಯುತ್ತಾರೆ.

**ಪ್ರಚಯ ಸ್ವರ :** ಪ್ರಚಯ ಸ್ವರವನ್ನು ಪ್ರಚಯಸ್ವರಗಳೆಂದು ಸ್ವರಿತಸ್ವರಗಳ ಮುಂದಿರುವ ಎಲ್ಲ ಅನುದಾತ್ತ ಸ್ವರಗಳನ್ನೂ ಪ್ರಚಯಸ್ವರಗಳೆಂದು ಕರೆಯುತ್ತಾರೆ. ಇವು ಸ್ವರಿತದ ಧ್ವನಿಯಲ್ಲೇ ಇರುತ್ತವೆ.[33] ಇವು ಏಕಾಕ್ಷರ, ದ್ವ್ಯಕ್ಷರ ಅಥವಾ ಬಹ್ವಕ್ಷರಗಳಾಗಿರಬಹುದು.

ಉದಾ. : ಅಗ್ನಿಮೀಳೇ ಪುರೋಹಿತಂ (ಋ. ೧.೧.೧)

ಇಲ್ಲಿ 'ಟೀ' ಹಾಗೂ 'ತಂ' ಎಂಬಕ್ಷರಗಳು ಪ್ರಚಯ ಸ್ವರಗಳು. ಇವು ಏಕಾಕ್ಷರ ಪ್ರಚಯಕ್ಕೆ ಉದಾಹರಣೆಗಳು. ದ್ವ್ಯಕ್ಷರ ಹಾಗೂ ಬಹ್ವಕ್ಷರ ಪ್ರಚಯ ಸ್ವರಗಳಿಗೆ ಈ ಕೆಳಗಿನ ಎರಡು ವಾಕ್ಯಗಳನ್ನು ಉದಾಹರಿಸಬಹುದು.

ಉದಾ. : ನಾಸತ್ಯಾಭ್ಯಾಂ ಬರ್ಹಿರಿವ... (ಋ. ೧.೧.೫)

ಇಮಂ ಮೇ ಗಂಗೇ ಯಮುನೇ ಸರಸ್ವತಿ (ತೈ. ಆ. ೧೦.೧)

ಮೊದಲಿನ ವಾಕ್ಯದಲ್ಲಿ 'ತ್ಯಾಭ್ಯಾಂ' ಎಂಬೆರಡು ಅಕ್ಷರಗಳು ಪ್ರಚಯಗಳು. ಒಟ್ಟಿಗೇ ಎರಡು ಸ್ವರಾಕ್ಷರಗಳು ಪ್ರಚಯವಾದುದರಿಂದ ಇದು ದ್ವ್ಯಕ್ಷರ ಪ್ರಚಯ ಸ್ವರ. ಎರಡನೆಯ ವಾಕ್ಯದಲ್ಲಿ 'ಮೇ' ಮತ್ತು 'ತಿ' ವರ್ಣಗಳ ಮಧ್ಯದ ಎಲ್ಲ ಸ್ವರವರ್ಣಗಳೂ (ಗಂಗೇ ಯಮುನೇ ಸರಸ್ವ) ಪ್ರಚಯ ಸ್ವರಗಳು. ಒಟ್ಟಿಗೇ ಬಹು ಅಕ್ಷರಗಳು ಪ್ರಚಯವಾದುದರಿಂದ ಇದು ಬಹ್ವಕ್ಷರ ಪ್ರಚಯಕ್ಕೆ ಉದಾಹರಣೆ.

ವೇದಗಳ ಸ್ವರಗಳನ್ನು ಮುಖ್ಯವಾಗಿ ಪ್ರಾತಿಶಾಖ್ಯಗಳು ಮತ್ತು ಪಾಣಿನೀಯ ಸ್ವರ ವೈದಿಕಪ್ರಕರಣಗಳು ತಿಳಿಸಿಕೊಡುತ್ತವೆ. ಅವುಗಳನ್ನು ಆಧರಿಸಿ ಇಲ್ಲಿ ವೈದಿಕಸ್ವರಗಳ ಒಂದು ಸಾಮಾನ್ಯ ಪರಿಚಯವನ್ನು ಮಾಡಿಸಲಾಗಿದೆ. ಋಗ್ವೇದವನ್ನೇ ಇಲ್ಲಿ ಹೆಚ್ಚು ಆಧರಿಸಿ ಸ್ವರಗಳನ್ನು ಪರಿಚಯಿಸಲಾಗಿದೆ. ಪ್ರತಿವೇದದಲ್ಲಿಯೂ ಸ್ವರಗಳು ಹಾಗೂ ಅವುಗಳಿಗಿರುವ ಉಚ್ಚಾರಣೆ, ವಿವರಣೆಗಳು ಅಲ್ಪಸ್ವಲ್ಪ ವ್ಯತ್ಯಾಸವಾಗಿರುವುದು ಕಂಡು ಬರುತ್ತದೆ. ಉದಾತ್ತಾದಿ ಸ್ವರಗಳು ಸಂಗೀತದಲ್ಲಿ ಪ್ರಸಿದ್ಧವಾದ ಸಪ್ತಸ್ವರಗಳನ್ನೇ ಪ್ರತಿನಿಧಿಸುತ್ತವೆ ಎಂಬುದನ್ನು—

ಉದಾತ್ತೇ ನಿಷಾದಗಾಂಧಾರಾವನುದಾತ್ತ ಋಷಭಧೈವತೌ ।
ಸ್ವರಿತಪ್ರಭವಾ ಹ್ಯೇತೇ ಷಡ್ಜಮಧ್ಯಮಪಂಚಮಾಃ ॥ (ಪಾ. ಶಿ. ೧೨)

ಎಂಬ ಪಾಣಿನೀಯ ಶಿಕ್ಷೆಯಲ್ಲಿಯ ಕಾರಿಕೆಯೊಂದು ತಿಳಿಸಿಕೊಡುವುದು. ಸಾಮವೇದದಲ್ಲಿ ಕ್ರುಷ್ಟ, ಪ್ರಥಮ, ದ್ವಿತೀಯ ಇತ್ಯಾದಿ ಸಪ್ತಸ್ವರಗಳಿವೆ. ಸಪ್ತಸ್ವರಗಳಿಗಿಂತ ವ್ಯತಿರಿಕ್ತವಾದ ಸ್ವರಗಳು ಇಲ್ಲದ್ದರಿಂದ ಸಾಮವೇದದ ಈ ಸ್ವರಗಳು ನಿಷಾದಾದಿ ಸಪ್ತಸ್ವರಗಳನ್ನೇ ಪ್ರತಿನಿಧಿಸಬಹುದು. ಅವೆಲ್ಲವುಗಳನ್ನೂ ಇಲ್ಲಿ ಚರ್ಚಿಸಿಲ್ಲ.

## ಅಡಿಟಿಪ್ಪಣಿ

1. ಸಮಾಸಸ್ಯ ಚ । ಅಷ್ಟಾಧ್ಯಾಯಿ—೬.೧.೨೨೩, ಇದು ಅಂತೋದಾತ್ತವನ್ನು ತಿಳಿಸುವುದು.
2. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ । ಅಷ್ಟಾ—೬.೨.೧, ಈ ಸೂತ್ರವು ಆದ್ಯುದಾತ್ತವನ್ನು ತಿಳಿಸುತ್ತದೆ.
3. ಉದಾತ್ತಶ್ಚಾನುದಾತ್ತಶ್ಚ ಸ್ವರಿತಶ್ಚ ತ್ರಯಃ ಸ್ವರಾಃ । ಋಕ್‌ಪ್ರಾತಿಶಾಖ್ಯ—೩.೧.
4. ಉಚ್ಚೈರುದಾತ್ತಃ । ಅಷ್ಟಾ—೧.೨.೨೯

ಇಲ್ಲಿ 'ಟೇ' ಹಾಗೂ 'ತಂ' ಎಂಬಕ್ಷರಗಳು ಪ್ರಚಯ ಸ್ವರಗಳು. ಇವು ಏಕಾಕ್ಷರ ಪ್ರಚಯಕ್ಕೆ ಉದಾಹರಣೆಗಳು. ದ್ವ್ಯಕ್ಷರ ಹಾಗೂ ಬಹ್ವಕ್ಷರ ಪ್ರಚಯ ಸ್ವರಗಳಿಗೆ ಈ ಕೆಳಗಿನ ಎರಡು ವಾಕ್ಯಗಳನ್ನು ಉದಾಹರಿಸಬಹುದು.

ಉದಾ. : ನಾಸತ್ಯಾಭ್ಯಾಂ ಬಹಿರಿವ... (ಋ. ೧.೧.೫)

ಇಮಂ ಮೇ ಗಂಗೇ ಯಮುನೇ ಸರಸ್ವತಿ (ತೈ. ಆ. ೧೦.೧)

ಮೊದಲಿನ ವಾಕ್ಯದಲ್ಲಿ 'ತ್ಯಾಭ್ಯಾಂ' ಎಂಬೆರಡು ಅಕ್ಷರಗಳು ಪ್ರಚಯಗಳು. ಒಟ್ಟಿಗೇ ಎರಡು ಸ್ವರಾಕ್ಷರಗಳು ಪ್ರಚಯವಾದುದರಿಂದ ಇದು ದ್ವ್ಯಕ್ಷರ ಪ್ರಚಯ ಸ್ವರ. ಎರಡನೆಯ ವಾಕ್ಯದಲ್ಲಿ 'ಮೇ' ಮತ್ತು 'ತಿ' ವರ್ಣಗಳ ಮಧ್ಯದ ಎಲ್ಲ ಸ್ವರವರ್ಣಗಳೂ (ಗಂಗೇ ಯಮುನೇ ಸರಸ್ವ) ಪ್ರಚಯ ಸ್ವರಗಳು. ಒಟ್ಟಿಗೇ ಬಹು ಅಕ್ಷರಗಳು ಪ್ರಚಯವಾದುದರಿಂದ ಇದು ಬಹ್ವಕ್ಷರ ಪ್ರಚಯಕ್ಕೆ ಉದಾಹರಣೆ.

ವೇದಗಳ ಸ್ವರಗಳನ್ನು ಮುಖ್ಯವಾಗಿ ಪ್ರಾತಿಶಾಖ್ಯಗಳು ಮತ್ತು ಪಾಣಿನೀಯ ಸ್ವರ ವೈದಿಕಪ್ರಕರಣಗಳು ತಿಳಿಸಿಕೊಡುತ್ತವೆ. ಅವುಗಳನ್ನು ಆಧರಿಸಿ ಇಲ್ಲಿ ವೈದಿಕಸ್ವರಗಳ ಒಂದು ಸಾಮಾನ್ಯ ಪರಿಚಯವನ್ನು ಮಾಡಿಸಲಾಗಿದೆ. ಋಗ್ವೇದವನ್ನೇ ಇಲ್ಲಿ ಹೆಚ್ಚು ಆಧರಿಸಿ ಸ್ವರಗಳನ್ನು ಪರಿಚಯಿಸಲಾಗಿದೆ. ಪ್ರತಿವೇದದಲ್ಲಿಯೂ ಸ್ವರಗಳು ಹಾಗೂ ಅವುಗಳಿಗಿರುವ ಉಚ್ಚಾರಣೆ, ವಿವರಣೆಗಳು ಅಲ್ಪಸ್ವಲ್ಪ ವ್ಯತ್ಯಾಸವಾಗಿರುವುದು ಕಂಡು ಬರುತ್ತದೆ. ಉದಾತ್ತಾದಿ ಸ್ವರಗಳು ಸಂಗೀತದಲ್ಲಿ ಪ್ರಸಿದ್ಧವಾದ ಸಪ್ತಸ್ವರಗಳನ್ನೇ ಪ್ರತಿನಿಧಿಸುತ್ತವೆ ಎಂಬುದನ್ನು—

ಉದಾತ್ತೇ ನಿಷಾದಗಾಂಧಾರಾವನುದಾತ್ತ ಋಷಭಧೈವತೌ ।
ಸ್ವರಿತಪ್ರಭವಾ ಹ್ಯೇತೇ ಷಡ್ಜಮಧ್ಯಮಪಂಚಮಾಃ ॥ (ಪಾ. ಶಿ. ೧೨)

ಎಂಬ ಪಾಣಿನೀಯ ಶಿಕ್ಷೆಯಲ್ಲಿಯ ಕಾರಿಕೆಯೊಂದು ತಿಳಿಸಿಕೊಡುವುದು. ಸಾಮವೇದದಲ್ಲಿ ಕ್ರುಷ್ಟ, ಪ್ರಥಮ, ದ್ವಿತೀಯ ಇತ್ಯಾದಿ ಸಪ್ತಸ್ವರಗಳಿವೆ. ಸಪ್ತಸ್ವರಗಳಿಗಿಂತ ವ್ಯತಿರಿಕ್ತವಾದ ಸ್ವರಗಳು ಇಲ್ಲದ್ದರಿಂದ ಸಾಮವೇದದ ಈ ಸ್ವರಗಳು ನಿಷಾದಾದಿ ಸಪ್ತಸ್ವರಗಳನ್ನೇ ಪ್ರತಿನಿಧಿಸಬಹುದು. ಅವೆಲ್ಲವುಗಳನ್ನೂ ಇಲ್ಲಿ ಚರ್ಚಿಸಿಲ್ಲ.

## ಅಡಿಟಿಪ್ಪಣಿ

1. ಸಮಾಸಸ್ಯ ಚ । ಅಷ್ಟಾಧ್ಯಾಯಿ—೬.೧.೨೨೩, ಇದು ಅಂತೋದಾತ್ತವನ್ನು ತಿಳಿಸುವುದು.
2. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ । ಅಷ್ಟಾ—೬.೨.೧, ಈ ಸೂತ್ರವು ಆದ್ಯುದಾತ್ತವನ್ನು ತಿಳಿಸುತ್ತದೆ.
3. ಉದಾತ್ತಶ್ಚಾನುದಾತ್ತಶ್ಚ ಸ್ವರಿತಶ್ಚ ತ್ರಯಃ ಸ್ವರಾಃ । ಋಕ್‌ಪ್ರಾತಿಶಾಖ್ಯ—೩.೧.
4. ಉಚ್ಚೈರುದಾತ್ತಃ । ಅಷ್ಟಾ—೧.೨.೨೯

5. ನೀಚೈರನುದಾತ್ತಃ । ಅಷ್ಟಾ—೧.೨.೩೦
6. ಉದಾತ್ತಸ್ವರಿತಪರಸ್ಯ ಸನ್ನತರಃ । ಅಷ್ಟಾ—೧.೨.೪೦
7. ಸ್ವರಿತಾತ್ ಸಂಹಿತಾಯಾಂ ಅನುದಾತ್ತಾನಾಂ । ಅಷ್ಟಾ—೧.೨.೩೯
8. ಸ್ವರಿತದ್ವಯಾನಂತರ್ಯೇ ಪೂರ್ವಃ ಕಂಪತೇ । (ಪರಂಪರಾ ವಾಕ್ಯ)
9. ಅನುದಾತ್ತಂ ಪದಮೇಕವರ್ಜಂ । ಅಷ್ಟಾ—೬.೧.೧೫೮
10. ದೇವತಾದ್ವಂದ್ವೇ ಚ । ಅಷ್ಟಾ—೭.೩.೨೧
11. ತಿಙ್ಙತಿಙಃ । ಅಷ್ಟಾ ೮.೧.೨೮, ಅನುದಾತ್ತ ಸರ್ವಮಪಾದಾದೌ । ಅಷ್ಟಾ—೮.೧.೧೮
12. ಯದ್ವೃತ್ತಾನ್ನಿತ್ಯಂ । ಅಷ್ಟಾ—೮.೧.೬೬
13. ನಿಪಾತೈರ್ಯದ್ಯದಿಹಂತಕುವಿನ್ನೇಚ್ಚೇಚ್ಚಣ್ಕಚ್ಚಿದ್ಯತ್ರಯುಕ್ತಂ । ಅಷ್ಟಾ—೮.೧.೩೦
14. ಸಮಾಸಸ್ಯ ಚ । ಅಷ್ಟಾ—೬.೧.೨೨೩
15. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ । ಅಷ್ಟಾ—೬.೨.೧
16. ಆಮಂತ್ರಿತಸ್ಯ ಚ । ಅಷ್ಟಾ—೬.೧.೨೨೩ [ಎಂಟನೆಯ ಅಧ್ಯಾಯದಲ್ಲಿಯೂ ಇದೇ ಆನುಪೂರ್ವಿಯ ಸೂತ್ರವೊಂದು ಬರುವುದು. ಆದರೆ ಅದರರ್ಥವು ಈ ಸೂತ್ರಾರ್ಥಕ್ಕಿಂತ ವಿಭಿನ್ನವಾದುದು.]
17. ಏಕಾದೇಶ ಉದಾತ್ತೇನೋದಾತ್ತಃ । ಅಷ್ಟಾ—೮.೨.೫
18. ಅನುದಾತ್ತಂ ಪರಮೇಕವರ್ಜಂ । ಅಷ್ಟಾ—೬.೧.೧೫೮
19. ತಿಙ್ಙತಿಙಃ । ಅಷ್ಟಾ—೮.೧.೨೮
20. ಆಮಂತ್ರಿತಸ್ಯ ಚ । ಅಷ್ಟಾ—೮.೧.೧೯ (ಅಡಿಟಿಪ್ಪಣಿ ೧೬ ನೋಡಿ)
21. ಉದಾತ್ತಸ್ವರಿತಪರಸ್ಯ ಸನ್ನತರಃ । ಅಷ್ಟಾ—೧.೨.೪೦
22. ತಿರೋವಿರಾಮೋಽಥ ತೈರೋವ್ಯಂಜನಃ ಪಾದವೃತ್ತಕಃ ।
ಜಾತ್ಯೋಭಿನಿಹತಃ ಕ್ಷೈಪ್ರಃ ಪ್ರಶ್ಲಿಷ್ಟ ಇತಿ ತೇ ಸ್ಮೃತಾಃ ॥ ವ್ಯಾಸಶಿಕ್ಷಾ—೩೪
23. ಜಾತ್ಯ ಸ್ವರೂಪೇಣೈವ ಉದಾತ್ತಾನುದಾತ್ತ ಸಂಹಿತಂ ವಿನಾ ಜಾತೋ ಜಾತ್ಯಃ । ಋಕ್ಪ್ರಾತಿಶಾಖ್ಯ ೩-೮ ಉವ್ವಟ ಭಾಷ್ಯ.
24. ಉದಾತ್ತವತ್ತ್ಯೇಕೀಭಾವ ಉದಾತ್ತಂ ಸಂಧ್ಯಕ್ಷರಂ । ಋ.ಪ್ರಾ. ೩-೧೧
25. ಏಕಾಕ್ಷರ ಸಮಾವೇಶೇ ಪೂರ್ವಯೋಃ ಸ್ವರಿತಃ ಸ್ವರಃ । ಋ.ಪ್ರಾ. ೩-೨
26. ಇಕಾರಯೋಃ ಪ್ರಶ್ಲೇಷೇ ಪೂರ್ವಯೋಃ ಸ್ವರಿತಃ ಸ್ವಃ । ಋ.ಪ್ರಾ. ೩-೩
27. ಇವರ್ಣೋಕಾರಯೋಃ ಯುವಕಾರಭಾವೇ ಕ್ಷೈಪ್ರ ಉದಾತ್ತಯೋಃ । ತೈತ್ತಿರೀಯ ಪ್ರಾತಿಶಾಖ್ಯ ೨೦-೧
28. ತಸ್ಮಾದಕಾರಲೋಪೇಽಭಿನಿಹತಃ । ತೈ.ಪ್ರಾ. ೨೦-೪
29. ಉದವಗ್ರಸ್ತೈರೋವಿರಾಮಃ । ವಾಜಸನೇಯಿ ಪ್ರಾತಿಶಾಖ್ಯ ೧-೧೧೮
30. ಸ್ವರೋ ವ್ಯಂಜನಯುತಸ್ತೈರೋವ್ಯಂಜನಃ । ವಾ.ಪ್ರಾ. ೧-೧೧೭
31. ತಸ್ಯ ಪೂರ್ವಪದಂ ಅವಗ್ರಹಃ । ತೈ.ಪ್ರಾ. ೧-೪೯
32. ಜಾತ್ಯೋಽಭಿನಿಹತಶ್ಚೈವ ಕ್ಷೈಪ್ರಃ ಪ್ರಶ್ಲಿಷ್ಟ ಏವ ಚ ।
ಏತೇ ಸ್ವರಾಃ ಪ್ರಕಂಪಂತೇ ಯತ್ರೋಚ್ಚ ಸ್ವರಿತೋದಯಾಃ ॥ ಋ.ಪ್ರಾ. ೩-೩೪
33. ಸ್ವರಿತಾತ್ ಸಂಹಿತಾಯಾಂ ಅನುದಾತ್ತಾನಾಂ । ಅಷ್ಟಾ—೧.೨.೩೮

ಧಾರವಾಡ ಜಿಲ್ಲೆ, ಹಾವೇರಿ ತಾಲ್ಲೂಕು ನೀರಲಗಿ ಎಂಬ ಗ್ರಾಮದಲ್ಲಿ ದೊರೆತ ಶಿಲಾಶಾಸನ
ಪಶ್ಚಿಮ (ಕಲ್ಯಾಣ) ಚಾಳುಕ್ಯರ ಕಾಲದ್ದು [SII. XVIII. 151. A.D. 1148].
ಇದು ಪ್ರಧಾನವಾಗಿ ಆ ಕಾಲದ ಒಂದು ಪ್ರತಿಷ್ಠಿತ ಮನೆತನದ ಹಿರಿಮೆಯನ್ನು ಸಾರು
ತ್ತದೆ. ಅದರ ಜತೆಗೆ ಈ ಶಾಸನಕ್ಕೆ ಸಾಂಸ್ಕೃತಿಕ, ಸಾಹಿತ್ಯಕ, ಚಾರಿತ್ರಿಕ, ಧಾರ್ಮಿಕ
ಆಯಾಮಗಳ ಮಹತ್ತ್ವವೂ ಇದೆ ಎಂಬುದನ್ನು ಗುರುತಿಸುವುದು ಈ ಟಿಪ್ಪಣಿಯ
ಆಶಯ. ಶಾಸನದಲ್ಲಿ ಈಗಿನ ನೀರಲಗಿಯನ್ನು ನೇರಿಲಗೆ ಎಂದು ನಿರ್ದೇಶಿಸಲಾಗಿದೆ.

ಈ ಶಾಸನದ ಪ್ರಾರಂಭದ ಕೆಲವು ಸಾಲುಗಳು ತ್ರುಟಿತವಾಗಿವೆ. ಇದು ಆದ್ಯಂತವಾಗಿ
ಜೈನ ಶಾಸನ; ಅದರಿಂದ ತ್ರುಟಿತಪಂಕ್ತಿಗಳಲ್ಲಿ, ಉಳಿದ ಜೈನ ಶಾಸನಗಳಲ್ಲಿರುವ ಕ್ರಮ
ದಲ್ಲಿ ಜಿನಸ್ತುತಿಯ ಸಂಸ್ಕೃತ ಶ್ಲೋಕ (ಶ್ರೀಮತ್ಪರಮಗಂಭೀರ ಸ್ಯಾದ್ವಾದಾಮೋಘ
ಲಾಂಛನಂ...) ಇದ್ದಿರಬೇಕು. ಇದು ನಷ್ಟಭಾಗವಾಗಿರುವ ಶಾಸನಾರಂಭದ ವಿಚಾರ.
ಅನಂತರವೂ ಒಂಬತ್ತನೆಯ ಸಾಲಿನವರೆಗೆ ಶಾಸನ ಅಲ್ಲಲ್ಲಿ ಮುಕ್ಕಾಗಿದೆ. ಅರೆಬರೆಯಾದ
ಗದ್ಯಪದ್ಯ ಪಾದಗಳ ಅರ್ಥ ಅಸ್ಪಷ್ಟವಾಗಿದೆ. ಒಂಬತ್ತನೆಯ ಪಂಕ್ತಿಯಿಂದ ಮುಂದಕ್ಕೆ
ಹೆಚ್ಚು ಕಡಮೆ ಕಡೆಯವರೆಗೂ ಚೆನ್ನಾಗಿದೆ. ಇದು ಸಾಕಷ್ಟು ದೊಡ್ಡ ಶಾಸನವೂ ಹೌದು.
ಒಟ್ಟು ದೀರ್ಘವಾದ ೪೯ ಪಂಕ್ತಿಗಳಿವೆ.

ಅನೇಕ ಜೈನ ಶಾಸನಗಳು ಜಿನಶಾಸನ ದೇವತೆಗಳಾಗಿ ಇತಿಹಾಸ ಪುಟಗಳಲ್ಲಿ
ಕಂಗೊಳಿಸುತ್ತಿವೆ. ಅವುಗಳಲ್ಲಿ ಶ್ರ.ಬೆ.ವನ್ನು ಬಿಟ್ಟರೆ, ನೂರಾರು ಶಾಸನಗಳು ಧಾರವಾಡ
ಜಿಲ್ಲೆಯೊಂದರಲ್ಲಿಯೇ ಉಪಲಬ್ಧವಾಗಿವೆ. ಭೂಗತವಾದ ಜಿನಮಂದಿರ ಮತ್ತು ಜೈನ
ಇತಿಹಾಸದತ್ತ ದೀಪನಿಧಿಯಾಗಿ ಬೆಳಕು ಚೆಲ್ಲುವುದರೊಂದಿಗೆ ಅಲ್ಲಲ್ಲಿ ಹರಿದು ಹಂಚಿ

ಮತ್ತು ಮಕ್ಕಳ ಮಾಹಿತಿಯನ್ನು ಶಾಸನ ಪೂರೈಸಿದೆ : ಸತಿ-ಪತಿಯರ ವಿವರಗಳನ್ನು ಗರ್ಭೀಕರಿಸಿರುವ ರೀತಿ ಸಹ ವೈಶಿಷ್ಟ್ಯಪೂರ್ಣವಾಗಿದೆ :




ಕಲ್ಯಾಣ ಚಾಳುಕ್ಯ ಆಹವಮಲ್ಲ ತ್ರೈಲೋಕ್ಯಮಲ್ಲ ಸೋಮೇಶ್ವರ (I) ಚಕ್ರವರ್ತಿಯಿಂದ ಸಂಮಾನಿತನಾದವನು ಚತುರ್ಥಕುಲಮಂಡಳನಾದ ಮಹಾಪ್ರಭು ದಡಿಗ ಮೊದಲನೆಯವನಾದ ದಡಿಗ, ಒಂದನೆಯ ಎಱಕ, ಚಟ್ಟಗಾವುಂಡ—ಈ ಮೂವರೂ ಶಾಸನ ರಚನೆಯಾದ ೧೧೪೮ರ ಅವಧಿಯ ವೇಳೆಗೆ ನಿಧನರಾಗಿದ್ದರು. ಶಾಸನದ ಕೇಂದ್ರ ಬಿಂದುವಾದ ಮಲ್ಲಗಾವುಂಡನೂ ಆತನ ಒಡಹುಟ್ಟಿದ ಇನ್ನು ಮೂವರು ತಮ್ಮಂದಿರೂ ಜೀವಿಸಿದ್ದರು. ಮಲ್ಲನ ಮಗ ಜೋಮನು ಪ್ರಾಯಕ್ಕೆ ಬಂದವನಾಗಿದ್ದರೂ ಇನ್ನೂ ಅವಿವಾಹಿತನಾಗಿದ್ದಂತೆ ತೋರುತ್ತದೆ.

ಒಂದು ಕೀರ್ತಿವಂತ ಮನೆತನದ ಯಶೋಗಾಥೆಯೇ ಈ ಶಾಸನವೆಂದು ಹೇಳಿದ್ದಾಗಿದೆ. ವಾಸ್ತವವಾಗಿ ಈ ಕುಟುಂಬದ ಕುಲಾವಿಗೆ ಗೌರವದ ಗರಿಯಿಟ್ಟವನು ಈ ಮನೆತನದ ಮೂಲಪುರುಷನಾದ ದಡಿಗ. ಈ ಮಹಾಪುರುಷನ ಮಹಿಮೆಗೆ ಮಾರುಹೋದ ಅಂದಿನ ಚಾಳುಕ್ಯ ಚಕ್ರವರ್ತಿ ಆಹವಮಲ್ಲ ತ್ರೈಲೋಕ್ಯಮಲ್ಲ ಒಂದನೆಯ ಸೋಮೇಶ್ವರನು ಹಲವು ಬಗೆಯ ರಾಜಮನ್ನಣೆಯಿಂದ ದಡಿಗನನ್ನು ಗೌರವಿಸಿದ್ದನು. ದಡಿಗನಿಗೆ ಚಕ್ರವರ್ತಿ ನೀಡಿದ ಕೊಡುಗೆಗಳನ್ನು ಸ್ಮರಣಯೋಗ್ಯವೆನಿಸಿ ನಿರೂಪಿಸಲಾಗಿದೆ :

ವ॥ ಆ ಮಹಾನುಭಾವನನ್ವಯಪ್ರಭಾವಮೆಂತೆಂದೊಡೆ
ವಿನುತ ಜಿನಧರ್ಮ್ಮವಾರ್ಮ್ಮಂ । ಜಿನಮುನಿಗಳ್ ತನಗೆ ಪರಮಗುರುಗಳೆನಲ್ ಸ ।
ಜ್ಜನನುತಚತುರ್ತ್ಥಕುಳ ಮ । ಣ್ಡನನಾದಂ ವಿನಯನಿಧಿ ಮಹಾಪ್ರಭು ದಡಿಗಂ ॥

ಮತ್ತೇಭವಿಕ್ರೀಡಿತಂ ॥

ನುಡಿಕಲ್ಲೊಳ್ ಕಡೆದಕ್ಕರಕ್ಕೆ ಮಱುವಕ್ಕಂ ವಿಕ್ರಮಂ ಸಿಂಹಮಂ
ಜಡಿಗುಂ ತನ್ನಯ ದಾನಶಕ್ತಿ ಸುರಭೂಜಾನೀಕದೊಳ್ ಪೂಣ್ದು ಕೋ
ಡಿಡುಗುಂ ಕಂತುಗೆ ಕಿಂತುವಂ ಜನಿಯಿಕುಂ ಸೌಂದರ್ಯ್ಯಮೆಂದಂದು ಪೇಳ್
ದಡಿಗಂಗಾರ್ಪ್ಪಡಿ ಪಾಟಿ ಪಾಸಟಿ ಸಮಂ ಪಟ್ಟಾನ್ತರಂ ಮಾನವರ್ ॥

ಬಲ್ಲಹನೆನೆ ನೆಗರ್ದ್ದಾಹವ । ಮಲ್ಲಂ ಕೊಡೆಯಡಪ ಮಂದಳಂ ಸೀ(ಗು)ರಿಯೆಂ ।
ಬೆಲ್ಲಾ ಚಿಹ್ನಮನದಟರ । ಮಲ್ಲಂ ದಡಿಗಂಗೆ ಕೊಟ್ಟನನ್ನಾದರದಿಂ ॥

ಆ ಪ್ರಭುವಿನ ಕುಲವಧು ಶೀ । ಲಪ್ರಭೆಯಿಂದತ್ತಿಮಬ್ಬೆಗಂ ರೇವಕಗಂ ।
ಭೂಪ್ರಣುತೆ ಸಮನೆನಿಪ್ಪ ಯ । ಶಃ ಪ್ರಕಟಿತೆ ರೇವಕಬ್ಬೆಗೆಣೆಯಾರ್ಸ್ಸತಿಯರ್ ॥

ಮಹಾಪ್ರಭು ದಡಿಗನಿಗೆ ಆಹವಮಲ್ಲ ತ್ರೈಳೋಕ್ಯಮಲ್ಲ ಚಕ್ರಿಯಿತ್ತ ರಾಜ ಮರ್ಯಾದೆಯ, ರಾಜವಿಶ್ವಾಸದ ವಸ್ತುಗಳು ಕೊಡೆ, ಅಡಪ, ಮಂದಳ, ಸೀಗುರಿ. ಗಾಳಿ ಮಳೆ ಬಿಸಿಲುಗಳಿಗೆ ಮರೆಯಾಗಿ ಹಿಡಿಯುವ ಸಾಧನ ಮಾತ್ರವಾಗದೆ ಕೊಡೆ ಮರ್ಯಾದೆ ಯನ್ನು ತೋರುವ ವಸ್ತುವೂ ಹೌದು. 'ವಡ್ಡಾರಾಧನೆ'ಯಲ್ಲಿ 'ಸೀಗುರಿಗಳುಮಂ ಕೊಡೆಗಳುಮಂ ಪಿಡಿಯಿಸಿ' ಎಂಬ ಮಾತಿದೆ (ಪುಟ. ೭೪). ಪಂಪನ 'ಆದಿಪುರಾಣ'ದಲ್ಲಿ 'ಪಂಚರತ್ನದ ಕೊಡೆಯಂ ಪಿಡಿದಂ' (೭–೫) ಎಂಬ ಪ್ರಯೋಗವಿದೆ. 'ಏಱಲ್ ಕುದುರೆ ಕೊಡೆ ಆಳಪಣ್ಣುವಕೆ...ರಾಜ ಚಿನ್ನವ ಕೊಟ್ಟು'ದನ್ನು ಶಾಸನ ದಾಖಲಿಸಿದೆ (SII. IX-i. ೪೧. C.IIC.). ದೇವಸ್ಥಾನದಲ್ಲಿ ದೇವರಿಗೆ ಸಹ 'ಕೊಡೆಯ ಭೋಗ' ಎಂಬೊಂದು ಮರ್ಯಾದೆಯ ಸೇವೆಯಿದೆ (SIE ೧೯೩೪, ೧೫೭, ೧೪೨೬, ಪುಂಗನೂರು). ಆನೆ ಕುದುರೆಗಳನ್ನೂ ಕೊಡೆ ಸೀಗುರಿಗಳನ್ನೂ ಬಿಡುದಾಸಿಯರನ್ನೂ ಗೌರವದ ಸಂಕೇತವಾಗಿ ಕೊಡುವುದು ವಾಡಿಕೆ. ಅರಿಕೇಸರಿ ರಾಜನು ಪಂಪಕವಿಗೆ "ಕೊಡುವ ಬಿಡುವೆಣ್ಗಂ ಲೆಕ್ಕ ವಿಲ್ಲೆನಿಸಿ"ತ್ತೆಂದು (೧೪–೫೫) ಪಂಪಭಾರತದಲ್ಲಿದೆ. ಇದರ ಹಾಗೆಯೇ ಅಡಪ (=ಅಡಕೆ ಎಲೆಯ ಚೀಲ)ವನ್ನು ಕೂಡ ಕೊಡುವುದು ಗೌರವಾಸ್ಪದವಾಗಿತ್ತು; ಇದನ್ನು ಶಾಸನ ಗಳೂ ಕಾವ್ಯಗಳೂ ದಾಖಲಿಸಿವೆ. ಒಂದು ಶಾಸನ ಪ್ರಯೋಗ : "ಪಟ್ಟಂಗಟ್ಟಿ ಏಱಲ್ ಕುದುರೆ ಕೊಡೆ ಅಡಪದವಂಕೆ ಕುಂಚಂ ತಳಿಗೆ ಕೀಟ್ಟಿವಟ್ಟಲಡ್ಡಣಿಗೆ ಗದ್ದಿಗೆ ರಾಜಚಿನ್ನ ಮುಮ್ ಕೊಟ್ಟು" (SIE ೧೯೩೨, ೪೮. A.D. ೯೬೦) ; ಒಂದು ಕಾವ್ಯ ಪ್ರಯೋಗ : "ಕೊಡೆಯಿಲ್ಲದಡಪವಿಲ್ಲದೆ ಮಡದಿಯರೊಡವಪ್ಪರಿಲ್ಲದಾಳಿಲ್ಲದೆ ನೀನ್ ನಡೆದೊರ್ವನೆ ಬಂದೆ" (ಬಂಧುವರ್ಮನ 'ಹರಿವಂಶಾಭ್ಯುದಯಂ', ೧೪–೨). ಈ ನಾನಾ ಪ್ರಯೋಗ ಗಳ ಹಿನ್ನೆಲೆಯಲ್ಲಿಟ್ಟು ನೋಡಿದಾಗ, ೧೦–೧೧ನೆಯ ಶತಮಾನದ ಸಾಮಾಜಿಕ ಶಿಷ್ಟಾ ಚಾರವಾಗಿ ಈ ವಸ್ತುಗಳನ್ನು ಕೊಡುವುದು ಒಪ್ಪಿತ ವ್ಯವಸ್ಥೆಯಾಗಿತ್ತು. ಅದರಂತೆ ಚಕ್ರವರ್ತಿಯ ಅರಮನೆಯಿಂದ ಬಂದ ಈ ಬಗೆಯ ಮನ್ನಣೆಗೆ ದಡಿಗನು ಪಾತ್ರನಾಗಿ ದ್ದನು. ಇದು ದಡಿಗನ ವಂಶಕ್ಕೂ ಜೈನ ಸಮಾಜಕ್ಕೂ ಚಕ್ರವರ್ತಿಯಿತ್ತ ಮರ್ಯಾದೆ. ದಡಿಗನ ಹಿರಿಮೆ ಮಹಿಮೆಗಳಿಂದ ಆತನ ಊರಿಗೆ ದಡಿಗನ ನೇಱಿಲಗೆ ಎಂಬ ಹೆಸರು ಸಲುವಳಿಯಾಯಿತು.

ಈ ದಡಿಗನ ಮಗ (ತತ್ಪುತ್ರಂ) ಶಾಸನದ ಮುಂದಿನ ಭಾಗದಲ್ಲಿ ಕೀರ್ತಿತನಾಗಿದ್ದಾನೆ : ಉತ್ಪಲಮಾಲೆ ॥

ಪುಟ್ಟಿದನಂತವರ್ಗ್ಗೆ ಜಿಕನೆಂಬ ಮಹಾಪ್ರಭು ವಂಶವರ್ದ್ಧನಂ
ಜೆಟ್ಟಿಗನರ್ಹದಂಘ್ರಿನಳಿನಾನತಭೃಂಗನುದಾರಿ ಬಿಣ್ಪು ಮಾ

ರ್ಕಟ್ಟಳೆಯಾಯ್ತು ಮಂದರನಗಕ್ಕೆ ಬಣಂಜುಕುಳಕ್ಕೆ ನಾಳ್ಕೆ ತ ೫೬೯
ನ್ನಿಟ್ಟುದೆ ಬೊಟ್ಟು ಕಟ್ಟಿದುಃದೆ ಕಣ್ಗೆ ಕೆ ಬಿಟ್ಟುದೆ ತಾಂಬ್ರಶಾಸನಂ ॥
ಅ ವಿಭುಗೆ ದೇವಲಬ್ಬೆ ಗು । ಣಾವಳಿಯಿಂ ಪುರುಷಭಕ್ತಿಯಿಂ ಶೀಳದೊಳಂ ।
ತೀವಿ ಜಿನಮತಕೆ ಶಾಸನ । ದೇವಿಯೆನಲು ಪೆಂಪುವೆತ್ತ ಕುಲವಧುವಾದಳ್ ॥

ಅಣುಗ, ಕಂದ—ಎಂದು ಬಳಸುವಂತೆ ಪ್ರೀತ್ಯರ್ಥಕ 'ಎಱಕ' ಎಂಬ ಅಚ್ಚಗನ್ನಡ ಶಬ್ದವನ್ನು ಇಲ್ಲಿ ಅಂಕಿತನಾಮವಾಗಿಡಲಾಗಿದೆ. ದಡಿಗನ ಮಗ ಎಱಕನಿಗೆ; ಗಂಗ ವಂಶದ ಎಱೆಯಪ್ಪ ಎಂಬ ಹೆಸರಿನ ರಾಜರು ಇಲ್ಲಿ ನೆನಪಾಗುತ್ತಾರೆ. ಇಲ್ಲಿ ಎಱಕ ಮಹಾಪ್ರಭುವು ವಂಶವರ್ಧನನೂ ಬಣಂಜು ಕುಲಕ್ಕೆ ನೇತಾರನೂ ಆಗಿದ್ದನೆಂಬುದನ್ನು ಗಮನಿಸಬೇಕು. ಬಣಂಜು ಕುಲವೆಂದರೆ ಬಣಜಿಗರು. ಜೈನರಲ್ಲಿ ಇದ್ದ ಈ ಬಣಜಿಗರು (=ವಾಣಿಜ್ಯ ಮಾಡುವವರು) ೧೨ನೆಯ ಶತಮಾನವಾದ ಮೇಲೆ ಜೈನತ್ವದಿಂದ ವೀರಶೈವರಾಗಿ ಮತಾಂತರಗೊಂಡರು; 'ಜೈನ ಕೆಟ್ಟು ಬಣಜಿಗನಾದ' ಎಂಬ ಗಾದೆ ಹುಟ್ಟಿತು.

ಜಿನರ ಪಾದಕಮಲಗಳಿಗೆ ದುಂಬಿಯಂತಿದ್ದ ಎಱಕನ ಮಡದಿ ದೇವಲಬ್ಬೆ ಜಿನಮತಕ್ಕೆ ಶಾಸನದೇವಿ (ಯಕ್ಷಿ)ಯಂತೆ ಇದ್ದಳು. ಎಱಕನ ತಾಯಿ ರೇವಕಬ್ಬೆಯನ್ನು ದಾನಚಿಂತಾಮಣಿ ಅತ್ತಿಮಬ್ಬೆಗೆ ಹೋಲಿಸಿದ ಕವಿ ಇಲ್ಲಿ ಎಱಕನ ಕುಲವಧುವನ್ನು ಯಕ್ಷಿಗೆ ಹೋಲಿಸಿದ್ದಾನೆ. ಈ ಎಱಕ—ದೇವಲಬ್ಬೆಯರ ಮಗ (ತತ್ಪುತ್ರಂ)ನನ್ನು ಕುರಿತು, ಸೊಸೆಯನ್ನು ಕುರಿತು, ಮುಂದಣ ಮೂರು ಪದ್ಯಗಳಲ್ಲಿ ಬಿಡಿಸಿದ್ದಾನೆ :

ಉತ್ಪಲಮಾಲೆ ॥

ಬೆಟ್ಟದ ನುಣ್ಪನಂತೆ ಕಡುದೂರದೊಳೊಳ್ಳಿದರೆಯ್ದೆವೋಗೆ ಕಲು(ಂ)
ಗಟ್ಟಿನಿಪನ್ನರೇನೊ ಮಹಿಮೋನ್ನತಿಯಿಂದಿಳಿಕೆಯ್ವನೆಯ್ದೆ ಪೊಂ
ಬೆಟ್ಟಮನಾ ಗಭೀರತೆಯಿನಂಬುಧಿಯಂ ಗೆಲೆವಂದನೆಂಬುದಾ
ಚಟ್ಟನನನ್ಯಸೈನಿಕಘರಟ್ಟನನನ್ವಯರತ್ನಪಟ್ಟನಂ ॥

ಎನೆ ನೆಗರ್ದ್ದ ಚಟ್ಟ ಗಾವು । ಣ್ಡನ ಮಾನಿನಿ ಚಾಯಿಕವೆ ಗಾವುಂಡಿ ಜಗ ।
ಜ್ಜನಕೆ ಬುಧಜನಕೆ ಜಿನಜನ । ಕನುಪಮ ನಿಜಜನಕೆ ಕಲ್ಪಲತೆಯವೊಲೆಸೆದಳ್ ॥

ಚಂಪಕಮಾಲೆ ॥

ವಿನಯದ ಪೆಂಪಿನುನ್ನತಿಯ ಮಾನ್ತನದೊಳ್ಪಿನ ಸಚ್ಚರಿತ್ರದಾ
ಪ್ಪಿರ್ನ ನಿಜಗೋತ್ರರಕ್ಷಣೆಯ ಧರ್ಮದ ಪೆರ್ಮೆಯವೊಂದನೊನ್ದು ನೆ
ಟ್ಟನೆ ಮಿಗೆ ಸಚ್ಚತುರ್ಥಕುಳದೀಪಿಕೆ ತಾನೆನಿಸಿರ್ದ್ದ ಚಾಮಿಯ
ಕ್ಕನೊಳೆಣೆಯಾರ್ಮ್ಮಹಾಪ್ರಭು ಶಿಖಾಮಣಿ ಚಟ್ಟನ ಪುಣ್ಯಕಾನ್ತೆಯೊಳ್ ॥

ಚಟ್ಟಗಾವುಂಡನು ಅದಕ್ಕೆ ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ ಎಂಬಂತೆ ಹಲವರುಂಟು. ಚಟ್ಟಗಾವುಂಡನು ಅದಕ್ಕೆ ಅಪವಾದ. ತನ್ನ ಮಹಿಮೋನ್ನತಿಯಿಂದ ಚಿನ್ನದ ಬೆಟ್ಟವನ್ನೂ ಗಾಂಭೀರ್ಯದಿಂದ ಕಡಲನ್ನೂ ಮೀರಿ ಬೆಳೆದ ಚಟ್ಟಗಾವುಂಡನು ತನ್ನ ವಂಶಕ್ಕೆ ರತ್ನಪಟ್ಟವಾಗಿದ್ದನು. ಅವನ ಗಾವುಂಡಿ ಚಾಯಿಕವೆ ಬಲ್ಲಿದರಿಗೂ ಬಂಧುಗಳಿಗೂ ಕಲ್ಪವೃಕ್ಷವಾಗಿದ್ದಳು.

ಚಟ್ಟಿಗಾವುಂಡನ ಪುಣ್ಯಕಾಂತೆಯೂ ಆದ ಆಕೆ ಚತುರ್ಥಕುಲವನ್ನು ಬೆಳಗಿದಳು. ಈ ಚತುರ್ಥಕುಲವೆಂಬ ಪ್ರಯೋಗ ಚಿಂತನೀಯ. ಕನ್ನಡ ಶಾಸನಗಳಲ್ಲಿ ಇದು ಅಪರೂಪ, ವಿಶಿಷ್ಟ ಪ್ರಾಚೀನತಮಪ್ರಯೋಗ. ಜೈನರಲ್ಲಿ ಚತುರ್ಥ, ಬೋಗಾರ, ಸಾದ, ಪಂಚಮ, ವೈಶ್ಯ ಕುಲಗಳಿವೆ. ಉತ್ತರ ಕರ್ನಾಟಕದಲ್ಲಿ ಇಂದಿಗೂ ಈ ಪಂಗಡಗಳು ಚಾಲ್ತಿಯಲ್ಲಿವೆ ; ಧಾರವಾಡ–ಬೆಳಗಾವಿ ಜಿಲ್ಲೆಗಳಲ್ಲಿ ಇವು ಪ್ರಬಲವಾಗಿ ಕಂಡುಬರುತ್ತವೆ. ನಿಘಂಟಿನ ಶಬ್ದಾರ್ಥದ ಪ್ರಕಾರ 'ಚತುರ್ಥ' ಎಂದರೆ ನಾಲ್ಕನೆಯ ಜಾತಿ, ಶೂದ್ರ ಎಂಬರ್ಥವಿದೆ ; ಆದರೆ ಅದರೊಂದಿಗೇ ಜೈನರಲ್ಲಿ ಒಂದು ಪಂಗಡ ಎಂಬರ್ಥವನ್ನೂ ಈ ಶಾಸನ ಪ್ರಯೋಗವನ್ನೂ ಅವಶ್ಯ ಸೇರಿಸಬೇಕು. ಪಾತ್ರೆವ್ಯಾಪಾರ ಪ್ರಧಾನವಾಗಿರುವವರು ಬೋಗಾರ ಕುಲ : ಕೃಷಿಕರೂ ಆಗಿರುವವರು ಚತುರ್ಥಕುಲ ; ವರ್ತಕರಷ್ಟೇ ಆಗಿರುವವರು ಪಂಚಮರು : ಈ ಮೂರೂ ಮುಖ್ಯ ಪಂಗಡಗಳು ಜೈನಸಮಾಜದ ಒಳಜಾತಿಗಳು. ಕೊಡುವುದು, ತೆಗೆದುಕೊಳ್ಳುವುದು, ಮದುವೆ ಭೋಜನಾದಿ ವ್ಯವಹಾರ ಕೂಡ ಈ ಒಳಪಂಗಡಗಳಲ್ಲಿ ಕಡಮೆ. ಜೈನರಲ್ಲೇ ಇರುವ 'ಸಾದಕುಲ' ಕುರಿತ ಪ್ರಾಚೀನ ಶಾಸನ ಪ್ರಯೋಗ ಧಾರವಾಡಜಿಲ್ಲೆ ರಾಣೆಬೆನ್ನೂರ ತಾಲ್ಲೂಕು ನದಿಹರಳಹಳ್ಳಿ ಶಾಸನದಲ್ಲಿದೆ (SII. XVIII. ೧೮೦. A.D. ೧೧೬೮). ಬೋಗಾರ ಕುಲವನ್ನು ಕುರಿತು ಸಹ ಶಾಸನ ಪ್ರಯೋಗವಿದೆ : ಹಿರಿಯ ಗೊಬ್ಬೂರ ಊರೊಳಗಣ ಬ್ರಹ್ಮಜಿನಾಲಯಕ್ಕೆ ಸರ್ವ್ವಬಿಟ್ಟಿಯಾಗಿ **ಬೋಗಾರ** ಮಹಾನಖರಂಗಳು ಕಂಚಿನ ಭಂಡವ ಕೊಂಡಲ್ಲಿ ಕೊಟ್ಟಲ್ಲಿ ಬಿಟ್ಟ ಹೊಂಗೆ ಕಾಣಿ (ಹಳೆಯ ಹೈದರಾಬಾದು ರಾಜ್ಯ ಶಾಸನ ನಂ. ೮ : ರಾಯಚೂರು ಜಿಲ್ಲೆ ದೇವದುರ್ಗದ ಬಳಿಯ ಗಬ್ಬೂರು : ಕ್ರಿ.ಶ. ೧೧೯೯). ಅದರಂತೆ ಚತುರ್ಥಕುಲವನ್ನು ಕುರಿತ ಮಹತ್ವದ ಉಲ್ಲೇಖ ಈ ನೇರಿಲಗೆಯ ಶಾಸನದಲ್ಲಿ ಸೇರಿಕೊಂಡಿದೆ. ಅಂದರೆ ಸುಮಾರು ೮೦೦–೯೦೦ ವರ್ಷಗಳಿಗೂ ಹಿಂದಿನಿಂದ ಈ ಸಾಮಾಜಿಕವರ್ಗ ಪ್ರಭೇದಗಳು ಜೈನ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದು ಸಮಾಜೊ–ಧಾರ್ಮಿಕ ಅಧ್ಯಯನಕ್ಕೆ ಆಕರವಾಗಿದೆ.

ಚಟ್ಟಿಗಾವುಂಡ-ಚಾಮಿಯಕ್ಕನನ್ನು ವರ್ಣಿಸಿದ ಶಾಸನಕವಿ, ಅನಂತರ ಇವರ ಮಕ್ಕಳನ್ನು ಕುರಿತು ವಿಸ್ತಾರವಾಗಿ ಮನದುಂಬಿ ಕಂಡರಿಸಿದ್ದಾನೆ :

ಆ ದಂಪತಿಗಳ್ಗಾದರ । ದಾದಸ್ವರ್ಗತ್ಪುತ್ರರಮರಗಜರದನಂ ನಾ ।
ಲ್ಕಾದಂತೆ ಮಲ್ಲನೆಚಿಕಂ । ಉದಾರಯುತ ಬಾಚ ಮೂಕನೆಂಬೀ ಪ್ರಭುಗಳ್ ॥

ಚಲದ ಭುಜಬಲದ ಕಲಿತನ । ದಲಘುಗುಣಕ್ಕಾದಿಯೆನಿಸಿದೀ ಪ್ರಭು ಮಲ್ಲಂ ।
ಕುಲದೀಪಕನಾದಂ ನಿ । ರ್ಮ್ಮಳಚರಿತಂ ಪಿರಿಯ ಮಹಿಮೆಯಿಂ ಪಿರಿಯಣ್ಣಂ ॥

ಮಲ್ಲ, ಎಚಿಕ, ಬಾಚಣ, ಮೂಕ—ಎಂಬ ನಾಲ್ಕು ಜನ ಮಗಂದಿರಲ್ಲಿ ಕಡೆಯ ಮೂವರನ್ನು ಎರಡು ವೃತ್ತಗಳಲ್ಲಿ ಪರಿಚಯಿಸಿದೆ ;

ಮತ್ತೇಭವಿಕ್ರೀಡಿತಂ ॥

ಜಿನಪಾದಾಂಬುಜಚಂಚರೀಕನೆಚಿಕಂ ವೀರಾರಿವಿದ್ರಾವಣಂ
ವಿನಯಾಂಭೋನಿಧಿ ಬಾಚಣಂ ನಿಜಕುಳಪ್ರಖ್ಯಾತಕಂ ಮೂಕನಿಂ
ಅನುಜರ್ಮ್ಮಲ್ಲನ ದಕ್ಷದಕ್ಷಿಣಭುಜಾದಣ್ಡಂಗಳಿರ್ಪ್ಪಂತೆ ಮೇ
ದಿನಿಯೊಳ್ ರಾಜಿಸುತಿರ್ದ್ದರಪ್ರತಿಮರತ್ಯೌದಾರ್ಯದಿಂ ಶೌರ್ಯದಿಂ ॥

ಚಂಪಕಮಾಲೆ ॥

ಒದವಿದ ಕೋಪದಿಂದಮಿದಿರಾನ್ತ ನರಂಗೆ ಕೃತಾಂತರೂಪನಿಂ
ಬುದು ಕುಳಿಶಾಗ್ನಿಯೆಂಬುದು ದವಾನಳನೆಂಬುದು ಸಿಂಹಿಕೇಯನಿಂ
ಬುದುದಶಕಣ್ಠನೆಂಬುದು ಭಯಂಕರಮಾರಿಯು ಮೂರಿಯೆಂಬುದ
ಲ್ಲದೆ ಪೆಱದೆಂಬುದೇನ್ನೆಗರ್ದ್ದ ಬಾಚಣನಂ ರಣರಂಗಧೀರನಂ ।

ಎಚಿಕ ಮೂಕರು ಜಿನಭಕ್ತರಾಗಿ ಪ್ರಖ್ಯಾತರಾದರೆ, ಬಾಚಣನು ಯುದ್ಧವೀರನೂ ಆಗಿ ವಿಖ್ಯಾತನಾಗಿದ್ದನು. ಈ ಮೂವರೂ ಒಡಹುಟ್ಟುಗರು ಅಣ್ಣನಾದ ಮಲ್ಲನಿಗೆ ಭುಜಾದಂಡವೆನಿಸಿದರು. ಮುಂದೆ ಅನೇಕ ವೃತ್ತ ಕಂದ ಪದ್ಯಮಾಲಿಕೆಯಲ್ಲಿ ಮಲ್ಲಗಾವುಂಡನ, ಆತನ ಸೌಭಾಗ್ಯವತಿಯ ವೃತ್ತಾಂತವನ್ನು ನಿರೂಪಿಸಲಾಗಿದೆ. ಈ ನಿರೂಪಣೆಯಲ್ಲೂ ಒಂದು ಚಮತ್ಕಾರವಿದೆ. ಮೊದಲು ಎರಡು ಕಂದಗಳಲ್ಲಿ ಮಲ್ಲಗಾವುಂಡ–ಮಲ್ಲಿಯಕ್ಕ ದಂಪತಿಗಳನ್ನು ಪರಿಚಯಿಸಿ, ಅದರ ಮುಂದಿನ ಕಂದದಲ್ಲಿ ಅವರ ಕಂದನನ್ನು ಪರಿಚಯಿಸಿದೆ ; ಅನಂತರ ಮತ್ತೆ ಮಲ್ಲನನ್ನು ಹಲವಾರು ಪದ್ಯಚಿತ್ರಗಳಲ್ಲಿ ರೇಖಿಸಿದೆ :

ಕೊಂಡಾಡಿದ ಪರವಧುಗಳ । ತಂಡದ ಮೊಲೆಯುಂಡ ಮೊಲೆ ಬಸಿರ್ಪ್ಪೆತ್ತ ಬಸಿ ।
ರ್ಮ್ಮಂಡಳವಱಿಯಲು ತನಗಿದ । ಖಂಡಿತಸಚ್ಚರಿತವೆನಿಪನೀ ಪ್ರಭು ಮಲ್ಲಂ ॥
ಆ ವಿಭುವಿನ ಸತಿ ನೆಗರ್ದ್ದಾ । ರೇವಕಿಗೆ ಸುಳೋಚನಾ ಮಹಾದೇವಿಗೆ ಸಂ ।
ದೀ ವಧು ಜಿನಪತಿ ಪದಯುಗ । ಸೇವೆಗೆ ಸಮನೆನಿಸಿ ಮಲ್ಲಿಯಕ್ಕಂ ನೆಗರ್ದ್ದಳ್ ॥

ತತ್ಪುತ್ರಂ

ಜೋಮಂ ವರವನಿತಾ ಜನ । ಕಾಮಂ ನಿಜಕುಳಲಲಾಮನುದ್ಧತಭಯಕೃ ।
ದ್ಭೀಮಂ ವಿನೂತ ವಿಬುಧ । ಪ್ರೇಮಂ ನಿಜಗೋತ್ರಭೂಷಣಂ ಧರೆಗೆಸೆದಂ ॥

ಜೈನ ಚತುರ್ಥಕುಲಗೋತ್ರ ಭೂಷಣನೂ ವಿಬುಧನಿಗೆ ಪ್ರೀತಿಪಾತ್ರನೂ ಆದ ಜೋಮನು ಮಲ್ಲಗಾವುಂಡನ ಕುಲಪುತ್ರ, ಕುಲದೀಪಕ. ಜೈನರು ಗಂಗರ–ರಟ್ಟರ ಕಾಲಕ್ಕಾಗಲೆ ಗಾವುಂಡಿಕೆಗೆಯ್ಯತೊಡಗಿದ್ದರು ; ಅವರ ಗಾವುಂಡತನದ ಪ್ರಸ್ತಾವಗಳು ಕನ್ನಡ ಸಾಹಿತ್ಯದಲ್ಲಿ ಹೇರಳ. ಭ್ರಾಜಿಷ್ಣು (ಸು. ೮೦೦) 'ವಡ್ಡಾರಾಧನೆ'ಯಲ್ಲಿ ಇದಕ್ಕೆ ನೆರವಾಗುವ ವಾಕ್ಯಗಳನ್ನು ಬಳಸಿದ್ದಾನೆ : ಅವೂರ ಗಾವುಣ್ಡಂ ಜಿನವಾದಿಕನೆಂಬೊನಾತನ ಗಾವುಂಡಿ ಜಿನಮತಿಯೆಂಬೊಳ್. 'ಚಾವುಂಡರಾಯ ಪುರಾಣ' (೯೭೮) 'ಜೀವಸಂಬೋಧನೆ' (ಸು. ೧೧೬೦) ಕೃತಿಗಳಲ್ಲಿ ಜೈನ ಗಾವುಂಡ–ಗಾವುಂಡಿಯರು ಗ್ರಾಮಾಧಿ

ಪತ್ತು ನಡೆಸಿದ ವಿವರಗಳಿವೆ. ಶಾಸನಾಧಾರಗಳು : ನಾಗಾರ್ಜುನನು ನಾಳ್ಗಾವುಂಡ ನಾಗಿದ್ದು ತನ್ನ ದೊರೆ ಕಲಿವಿಟ್ಟರಸನ ಬೆಸನನ್ನು ಪಾಲಿಸುವ ಅವಸರದಲ್ಲಿ ಅತೀತ ನಾದನು. ಆಗ ಗಾವುಂಡಿಕೆಗೆ ಅರಸನು ಉತ್ತರಾಧಿಕಾರಿಯನ್ನಾಗಿ ನಾಗಾರ್ಜುನನ ಮಡದಿ ಜಕ್ಕಿಯಬ್ಬೆಯನ್ನು ನಿಯೋಜಿಸಿ, ಆಕೆಗೆ ನಾಳ್ಗಾವುಂಡ ಪಂತವನ್ನು (ಗೌಡಿಕೆಯ ಅಧಿಕಾರ) ಇತ್ತನು (ಎಕ. VII. ಶಿಕಾರಿಪುರ. ೨೧೯, ಕ್ರಿ.ಶ. ೯೧೮). ಶ್ರಾವಕಿ ಚಿನ್ನಿಯಬ್ಬೆ ಗಾವುಣ್ಡಿಯ ಉಲ್ಲೇಖವಿದೆ (ಎಕ. IX. ಕೊಡಗು. ೩೧. ಕ್ರಿ.ಶ. ೧೦೫೦). ಗಾವುಂಡವೃತ್ತಿಯವರು ಕಟ್ಟಿಸಿದ 'ಗಾವುಂಡ ಬಸದಿ'ಯನ್ನು ಶಾಸನ ಹೆಸರಿಸಿದೆ (SII. XX. ೫೫, ೧೦೮೨).

ಮಲ್ಲಗಾವುಂಡನು ಜೈನಗಾವುಂಡ ಮತ್ತು ನಾಳ್ಪ್ರಭು ಪರಂಪರೆಯವನು : ನಾಳ್ಪ್ರಭು, ನಾಳುಪ್ರಭು, ನಾಡಿನ ಪ್ರಭು ಎಂಬ ರೂಪಗಳೂ ಇವೆ : ಎಡೆದೊಱೆಯೆಪ್ಪತ್ತು ಮಂಡಲಿ ಸಾಯಿರದ ನಾಳುಪ್ರಭು ನೇಮಪೆಗ್ಗಡೆಯಾತನ ಮಗಂ ಚಿಣ್ಣಗವುಡ ಮಹಾ ಪ್ರಭು (ಎಕ. VII. ಶಿವಮೊಗ್ಗ ೪೩. ಕ್ರಿ.ಶ. ೧೧೭೨). ಇಮ್ಮಡಿ ಗುಣವರ್ಮ ಕವಿ (೧೨೩೫) ಪುಷ್ಪದಂತ ಪುರಾಣದಲ್ಲಿ ನಾಳ್ಪ್ರಭು ಶಾಂತಿವರ್ಮನೆಂಬಾತನನ್ನು ಪರಿಚಯಿಸಿ ದ್ದಾನೆ (೧–೭೬). ಜನ್ನನ 'ಯಶೋಧರ ಚರಿತೆ'ಯಲ್ಲೂ ಈ ಬಗೆಯ ಮಾತುಗಳಿವೆ (೪–೮೭). ಮಲ್ಲಗಾವುಂಡನು ತನ್ನ ಕಾಲದ ಸಮಾಜದಲ್ಲಿ ಪ್ರಭಾವಶಾಲಿಯಾದ ವ್ಯಕ್ತಿತ್ವ ವನ್ನು ಹೊಂದಿದ್ದನೆಂಬುದನ್ನು ಪ್ರಕೃತ ಶಾಸನ ತೊದಳಿಲ್ಲದ ನುಡಿಗಡಣದಲ್ಲಿ ನಿಲ್ಲಿಸಿದೆ :

ಚಂಪಕಮಾಲೆ ॥

ಜನನಿ(ಗೆ) ಜಗಜ್ಜನೋದ್ಭಹಿತಮಾಗಿರೆ ಕಲ್ಪಮಹೀಜದೊಂದು ಪ
ಣ್ಣನೆ ಸವಿದಾ ಫಳಂ ಸಫಳಮಾಗಿರೆ ಪೆತ್ತಳೊ ನಿನ್ನನಲ್ಲದಂ
ದನಿಮಿಷಧೇನುದುಗ್ಧ ಪರಿಸೇಪೆಯೊಳೀ ವಪುವರ್ದ್ಧನಪ್ರಚೋ
ದನೆಗೆಡೆಯಾಂಯ್ತೊ ಪೇಳೆನಿಪುದಾಪ್ಪುರ್ವ ಮಹಾಪ್ರಭು ಮಲ್ಲಿನಾಥನಂ ॥

ಮಹಾಸ್ರಗ್ಧರಾ ॥

ಸಿಡಿಲೊಂದೇಳೆಂಟು ಕಾಳಾಂತಕನ ಮಸಕವೇಳೆಂಟು ರಾಹುಪ್ರಕೋಪಂ
ಪಡಿಯೇಳೆಂಟಪ್ಪಡಕ್ಕುಂ ನಿನಗೆ ಸಮರದೊಳ್ ಮಲ್ಲ ತಾಂಗಲ್ ತಱುಂಬಲ್
ಕಡುಕೆಯ್ಯಲು ಕೆಯ್ದು ಕೆಯ್ಯಲು ಮರೆಯಲುಲಿಯಲುರ್ವ್ವಳಲೊಟ್ಟಯ್ಸಲೆಯ್ತಂ
(ದೆಡೆ)ಯಿಂ ಮುಂದಣ್ಗೆ ಮತ್ತೊಂದಡಿಯನಿಡುವ ಮಲ್ಲಯ್ಯ ಕೆಲ್ಲಯ್ವನಾವೊಂ ॥

ಉತ್ಪಲಮಾಲೆ ॥

ಏ ದೊರೆಯಂ ಗ(ಡಿ)ತ್ತು ಜಸವಂ ಪಡೆವಗ್ಗ್ರ ಚಾಗವುದ್ಧತಂ
ಗೇದೊರೆಯುಂಗವಳುಕದ ಪರಾಕ್ರಮಮುಳುಕಿ ಶರಣ್ಯಮೊಂದು ಬಂ
ದೇದೊರೆಯುಂಗವಜ್ರಕವಚಂ ಬಗೆದಾಗಳೆ ಬೇಡು ಕೊಟ್ಟಪಂ
ಕಾದಿದಪಂ ಶರಣ್ಗೆ ವರೆ ಕಾದಪನೀ ಪ್ರಭು ಮಲ್ಲನುರ್ವ್ವರಿಯೊಳ್ ॥

ಮತ್ತೇಭವಿಕ್ರೀಡಿತಂ ॥



ಕಲಿಯೇ ಸೂದ್ರಕನೀವನೇ ಸುರಕುಜಂ ಗಂಭೀರನೇ ವಾರ್ದ್ಧಿ ನಿ
ರ್ಮ್ಮಳಚಾರಿತ್ರನೆ ಜಾಹ್ನವೀಪ್ರಿಯಸುತಂ ಸತ್ಯವ್ರತಖ್ಯಾತನೇ
ಗೆಲೆವನ್ನಂ ನೆಗದ್ದರ್ಕ್ಕಪುತ್ರನುಮನೆನ್ದಾನನ್ದದಿಂ ವಿಶ್ವಭೂ
ತಳಮೆಲ್ಲಂ ಪೊಗಳ್ಗುಂ ವಚಃಕಬರಿಕಾಪ್ರೋತ್ಫುಲ್ಲಸಂ ಮಲ್ಲನಂ ॥

ಉತ್ಪಲಮಾಲೆ ॥

ಸಿಂಗದ ಕೇಸರಂ ಹುಲಿಯ ಮೆಯ್ಯೊದ್ವಲುಗ್ರವಿಷೋರಗೇನ್ದ್ರನು
ತ್ತುಂಗ ಫಣಾಳಿರತ್ನಮೆನಿಸಿಪ್ಪುರ್ವ್ವು ಮುತ್ತಿನವನ್ದಿರತ್ಥರ್ವೇ
ಸಂಗತವೆಮ್ಮ ಮಲ್ಲನ ಧನಂ ಜಿನಯೋಗಿಗೆ ಜೈನಗೇಹದು
ತ್ತುಂಗತೆಗಾ(ಶ್ರಿ)ತಂಗೆ ಸಮಸಂದುದು ಸಿದ್ಧರಸಂ ಸುಧಾರಸಂ ॥

ನೇಱಿಲಗೆಯ ನಾಡ್ಪ್ರಭು, ಪ್ರಾಂತಾಧಿಕಾರಿ ಮಲ್ಲಗಾವುಂಡನ ಪ್ರಭಾವವೆಂತೆಂದೊಡೆ ಎಂದು ಪ್ರಶ್ನಿಸುತ್ತ, ಅದಕ್ಕೆ ಉತ್ತರರೂಪದಲ್ಲಿ ಆತನ ಮೂರ್ತಿಯನ್ನು ಸುವರ್ಣರೇಖೆಯಾಗಿ ದಾಖಲಿಸಲಾಗಿದೆ. ದೇಶಭಾಗದ ಒಡೆಯನಾದ ಆತನು ಉದಾರಿ, ಮಹಾಪರಾಕ್ರಮಿ. ಶೀಲವಂತ ಎಂಬಿತ್ಯಾದಿ ಸದ್ಗುಣಗಳನ್ನು ಚಿತ್ತಕ್ಕೆ ಅಚ್ಚೊತ್ತುವಂತೆ ಬಣ್ಣಿಸಲಾಗಿದೆ. ಈ ಭಾಗದಲ್ಲಿ ಪೊನ್ನನು ಮಲ್ಲಪ–ಪುನ್ನಮಯ್ಯರನ್ನು 'ಶಾಂತಿಪುರಾಣ'ದಲ್ಲಿಯೂ ರನ್ನನು ಅದೇ ವಂಶದ ದಲ್ಲಪ ಮತ್ತು ನಾಗದೇವಾದಿಗಳನ್ನೂ ಚಿತ್ರಿಸಿರುವ ಕಾವ್ಯಶೈಲಿಯ ಮಾದರಿಯನ್ನು ಮುಂದುವರಿಸಿರುವುದು ಗಮನಿಕೆಗೆ ತಕ್ಕುದಾಗಿದೆ. ಈ ಮಲ್ಲನದು ಯಾವ ಬಗೆಯ ಯೋಗ್ಯತೆಯೆಂಬುದನ್ನು ಪರಿಪರಿಯಾಗಿ ಅರಳಿಸಿರುವುದು ಮತ್ತೇಭವಿಕ್ರೀಡಿತ ವೃತ್ತದಲ್ಲಿ ತನ್ನ ಪರಾಕಾಷ್ಠಸ್ಥಿತಿ ಮುಟ್ಟಿದೆ. ಮಲ್ಲನ ಸಂಪತ್ತು ಜೈನಯತಿಗಳಿಗೂ ಬಸದಿಗೂ ಆಶ್ರಿತರಿಗೂ ಸದ್ವಿನಿಯೋಗವಾಗಿತ್ತು :

ದಡಿಗನ ನೇಱಿಲಗೆಯೊಳೊಳು । ಪೊಡರಿಸಲುತ್ತುಂಗಮಂ ಶಿಲಾಮಯಮುಂ ನೇ ।
ರ್ಪ್ಪಡೆ ಮಲ್ಲಿಜಿನಾಶ್ರಯಮಂ । ಪಡಿಯಿಲ್ಲೆನೆ ಮಲ್ಲಿನಾಥವಿಭು ಮಾಡಿಸಿದಂ ॥

ಆ ಪ್ರಸಿದ್ಧ ಚೈತ್ಯಾಳಯಾಚಾರ್ಯ್ಯರ್

ಶ್ರೀಮೂಲಸಂಘದ ಸೂರ । ಸ್ಥಾಮಳಗಣ ಚಿತ್ರಕೂಟಗಚ್ಛದ ಯೋಗಿ ।
ಸ್ತೋಮಮಿದು ಪೂಜ್ಯಪಾದ । ಸ್ವಾಮಿಗಳನ್ವಯವಿವರ್ದ್ಧನರ್ದ್ಧರೆಗೆಸೆದರ್ ॥

ಮತ್ತೇಭವಿಕ್ರೀಡಿತಂ ॥

ಸ್ಮರಮತ್ತೇಭ ಕಿಶೋರ ಕೇಸರಿ ಮನೋಜೋರ್ವ್ವೀಧ್ರವಜ್ರಂ ರತೀ
ಶ್ವರ ನೀಳೋತ್ಪಳಷಂಡಚಂಡಕರನಾಶಾಯೋಷಿದುತ್ತಂಸ ಬಂ
ಧುರ ಮುಕ್ತಾಫಳ ರಶ್ಮಿ ನಿರ್ಮ್ಮಳಯಶಃಶ್ರೀರೋಚಿಯಾಗಲು ದಿಗಂ
ಬರಪೂಜ್ಯಂ ಹರಿಣಂದಿ ದೇವನೆಸೆದಂ ಚಾರಿತ್ರ ಚಕ್ರೇಶ್ವರಂ ॥

ಚಂಪಕಮಾಲೆ ॥

ಸರಸತಿ ಕುಂಚವಮಂ ಧರಿಯಿಸಿದ್ದ್ರ್ಗಳೊ ಶಾನ್ತರಸಂ ತಪಸ್ವಿನೀ
ಚರಿತಮನಾನ್ತುದೊ ಸಕಳ ಭವ್ಯಜನಂಗಳ ಪುಣ್ಯವೃದ್ಧಿ ಪೆ
ಣ್ಬರಿಜಿನೊಳಾಯ್ರ್ಯಿಕಾಕೃತಿಯನಾನ್ತುದೊ ಪೇಳಿಮಿದೆಂದೊಱಲ್ದು ಬಿ
ತ್ತರಿಪುದು ಧಾತ್ರಿ ಚಂದ್ರಮತಿಯಬ್ವೆಗದಂ ವಸುಧಾ.... ॥

(ಇಲ್ಲಿ ಮೊದಲನೆಯ ಪಾದದಲ್ಲಿ, ಎರಡನೆಯ ಶಬ್ದ 'ಕುಂಚವಮಂ' ಎಂಬುದು 'ಪಿಂಚವಮಂ' ಎಂದಿರಬೇಕೆನಿಸುತ್ತದೆ ; ಶಾಸನಪಾಠವನ್ನು ಮೂಲದೊಂದಿಗೆ ಮತ್ತೆ ಪರಿಶೀಲಿಸಬೇಕು).

ನಾಳ್ಪ್ರಭುವಾದ ಮಲ್ಲಗಾವುಂಡನು ಮಲ್ಲಿನಾಥ ಜಿನಾಲಯವನ್ನು ಕಟ್ಟಿಸಿದನು ಮತ್ತು ಅದಕ್ಕೆ ದಾನದತ್ತಿಗಳ ಕೊಡುಗೆಯೂ ನಡೆಯಿತು. ಈ ಶಾಸನ ರಚನೆಯಾದದ್ದು ೧೧೪೮ರಲ್ಲಿ. ಆದರೆ ಬಸದಿಯನ್ನು ಕಟ್ಟಿಸಿದ್ದು ಇದಕ್ಕೂ ಇಪ್ಪತ್ತು ವರ್ಷಗಳಷ್ಟು ಹಿಂದೆಯೇ. ಏಕೆಂದರೆ ಹಿಂದೆ ತಾನು ಮಾಡಿಸಿದ ಮಲ್ಲಿನಾಥಜಿನಾಶ್ರಯಕ್ಕೆ ಹೊಸದಾಗಿ ಇನ್ನಷ್ಟು ದತ್ತಿಗಳನ್ನಿತ್ತು ಈ ಹೊಸ ಕೊಡುಗೆಯ ನಾಲ್ಕೂ ದಿಕ್ಕಿನ ಮೇರೆಗಳನ್ನು ಇಲ್ಲಿ ನಿರೂಪಿಸಿದೆ: ದಡಿಗನ ನೇಱಿಲಗೆ (ನೇರಿಲ್ಗೆ–ನೀರಲ್ಗೆ–ನೀರಲ್ಗಿ), ಅಂಕೊಲಗೆ, ತೊರೆಯಿಗುಳಿ, ಬೆಳುಹುಗೆ (ಬೆಳ್ಪುಗೆ), ಕಲುಹೊಳೆ (ಕಲ್ಪೊಳೆ), ಕೊಳನೂರು, ಎಮ್ಮೆವಳ್ಳಿ, ಗುಲುಗವಳ್ಳಿ ಸ್ಥಳವಾಚಿಗಳು ಸ್ಥಳನಾಮ ಅಧ್ಯಯನಕ್ಕೆ ಆಕರವಾಗಿವೆ. ಈ ನಾಡಿನ ಮುಖಂಡ ಮಲ್ಲಗಾವುಂಡನ 'ಮುತ್ತ ಮೂದಲೆಯರೊಳ್' (=ಹಿರಿಯ ಮೂರು ತಲೆಮಾರಿನ) ಪ್ರಮುಖರನ್ನೂ ಮಲ್ಲಗಾವುಂಡನನ್ನೂ ಅವನ ಕುವರ ಜೋಮ ನನ್ನೂ ಸಾಲಂಕೃತ ಕಾವ್ಯಶೈಲಿಯಲ್ಲಿ ಮುಂದಿಡಲಾಗಿದೆ.

ಮತ್ತೇಭ

ಕೊಳದೊಳ್ ಸಸ್ಮಿತಪಂಕಜಂ ಜಳಧಿಯೊಳ್ ಲಕ್ಷ್ಮೀಶನುದ್ಯಂನಭ
ಸ್ಥಳಿಯೊಳ್ ಚಂಡಮರೀಚಿ ಪೂರ್ವ್ವ(ದಿಶೆಯೊಳ್) ಶಕ್ರೇಭಮಿರ್ಪ್ಪನ್ತೆ ಬ
(ಳ್ವ)ಳಿಸುತ್ತಂ ನಿಜಗೋತ್ರ ಪುತ್ರ ಸಹಿತಂ ವಿಕ್ರಾಂತ ಲಕ್ಷ್ಮೀವಧೂ
ತಿಳಕಂ ಶ್ರೀ ಪ್ರಭುಮಲ್ಲನೊ(ಳ್ಪ)ನೊಳಕೊಂಡಿರ್ದ್ದಂ ಧರಾಮಂಡನಂ ॥

ಮಹಾಸ್ರಗ್ಧರೆ ॥

ಕರಣೀಯಂ ಸತ್ಯಶೌಚಂ ತನಗೆ (ಸಲುವ ವಿ)ಕ್ರಾಂತಮುಂ ಧೈರ್ಯಮುಂ ಮೆ(ಯ್)
ಸಿರಿ ಧರ್ಮ್ಮಂ ತನ್ನೊಳಾರ್ಮ್ಮಂ ಚಲಮದು ಕುಲವಿದ್ಯಾನ್ವಿತಂ ತನ್ನೊಳೆಂಬೀ
ಬಿರುದಂ ಕೈಕೊಣ್ಡು ತದ್ವಂಶಜರೊಳಧಿಕನಾರಿಂದಮೆಂಬೊ(ಳ್ಪು)ವೆತ್ತಂ
ಪರಮಾರ್ತ್ಥಂ ಮಲ್ಲಗಾವುಣ್ಡನ ಮಹಿಮೆಯನನ್ತಿಂತೆನಲು ಬಲ್ಲನಾವೊಂ ॥

ಚಿತ್ತಂ ಜಿನಪತಿ ಪದದೊಳ್ । ವಿತ್ತಂ ಚತುರುದಿತದಾನದೊಳ್ ಕೀರ್ತಿ ದಿಶಾ ।
ಭಿತ್ತಿಗಳೊಳ್ ಸಂದಿರೆ ಲೋ । ಕೋತ್ತಮನಾದಂ ಬಬಾಪ್ಪು ನಾಳ್ಪ್ರಭು ಮಲ್ಲಂ ॥

ಮಲ್ಲಂ ಪರವಧುವೆಳಸಿದೊ। ಡೊಲ್ಲಂ ಮಿಥ್ಯಾಮತಕ್ಕೆ ಸಲ್ಲಂ ರಿಪುಹೃ।
ಚ್ಛೆಲ್ಲಂ ಪರಹಿತಗುಣದೊಳ್। ಪಲ್ಲವಿಪ ಜಸಕ್ಕೆ ತಾನೆ ತಾಯ್ಗುರುವಾದಂ ॥

ಮತ್ತೇಭವಿಕ್ರೀಡಿತಂ ॥

ಸ್ವಭುಜೋಪಾರ್ಜ್ಜಿತಮಾಗುಪಾರ್ಜ್ಜಿಸಿದನಿನ್ನೀ ವೃತ್ತಿಯಂ ನೋಡ ನಾ
ಳ್ವಭುಮೀ ಬೆಳ್ವುಗೆ ಸಂದ ನೇಱಿಲಗೆ ವಿಖ್ಯಾತಾಕರಂ ಕೊಳ್ಳನೂ
ರ್ವ್ವಿಭವಾಳಂಕೃತವೆಮ್ಮವಳ್ಳಿ ವಸುಧಾಶೋಭಾಕರಂ ಶ್ರೀಕರ
ಪ್ರಭವಂ ಕಲ್ಬೊಳೆ ಗುಲ್ಗುವಳ್ಳಿಯುಮನೀ ಮಲ್ಲಂ ಯಶೋವಲ್ಲಭಂ ॥

ಚಂಪಕ ॥

ಕುಲದ ಮದಂ ವಿವೇಕದ ಮದಂ ಪ್ರಭುಶಕ್ತಿಮದಂ ಸಮಗ್ರ ದೋ
ರ್ವ್ವಳದ ಮದಂ ಮದಂಗಳಂ ಮನದೆಗೊಳ್ಳದೆ ಬಾಪ್ಪುರೆ ತನ್ನ ಮುತ್ತ ಮೂ
ದಲೆಯರೊಳಿನ್ನಾರಾರುಮಣಮಿಲ್ಲೆನೆ ಪೆಂಪಿನಗುಂ(ತಿ)ವೆತ್ತ ನೇ
ಱಿಲಗೆಯ ಮಲ್ಲನಲ್ಲದರಿಹಂ ಪರವಿಲ್ಲದರೊಳ್ಪನೊಲ್ಲದರ್ ॥

ಈ ಶಾಸನ ಒಂದು ಪುಟ್ಟ ಚಂಪೂಕಾವ್ಯ. ಇದನ್ನು ಬರೆದವನು ಒಬ್ಬ ಅಜ್ಞಾತ ಜೈನಕವಿ. ಆತ ಜಿನಾಗಮತಜ್ಞ, ಮೇಲ್ಮಟ್ಟದ ಪ್ರತಿಭಾಶಾಲಿ. ಲೀಲಾಜಾಲವಾಗಿ ಜೈನ ಪರಿಭಾಷೆಯ ಬಳಕೆಯಿದ್ದು, ಆತನ ಭಾಷಾಪ್ರಭುತ್ವ, ಛಂದಸ್ಸಿನ ನೈಪುಣ್ಯ, ಅಲಂಕಾರ ಶಾಸ್ತ್ರಪರಿಣತಿ ಈ ಶಾಸನದಲ್ಲಿ ಪ್ರಕಟವಾಗಿದೆ. ಆರಂಭದಲ್ಲಿ ನಷ್ಟವಾಗಿರುವಷ್ಟನ್ನು ಬಿಟ್ಟರೂ, ಈಗ ಇರುವ ಸ್ಥಿತಿಯಲ್ಲಿಯೇ ನೋಡಿದರೂ, ಇದರಲ್ಲಿ ಒಟ್ಟು ೩೨ ಪದ್ಯಗಳಿವೆ; ಇನ್ನಷ್ಟು ಗದ್ಯವೂ ಇದೆ. ಉಪಲಬ್ಧ ಪದ್ಯಗಳ ವರ್ಗೀಕರಣ : ಕಂದ ೧೬, ಮಹಾಸ್ರಗ್ಧರೆ ೨, ಚಂಪಕಮಾಲೆ ೪, ಉತ್ಪಲಮಾಲೆ ೪, ಮತ್ತೇಭ ವಿಕ್ರೀಡಿತಂ ೬. ವರ್ಣವೃತ್ತಗಳನ್ನಷ್ಟೆ ಬಳಸಿದ್ದರೂ ನಿರರ್ಗಳ ಓಟದ ಆ ಪದ್ಯಗಳಲ್ಲಿ ವೈವಿಧ್ಯವಿದೆ. ವರ್ಣವೃತ್ತದ ಸಮವೃತ್ತಗಳಲ್ಲಿ ೨೦ನೆಯ ಕೃತಿಯಲ್ಲಿ ಬರುವ ಉತ್ಪಲಮಾಲೆ ಮತ್ತೇಭವಿಕ್ರೀಡಿತಗಳನ್ನೂ ೨೧ನೆಯ ಪ್ರಕೃತಿಯಲ್ಲಿ ಬರುವ ಚಂಪಕಮಾಲೆಯನ್ನೂ ೨೨ನೆಯ ಆಕೃತಿಯಲ್ಲಿ ಬರುವ ಮಹಾಸ್ರಗ್ಧರೆಯನ್ನೂ ಈ ಶಾಸನ ಕವಿ ಯಶಸ್ವಿಯಾಗಿ ಪ್ರಯೋಗಿಸಿ ತನ್ನ ಸೃಜನ ಸಾಮರ್ಥ್ಯವನ್ನೂ ಛಂದಸ್ಸಿನ ಜ್ಞಾನವನ್ನೂ ಪ್ರಭುತ್ವವನ್ನೂ ಪ್ರಕಟಿಸಿದ್ದಾನೆ. ವರ್ಣ (ಸಮ) ವೃತ್ತಗಳೆಲ್ಲ ಹಳಗನ್ನಡ ಚಂಪೂಕವಿಗಳು ಉಪಯೋಗಿಸಿರುವ ಹಳೆಯ ಸರಕೇ ಆದರೂ ಇದು ಶಾಸನರಚನೆಯೆಂಬುದನ್ನು ಮರೆಯಲಾಗದು; ಅಲ್ಲದೆ ಹಳಗನ್ನಡ ಸಾಹಿತ್ಯ ಕೃತಿಗಳಲ್ಲಿ ಸಿಗುವ ಮಹಾಸ್ರಗ್ಧರೆಗಳ ಸಂಖ್ಯೆ, ಪ್ರಸಾರ ಪರಿಮಿತ. ಇಲ್ಲಿನ ಕಂದ ಪದ್ಯಗಳ ಸಲಿಲತೆ ಸುಭಗತೆ ಮುದಗೊಳಿಸುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಇದೊಂದು ಪುಟ್ಟ ಚಂಪೂ ಖಂಡಕಾವ್ಯ. ಇಲ್ಲಿನ ಪದ್ಯಗಳ ಛಂದಸ್ಸು ಲಯ ಶಯ್ಯೆ ಕುರಿತು ಇನ್ನೂ ವಿವರವಾಗಿ, ತೌಲನಿಕವಾಗಿ ಚರ್ಚಿಸುವುದಕ್ಕೆ ಅವಕಾಶವಿದೆ. ಈ ಅಂಶವೂ ಪ್ರಸ್ತುತ ಶಾಸನ ಕವಿಯ ಮೇಲ್ಮಟ್ಟದ ಪ್ರತಿಭೆಗೆ ಸಾಕ್ಷಿಯಾಗಿದೆ; ಕನ್ನಡ–ಸಂಸ್ಕೃತ ಭಾಷೆ

ಗಳ ಹದವರಿತ ವಿಶ್ರಣವಿದೆ. ಈ ಶಾಸನದಲ್ಲಿ ಈಗ ಅಚ್ಚಾಗಿರುವ ರೀತಿಯಲ್ಲಿ, ಕೆಲವು ಸ್ಖಾಲಿತ್ಯಗಳು ಸೇರಿಕೊಂಡಿವೆ :

| ಸಾಲು | ಇರುವುದು | ಇರಬೇಕಾದದ್ದು |
|---|---|---|
| ೧೦ | ಒಳುಪನೊಳಕೊಣ್ಡೆದ್ರ್ದ | ಒ(ಳ್ಪ)ನೊಳಕೊಣ್ಡೆದ್ರ್ದ(ಂ) |
| ೧೧ | ಮೆಯಿ ಸಿರಿ | ಮೆಯ್ಯರ್ ಸಿರಿ |
| | ಎಂಬೊಳುಪುವೆತ್ತಂ | ಎಂಬೊ(ಳ್ಪು)ವೆತ್ತಂ |
| ೧೨ | ಚತುರುದಿತ | ಚತುರ್ವಿಧ |
| ೧೩ | ಬೆಳುಹುಗೆ | ಬೆ(ಳ್ಪು)ಗೆ |
| ೧೪ | ಕಲುಹೊಳೆ | ಕ(ಲ್ಪೊ)ಳೆ |
| ೧೬ | ಪೆಂಪಿನಗುಂಪುವೆತ್ತ | ಪೆಂಪಿನಗುಂ(ತಿ)ವೆತ್ತ |
| ೨೯ | ಪ್ರಭುಮಲ್ಲ | ಪ್ರಭು ಮಲ್ಲ(ಂ) |
| ೩೨ | ಮಲ್ಲಿನಾಥನ | ಮಲ್ಲಿನಾಥನ(ಂ) |
| ೩೩ | ತಾಂಗಲು ತಱುಂಬಲು | ತಾಂಗ(ಲ್) ತಱುಂಬ(ಲ್) |

ಮೇಲಿನ ಸೂಚನೆಯಲ್ಲಿ ೧೩–೧೪ನೆಯ ಸಾಲುಗಳ ಸ್ಥಳವಾಚಿ ರೂಪಗಳಲ್ಲಿ ಈಗ ಇರುವಂತೆಯೇ ಶಬ್ದರೂಪವನ್ನು (⏑⏑⏑⏑) ಒಪ್ಪಿಕೊಂಡರೆ, ಛಂದಸ್ಸಿಗೆ ಭಂಗ ಬರುತ್ತದೆ : ನಾಲ್ಕು ಮಾತ್ರೆಯ ಗಣವಿನ್ಯಾಸದಲ್ಲಿ (–⏑⏑) ಆರಂಭದ ಗುರುವಿಗೆ ಎರಡು ಲಘುಗಳನ್ನು ಸ್ಥಳಾಂತರಿಸಿರುವುದು ಕವಿಯ ಪ್ರಜ್ಞಾಪೂರ್ವಕ ಪ್ರಯತ್ನವೋ ಶಾಸನಾಕ್ಷರಗಳನ್ನು ಬರೆದ/ಕೆತ್ತಿದ ವ್ಯಕ್ತಿಯ ಕೈವಾಡವೋ ತಿಳಿಯದು. ಅದರಿಂದ ರೂಪಶುದ್ಧಿ–ರೂಪಸಿದ್ಧಿಯನ್ನು ಗಮನದಲ್ಲಿ ಇರಿಸಿ ಛಂದಸ್ಸಿನ ನಿಯಮಕ್ಕೆ ಅನುಗುಣವಾಗಿ ಇರುವಂತೆ ಸಂಯೋಜಿಸುವ ಸ್ವಾತಂತ್ರ್ಯ ವಹಿಸಿದ್ದೇನೆ.

ಮೊದಲ ಓದಿಗೇ ಆಕರ್ಷಿಸುವ ಈ ಶಾಸನ ಮರುಓದಿಗೆ ಅನೇಕ ವೈಶಿಷ್ಟ್ಯಗಳನ್ನು ಬಿಟ್ಟುಕೊಡುತ್ತದೆ. ಱಟಿದ ಬಳಕೆ ಇಳಿಕೆವಡೆದಿದ್ದರಿಂದ ಈ ಶಾಸನಕವಿ ನೆಗರ್ದ್ದ, ಪೊಗಳ್ಗಂ ಎಂಬ ರೂಪಗಳನ್ನು ಬಳಸಿದ್ದಾನೆ. ನೆಗಱ್ ರೂಪದ ಭೂತಕೃದಂತವಾಗಿ ನೆಗರ್ದ ಎಂಬುದನ್ನು ಈ ಶಾಸನದ ಸಮಕಾಲೀನವಾದ ಇತರ ಶಾಸನಗಳಲ್ಲೂ ಬಳಸಲಾಗಿದೆ (ಎಕ. VII. ಶಿವಮೊಗ್ಗ ೬೪, ೧೧೧೨) ; ಅಲ್ಲದೆ ಇಲ್ಲಿ ಅದು ಶಿಥಿಲದ್ವಿತ್ವವಾಗಿದೆಯೆಂಬುದನ್ನೂ ಗಮನಿಸಬೇಕು. ಪೊಗಱ್ ರೂಪವನ್ನು ಪೊಗಳ್ಗಂ ಎಂದಿಲ್ಲಿ ಬಳಸಿರುವುದು ಕವಿಯ ಪ್ರಯೋಗವಾಗಿರದೆ ಶಾಸನ ಬರೆದವರ ಕೈವಾಡವೂ ಇದ್ದಿರಬಹುದು. 'ದಡಿಗಂಗಾರ್ ಪಡಿ ಪಾಟಿ ಪಾಸಟಿ ಸಮಂ ಪಟ್ಟಾನ್ತರಂ ಮಾನವರ್'— ಎಂಬಲ್ಲಿ ಸಮಾನಾರ್ಥಕ ಶಬ್ದರೂಪಗಳನ್ನು ಒಂದೆಡೆ ಪೋಂಛಾವಣೆ ಮಾಡಿದ ಚಮತ್ಕಾರವಿದೆ : ಕರ್ಣಾಟಕ ಶಬ್ದಸಾರದಲ್ಲಿ (ಸು. ೧೪೦೦) ಸರಿ ದೊರೆ ಪಡಿ ಗೆಡೆ ಪಾಟಿ ಪಾಸಟಿ... ಈ ೧೮ ಸಮಾನಕ್ಕೆ ಪೆಸರ್ (೫೯–೨೯) ಎಂದಿದೆ (ಕರ್ಣಾಟಕ ಕಾವ್ಯಮಂಜರಿ,

ಮೈಸೂರು (೧೮೯೭). ಶೀಲಪ್ರಭೆ ಎಂಬ ಪ್ರಯೋಗ ಆಹ್ಲಾದಕರವಾಗಿದೆ. ೫೭೭

ಶಾಸನದುದ್ದಕ್ಕೂ ಚಂಪೂಕಾವ್ಯಗಳ ಅಭ್ಯಾಸದಿಂದ ಹದಗೊಂಡ ಶೈಲಿಯು ಪ್ರಸನ್ನತೆ ಪ್ರಿಯವಾಗುತ್ತದೆ : ಕವಿ ಪ್ರೌಢಕಾವ್ಯಗಳ ಪದ್ಧತಿಗೆ ಒಲಿದವನು. ಪಂಪ ಪೊನ್ನ ರನ್ನರ ಕಾವ್ಯಾಸ್ವಾದದ ರುಚಿ ಈ ಪುಟ್ಟ ಕಾವ್ಯದರ್ಪಣದಲ್ಲಿ ಪ್ರತಿಫಲನವಾಗಿದೆ. ಪೊನ್ನನ 'ಶಾಂತಿಪುರಾಣ'ದ ಮಲ್ಲಪ–ಪುನ್ನಮಯ್ಯರ ಪಾತ್ರಚಿತ್ರಣ ಇಲ್ಲಿನ ಸೃಜನಕ್ರಿಯೆಗೆ ಮಾದರಿ; ಪಂಪನು ಕರ್ಣನನ್ನು ಕುರಿತು ಮಾಡಿರುವ ಸಾಹಸ–ತ್ಯಾಗಗುಣ ಸಮನ್ವಯ ಚಿತ್ರಣವೂ ಇಲ್ಲಿ ಅನುರಣಿತವಾಗಿದೆ. ಅದರೊಂದಿಗೆ ತನ್ನವರೆಗಿನ ಶಾಸನಗಳ ಶಿಷ್ಟಕಾವ್ಯ ಪದ್ಧತಿ, ವ್ಯಾಕರಣನಿಯಮ—ಇದರ ನಿಕಟ ಪರಿಚಯವೂ ಇಲ್ಲಿ ಬಿಂಬಿತವಾಗಿದೆ, ದೃಷ್ಟಾಂತಗಳು ;

೧. ಜಸಕೆ ತಾಯ್ಗುರುವಾದಂ : ಪುರುಷಾಕಾರದ ತಾಯ್ಗುರು—KI. IV. ೧೦ A.D. ೧೧೨೧.

೨. ಒಳ್ಪು (ಒಳ್ಳಿತ್ತು— : ಒಳ್ – + – ಪು) : ಶಾಸನ ಪ್ರಯೋಗ— ಎಕ VIII. ಸೊರಬ ೪೭೭. ಕ್ರಿ.ಶ. ೯೯೧ ; EI. XVIII. ೫. A.D. ೧೦೮೨. ಇದನ್ನು ವಿರಳಾಕ್ಷರಗೊಳಿಸಿ 'ಒಳುಪು' ಎಂದೂ ಇಲ್ಲಿದ್ದು, ಇದಕ್ಕೂ ಶಾಸನ ಪ್ರಯೋಗಗಳ ಬೆಂಬಲವಿದೆ : ಎಕ VI. ಕಡೂರು ೫೧, ಕ್ರಿ.ಶ. ೧೧೬೯ : ಎಕ VII. ಶಿಕಾರಿಪುರ ೧೨೫. ಕ್ರಿ.ಶ. ೧೦೯೯.

೩. ಶೌರ್ಯ-ಸಾಹಸಗಳನ್ನು ಕುರಿತು ಅಭಿನಂದನೆ, ಆನಂದ, ಪ್ರಶಂಸಾದಿಗಳ ಸೂಚನೆಗೆ ಬಳಸುವ ಅವ್ಯಯಶಬ್ದ 'ಬಾಪ್ಪು' : ಇಂಥ ಇನ್ನಿತರ ಸಂವಾದಿಶಬ್ದಗಳು ಭಾಪ್ಪು, ಭಲೇ. ಬಾಪ್ಪು ಎಂಬ ಅವ್ಯಯದ ದ್ವಿರುಕ್ತಿ ಬಾಪ್ಪುಬಾಪ್ಪು (ಎಕ. VIII. ಸಾಗರ ೧೦೯. ಕ್ರಿ.ಶ. ೧೦೭೯). ಬಾಪ್ಪು ಬಾಪ್ಪು ಎಂಬ ಅವ್ಯಯ ದ್ವಿರುಕ್ತಿಯನ್ನು ಕೆಲವು ಶಾಸನ ಕವಿಗಳು 'ಬಬಾಪ್ಪು' ಎಂಬಂತೆ ಪ್ರಯೋಗಿಸಿದ್ದಾರೆ : (SII. IX-i. ೨೨೬. ಕ್ರಿ.ಶ. ೧೧೩೨ : EI. XV. ೩೨೦. ೧೧೭೨). ಈ ಶಾಸನ ಕವಿಯೂ ಬಬಾಪ್ಪು ಎಂದು ಪ್ರಯೋಗಿಸಿದ್ದಾನೆ.

೪. ಈ ಶಾಸನದಲ್ಲಿರುವ 'ಕಲಿಯೋ ಸೂದ್ರಕನ್ ...' ಎಂಬ ಪದ್ಯವನ್ನು ಬೊಪ್ಪಣ ಪಂಡಿತನ ಗೊಮ್ಮಟ ಜಿನಸ್ತುತಿಯ ಪದ್ಯದೊಂದಿಗೆ ಹೋಲಿಸಬಹುದು.

೫. ಮಲ್ಲನನ್ನು ಪ್ರಭುಮಲ್ಲ, ಮಹಾಪ್ರಭು ಮಲ್ಲಿನಾಥ, ಮಲ್ಲಗಾವುಂಡ, ನಾಳ್ಪ್ರಭು ಮಲ್ಲಂ—ಎಂದು ಮುಂತಾಗಿ ಸಂಬೋಧಿಸಿದ್ದಾನೆ. ಆತನ ಶೀಲಸಂಪನ್ನತೆ (ಪರವಧುವೆಳಸಿದೊಡೊಲ್ಲಂ), ಯುದ್ಧಪರಾಕ್ರಮ (ಸಮರಮುಖಷಣ್ಮುಖ), ಜ್ಞಾನ (ಭಾರತೀ ಕರ್ಣಾವತಂಸ), ಸೌಭಾಗ್ಯೋನ್ನತಿ (ಅಗಣ್ಯಪುಣ್ಯೋಪಾರ್ಜಿತ), ಗುಣೋನ್ನತಿ (ಸತ್ಯ ಶೌಚಂ)—ಇವನ್ನು ಚಿತ್ರಭಿತ್ತಿಯಲ್ಲಿ ಅಚ್ಚೊತ್ತಿದ್ದಾನೆ. ಚೆನ್ನಾಗಿ ಅರಳಿದ ಮಾತುಗಳೆಂಬ ಹೆರಳುಕಟ್ಟನ್ನು ಪಡೆದ ಮಲ್ಲನನ್ನು—ಕಲಿತನದಲ್ಲಿ ಶೂದ್ರಕನೂ, ಈವ ಗುಣದಲ್ಲಿ ಕಲ್ಪವೃಕ್ಷವೂ, ಸುಖದುಃಖಗಳಲ್ಲಿ

ವಿಕಾರಹೊಂದದ ಚಿತ್ತವೃತ್ತಿಯನ್ನು ಹೊಂದಿರುವುದರಲ್ಲಿ ಸಾಗರವೂ, ಮಲಿನತೆಯಿಲ್ಲದ ಪರಿಶುದ್ಧ ಚಾರಿತ್ರ್ಯದಲ್ಲಿ ಸುರಗಂಗೆಯ ಅಕ್ಕರೆಯ ಮಗ ಭೀಷ್ಮನೂ ಆದವನೆಂದು, ನನ್ನಿಯ ನೋಂಪಿಯ ಸತ್ಯಸಂಧತೆಯಲ್ಲಿ ಸೂರ್ಯಪುತ್ರ ಕರ್ಣನನ್ನೂ ಮೀರಿಸುವವನೆಂದು. ಆನಂದವಾದ ವಿಶ್ವಭೂತಳವೆಲ್ಲ ಹೊಗಳುತ್ತಲಿದೆ—ಎಂಬುದಾಗಿ ಕವಿಯಾಗಿ ವರ್ಣಿಸಿ, ಶಿಲ್ಪಿಯಾಗಿ ಕಡೆದು ಮೂಡಿಸಿ, ತನ್ನ ಸೃಜನಶಕ್ತಿಯನ್ನು ಮೆರೆದಿದ್ದಾನೆ.

೬. ತೈಲಪ, ಇಱಿವಬೆಡಂಗ ಸತ್ಯಾಶ್ರಯ ಚಕ್ರವರ್ತಿಗಳಿಗೇ ಅಲ್ಲದೆ ತ್ರೈಲೋಕ್ಯಮಲ್ಲ ಸೋಮೇಶ್ವರನಿಗೂ 'ಆಹವಮಲ್ಲ' ಪ್ರಶಸ್ತಿಯಿತ್ತೆಂಬುದಕ್ಕೆ ತಕ್ಕ ಪುರಾವೆ ಈ ಶಾಸನದಲ್ಲಿದೆ.

೭. ದಾನಚಿಂತಾಮಣಿ ಅತ್ತಿಮಬ್ಬೆಗೆ ಪ್ರಸಿದ್ಧ (ಜೈನ) ಮಹಿಳೆಯರನ್ನು ಹೋಲಿಸುವ ಪರಿಪಾಟಿಯೊಂದು ಕಾವ್ಯ–ಶಾಸನಗಳಲ್ಲಿದೆ : ಈ ಶಾಸನದಲ್ಲೂ ಅದು ಮುಂದುವರಿದಿದೆ.

೮. ಅತ್ತಿಮಬ್ಬೆಯಂತೆಯೇ ಗಂಗರ ಇಮ್ಮಡಿ ಬೂತುಗನ ಮಡದಿ ರೇವಕಳಿಗೂ (ರೇವಕೆ, ರೇವಕಿ, ರೇವಕಬ್ಬರಸಿ) ಶ್ರೇಷ್ಠಮಹಿಳೆಯರನ್ನು ಹೋಲಿಸುತ್ತಿದ್ದರೆಂಬುದಕ್ಕೂ ಈ ಶಾಸನದಲ್ಲಿ ಪ್ರಯೋಗವಿದೆ.

—ಹೀಗೆ ನಾನಾಕಾರಣಗಳಿಂದ ನೇರಿಲಗೆಯ ಶಾಸನ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ವಿಶಿಷ್ಟವೆನಿಸಿದೆ.

ಕರ್ನಾಟಕದಲ್ಲಿ ದೇವಾಲಯುಗಳಿಗೇನೂ ಕೊರತೆ ಇಲ್ಲ. ಅದರಲ್ಲೂ ಸುಮಾರು ಹತ್ತರಿಂದ ಹನ್ನೆರಡು ಹದಿಮೂರನೇ ಶತಕಗಳಲ್ಲಿ ದೇವಸ್ಥಾನದ ಶಿಲ್ಪಿಗಳಿಗೊಂದು ಸುಗ್ಗಿಯು ಕಾಲ ಎಂದೇ ಹೇಳಬಹುದು. ಹಾಗೆ ಕೂಲಂಕಷವಾಗಿ ನೋಡಿದರೆ ನಿಜವಾಗಿಯೂ ವಾಸ್ತುಶಿಲ್ಪ ಎಂದರೆ ಕಲ್ಲಿನಲ್ಲಿ ಗುಡಿಕಟ್ಟುವ ಕೆಲಸ ಪ್ರಾರಂಭವಾದದ್ದು ಕರ್ನಾಟಕದಲ್ಲಿಯೇ ಎಂದರೆ ತಪ್ಪೇನಿಲ್ಲ. ಐಹೊಳೆಯ ಮೇಗುಟಿ ದೇವಾಲಯ ಮಾನವನಿರ್ಮಿತ ದೇವಮಂದಿರ ಎಂದು ಕಂಡುಬರುತ್ತದೆ. ಅಲ್ಲಿರುವ ರವಿಕೀರ್ತಿಯ ಶಾಸನದಿಂದ (ಈ ಶಾಸನದ ಕಾಲ ಸು. ೬ ನೆಯ ಶತಮಾನ). ಆದ್ದರಿಂದ ಇದುವೆ ವಾಸ್ತುಶಿಲ್ಪದ ಉಗಮಕಾಲ.

ಇಲ್ಲಿಂದ ಮೊದಲ್ಗೊಂಡ ವಾಸ್ತು ಕಾಲ ಗತಿಸಿದಂತೆ ಬೆಳೆಯುತ್ತಲೇ ಹೋಯಿತು. ಸುಮಾರು ಕಲ್ಯಾಣಚಾಲುಕ್ಯರ (೯೮೫–೧೧೮೯) ಹಾಗೂ ದೇವಗಿರಿಯ ಸೇವುಣರ ಕಾಲಕ್ಕೆ ವಾಸ್ತುರಚನೆಗೆ ಹಬ್ಬದ ಕಾಲ, ಶಿಖರಕ್ಕೇರಿದ ಕಾಲ. ಈ ಕಾಲದಲ್ಲಿ ಕಟ್ಟಿದ ಶ್ರೀ ಮುಕ್ತೇಶ್ವರ ದೇವಾಲಯ ಈಗಿನ ರಾಣಿಬೆನ್ನೂರ ತಾಲೂಕ, ಧಾರವಾಡ ಜಿಲ್ಲೆಯಲ್ಲಿದೆ. ಈ ದೇವಸ್ಥಾನದ ಇತಿಹಾಸ ಸು. ೧೧೦೦ರಿಂದ ಪ್ರಾರಂಭವಾಗುತ್ತದೆ.

ಬನವಾಸಿ ದೇಶವೆಂಬುದು ಚಾಲುಕ್ಯ ಹಾಗೂ ಸೇವುಣರ ಕಾಲಕ್ಕೆ ತುಂಬ ಪ್ರಸಿದ್ಧಿ ಪಡೆದಿತ್ತು. ಅದರ ರಾಜಧಾನಿ ಬಳ್ಳಿಗಾವೆ. ಬನವಾಸಿದೇಶ ಚಾಲುಕ್ಯರಿಗೆ ಹಾಗೂ ಸೇವುಣರಿಗೆ ಅತ್ಯಂತ ಪ್ರೀತಿಯ ವಿಷಯವಾಗಿತ್ತು. ಆದ್ದರಿಂದ ಅದಕ್ಕೆ ಬಹಳ ಮಹತ್ವ ಕೊಟ್ಟಿದ್ದರು. ಈ ಕಾರಣದಿಂದಾಗಿ ಬನವಾಸಿ ದೇಶದಲ್ಲಿಯ ಪ್ರತಿ ಹಳ್ಳಿ, ಊರು, ದೇಶಗಳಲ್ಲಿ ಎರಡು, ಮೂರು ದೇವಾಲಯುಗಳು ಕಟ್ಟಲ್ಪಟ್ಟಿರುತ್ತಿದ್ದವು. ಅದರಲ್ಲಿಯೂ ತುಂಗಭದ್ರಾ ತೀರದಲ್ಲಿ ಹೇರಳವಾಗಿ ಕಟ್ಟಲ್ಪಟ್ಟಿದ್ದು, ಅಂತಹ ದೇವಸ್ಥಾನಗಳಲ್ಲಿ ಚೌಡದಾನಪುರದ ಮುಕ್ತೇಶ್ವರ ಒಂದು.

ಮುಕ್ತೇಶ್ವರ ದೇವಸ್ಥಾನಕ್ಕೆ ಹೋಗಬೇಕಾದರೆ ಮೊದಲು ಹಾವೇರಿ ಇಲ್ಲವೆ

## ಐತಿಹಾಸಿಕ ಹಿನ್ನೆಲೆಯ ಮುನ್ನೋಟ

ಚೌಡಯ್ಯನೆಂಬ ಅಂಬಿಗನೊಬ್ಬನಿಗೆ ಶಿವದೇವನೆಂಬೊಬ್ಬ ಶೈವಮುನಿ ಈ ಊರನ್ನು ದಾನವಾಗಿ ಕೊಟ್ಟಿದ್ದರಿಂದ, ಚೌಡದಾನಪುರವಾಯಿತು ಎಂದು 'ಶಿವದೇವವಿಜಯ' ಎಂಬ ಕಾವ್ಯದಲ್ಲಿ ಬರುತ್ತದೆ. ಇದೇ ಕಥೆಯನ್ನೇ ಊರಲ್ಲಿಯ ಜನರೂ ಹೇಳುತ್ತಾರೆ. 'ಶಿವದೇವ ವಿಜಯ'ದ ಕರ್ತೃ ಶರೀಫ ಕವಿ. ಆದರೆ ಈತನ ದೇಶ, ಕಾಲಗಳ ಬಗೆಗೆ ನಮಗೊಂದೂ ಲಭ್ಯವಿಲ್ಲ. ಅಲ್ಲದೇ ಕಾವ್ಯ ಸಹ ಅಸಮಗ್ರವಾಗಿದ್ದು, ಎರಡೇ ಹಸ್ತಪ್ರತಿಗಳ ಆಧಾರದ ಮೇಲಿಂದ ಪ್ರಕಟಗೊಂಡಿದೆ.* ಆದ್ದರಿಂದ ಇದರಲ್ಲಿ ಬರುವ ವಿಷಯಗಳು ಎಷ್ಟರಮಟ್ಟಿಗೆ ನಂಬಲರ್ಹವಾದುವೋ ನಾನರಿಯೆ. ಆದರೂ ಇದರಲ್ಲಿ ಸ್ವಲ್ಪಮಟ್ಟಿಗೆ ಸತ್ಯಾಂಶ ಇರಲಿಕ್ಕೆ ಸಾಕು. ಯಾಕೆಂದರೆ ಈಗಲೂ ದೇವಸ್ಥಾನದ ಉತ್ಸವಗಳಲ್ಲಿ ಅಂಬಿಗರು ಮಹತ್ಪಾತ್ರ ವಹಿಸುತ್ತಾರಂತೆ. ಕಾರಣವಿಷ್ಟೇ, ಚೌಡಯ್ಯ ಅಂಬಿಗರವನು. ಅವನ ಕಾಲದಿಂದಲೂ ಅಂಬಿಗರು ಇಲ್ಲಿ ಬಹಳ ಮುಖ್ಯರು. ಅವರು ಈ ಚೌಡಯ್ಯ ಬಸವಣ್ಣನವರ ಸಮಕಾಲೀನ ಮುಂತಾಗಿ ಹೇಳುತ್ತಾರೆ. ಇದರಲ್ಲಿಯ ತಥ್ಯಾಂಶ ಮುಂದೆ ಚರ್ಚಿಸುತ್ತೇವೆ.

## ಶಾಸನಗಳ ಸಮೀಕ್ಷೆ

ಶಾಸನಗಳನ್ನು ನೋಡಿದರೆ ನಮಗೆ ಕಂಡುಬರುವ ಚಿತ್ರವೇ ಬೇರೆ. ಚೌಡದಾನಪುರದ ಶ್ರೀ ಮುಕ್ತೇಶ್ವರ ದೇವಸ್ಥಾನದಲ್ಲಿ ಒಟ್ಟು ಎಂಟು ಶಿಲಾಶಾಸನಗಳಿವೆ. ಅವೆಲ್ಲ ಅನೇಕ ಸಲ ಪ್ರಕಟಗೊಂಡಿವೆ. ಮೊದಲ ಬಾರಿಗೆ ಸರ್ ವಾಲ್ಟರ್ ಎಲಿಯಟ್ ಅವರು ೧೮೩೩ರ ಸುಮಾರಿಗೆ ಇಲ್ಲಿದ್ದ ಏಳು ಶಾಸನಗಳ ಪ್ರತಿ ಮಾಡಿಸಿಕೊಂಡರು. ಅನಂತರ ೧೮೬೭ರ ವೇಳೆಗೆ ಬಿಗು ಎಂಬವರು ಈ ಶಾಸನಗಳಿಗೆ ಬಿಳಿಯ ಭಸ್ಮ ಸವರಿ ಅಕ್ಷರಗಳು ನಿಚ್ಚಳವಾಗಿ ಕಾಣುವಂತೆ ಮಾಡಿ ಫೋಟೋ ತೆಗೆದುಕೊಂಡು ಪ್ರಕಟಿಸಿದರು. ತದನಂತರ ೧೯೪೯ರಲ್ಲಿ ಪ್ರಕಟಗೊಂಡ 'ಶಿವದೇವ ವಿಜಯ'ದಲ್ಲಿ ಈ ಏಳು ಶಾಸನಗಳ ಉಲ್ಲೇಖ ಬರುತ್ತದೆ. ಆಮೇಲೆ ೧೯೭೧ರಲ್ಲಿ ಬೆಳಕಿಗೆ ಬಂದ ಪುಸ್ತಕದಲ್ಲಿ ("Chaudadanapura—a monograph", Vishvabharati Vidya Peetha, Bangalore 27) ಎಂಟೂ ಶಾಸನಗಳ ಪಠ್ಯವಿದೆ. ಮೈಸೂರಲ್ಲಿರುವ ಕೇಂದ್ರ ಸರಕಾರದ ಪ್ರಾಚ್ಯವಿಭಾಗದ ಶಾಸನ ವಿಭಾಗದವರು ೧೯೭೫ರಲ್ಲಿ ಹೊರಪಡಿಸಿದ South Indian Inscriptions Vol XVIII ಎಂಬ ಬೃಹದ್ಗ್ರಂಥದಲ್ಲಿ ಈ ಎಲ್ಲ ಶಾಸನಗಳೂ ಇವೆ. ಇವುಗಳ ಕ್ರಮಾಂಕ ೧೧೨, ೨೪೪–೨೪೭, ೨೬೫, ೨೬೮ ಹಾಗೂ ೨೯೯. ಏಳೂ ಶಾಸನಗಳು, ಇದಕ್ಕೆಂದೇ ತಯಾರಿಸಿದ ಕಲ್ಲಿನ ಹಲಗೆಗಳ ಮೇಲೆ ಬರೆದಿದ್ದರೆ, ಎಂಟನೆಯದು ೧೨೮೮ರಲ್ಲಿ ನಿಲ್ಲಿಸಿದ ಕೀರ್ತಿಸ್ತಂಭದ ಪೂರ್ವಮುಖದ ಕೆಳಭಾಗದಲ್ಲಿ ಬರೆಯಲ್ಪಟ್ಟಿದೆ. ಹೀಗಾಗಿ ಶಿಲಾಲೇಖ ವಿಭಾಗದ ಅಧಿಕಾರಿಗಳು ಬರುವದಕ್ಕಿಂತ ಮೊದಲು ಬಂದವರ ಕಣ್ಣಿಗೆ

---

* ಶರೀಫಕವಿ ವಿರಚಿತ 'ಶಿವದೇವ ವಿಜಯಂ': ಸಂ. ಮತ್ತು ಲೇ. ಆಸ್ಥಾನವಿದ್ವಾನ್ ನಂಜುಂಡಾರಾಧ್ಯ, ಪ್ರಬೋಧ ಪುಸ್ತಕಮಾಲೆ, ಜಿ. ವಿ. ಭಕ್ತ, ಚಿಕ್ಕಪೇಟೆ, ಬೆಂಗಳೂರು ಸಿಟಿ, ೧೯೪೯.

ಈ ಶಾಸನದ ಇರವು ಗೋಚರಿಸಿರಲಿಲ್ಲ. ಆದ್ದರಿಂದ ಅವರು ಏಳೇ ಶಾಸನಗಳನ್ನು 
ನೋಡಿಕೊಂಡು ಹೋಗಿದ್ದಾರೆ.

ಸುಮಾರು ೧೮೮೦ರಲ್ಲಿ ಪ್ರಕಟಗೊಂಡಿದ್ದ ಬಾಂಬೆ ಗೆಝೆಟಿಯರ ಹಾಗೂ 'ಶಿವದೇವ ವಿಜಯ'ದ ಅನುಬಂಧ X, ಹಾಗೂ ಹೆನ್ರಿ ಕಸಿನ್ಸ್ ಅವರ Antiquarian Remarksಗಳಲ್ಲಿ ಶಕ ೮೨೧ ಸಿದ್ಧಾರ್ಥಿ ಸಂವತ್ಸರದ ಒಂದು ಶಾಸನವಿದೆ ಎಂದು ಬರೆದಿದೆ. ಆದರೆ ಈ ಕಾಲದ ಯಾವ ಶಾಸನವೂ ನಮಗೀಗ ಇಲ್ಲಿ ಸದ್ಯಕ್ಕೆ ಲಭ್ಯವಿಲ್ಲ. ಭಾವು ದಾಜಿ ಎಂಬವರು Bombay Branch of Royal Asiatic Society, Volume IX, ೧೮೬೭-೧೮೬೮, Page ೩೨೬ದಲ್ಲಿ ಚೌಡದಾನಪುರದ ಶಾಸನಗಳನ್ನು ಉಲ್ಲೇಖಿಸಿದ್ದಾರೆ. ಆದರೆ ಅಲ್ಲಿ ಸಹ ೮೨೧ರ ಶಾಸನವಿಲ್ಲ. ಈ ಶಕ ೮೨೧ರ ಶಾಸನಕ್ಕೆ ಎಲ್ಲಿ ಆಧಾರವಿದೆಯೋ ಗೊತ್ತಿಲ್ಲ.

## ಐತಿಹಾಸಿಕ ಹಿನ್ನೆಲೆ

ಶಾಸನಗಳನ್ನೇ ಆಧಾರವಾಗಿಟ್ಟುಕೊಂಡರೆ, ಚೌಡದಾನಪುರದ ಬಗೆಗೆ ಈ ಕೆಳಗೆ ತೋರಿಸಿದಂತೆ ಹೇಳಲಡ್ಡಿ ಇಲ್ಲ.

ಚೌಡದಾನಪುರದ ಮೂಲ ಹೆಸರು ಗೊಪೆ ಅಥವಾ ಗೋಪೆ ಎಂದಿತ್ತು. ಗೊಪೆ ಎಂದರೆ ಗುಹೆ. ತುಂಗಭದ್ರೆಗೆ ಇಳಿದುಹೋಗುವಂತೆ ಮಾಡಿದ ಕೆಲಕಟ್ಟೆಗಳ ಮೇಲೆ "ವೀರಣರಸರ ಗವಿಯೊಳಗೆ ಲಿಂಗ ೧೨೦" ಎಂದು ಮುಂತಾಗಿ ಬರೆದದ್ದು ಕಂಡು ಬರುತ್ತದೆ. ಗವಿ ಎಂಬುದು ಗೊಪೆಯ ಇನ್ನೊಂದು ರೂಪ. ಆದ್ದರಿಂದ ಗೊಪೆ ಎಂಬುದೇ ಸರಿ, ಗೋಪೆ ಅಲ್ಲ.

ಗೊಪೆಯಲ್ಲಿ ಎಂದರೆ ಈಗಿನ ಚೌಡದಾನಪುರದಲ್ಲಿ ದೊರೆಯುವ ಮೊದಲ ಶಾಸನ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಬನವಾಸಿ ದೇಶಪಾಲಕನಾದ ಗೋವಿಂದರಸನ ಕಾಲದ್ದು. ಈ ಗೋವಿಂದರಸ ಸು. ೧೧೦೦ರಿಂದ ೧೧೨೦ರ ವರೆಗೆ ಬನವಾಸಿಯ ರಾಜ್ಯಪಾಲಕನಾಗಿದ್ದ. ಗೊಪೆಯ ಶಾಸನದಲ್ಲಿ ಶಕಕಾಲ ಕೊಟ್ಟಿಲ್ಲ; ಆದರೆ ಅದರಲ್ಲಿ ಗೋವಿಂದರಸನ ಹೆಸರು ಬರುತ್ತದೆ.

ಈ ಆಧಾರದ ಮೇಲಿಂದ ಚೌಡದಾನಪುರದ ಮೊದಲ ಶಾಸನದ ಕಾಲ ೧೧೦೦ರಿಂದ ೧೧೨೦ ಎಂದು ಹೇಳಲಡ್ಡಿ ಇಲ್ಲ. ಈ ಕಾಲದಲ್ಲಿ ಜಟಾಚೋಳ ವಂಶಸ್ಥನೊಬ್ಬ ಮುಕ್ತಿ ತೀರ್ಥದ ತಡಿಯಲ್ಲಿ ಒಂದು ಶಿವಾಲಯ ನಿರ್ಮಿಸಿದ. ಈ ಜಟಾಚೋಳರು ಗುತ್ತರ "ಹೃದಯಾಳಂಬಿಗಳು" ಎಂದರೆ ಅದರ ತೀರ ಸಮೀಪವರ್ತಿಗಳು. ಗುತ್ತರು ಗುತ್ತಲವನ್ನೇ ರಾಜಧಾನಿಯಾಗಿಟ್ಟುಕೊಂಡು ಚಾಲುಕ್ಯರರಾಜ್ಯದ ಒಂದು ಭಾಗಕ್ಕೆ ರಾಜ್ಯಪಾಲಕರಾಗಿದ್ದರು. ಗುತ್ತಲ ಚೌಡದಾನಪುರದಿಂದ ಸುಮಾರು ೫-೬ ಕಿ.ಮೀ.ಗಳಲ್ಲಿದೆ. ಗುತ್ತಲವೂ ಸಹ ತುಂಗಭದ್ರೆಯ ದಕ್ಷಿಣತಡಿಯಲ್ಲಿಯೇ ಇದೆ.

... ಮುಕ್ತೇಶ್ವರ ದೇವಾಲಯದಲ್ಲಿಯ

ಎರಡನೆಯ ಶಾಸನದ ಕಾಲ ಶಕವರುಷ ೧೧೧೩ : ವಿರೋಧಿ ಸಂವತ್ಸರ ಮಾರ್ಗ್ಗಶಿರ ಮಾಸ ಸೂರ್ಯಗ್ರಹಣ ಎಂದರೆ ಅಮಾವಾಸ್ಯೆಯ ದಿನ ಎಂದರೆ ಕ್ರಿ.ಶ. ೧೧೯೧ ಡಿಸೆಂಬರ್ ೧೮. ಈ ಶಾಸನದಲ್ಲಿ ನಮಗೆ ಪ್ರಪ್ರಥಮವಾಗಿ ಮುಕ್ತೇಶ್ವರನ ಹೆಸರು ಸಿಗುತ್ತದೆ. ಈ ಶಾಸನದ ಕಾಲದಿಂದಲೇ ಇಲ್ಲಿಯ ದೇವರ ಹೆಸರು ಮುಕ್ತೇಶ್ವರ ಎಂದು ಬರತೊಡಗುತ್ತದೆ. ಆಗ ಅಲ್ಲಿ ದೇವರ ಅನುಷ್ಠಾನ ಮಾಡಿಕೊಂಡಿದ್ದ ಸಂತರ ಹೆಸರು ಮುಕ್ತಜೀಯರ. ಇವರೇ ಇಲ್ಲಿಯ ದೇವಸ್ಥಾನವನ್ನು ಕಲ್ಲಿನಲ್ಲಿ ನಿರ್ಮಿಸಿದರು. ಈ ಶಾಸನದಲ್ಲಿ ಗೊಪೆಯ ಓಣಿ ಎಂಬ ಹೆಸರು ಬರುತ್ತದೆಯೇ ವಿನಾ ಅದು ಚೌಡದಾನಪುರಕ್ಕೇ ಅನ್ವಯಿಸುತ್ತದೆ ಎಂದು ಹೇಳುವುದು ಕಷ್ಟ. ಹೊನ್ನವತ್ತಿಯ ಹೊಲದ ಚತುರಾಘಾಟ ಹೇಳುವಾಗ "ಗೊಪೆಯ ಓಣಿಯಿಂ ತೆಂಕಲು" ಎಂದು ಬರುತ್ತದೆ. ಹೊನ್ನವತ್ತಿ, ಎಂದರೆ ಈಗಿನ ಹೊನ್ನತ್ತಿಯಲ್ಲ, ಬಹುಶಃ ಒಂದು ಓಣಿಯ ಹೆಸರು "ಗೊಪೆಯ ಓಣಿ" ಎಂದಿರಬೇಕು. ಮುಂದೆ ಸುಮಾರು ಎಪ್ಪತ್ತು ವರುಷಗಳ ಕಾಲ ನಮಗೆ ಚೌಡದಾನಪುರ, ಗೊಪೆ, ಮುಕ್ತೇಶ್ವರದ ಬಗೆಗೆ ಏನೂ ಕೇಳಿಬರುವುದಿಲ್ಲ. ನಂತರ ಒಮ್ಮೆಲೇ ಶಕ ೧೧೮೫ ಎಂದರೆ ಕ್ರಿ.ಶ. ೧೨೬೨ರ ನಂತರ ಸುಮಾರು ಮೂವತ್ತು ನಾಲ್ವತ್ತು ವರುಷಗಳ ಕಾಲ ಮುಕ್ತೇಶ್ವರ ದೇವಸ್ಥಾನ, ಚೌಡದಾನಪುರದ ಕೀರ್ತಿ ಶಿಖರಕ್ಕೇರಿದ್ದು ಕಂಡುಬರುತ್ತದೆ. ಅದಕ್ಕೆ ಕಾರಣ ಅಲ್ಲಿದ್ದ ಶಿವಭಕ್ತ ಶಿವದೇವ ಒಡೆಯರು. ಅವರು ಕ್ರಿ.ಶ. ೧೨೨೫ರಂದು ಮುಕ್ತಿ ತೀರ್ಥ ಪ್ರವೇಶ ಮಾಡಿದರು. ಅಂದಿನಿಂದ ಆ ಊರಿಗೆ ಶಿವಪುರವೆಂಬ ಹೊಸ ಹೆಸರು ಪ್ರಾರಂಭವಾಯಿತು. ಶಿವಪುರ, ಗೊಪೆ, ಮುಕ್ತಿತೀರ್ಥ ಈ ಹೆಸರುಗಳು ಶಾಸನಗಳಲ್ಲಿ ಬರತೊಡಗುತ್ತವೆ.

ಈ ಮೇಲ್ಕಾಣಿಸಿದ ವಿಷಯದಿಂದ ನಮಗೆ ಸ್ಪಷ್ಟವಾಗುವದೇನೆಂದರೆ : ಸುಮಾರು ಕ್ರಿ.ಶ. ೧೨೨೫ರಷ್ಟರಲ್ಲಿ ಮುಕ್ತಿತೀರ್ಥದ ಪ್ರಾಮುಖ್ಯ ತುಂಬ ಬೆಳೆದುಬಂದಿರಬೇಕು. ಅಲ್ಲಿ ಮುಕ್ತಜೀಯರ ಕಾಲದಿಂದಿದ್ದ ಮುಕ್ತೇಶ್ವರ ದೇವಸ್ಥಾನಕ್ಕಾದ ಕೀರ್ತಿ ಎಲ್ಲೆಡೆಗೂ ಪಸರಿಸಿದ್ದಿರಬೇಕು. ಆದ್ದರಿಂದ ಆ ದೇವಸ್ಥಾನವೇ ಕೈಲಾಸ, ತುಂಗಭದ್ರಾನದಿಯೇ ಸುರನದಿ ಎಂದು ಹೇಳುತ್ತ ಶಿವಮುದ್ದುದೇವ ಶಿವದೇವರಿಗೆ ಮುಕ್ತಿತೀರ್ಥಕ್ಕೆ ಬಿಜಯಂಗೈಸಲು ಅಪ್ಪಣೆಯಿತ್ತರು. ಗುರುಗಳಾಜ್ಞೆಯ ಮೇರೆಗೆ ಶಿವದೇವ ಮುಕ್ತಿಕ್ಷೇತ್ರಕ್ಕೆ ಶಿವ ಭಕ್ತಿಯ ಮಹಿಮೆ ತೋರಲು ಬಂದರು. ಚೌಡದಾನಪುರದ ಮೂರನೆಯ ಶಾಸನದ ಸಾರವಿದು.

ಇದೇ ವಿಷಯ ಅಲ್ಲಿಯ ನಾಲ್ಕನೆಯ ಶಾಸನದಲ್ಲಿ ಸ್ವಲ್ಪ ಕಾವ್ಯಮಯವಾಗಿ ಬಂದಿದೆ. "ಶಿವಗಣಗಳು ಶಿವನನ್ನು ಹೊಗಳಲು ಭವ ಅವರಿಗೆ ವಿಷಯವೇನೆಂದು ಕೇಳಿ ಹೀಗೆ ಹೇಳುತ್ತಾನೆ : "ಅಕ್ಷಯನಿಧಾನ ಮುಕ್ತಿಯ ದೀಕ್ಷಾಸ್ಥಳ ತುಂಗಭದ್ರೆಯ ಪಶ್ಚಿಮ ಮುಖದಿ ನಘಕ್ಷಯಮಂ ಮಾಡಲು ತದ್ದಕ್ಷಿಣತಟದಲ್ಲಿ ಮೆರೆಗು ಮುಕ್ತಿಕ್ಷೇತ್ರಂ" ಅಲ್ಲಿದ್ದು ಮೂಜು ಲೋಕದರೆಲ್ಲರ ಪಾವನವ ಮಾಳ್ಪೆನೆನುತಗಜಾತಾವಲ್ಲಭನವತರಿಸಿದ ಭೂವಲ್ಲಭೆಗನುರಾಗಮುಕ್ಕಿನಂ ಮುಕ್ತೀಶನು ॥" ಆಗ ಶಿವಗಣಗಳು ಭೂಲೋಕಕ್ಕೆ ಬಂದರು. ಅವರಲ್ಲಿ

ಶಿವದೇವನೊಬ್ಬ. ಅವನು ಅಗ್ರಜ ಎಂದರೆ ಶ್ರೇಷ್ಠಕುಲದಲ್ಲಿ ಜನಿಸಿ ಸಂಗನ ಬಸವನಂತೆ ಲಿಂಗಜಂಗಮ ಸೇವೆ ಕೈಕೊಂಡುದಲ್ಲದೇ ಅವನು ಪಡೆದ ಸಿದ್ಧಿಗಳನ್ನೇ ಶಿವದೇವ ಕಡು ವೀರವ್ರತದಿಂದ ಪಡೆದ. ಆ ವೀರವ್ರತಗಳೆಂದರೆ ಕ್ಷೇತ್ರಸಂನ್ಯಾಸ—ಕ್ಷೇತ್ರದ ನಾಲ್ಕು ನಿಟ್ಟುಗಳನ್ನುಲ್ಲಂಘಿಸದೇ ಇರುವದು: ಭೂಮಿಗೊರಗದಿರುವದು; ಲಿಂಗವನಪ್ಪಿದ ತೋಳುಗಳಿಂದಂಗನೆಯನಪ್ಪದಿರುವದು, ದಿಟ್ಟವಾರಿಯಾಗಿರುವದು ಮುಂತಾದವು.

## ಶಿವದೇವ ವೊಡೆಯರು

ಶಿವದೇವ ವೊಡೆಯರೆಂಬ ಸಂತರೊಬ್ಬರು "ಶಕ ೧೧೪೮ನೆಯ ಪಾರ್ಥಿವ ಸಂವತ್ಸರದ ಭಾದ್ರಪದ ಶುದ್ಧ ೧೫ ಸೋಮವಾರ ಚಂದ್ರೋಪರಾಗ ಪುಣ್ಯತಿಥಿಯ ಮಧ್ಯಾಹ್ನದಲ್ಲಿ ಬಂದು ಮುಕ್ತಿಕ್ಷೇತ್ರಮಂ ಪೊಕ್ಕು"(*Chauda. Mono*., no.3,L.27) ಎಂದರೆ ಕ್ರಿ.ಶ. ೧೨೨೫, ಆಗಸ್ಟ್ ೧೯ರಂದು ಶಿವದೇವರು ಮುಕ್ತಿಕ್ಷೇತ್ರಕ್ಕೆ ಬಂದರು. ಅವರು ಎಲ್ಲಿಂದ ಬಂದರು ಎಂಬುದಕ್ಕೆ ಅದೇ ಶಾಸನದಲ್ಲಿ ನಮಗೆ ಉತ್ತರ ದೊರೆಯುತ್ತದೆ. ಶ್ರೀಗಿರಿನಿವಾಸ (ಶ್ರೀಶೈಲ)ದಲ್ಲಿ ಶಿವಮುದ್ದುದೇವ ಎಂಬ ಮುನಿಪತಿಯೊಬ್ಬರಿದ್ದರು. ಅಲ್ಲಿಗೆ ಮಲ್ಲಿಕಾರ್ಜುನನ ಆಜ್ಞೆಯಿಂದ ಬಂದ ಶಿವದೇವರನ್ನು ನೋಡಿ ತಮ್ಮೊಳಗೆ ಹೀಗೆಣಿಸಿದರು: "ಹವಣಿಸಬಾರದಗ್ರಜಕುಲೋದ್ಭವನಾಗಿ ವಿಧಾತೃವಿನಿಂದ ಸಂಭವಿಸಿದ ನಾಲ್ಕು ಸೃಷ್ಟಿಯೊಳು ಪುಟ್ಟಿದನೆಂಬಡೆ ಜಾಯತೇಸ್ತಿ ಎಂಬವು ಮೊದಲಾದ ಷಡ್ವಿಕೃತಿಯೊಳ್ಸಲೆ ಕೂಡಿದನಲ್ಲಿ ಭಾವಿಸಲ್ಪವನೊಲವಿನ್ದ ವೀರ ಶಿವದೇವ ಗಣೇಶ್ವರನಾಗಿ ತೋರಿದನ್" (ಅದೇ, ೨೧–೨೩).

ಹುಟ್ಟಿದವರೆಲ್ಲ ಜಾಯತೇ–ಅಸ್ತಿ ಮುಂತಾದ ಆರು ವಿಕೃತಿಗಳನ್ನು ಹೊಂದಬೇಕು. ಆದರೆ ಶಿವದೇವ ಮಾತ್ರ ಅವುಗಳಿಂದ ಕೂಡಿರಲಿಲ್ಲ. ಯಾಕೆಂದರೆ ಶಿವನ ಕಟಾಕ್ಷದಿಂದ ಅವನೊಬ್ಬ ಗಣೇಶ್ವರನಾಗಿದ್ದ. ಈ ಶಿವಮುದ್ದುದೇವ ಮುನಿ ಶಿವದೇವರಿಗೆ "ಸುರನದಿಯೆ ತುಂಗಭದ್ರಾ ವರನದಿ ಸುರಸಮಿತಿ ವಿಪ್ರಗಣನಿಕರವು ಆ ಸುರಗಿರಿ ಮಾಹೇಶಭವನವು ಧರೆಯೊಳ್ಕವಿಳಾಸವೆನಿಪ ಮುಕ್ತಿಕ್ಷೇತ್ರವು ॥ ಆ ಮುಕ್ತಿಕ್ಷೇತ್ರದೊಳಿರ್ದ್ದಿರ್ಪ ಮೈಮೆಯೆ ಮೆಱೆಯಬೇಕೆನುತ ಗುರು ನುಡಿಯಲ್" (ಅದೇ, ೨೩–೨೬) ಶಿವದೇವನಿಂದಾಗಿ ಶಿವಪುರಕ್ಕೆ ಅತ್ಯಂತ ಮಹತ್ವ ಬಂದಿತು. ಅದು ಎಷ್ಟರಮಟ್ಟಿಗೆ ಏರಿತ್ತೆಂದರೆ, ಗುತ್ತಲದ ರಾಜ್ಯಪಾಲಕರಾದ ಗುತ್ತರಸರು ಪ್ರತಿವರುಷ ಶಿವಪುರಕ್ಕೆ ಬಂದು ವೊಡೆಯರ ಆಶೀರ್ವಾದ ಪಡೆಯಬೇಕೆಂಬಷ್ಟು. ಏಕೆಂದರೆ ಶಿವದೇವರು ಕ್ಷೇತ್ರಸಂನ್ಯಾಸ ಸ್ವೀಕರಿಸಿದ್ದರಿಂದ ಅವರೆಲ್ಲಿಯೂ ಹೋಗುವಂತಿರಲಿಲ್ಲ. ಅವರ ದರುಶನಕ್ಕಾಗಿ ಎಲ್ಲರೂ ಅವರಲ್ಲಿಗೇ ಬರುತ್ತಿದ್ದರು. ಅವರ ಕೃಪಾಕಟಾಕ್ಷಕ್ಕೆ ಪಾತ್ರರಾಗುವುದಲ್ಲದೆ ಮುಕ್ತೀಶ್ವರನ ದರ್ಶನ ಪಡೆದು ಕೃತಾರ್ಥರಾಗುತ್ತಿದ್ದರು.

ಶಿವದೇವರು ಶಿವಪುರಕ್ಕೆ ಬಂದ ತಕ್ಷಣ ಮಾಡಿದ ಕೆಲ ಮಹತ್ಕೃತಿಗಳಲ್ಲಿ ಒಂದು ಅವರು ವಿರಚಿಸಿದ 'ಕೈಲಾಸ ಚರಿತ್ರೆ'. ಆದರೆ ಅದು ಈಗ ಲಭ್ಯವಿಲ್ಲ. ಅಲ್ಲದೆ "ರುದ್ರಪ್ರಿಯ

ಭವನವನೊಲಿದು ಮಾಡಿಸಿದ ಶಿವದೇವನು" (ಶಾಸನ-೪, ಸಾ.೩೪-೩೫) ಎಂದು ಸಹ ಶಿಲಾಲೇಖ ಸಾರುತ್ತದೆ. ಕಳಸದವರೆಗೂ ಹಾಳಾಗಿದ್ದ ಶಿವಾಲಯವನ್ನು ಮತ್ತೆ ಕಳಸದ ವರೆಗೆ ಕಲ್ಲಲ್ಲಿ ಕಟ್ಟಿಸಿದ ಎಂದು ಅದೇ ಶಾಸನದ ಮುಂದಿನ ಸಾಲುಗಳಲ್ಲಿ ಬರುತ್ತದೆ.

ಬಹುಶಃ ಮುಕ್ತಜೀಯರು ಅಥವಾ ಜಟಾಚೋಳಾನ್ವಯರು ಕಟ್ಟಿಸಿದ್ದ ಶಿವಾಲಯ ಜೀರ್ಣಸ್ಥಿತಿಗೆ ಬಂದಿದ್ದಿರಬೇಕು. ಅದನ್ನು ಮತ್ತೆ ಶಿಲಾಮಯವಾಗಿ ಮೂರು ಭುವನ ಗಳನ್ನು ನಿಲ್ಲಿಸಿದಂತೆ ಮೂರು ಭುವನಿಕೆಗಳಿಂದ ಮತ್ತೆ ರಚಿಸಿದ ಶಿವಾಲಯವನ್ನು. ಈ ವಿಷಯ ತುಂಬ ಮಹತ್ವದ್ದು. ಇಲ್ಲಿ ನಮಗೆ ಆತನ ಕೃತಿಯ ವಿಷಯ ಸಿಗುವುದಲ್ಲದೆ, ವಾಸ್ತುಶಿಲ್ಪದ ಬಗೆಗೂ ತಿಳಿಯುತ್ತದೆ.

ಗುತ್ತರಸರು ಶಿವದೇವರನ್ನು ರಾಜಗುರುಗಳಾಗಿ ಸ್ವೀಕರಿಸಿದ್ದು ಮತ್ತೊಂದು ಮಹತ್ವದ ವಿಷಯ. ಯಾಕೆಂದರೆ ಗುತ್ತರಿಗೂ ರಟ್ಟೆಹಳ್ಳಿಯ ಕಡಂಬರಿಗೂ ವೈವಾಹಿಕ ಸಂಬಂಧ ವಿದ್ದಿತು. ರಟ್ಟೆಹಳ್ಳಿಯ ಕದಂಬರೂ, ಗುತ್ತಲ ಗುತ್ತರಸರೂ ಚಾಲುಕ್ಯ ಅರಸೆಯ ವಿಕ್ರಮಾದಿತ್ಯನ ಕಾಲದಿಂದ ಮೇಲೇರುತ್ತ ಬಂದಿದ್ದು ಕಳಚುರಿ ಹಾಗೂ ಸೇವುಣರ ಕಾಲಕ್ಕೆ ಅತ್ಯಂತ ವೈಭವಕ್ಕೇರಿದ್ದರು. ಅವರವರಲ್ಲಿ ಮದುವೆಗಳಾಗುತ್ತಿದ್ದವು. ಈ ಕಾರಣದಿಂದಾಗಿ ಅವರಿಗೆ ಒಬ್ಬರೇ ರಾಜಗುರುಗಳಾಗಿರುತ್ತಿದ್ದರು.

ರಟ್ಟೆಹಳ್ಳಿಯಲ್ಲಿ ಒಂದು ಮಠವಿದ್ದಿತು. ಅದರ ಸ್ಥಾಪಕರು ಹಾಗೂ ಗುರುಗಳು ಕಾಳಾಮುಖ ಪಂಥಕ್ಕೆ ಸೇರಿದ್ದ ಕಿಟ್ಟಗಾವಿ ಸಂತತಿಯವರು. ಕಿಟ್ಟಗಾವಿಸಂತತಿಯ ಗುರು ಕಲ್ಯಾಣಶಕ್ತಿ ಎಂಬವರು ಗುತ್ತರಸರಿಗೆ ರಾಜಗುರುಗಳಾಗಿದ್ದು ಅವರ ಕುಲದೇವತೆ ಯಾಗಿದ್ದ ವಿಕ್ರಮಪುರ (ಎಂದರೆ ಈಗಿನ ಹರಳಹಳ್ಳಿಯ) ಸೋಮನಾಥೇಶ್ವರನ ದೇವ ಸ್ಥಾನವನ್ನು ಹೊಸದಾಗಿ ತ್ರಿಕೂಟಾಚಲವಾಗಿ ಮಾಡಿಸಿದರು. ಎಂದರೆ ಈ ಸೋಮ ನಾಥ ದೇವಾಲಯಕ್ಕೆ ಮೊದಲು ಒಂದೇ ಗರ್ಭಗೃಹವಿದ್ದಿತು. ಅದನ್ನು ಕಲ್ಯಾಣಶಕ್ತಿ ಮೂರು ಗರ್ಭಗೃಹವುಳ್ಳದ್ದನ್ನಾಗಿ ಮಾಡಿದರು. ಇದಕ್ಕೆ ಕಾರಣವಿಷ್ಟೇ. ಕಾಳಾಮುಖರಲ್ಲಿ ಕೆಲವರು ಕೇವಲ ಶೈವಿಗಳಾಗಿರುತ್ತಾರೆ. ಅವರು ಶಿವನ ಮೂರು ಅಂಶ ಎಂದರೆ ಬ್ರಹ್ಮ, ಮಹೇಶ್ವರ, ವಿಷ್ಣು ಹಾಗೂ ಶಕ್ತಿ ದುರ್ಗೆಯನ್ನು ಪೂಜಿಸುವವರು. ಹೀಗಾಗಿ ಅವರ ದೇವಾಲಯಗಳಿಗೆ ಮೂರು ಗರ್ಭಗೃಹಗಳಿರುತ್ತವೆ.

ಆದರೆ ಶಿವದೇವರು ಕಾಳಾಮುಖಪಂಥದವರಂತೆ ತ್ರಿಕೂಟಾಚಲದೇವಸ್ಥಾನ ನಿರ್ಮಿಸ ಲಿಲ್ಲ. ಅದೂ ಅಲ್ಲದೆ ಶಿವದೇವರು "ಪುರಾತನರ ಚರಿತ್ರಕೃತಿ ವಿಚಿತ್ರಮಾಗಿ ಲಿಂಗಾರ್ಚನಂ ಗೆಯ್ಯುತಮಿರೆಯಿರೆ" ಎಂದರೆ ಹಿಂದಿನವರಂತಿರಲಿಲ್ಲ, ಇವರ ಲಿಂಗಪೂಜಾವಿಧಾನವೆಂದಾ ಯಿತು. ಹಾಗಿದ್ದರೆ ಅದು ಹೇಗಿದ್ದಿರಬಹುದು ?

ಶಿವದೇವರೇ ಹೇಳುವಂತೆ ಅವರು ಬಸವನನ್ನು ಮುಖ್ಯವ್ಯಕ್ತಿಯನ್ನಾಗಿಟ್ಟುಕೊಂಡು ಅವನನ್ನೇ ಅನುಕರಿಸುತ್ತಿದ್ದರು. ಬಹುಶಃ ಬಸವಣ್ಣನವರು ಉಪದೇಶಿಸಿದ ಇಷ್ಟಲಿಂಗ ಪೂಜೆ ಹಾಗೂ ಜಂಗಮಸೇವೆಯನ್ನೇ ಶಿವದೇವರು ಮಾಡುತ್ತಿದ್ದರು. ಆದರೆ ಅವರು ಸಂಪೂರ್ಣವಾಗಿ ಬಸವಣ್ಣನವರ ತತ್ವಗಳಿಗಂಟಿಕೊಂಡಿರಲಿಲ್ಲವೆಂದು ಹೇಳಬಹುದು.

ಏಕೆಂದರೆ ತಾವು ಶಿವಾಲಯ ವಿರಚಿಸಿದ್ದಲ್ಲದೆ ಅವುಗಳ ನಿರ್ವಹಣೆಗಾಗಿ ದಾನ ಸ್ವೀಕ
ರಿಸಿದರು. ಇದೂ ಅಲ್ಲದೆ ಅವರ ಪಾದಸೇವೆಯನ್ನರಸಿಕೊಂಡು ಬಂದ ತೊರಗಲೆಯ
ಕಹ್ನಾದೇವಿಗೆ ತನ್ನ ಪತಿಯ ಹೆಸರಿನಲ್ಲಿ ದೇವಾಲಯವನ್ನೆತ್ತಿಸಲು ಸಹ ಅನುಮತಿ
ಕೊಟ್ಟರು. ಇದನ್ನೆಲ್ಲ ನೋಡುತ್ತಿರಲಾಗಿ, ಶಿವದೇವರು ಕಾಳಾಮುಖರ ಶೈವಪಂಥ
ಹಾಗೂ ಬಸವಣ್ಣನವರು ಪ್ರತಿಪಾದಿಸಿದ ವಿಚಾರಗಳ ಒಂದು ಮಧ್ಯಮಾರ್ಗ ಸ್ವೀಕರಿಸಿ
ದರು. ಅದನ್ನೇ ಅನುಸರಿಸುತ್ತಿದ್ದರು ಎಂದು ಹೇಳಲಡ್ಡಿ ಇಲ್ಲ. ಇಂತಹ ಶಿವದೇವರನ್ನು
ಗುತ್ತರಸರು 'ತಮ್ಮ ರಾಜಗುರುಗಳನ್ನಾಗಿ ಮಾಡಿಕೊಂಡರು. ರಾಜರೇ ಇವರಿಗೆ ನಮಿಸು
ತ್ತಿರುವಾಗ, ಜನ ಹೆಚ್ಚು ಹೆಚ್ಚಾಗಿ ಶಿವದೇವರ ಮಹಿಮೆಯನ್ನು ಹೊಗಳತೊಡಗಿದರು.
ಅವರ ಪ್ರಭಾವ ಅದೆಷ್ಟು ಬೆಳೆದು ಬಂದಿತೆಂದರೆ ಅವರ ಇಹಲೋಕಯಾತ್ರೆ ಮುಗಿಯುವ
ಸುಮಾರಿಗೆ ಮುಕ್ತೇಶ್ವರಲಿಂಗ ಬೇರೆ ಅಲ್ಲ ಶಿವದೇವರು ಬೇರೆ ಅಲ್ಲ ಎನ್ನುವಂತಾಗಿದ್ದಿತು.

ಈ ನಮ್ಮ ಮೇಲ್ಕಂಡ ಹೇಳಿಕೆಗೆ ಆಧಾರವಾಗಿ ಚೌಡದಾನಪುರದ ಎರಡು ಶಿಲಾ
ಶಾಸನಗಳನ್ನು ಹೆಸರಿಸಬಹುದು. ದೇವಸ್ಥಾನದ ಆವಾರದಲ್ಲೊಂದು ದೊಡ್ಡ ಸ್ತಂಭವಿದೆ.
ಅದನ್ನು ಈಗ ಜನ ಧ್ವಜಸ್ತಂಭ ಎಂದು ಕರೆಯುವುದು ವಾಡಿಕೆ. ಆದರೆ ಶಿವದೇವನ ಕಾಲಕ್ಕೆ
ಅದರ ವಿಷಯವೇ ಬೇರೆ. ಶಕಕಾಲ ೧೨೧೦, ಸರ್ವಧಾರಿ ಸಂವತ್ಸರದ ಶ್ರಾವಣ ಶು.
೫ ಸೋಮವಾರ ಎಂದರೆ ಕ್ರಿ.ಶ. ೧೨೮೮, ಜುಲೈ ೫ರಂದು ಸಾಳಿವೆಯ ಸಿಂಹದೇವನೆಂಬವ
ನೊಬ್ಬ ಕಂನಾಡದೇಶದ ಮುಕ್ತಿಕ್ಷೇತ್ರದ ಶ್ರೀ ಸಿದ್ಧಶಿವದೇವನಾಮ್ನಿ ಮುಕ್ತೇಸ್ವರದೇವ
ಸಂನಿಧೌ ಶ್ರೀಮಂಮಹಾಮಂಡಳೇಸ್ವರ, ಅರಿರಾಯವಿಭಾಡ...ಶ್ರೀಸಾಳಿವೆ ಸಿಂಘದೇವ
ಸೈನ್ಯಾಧಿಪತಿ...ಸಾಳಿವೆಯಾಖ್ಯ ಕೀರ್ತಿಸ್ತಂಭಪ್ರತಿಷ್ಠಾಧರ್ಮೋ ಯಾವತು (chau.
no. vii, L. 10—15).

ಈ ಶಾಸನ ತುಂಬ ಹಾಳಾಗಿದೆ ಎಂದು ಎಣಿಸಿ ಚೌಡದಾನಪುರ ಪುಸ್ತಕದಲ್ಲಿ ಅದನ್ನು
ಚೆನ್ನಾಗಿ ಕೊಟ್ಟಿಲ್ಲ. S.I.I. vol. XVIII, No. 265. ಇಲ್ಲಿ ಅನೇಕ ಸಾಲುಗಳನ್ನು
ಅರ್ಧಮರ್ಧ ಓದಿದ್ದಾರೆ. ಆದರೆ ವಾಸ್ತವಿಕವಾಗಿ, ಶಾಸನ ಹಾಳಾಗಿಲ್ಲ. ಸ್ತಂಭ ನಿಲ್ಲಿಸಿ
ಈಗ ಏಳು ಶತಕಗಳು ಕಳೆದಿವೆ. ಆಗಿನಿಂದ ಅದರ ಮೇಲೆ ಮಣ್ಣು, ಧೂಳು ಸೇರಿದ್ದ
ಕಾರಣ, ಶಾಸನದ ಪ್ರತಿ ಮಾಡಿಕೊಳ್ಳುವದು ಸ್ವಲ್ಪ ಕಠಿಣವಾಗಿದೆ. ಆದರೆ ಅದನ್ನು
ಚೆನ್ನಾಗಿ ತೊಳೆದು ಹೊಸ ಪ್ರತಿಮಾಡಿಕೊಂಡು ಓದಿದರೆ, ಇನ್ನೂ ಅನೇಕ ವಿಷಯಗಳು
ಬೆಳಕಿಗೆ ಬರುತ್ತವೆ. ಈಗ ಓದಿದಷ್ಟೇ ಭಾಗದಲ್ಲಿ ನಮಗೆರಡು ಮುಖ್ಯ ವಿಷಯಗಳು
ವಿದಿತವಾಗುತ್ತವೆ.

ಒಂದು : "ಕಂನ್ನಾಡದೇಶಸ್ಯ ಗುತ್ತೊಳಲದೇಸೇ ತಂ ಮಧ್ಯೇ ಗೋಪನಾಮಗ್ರಾಮೇ
ತುಂಗಭದ್ರಾಯಾಂ ತಟ...ಮಧ್ಯೇ ಮುಕ್ತಿಕ್ಷೇತ್ರೇ ಶ್ರೀ ಸಿದ್ಧಶಿವದೇವನಾಮ್ನಿ ಮುಕ್ತೇ
ಸ್ವರ ದೇವ..." ಈ ಲಿಂಗಕ್ಕೆ ಕಂನಾಡ ಮುಕ್ತೇಶ್ವರ ಎಂದು ಕರೆಯುವ ವಾಡಿಕೆ ಇದ್ದಿತು.
ಇದಕ್ಕೆ ಕಾರಣ ಇದೇ ಸಮಯಕ್ಕೆ ಓಢ್ರದೇಶದಲ್ಲಿ ಸಹ ಒಂದು ಮುಕ್ತೇಶ್ವರ
ದೇವಾಲಯ ನಿರ್ಮಿಸಲ್ಪಟ್ಟಿತ್ತು. ಅದು ತುಂಬ ಪ್ರಸಿದ್ಧಿಗೆ ಬಂದಿತ್ತು. ಒರಿಸ್ಸದ

ಭುವನೇಶ್ವರದ ಮುಕ್ತೇಶ್ವರದಿಂದ ಚೌಡದಾನಪುರದಲ್ಲಿಯ ಮುಕ್ತೇಶ್ವರಲಿಂಗ ಬೇರೆ ಎಂದು ಹೇಳಲು ಇಲ್ಲಿ ಕಂನಾಡ ದೇಶದ ಮುಕ್ತೇಶ್ವರ ಎಂದು ಹೇಳಲಾಗಿದೆ.

ಇದೇ ಶಾಸನದಲ್ಲಿ ಬರುವ ಮತ್ತೊಂದು ವಿಷಯವೆಂದರೆ "ಶ್ರೀ ಸಿದ್ಧಶಿವದೇವ ನಾವಿನ್ನ ಮುಕ್ತೇಶ್ವರ" ಎಂದು. ಶಿವದೇವರೀಗಾಗಲೇ ಮುಕ್ತೇಶ್ವರನಲ್ಲಿ ಲೀನವಾಗಿ ಹೋಗಿದ್ದರಿಂದ, ಆ ಲಿಂಗಕ್ಕೇ ಶಿವದೇವರೆಂದು ಜನ ನಂಬಲು ಪ್ರಾರಂಭಿಸಿದ್ದರು. ಇದೇ ವಿಷಯ ಚೌಡದಾನಪುರದ ಎಂಟನೆಯ ಹಾಗೂ ಕೊನೆಯ ಶಾಸನದಲ್ಲಿ ಸಹ ವಿದಿತವಾಗುತ್ತದೆ. ಕೊನೆಯ ಶಾಸನ ಈ ರೀತಿ ಪ್ರಾರಂಭವಾಗುತ್ತದೆ :

"ಶ್ರೀ ಓಂ ನಮಃ । ಸಿ (ಶಿ)ವಾಯ । ಸ್ರಿ(ಶ್ರೀ) ಸಿ(ಶಿ) ವ ದೇವ ಪ್ರಭುವೇ ಸ(ಶ) ರಣು।" ಎಂದರೆ ಶಿವನೇ ಶಿವದೇವ. ಶಿವದೇವನೇ ಶಿವ ಎನ್ನುವಂತಾಗಿದ್ದಿತು. ಕೊನೆಯ ಶಾಸನದ ಕಾಲ "ಸೇವ್ಣ ರಾಮಚಂದ್ರದೇವ ವಿಜಯರಾಜ್ಯೋದಯದ ೨೧ನೆಯ ಖರ ಸಂವತ್ಸರದ ಪುಸ್ಯ(ಷ್ಯ) ಬಹುಳ ಅಮವಾಸೆ ಆದಿವಾರ, ಅರ್ಕೋದಯದ ಸೂರ್ಯಗ್ರಹಣ" ಎಂದರೆ ಕ್ರಿ.ಶ. ೧೨೯೨, ಜನೇವರಿ ೨೧.

ಇದೇ ಮುಕ್ತಿಕ್ಷೇತ್ರದಲ್ಲಿ ಸಿಗುವ ಕೊನೆಯ ಶಾಸನ ಎಂದು ಹೇಳಬಹುದು. ಅದರ ನಂತರ ವಿಜಯನಗರದಿಂದಾಳಿದ ಕರ್ನಾಟಕದರಸರ ಕಾಲಕ್ಕೆ ಕೆಲ ಯಾತ್ರಿಗಳು ಬಂದು ಭೇಟಿಕೊಟ್ಟು ತಮ್ಮ ಕುರುಹೆಂದು ನದೀತೀರದ ಘಾಟದ ಪಾವಟಿಗೆಗಳ ಮೇಲೆ ತಮ್ಮ ಹೆಸರನ್ನು ಕೊರೆಸಿದ್ದಾರೆ.

ಈ ಶಾಸನಗಳನ್ನು ಅಭ್ಯಸಿಸುತ್ತಿರಲಾಗಿ ಎಲ್ಲಿಯೂ ಚೌಡದಾನಪುರ ಎಂಬ ಹೆಸರು ನಮಗೆ ನೋಡಲು ಸಿಗುವದಿಲ್ಲ. ಇಲ್ಲಿ ಬರುವ ಹೆಸರುಗಳು ಗೊಪೆ, ಶಿವಪುರ ಹಾಗೂ ಮುಕ್ತಿಕ್ಷೇತ್ರ ಎಂದು ಮಾತ್ರ.

ಈ ಶಾಸನಗಳಲ್ಲಿ ಬರುವ ಮತ್ತೊಂದು ಮುಖ್ಯ ವಿಷಯವೆಂದರೆ, ಸಂಗನ ಬಸವ ಹಾಗೂ ಸಿದ್ಧ ರೇವಣದೇವರ ಹೆಸರುಗಳು. ಸಂಗನ ಬಸವನಂತೆ ಶಿವದೇವರು ಲಿಂಗ ಜಂಗಮಸೇವೆ ಮಾಡಲಿಚ್ಛಿಸಿದ್ದಾರೆಂಬುದನ್ನು ಈ ಹಿಂದೆಯೇ ಹೇಳಲಾಗಿದೆ. ಇಲ್ಲಿದ್ದ ಐದನೆಯ ಶಾಸನದಲ್ಲಿ ಸಿದ್ಧರೇವಣರ ಹೆಸರು ಬರುತ್ತದೆ. ಅವರು ತೊರಗಲೆಯ ಕಹ್ನಾದೇವಿಗೆ ಶಿವಪುರಕ್ಕೆ ಹೋಗಿ ಶಿವದೇವರ ಸಾನ್ನಿಧ್ಯದಲ್ಲಿ ಮುಕ್ತೇಶ್ವರನನುಷ್ಠಾನ ಮಾಡಿಕೊಂಡಿರಲು ಉಪದೇಶಿಸಿದರು. ಅವರ ಉಪದೇಶದ ಮೇರೆಗೆ ಆವಳು ಮುಕ್ತಿಕ್ಷೇತ್ರಕ್ಕೆ ಬಂದು ಅಲ್ಲಿ ತನ್ನ ಪತಿ ಕಲ್ಲರಸನ ಹೆಸರಿನಲ್ಲಿ ಕಲಿದೇವರು ಎಂದರೆ ಕಲ್ಲೇಶ್ವರ ದೇವಸ್ಥಾನ ನಿರ್ಮಿಸಿದಳು. ಶಾಸನದ ಕಾಲ ಶಕ ೧೧೮೪, ದುಂದುಭಿ ಸಂವತ್ಸರ, ಕಾರ್ತಿಕ ಪೌರ್ಣಮಿ ಸೋಮವಾರ ಎಂದರೆ ಕ್ರಿ.ಶ. ೧೨೬೨, ಅಕ್ಟೋಬರ ೨೮. ಈ ಸಮಯಕ್ಕೆ ರೇವಣಸಿದ್ಧರು ಇದ್ದರೆಂದು ಹೇಳಬಹುದೇ ?

ಚೌಡದಾನಪುರದ ಪ್ರತಿಯೊಂದು ಶಾಸನವೂ ಉತ್ತಮಮಟ್ಟದ ಕಾವ್ಯವಾಗಿವೆ. ಅಲ್ಲಿ ಒಟ್ಟಿನಲ್ಲಿ ಎಂಟು ಶಾಸನಗಳಿದ್ದರೆ, ಮೊದಲಿನ ನಾಲ್ಕು ತುಂಬ ಉದ್ದವಾಗಿದ್ದು, ಕಾವ್ಯ ಹೊನಲುಹೊನಲಾಗಿ ತುಂಗಭದ್ರೆಯ ಜಲದಂತೆಯೇ ಹರಿಯುತ್ತದೆ (ಈ ಶಾಸನ

ಗಳ ಒಳಗನ್ನು ನನಗೆ ಚೆನ್ನಾಗಿ ಮನನಮಾಡಿಕೊಟ್ಟ ಗುರುಗಳಾದ ಕೆ. ಕೃಷ್ಣಮೂರ್ತಿ ಅವರನ್ನು ನಾನಿಲ್ಲಿ ಸ್ಮರಿಸದಿರಲಾರೆ).

**ವಾಸ್ತುಶಿಲ್ಪ:** ವೀರಶೈವರೇ ಆಗಲಿ, ಲಾಕುಳಶೈವರೇ ಅಥವಾ ಶುದ್ಧಶೈವರೇ ಆಗಿರಲಿ, ಎಲ್ಲರಿಗೂ ಆಗಮಗಳು ಮುಖ್ಯ. ಈ ಆಗಮಗಳನ್ನನುಸರಿಸಿ, ದೇವಾಲಯ ನಿರ್ಮಾಣ, ದೇವತಾರ್ಚನೆ ಮುಂತಾದವು ನಡೆಯುತ್ತವೆ. ವೀರಶೈವರು ತಮಗೆ ಆಗಮಗಳಿವೆ ಎಂದು ಹೇಳಿದರೆ, ಇನ್ನು ಕೆಲವರು (ಎಂದರೆ ಈಗಿನ ಇತಿಹಾಸಕಾರರು) ಆ ಮಾತನ್ನು ಒಪ್ಪುವುದಿಲ್ಲ. ಲಾಕುಳಾಗಮಗಳು ಈಗ ನಮಗೆ ಸದ್ಯಕ್ಕೆ ಲಬ್ಧವಿಲ್ಲ. ಲಾಕುಳಾಗಮಗಳನ್ನು ಲಗುಡಧಾರಿ ಶಿವನೇ ಕೊಟ್ಟನೆಂದು ಅವರ ನಂಬಿಕೆ. ಆ ನಾಲ್ಕು ವೇದಗಳನ್ನೇ ದಂಡವನ್ನಾಗಿ ಹಿಡಿದುಕೊಂಡು ನಿಂತ ಶಿವನನ್ನು ಲಾಕುಳಶೈವಿಗಳು ಉಪಾಸಿಸುತ್ತಿದ್ದರು. ಲಗುಡಶೈವ ಪಂಥದವರು ಕಾಶ್ಮೀರದಲ್ಲಿದ್ದು, ಕ್ರಮೇಣ ಭಾರತದ ತುಂಬೆಲ್ಲ ಪಸರಿಸಿದರು ಎಂದು ಸಾಧಾರವಾಗಿ ಹೇಳಬಹುದು. ಇದೇ ಲಾಕುಳಶೈವಿಗಳು ದಕ್ಷಿಣ ಹಿಂದುಸ್ಥಾನಕ್ಕೆ ಬಂದಾಗ ಅದರಲ್ಲಿಯೂ ಕರ್ನಾಟಕದಲ್ಲಿ ಕಾಳಾಮುಖ, ಪಾಶುಪತ ಎಂಬ ಹೆಸರಿನ ಪಂಥಗಳು ಬಹಳೇ ಪ್ರಸಿದ್ಧಿ ಪಡೆದವು. ಈ ಕಾಳಾಮುಖ, ಪಾಶುಪತದವರಿಗೆ ಲಾಕುಳಾಗಮಗಳೇ ಪ್ರಮುಖ.

ಇದೇ ಕಾಲಕ್ಕೆ ತಮಿಳುನಾಡಿನಲ್ಲಿಯೂ ಕಾಳಾಮುಖ, ಪಾಶುಪತರಿದ್ದರು. ಆದರೆ ಅವರ ರೀತಿ ನೀತಿ ಆಚರಣೆ ಕರ್ನಾಟಕದ ಕಾಳಾಮುಖರಿಗಿಂತ ಭಿನ್ನವಾಗಿದ್ದವು. ಆದ್ದರಿಂದ ಕಾಳಾಮುಖ, ಪಾಶುಪತರ ಬಗೆಗೆ ಅಭ್ಯಸಿಸುವಾಗ, ಕರ್ನಾಟಕದವರನ್ನು ಬೇರೆಯಾಗಿಯೇ ಅಭ್ಯಸಿಸಬೇಕು.

ತಮಿಳುನಾಡಿನಲ್ಲಿ ಶೈವಸಿದ್ಧಾಂತದವರಿದ್ದು ಅವರ ಇಪ್ಪತ್ತೆಂಟು ಆಗಮಗಳೂ ನಮಗೆ ನೋಡಲು ಸಿಗುತ್ತವೆ. ಅವುಗಳಲ್ಲಿ ಕೆಲವು ಮಾತ್ರ ಪ್ರಕಟಗೊಂಡಿವೆ. ಇನ್ನೂ ಅನೇಕಾಗಮಗಳು ಹಸ್ತಪ್ರತಿ ಸ್ಥಿತಿಯಲ್ಲಿಯೇ ಉಳಿದುಕೊಂಡಿವೆ. ಸದ್ಯ ನಮಗೆ ನೋಡಲು, ಓದಲು ಸಿಗುತ್ತಿರುವ ಕೆಲವೇ ಆಗಮಗಳಲ್ಲಿ ವಾಸ್ತುಶಿಲ್ಪದ ಬಗೆಗೆ ಬರುತ್ತದೆ.

ಶೈವಸಿದ್ಧಾಂತದಲ್ಲಿ ಪ್ರತಿಪಾದಿಸಿರುವ ವಾಸ್ತುಶಿಲ್ಪಕ್ಕೂ ಕರ್ನಾಟಕದಲ್ಲಿ ಈಗಲೂ ಇನ್ನೂ ಅಳುತ್ತಲೋ ಉತ್ತಮ ಸ್ಥಿತಿಯಲ್ಲಿಯೋ ತಲೆ ಎತ್ತಿನಿಂತಿರುವ ಅನೇಕ ಲಾಕುಳಶೈವ ದೇವಾಲಯಗಳಿಗೂ ಅಷ್ಟೊಂದು ಭೇದವೇನೂ ಕಂಡುಬರುವುದಿಲ್ಲ. ಬಹುಶಃ ಶೈವಸಿದ್ಧಾಂತಿಗಳಿಗೂ ಲಾಕುಳಶೈವರಿಗೂ ಅವರ ಆಚಾರವಿಚಾರ, ನಡೆನುಡಿಗಳಲ್ಲಿ ಭೇದವಿದ್ದಿರಬೇಕು. ಆದರೆ ಈಗ ಅವೆರಡೂ ಇಲ್ಲದಿರುವುದರಿಂದ, ನಾವು ಈ ವಿಷಯವನ್ನು ಇಲ್ಲಿಗೇ ಬಿಟ್ಟು ಅವರ ವಾಸ್ತುರಚನೆ ನೋಡಬೇಕಾಗುವುದು.

ಕರ್ನಾಟಕದಲ್ಲಿ ಎಂಟನೆಯ ಶತಮಾನದಿಂದಲೇ ಕಾಳಾಮುಖ, ಪಾಶುಪತರ ಇರವನ್ನು ಶಾಸನಗಳ ಸಹಾಯದಿಂದ ಸಿದ್ಧಪಡಿಸಬಹುದು. ಸುಮಾರು ೧೦, ೧೧ನೆಯದೇ ಅಲ್ಲದೆ ೧೨ನೆಯ ಶತಮಾನದ ಮೊದಲ ಭಾಗ ಕಾಳಾಮುಖ ಪಾಶುಪತರ ಉಚ್ಛ್ರಾಯಕಾಲ. ಅದರಲ್ಲಿಯೂ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಇವರ ಕೀರ್ತಿ ಶಿಖರದ

ತುತ್ತತುದಿಗೇರಿದ್ದಿತು. ಆಗ ಊರಿಗೆ ಒಂದೋ ಎರಡೋ ದೇವಸ್ಥಾನ ಕಟ್ಟಿಸಿ, ಅವರ ಮಠಗಳನ್ನೂ ಇಟ್ಟು, ಅಲ್ಲಿ ಸಂಸ್ಕೃತ, ವೇದಾಧ್ಯಯನ, ವ್ಯಾಕರಣ ಮುಂತಾದವುಗಳ ಅಭ್ಯಾಸ ನಡೆಸುತ್ತಿದ್ದರು. ಅಲ್ಲದೆ ಇವರಲ್ಲಿ ಕೆಲವರು ಸಂನ್ಯಸನ, ನೈಷ್ಠಿಕ ಜೀವನಕ್ಕೆ ಮಹತ್ವಕೊಡುತ್ತಿದ್ದರು. ಆದರೆ ಕೆಲವರು ಮೇರೆ ಮೀರಿ ಹೋದದ್ದರಿಂದ ಮನಸೊಂದ ಬಸವಣ್ಣನವರು, ಕಾಯಕವೇ ಕೈಲಾಸವೆಂಬ ಕ್ರಾಂತಿ ಎಬ್ಬಿಸಿ, ಉಳ್ಳವರು ಶಿವಾಲಯವ ಮಾಡುವರು. ಆದರೆ ಬಡವರು ಇಷ್ಟಲಿಂಗಸೇವೆ ಮಾಡಿದರೆ ಸಾಕು. ಅವರಿಗೂ ಮುಕ್ತಿ ಲಭ್ಯವಿದೆ ಎಂದು ಜನರಿಗೆ ತಿಳಿಸಿಕೊಡಲು ಯತ್ನಿಸಿದರು. ಆದರೆ ಅವರೇನೂ ಲಾಕುಳ ಶೈವಿಗಳ ಆಗಮಕ್ಕೆ ವಿರುದ್ಧ ಹೋಗಲಿಲ್ಲ. ಲಾಕುಳ ಶೈವಿಗಳ ಆಚಾರ ವಿಚಾರ ಗಳನ್ನು ಸ್ವಲ್ಪ ಮಾರ್ಪಡಿಸಿದರು. ಇಷ್ಟಲಿಂಗಪೂಜೆ, ಕಾಯಕದ ಮಹತ್ವದ ಅರಿವನ್ನು ಮಾಡಿಕೊಟ್ಟರು. ಬಸವಣ್ಣನವರ ಕಾಲಕ್ಕೆ ಅವರ ವಚನಗಳಿಗೆ, ಅವರ ಮಾತುಗಳಿಗೆ ಎಷ್ಟು ಪ್ರಾಮುಖ್ಯ ದೊರೆಕಿದ್ದಿತೋ ಗೊತ್ತಿಲ್ಲ. ಆದರೆ ಅವರ ಮರಣಾನಂತರ ಅಲ್ಲಿ ಇಲ್ಲಿ ಅವರ ಅನುಯಾಯಿಗಳು ಅವರ ತತ್ತ್ವಗಳನ್ನು ಬೆಳಕಿಗೆ ತರಲು, ಪ್ರಚುರ ಪಡಿ ಸಲು ಪ್ರಯತ್ನಿಸುತ್ತಿದ್ದರು. ಅಂತಹವರಲ್ಲಿ ಚೌಡದಾನಪುರದ ಶಿವದೇವರೂ ಒಬ್ಬರು. ವಾಸ್ತವಿಕವಾಗಿ ನೋಡಿದರೆ ಬಸವಣ್ಣನವರೂ ಲಾಕುಳಾಗಮದ ಅನುಯಾಯಿಗಳೇ. ಹಾಗಿದ್ದ ಪಕ್ಷಕ್ಕೆ ಶಿವದೇವರಿಗೂ ಲಾಕುಳಾಗಮಗಳೇ ಮುಖ್ಯವಾಗಿದ್ದವು. ಆದರೆ ಆ ಆಗಮಗಳು ಎಷ್ಟಿದ್ದವು ಎಂದು ನಮಗೆ ತಿಳಿಯದು. ಯಾವ ಆಗಮವನ್ನು ಶಿವದೇವರು ಉಪಯೋಗಿಸಿರಬಹುದು, ಅದೂ ನಮಗೆ ಗೊತ್ತಿಲ್ಲ.[2]

ಶೈವಸಿದ್ಧಾಂತಗಳ ಆಗಮಗಳೇ ಆಗಿರಲಿ, ಲಾಕುಳಾಗಮವೇ ಇರಲಿ ಅಲ್ಲಿ ಬರುವ ಮುಖ್ಯ ವಿಷಯ ಜಗವೆಲ್ಲ ಗಾಢಾಂಧಕಾರದಲ್ಲಿ ಮುಳುಗಿದಾಗ, ಮುನಿ ವಿಬುಧ ಜನರ ಕ್ಷೇಮಕ್ಕಾಗಿ ಶಿವ ಸ್ವಸಂತೋಷದಿಂದ ಬಂದು ಜಗವನ್ನು ರಚಿಸಿದ ಎಂದು ವಚನಕಾರರು ಹೇಳುತ್ತಾರೆ. ಎಲ್ಲ ಆಗಮಗಳೂ ಸಾರುತ್ತವೆ. ಹಾಗೆ ಜಗತ್ತೆಲ್ಲ ಅಂಧಕಾರದಲ್ಲಿದ್ದಾಗ ಬೆಳಕೊಂದು ಉದಿಸಿ ಅದರಿಂದ ಶಿವ, ಸದಾಶಿವ ಹಾಗೂ ಮಹೇಶ್ವರ ಎಂಬ ತತ್ತ್ವಗಳು ಹುಟ್ಟಿಕೊಂಡವು.

ಈ ಶಿವತತ್ತ್ವ ಅತಿಸೂಕ್ಷ್ಮ, ಅದು ಜ್ಞಾನಿಗಳ ಜ್ಞಾನಚಕ್ಷುಗಳಿಗೆ ಮಾತ್ರ ಗೋಚರ ವಾಗಲು ಸಾಧ್ಯ. ಅದು ಅತಿಸೂಕ್ಷ್ಮವಾದುದರಿಂದ ರೂಪಕೊಡಲು ಅಸಾಧ್ಯ. ಅದು ಅಗೋಚರ, ನಿಷ್ಕಲ.

ಈ ಶಿವತತ್ತ್ವದಿಂದ ಉದಯಿಸಿದುದು ಸದಾಶಿದತತ್ತ್ವ. ಈ ಸದಾಶಿವತತ್ತ್ವ ಮೂರ್ತಸಾದಾಖ್ಯ ಹಾಗೂ ಸಕಲ. ಈ ಶಿವತತ್ತ್ವವು ಮಹದಾದಿ ಸಮಸ್ತತತ್ತ್ವಗಳಿಗೂ

---

2 ವೀರಶೈವರು ಕಾಳಾಮುಖ, ಪಾಶುಪತದ ಉತ್ತರಕಾಲೀನರು ಎಂದು ಕೆಲ ಇತಿಹಾಸಕಾರರ ಅಭಿಪ್ರಾಯ. ಅದು ಸರಿ ಇದ್ದರೆ, ಅವರ ಆಗಮಗಳೇ ಲಾಕುಳಾಗಮಗಳಿರಬಾರದೇಕೆ ? ಸದಾಶಿವನ ಪಂಚಸಾದಾಖ್ಯ ತತ್ತ್ವಗಳ ಉತ್ಪತ್ತಿಯಲ್ಲಿ ಶಕ್ತಿಗಳ ಉತ್ಪನ್ನದ ನಿರೂಪಣೆ ಬರುತ್ತದೆ. 'ಸೃಷ್ಟಿಸ್ಥಿತಿಲಯ ಗಳಿಗೆ ಕಾರಣವಾದ ಪತಿಯೆಂದು ಪ್ರಸಿದ್ಧವಾದ ಬ್ರಹ್ಮವೇ ನಾದ, ಬಿಂದುವು ಸಮಸ್ತಮಂತ್ರಜನ್ಮಸ್ಥಲ ವಾದ ಪೀಠ. ಈ ನಾದ ಬಿಂದುಗಳಿಂದ ಕೂಡಿದ ಸ್ವರೂಪವೇ ಲಿಂಗ" ವಾತುಲ. (೧–೭೦).

ಅಖಿಲಾಲಯ ಅಥವಾ ಏಕಾಶ್ರಯ ಎಂದು ಹೇಳುತ್ತದೆ, ವಾತುಲಶುದ್ಧಾಗಮ (ಪಟಲ ೧, ಶ್ಲೋಕ ೫೦). ಸಕಲ ನಿಷ್ಕಲಗಳ ಸಮಾಯೋಗವೇ ಭಾವ, ಸಮಸ್ತ ಭಕ್ತರ ಧ್ಯಾನ ಪೂಜೆಗಳಿಗಾಗಿ ಶಿವತತ್ತ್ವವು ಸಕಲ ನಿಷ್ಕಲಸ್ವರೂಪ ಹೊಂದುತ್ತದೆ (೧–೨೫).

ಚೌಡದಾನಪುರದ ಮುಕ್ತೇಶ್ವರ ದೇವಾಲಯದ ಪೌಳಿಯಲ್ಲಿ ಮುಖ್ಯವಾಗಿ ಮುಕ್ತೇಶ್ವರ ದೇವಸ್ಥಾನ, ವೀರಭದ್ರನ ದೇವಸ್ಥಾನಗಳಲ್ಲದೆ ಇನ್ನೂ ಅನೇಕ ಮಂದಿರ ಗಳಿವೆ. ಆದರೆ ಅಲ್ಲಿದ್ದ ಶಾಸನಗಳನ್ನೆಲ್ಲ ಕೆಲವರುಷಗಳ ಹಿಂದೆ ಸ್ಥಳಾಂತರಿಸಿದ್ದರಿಂದ ಯಾವ ಶಾಸನ ಯಾವ ದೇವಾಲಯಕ್ಕೆ ಸಂಬಂಧಿಸಿದುದು ಎಂದು ಸರಿಯಾಗಿ ತಿಳಿಯುವು ದಿಲ್ಲ. ಹಿಂದಿನ ಗೆಝೆಟಿಯರ್ ಹಾಗೂ ಸರ್ ವಾಲ್ಟರ್ ಇಲಿಯಟ್ಟರ 'ಕರ್ನಾಟಕ ಶಾಸನ ಗಳು', ಮೆಡೋಸ್ ಟೈಲರ್‌ನ Architecture of Dharwar and Mysore ಎಂಬ ಪುಸ್ತಕದಲ್ಲಿ ಪ್ರಕಟಗೊಂಡ ಚಿತ್ರಗಳಿಂದ ಮೇಲಿಂದ ಯಾವ ಶಾಸನ ಎಲ್ಲಿತ್ತು, ಯಾವ ದೇವಸ್ಥಾನಕ್ಕೆ ಸಂಬಂಧಿಸಿದ್ದಿರಬೇಕೆಂದು ಹೇಳಲು ಸ್ವಲ್ಪ ಸಾಧ್ಯವಾಗು ತ್ತದೆ.

ಈಗಿರುವ ಮುಕ್ತೇಶ್ವರ ದೇವಸ್ಥಾನ ಬಹುಶಃ ಜಟಾಚೋಳನ್ವಯನಾದ ಅತ್ತಿರಾಜ ಕಟ್ಟಿಸಿದ್ದಿರಲಿಕ್ಕಿಲ್ಲ. ಆ ದೇವಸ್ಥಾನ ಎಲ್ಲಿತ್ತೋ ಹೇಗಿತ್ತೋ ಈಗಿನ ಸ್ಥಿತಿಯಲ್ಲಿ ತಿಳಿದು ಕೊಳ್ಳುವುದು ಕಷ್ಟ. ಮೆಡೋಸ್ ಟೈಲರ್ ಅವರು ಪ್ರಕಟಿಸಿದ ಚಿತ್ರ ಹಾಗೂ ಪಿಗು ಎಂಬುವರು ಪ್ರಕಟಿಸಿದ ಶಾಸನದ ಚಿತ್ರಗಳ ಮೇಲಿಂದ ಹೇಳಬೇಕೆಂದರೆ, ಇಲ್ಲಿಯ ಎರಡನೆಯ (ಎಂದರೆ ೧೧೯೨ರ) ಶಾಸನ ಮುಕ್ತೇಶ್ವರ ದೇವಸ್ಥಾನಕ್ಕೆ ಅತಿ ಸಮೀಪ ದಲ್ಲಿದ್ದಿತು. ಈ ಶಾಸನದಲ್ಲಿಯೇ "ಮುಕ್ತೇಶ್ವರ ನಾಮಾರಂಭನೆಸೆವ್ರುತಿಪ್ರ್ವನೀಶನು ಮೇಶಂ" ಎಂದು ಬರುತ್ತದೆ (ಸಾಲು ೭೭). ಆದ್ದರಿಂದ ಇದೇ ಮುಕ್ತೇಶ್ವರ ದೇವಸ್ಥಾನ ಎಂದು ಹೇಳಲು ಸಾಧ್ಯವಿದೆ.

೧೧೯೨ರ ಸುಮಾರಿಗೆ ಅಲ್ಲಿ ಮುಕ್ತಜೀಯರಿದ್ದಾಗ, ಈ ಮುಕ್ತೇಶ್ವರ ದೇವಸ್ಥಾನ ವನ್ನು ಕಲ್ಲಿನಲ್ಲಿ ರೇವೋಜನೆಂಬುವನೊಬ್ಬ ಕೆಲಸ ಮಾಡಿದ ಎಂದು ಶಾಸನ ಹೇಳುತ್ತದೆ. "ಕಲುಹಂದರಾದಿಯಾಗಿ ಹೊರಥರ ಸಹಿತ ರೇಓಜನ ಕೆಲಸ" (೮೩ನೇ ಸಾಲು). ಮುಂದೆ ೧೨೨೫ರಲ್ಲಿ ಶಿವದೇವರು ಚೌಡದಾನಪುರಕ್ಕೆ ಬಂದಾಗ ಈ ದೇವಸ್ಥಾನ ಶಿಥಿಲ ವಾಗಿರಬೇಕು. ಅದನ್ನು ಅವರು ಮತ್ತೆ ಕಳಸದವರೆಗೂ ಶಿಲಾಮಯವಾಗಿ ಮಾಡಿಸಿದರು.

ಇಲ್ಲಿ ಒಂದು ಸಂದೇಹ ಉಂಟಾಗುತ್ತದೆ. ಶಿವನಿಗೆ ಭವನವನ್ನು ರಚಿಸಿದ ಎಂದು ಶಾಸನ ಸಾರುತ್ತದೆ. "ರುದ್ರಪ್ರಿಯಭವನವನೊಲಿದು ಮಾಡಿಸಿದ ; ಆಕಳಶಾಂತಂಬರಂ ಮಹಾಲೋಕವಜಿರ್ಯಿಂ ಜೀರ್ಣ್ಣವಾದ ಶಿವಭವನವನು ಮತ್ತಾಕಳಸಂಬರಂ ಶಿಲೆಯಿಂ ಲೋಕೋತ್ತಮವಾಗಿ ಮಾಡಿಸಿದ" (ಸಾಲು ೫೪–೫೬). ಜೀರ್ಣವಾದ ಶಿವಾಲಯ ವನ್ನೇ ತ್ರಯಿಭವನಿಕೆಗಳಿಂದ ಮಾಡಿಸಿದನೋ ಅಥವಾ ಅದು ಬೇರೆಯೇ ಇದ್ದಿತೋ ಇಲ್ಲಿ ಸ್ಪಷ್ಟವಾಗಿ ಹೇಳಿಲ್ಲ. ಜೀರ್ಣವಾಗಿ ಹೋಗಿದ್ದ ದೇವಾಲಯವನ್ನೇ ತ್ರಯಿಭವನಿಕೆ ಗಳಿಂದ ಮಾಡಿಸಿದ್ದಿರಬೇಕೆಂದು ಆ ದೇವಸ್ಥಾನದ ರಚನೆಯ ಮೇಲಿಂದ ಹೇಳಬಹುದು.

ಮುಕ್ತೇಶ್ವರ ದೇವಸ್ಥಾನ ಏಕಗರ್ಭಗೃಹವುಳ್ಳದಾಗಿದ್ದು, ನಂತರ ಶುಕನಾಸಿ, ರಂಗ ಮಂಟಪ ಹಾಗೂ ಹೊರಮಂಟಪ ಇವೆ. ದೇವಸ್ಥಾನ ಪೂರ್ವಾಭಿಮುಖವಾಗಿದ್ದು, ಪೂರ್ವಕ್ಕೆ ಹಾಗೂ ದಕ್ಷಿಣಕ್ಕೆ ಪ್ರವೇಶದ್ವಾರಗಳಿವೆ. ಬಹುಶಃ ಉತ್ತರಕ್ಕೂ ಇದ್ದಿತೋ ಏನೋ, ಮೊದಲಿನ ವಾಸ್ತುವಿನ ಪ್ರಕಾರ. ಆದರೆ ಶಿವದೇವರು ಅಲ್ಲಿಗೆ ಬಂದಾಗ ಒಮ್ಮೆ ತುಂಗಭದ್ರೆಗೆ ಪೂರ ಬಂದು "ಮಾರಿಯಂತೆ ಲಿಂಗದವರೆಗೂ ಬಂದಳಂತೆ." ಅವಳನ್ನು ಹೊಡೆದಟ್ಟಿ ಶಿವಪದ ಪಡೆಯಲು ಇದೇ ಉತ್ತಮಮಾರ್ಗ ಎಂದು ಶಿವಕಟ್ಟೆ ಕಟ್ಟಿ ತೋರಿದ ಶಿವದೇವ (ಅದೇ, ೩ನೆಯ ಶಾಸನ, ಸಾಲು ೩೨). ಎಂದರೆ ನದಿಗೆ ಹೋಗಲು ಕಲ್ಲಿನ ಏರಿ ಹಾಕಿಸಿ, ಅಲ್ಲಿ ಸೋಪಾನಗಳನ್ನು ಕಲ್ಲಿನಲ್ಲಿ ಮಾಡಿಸಿದ. ಬಹುಶಃ ಇದೇ ಶಿವಕಟ್ಟೆ. ನದಿಯಲ್ಲಿ ಮಿಂದು ಮುಕ್ತೇಶ್ವರನ ದರುಶನದಿಂದ ಮುಕ್ತಿಪಡೆಯಲು ಇದೇ ಮಾರ್ಗ ಎನ್ನುವಂತೆ ನದಿಗೆ ಶಿವಸೋಪಾನಗಳನ್ನಿಡಿಸಿದ. ಅದೇ ಕಾರಣದಿಂದ ಅಲ್ಲೊಂದು ಚಿಕ್ಕಗೋಡೆಸಹ ನಿಲ್ಲಿಸಬೇಕಾಯಿತು. ಇದರಿಂದಾಗಿ ಉತ್ತರಕ್ಕಿರಬೇಕಾದ ದ್ವಾರದ ವಿಷಯ ಕೈಬಿಡಬೇಕಾಯಿತು. ಹೀಗಾಗಿ ಈ ದೇವಸ್ಥಾನಕ್ಕೆ ಪೂರ್ವ ಹಾಗೂ ದಕ್ಷಿಣಕ್ಕೆ ಮಾತ್ರ ಪ್ರವೇಶದ್ವಾರಗಳಿವೆ. ಎಲ್ಲ ಚಾಲುಕ್ಯ ಅಥವಾ ೧೧–೧೨ನೆಯ ಶತಕದ ದೇವಾಲಯಗಳಂತೆ ಇಲ್ಲಿಯೂ ಪ್ರವೇಶದ್ವಾರಕ್ಕೆ ಚಿಕ್ಕಮಂಟಪವಿದ್ದು, ಇಕ್ಕೆಲಗಳಲ್ಲಿ ಆತು ಕುಳಿತುಕೊಳ್ಳಲು ಜಗಲಿಗಳಿವೆ. ಪೂರ್ವಕ್ಕೆ ಪ್ರವೇಶದ್ವಾರಕ್ಕೂ ಮಂಟಪಕ್ಕೂ ಮಧ್ಯೆ ಸ್ವಲ್ಪ ಅಂತರ ಬಿಟ್ಟಿದೆ (ಚಿತ್ರ–೧).

ದೇವಸ್ಥಾನ ಕರಿಯ ಕಲ್ಲಿನಲ್ಲಿ ಕಟ್ಟಿದ್ದು, ಊರಜನ ಹೇಳುವಂತೆ ಇದು ಜಕ್ಕಣಾಚಾರಿ ಶೈಲಿಯಲ್ಲಿದೆ (ಚಿತ್ರ–೧). ದೇವಸ್ಥಾನದ ಹೊರಗೋಡೆ ಅನೇಕ ಶಿಲಾಮೂರ್ತಿಗಳಿಂದ ಅಲಂಕೃತವಾಗಿದ್ದಿತು. ಹೊಯ್ಸಳ ದೇವಾಲಯದಂತೆ ಇಲ್ಲಿ ಸಹ ಮದನಕೈಗೊಂಬೆ ಗಳಿದ್ದವು. ಈಗ ಅವು ಮಾಯವಾಗಿದ್ದರೂ, ಅವುಗಳಲ್ಲಿದ್ದವು ಎಂದು ಹೇಳಲು ಅವು ಗಳನ್ನು ನಿಲ್ಲಿಸಿದ ಕುರುಹುಗಳಿವೆ. ಆ ಕುರುಹುಗಳನ್ನೇ ಎಣಿಸುತ್ತ ಹೋದರೆ, ಇದೊಂದೇ ದೇವಾಲಯದಿಂದ ಸುಮಾರು ನೂರೈವತ್ತಕ್ಕೂ ಹೆಚ್ಚು ಮೂರ್ತಿಗಳು ಕಣ್ಮರೆಯಾಗಿವೆ ಎಂದು ಸುಲಭವಾಗಿ ಹೇಳಬಹುದು. ಈಗಲೂ ಈ ದೇವಸ್ಥಾನ ಸೌಂದರ್ಯದಲ್ಲಿ ಕಡಿಮೆ ಇಲ್ಲ. ಆದರೆ ಅವೆಲ್ಲ ಮೂರ್ತಿಗಳಿದ್ದಾಗ ಹೇಗಿದ್ದಿರಬಹುದಿತ್ತು, ಇದರ ವೈಭವ ?

ಮೂಲ ಗರ್ಭಗೃಹದಲ್ಲಿ ಲಿಂಗವಿದೆ. ಈ ಲಿಂಗ ಉದ್ಭವಮೂರ್ತಿ. ಶಾಸನವೇ ಹೇಳು ವಂತೆ, "ಮೂಜು ಲೋಕದರೆಲ್ಲರ ಪಾವನವ ಮಾಳ್ಪೆನೆನುತಗಜಾತೆ ವಲ್ಲಭನವತರಿಸಿದ..." (ಶಾಸನ ೪, ಸಾಲು ೧೭). ಶಿವಾಲಯಗಳನ್ನು ನೋಡಿದರೆ ಸುಮಾರಾಗಿ ಉದ್ಭವ ಮೂರ್ತಿಗಳ ಪೀಠಗಳು ನೆಲದಿಂದ ಬಹು ಮೇಲಕ್ಕೇರಿರುವುದಿಲ್ಲ ; ಅಲ್ಲದೆ ಲಿಂಗ ಸಹ ತುಂಬ ಚಿಕ್ಕರೂಪದ್ದು. ಉದಾ. ಹಂಪೆಯ ವಿರೂಪಾಕ್ಷ, ಕೂಡಲಸಂಗಮದ ಸಂಗ ಮೇಶ್ವರ ಉದ್ಭವಮೂರ್ತಿಗಳು ; ತುಂಬ ಚಿಕ್ಕವು. ಅದೇ ತಂಜಾವೂರಿನ ಬೃಹದೀಶ್ವರ ಗಂಗೈಕೊಂಡ ಚೋಳಪುರದ ಈಶ್ವರ ಮಾನವನಿರ್ಮಿತ ; ಅತಿ ದೊಡ್ಡವು. ಅದೇ ರೀತಿ ಹರಳಹಳ್ಳಿಯ ಸೋಮನಾಥ ದೇವಾಲಯದಲ್ಲಿ ಎರಡು ಲಿಂಗಗಳು ಮಾನವ ನಿರ್ಮಿತ ;

ಮೂಲಮೂರ್ತಿ ಉದ್ಭವಮೂರ್ತಿ. ಹೀಗಾಗಿ ಅವುಗಳ ಸ್ಥಾಪನಾವಿನ್ಯಾಸದಲ್ಲಿ ಅಂತರವಿದೆ. ಇಲ್ಲಿ ಆಗಮದಲ್ಲಿ ತತ್ತ್ವವಿಚಾರ ಬರುತ್ತದೆ. ಶಿವದೇವರ ಗುರು ಶಿವಮುದ್ದುದೇವ ಶ್ರೀಶೈಲದಲ್ಲಿದ್ದ. "ಅವ್ಯಕ್ತಶಂಕರನನತಿಸುಬ್ಯ(ವ್ಯ)ಕ್ತಂಮಾಡಿ ತೋರ್ಪೆನೆನುತೀ ಜಗದೊಳ್" ಎಂದು ದಿವ್ಯಧವಳೇಶಲಿಂಗ...ಕಲಿಕಾಲ ಕಲುಷವ ತವಿಸುವ ನೆವದಿಂದೆ ಮೂರ್ತಿಯನಾಂತಿರ್ದ್ದನು." ಎಂದರೆ ಅವ್ಯಕ್ತ ಶಿವತತ್ತ್ವ ಇಲ್ಲಿ ಕಲಿಕಾಲದ ಕಲುಷವನ್ನು ತೊಳೆಯಲು ಮೂರ್ತಿವಂತನಾಗಿದ್ದ (ಶಿವತತ್ತ್ವ ಸದಾಶಿವತತ್ತ್ವ ವಿಚಾರ ಪ್ರತಿಪಾದನೆ ಇದು). ಧವಳಲಿಂಗವೇ ಮುಕ್ತೇಶ್ವರ ಲಿಂಗ. ಆದ್ದರಿಂದ ಇಲ್ಲಿ ಮುಕ್ತಿಕ್ಷೇತ್ರದಲ್ಲಿ ಸಹ ಅವ್ಯಕ್ತಶಿವನೇ ವ್ಯಕ್ತರೂಪದಿಂದ ಲಿಂಗದ ರೂಪ ತಾಳಿ ಬಂದಿದ್ದಾನೆಂದು ಶಿವದೇವನ ಗ್ರಹಿಕೆ.

ಶಿವಾಲಯವೆಂದರೆ ಭೂಕಯಿಲಾಸ/ಭೂಕೈಲಾಸ ಎಂಬ ವಿಚಾರ: "ಹವಣಿಸಲಱಿಯದ ಶಿವಕವಿಳಾಸವನಖಿಳ ದೇವತಾಪದಸಹಿತೀ ಭುವನಕ್ಕೆ ತಂದು ಶಿವಸುಖಿಭವನವನೊಲಿದು ಶಿವಸುಖಭವನದ ನೆವದಿಂದ ರಚಿಸಿದಂ ಶಿವದೇವನು" (ಮೂರನೆಯ ಶಾಸನ, ಸಾಲು ೩೩).

ಈ ದೇವಾಲಯ ಭೂಕೈಲಾಸ. ಕೈಲಾಸಕ್ಕೆ ಕೋಟೆ ಇದೆ, ಅದಕ್ಕೆ ಎಂಟು ಬಾಗಿಲುಗಳು. ಪ್ರತಿಯೊಂದು ಬಾಗಿಲಿಗೂ ಒಬ್ಬೊಬ್ಬ ಭೈರವ ಕಾಯುತ್ತಿರುತ್ತಾನೆ, ತನ್ನ ಅಸಂಖ್ಯಾತ ಸೇನೆಯೊಡನೆ. ಈ ಭೈರವನಿಗೆ ಶಕ್ತಿದೇವತೆಯ ಬೆಂಬಲಬೇಕು. ಆ ಶಕ್ತಿಗಳಾರೆಂದರೆ, ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿ ಹಾಗೂ ಕೆಲವೊಮ್ಮೆ ಕಾಳಿ ಅಥವಾ ದುರ್ಗೆ. ಪ್ರತಿಯೊಂದು ಶಿವಾಲಯದಲ್ಲೂ ನೈಋತ್ಯಕ್ಕೆ ಸಪ್ತಮಾತೃಕೆಯರು ಇರಬೇಕೆಂದು ಆಗಮಗಳು ಸಾರುತ್ತವೆ. ಈ ದೇವಾಲಯದಲ್ಲೂ ಸಪ್ತಮಾತೃಕೆಯರ ಪಟ್ಟಿಕೆ ಇದೆ. ಅದು ರಂಗಮಂಟಪದಲ್ಲಿ ಪಟ್ಟಿಕೆಗೆಂದು ಮಾಡಿದ ಗೂಡಿನಲ್ಲಿಡಲ್ಪಟ್ಟಿದೆ. ಈ ಸಪ್ತಮಾತೃಕೆಯರ ಕೈಯಲ್ಲಿ ಅವರವರು ಹಿಡಿಯಬೇಕಾಗಿದ್ದ ಆಯುಧಗಳಿದ್ದು, ಅವರ ಪುರುಷದೇವತೆಗಳಿಗಿರುವ ವಾಹನಗಳೇ ಇವರಿಗೂ ಇವೆ.

ಆಗಮಗಳ ಪ್ರಕಾರ ಭಕ್ತರು ದೇವಸ್ಥಾನ ಪ್ರವೇಶಿಸಿದ ಕೂಡಲೇ ಮೊದಲು ಮಾತೃಕೆಯರಿಗೆ ನಮಿಸಿ, ಅನಂತರ ಲಿಂಗದರ್ಶನಕ್ಕೆ ಮುಂದುವರಿಯಬೇಕೆಂದು ಸಾರುತ್ತವೆ. ಇವಲ್ಲದೆ ಇಲ್ಲಿ ಸೂರ್ಯನ ಮೂರ್ತಿಯೊಂದಿದೆ. ಮೊದಲು ಇಲ್ಲಿ ಬಂದಿದ್ದಿರಬೇಕು. ಏಕೆಂದರೆ ಲಾಕುಳಶೈವರು ಸೂರ್ಯ, ಸರಸ್ವತಿಯರನ್ನು ಆರಾಧಿಸುತ್ತಿದ್ದರು. ಇಲ್ಲಿ ಸರಸ್ವತಿಯ ಮೂರ್ತಿ ನಮಗಿನ್ನೂ ಸಿಕ್ಕಿಲ್ಲ. ಸೂರ್ಯನ ಮೂರ್ತಿ ಪಕ್ಕದ ಹಳ್ಳಿ ನರಸೀಪುರದ ನರಸಿಂಹ ದೇವಾಲಯದಲ್ಲಿದ್ದಿತು. ಅದನ್ನು ಇಲ್ಲಿ ತಂದಿರಿಸಿದ್ದೇವೆ ಎಂದು ಜನ ಹೇಳುತ್ತಾರೆ.

ರಂಗಮಂಟಪದ ಮಧ್ಯೆ ನಾಲ್ಕು ಚಚ್ಚೌಕದ ಕಂಭಗಳಿದ್ದು, ಇವುಗಳ ಮಧ್ಯದ ಪ್ರದೇಶ ಸ್ವಲ್ಪ ಎತ್ತರವಾಗಿದೆ. ಅಲ್ಲಿ ಹಿಂದಿನ ಕಾಲಕ್ಕೆ ರುದ್ರಗಣಿಕೆಯರಿಂದ ನರ್ತನಸೇವೆ ನಡೆಯು

ತ್ರಿತ್ವ. ದಕ್ಷಿಣಪೂರ್ವದ ಪ್ರವೇಶದ್ವಾರಗಳ ಕಂಭಗಳ ಮೇಲೆ ಅನೇಕ ಚಿತ್ರ ಬಿಡಿಸಲಾಗಿದೆ. ಪ್ರತಿಯೊಂದು ದ್ವಾರಸ್ತಂಭದ ಮೇಲೆ ದ್ವಾರಪಾಲರ ಹಾಗೂ ಚದರಿಸೇವಕಿಯರ ಚಿತ್ರಗಳಿವೆ. ದ್ವಾರಪಾಲರ ಕೈಯಲ್ಲಿ ಶೂಲವಿದ್ದು, ಅದರ ಕೊನೆಗೆ ತಲೆಬುರುಡೆ ಅಂಟಿಕೊಂಡಿದೆ. ಅದು ವಿಶ್ವಕ್ಸೇನ ತಲೆಬುರುಡೆ. ಅಲ್ಲದೆ ಸರ್ಪ, ಮಾತುಲಂಗ ಫಲವನ್ನು ಹಿಡಿದಿರುತ್ತಾರೆ. ಇವರು ಸದಾಶಿವನ ಅನುಯಾಯಿಗಳಾದ್ದರಿಂದ, ಇವರೂ ಅವನಂತೆಯೇ ಡಮರು, ತ್ರಿಶೂಲ, ಸರ್ಪ ಮುಂತಾದವನ್ನು ಹಿಡಿದಿರುತ್ತಾರೆ.

ಈ ದೇವಸ್ಥಾನದಲ್ಲಿ ಇನ್ನೊಂದು ಅತಿಮುಖ್ಯವಾಗಿ ಕಂಡುಬರುವದೆಂದರೆ, ವೀರಭದ್ರನ ಮೂರ್ತಿಗಳು. ದೇವಸ್ಥಾನದ ಹೊರಗೋಡೆಯ ಸುತ್ತ ವೀರಭದ್ರನ ಚಿಕ್ಕ ಚಿಕ್ಕ ಮೂರ್ತಿ ಕೊರೆದಿದ್ದಾರೆ. ಇವನು ಯುದ್ಧಕ್ಕೆ ಹೊರಡಲು ಸನ್ನದ್ಧನಾಗಿರುವಂತೆ ಕತ್ತಿ, ಖಡ್ಗ, ಖೇಟಕ, ಬಿಲ್ಲು ಬಾಣಧಾರಿಯಾಗಿದ್ದಾನೆ. ಆದರೆ ಈತ ಉಟ್ಟಿರುವ ಚಲ್ಲಣದ ಮೇಲೆ ಚಿತ್ರಚಿತ್ರದ ಗೆರೆಗಳಿವೆ. ಆದರೆ ಗೋಪಿನಾಥರಾಯರು ತಮ್ಮ Elements of Indian Iconographyಯಲ್ಲಿ ಚಿತ್ರವುಳ್ಳ ಬಟ್ಟೆಧರಿಸಿ, ಖಡ್ಗ, ಖೇಟಕ, ಬಿಲ್ಲು, ಬಾಣಧಾರಿಯಾದ ಮೂರ್ತಿ ಶ್ರೀಕಂಠ ಎಂದು ಹೇಳುತ್ತಾರೆ. ಹಾಗಿದ್ದರೆ ಇದು ವೀರಭದ್ರನದೋ ಅಥವಾ ಶ್ರೀಕಂಠನದೋ ?

ಶಿಖರದ ಮೇಲೆ ಅನೇಕ ಚಿತ್ರಗಳನ್ನು ಬಿಡಿಸಿದೆ. ಲಾಕುಳಶೈವರ ಕಾಲದ ಜಕ್ಕಣಾಚಾರಿಶೈಲಿಯ ಶಿವಾಲಯಗಳಲ್ಲಿ ದೇವಿಗಾಗಿ ಬೇರೆ ದೇವಸ್ಥಾನ ಇರುತ್ತಿರಲಿಲ್ಲ. ಆದರೂ ಅವಳು ಶಿವನ ವಾಮಭಾಗವನ್ನಾರಿಸಿಕೊಂಡಿರುವಳೆಂಬುದನ್ನು ಅವರು ಮರೆತಿರಲಿಲ್ಲ. ಹೀಗಾಗಿ ದೇವಾಲಯದ ಶಿಖರದ ಉತ್ತರಗೋಡೆ ಮೇಲೆ ಯಾವಾಗಲೂ ದೇವಿಯ ಚಿತ್ರ ಕಂಡುಬರುತ್ತದೆ. ನಾವು ಯಾವುದೇ ಲಾಕುಳ ಶೈವರ ದೇವಾಲಯ ನೋಡಲಿ, ದೇವಿಯ ಚಿತ್ರಗಳು ಶಿಖರದ ಉತ್ತರದ ಗೋಡೆ ಮೇಲೆ ಕಂಡುಬರುತ್ತವೆ.

ಇವಲ್ಲದೆ ಇಲ್ಲಿ ವೀರಭದ್ರನ ದೇವಸ್ಥಾನ ಒಂದಿದೆ. ಅಲ್ಲಿರುವ ವೀರಭದ್ರನ ಪೂಜೆಯನ್ನು ಲಿಂಗಾಯಿತ ಪೂಜಾರಿ ಒಬ್ಬರು ಮಾಡುತ್ತಿದ್ದಾರೆ. ಇಲ್ಲಿ ವಿಶೇಷವೆಂದರೆ, ದೇವರ ವಿಗ್ರಹದ ಪಕ್ಕಕ್ಕೆ ಒಂದು ಲಗುಡ(ಕೋಲು)ವನ್ನಿಟ್ಟಿರುತ್ತಾರೆ. ಪೂಜಾರಿಗೆ ನಾವು ಕೇಳಿದಾಗ "ಅಜ್ಜನಿಗೆ ಇದು ಬೇಕೇ ಬೇಕು" ಎಂದು ಮಾತ್ರ ಹೇಳಿದ. ಬಹುಶಃ ಇದು ಲಗುಡಧಾರಿ ಶಿವನ ಆರಾಧನೆಯ ನೆನಪಿನ ಚಿಹ್ನೆ ಇರಬಹುದೇ ? ಇದೇ ರೀತಿ ನಾವು ಇನ್ನೂ ಅನೇಕ ದೇವಸ್ಥಾನಗಳಲ್ಲಿ ಶಿವನ ಪಕ್ಕಕ್ಕೆ ಲಗುಡವಿಟ್ಟಿದ್ದನ್ನು ನೋಡಿದ್ದೇವೆ. ಈ ದೇವಸ್ಥಾನದ ಪೌಳಿಯಲ್ಲಿ ಗೋಪಮುನಿ (ಅಥವಾ ಗೋಮುನಿದೇವರ) ಗದ್ದುಗೆ ಎಂದು ಹೆಸರು ಹೇಳಿಕೊಂಡು ಒಂದು ದೇವಸ್ಥಾನವಿದೆ. ಆದರೆ ಎಲಿಯಟ್ಟನ ಶಾಸನ ಸಂಗ್ರಹ ಹಾಗೂ ಗೆಝೆಟಿಯರುಗಳ ಮುಖಾಂತರ ನಮಗೆ ತಿಳಿದು ಬರುವದೇನೆಂದರೆ, ತೊರಗಲೆಯ ಕಹ್ನಾದೇವಿ ಸ್ಥಾಪಿಸಿದ ಕಲಿದೇವಸ್ವಾಮಿ ದೇವಸ್ಥಾನ ಎಂದು.

ಇಲ್ಲಿ ಒಳಗೆ ಲಿಂಗವಿದ್ದು ದೇವಸ್ಥಾನದ ಉಳಿದೆಲ್ಲ ಭಾಗಗಳು ಬಿದ್ದುಹೋಗಿವೆ. ಆದರೆ ಎಲಿಯಟ್ ಹೋಗಿದ್ದ ಕಾಲಕ್ಕೆ ಎಂದರೆ (೧೮೩೩ರ ಸುಮಾರಿಗೆ) ಇನ್ನೂ ಈ ದೇವಸ್ಥಾನ

ಉತ್ತಮ ಮಟ್ಟದಲ್ಲಿಯೇ ಇತ್ತು ಎಂದು ಕಂಡುಬರುತ್ತದೆ. [illegible]

ಇಲ್ಲಿ ಇನ್ನೂ ಅನೇಕ ದೇವಾಲಯಗಳಿದ್ದು, ಯಾವುದು ಏನು ಎಂದು ಹೇಳುವುದು ಕಠಿಣ.

ಆದರೆ ಒಂದು ಮಾತು ಮಾತ್ರ ನಿಜ : ಈ ದೇವಸ್ಥಾನದ ವಾಸ್ತುಶಿಲ್ಪಸೌಂದರ್ಯವನ್ನು ಮನಸಾರೆ ಮೆಚ್ಚಿ ಹೊಗಳಬೇಕೆನ್ನುವವರು ಅಲ್ಲಿಯ ಶಾಸನಗಳ ಕಾವ್ಯಶೈಲಿಯ ಸವಿಯನ್ನೂ ಉಣ್ಣಬೇಕು.

## ೧

ಮೈಸೂರನ್ನು ಆಳಿದವರು ಯದುವಂಶದ ಅರಸರು. ಮೈಸೂರು ಅರಸರು ಎಂದರೆ ಯದುವಂಶದ ಅರಸರು. ಇವರಲ್ಲಿ ಮೊದಲನೆಯವರು ಯದುರಾಯರು. ಕೊನೆಯವರು ಜಯಚಾಮರಾಜೇಂದ್ರ ಒಡೆಯರ್ ಅವರು. ಇವರ ಕಾಲಾವಧಿಯನ್ನು ೧೩೯೯ರಿಂದ ೧೯೭೪ರವರೆಗೆ ಎಂದು ಚರಿತ್ರಕಾರರು ಗುರುತಿಸಿದ್ದಾರೆ. ಇವರಲ್ಲಿ ೨೫ ಜನ ರಾಜರು ಆಗಿಹೋಗಿದ್ದಾರೆ. ಯದುರಾಯರಿಂದ ಬೆಟ್ಟದ ಚಾಮರಾಜ ಒಡೆಯರ್ ಸೇರಿದಂತೆ ಈ ವಂಶದ ಮೊದಲ ೮ ದೊರೆಗಳ ಬಗ್ಗೆ ಹೆಚ್ಚು ವಿವರಗಳು ತಿಳಿದಿಲ್ಲ. ೧೫೭೮ರಿಂದ ರಾಜ ಒಡೆಯರ ಆಳ್ವಿಕೆ ಆರಂಭವಾಯಿತು. ಈ ಮನೆತನ ಮತ್ತು ರಾಜ್ಯ ಸುಸ್ಥಾಪಿತವಾದದ್ದು ಇವರ ಕಾಲದಲ್ಲೇ. ಇವರ ಕಾಲದಿಂದ ಒಟ್ಟು ೧೭ ದೊರೆಗಳು ರಾಜ್ಯವಾಳಿದರು. ಇವರಲ್ಲಿ ೧೨ ಮಂದಿ ಕನ್ನಡ ಸಾಹಿತ್ಯಕ್ಕೆ, ಕವಿಗಳಿಗೆ ಆಶ್ರಯ ಕೊಟ್ಟಿದ್ದಾರೆ. ಅವರ ಹೆಸರು, ಆಳ್ವಿಕೆಯ ಅವಧಿ ಈ ಮುಂದಿನಂತಿವೆ : (೧) ರಾಜ ಒಡೆಯರ್ I (೧೫೭೮–೧೬೧೭), (೨) ಚಾಮರಾಜ ಒಡೆಯರ್ VI (೧೬೧೭–೧೬೩೭), (೩) ರಣಧೀರ ಕಂಠೀರವ ನರಸರಾಜ ಒಡೆಯರ್ (೧೬೩೮–೧೬೫೯), (೪) ದೊಡ್ಡದೇವರಾಜ ಒಡೆಯರ್ (೧೬೫೯–೧೬೭೩), (೫) ಚಿಕ್ಕದೇವರಾಜ ಒಡೆಯರ್ (೧೬೭೩–೧೭೦೪), (೬) ದೊಡ್ಡ ಕೃಷ್ಣರಾಜ ಒಡೆಯರ್ (೧೭೧೪–೧೭೩೨), (೭) ಕೃಷ್ಣರಾಜ ಒಡೆಯರ್ II (೧೭೩೪–೧೭೬೬), (೮) ಬೆಟ್ಟದ ಚಾಮರಾಜ ಒಡೆಯರ್ (೧೭೭೦–೧೭೭೬), (೯) ಮುಮ್ಮಡಿ ಕೃಷ್ಣರಾಜ ಒಡೆಯರ್ (೧೭೯೯–೧೮೬೮), (೧೦) ಚಾಮರಾಜೇಂದ್ರ ಒಡೆಯರ್ (೧೮೬೮–೧೮೯೪), (೧೧) ನಾಲ್ವಡಿ ಕೃಷ್ಣರಾಜ ಒಡೆಯರ್ (೧೮೯೫–೧೯೪೦), (೧೨) ಜಯಚಾಮರಾಜೇಂದ್ರ ಒಡೆಯರ್ (೧೯೪೦–೧೯೭೪). ಉಳಿದ ರಾಜರಲ್ಲಿ ಇಮ್ಮಡಿ ರಾಜ ಒಡೆಯರ್ (೧೬೩೭–೧೬೩೮), ಚಾಮರಾಜ ಒಡೆಯರ್ VII (೧೭೩೨–೧೭೩೪), ನಂಜರಾಜ ಒಡೆಯರ್ (೧೭೬೬–೧೭೭೦)—ಇಂಥ ಕೆಲವು ರಾಜರ ಆಳ್ವಿಕೆಯ ಕಾಲ ೧, ೨, ೪ ವರ್ಷಗಳಂತೆ ಅತ್ಯಂತ ಕಡಿಮೆ ಅವಧಿಯವು. ಇದಕ್ಕೆ ಒಂದೇ ಅಪವಾದ ಖಾಸಾ ಚಾಮರಾಜ ಒಡೆಯರ ೨೦ ವರ್ಷಗಳ ಆಳ್ವಿಕೆಯ ಕಾಲ (೧೭೭೬–೧೭೯೬). ಆದರೆ ಇವರ ಕಾಲದಲಿ ಹೈದರ್, ಟೀಪೂಸುಲ್ತಾನರ ಆಳ್ವಿಕೆ, ಪ್ರಾಬಲ್ಯಗಳು ಅಧಿಕವಾಗಿತ್ತು.

ಆಳ್ವಿಕೆಯ ಕಾಲಾವಧಿಯ ಹ್ರಸ್ವತೆ ಅಥವಾ ಅನ್ಯರ ಪ್ರಾಬಲ್ಯದ ಅಧಿಕ್ಯ ಕಾರಣವಾಗಿ ಪೂರ್ವೋಕ್ತ ೪ ದೊರೆಗಳ ಸಾಹಿತ್ಯಪೋಷಣೆಯ ವಿಚಾರ ಅನುಕ್ತಗೊಂಡಿದೆ.

ಕನ್ನಡ ಸಾಹಿತ್ಯವನ್ನು ಪೋಷಿಸಿ ಬೆಳೆಸಿದ ೧೨ ದೊರೆಗಳಲ್ಲಿ ಮೂವರು ಸ್ವತಃ ಸಾಹಿತಿಗಳು. ಅವರು ಇಮ್ಮಡಿ ಚಾಮರಾಜ ಒಡೆಯರ್ ('ವಾಲ್ಮೀಕಿ ರಾಮಾಯಣ ಟೀಕೆ', 'ಬ್ರಹ್ಮೋತ್ತರಖಂಡ ಟೀಕೆ'), ಚಿಕ್ಕದೇವರಾಜ ಒಡೆಯರ್ ('ಚಿಕದೇವರಾಜ ಬಿನ್ನಪ', 'ಭಾಗವತ ಟೀಕೆ', 'ಭಾರತ ಟೀಕೆ', 'ಶೇಷಧರ್ಮ ಟೀಕೆ'), ಮುಮ್ಮಡಿ ಕೃಷ್ಣ ರಾಜ ಒಡೆಯರ್ ('ಅಖಂಡ ಕಾವೇರಿಮಾಹಾತ್ಮ್ಯ', 'ರಾಮಾಯಣತಾತ್ಪರ್ಯದೀಪಿಕಾ ಟೀಕೆ', 'ಸೌಗಂಧಿಕಾ ಪರಿಣಯ', 'ನಂಜುಂಡಶತಕ', 'ಸಂಖ್ಯಾರತ್ನಮಾಲಾ ಟೀಕೆ', 'ಕೃಷ್ಣಕಥಾಸಾರಸಂಗ್ರಹ', 'ಅದ್ಭುತರಾಮಾಯಣ ಟೀಕೆ' ಮುಂತಾದ ೫೦ಕ್ಕೂ ಹೆಚ್ಚು ಕೃತಿಗಳು). ಈ ರಾಜರಲ್ಲದೆ ಇವರ ಕುಟುಂಬಕ್ಕೆ ಸೇರಿದ ಇತರರೂ ಕೃತಿಗಳನ್ನು ರಚಿಸಿ ದ್ದಾರೆ. ದೊಡ್ಡಕೃಷ್ಣರಾಜರ ಪತ್ನಿ ಚೆಲುವಾಂಬೆ ('ವರನಂದೀಕಲ್ಯಾಣ, 'ತುಲಾಕಾವೇರೀ ಮಾಹಾತ್ಮ್ಯ ಟೀಕೆ', 'ವೆಂಕಟಾಚಲಮಾಹಾತ್ಮ್ಯ ಲಾಲೀಪದ', 'ಅಲಮೇಲುಮಂಗ್ಯ ಲಾಲೀಪದ'), ಕಳಲೆ ವೀರರಾಜ ('ಸಕಲವೈದ್ಯಸಂಹಿತ ಸಾರಾರ್ಣವ'), ಕಳಲೆ ನಂಜ ರಾಜ ('ಕಕುದ್ಗಿರಿ ಮಾಹಾತ್ಮ್ಯ', 'ಗರಳಪುರಿ ಮಹಿಮಾದರ್ಶ', 'ಶಿವಭಕ್ತ ವಿಲಾಸ', 'ಹರಿವಂಶ', 'ಲಿಂಗಪುರಾಣ' ಇತ್ಯಾದಿ). ಇಮ್ಮಡಿ ಕೃಷ್ಣರಾಜನ ಮಾವ ಕತ್ತಿ ಗೋಪಾಲ ರಾಜ ಅರಸು ('ಕಮಲಾಚಲಮಾಹಾತ್ಮ್ಯ')—ಈ ಮುಂತಾದವರು ಸಾಹಿತ್ಯರಚನೆ ಮಾಡಿದ್ದಾರೆ. ಆಶ್ರಿತ ಕವಿಗಳಲ್ಲದೆ ಈ ರಾಜರ ಆಸ್ಥಾನದಲ್ಲಿ ಬೇರೆ ಬೇರೆ ಹುದ್ದೆಗಳಲ್ಲಿ ದ್ದವರೂ ಸಾಹಿತ್ಯರಚನೆಯಲ್ಲಿ ಆಸಕ್ತಿ ತೋರಿಸಿದ್ದಾರೆ. ಚಿಕ್ಕದೇವರಾಜರಲ್ಲಿ ಮಂತ್ರಿ ಗಳಾಗಿದ್ದ ತಿರುಮಲಾರ್ಯ, ಚಿಕುಪಾಧ್ಯಾಯ, ಅಲ್ಲೇ ಊಳಿಗದಲ್ಲಿದ್ದ ಹೊನ್ನಮ್ಮ-ಶೃಂಗಾ ರಮ್ಮ, ದೊಡ್ಡಕೃಷ್ಣರಾಜರ ಸೇನಾಧಿಪತಿಯಾಗಿದ್ದ ರಂಗಯ್ಯ, ಮಂತ್ರಿ ವೆಂಕಾಮಾತ್ಯ, ಬೆಟ್ಟದ ಚಾಮರಾಜರ ಗುರು ಸಿಂಗರಾಚಾರ್ಯ ಕೂಡಲೇ ನೆನಪಿಗೆ ಬರುವ ಹೆಸರುಗಳು. ತಿರುಮಲಾರ್ಯ, ಚಿಕುಪಾಧ್ಯಾಯ, ಕಳಲೆ ನಂಜರಾಜರಂಥ ಪ್ರಭಾವಶಾಲೀ ವ್ಯಕ್ತಿಗಳು ತಾವೇ ಇತರರಿಗೆ ಪ್ರೇರಣೆ ಆಶ್ರಯಗಳನ್ನಿತ್ತು ಆ ಇತರರಿಂದಲೂ ಗ್ರಂಥಕೃತಿ ಮಾಡಿಸಿದ್ದಾರೆ. ಹೀಗೆ ಮೈಸೂರು ದೊರೆಗಳು, ಅವರ ಕುಟುಂಬವರ್ಗ, ಅವರ ಆಸ್ಥಾನ ಪಾಲ್ಗೊಂಡಿದ್ದಾರೆ.
ಪ್ರಮುಖರು ಕನ್ನಡಸಾಹಿತ್ಯನಿರ್ಮಾಣ ಪೋಷಣೆಗಳಲ್ಲಿ

ಮೈಸೂರು ಅರಸರ ಕಾಲದ ಸಾಹಿತ್ಯ ಶ್ರೀಮಂತವಾದದ್ದು; ಈ
ಈಗಿರುವಂತೆ
ಕಾಲದ ಲಭ್ಯಕೃತಿಗಳ ಸಂಖ್ಯೆ ಹೆಚ್ಚಾದದ್ದು. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ ಹಾಗೂ ವಿಜಯನಗರ ಕಾಲದ ಕನ್ನಡಸಾಹಿತ್ಯಕ್ಕಿಂತ ಈ ಕಾಲದ ಸಾಹಿತ್ಯ ಸಮೃದ್ಧವಾದದ್ದು, ಸಂಪದ್ಯುಕ್ತವಾದದ್ದು! ಕಾರಣವೇನು ? ಈ ಅರಸರ ಕಾಲಮಾನ ನಮ್ಮ ಈ ಕಾಲಕ್ಕೆ ತೀರ ಸಮೀಪವಾಗಿದೆ. ಹಾಗಾಗಿ ಅವರ ಸಾಹಿತ್ಯದ ಬಹುಪಾಲು ನಮಗೆ ಉಳಿದುಬಂದಿದೆ. ಇದಕ್ಕೆ ವ್ಯತಿರಿಕ್ತವಾಗಿ ಉಳಿದ ರಾಜಮನೆತನಗಳ ಕಾಲಮಾನ ನಮಗೆ ದೂರದ್ದೇ. ಅಂಥಾ ರಾಜಮನೆತನಗಳ ಕೊನೆಯೊಂದಿಗೆ ಆ ಮನೆತನಗಳ ಕಾಲದ

ಸಾಹಿತ್ಯ—ಅದೆಷ್ಟೇ ಸಂಪದ್ಯುಕ್ತವಾಗಿದ್ದರೂ—ಅದರ ಬಹುಪಾಲು ನಾಶವಾಗಿರಬೇಕು. ಒಡೆಯರ ಮನೆತನ ಇಂದಿಗೂ ಉಳಿದುಬಂದಿದೆ. ತನ್ನ ಮನೆತನದ ಸಾಹಿತ್ಯದ ಬಹು ಭಾಗವನ್ನು ಸಹಜವಾಗಿಯೇ ಅದು ಉಳಿಸಿಕೊಂಡುಬಂದಿದೆ.

೨

೧೩೯೯ರಿಂದ ೧೫೭೮ರವರೆಗೆ ಆಳಿದ ಮೊದಲ ೮ ಮೈಸೂರು ರಾಜರು ವಿಜಯ ನಗರದ ಅರಸರ ಸಾಮಂತರಾಗಿದ್ದರು. ವಿಜಯನಗರದ ಅರಸರು—ಅದರಲ್ಲೂ ಕೃಷ್ಣದೇವ ರಾಯ—ಕನ್ನಡ ಸಾಹಿತ್ಯದೊಂದಿಗೆ ತೆಲುಗು, ಸಂಸ್ಕೃತ ಸಾಹಿತ್ಯಗಳಿಗೂ ಪೋಷಣೆಯಿತ್ತಿದ್ದರು. ಆ ಕಾಲದಲ್ಲಿ ಕೆಲವು ದೇಶಭಾಷಾಕವಿಗಳೇ ಸಂಸ್ಕೃತದಲ್ಲೂ ಕೃತಿರಚನೆಮಾಡಿ ಉಭಯಕವಿಗಳೆನಿಸಿಕೊಂಡಿದ್ದುಂಟು! ಇದೇ ಪದ್ಧತಿ ಮೈಸೂರರಸರ ಕಾಲದಲ್ಲೂ ಕಾಣುತ್ತದೆ. 'ಚಿಕ್ಕದೇವರಾಯ ವಿಲಾಸಮು', 'ಚಿಕ್ಕದೇವರಾಯೋದಾಹರಣಮು', 'ಚಿಕ್ಕದೇವರಾಯ ಚಾಟುಪದ್ಯಾಲು' ಎಂಬ ಕೃತಿಗಳು ಚಿಕ್ಕದೇವರಾಜನ ಬಗ್ಗೆ ತೆಲುಗಿನಲ್ಲಿ ರಚಿತವಾಗಿವೆ. ಚಿಕ್ಕದೇವರಾಜನ ಮಗನಾದ ಕಂಠೀರವರಾಜ 'ಲಕ್ಷ್ಮೀವಿಲಾಸಮು', 'ಕಲಾವಾಣೀ ವಿಲಾಸಮು' 'ನಾಟ್ಯವಿದ್ಯಾವಿಲಾಸಮು', 'ವಸಂತೋತ್ಸವವಿಲಾಸಮು' ಮುಂತಾದ ೧೨ ಕೃತಿಗಳನ್ನು ತೆಲುಗಿನಲ್ಲಿ ಬರೆದಿದ್ದಾನೆ. 'ಹಾಲಾಸ್ಯಮಾಹಾತ್ಮ್ಯಮು', 'ಕಾಶೀಮಹಿಮಾರ್ಥಮಾಹಾತ್ಮ್ಯಮು' ಎಂಬ ಕೃತಿಗಳ ಕರ್ತೃ ಕಳಲೆ ವೀರರಾಜ. ಇದು ವಿಜಯನಗರದ ಅರಸರು ಹಾಕಿಕೊಟ್ಟಿದ್ದ ಬಹುಭಾಷಾಸಾಹಿತ್ಯಪೋಷಣಪದ್ಧತಿಯ ಮುಂದುವರಿಕೆಯ ಕುರುಹು. ಚಿಕ್ಕದೇವರಾಜನ ಪ್ರಧಾನಿ ತಿರುಮಲಾರ್ಯ ಶ್ರೀಶೈಲ ಸೂರಿ ಎಂಬ ಹೆಸರಿಂದ 'ಶ್ರೀ ಯದುಗಿರಿನಾರಾಯಣಸ್ತವ', 'ಶ್ರೀ ಯದುಗಿರಿ ನಾಯಕಿ ಸ್ತವ', 'ಶ್ರೀ ಲಕ್ಷ್ಮೀನೃಸಿಂಹಸ್ತವ', 'ಶ್ರೀ ಪರವಾಸುದೇವಸ್ತವ' ಎಂಬ ಸಂಸ್ಕೃತ ಕೃತಿಗಳ ರಚಕ. ಚಾಮರಾಜ ಒಡೆಯರ್ VI ಕಾಲದಲ್ಲಿ (೧೭೩೨–೧೭೩೪) ಅವಿನಾಶೀಶ್ವರ ರಚಿಸಿದ 'ಶ್ರೀರಂಗರಾಜತಿಲಕ ಭಾಣ' ಇನ್ನೊಂದು ಸಂಸ್ಕೃತ ಕೃತಿ. ವೆಂಕಾಮಾತ್ಯನ 'ಅಲಂಕಾರಮಣಿದರ್ಪಣ', 'ಸುಧಾಲಹರಿ'ಗಳೂ ಕೂಡ ಸಂಸ್ಕೃತದವೇ. ಕಳಲೆ ನಂಜರಾಜ 'ಸಂಗೀತಗಂಗಾಧರ'ವನ್ನಲ್ಲದೆ ಈಗ ದೊರೆಯದ ಇನ್ನೂ ಹಲವಾರು ಸಂಸ್ಕೃತಕೃತಿಗಳನ್ನು ರಚಿಸಿದ್ದ. ತ್ರಿಭಾಷಾಸಾಹಿತ್ಯಪೋಷಣೆ ಮೈಸೂರರಸರ ದೃಷ್ಟಿಯಲ್ಲಿತ್ತೆನ್ನಲು ಇವು ಗಟ್ಟಿ ಆಧಾರಗಳು. ಈ ಪದ್ಧತಿಯ ಅಳವಡಿಕೆಗೆ ವಿಜಯನಗರದ ಅರಸರ ಪ್ರಭಾವ, ಅನುಕರಣೆಗಳೇ ಕಾರಣ.

ಮೈಸೂರರಸರ ಆರಂಭಕಾಲದ ಸಾಹಿತ್ಯ ರಾಜರ ವ್ಯಕ್ತಿಮಹಿಮಾವಿಶೇಷ, ವಿಜಯ ವೃತ್ತಾಂತಗಳನ್ನು ಕುರಿತ ಕೃತಿಗಳಾಗಿವೆ. ಗೋವಿಂದವೈದ್ಯನ 'ಕಂಠೀರವ ನರಸರಾಜ ವಿಜಯ', ತಿರುಮಲಾರ್ಯನ 'ಚಿಕದೇವರಾಜ ವಿಜಯ', 'ಚಿಕದೇವರಾಯವಂಶಾವಳಿ', 'ಚಿಕದೇವರಾಜಶತಕ' ಹಾಗೂ ಚಾಮಯ್ಯನ 'ದೇವರಾಜೇಂದ್ರ ಸಾಂಗತ್ಯ' ಈ ಬಗೆಯ ಕೃತಿಗಳು. ಇಂಥ ವಿಜಯ, ಅಭ್ಯುದಯ ಕಾವ್ಯಗಳು ವಿಜಯನಗರದ ಅರಸರ ಕಾಲದಲ್ಲೇ

ಕಾಣುತ್ತವೆ. ಬುಕ್ಕರಾಯನ ರಾಣಿ ಗಂಗಾದೇವಿಯ 'ಮಧುರಾವಿಜಯ' (೧೩೭೯), ಡಿಂಡಿಮಕವಿಸಾರ್ವಭೌಮನೆಂದು ಖ್ಯಾತನಾಗಿದ್ದ ಎರಡನೆಯ ರಾಜನಾಥನ 'ಸಾಳುವಾಭ್ಯುದಯ (ಸು. ೧೪೩೦), ಮೂರನೆಯ ರಾಜನಾಥನ 'ಅಚ್ಯುತರಾಯಾಭ್ಯುದಯ' (ಸು. ೧೫೪೦) ಕೆಲವು ಉಲ್ಲೇಖನಯೋಗ್ಯ ಕೃತಿಗಳು. ಇವು ಕ್ರಮವಾಗಿ ವೀರಕಂಪಣರಾಯ, ಸಾಳುವ ನಾರಸಿಂಹ ಹಾಗೂ ಅಚ್ಯುತರಾಯರ ಸಾಧನೆ ಸಾಹಸ ಪರಾಕ್ರಮಗಳನ್ನು ವರ್ಣಿಸುತ್ತವೆ. ಕುಮಾರ ಧೂರ್ಜಟಿಯ 'ಕೃಷ್ಣದೇವರಾಯವಿಜಯ' ಕೂಡ ಈ ಗುಂಪಿಗೆ ಸೇರುವಂಥದೇ. ಇನ್ನು ಮೇಲೆ ಹೇಳಿದ ಕನ್ನಡದ ಕೃತಿಗಳಾದರೂ ಈ ಬಗೆಯವೇ ಆಗಿವೆ. ಈ ಪರಂಪರೆಯ ಹುಟ್ಟಿಗೆ ವಿಜಯನಗರ ಕಾಲದ ವಿಜಯಕಾವ್ಯ, ಅಭ್ಯುದಯಕಾವ್ಯ ರಚನಾಪದ್ಧತಿಯೇ ಕಾರಣ. ಮೈಸೂರರಸರ ಆಶ್ರಿತಕವಿಗಳು ತಾವು ರಚಿಸಿದ ಮಾಹಾತ್ಮ್ಯ ಹಾಗೂ ಇತರ ಕೃತಿಗಳ ಆರಂಭದಲ್ಲಿ ಆ ರಾಜವಂಶದ ಉಗಮ, ವಂಶಾವಳಿ, ರಾಜರ ಸಾಧನೆ–ಸಾಹಸ ಕುರಿತಂತೆ ಗಮನಾರ್ಹವಾದ ಪ್ರತ್ಯೇಕ ಪ್ರಸ್ತಾಪಗಳನ್ನು ಗ್ರಂಥಾರಂಭದಲ್ಲಿ ತಪ್ಪದೇ ತಂದಿದ್ದಾರೆ. ಇದು ಈ ಪದ್ಧತಿಯ ಇನ್ನೊಂದು ಮುಖದ ಬೆಳವಣಿಗೆಯೇ. ಇಂಥ ವಿಜಯ ಇಲ್ಲವೆ ಅಭ್ಯುದಯಕಾವ್ಯಗಳು ಅರಸರ ಬಗ್ಗೆ ಮಾತ್ರವಲ್ಲ, ತತ್ಕಾಲೀನ ಆಡಳಿತದ ಪ್ರಭಾವಶಾಲೀ ವ್ಯಕ್ತಿಗಳ ಬಗೆಗೂ ಬಂದಿವೆ. ಕೃಷ್ಣರಾಜನ ದಳವಾಯಿಗಳಾದ ಕಳಲೆ ದೇವರಾಜ, ನಂಜರಾಜರನ್ನು ಕುರಿತ ನೂರೊಂದಯ್ಯನ 'ಸೌಂದರಕಾವ್ಯ' ಇದಕ್ಕೊಂದು ನಿದರ್ಶನ. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಇಂಥ ಕೃತಿಗಳ ಮಹಾಪೂರವೇ ಹರಿದಿದೆ. ಶ್ರೀನಿವಾಸನ (೧೮೧೨) 'ಕೃಷ್ಣನೃಪಜಯೋತ್ಕರ್ಷ', ರಂಗದಾಸನ (ಸು. ೧೮೩೦) 'ಕೃಷ್ಣರಾಜ ಡೋಳೋತ್ಸವ ಚರಿತೆ', ಶ್ರೀನಿವಾಸನ (ಸು. ೧೮೩೦) 'ಕೃಷ್ಣರಾಜವರ್ಷವರ್ಧಂತೀ ಶತಕ', ಮದ್ದಗಿರಿ ನಂಜಪ್ಪನ (ಸು. ೧೮೪೦) 'ಕೃಷ್ಣರಾಜೇಂದ್ರವಿಲಾಸ' ಮುಂತಾದುವು. ಈ ಬಗೆಯ ೭ ರಚನೆಗಳು ದೇವಲಾಪುರದ ನಂಜುಂಡನಿಂದ ಆಗಿರುವುದೊಂದು ವಿಶೇಷ. 'ಅಪರಾಧಸ್ತೋತ್ರ', 'ಕೃಷ್ಣರಾಜಪಟ್ಟಾಭಿಷೇಕ ವರ್ಣನೆ', 'ಕೃಷ್ಣರಾಜಭಕ್ತಿಸಾರ', 'ಕೃಷ್ಣರಾಜಭೋಗಾವಳಿ', 'ಕೃಷ್ಣರಾಜ ಶೃಂಗಾರಶತಕ', 'ಕೃಷ್ಣರಾಜೇಂದ್ರ ವೃತ್ತ ರತ್ನಾವಳೀ ಟೀಕೆ', 'ಕೃಷ್ಣೇಂದ್ರಗೀತ' ಎಂಬುವೇ ಅವು.

ಇಂಥ ಕೃತಿಗಳು ಏಕೆ ರಚಿತವಾದುವು ? ಹೊಸ ರಾಜಮನೆತನವೊಂದು ಅಧಿಕಾರಕ್ಕೆ ಬಂದಾಗ, ತನ್ನ ದೃಢವಾದ ಸ್ಥಾಪನೆಗೆ ಸಾಹಿತ್ಯವನ್ನು ಒಂದು ಉಪಕರಣವಾಗಿ ಬಳಸಿಕೊಳ್ಳುತ್ತದೆ. ಮನೆತನಕ್ಕೆ ಪ್ರಾಚೀನತೆ ಮತ್ತು ಜನಾದರಣೆ ದೊರಕಿಸಿಕೊಡಲು ಹಿಂದಣ ರಾಜರ ವೈಭವ-ವಿಕ್ರಮಗಳನ್ನು ಐತಿಹ್ಯದೊಂದಿಗೆ ಬೆರಸಿ ಜನ ಬೆರಗಾಗುವಂತೆ ಬಣ್ಣಿಸಲು ಸಾಹಿತ್ಯದ ನೆರವನ್ನು ಆಶ್ರಯಿಸುತ್ತದೆ. ಚಿಕ್ಕದೇವರಾಜ ಪಟ್ಟಕ್ಕೆ ಬಂದದ್ದು ೧೬೭೩ರಲ್ಲಿ. ಮೈಸೂರು ಅರಸರು ಆಳಲು ತೊಡಗಿದ್ದು ೧೫೭೮ರಲ್ಲಿ. ಎಂದರೆ ಮನೆತನ ನೆಲೆಯೂರಿ ಸುಮಾರು ಒಂದು ಶತಮಾನವಾಗಿತ್ತು. ಮನೆತನದ ಕೀರ್ತನೆಗೆ ಇಂಥ ಕೃತಿಗಳನ್ನು ಆರಂಭಕಾಲದಲ್ಲಿ ರಚಿಸಿದರು. ಮುಮ್ಮಡಿ ಕೃಷ್ಣರಾಜರ ಆಳ್ವಿಕೆಯಲ್ಲೂ ಇಂಥವೇ ಕೃತಿ

ಗಳು ಅಧಿಕವಾಗಿದ್ದುವು. ಆಳ್ವಿಕೆಯ ದೃಷ್ಟಿಯಿಂದ ಅದು ಅಸ್ಥಿರವಾದ ಕಾಲ. ಟಿಪ್ಪು, ಪಾಳೆಯಗಾರರು, ಫೌಜುದಾರರು, ಬ್ರಿಟಿಷ್ ಕಮೀಷನರ ಹಸ್ತಕ್ಷೇಪ ಕಾರಣವಾಗಿ ಕೃಷ್ಣರಾಜರ ಆಳ್ವಿಕೆ ಚೆನ್ನಿರಲಿಲ್ಲ. ರಾಜ್ಯದಲ್ಲೆಲ್ಲ ಆಂತರಿಕ ದಂಗೆ, ಆರ್ಥಿಕ ದುಸ್ಥಿತಿ ತಾಂಡವವಾಡುತ್ತಿತ್ತು. ಹಾಗಾಗಿ ಬ್ರಿಟಿಷ್ ಆಳ್ವಿಕೆಯೇ ಪರೋಕ್ಷವಾಗಿ ರಾಜ್ಯನಡೆಸಿತು. ಆದರೆ ಜನರಿಗೆ ಕೃಷ್ಣರಾಜರೇ ದೊರೆಗಳು ಎಂಬುದನ್ನು ಮನವರಿಕೆ ಮಾಡಿಕೊಡ ಬೇಕಾಗಿತ್ತು. ಆದ್ದರಿಂದ ಸಾಹಿತ್ಯವನ್ನು ಇನ್ನೊಮ್ಮೆ ಉಪಕರಣವಾಗಿಸಿಕೊಂಡು ಅದನ್ನು ಮತ್ತೆಮತ್ತೆ ಹೇಳಿದರು.

ಈ ಅವಧಿಯ ಚಾರಿತ್ರಿಕ ಕಾವ್ಯಗಳ ಪ್ರತ್ಯೇಕತೆಯ ಬಗೆಗೂ ಹೇಳಬೇಕು. ಪಂಪ, ಪೊನ್ನ, ರನ್ನರ ಕೃತಿಗಳಲ್ಲಿ ಚಾರಿತ್ರಿಕಾಂಶಗಳು ಕಥಾವಸ್ತುವಿನೊಂದಿಗೆ ಕಲಸಿಹೋಗಿವೆ. ಆಶ್ರಯದಾತ ರಾಜನನ್ನು ಪುರಾಣಪುರುಷರೊಂದಿಗೆ ಸಮೀಕರಿಸಿದ್ದರಿಂದ ಆ ಕಾವ್ಯಗಳು ಶುದ್ಧ ಚರಿತ್ರೆಗಳಾಗಿಲ್ಲ. ಮಣ್ಣಿನಿಂದ ಹೊನ್ನಿನ ಕಣ ತೆಗೆಯುವಂತೆ ಅಲ್ಲಿ ಚಾರಿತ್ರಿಕಾಂಶ ತೆಗೆಯಬೇಕು. ನಂಜುಂಡ, ಪಾಂಚಾಳಗಂಗರನ್ನು ಬಿಟ್ಟರೆ ನೇರವೂ ಸವಿವರವೂ ಆದ ಚಾರಿತ್ರಿಕ ಕಾವ್ಯಗಳು ಬಂದುದು ಈ ಅವಧಿಯಲ್ಲೇ. ಇದು 'ಕಂಠೀರವ ನರಸರಾಜ ವಿಜಯ'ದಿಂದ ಆರಂಭವಾಗಿ 'ರಾಜಭಕ್ತಿಕಾವ್ಯ'ದವರೆಗೂ ವ್ಯಾಪಿಸಿದೆ. ತಿರುಮಲಾರ್ಯ, ಚಾಮಯ್ಯ, ತಮ್ಮಯ್ಯ, ದೇವಲಾಪುರದ ನಂಜುಂಡರು ಈ ಬಗೆಯ ಒಂದಕ್ಕಿಂತ ಹೆಚ್ಚು ಕೃತಿಗಳ ಕರ್ತೃಗಳು. ರಾಜಾಶ್ರಿತಕವಿಗಳು ತಮ್ಮ ಗ್ರಂಥಾರಂಭದಲ್ಲಿ ಮೈಸೂರು ಅರಸರ ಇತಿಹಾಸ ಹೇಳುವುದು ಒಂದು ಪರಂಪರೆಯೇ ಆಯಿತು.

೩

ಒಡೆಯರ ಕಾಲದ ಸಾಹಿತ್ಯದಲ್ಲಿ ಶ್ರೀವೈಷ್ಣವಧರ್ಮದ ಕೃತಿಗಳು ಹೆಚ್ಚು. ಚಿಕ್ಕದೇವ ರಾಜನ ಹಿಂದಣ ಮುಂದಣ ಅವಧಿಯ ಸಾಹಿತ್ಯದಲ್ಲಂತೂ ಇದರದೇ ಆಧಿಕ್ಯ. ಚಿಕ್ಕದೇವ ರಾಜನ ಹೆಸರಿನಲ್ಲಿರುವ 'ಚಿಕದೇವರಾಜಬಿನ್ನಪ', 'ಗೀತಗೋಪಾಲ', ಚಿಕುಪಾಧ್ಯಾಯನ ಕಮಲಾಚಲ, ಯದುಗಿರಿ, ವೆಂಕಟಗಿರಿ, ಶ್ರೀರಂಗ, ಪಶ್ಚಿಮರಂಗ ಮಾಹಾತ್ಮ್ಯಗಳು, ಆತನದೇ ಆದ 'ದಿವ್ಯಸೂರಿಚರಿತೆ', 'ತಿರುವಾಯ್ಮೊಳಿ ಟೀಕೆ'ಗಳು, ತಿಮ್ಮ, ಮಲ್ಲಿಕಾರ್ಜುನ ಹಾಗೂ ವೆಂಕಟಾರ್ಯಶಿಷ್ಯರು ಬರೆದ ಯಾದವಗಿರಿ, ಶ್ರೀರಂಗ, ವೆಂಕಟಗಿರಿ ಮಾಹಾತ್ಮ್ಯಗಳು, ಚೆನ್ನಯ್ಯ-ಚೆಲುವಾಂಬೆಯರ 'ಪದ್ಮಿನೀಪರಿಣಯ' 'ವರನಂದೀ ಕಲ್ಯಾಣ'ಗಳು ತತ್ಕಾಲೀನ ಶ್ರೀವೈಷ್ಣವಧರ್ಮದ ಪ್ರಾಬಲ್ಯದ ಕುರುಹುಗಳು. ಈ ಕಾಲದಲ್ಲಿ ಭಾಗವತ, ಶ್ರೀನಿವಾಸಕಲ್ಯಾಣ, ಕೃಷ್ಣಕೇಂದ್ರಿತ ವಸ್ತುವಿನ ಕೃತಿಗಳದೇ ಮೇಲಾಟ. ಕಳಲೆ ದಳವಾಯಿಗಳ ಪ್ರವೇಶದವರೆಗೂ ಈ ಪ್ರವೃತ್ತಿ ಕಾಣುತ್ತದೆ. ಶ್ರೀವೈಷ್ಣವಧರ್ಮ ಕರ್ನಾಟಕವನ್ನು ಪ್ರವೇಶಿಸಿದ್ದು ೧೧ನೆಯ ಶತಮಾನದಲ್ಲಿ. ೧೭ನೆಯ ಶತಮಾನದವರೆಗೆ ಕನ್ನಡ ಸಾಹಿತ್ಯ ಚಟುವಟಿಕೆಗಳಲ್ಲಿ ಆ ಧರ್ಮೀಯರು ತಟಸ್ಥರಾಗಿದ್ದರು. ಈಗ ಒಮ್ಮೆಲೆ ಆ ಧರ್ಮದ ಸಾಹಿತ್ಯ ಕನ್ನಡದಲ್ಲಿ ಚಿಮ್ಮಲು ಕಾರಣವೇನು?

ಈ ಹಿಂದೆಯೇ ಹೇಳಿದಂತೆ ಮೈಸೂರರಸರು ವಿಜಯನಗರದ ಅರಸರ ಪರಂಪರೆ, ಪದ್ಧತಿ ಮುಂದುವರಿಸಿಕೊಂಡು ಬಂದರು. ತುಳುವಂಶದ ಕೃಷ್ಣದೇವರಾಯನೇ ಶ್ರೀವೈಷ್ಣವಪಕ್ಷಪಾತಿ. ವೆಂಕಟರಮಣಸ್ವಾಮಿಯಿದ್ದ ತಿರುಪತಿ, ವರದರಾಜಸ್ವಾಮಿಯಿದ್ದ ಕಂಚಿ, ನರಸಿಂಹದೇವರಿದ್ದ ಸಿಂಹಾಚಲಕ್ಕೆ ಆತ ಹಲವು ಬಾರಿ ಹೋಗಿದ್ದ. ಗೋದಾದೇವಿ ರಂಗನಾಥರ ಕಲ್ಯಾಣ ಹೇಳುವ 'ಆಮುಕ್ತಮಾಲ್ಯದ' ರಚಿಸಿದ್ದ. ಅಳಿಯರಾಮರಾಯನ ಕಾಲದ ಮರಿಗಂಟಿ ಸಿಂಗರಾಚಾರ್ಯ 'ವರದರಾಜಸ್ತುತಿ', 'ಚಕ್ರಲಾಂಛನವಿಧಿ', 'ಶ್ರೀರಂಗಶತಕ', 'ರಾಮಕೃಷ್ಣವಿಜಯ', 'ಶ್ರೀಕೃಷ್ಣಶತಾನಂದೀಯ' ಕೃತಿಗಳ ಕರ್ತೃ. ಇವೆಲ್ಲ ಶ್ರೀವೈಷ್ಣವಪರ ರಚನೆಗಳು. ಇದರೊಂದಿಗೆ ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯ, ಆರವೀಡು ಮನೆತನದ ಮೊದಲನೆಯ ಶ್ರೀರಂಗರಾಯರು ಮೇಲು ಕೋಟೆಯ ಚೆಲುವನಾರಾಯಣಸ್ವಾಮಿಗೆ ದಾನ–ದತ್ತಿ ನೀಡಿದ್ದಾರೆ. ಎಂದರೆ ವಿಜಯ ನಗರದ ಅರಸರು ಶ್ರೀವೈಷ್ಣವಧರ್ಮಕ್ಕೆ ಯಥೇಚ್ಛವಾದ ಪೋಷಣೆ–ಪ್ರೋತ್ಸಾಹ ನೀಡಿದರು. ಮೈಸೂರರಸರಿಗೆ ಸಾಮ್ರಾಜ್ಯ, ಸಂಪತ್ತು ದೊರೆತದ್ದೇ ಆರವೀಡು ಮನೆತನ ದವರಿಂದ. ಸಹಜವಾಗಿಯೇ ಅವರ ದೈವಪರಂಪರೆ, ಕ್ರಮ ಇವರೂ ಮುಂದುವರಿಸಿದರು. ಇದರೊಂದಿಗೆ ಒಡೆಯರ ಆ ಕಾಲದ ರಾಜಧಾನಿ ಶ್ರೀರಂಗಪಟ್ಟಣ. ಇದಕ್ಕೆ ಮೇಲುಕೋಟೆ, ಮಂಡ್ಯ, ಮದ್ದೂರು ಮುಂತಾದ ಶ್ರೀವೈಷ್ಣವಕ್ಷೇತ್ರಗಳು ತೀರ ಸಮೀಪವೇ. ಶ್ರೀರಂಗ ಪಟ್ಟಣದ ಅಧಿದೈವವಾದರೂ ಶ್ರೀವೈಷ್ಣವರ ಆರಾಧ್ಯದೈವವಾದ ಶ್ರೀರಂಗನಾಥನೇ. ಈ ಎಲ್ಲ ಕಾರಣಗಳಿಂದ ಮೈಸೂರರಸರ ಮೇಲೆ, ಅವರ ಆಶ್ರಿತರ ಚಟುವಟಿಕೆಗಳ ಮೇಲೆ ಶ್ರೀವೈಷ್ಣವಧರ್ಮದ ಪ್ರಭಾವ ಅನಿವಾರ್ಯವಾಗಿ ಆಯಿತು.

ಸಾಹಿತ್ಯದಲ್ಲಿ ಇದು ವ್ಯಕ್ತಗೊಳ್ಳಲೂ ವಿಶಿಷ್ಟವಾದ ಹಿನ್ನೆಲೆಯಿದೆ. ಚಿಕ್ಕದೇವರಾಜನ ಆಶ್ರಯದಲ್ಲಿದ್ದ ತಿರುಮಲಾರ್ಯ, ಚಿಕುಪಾಧ್ಯಾಯರೆಂಬ ಮಂತ್ರಿ ಸಾಹಿತಿಗಳು ಹುಟ್ಟು ಶ್ರೀವೈಷ್ಣವರು. ಇವರ ಪೂರ್ವಿಕರು ತಮಿಳುನಾಡಿನವರು. ಮೈಸೂರರಸರ ವಂಶಕ್ಕೆ ಪುರಾಣಪರಿವೇಷ ಸೃಜಿಸಿಕೊಟ್ಟದ್ದು ಇವರೇ. ದ್ವಾರಕಾಮೂಲ, ಬ್ರಹ್ಮ–ಅತ್ರಿ–ಚಂದ್ರ-ಬುಧ-ಪುರೂರವರಿರುವ ಯದುವಂಶದ ಪಾಂಶಿಕ ಅನುಕ್ರಮ, ಯದುರಾಯ-ಕೃಷ್ಣರಾಯ ರಿಂದ ಮನೆತನದ ಆರಂಭ ಕಲ್ಪಿಸಿಕೊಟ್ಟದ್ದು ಇವರೇ. ದ್ವಾರಾವತಿ ಸಮುದ್ರದಲ್ಲಿ ಮುಳುಗಿದಾಗ ಕೃಷ್ಣ ತನ್ನ ಅನುಜಾತೆಯಾದ ಚಾಮುಂಡಿಗೆ "ನಮ್ಮ ಕುಲದೈವ ಯದು ಶೈಲದಲ್ಲಿದೆ. ನನ್ನ ವಂಶದ ಮುಂದಿನ ದೊರೆಗಳನ್ನು ಆ ಪರ್ವತದ ದಕ್ಷಿಣಭಾಗದಲ್ಲಿ ನಿಲ್ಲಿಸು" ಎಂದ. ಯಾದವರನ್ನು ಮೈಸೂರಿನಲ್ಲಿ ನೆಲೆಗೊಳಿಸಿ, ಚಾಮುಂಡಿ ತಾನು ಸಮೀಪದ ಬೆಟ್ಟದಲ್ಲಿ ನೆಲಸಿ ನಿಂತಳು. ಇಂಥ ಪೌರಾಣಿಕ ಘಟನೆಯನ್ನೂ ಇವರೇ ಕಲ್ಪಿಸಿಕೊಟ್ಟರು. ದ್ವಾರಕೆ, ಯದು, ಕೃಷ್ಣ ಯಾದವವಂಶ, ಯದುಶೈಲ–ಈ ಸಂಗತಿ ಗಳಿಂದ ಪುಷ್ಟಗೊಂಡ ಪೌರಾಣಿಕ ಹಿನ್ನೆಲೆ ಶ್ರೀವೈಷ್ಣವಧರ್ಮಾನುಸಾರವಾಗಿಯೇ ಇತ್ತು. ಕೃಷ್ಣಕೇಂದ್ರಿತ ಕೃತಿಗಳಲ್ಲಿ ಒಂದೆಡೆ ಶ್ರೀವೈಷ್ಣವಧರ್ಮವನ್ನೂ ಇನ್ನೊಂದೆಡೆ ತತ್ಕಾಲೀನ ದೊರೆಗಳ ಗುಣಸ್ವಭಾವಗಳನ್ನೂ ಆಯಾ ಕಾಲದ ಕವಿಗಳು ಧ್ವನಿಪೂರ್ವಕವಾಗಿಯೂ

ನೇರವಾಗಿಯೂ ವ್ಯಕ್ತಗೊಳಿಸಿದರು. ನಂಜರಾಜ, ದೇವರಾಜ ಎಂಬುವರನ್ನುಳಿದರೆ ಇತರ ಮೈಸೂರು ದೊರೆಗಳ ಹೆಸರುಗಳೆಲ್ಲ ಶ್ರೀವೈಷ್ಣವಪರವಾಗಿದ್ದುದೂ ಇದಕ್ಕೆ ಪೋಷಕವೇ ಆಯಿತು. ತಿಮ್ಮರಾಜ (=ತಿರುಮಲರಾಜ), ಚಾಮರಾಜ (=ಶ್ಯಾಮ, ಕೃಷ್ಣರಾಜ), ಕೃಷ್ಣರಾಜ, ಜಯಚಾಮರಾಜ, ನರಸರಾಜ (=ನರಸಿಂಹರಾಜ) ಎಂಬಲ್ಲೆಲ್ಲ ಕೃಷ್ಣ, ಶ್ರೀನಿವಾಸ, ನರಸಿಂಹ ಎಂಬ ಶ್ರೀವೈಷ್ಣವ ದೈವನಾಮಗಳೇ ಬಂದಿವೆ. ಕೃಷ್ಣರಾಜ, ಚಾಮರಾಜ ಎಂಬುವಂತೂ ಮತ್ತೆ ಮತ್ತೆ ರಾಜನಾಮಗಳಾಗಿ ಬಂದಿವೆ. ಮನೆತನವನ್ನು ದೃಢಗೊಳಿಸಿದ ರಾಜ ಒಡೆಯರು ಆರವೀಡು ಮನೆತನದಂತೆ ಮೇಲುಕೋಟೆಗೆ ನಡೆದುಕೊಂಡರು; ಚೆಲುವನಾರಾಯಣಸ್ವಾಮಿಗೆ 'ರಾಜಮುಡಿ'ಯನ್ನಿತ್ತರು. ಈ ಎಲ್ಲ ಹಿನ್ನೆಲೆಗಳಲ್ಲಿ ಮೈಸೂರರಸರ ಸಾಹಿತ್ಯದಲ್ಲಿ ಶ್ರೀವೈಷ್ಣವಪ್ರವಾಹ ಸಹಜವಾಗಿಯೇ ಗೋಚರಿಸಿತು.

ಒಡೆಯರ ಕಾಲದ ಶ್ರೀವೈಷ್ಣವಪರವಾದ ಅಲೆಗೆ ಪ್ರತಿಯಾಗಿ ಶೈವಪರವಾದ ಅಲೆ ಬಂದದ್ದು ಕಳಲೆಯ ನಂಜರಾಜನ ಕಾಲದಲ್ಲಿ. ಆತ ಮತ್ತು ಆತನ ಆಶ್ರಿತಕವಿಗಳು ಹಲವಾರು ಶೈವಪರ ಕೃತಿಗಳನ್ನು ರಚಿಸಿದರು. ಶಿವಗಂಗೆ, ನಂಜನಗೂಡು, ಭದ್ರಗಿರಿಗಳ ಮೇಲೆ ಮಾಹಾತ್ಮ್ಯಕೃತಿಗಳನ್ನು ನಂಜರಾಜ ಬರೆದ. ತ್ರಿಷಷ್ಟಿಪುರಾತನರ ಬಗ್ಗೆ 'ಶಿವಭಕ್ತವಿಲಾಸದರ್ಪಣ' ರಚಿಸಿ—ಆಳ್ವಾರರ ಚರಿತ್ರೆಗೆ ಪ್ರತಿಯಾಗಿ—ನಾಯನ್ಮಾರರ ಚರಿತೆ ಕನ್ನಡಿಸಿದ: ಹಾಲಾಸ್ಯಮಹಾತ್ಮ್ಯದ ಮೂಲಕ ಶಿವಲೀಲಾಕೀರ್ತನವನ್ನು ವರ್ಧಿಸಿದ. 'ಶಿವಗೀತೆ', 'ಲಿಂಗಪುರಾಣ', 'ಕಾಶೀಕಾಂಡ', 'ಶಿವಧರ್ಮೋತ್ತರಟೀಕು' ಈತನ ರಚನೆಗಳೇ. ಆಶ್ರಿತಕವಿಗಳಾದ ವೆಂಕಟೇಶ ಹಾಗೂ ಕಳಲೆ ಲಿಂಗರಾಜರು ಕ್ರಮವಾಗಿ 'ಹಾಲಾಸ್ಯಮಾಹಾತ್ಮ್ಯ', 'ಲಿಂಗಪುರಾಣ'ಗಳನ್ನು ರಚಿಸಿದರು. ವೈಷ್ಣವಧರ್ಮ–ಸಾಹಿತ್ಯಗಳ ಪ್ರತಿಸ್ಪರ್ಧಿಯಾಗಿ ಶೈವಧರ್ಮ ಹಾಗೂ ಸಾಹಿತ್ಯಗಳು ಬೆಳೆದದ್ದು ಈ ದಳವಾಯಿಯ ಕಾಲದಲ್ಲೇ. ಈ ತಿರುವು ಮುಂದೆ ದೇವಲಾಪುರದ ನಂಜುಂಡ ಮತ್ತಿತರರಿಗೆ ಹಿನ್ನೆಲೆಯಾಯಿತು.

೪

ಒಡೆಯರ ಕಾಲದ ಸಾಹಿತ್ಯದಲ್ಲಿ ಕೆಲವು ವೈಶಿಷ್ಟ್ಯಗಳು ಎದ್ದು ಕಾಣುತ್ತವೆ. ಟೀಕೆ–ವ್ಯಾಖ್ಯಾನಸಾಹಿತ್ಯ, ಮಾಹಾತ್ಮ್ಯಸಾಹಿತ್ಯ, ಪರಿಣಯಕಾವ್ಯ, ಕೃತಿವಸ್ತುನಾವೀನ್ಯ ಒಡನೆಯೇ ಕಾಣುವ ಕೆಲವು ವೈಶಿಷ್ಟ್ಯಗಳು. ಇವನ್ನು ಸ್ವಲ್ಪ ವಿವರದಲ್ಲಿ ನೋಡಬಹುದು. ಮೊದಲಿಗೆ ಟೀಕೆ–ವ್ಯಾಖ್ಯಾನಗಳ ಬಗ್ಗೆ: ಚಾಮರಾಜ ಒಡೆಯರ ಕಾಲದಿಂದ ಜಯಚಾಮರಾಜೇಂದ್ರ ಒಡೆಯರ ಕಾಲದ ವರೆಗೆ ನೂರಾರು ಸಂಸ್ಕೃತಕೃತಿಗಳಿಗೆ ಟೀಕೆ, ವ್ಯಾಖ್ಯಾನ, ತಾತ್ಪರ್ಯ, ಅರ್ಥವಿವರಣ, ಅನುವಾದ ಕಾರ್ಯಗಳು ನಡೆದಿವೆ. ರಾಮಾಯಣ, ಭಾರತ, ಭಾಗವತ, ಸ್ಮೃತಿ, ಪುರಾಣ, ಧರ್ಮಶಾಸ್ತ್ರಗ್ರಂಥಗಳು ಇದರಲ್ಲಿ ಸ್ಥಾನಪಡೆದಿವೆ: 'ವಾಲ್ಮೀಕಿರಾಮಾಯಣ', 'ಬ್ರಹ್ಮೋತ್ತರಖಂಡ'ಗಳಿಗೆ ಚಾಮರಾಜ ಒಡೆಯರು,

'ಭಾಗವತ', 'ಶೇಷಧರ್ಮ', 'ಭಾರತ' (ಶಾಂತಿಪರ್ವಾನಂತರ)ಗಳಿಗೆ ಚಿಕ್ಕದೇವರಾಜ, 'ಕಾಮಂದಕೀಯ', 'ತಿರುವಾಯ್ಮೊಳಿ'ಗಳಿಗೆ ಚಿಕುಪಾಧ್ಯಾಯ, 'ತುಲಾಕಾವೇರಿ ಮಾಹಾತ್ಮ್ಯ'ಕ್ಕೆ ಚೆಲುವಾಂಬೆ, 'ಶಿವಧರ್ಮೋತ್ತರ'ಕ್ಕೆ ಕಳಲೆ ವೀರರಾಜ, 'ಮಾರ್ಕಂಡೇಯ ಪುರಾಣ', 'ಲಿಂಗಪುರಾಣ'ಗಳಿಗೆ ಕಳಲೆ ನಂಜರಾಜರು ಟೀಕೆ ಇಲ್ಲವೆ ವ್ಯಾಖ್ಯಾನ ರಚಿಸಿದ್ದಾರೆ. ಬೃಹತ್‌ಕೃತಿಗಳಿಗೆ ಈ ಟೀಕಾಕಾರ್ಯ ನಡೆದಿದೆ. ಹೆಚ್ಚುಕಡಿಮೆ ಇವೆಲ್ಲ ವೈದಿಕಸಂಸ್ಕೃತಿಯನ್ನು ಪ್ರತಿನಿಧಿಸುವ ಕೃತಿಗಳೇ. 'ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ' ಎಂಬುದರಲ್ಲಿ ಸಂಸ್ಕೃತದ ಹಲವಾರು ಮಹಾಪುರಾಣ, ಉಪಪುರಾಣ, ಸಂಹಿತೆಗಳನ್ನು ಕನ್ನಡೀಕರಿಸುವ ಬೃಹತ್‌ಯೋಜನೆಯನ್ನೇ ಈಚಿನ ದೊರೆಗಳಾದ ಜಯಚಾಮರಾಜರು ಕೈಗೊಂಡರು. ಟೀಕೆ–ವ್ಯಾಖ್ಯಾನ ಬರೆದು ವೈದಿಕ ಸಂಸ್ಕೃತಿಯನ್ನು ಪುನರುಜ್ಜೀವಿಸುವ ಕೆಲಸವನ್ನು ವಿಜಯನಗರದ ಅರಸರೇ ಕೈಗೊಂಡಿದ್ದರು. ಸಾಯಣ–ಮಾಧವರ ವೇದಭಾಷ್ಯ, ವಿದ್ಯಾರಣ್ಯರ ಪರಾಶರಸ್ಮೃತಿವ್ಯಾಖ್ಯಾನ, ಮಾಧವಮಂತ್ರಿಯ ಸೂತಸಂಹಿತಾ ತಾತ್ಪರ್ಯ ದೀಪಿಕೆ, ನರಹರಿಯ ನೈಷಧದೀಪಿಕೆ, ಈಶ್ವರದೀಕ್ಷಿತನ ರಾಮಾಯಣವ್ಯಾಖ್ಯಾನ, ವಿಜಯಧ್ವಜತೀರ್ಥರ ಭಾಗವತವ್ಯಾಖ್ಯಾನ ಬಂದುದು ಅವರ ಕಾಲದಲ್ಲೇ. ಒಡೆಯರು ಆ ಪರಂಪರೆ ಪದ್ಧತಿಗಳನ್ನೇ ಅನುಸರಿಸಿದರು. ಫಲವಾಗಿ ಟೀಕೆ–ವ್ಯಾಖ್ಯಾನ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ನೀಡಿದರು.

ಒಡೆಯರ ಕಾಲದ ಇನ್ನೊಂದು ವೈಶಿಷ್ಟ್ಯ, ಮಾಹಾತ್ಮ್ಯಸಾಹಿತ್ಯರಚನೆ. ಮೇಲುಕೋಟೆ, ಯಾದವಗಿರಿ, ಶ್ರೀರಂಗಪಟ್ಟಣ, ಪಶ್ಚಿಮರಂಗ, ಹಿಮವದ್ಗೋಪಾಲಸ್ವಾಮಿಬೆಟ್ಟ, ಕಮಲಾಚಲ, ಶ್ರೀರಂಗ, ತಿರುಪತಿ/ವೆಂಕಟಗಿರಿ ಕ್ಷೇತ್ರಗಳ ಬಗ್ಗೆ ಮಾಹಾತ್ಮ್ಯಕೃತಿಗಳು ಬಂದಿವೆ. ಇವುಗಳ ಮೇಲೆ ಕ್ರಮವಾಗಿ ೪, ೩, ೨, ೪, ೪ರಂತೆ ಒಟ್ಟು ೧೭ ಕೃತಿಗಳು ರಚಿತವಾಗಿವೆ. ಚಿಕುಪಾಧ್ಯಾಯ, ತಿಮ್ಮ, ಗೋಪಾಲರಾಜ, ರಂಗಾಚಾರ್ಯ, ಮಲ್ಲಿಕಾರ್ಜುನ, ಸಿಂಗರಾರ್ಯ, ಚೆಲುವಾಂಬೆ, ವೆಂಕಕವಿಗಳು ಇವುಗಳ ರಚನೆಯಲ್ಲಿ ಪಾಲುದಾರರು. ಬ್ರಹ್ಮಾಂಡ–ನಾರದೀಯ-ಭವಿಷ್ಯೋತ್ತರ ಪುರಾಣಗಳ ತೀರ್ಥಕಾಂಡಗಳಿಂದ ಈ ಮಾಹಾತ್ಮ್ಯಕಥೆ, ವಸ್ತುಗಳನ್ನು ಆರಿಸಿದೆ. ಕ್ಷೇತ್ರಗಳ ಭೌಗೋಳಿಕ ವರ್ಣನೆ, ತತ್ ಕೇಂದ್ರಿತ ವೈಷ್ಣವಸಮುದಾಯ ಕಥೆಗಳ ನಿರೂಪಣೆ ಇವುಗಳ ಉದ್ದೇಶ. ವೈಷ್ಣವ ದೇವತೆಗಳ, ಆಳ್ವಾರರ, ಕ್ಷೇತ್ರಾಧಿಷ್ಠಾನ ದೈವಸ್ತುತಿಗಳಿಂದ ಗ್ರಂಥಾರಂಭ; ಬಳಿಕ ಮೈಸೂರರಸರ ವಂಶಾವಳಿ, ತತ್ಕಾಲೀನ ರಾಜರ ಗುಣಶೀಲನಿರೂಪಣೆ—ಇದು ಈ ಕೃತಿಗಳ ಸಾಮಾನ್ಯವಾದ ಆರಂಭ. ಇವುಗಳ ಮಾಧ್ಯಮ ಚಂಪು ಅಥವಾ ಗದ್ಯ. ಈ ಮಾಹಾತ್ಮ್ಯಸಾಹಿತ್ಯ ಕೂಡ ತೆಲುಗಿನಿಂದಲೇ ಪ್ರೇರಿತವಾಗಿದೆ. ತೆಲುಗಿನ ಪ್ರಸಿದ್ಧ ಕವಿ ಶ್ರೀನಾಥನ ಭಾವಮೈದುನ ದಗ್ಗುಪಲ್ಲಿ ದುಗ್ಗನ. ಆತನ 'ಶಿವಕಾಂಚೀಮಾಹಾತ್ಮ್ಯ'ದಿಂದ ಈ ಪರಂಪರೆ ತೆಲುಗಿನಲ್ಲಿ ಮೊದಲಾಯಿತು. ಬಳಿಕ ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಧೂರ್ಜಟಿ 'ಶ್ರೀಕಾಳಹಸ್ತೀಶ್ವರಮಾಹಾತ್ಮ್ಯ'ವನ್ನು, ಕೃಷ್ಣದೇವರಾಯನ ಕಿರಿಯ ಸಮಕಾಲಿಕ ರಾಮಕೃಷ್ಣನು 'ಪಾಂಡುರಂಗಮಾಹಾತ್ಮ್ಯ', 'ಘಟಿಕಾಚಲ

ಮಾಹಾತ್ಮ್ಯ'ಗಳನ್ನು, ವೆಲಗಪೂಡಿ ವೆಂಗನ್ನ 'ಸೇತುಮಾಹಾತ್ಮ್ಯ'ವನ್ನು, ಲಿಂಗ ಮುಗುಟು ರಾಮಯ್ಯ 'ಆನಂದಕಾನನಮಾಹಾತ್ಮ್ಯ'ವನ್ನು ರಚಿಸಿದರು. ಇವೆಲ್ಲ ೧೫-೧೬ ನೆಯ ಶತಮಾನದ ರಚನೆಗಳು. ಇವಕ್ಕೆ ವಾಯು-ಸ್ಕಾಂದ-ಪದ್ಮಪುರಾಣಗಳು ಆಕರ. ಇವು ಗಳಲ್ಲಿ ಬಹುಪಾಲು ಶೈವಪರವಾದವು. ವೈಷ್ಣವಪರವಾದವು ಎಂಬುದನ್ನುಳಿದರೆ ಕನ್ನಡ ಮಾಹಾತ್ಮ್ಯಗಳಿಗೆ ಇವೇ ಮಾದರಿ, ಮಾರ್ಗ. ರಾಮಾನುಜಾಚಾರ್ಯರು ಭೇಟಿಯಿತ್ತಿದ್ದ ಸ್ಥಳಗಳನ್ನು ಪ್ರಬಲ ಶ್ರೀವೈಷ್ಣವ ಕ್ಷೇತ್ರಗಳಾಗಿ ಬೆಳೆಸಬೇಕಿತ್ತು. ಹಾಗಾಗಿ ಇಂಥ ಸಾಹಿತ್ಯ ರಚನೆಯಾಯಿತು.

ಪರಿಣಯಕಾವ್ಯಗಳ ವೈಪುಲ್ಯ ಈ ಅವಧಿಯ ಇನ್ನೊಂದು ವೈಲಕ್ಷಣ್ಯ. ಸ್ತ್ರೀ-ಪುರುಷ ಲೇಖಕರಿಬ್ಬರೂ ಇಂಥ ಕೃತಿಗಳನ್ನು ರಚಿಸಿದ್ದಾರೆ. ಶೃಂಗಾರಮ್ಮನ 'ಪದ್ಮಿನೀಕಲ್ಯಾಣ', ಚೆಲುವಾಂಬೆಯ 'ವರನಂದೀಕಲ್ಯಾಣ', ಮುಮ್ಮಡಿ ಕೃಷ್ಣರಾಜನ 'ಉಷಾಪರಿಣಯ' ಹಾಗೂ 'ಸೌಗಂಧಿಕಾಪರಿಣಯ', ಯಾದವನ 'ಕಲಾವತೀಪರಿಣಯ'—ಉಲ್ಲೇಖಿಸಬಹು ದಾದ ಕೆಲ ಕೃತಿಗಳು. ಇವುಗಳಲ್ಲದೆ 'ಪ್ರಭಾವತೀ ಪರಿಣಯ', 'ಮದಾಲಸಾ ಪರಿಣಯ', 'ತಪತೀ ಪರಿಣಯ'ಗಳೂ ಇವೆ. ಈ ಪರಿಣಯಕಾವ್ಯಪರಂಪರೆ ಕಾಣಿಸಿಕೊಳ್ಳಲು ಮತ್ತೆ ವಿಜಯನಗರದ ಅರಸರ ಹಾಗೂ ತೆಲುಗು ಕವಿಗಳ ಪ್ರಭಾವವೇ ಕಾರಣ. ಕೃಷ್ಣದೇವರಾಯನ ಸಂಸ್ಕೃತದ 'ಜಾಂಬವತೀಪರಿಣಯ' 'ಉಷಾಪರಿಣಯ'ಗಳು, ಆತನ ಮಗಳು ಮೋಹನಾಂಬೆಯ 'ಮಾರೀಚೀಪರಿಣಯ', ಅಚ್ಯುತರಾಯನ ಪತ್ನಿ ತಿರುಮಲಾಂಬೆಯ 'ವರದಾಂಬಿಕಾಪರಿಣಯ'ಗಳು ಈ ಹಾದಿಯ ಮಾದರಿ ಕಾವ್ಯಗಳು. ತೆಲುಗಿನಲ್ಲಿ ಸುಮಾರು ೧೫೦೦ರಿಂದ ಪೆನುಮತ್ಸ ವೆಂಕಟಾದ್ರಿ, ಅನಂತಕವಿ, ಕುಮಾರ ಧೂರ್ಜಟಿ, ತೆನಾಲಿ ರಾಮಭದ್ರ, ಪೋಲೂರಿ ಗೋವಿಂದಕವಿ ಅಜ-ಇಂದುಮತಿಯರ ವೃತ್ತಾಂತ ಆಧರಿಸಿದ 'ಇಂದುಮತೀಪರಿಣಯ'ಕೃತಿರಚಕರಾಗಿದ್ದಾರೆ. ಇಂಥ ಕೃತಿಗಳೇ ಕನ್ನಡದ ಪರಿಣಯಕಾವ್ಯಪರಂಪರೆಗೆ ಮಾರ್ಗದರ್ಶಿಯಾಗಿವೆ.

ಇತರ ಕೆಲವು ಸಂಗತಿಗಳಲ್ಲಿಯೂ ವಿಜಯನಗರದ ಅರಸರ ಹಾಗೂ ತೆಲುಗು ಸಾಹಿತ್ಯಗಳ ಪ್ರಭಾವವಿದೆ. ನಿದರ್ಶನಕ್ಕೆ ಕೃಷ್ಣಾರ್ಜುನರ ಕಾಳಗದ ನವೀನ ಕಥಾವಸ್ತು ಕೋನಯ್ಯ, ವೆಂಕಟರಮಣಯ್ಯ ಹಾಗೂ ಇನ್ನೊಂದಿಬ್ಬರು ಕನ್ನಡ ಲೇಖಕರನ್ನು ಆಕರ್ಷಿಸಿದೆ. ಕನ್ನಡ ಭಾರತ, ಭಾಗವತಗಳಲ್ಲಿ ಕಾಣದ ವಿಲಕ್ಷಣ ಕಥಾವಸ್ತುವಿದು. ಬ್ರಹ್ಮಾಂಡಪುರಾಣದ ಈ ಕಥಾವಸ್ತುವನ್ನು ಕೃಷ್ಣದೇವರಾಯನ ಆಸ್ಥಾನಕವಿ ಚರಿಗೊಂಡಧರ್ಮನ ಮೊದಲ ಬಾರಿಗೆ ಬಳಸಿ 'ಚಿತ್ರಭಾರತಂ' ಎಂಬ ಜನಪ್ರಿಯಕೃತಿ ರಚಿಸಿದ. ಬಳಿಕ ನಾದೆಂಡ್ಲ ಗೋಪಮಂತ್ರಿ ಈತನನ್ನು ಅನುಸರಿಸಿದ. ಕನ್ನಡಕವಿಗಳು ಇದರಿಂದಲೇ 'ಕೃಷ್ಣಾರ್ಜುನ ಕಾಳಗ', 'ಕೃಷ್ಣಾರ್ಜುನಸಂಗರ' ಕೃತಿಗಳನ್ನು ರಚಿಸಿದ್ದಾರೆ. ರಾಮಾಯಣ-ಭಾರತ- ಭಾಗವತಗಳನ್ನು ಆಧರಿಸಿಯೇ ರಚಿತವಾಗುತ್ತಿದ್ದ ಕನ್ನಡಕೃತಿಗಳು ವಸ್ತುವಿಗಾಗಿ ಬ್ರಹ್ಮಾಂಡ-ನಾರದೀಯ-ಸ್ಕಾಂದ-ಭವಿಷ್ಯೋತ್ತರ ಪುರಾಣಗಳೆಡೆ ಹೊರಳಿದ್ದು ಮೈಸೂರು ಅರಸರ ಕಾಲದಲ್ಲೇ. ಈ ತಿರುವಿಗಾದರೂ ವಿಜಯನಗರದ ಅರಸರ ಕಾಲದ

ತೆಲುಗು ಕವಿಗಳ ಪ್ರಭಾವವೇ ಕಾರಣ. ಅಲಂಕಾರಶಾಸ್ತ್ರಗ್ರಂಥರಚನೆಯಲ್ಲೂ ಈ ತೆಲುಗು ಪ್ರಭಾವವನ್ನು ಕಾಣಬಹುದು. ಅಳಿಯ ರಾಮರಾಯನ ಸೋದರಳಿಯ ನರಸರಾಜ. ಭಟ್ಟುಮೂರ್ತಿ ಈತನನ್ನು ಕುರಿತ ಸ್ತುತಿಪದ್ಯಗಳಿರುವ 'ನರಸಭೂಪಾಲೀಯಮು' ತೆಲುಗುಕೃತಿ ರಚಿಸಿದ್ದಾನೆ. ೫ ಆಶ್ವಾಸಗಳ ಅಲಂಕಾರ ಗ್ರಂಥವಿದು. ೪ ಪ್ರಕರಣಗಳ ತಿರುಮಲಾರ್ಯನ 'ಅಪ್ರತಿಮವೀರಚರಿತೆ', ೩ ಉಲ್ಲಾಸಗಳ ಅಳಿಯ ಲಿಂಗರಾಜನ 'ನರಪತಿಚರಿತೆ' ಈ ಮಾದರಿಯವೇ. ಎರಡೂ ಚಿಕ್ಕ ಅಲಂಕಾರಶಾಸ್ತ್ರಕೃತಿಗಳೇ. ಮೊದಲನೆಯದರಲ್ಲಿ ಚಿಕದೇವರಾಜನ ಸ್ತುತಿರೂಪದ ಉದಾಹರಣಪದ್ಯಗಳಿವೆ ; ಎರಡನೆಯದರಲ್ಲಿ ಮುಮ್ಮಡಿ ಕೃಷ್ಣರಾಜನ ಬಗ್ಗೆ ಇಂಥ ಪದ್ಯಗಳಿವೆ. ವಿಜಯನಗರಕಾಲದ ತೆಲುಗು ಸಾಹಿತ್ಯದ ಪ್ರೇರಣೆ, ಪ್ರಭಾವ ಇಂಥ ಚಿಕ್ಕವಿಷಯಗಳಲ್ಲೂ ಗೋಚರಿಸುತ್ತದೆ. ಇದು ಆ ಪ್ರಭಾವದ, ಪ್ರಾಬಲ್ಯದ ಕುರುಹು.

೫

ಚಿಕ್ಕದೇವರಾಜ ಮತ್ತು ಮುಮ್ಮಡಿ ಕೃಷ್ಣರಾಜರು ಮೈಸೂರು ಅರಸರಲ್ಲಿ ಪ್ರತ್ಯೇಕ ಕಾರಣಗಳಿಗಾಗಿ ಹೆಸರಾಗಿದ್ದಾರೆ. ರಾಜ್ಯದ ಸುಭದ್ರತೆ, ಸ್ಥಿರತೆ, ಸುಧಾರಣೆಗಳಿಗೆ ಚಿಕ್ಕದೇವರಾಜ ಹೆಸರಾದ ; ವ್ಯತಿರಿಕ್ತವಾಗಿ ಅಭದ್ರತೆ, ಆರ್ಥಿಕ ದುಃಸ್ಥಿತಿ, ಆಡಳಿತದ ಹಸ್ತಾಂತರಗಳಿಗೆ ಮುಮ್ಮಡಿಯವರು ಕಾರಣರಾದರು. ಆದರೆ ಕನ್ನಡಸಾಹಿತ್ಯದ ದೃಷ್ಟಿಯಿಂದ ಈ ಇಬ್ಬರ ಆಡಳಿತಾವಧಿ ಪರ್ವಕಾಲ ; ಸಂಖ್ಯಾಬಾಹುಳ್ಯಕಾಲ. ಚಿಕ್ಕದೇವರಾಜ ಸ್ವತಃ ಸಾಹಿತಿ, ಜತೆಗೆ ಸಾಹಿತಿಗಳ ಪಡೆಯನ್ನೇ ನಿರ್ಮಿಸಿದ. ತಿರುಮಲಾರ್ಯ, ಸಿಂಗರಾರ್ಯ, ಚಿಕುಪಾಧ್ಯಾಯ, ತಿಮ್ಮಕವಿ, ಮಲ್ಲಿಕಾರ್ಜುನ, ಶೃಂಗಾರಮ್ಮ ಹೊನ್ನಮ್ಮರಿಗೆ ಈತ ಆಶ್ರಯ ಕೊಟ್ಟ ; ಅವರ ಸಾಹಿತ್ಯಕ್ಕೆ ಪೋಷಣೆಯನ್ನಿತ್ತ. 'ನೂತನಸಾಹಿತ್ಯಬ್ರಹ್ಮ' ಎಂದು ಈತನನ್ನು ಆ ಕಾಲದ ಸಾಹಿತಿಗಳು ಕೀರ್ತಿಸಿದ್ದಾರೆ. ಈತನ ಕಾಲದಲ್ಲಿ ಚಿಕುಪಾಧ್ಯಾಯ ತಿಮ್ಮರು ಶ್ರೀವೈಷ್ಣವಧರ್ಮದಸೈದ್ಧಾಂತಿಕ ಕೃತಿಗಳನ್ನು ರಚಿಸಿದರು ; ಸಿಂಗರಾರ್ಯ ಕನ್ನಡದ ಉಪಲಬ್ಧನಾಟಕಗಳಲ್ಲಿ ಮೊದಲನೆಯದಾದ 'ಮಿತ್ರವಿಂದಾ ಗೋವಿಂದ' ಬರೆದ; ಊಳಿಗದಲ್ಲಿದ್ದ ಹೊನ್ನಮ್ಮ 'ಹದಿಬದೆಯ ಧರ್ಮ'ವನ್ನು ರಚಿಸಿ ಮಾರ್ಗಪರಂಪರೆಯ ಲೇಖಕಿಯರಿಗೆ ನಾಂದಿ ಹಾಡಿದಳು. ಚಾರಿತ್ರಿಕ ಕಾವ್ಯಸೃಷ್ಟಿ, ಚಂಪೂವಿನ ಪುನರುಜ್ಜೀವನ, ಗದ್ಯಪ್ರಕಾರಪ್ರಯೋಗ, ಲೇಖಕಿಯರಿಗೆ ಪ್ರೋತ್ಸಾಹ ಚಿಕ್ಕದೇವರಾಜನ ಕಾಲದ ವೈಶಿಷ್ಟ್ಯಗಳು.

'ಅಭಿನವಭೋಜ'ರೆಂಬ ಬಿರುದಿಗೆ ಪಾತ್ರರಾಗಿದ್ದ ಮುಮ್ಮಡಿ ಕೃಷ್ಣರಾಜರು ಕೂಡ ಸ್ವತಃ ಸಾಹಿತಿಗಳು, ಸಾಹಿತಿಪೋಷಕರು. ತಿಮ್ಮಪ್ಪದಾಸ, ರಾಮಕೃಷ್ಣಶಾಸ್ತ್ರಿ, ಶ್ರೀನಿವಾಸ, ಅಳಿಯಲಿಂಗರಾಜ, ಕೆಂಪುನಾರಾಯಣ, ಸುಬ್ರಹ್ಮಣ್ಯ, ಮದ್ದಗಿರಿ ನಂಜಪ್ಪ, ಸೀತಾರಾಮ ಸೂರಿ, ದೇವಲಾಪುರದ ನಂಜುಂಡ, ಯಾದವ, ಮುಮ್ಮಡಿಯವರ ಆಸ್ಥಾನಕವಿಗಳು. ... ಪರೋಕ್ಷವಾಗಿ

ಮುಮ್ಮಡಿಯವರಿಂದ ಪೋಷಿತರಾದವರೇ. ಎಂದರೆ ಬ್ರಾಹ್ಮಣ, ವೀರಶೈವ, ಜೈನ ಧರ್ಮೀಯ ಕವಿಗಳಿಗೆ ಅವರು ಆಶ್ರಿತರಾಗಿದ್ದರು. ಮುಮ್ಮಡಿ ಕೃಷ್ಣರಾಜರನ್ನೊಳಗೊಂಡಂತೆ ದೇವಲಾಪುರದ ನಂಜುಂಡ, ಅಳಿಯಲಿಂಗರಾಜರು ವಿಪುಲಸಂಖ್ಯೆಯ ಕೃತಿರಚಕರಾಗಿರುವುದು ಈ ಕಾಲದ ಒಂದು ವೈಶಿಷ್ಟ್ಯ. ಇವರು ಕ್ರಮವಾಗಿ ೫೯, ೧೫ ಮತ್ತು ೫೨ ಕೃತಿಗಳನ್ನು ರಚಿಸಿದ್ದಾರೆ. ಮೂರ್ನಾಲ್ಕನ್ನುಳಿದರೆ ಮುಮ್ಮಡಿಯವರ ಕೃತಿಗಳೆಲ್ಲವೂ ಗದ್ಯದಲ್ಲಿವೆ: ಇದಕ್ಕೆ ವಿರುದ್ಧವಾಗಿ ಅವರ ಅಳಿಯನಾದ ಲಿಂಗರಾಜನ ಕೃತಿಗಳೆಲ್ಲವೂ ಪದ್ಯದಲ್ಲಿವೆ! ಗದ್ಯ, ಚಂಪೂ, ಷಟ್ಪದಿ, ಯಕ್ಷಗಾನ, ಶತಕ, ಹಾಡು—ಹೀಗೆ ನಾನಾ ಸಾಹಿತ್ಯಪ್ರಕಾರಗಳು ಗೋಚರಿಸಿವೆ. ಅನುವಾದಗದ್ಯ, ಟೀಕಾಗದ್ಯ, ಶಾಸ್ತ್ರಗದ್ಯ, ನಿರೂಪಣ ಗದ್ಯ, ಯಕ್ಷಗಾನಗದ್ಯ—ಹೀಗೆ ಗದ್ಯ ನಾನಾಮುಖಗಳಲ್ಲಿ ವ್ಯಕ್ತಗೊಂಡಿವೆ. ಕೆಂಪು ನಾರಾಯಣನ 'ಮುದ್ರಾಮಂಜೂಷ' ಹೊಸಗನ್ನಡ ಗದ್ಯಪ್ರವಾಹದ ಮೊದಲ ಮೊರೆತ; ಒಂದರ್ಥದಲ್ಲಿ ಅದು ಕನ್ನಡದ ಮೊದಲ ಕಾದಂಬರಿ! ಈ ಕಾಲದಲ್ಲಿ ಬಂದ ಹಲವಾರು ಯಕ್ಷಗಾನಗಳಲ್ಲಿ ಹೊಸಗನ್ನಡ ನಾಟಕದ ಮೊದಲ ಸ್ಪಷ್ಟ ಕುರುಹುಗಳಿವೆ. ಒಬ್ಬನೇ ಲೇಖಕನ ವಿಪುಲಕೃತಿರಚನಾನಿರ್ಮಾಣ, ವೈವಿಧ್ಯಪೂರ್ಣ ಗದ್ಯದ ಬಳಕೆ, ಯಕ್ಷಗಾನದ ಆಧಿಕ್ಯ, ಹೊಸಗನ್ನಡ ಸಾಹಿತ್ಯದ ಅರುಣೋದಯ ಇವು ಮುಮ್ಮಡಿ ಕೃಷ್ಣರಾಜರ ಕಾಲದ ವೈಶಿಷ್ಟ್ಯಗಳು.

ಮೈಸೂರರಸರ ಕನ್ನಡಸಾಹಿತ್ಯದ ಕಾಲವಿಸ್ತಾರ ನಿಡಿದಾದದ್ದು; ಮೂರು ಶತಮಾನಗಳ ಇತಿಹಾಸದ್ದು. ಈ ಮನೆತನದ ಮೊದಲ ದೊರೆಗಳು ಪರಂಪರೆಯ ಪುನರುಜ್ಜೀವಕರು. ವಿಜಯನಗರದ ಅರಸರ ಕಾಲದ ಸಾಹಿತ್ಯಿಕ ಧೋರಣೆ, ಚಂಪುವಿನ ಪುನರುದಯ, ವೈದಿಕ ಸಂಸ್ಕೃತಿಯ ಪ್ರಚಾರ, ಭಕ್ತಿಪ್ರಧಾನ ಸಾಹಿತ್ಯಸೃಷ್ಟಿ, ಹಳಗನ್ನಡ ಭಾಷಾ-ಶೈಲಿಗಳ ಬಳಕೆ, ಆಶ್ರಯದಾತರ ಸ್ತವನ, ಚಾರಿತ್ರಿಕಕಾವ್ಯಗಳ ಹೆಚ್ಚಳ ಇವು ಚಾಮರಾಜ, ಕಂಠೀರವ ನರಸರಾಜ, ಚಿಕದೇವರಾಜ, ಇಮ್ಮಡಿ ಕೃಷ್ಣರಾಜರ ಕಾಲದಲ್ಲಿ ಗೋಚರಿಸುವ ಸಂಗತಿಗಳು. ಇವು ಪರಂಪರೆ ಹಾಗೂ ಮಾರ್ಗದೀಕ್ಷೆಗಳ ಪ್ರೌಢಪ್ರಯತ್ನಗಳೇ. ಈ ಮನೆತನದ ಕೊನೆಯ ದೊರೆಗಳು ಪರಿವರ್ತನೆಯ ಹರಿಕಾರರು. ಚಂಪುವಿನ ಅಸ್ತ, ಗದ್ಯದ ವಿಜೃಂಭಣೆ, ಮೊದಲ ನಾಟಕ ಮತ್ತು ಯಕ್ಷಗಾನಗಳ ಬಹುಪ್ರಯೋಗ, ಸಾಂಗತ್ಯದ ಸರಳ ಭಾಷೆ-ಶೈಲಿ, ಕಥನಕೃತಿಗಳ ಅಂಕುರಾರ್ಪಣ ಇವು ಮುಮ್ಮಡಿ ಕೃಷ್ಣರಾಜರ, ಆ ಬಳಿಕ ಚಾಮರಾಜರ ಕಾಲದ ಸಾಹಿತ್ಯಿಕ ವೈಶಿಷ್ಟ್ಯಗಳು. ಇವು ಹೊಸ ಸಾಹಿತ್ಯಕ್ಕೆ ಅಗತ್ಯವಾದ ಸಾಂಸ್ಕೃತಿಕ, ಸಾಹಿತ್ಯಿಕ ವಾತಾವರಣದ ಹಿನ್ನೆಲೆ ಕಲ್ಪಿಸಿಕೊಟ್ಟುವು. ಒಟ್ಟಿನಲ್ಲಿ ಪರಂಪರೆಯ ಪುನರುಜ್ಜೀವನ, ನವೋದಯದ ಪ್ರವರ್ತನೆ ಎರಡು ತುದಿಗಳಾಗಿರುವ ಈ ಮನೆತನದ ಸಾಹಿತ್ಯ ಇನ್ನೂ ವಿಸ್ತಾರವಾದ ಅಧ್ಯಯನಕ್ಕೆ, ಸೂಕ್ಷ್ಮವಾದ ವಿಶ್ಲೇಷಣೆಗೆ ಪಾತ್ರವಾಗಬೇಕಾಗಿದೆ.

ಅನುವಾದದ ಸಿದ್ಧಿ ಅರಳುವುದು ಅದು ಮೂಲದ ಸೌರಭವನ್ನು ಹೊರಸೂಸಿದಾಗ ಮಾತ್ರ. "ಅನುವಾದ—ಮೂಲಕೃತಿಯಿರುವ ಭಾಷೆಯ ಜೀವನಾಡಿಯನ್ನೂ ಅನುವಾದದ ಭಾಷೆಯ ನಾಡಿಯನ್ನೂ ಒಂದೇ ಸಮನಾಗಿ ಅರಿತಿರಬೇಕು. ಇದು ಕೇವಲ ಅವಳ ಉಡುಗೆಯನ್ನಿವಳಿಗಿಡುವ ಕೆಲಸವಷ್ಟೇ ಅಲ್ಲ ; ಅವಳ ರಕ್ತವೂ ಇವಳ ದೇಹದಲ್ಲಿ ಪ್ರವಹಿಸುವಂತೆ ಮಾಡಬೇಕು. ತನ್ಮೂಲಕ ಇವಳ ದೇಹಬಲ, ಸೊಬಗುಗಳು ಇಮ್ಮಡಿಸುತ್ತವೆ : ಮೊದಲಿರದ ಹೊಸಕಳೆ ಇವಳ ಮುಖಕ್ಕೆ ಬರುತ್ತದೆ." (ಎಂ. ರಾಮರಾವ್—ದೇಜಗೌ, ವ್ಯಕ್ತಿ ಮತ್ತು ಸಾಹಿತ್ಯ, ಪು. ೧೪೨). ಈ ಕೆಲಸವನ್ನು ಆಸ್ಥೆಯಿಂದ ಕೈಗೊಂಡು ಕೃತಕೃತ್ಯರಾದವರಲ್ಲಿ ಕೃಷ್ಣಮೂರ್ತಿಯವರು ಪ್ರಮುಖರು. ಅನುವಾದದ

ರಸಗಳಿಗೆ ತಕ್ಕ ಅಭಿವ್ಯಕ್ತಿಯಾಗಿರಬೇಕು.

ಕನ್ನಡ 'ಪ್ರತಿಮಾನಾಟಕ'ವನ್ನೇ ಇಲ್ಲಿ ಅನುವಾದನಿದರ್ಶನವಾಗಿ ಆರಿಸಿಕೊಂಡಿರುವುದಕ್ಕೆ ಒಂದು ಹಿನ್ನೆಲೆಯುಂಟು: ಆಗ ನಾನಿನ್ನೂ ಕುಮಟಾದಲ್ಲಿ ಮಾಧ್ಯಮಿಕ ತರಗತಿಯಲ್ಲಿ ವ್ಯಾಸಂಗಮಾಡುತ್ತಿದ್ದೆ. ನಮ್ಮ ಮನೆಯಲ್ಲಿ ವಿದ್ವಾಂಸರ ವಿದ್ವದ್‌ಗೋಷ್ಠಿಗಳು ಆಗಿಂದಾಗ್ಗೆ ನಡೆಯುತ್ತಿದ್ದವು. ೧೯೬೦ರ ಸಾಹಿತ್ಯಸಮ್ಮೇಳನ ಕುಮಟಾದಲ್ಲಿ ನಡೆದಾಗ ಅದರಲ್ಲಿ ಭಾಗವಹಿಸಿದ ಅನೇಕ ಪಂಡಿತರಿಗೆ ಬಿಡಾರದ ವ್ಯವಸ್ಥೆ ಸರಿಯಾಗಿರಲಿಲ್ಲ. ತೀ.ನಂ.ಶ್ರೀ. ಪ್ರೋ. ಶಂ. ಸುಬ್ರಹ್ಮಣ್ಯಶಾಸ್ತ್ರಿ, ದೇವುಡು, ವಿ.ಸೀ., ನಂದೀಮಠ, ಬೇಂದ್ರೆ, ಆರ್. ಸಿ. ಹಿರೇಮಠ, ಡಿ. ಎಲ್., ಎನ್. ಎಚ್. ಎಂ. ಶಂಕರನಾರಾಯಣರಾವ್ ಮೊದಲಾದವರು ನಮ್ಮ ಮನೆಯಲ್ಲಿ ಸೇರಿದ್ದರು. ಸರಸಸಲ್ಲಾಪ ನಡೆದಾಗ ನಮ್ಮ ತಂದೆಯವರು ಅದೇ ತಾನೇ ತಾವು ಬರೆದು ಮುಗಿಸಿದ್ದ ಕನ್ನಡ ಪ್ರತಿಮಾನಾಟಕವನ್ನು ಅವರ ಗಮನಕ್ಕೆ ತಂದರು. ಅತಿಥಿಗಳಿಗೆ ಅದು ಮೆಚ್ಚುಗೆಯಾಯಿತು. ಅಂದಿನ ಆ ಘಟನೆ ಇಂದಿಗೂ ನನ್ನ ಕಣ್ಣೆದುರು ಕಟ್ಟಿದಂತಿದೆ. ಮುಂದೆ ಈ ಪ್ರೋತ್ಸಾಹವೇ ಕಾರಣವಾಗಿ ಅನೇಕ ಸಂಸ್ಕೃತನಾಟಕಗಳನ್ನು ನಮ್ಮ ತಂದೆ ಕನ್ನಡಿಸಿದರು.

ಈ ನಾಟಕದ ಅನುವಾದದ ರಚನೆಗೆ ಮೊದಲು, ಮೈಸೂರು ಸೀತಾರಾಮಶಾಸ್ತ್ರಿಯವರ ಅನುವಾದ ಇದ್ದರೂ, ಅದು ತೃಪ್ತಿಯನ್ನು ಕೊಡದೇ ಇದ್ದುದರಿಂದ ಕನ್ನಡ ಪ್ರತಿಮಾನಾಟಕದ ರಚನೆಯಾಯಿತು. ಪ್ರಸ್ತಾವನೆಯ ಸಮಾಪ್ತಿವಾಕ್ಯದಲ್ಲಿ ಹೀಗೆ ಸಂಕಲ್ಪವಿದೆ :

ಭಾಸಂ ಸುರವಾಗ್ವನಿತೆಯ
ಹಾಸಂ ಸಮೆದಿಟ್ಟ ಮೂಲಪ್ರತಿಮಾಬಿಂಬಂ
ಕನ್ನಡಿಯೊಳ್ ಪ್ರತಿಬಿಂಬಿಸು
ವನ್ನಂ ತಾಂ ಕೃಷ್ಣಮೂರ್ತಿ ಕನ್ನಡಿಸಿರ್ಪಂ ॥ (ಪ. ೧)

ಪಲತೆರದಿಂ ಪ್ರತಿಕೃತಿಗಳ್
ಸಲೆಯಿರ್ಪುವು ಭಾಸಕೃತಿಗೆ ಕನ್ನಡನುಡಿಯೊಳ್
ಬೆಲೆಯನಿದರ್ಕಂ ಪ್ರಜ್ಞೋ
ಪಲದೊಳ್ ತವೆ ತಿಕ್ಕಿ ನೋಳ್ಕೆ ನಾಟಕರಸಿಕರ್.॥ (ಪ. ೩)

ಕೃಷ್ಣಮೂರ್ತಿಗಳ ಅನುವಾದದೊಂದಿಗೆ ಮೈಸೂರು ಸೀತಾರಾಮಶಾಸ್ತ್ರಿಗಳ ಕರ್ಣಾಟ ಪ್ರತಿಮಾನಾಟಕವನ್ನು ತೌಲನಿಕವಾಗಿ ಪರಿಶೀಲಿಸಲು ಇಲ್ಲಿ ಪ್ರಯತ್ನಿಸಿದ್ದೇನೆ. ಶಾಸ್ತ್ರಿಗಳ ಗದ್ಯಾನುವಾದದ ಒಂದು ಮಾದರಿ :

"ಆರ್ಯ! ದೇವಾಸುರಯುದ್ಧಗಳಲ್ಲಿ ಅಪ್ರತಿಹತವಾದ ಮಹಾರಥವುಳ್ಳ ದಶರಥಮಹಾರಾಜನು ಯುವರಾಜನಾದ ಶ್ರೀರಾಮನ ರಾಜ್ಯಾಭಿಷೇಕಕ್ಕೆ ಬೇಕಾದ ಸಂಬಾರಗಳನ್ನು ಬೇಗ ಸಜ್ಜುಗೊಳಿಸಬೇಕೆಂದು ಆಜ್ಞಾಪಿಸಿ ಇರುವನು. (ಪು. ೪)

ಇದು ಕೃಷ್ಣಮೂರ್ತಿಗಳ ಅನುವಾದದಲ್ಲಿ :

"...ದಶರಥ ಮಹಾರಾಜನು ಹೀಗೆ ಬೆಸಸುತ್ತಾನೆ : ರಾಜಕುಮಾರ ರಾಮನಿಗೆ ರಾಜ್ಯಭಾರಾಧಿಕಾರ ವಹಿಸಿಕೊಡಲು ಬೇಕಾಗುವ ಅಭಿಷೇಕದ ಸಾಮಗ್ರಿಗಳನ್ನೆಲ್ಲಾ ತ್ವರೆಯಿಂದ ತರುವುದು ಎಂದು."

ಅನುವಾದ ಕೆಲವೊಮ್ಮೆ ಮೂಲದಲ್ಲಿರುವುದನ್ನೇ ಯಥಾವತ್ತಾಗಿ ಚಿತ್ರಿಸಿದಾಗಲೂ, ಅದಕ್ಕೆ ಕನ್ನಡ ಚೌಕಟ್ಟನ್ನು ಮಾತ್ರ ಕಟ್ಟಿದರೆ ಆಗಲೂ ಭಾಷಾಸೌಂದರ್ಯ ಕೆಡುತ್ತದೆ.

ಹಾ ! ವತ್ಸ ರಾಮಾ ನಯನಾಭಿರಾಮ
ಹಾ ! ವತ್ಸೆ ಮೈಥಿಲಿ ಮನೋಜ್ಞಚರಿತ್ರೆ ! ಹಾ ಹಾ !!

ಅಲ್ಲದೆ ಇಲ್ಲಿ ಕನ್ನಡದಲ್ಲಿ ಖ್ಯಾತ ಕರ್ಣಾಟಕವೃತ್ತಗಳನ್ನು ಬಿಟ್ಟು ಬೇರೆಯವನ್ನು ಬಳಸಲಾಗಿದೆ. ಅಂತೆಯೇ ಬಹಳ ಬಿಗಿಯಾದ ಗದ್ಯವೂ ಹೃದ್ಯವಾಗಲಾರದು—

"ಯುವರಾಜನಾದ ರಾಮನ ರಾಜ್ಯವಿಭ್ರಂಶದಿಂದೊದಗಿದ ಸಂತಾಪದಿಂದ ದಿವಂಗತನಾದ ದಶರಥ ಮಹಾಪ್ರಭುವಿನ ಪ್ರತಿಮಾಗೃಹವನ್ನು ನೋಡಲು ಈಗ ಕೌಸಲ್ಯಾದಿ ಸಕಲಾಂತಃಪುರಸ್ತ್ರೀಯರೂ ಇಲ್ಲಿಗೆ ಬರುವರೆಂದು ನಾನು ನಿನಗೆ ತಿಳಿಸಿರಲಿಲ್ಲವೇ ? (ಪು. ೨೯).

ಇದರ ಸಂಗಡ ಕೃಷ್ಣಮೂರ್ತಿಯವರ ಅನುವಾದದ ಸರಳತೆಯನ್ನು ಹೋಲಿಸಿ ನೋಡಬಹುದು :

"ರಾಜಪುತ್ರನಾದ ರಾಮನು ರಾಜ್ಯಭ್ರಷ್ಟನಾದನಲ್ಲ ಎಂಬ ಕಡುಶೋಕದಿಂದ ದಶರಥ ಮಹಾರಾಜನು ದಿವಂಗತನಾದನು. ಅವನ ಈ ಗೃಹವನ್ನು ನೋಡಲು ಈ ದಿನ ಕೌಸಲ್ಯೆಯೇ ಮೊದಲಾಗಿ ಅಂತಃಪುರದವರೆಲ್ಲರೂ ಬರಬೇಕಾಗಿದೆ ಎಂದು. ಇದರ ಬಗ್ಗೆ ನೀನೇನು ಮಾಡಿರುವೆ ?" (ಪು. ೭೦).

ಸಂಸ್ಕೃತ ಪದಗಳನ್ನು ಹಾಗೆಯೇ ಬಳಸಿ ಕೆಲವೊಂದು ಪ್ರತ್ಯಯಗಳನ್ನೋ ಕ್ರಿಯಾಪದಗಳನ್ನೋ ಸೇರಿಸಿಬಿಟ್ಟರೆ ಅದು ನಿಜವಾದ ಅನುವಾದವಾಗಲಾರದು. ಅಲ್ಲಿ ಕನ್ನಡ ಭಾಷೆ ತನ್ನ ಚೇತನವನ್ನು ಕಳೆದುಕೊಂಡು ಜಡವಾಗುತ್ತದೆ. ಶಾಸ್ತ್ರಿಗಳ ಅನುವಾದ :

ಇದೆ ಪಿತೃವುಂ ಭ್ರಾತೃವುಮಿ
ಲ್ಲದೆ ಕಾಡೆನಿಸಿರ್ಪಯೋಧ್ಯೆಗೀಗಳ್ ಬಾಯಾ
ಱಿದ ಮನುಜಂ ನೀರ್ಬತ್ತಿದ
ನದಿಗತಿಜವದಿಂದೆ ಪೋಪ ತೆಱದಿಂ ಪೋಪೆಂ॥ (೩–೧೧)

ಕೃಷ್ಣಮೂರ್ತಿಗಳ ಅನುವಾದದಲ್ಲಿ, ಅದರ ಸರಳತೆಯನ್ನು ಈಗ ನೋಡಿ :

ತಂದೆಯುಮಣ್ಣನುಮಿಲ್ಲದಿ
ದೊಂದುರುವನಮಪ್ಪಯೋಧ್ಯೆಯಂ ಬಳಿವಿಡಿದೈ
ತಂದೆಂ ನೀರಡಿಸಿದವಂ
ಸುಂದರಜಲಮೊಣಗಿ ಪೋದ ತೊರೆಗೋಡುವವೋಲ್॥ (೩–೧೧)

ಮೂಲದಲ್ಲಿ ಇಲ್ಲದ ಕಠಿಣತೆಯನ್ನು ಅನಾವಶ್ಯಕವಾಗಿ ಅನುವಾದ ಅಳವಡಿಸಿಕೊಳ್ಳುವುದು ವೈಫಲ್ಯಕ್ಕೆ ಕಾರಣವಾಗುತ್ತದೆ. ರೂಢಿಯಲ್ಲಿರುವ ತಂದೆ, ಅಣ್ಣ ಮೊದಲಾದ

ಶಬ್ದಗಳು ಪದ್ಯಕ್ಕೆ ಸಹಜತೆಯನ್ನು ಒದಗಿಸುತ್ತವೆ.

ಒಂದು ಸಣ್ಣ ಶ್ಲೋಕಕ್ಕೆ ಕ್ಲಿಷ್ಟವಾದ ವೃತ್ತ ಬಳಸಿರುವುದರಿಂದ ಆ ಅನುವಾದ ಹೇಗೆ ವಿಫಲವಾಗುತ್ತದೆಯೆಂಬುದನ್ನೀಗ ನೋಡೋಣ :

ಇದು ನೋಡಿಂ ಪ್ರತಿಮಾತ್ಸ್ವಮಂ ತಳೆದ ನಮ್ಮುರ್ವೀಶನಾ ಗೇಹಮು
ಭ್ಯುದಯಶ್ರೀವಡೆದಂತು ಸೌಧತಳದಲ್ಲಿರ್ಪಂದಿವಂ ದುರ್ಲಭಂ
ಇದೆ ಪಾಂಥಾವಳಿಯಿಂದು ತಾಂ ಪಡಿಯರರ್ ಬಂದಡ್ಡಿಯಂ ಮಾಡದಿ
ರ್ಪುದರಿಂ ವಂದನೆವಿಟ್ಟು ಸನ್ನಿಧಿಯೊಳೇ ನಿಂದೋಲಗಕ್ಕಿಂ ಗಡಾ (೩-೧೪)

ಒಂದು ಸಣ್ಣ ಕಂದಪದ್ಯದಲ್ಲಿ ಕೃಷ್ಣಮೂರ್ತಿಯವರು ಹೇಗೆ ಇದನ್ನು ಸುಂದರವಾಗಿಸಿದ್ದಾರೆ ಎಂಬುದನ್ನು ನೋಡೋಣ :

ಇದೆಯರಸನ ಪ್ರತಿಮಾಗೃಹ
ಮಿದರುನ್ನತಿ ಮೀರಿಸಿರ್ಪುದಾ ನೃಪಗೃಹಮಂ
ತಡೆಯುವ ಪಡಿಯರರಿಲ್ಲಂ
ಪೊಡಮಡುವುದುಮಿಲ್ಲ ಪಾಂಥರುಂ ಬಳಿಸಾರ್ವರ್॥ (೩-೧೩)

ಮೂಲದಲ್ಲಿರುವ 'ರಸ' ಅನುವಾದದಲ್ಲೂ ಕೂಡ ಪ್ರವಹಿಸಬೇಕು. ಇಲ್ಲದಿದ್ದರೆ ರಸ ಸಂವಹನವಾಗದೆ, ರಸಾಸ್ತವಾಗುತ್ತದೆ. ಉದಾ :

ಮೆರೆವೆನ್ನೀ ಮಾತೆಯರಿ
ರ್ವ್ವರ ಮಧ್ಯದೆ ಮಿಳಿತೆಯಾದ ನೀಂ ಶೋಭಿಸೆ ಭಾ
ಸುರ ಗಂಗಾಯಮುನೆಯರಂ
ತರದೊಳ್ ಸಂಗತಿಯನಾಂತ ಕುನದಿಯ ತೆರದಿಂ ॥ (೩-೧೭)

ಕೃಷ್ಣಮೂರ್ತಿಯವರ ಅನುವಾದ ಹೀಗಿದೆ :

ಕಡುಪಿಂ ಮಾತೆಯರಿರ್ವರ
ನಡುವೆಯೆ ನೀಂ ನಿಂದಿರಲ್ಕೆ ಶೋಭಿಸದೆಂತುಂ ।
ಒಡನೆಯೆ ಗಂಗೆಯ ಯಮುನೆಯ
ನಡುವೆಯೆ ತಾಂ ಕುನದಿ ಕೂಡಿದಂತೆವೊಲೀಗಳ್ (೩-೧೯)

ರಸ, ಭಾವವನ್ನು ಅನುವಾದದಲ್ಲಿ ಸವಿದಾಗ ಮಾತ್ರ ಸಹೃದಯನಿಗೆ ಅದರ ನಿಜವಾದ ಸ್ವಾರಸ್ಯ. ಹಾಗಲ್ಲದೆ ವಿಷಮಸಂಸ್ಕೃತಪದಪ್ರಯೋಗಗಳಿಂದ "ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತೆ" ಹಿಂಸೆಯಾಗುತ್ತದೆ.

ಘನಧೀರಂ ಸ್ಪಷ್ಟಮುದ್ಯದೃಷಭರವದವೋಲ್ ಸ್ನಿಗ್ಧಮಾಧುರ್ಯಯುಕ್ತ
ಜನಿತೋತ್ಕಂಠಂ ಕಲಲಕಂಠದೊಳುರದೊಳಸಂರುದ್ಧ ಪಂಚಾರ ವೇಗಂ
ಅನುವಿಂ ತಾಣಂಗಳೊಳ್ ಸೇರ್ದೆಸೆವುದರಿನೇಕಾಕ್ಷರಾಕಾರಮಾಗು
ತ್ತನುರಾಗಂಗೊಂಡು ನಾಲ್ವರ್ಣಕಮುಭಯವನೀಯಲ್ಕೆ ಸಂದಂತೆ ತೋರ್ಕುಂ ।

ಈಗ ಕೃಷ್ಣಮೂರ್ತಿಯವರ ಅನುವಾದವನ್ನು ನೋಡಿ :

ಧೀರಘನಂ ಸ್ಫುಟಂ ಸುಮಧುರಂ ವೃಷಭೇಂದ್ರನ ಘೋಷದಂತೆವೋಲ್
ಭೂರಿಯಿದಿಂಚರಂ ಕೊರಲೊಳಂತೆರ್ದೆಯೊಳ್ ಸಮಘಾತಬಂಧುರಂ
ಸೇರುತುಮೊಪ್ಪುತಂತೆ ಕರಣಂಗಳಿನುಣ್ಮುವ ವರ್ಣಶೋಭೆಯಿಂ–
ದೋರಣವಾಗಿ ಕಾಪುಗುಡುವಂತಿದು ನೀಳ್ದುದು ನಾಲ್ಕು ವರ್ಣಕಂ ॥ (೪–೭)

೫ನೆಯ ಅಂಕದ ಪ್ರಕೃತಿವರ್ಣನೆಯಲ್ಲಿ (೪–೭) ಬರುವ ಬಳಕೆಯಲ್ಲಿಲ್ಲದ ಪದಗಳ ಹೇರಿಕೆ ಓದುಗನ ಆಸಕ್ತಿ ಕುಗ್ಗಿಸುತ್ತದೆ :

ಅವನಿರುಹಾಲವಾಲದೆ ಜಲಂ ನೊರೆಗೂಡಿ ಸಮಂತು ಸುತ್ತುಗಂ
ಸವನಿಸೆ ತೃಷ್ಣೆ ಸಾರ್ದು ವಿಹರಾಂಜಲಮಂ ಶ್ರಮವಿಲ್ಲದೀಂಟುಗುಂ
ವಿವರದೆ ತೀವೆ ನನೆದ ಕೀಟಕುಲಂ ಸ್ಥಲಕ್ಕೈಮುಗಂ ದ್ರುಮಂ
ನವವಲಯಂಗಳಂ ತಳೆದುವಿಂತಡಿಯೊಳ್ ಜಲನಾಶಲೇಖೆಯಿಂ ॥ (೫–೨)

ಈಗ ಕೃಷ್ಣಮೂರ್ತಿಯವರ ಅನುವಾದದ ವೈಖರಿಯನ್ನು ನೋಡೋಣ :

ಸುಳಿವುದು ನೀರ್ ಸುವೃಕ್ಷಗಳ ಪಾತಳಿಯೊಳ್ ನೊರೆಗಟ್ಟುತೆತ್ತಲುಂ
ಜಲಕಡಸಿರ್ದೊಡಂ ಕೆಸರಿದೆಂದು ಖಗಂ ತವೆ ನೀರನೀಂಟಿವೀ
ನೆಲದೆಡೆಗೀಗ ಸಾರ್ವುವು ಬಿಲಂ ಜಲಪೂರ್ಣಮದಾಗೆ ಕೀಟಗಳ್
ಒಳಗೆಣ ವೃಕ್ಷಮೂಲದೆ ಜಲಕ್ಷಯರೇಖೆಗಳೀಗಳೆತ್ತಲುಂ ॥ (೫–೨)

ಮೇಲಿನ ಅನುವಾದದಲ್ಲಿ ಅರ್ಥ ವಿವರಣೆಯೇ ಬೇಕಿಲ್ಲದೆ ತಾನೇ ತಾನಾಗಿ ವಿವರಿಸುತ್ತದೆ. ಅನುವಾದಕರ ಕಲಾಪ್ರತಿಭೆಗೆ ಇಂತಹ ಪದ್ಯಗಳು ಒಳ್ಳೆಯ ಉದಾಹರಣೆಗಳಾಗುತ್ತವೆ.

ತವೆ ಬಡಿದೆನಿಂದ್ರನಂ ವೈ
ಶ್ರವಣನನದಿರಿಸಿದೆನೀಳ್ದಿನೀಶನನರಿದೆಂ
ಜವನಂ ಭಯಮಾಂಪಮರರ
ದಿವದಿಂದೇಂ ನೀಂ ವಸಿಪ್ಪ ನೆಲನಿದು ಧನ್ಯಂ ॥ (೫–೧೭)

ಮುರಿದೆಂ ಶಕ್ರನನಂತೆ ಪಾಡಳಿಸಿದೆಂ ವಿತ್ತೇಶನಂ ಬಲ್ಪಿನಿಂ
ಸೆಳೆದೆಂ ಸೋಮನನಂತೆ ಸೂರ್ಯಸುತನಂ ನುರ್ಗಪ್ಪಿನಂ ಪೊಯ್ದೆನಾಂ ।
ಭಯಗೊಂಡೋಡಿದ ದೇವರಿರ್ಕೆಯೆನಿಪಾ ಸಗ್ಗಕೆ ಧಿಕ್ಕಾರಮೆಂ
ದೊಡೆ ವೈದೇಹಿಯನಾಂತ ಭೂಮಿಯೆ ವಲಂ ಧನ್ಯಾಸ್ಪದಂ ನಿಕ್ಕುವಂ ॥ (೫–೧೭)

ಮೂಲದಲ್ಲಿ ಕ್ರಮಕ್ರಮವಾಗಿ ದಿಕ್ಪಾಲಕರನ್ನು ಗೆದ್ದವನು ಶಿಖರಕ್ಕೇರುವ ಪ್ರತಾಪ ವರ್ಣನೆ ಇಲ್ಲಿ ಕಬ್ಬಿನ ಸಿಪ್ಪೆಯಂತೆ ಸಪ್ಪೆಯಾಗಿದೆ. ಅಲ್ಲದೆ ಮೂಲದಲ್ಲಿ ಅರ್ಥಪೂರ್ಣವಾಗಿ ಹೆಸರಿಸಿದ ದೇವಾಧಿದೇವತೆಗಳ ಎಷ್ಟೋ ಹೆಸರೇ ಶಾಸ್ತ್ರಿಗಳ ಅನುವಾದದಲ್ಲಿ ಲುಪ್ತವಾಗಿ ಮೂಲದ ನ್ಯೂನತೆಯ ದೋಷ ಪ್ರಾಪ್ತವಾಗಿದೆ. ಆದರೆ ಕೃಷ್ಣಮೂರ್ತಿಯವರ 'ಪ್ರತಿಮಾನಾಟಕ'ದಲ್ಲಿ ಅದಕ್ಕೆ ನ್ಯಾಯ ದೊರೆತಿದೆ.

ಹೀಗೆ ಅನುವಾದಶಕ್ತಿಯನ್ನು ಕರಗತ ಮಾಡಿಕೊಂಡಿರುವ ಸಿದ್ಧಿಯನ್ನು ನಾವು ಪ್ರತಿ

ಪದ್ಯದಲ್ಲೂ ಕಾಣಬಹುದಾಗಿದೆ. ಇದು ಅವರ ಸಂಸ್ಕೃತ–ಕನ್ನಡ ಭಾಷೆಗಳ ವಿದ್ವತ್ತನ್ನು ಪ್ರದರ್ಶಿಸುತ್ತದೆ. ಕಂದವೃತ್ತಗಳಲ್ಲಿ ಅವರ ಭಾಷಾಪ್ರೌಢಿಮೆ ಹೊರಹೊಮ್ಮಿದೆ. ಮೂಲದ ರಸ, ಅಲಂಕಾರ, ಛಂದಸ್ಸು ಯಾವುದನ್ನೂ ಮೊಟಕುಗೊಳಿಸದೆ ಅದೇ ಸ್ವಂತಕೃತಿಯೋ ಎನ್ನುವಂತೆ ಸಲೀಲವಾಗಿ ಹರಿದಿದೆ ಅವರ 'ಪ್ರತಿಮಾನಾಟಕ'ದ ಅನುವಾದದಲ್ಲಿ.

ದೇಜಗೌ ಅವರು ತಮ್ಮ 'ಗದ್ಯಶೈಲಿ' ಪುಸ್ತಕದಲ್ಲಿ ಕೃಷ್ಣಮೂರ್ತಿಯವರನ್ನು ಕುರಿತು ಹೇಳಿರುವ ಮಾತು :

"ಸಂಸ್ಕೃತಾಂಗ್ಲಕನ್ನಡಸಾಹಿತ್ಯಸಾಗರಗಳಲ್ಲಿ ಸಲೀಲವಾಗಿ ಈಜಾಡಬಲ್ಲ ಕೆ. ಕೃಷ್ಣಮೂರ್ತಿಯವರ ಪಾಂಡಿತ್ಯ ಹಾಗೂ ಲೇಖನಸಾಮರ್ಥ್ಯ ಅನಾದೃಶವಾದುದು. ಅವರ ಭಾಷೆಯಲ್ಲಿ ಕಂಡುಬರುವ ಸಂಸ್ಕೃತಪ್ರಾಚುರ್ಯದ ಹೆಚ್ಚಳ ಸಹಜ ಮಾತ್ರವಲ್ಲ, ಕಮನೀಯವಾದದ್ದು. ಕನ್ನಡಕ್ಕೆ ಹೊರೆಯಾಗದಂತೆ, ಹೆರವಾಗದಂತೆ, ಹೊಂದಿಕೊಳ್ಳುವಂತೆ ಸಂಸ್ಕೃತಪದಗಳನ್ನು ಬಳಸುವುದರಲ್ಲಿ ಅವರು ನಿಸ್ಸೀಮರು. ಸೂಕ್ಷ್ಮಾತಿಸೂಕ್ಷ್ಮಭಾವದಿಂದ ಹಿಡಿದು ಗಹನಸಂಗತಿಯವರೆಗೆ ಅದೆಷ್ಟೇ ಕ್ಲಿಷ್ಟವಾಗಿರಲಿ ಸುಲಭಗ್ರಾಹ್ಯವಾಗುವಂತೆ ರೂಪಿಸಬಲ್ಲ ಸಾಮರ್ಥ್ಯದಿಂದಾಗಿ ಅವರ ಶೈಲಿ, ಸರಳತೆ ಪ್ರೌಢತೆಗಳೆರಡನ್ನೂ ಮೈಗೂಡಿಸಿಕೊಂಡಿದೆ."

## ಪ್ರಶಸ್ತಿಗಳು, ಬಹುಮಾನಗಳು

೧೯೪೨ ನವೀನಮ್ ರಾಮಾನುಜಾಚಾರ್ಯ ಚಿನ್ನದ ಪದಕ (ಬಿ.ಎ. ಆನರ್ಸ್‌ನಲ್ಲಿ ಮೊದಲಿಗರಾದದ್ದು)

— ಪೂರ್ಣ ಕೃಷ್ಣರಾವ್ ಚಿನ್ನದ ಪದಕ(ಬಿ.ಎ. ಆನರ್ಸ್‌ನಲ್ಲಿ ಮೊದಲಿಗರಾದದ್ದು)

೧೯೪೩ ನವೀನಮ್ ರಾಮಾನುಜಾಚಾರ್ಯ ಚಿನ್ನದ ಪದಕ (ಎಂ.ಎ. ಪರೀಕ್ಷೆಯಲ್ಲಿ ಮೊದಲಿಗರಾದದ್ದು)

* * *

೧೯೩೯ ಬಾಪು ಸುಬ್ಬರಾವ್ ಸ್ಮರಣ ಬಹುಮಾನ (ಇಂಟರ್‌ಮೀಡಿಯೆಟ್ ಪರೀಕ್ಷೆಯಲ್ಲಿ ಮೊದಲಿಗರಾದದ್ದು)

೧೯೪೧ ಶ್ರೀಮನ್ ಮಹಾರಾಜರ ಬಹುಮಾನ (ಸಾಹಿತ್ಯವಿದ್ವತ್ ಪರೀಕ್ಷೆಯಲ್ಲಿ ತೇರ್ಗಡೆ)

೧೯೪೨ ಕಸ್ತೂರಿ ಅಯ್ಯಂಗಾರ್ ಬಹುಮಾನ (ಬಿ.ಎ. ಆನರ್ಸ್‌ನಲ್ಲಿ ಮೊದಲಿಗರಾದದ್ದು)

— ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ ಬಹುಮಾನ. (ಕನ್ನಡ ಪಂಡಿತ ಪರೀಕ್ಷೆಯಲ್ಲಿ ಮೊದಲಿಗರಾದದ್ದು)

* * *

೧೯೫೧ ನವೀನಮ್ ರಾಮಾನುಜಾಚಾರ್ಯ ಬಹುಮಾನ (ಶ್ರೇಷ್ಠ ಸಂಸ್ಕೃತಲೇಖನ)

೧೯೫೭ ೧೯೫೯, ೧೯೬೦ ಹಾಗೂ ೧೯೬೨ ಕನ್ನಡದ ಶ್ರೇಷ್ಠ ಪುಸ್ತಕಗಳಿಗೆ ಬಹುಮಾನ (ಸರ್ಕಾರದ ವತಿಯಿಂದ)

೧೯೬೪ ಮಹಾರಾಣಿ ಸೇತು ಪಾರ್ವತಿ ಬಹುಮಾನ, ಕೇರಳ ವಿಶ್ವವಿದ್ಯಾಲಯ, ತ್ರಿವೇಂದ್ರಮ್

---

* ಕೃಷ್ಣಮೂರ್ತಿಯವರ ಇಂಗ್ಲಿಷ್ ಭಾಷಾಗ್ರಂಥಗಳ ಮತ್ತು ಲೇಖನಗಳ ಸೂಚಿಯನ್ನು 'ಆನಂದಭಾರತಿ'ಯಲಿ ಕೊಡಲಾಗಿದೆ.

೧೯೭೦ ಮೈಸೂರು ವಿಶ್ವವಿದ್ಯಾನಿಲಯ ಸ್ವರ್ಣಮಹೋತ್ಸವ ಪ್ರಶಸ್ತಿ, ಮೈಸೂರು
೧೯೭೨ ಮೈಸೂರು ಸರ್ಕಾರದ ಸಾಹಿತ್ಯಬಹುಮಾನ, ಮೈಸೂರು
೧೯೭೩ ಕರ್ನಾಟಕ ಸರ್ಕಾರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಉತ್ತಮ ಸಾಹಿತ್ಯ ಕಾರ್ಯಕ್ಕೆ)
೧೯೭೭ ಕನ್ನಡ ಸಾಹಿತ್ಯ ಪರಿಷತ್ ವಜ್ರಮಹೋತ್ಸವ, ಬೆಂಗಳೂರು (ಪಾಂಡಿತ್ಯ)
೧೯೭೮ ಭಾರತ ಸರ್ಕಾರದ ರಾಷ್ಟ್ರಪತಿಗಳ "ಸರ್ಟಿಫಿಕೇಟ್ ಆಫ್ ಆನರ್", ಹೊಸ ದೆಹಲಿ (ಪಾಂಡಿತ್ಯ ಹಾಗೂ ಶಾಸ್ತ್ರನಿಷ್ಠೆಗಾಗಿ)
೧೯೮೦ ಮೈಸೂರು ವಿಶ್ವವಿದ್ಯಾನಿಲಯ ಸುವರ್ಣ ಮಹೋತ್ಸವ ಪ್ರಶಸ್ತಿ, ಮೈಸೂರು
— ಕಾಣೆ ಚಿನ್ನದ ಪದಕ, ಬಾಂಬೆ ಏಷಿಯಾಟಿಕ್ ಸೊಸೈಟಿ, ಬೊಂಬಾಯಿ
೧೯೮೩ ಉತ್ತರ ಪ್ರದೇಶ ಸಂಸ್ಕೃತ ಅಕಾಡೆಮಿ ಪ್ರಶಸ್ತಿ
೧೯೮೯ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಬೆಂಗಳೂರು
೧೯೯೦ ಸಂಸ್ಕೃತ ಸಂದರ್ಶಕ-ಪ್ರಾಧ್ಯಾಪಕರು, ಭಾರತೀಯ ವಿದ್ಯಾ ಭವನ್, ಲಂಡನ್

## ಬರಹಗಳು

### ಸ್ವತಂತ್ರ ಕೃತಿಗಳು

೧೯೫೩ ಭವಭೂತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೫೮ ರಸೋಲ್ಲಾಸ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
— ಮಹಾಭಾರತ, ಪ್ರಸಾರಾಂಗ, ಮೈ.ವಿ.ವಿ.ನಿಲಯ, ಮೈಸೂರು
೧೯೬೨ ಭಾಸನ ಆರು ಕಿರುನಾಟಕಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
೧೯೬೩ ಕಾಳಿದಾಸನ ನಾಟಕಗಳು, ಪ್ರಸಾರಾಂಗ, ಮೈಸೂರು ವಿ.ವಿ.ನಿಲಯ, ಮೈಸೂರು
— ಸಂಸ್ಕೃತಸಾಹಿತ್ಯದಲ್ಲಿ ಶೃಂಗಾರರಸ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೬೫ ಕನ್ನಡದಲ್ಲಿ ಕಾವ್ಯತತ್ತ್ವ, ಶಾರದಾ ಮಂದಿರ, ಮೈಸೂರು
೧೯೭೧ ಭಾರತೀಯ ಕಾವ್ಯಮೀಮಾಂಸೆ : ತತ್ತ್ವ ಮತ್ತು ಪ್ರಯೋಗ, ಬೆಂಗಳೂರು
೧೯೭೩ ಪಾಣಿನಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
— ಸಂಸ್ಕೃತ ಕಾವ್ಯ, ಪ್ರಸಾರಾಂಗ, ಮೈ.ವಿ.ವಿ.ನಿಲಯ. ಮೈಸೂರು
೧೯೭೯ ರುಚಿ, ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ
೧೯೮೦ ಬಾಣಭಟ್ಟ, ಸಾಹಿತ್ಯ ಅಕಾಡೆಮಿ, ಹೊಸದೆಹಲಿ
೧೯೮೪ ಭವಭೂತಿ, ಸಾಹಿತ್ಯ ಅಕಾಡೆಮಿ, ಹೊಸದೆಹಲಿ
— ಬಸವಣ್ಣನವರ ವಚನಗಳ ಮೀಮಾಂಸೆ, ಕನ್ನಡ ಅಧ್ಯಯನ ಪೀಠ, ಧಾರವಾಡ
೧೯೮೯ ಸೃಜನಶೀಲತೆ ಮತ್ತು ಪಾಂಡಿತ್ಯ, ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೧೯೯೦ ಭಾಸ, ಸಾಹಿತ್ಯ ಅಕಾಡೆಮಿ, ಹೊಸದೆಹಲಿ

## ಅನುವಾದ ಗ್ರಂಥಗಳು

೧೯೫೧ ಆನಂದವರ್ಧನನ ಕಾವ್ಯಮೀಮಾಂಸೆ ಮತ್ತು ಕನ್ನಡ ಧ್ವನ್ಯಾಲೋಕ, ಶಾರದಾ ಮಂದಿರ, ಮೈಸೂರು

೧೯೫೪ ಕನ್ನಡ ಪ್ರತಿಮಾ ನಾಟಕ (ಭಾಸ), ಶಾರದಾ ಮಂದಿರ, ಮೈಸೂರು (ಪುನರ್ ಮುದ್ರಣಗಳು : ೧೯೫೭, ೧೯೬೫, ೧೯೭೧ ಹಾಗೂ ೧೯೮೪)

— ಕನ್ನಡ ಕಿರಾತಾರ್ಜುನೀಯ (ಭಾರವಿ), ಮೈಸೂರು

೧೯೫೫ ಕನ್ನಡ ಉತ್ತರರಾಮಚರಿತ, (ಭಟ್ಟನಾರಾಯಣ) ಶಾರದಾಮಂದಿರ, ಮೈಸೂರು (ಪುನರ್ಮುದ್ರಣಗಳು : ೧೯೫೯, ೧೯೬೪, ೧೯೬೫, ೧೯೭೪)

— ಕನ್ನಡ ಕಾವ್ಯಾಲಂಕಾರ (ಭಾಮಹ), (ದ್ವಿತೀಯ ಆವೃತ್ತಿ ೧೯೬೨)

೧೯೫೭ ಲುಪ್ತದಿಗಂತ (ಜೇಮ್ಸ್ ಹಿಲ್ಟನ್), ಐ.ಎಸ್.ಎಸ್.ಡಿ ಪ್ರೆಸ್, ಮದ್ರಾಸ್

೧೯೫೮ ಕನ್ನಡ ಮೃಚ್ಛಕಟಿಕ, ಶಾರದಾ ಮಂದಿರ, ಮೈಸೂರು (ದ್ವಿತೀಯ ಮುದ್ರಣ) : ೧೯೮೬, ಗೀತಾ ಬುಕ್ ಹೌಸ್)

೧೯೬೧ ಕನ್ನಡ ಔಚಿತ್ಯ ವಿಚಾರ ಚರ್ಚೆ (ಕ್ಷೇಮೇಂದ್ರ), ಶಾರದಾ ಮಂದಿರ, ಮೈಸೂರು

೧೯೬೨ ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ, ಶಾರದಾ ಮಂದಿರ, ಮೈಸೂರು

— ಮುದ್ರಾರಾಕ್ಷಸ ಕಥಾಸಾಗರ, ಶಾರದಾಮಂದಿರ, ಮೈಸೂರು

೧೯೬೬ ಕಾವ್ಯಾಲಂಕಾರ ಸೂತ್ರವೃತ್ತಿ (ವಾಮನ), ಶಾರದಾ ಮಂದಿರ, ಮೈಸೂರು

೧೯೬೭ ಕನ್ನಡ ಕಾವ್ಯಪ್ರಕಾಶ, ಶಾರದಾ ಮಂದಿರ, ಮೈಸೂರು (ದ್ವಿತೀಯ ಆವೃತ್ತಿ ೧೯೭೩)

— ಚಂಪೂರಾಮಾಯಣ (ಅರಣ್ಯಕಾಂಡ), ಮೈಸೂರು

೧೯೬೯ ಕನ್ನಡ ಕಾವ್ಯಮೀಮಾಂಸೆ (ರಾಜಶೇಖರ) ಶಾರದಾ ಮಂದಿರ, ಮೈಸೂರು

— ಕನ್ನಡ ಶಾಕುಂತಲ (ಕಾಳಿದಾಸ), ಶಾರದಾ ಮಂದಿರ, ಮೈಸೂರು

೧೯೭೦ ಕನ್ನಡ ದೂತಘಟೋತ್ಕಚ ಮತ್ತು ಕರ್ಣಭಾರ, ಶಾರದಾಮಂದಿರ, ಮೈಸೂರು

— ಕನ್ನಡ ಮಧ್ಯಮವ್ಯಾಯೋಗ, ಶಾರದಾ ಮಂದಿರ, ಮೈಸೂರು

೧೯೭೩ ಕವಿರಾಜಮಾರ್ಗ, ಐ.ಬಿ.ಎಚ್. ಬೆಂಗಳೂರು

೧೯೭೪ ಕನ್ನಡ ಆಶ್ಚರ್ಯಚೂಡಾಮಣಿ (ಶಕ್ತಿಭದ್ರ), ಶಾರದಾ ಮಂದಿರ, ಮೈಸೂರು

೧೯೭೫ ಕನ್ನಡ ಕಾವ್ಯಾದರ್ಶ (ದಂಡಿ), ಶಾರದಾಮಂದಿರ, ಮೈಸೂರು

೧೯೭೭ ಕವಿಕಂಠಾಭರಣ (ಕ್ಷೇಮೇಂದ್ರ), ಶಾರದಾ ಮಂದಿರ, ಮೈಸೂರು

೧೯೮೧ ಧರ್ಮಶಾಸ್ತ್ರದ ಇತಿಹಾಸ, ಸಂ. ೧ (ಪಿ. ವಿ. ಕಾಣೆ) ಕನ್ನಡ ಅನುವಾದ, ಮೈಸೂರು ವಿಶ್ವವಿದ್ಯಾಲಯ

## ಪಠ್ಯಪುಸ್ತಕಗಳು

೧೯೫೪ ಕನ್ನಡ ಪ್ರತಿಮಾನಾಟಕ, ಶಾರದಾ ಮಂದಿರ, ಮೈಸೂರು (ಪುನರ್ ಮುದ್ರಣಗಳು : ೧೯೫೭, ೧೯೬೫, ೧೯೭೧, ೧೯೮೪)

೧೯೬೭ ಚಂಪೂರಾಮಾಯಣ, ಅರಣ್ಯಕಾಂಡ. ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೯೬೮ ಕಾವ್ಯಸಂಗ್ರಹ, ಜಿ. ಮರುಳಸಿದ್ಧಯ್ಯನವರೊಂದಿಗೆ ಸಹಸಂಪಾದಕತ್ವ, (ಬಿ.ಎ., ಬಿ.ಎಸ್‌ಸಿ. ತರಗತಿಗಳಿಗೆ) ಮೈಸೂರು

೧೯೭೧ ಸಂಸ್ಕೃತ ಸೌದಾಮಿನಿ, (ಎಂ.ಎ. ತರಗತಿಗಳಿಗೆ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

— ಸಂಸ್ಕೃತ ಗದ್ಯ-ಪದ್ಯ, ಶ್ಯಾನಭಾಗರೊಂದಿಗೆಸಹಸಂಪಾದಕತ್ವ,(ಬಿ.ಎ.ಬಿ.ಎಸ್‌ಸಿ, ತರಗತಿಗಳಿಗೆ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೭೨ ಸಂಸ್ಕೃತ ಗದ್ಯ-ಪದ್ಯ, ಪಠ್ಯಪುಸ್ತಕ, ಎಂ.ಪಿ.ಎಲ್. ಶಾಸ್ತ್ರಿಗಳೊಂದಿಗೆ (ಪಿ.ಯು.ಸಿ. ತರಗತಿಗಳಿಗೆ) ಸಹ ಸಂಪಾದಕತ್ವ

— ಮಾಲವಿಕಾಗ್ನಿಮಿತ್ರಮ್, ಮೋಡಕ ಹಾಗೂ ಇತರರೊಂದಿಗೆ ಸಹಸಂಪಾದಕತ್ವ, (ಬಿ.ಎ.,ಬಿ.ಎಸ್‌ಸಿ. ತರಗತಿಗಳಿಗೆ) ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

೧೯೭೩ ಪ್ರತಿಜ್ಞಾ ಯೌಗಂಧರಾಯಣ, ಸಹಸಂಪಾದಕತ್ವ ಕೆ. ಟಿ. ಪಾಂಡುರಂಗಿ ಅವರೊಂದಿಗೆ, ಬೆಂಗಳೂರು

೧೯೭೪ ಕುಮಾರಸಂಭವ (೫ನೇ ಸರ್ಗ), ಕರ್ನಾಟಕ ವಿಶ್ವವಿದ್ಯಾಲಯ (ಬಿ.ಎ.,ಬಿ.ಕಾಂ. ಬಿ.ಎಸ್‌ಸಿ. ತರಗತಿಗಳಿಗೆ) ಧಾರವಾಡ

— ಭಾರತೀಯ ಸಾಹಿತ್ಯ ಚರಿತ್ರೆ, ಸಂ. ೩—ಭಾಗ. ೨ ಶಾಸ್ತ್ರೀಯ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೭೩ ಎಸ್.ಎಸ್.ಎಲ್.ಸಿ., ಪಠ್ಯಪುಸ್ತಕ, ಬೆಂಗಳೂರು

೧೯೭೫ ಸ್ವಪ್ನವಾಸವದತ್ತಾ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೯೭೭ ಮೇಘದೂತಮ್, ಸಹಸಂಪಾದಕತ್ವ ದ.ನಾ. ಶ್ಯಾನಭೋಗರೊಂದಿಗೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

## ಲೇಖನಗಳು

೧೯೫೬ ಕಥಾಮೃತ, ಅಭಿವಂದನೆ, ಎ. ಆರ್. ಕೃಷ್ಣಶಾಸ್ತ್ರಿಗಳ ಸಂಭಾವನ ಗ್ರಂಥ, ಮೈಸೂರು.

೧೯೬೦ ಶಂಕರ ಅದ್ವೈತ ವೇದಾಂತ, ಬೆಳಗು, ಧಾರವಾಡ

೧೯೬೧ ನ್ಯಾಯ ವೈಶೇಷಿಕ ಮತ್ತು ಆಧುನಿಕ ಭಾರತೀಯ ತತ್ತ್ವಶಾಸ್ತ್ರ (ಅನುವಾದ ಎರಡು ಅಧ್ಯಾಯಗಳು)

— ಮಹಾರ್ಥ ಮಂಜರಿ, ನೈವೇದ್ಯ, ಧಾರವಾಡ

೧೯೬೩ ಕನ್ನಡದಲ್ಲಿ ಅಲಂಕಾರ ಗ್ರಂಥಗಳು, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಬೆಂಗಳೂರು

೧೯೬೪ ಗಂಗಾದೇವಿ, ಮೈಸೂರು ದಸರಾ ವಸ್ತುಪ್ರದರ್ಶನ ಸಂಚಿಕೆ, ಮೈಸೂರು

೧೯೬೭ ಸಂಸ್ಕೃತ ಮಹಾಕವಿಗಳ ಜೀವನ, ಪ್ರಜಾವಾಣಿ ದೀಪಾವಳಿ ಸಂಚಿಕೆ, ಬೆಂಗಳೂರು

೧೯೬೮ ಎ. ಆರ್. ಕೃಷ್ಣಶಾಸ್ತ್ರಿಗಳ 'ಸಂಸ್ಕೃತ ನಾಟಕ', ಪ್ರಬುದ್ಧ ಕರ್ನಾಟಕ,

— ಕಳೆದ ಅರ್ಧ ಶತಮಾನದಲ್ಲಿ ಕನ್ನಡಕ್ಕೆ ಬಂದ ಸಂಸ್ಕೃತಗ್ರಂಥಗಳು, ಪ್ರಬುದ್ಧ ಕರ್ನಾಟಕ, ಸುವರ್ಣ ಮಹೋತ್ಸವ ಸಂಚಿಕೆ, ಮೈಸೂರು

— ಕುವೆಂಪು ಅವರ ಕಾವ್ಯಮೀಮಾಂಸೆ, ಗಂಗೋತ್ರಿ, ಕುವೆಂಪು ಅಭಿನಂದನಾ ಗ್ರಂಥ, ಮೈಸೂರು

— ವಿನಯಮೂರ್ತಿ, ವ್ಯಕ್ತಿ ಮತ್ತು ಸಾಹಿತ್ಯ, ದೇಜಗೌ ಅಭಿನಂದನ ಗ್ರಂಥ

೧೯೬೯ ವಿನಾಯಕರ ಕಾವ್ಯಮೀಮಾಂಸೆ, ವಿ.ಕೃ. ಗೋಕಾಕರ ಷಷ್ಟ್ಯಬ್ದಿ ಮಹೋತ್ಸವ ಗ್ರಂಥ, ಮೈಸೂರು

೧೯೭೦ ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ (೧೯೧೫–೭೦), ಕನ್ನಡ ಸಾಹಿತ್ಯ ಪರಿಷತ್ ಸ್ವರ್ಣ ಮಹೋತ್ಸವ ಸಂಪುಟ

— ಸಂಸ್ಕೃತ ಸಾಹಿತ್ಯದಲ್ಲಿ ಸ್ತ್ರೀಯರು, ಪ್ರಜಾವಾಣಿ ದೀಪಾವಳಿ ಸಂಚಿಕೆ

— ಸಂಸ್ಕೃತ ನಾಟಕ ಸಮೀಕ್ಷೆ, ಸವಿನೆನಪು 'ಟಿ. ಎಸ್. ವೆಂಕಣ್ಣಯ್ಯ' ಸ್ಮರಣಗ್ರಂಥ.

೧೯೭೧ ಗೀತೆ—ಜೀವನ ಧರ್ಮಶಾಸ್ತ್ರ, ೨೧೬, ಗೀತಾಜ್ಞಾನಯಜ್ಞ ಸಂಚಿಕೆ, ಶಿವಮೊಗ್ಗ

— ಎ. ಆರ್. ಕೃಷ್ಣಶಾಸ್ತ್ರೀ ಮತ್ತು ಸಂಸ್ಕೃತನಾಟಕ, ಎ. ಆರ್. ಕೃಷ್ಣಶಾಸ್ತ್ರೀ ಜೀವನ ಸಾಧನೆ, ಮೈಸೂರು

— ಸಂಸ್ಕೃತ ಕವಿಗಳಿಗೆ ಸಂಬಂಧಿಸಿದ ದಂತಕತೆಗಳು, ಪ್ರಜಾವಾಣಿ, ದೀಪಾವಳಿ ಸಂಚಿಕೆ

— ವ್ಯಾಸ, ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

— ವಾಲ್ಮೀಕಿ, ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೧೯೭೨ ಶ್ರೀ ಅರವಿಂದರ ಕಾವ್ಯಮೀಮಾಂಸೆ, ಅರವಿಂದೋ ಜನ್ಮಶತಾಬ್ದಿ ಸಂಚಿಕೆ, ಬೆಂಗಳೂರು

೧೯೭೩ ಶ್ರೀ ಅರವಿಂದರ ಕಾವ್ಯಮೀಮಾಂಸೆ, ಅರವಿಂದೋ ಜನ್ಮಶತಾಬ್ದಿ ಸಂಚಿಕೆ ಬೆಂಗಳೂರು

ಕನ್ನಡಕ್ಕೆ ಹಿನ್ನೆಲೆಯಾದ ಸಂಸ್ಕೃತ ಕಾವ್ಯಗಳು, ಕ.ಸಾ.ಪ. ಪತ್ರಿಕೆ

೧೯೭೩ ನಾಗವರ್ಮನ ಕಾವ್ಯಾವಲೋಕನದ ಕಾವ್ಯಲಕ್ಷಣ (ಒಂದು ಟಿಪ್ಪಣಿ), ಕ.ಸಾ.ಪ. ಪತ್ರಿಕೆ

೧೯೭೪ ಪಂಪನ ಸಂಸ್ಕೃತ ಹಿನ್ನೆಲೆ, 'ಪಂಪ', ವಿಚಾರಸಂಕಿರಣ, ಸಂಪುಟ, ಬೆಂಗಳೂರು

— ಕಾವ್ಯದ ಶರೀರ ಮತ್ತು ಆತ್ಮ ವಿಮರ್ಶೆ, ಕನ್ನಡ ನುಡಿ, ಬೆಂಗಳೂರು

— ಕಾವ್ಯಾದರ್ಶ ಮತ್ತು ರತ್ನಶ್ರೀಜ್ಞಾನ ಟೀಕೆಯ ವೈಶಿಷ್ಟ್ಯ, ಕರ್ನಾಟಕ ಭಾರತಿ

೧೯೭೫ ಭಾರತೀಯ ಕಾವ್ಯಮೀಮಾಂಸೆಗೆ ಕುವೆಂಪು ಕೊಡುಗೆ, ಸಹ್ಯಾದ್ರಿ, ಕುವೆಂಪು ಅಭಿನಂದನ ಗ್ರಂಥ

— ರಸ ಪ್ರತೀತಿಯೋ ಪ್ರತೀತಿ ವಿಷಯವೋ ಕ.ಸಾ.ಪ. ಪತ್ರಿಕೆ, ಸಂ. ೫೦

— ರಸೋ ವೈ ಸಃ, ಕುವೆಂಪು ಸಾಹಿತ್ಯ, ಕೆಲವು ಅವಲೋಕನಗಳು, ಮೈಸೂರು

— ಭಾರತೀಯ ಸಂಸ್ಕೃತ ಹಿನ್ನೆಲೆ (ಅನುವಾದ) ಯುಗಯಾತ್ರೀ ಭಾರತೀಯ ಸಂಸ್ಕೃತಿ, ಮೈಸೂರು

— ಕಾವ್ಯ ಹಾಗೂ ಶಾಸ್ತ್ರ ಸಾಹಿತ್ಯ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಕ.ಸಾ.ಪ. ಪತ್ರಿಕೆ, ಸಂ. ೩

೧೯೭೬ ಕುಮಾರವ್ಯಾಸನಲ್ಲಿ ವಿದ್ಯಾಪರಿಣತರ ಅಲಂಕಾರ, 'ಸಾಹಿತ್ಯಜೀವಿ', ಜಿ. ವೆಂಕಟಸುಬ್ಬಯ್ಯ ಅಭಿನಂದನ ಗ್ರಂಥ

— ಕಾವ್ಯದಲ್ಲಿ ಶಬ್ದ ಮತ್ತು ಅರ್ಥ, 'ಶ್ರೀಕಂಠತೀರ್ಥ', ತೀ.ನಂ. ಶ್ರೀ ಅಭಿನಂದನ ಗ್ರಂಥ

೧೯೭೭ ಸಾಹಿತ್ಯವಿಮರ್ಶಕ ಬೇಂದ್ರೆ, 'ಇಳಿದು ಬಾ ತಾಯಿ', ಧಾರವಾಡ

— ಕನ್ನಡ-ಸಂಸ್ಕೃತ-ಪ್ರಾಕೃತ 'ವಜ್ರಮಹೋತ್ಸವ' ಸಂಚಿಕೆ, ಕ.ಸಾ.ಪ. ಪತ್ರಿಕೆ

೧೯೭೮ ಕನ್ನಡದಲ್ಲಿ ಶಾಕುಂತಲ, ಕ.ಸಾ.ಪ. ಸಾಹಿತ್ಯ ವಿಹಾರ

— ಲೋಕಸಂಗ್ರಹ, ನಂದನವನ, ರಾಘವೇಂದ್ರ ಸ್ವಾಮೀಜಿ ಅಭಿನಂದನ ಗ್ರಂಥ, ಮಲ್ಲಾಡಿಹಳ್ಳಿ

— ಧರ್ಮ ಒಂದು ವಿವೇಚನೆ, 'ಆರೋಹಣ', ವೀರೇಂದ್ರ ಹೆಗ್ಗಡೆ ಅಭಿನಂದನ ಗ್ರಂಥ, ಧರ್ಮಸ್ಥಳ

೧೯೭೯ ಶಂಕರಾಚಾರ್ಯರ ಅಮರಕೃತಿಗಳ ಗುರಿ ಹಾಗೂ ಸಿದ್ಧಿ, ಅಧ್ಯಾತ್ಮ ಪ್ರಕಾಶ ಸಂಚಿಕೆ

೧೯೮೦ ಕಣವಿ ವ್ಯಕ್ತಿತ್ವ: ಕೆಲವು ಅನಿಸಿಕೆಗಳು, ಬೆಂಬೆಳಕು, ಕಣವಿ ಅಭಿನಂದನ ಗ್ರಂಥ, ಧಾರವಾಡ

— ಗದ್ಯಶೈಲಿ, ರಸಷಷ್ಟಿ, ದೇ.ಜ.ಗೌ. ಷಷ್ಟ್ಯಭಿನಂದನ ಗ್ರಂಥ

— ಛಂದಸ್ಸು: ಉಗಮ, ನಿಷ್ಪತ್ತಿ, ಸಾಮಾನ್ಯಸ್ವರೂಪ ಮತ್ತು ಪ್ರಯೋಜನ, ಕನ್ನಡ ಛಂದಸ್ಸಿನ ಚರಿತ್ರೆ, ಭಾಗ—೧, ಮೈಸೂರು

೧೯೮೦ ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಅಭಿವ್ಯಂಜಕತೆ, ಅಧ್ಯಯನ, ಶಂಬಾ ಅಭಿನಂದನ ಗ್ರಂಥ, ಬೆಂಗಳೂರು

೧೯೮೧ ಷಡಕ್ಷರಿ ಮತ್ತು ಭಾರವಿ, ಸುತ್ತೂರು ಸ್ವಾಮೀಜಿ ಅಭಿನಂದನ ಗ್ರಂಥ

— ಕನ್ನಡದಲ್ಲಿ ಸಂಸ್ಕೃತ ನಾಟಕಗಳು, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ

— ರಾಮಾಯಣದ ಮಹೋನ್ನತಿ, ಸಪ್ತಗಿರಿ, ತಿರುಪತಿ

— ಭಾರತೀಯ ಕಾವ್ಯಮೀಮಾಂಸೆಗೆ ಹಿನ್ನೆಲೆಯಾದ ಭಾರತೀಯ ತತ್ತ್ವಶಾಸ್ತ್ರ, ಕಾವ್ಯಾನಂದ, ಸಿದ್ಧಯ್ಯಪುರಾಣಿಕ ಅಭಿನಂದನ ಗ್ರಂಥ, ಬೆಂಗಳೂರು

೧೯೮೨ ವಿದ್ಯಾನಂದವಾಣಿ, ಮಂಜುವಾಣಿ, ಧರ್ಮಸ್ಥಳ

— ಲಾಂಜೈನಸ್ ಪ್ರತಿಪಾದಿಸುವ 'ಸಬ್‌ಲೈಮ್' ಮತ್ತು ಭಾರತೀಯ ಕಾವ್ಯ ಮೀಮಾಂಸಕರ ಧ್ವನಿ, ಬೆಳುವಲ, ಬೆಟಗೇರಿ ಕೃಷ್ಣಶರ್ಮ ಅಭಿನಂದನಾ ಗ್ರಂಥ, ರಾಯಬಾಗ

— ಆಲೂರು ವೆಂಕಟರಾಯರು ವೇದಾಂತಿಯಾಗಿ, ಕರ್ನಾಟಕ ಕುಲಪುರೋಹಿತ ಜನ್ಮಶತಾಬ್ದಿ ಗ್ರಂಥ, ಧಾರವಾಡ

೧೯೮೪ ನ್ಯಾಯವೈಶೇಷಿಕ ಮತ್ತು ಆಧುನಿಕ ಭಾರತೀಯ ತತ್ತ್ವಶಾಸ್ತ್ರ ಕಾವ್ಯ ಮೀಮಾಂಸಾ ಶಾಸ್ತ್ರಕ್ಕೆ ಶೈವಸಾಹಿತಿಗಳ ಕೊಡುಗೆ, ಅರ್ಚನ, ಸುತ್ತೂರು ಸ್ವಾಮೀಜಿ ಸ್ವರ್ಣಮಹೋತ್ಸವ ಸಂಪುಟ

— ಕಾವ್ಯಾರ್ಥ ಚಿಂತನ, ರುಜುವಾತು

೧೯೮೫ ಕರ್ನಾಟಕದಲ್ಲಿ ಅದ್ವೈತ, 'ಅವಲೋಕನ', ಬೆಂಗಳೂರು

೧೯೮೮ ಜೀವನಸೌಂದರ್ಯ ಮತ್ತು ಸಾಹಿತ್ಯ, ಡಿ.ವಿ.ಜಿ, ಸಮಗ್ರಕೃತಿ ಪರಿಶೀಲನೆ ಕೋಲಾರ

— ಭಾರತೀಯ ಸ್ತೋತ್ರಪರಂಪರೆ, ಯುಗಯಾತ್ರೀ, ಭಾರತೀಯ ಸಂಸ್ಕೃತಿ. ನಾಲ್ಕನೆಯ ಸಂ., ಮೈಸೂರು

— ತೌಲನಿಕ ಕಾವ್ಯಮೀಮಾಂಸೆ, ಶಿವಚಿಂತನ, ತಿಪ್ಪೇರುದ್ರಸ್ವಾಮಿ ಅಭಿನಂದನ ಗ್ರಂಥ

೧೯೮೯ ವಿಶ್ವಯಾತ್ರೆ ಮತ್ತು ನಂದನವನ, ಆವಿಷ್ಕರಣ (ನಿಸರ್ಗ ಗೀತೆಗಳು ೧೯೫೬) ಗೋಕಾಕರ ೮೦ನೇ ಹುಟ್ಟುಹಬ್ಬದ ಬಿಡುಗಡೆ

೧೯೯೧ ಈ ಕಾಲದ ಶಾಸ್ತ್ರ ಗ್ರಂಥಗಳು (ಲೌಕಿಕ ಮತ್ತು ಆಗಮ) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ. ೬, ಬೆಂಗಳೂರು

೧೯೯೨ ವಿಮರ್ಶೆ : ಅಂದು—ಇಂದು, ಸಂಕ್ರಮಣ ಸಾಹಿತ್ಯ ಸಂ. ೧, ಧಾರವಾಡ

೧೯೯೩ ಪ್ರಶಸ್ತಿ ಪುಷ್ಪಾಂಜಲಿ (ಕವನ), ಪ್ರವರ್ಧಮಾನ, ಶ್ರೀ ವೀರೇಂದ್ರಹೆಗ್ಗಡೆ ಪಟ್ಟಾಭಿಷೇಕ ರಜತೋತ್ಸವ ಸಂಪುಟ ಧರ್ಮಸ್ಥಳ

ರಲ್ಲಿ ಸಲ್ಲಿಸಿದ 'Dhvanyāloka and Its Critics' ಎಂಬ ಡಾಕ್ಟರೇಟ್ ಪ್ರಬಂಧವು ಪಿ.ವಿ.ಕಾಣೆ ಮತ್ತು ಎಚ್. ಡಿ. ವೇಲಂಕರ್ ಅವರ ಮೆಚ್ಚಿಗೆ ಗಳಿಸಿತು. ಕರ್ನಾಟಕ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಸಂಸ್ಕೃತ ವಿಭಾಗ ದಲ್ಲಿ ಇವರು ಪ್ರಾಧ್ಯಾಪಕ ಮತ್ತು ವಿಭಾಗಮುಖ್ಯರಾಗಿ 1959ರಿಂದ 1984ರ ವರೆಗೆ ಸೇವೆ ಸಲ್ಲಿಸಿದರು. ಇವರು ಇಂಗ್ಲಿಷ್‌ನಲ್ಲಿ ಪ್ರಕಟಿಸಿರುವ ಹತ್ತಾರು ಗ್ರಂಥಗಳಲ್ಲಿ 'Vakroktijīvita' (1977), 'Dhvanyāloka' (1982) ಮತ್ತು 'Nāṭyaśāstra with Abhinavabhāratī' (1992) ಇವುಗಳ ಸಂಶೋಧಿತ ಆವೃತ್ತಿಗಳು, 'Kālidāsa' (1972) ಮತ್ತು 'Bāṇa' (1977) ಇವರನ್ನು ಕುರಿತ ವಿದ್ವತ್ಪ್ರಬಂಧಗಳು ಮತ್ತು ಸ್ವತಂತ್ರ ಅಧ್ಯಯನಗಳಾದ 'Some Thoughts on Indian Aesthetics' (1968), 'Essays in Sanskrit Criticism' (1974) ಮತ್ತು 'Studies in Indian Aesthetics and Criticism' (1974) ಪ್ರಮುಖವಾಗಿವೆ.

'ಧ್ವನ್ಯಾಲೋಕ ಮತ್ತು ಆನಂದವರ್ಧನನ ಕಾವ್ಯಮೀಮಾಂಸೆ', ಭಾಮಹನ 'ಕಾವ್ಯಾಲಂಕಾರ', ಮಮ್ಮಟನ 'ಕಾವ್ಯಪ್ರಕಾಶ', ರಾಜಶೇಖರನ 'ಕಾವ್ಯಮೀಮಾಂಸೆ', ದಂಡಿಯ 'ಕಾವ್ಯಾದರ್ಶ', ವಾಮನನ 'ಕಾವ್ಯಾಲಂಕಾರ ಸೂತ್ರವೃತ್ತಿ', ಕ್ಷೇಮೇಂದ್ರನ 'ಕವಿಕಂಠಾಭರಣ' ಮತ್ತು 'ಔಚಿತ್ಯ ವಿಚಾರ ಚರ್ಚೆ'—ಇವು ಕೃಷ್ಣಮೂರ್ತಿಗಳು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿ ಕೊಟ್ಟಿರುವ ಅಲಂಕಾರಶಾಸ್ತ್ರಕೃತಿಗಳ ಅಮೂಲ್ಯವಾದ ಕೊಡುಗೆ.

ಕೃಷ್ಣಮೂರ್ತಿಗಳಿಗೆ ಸಂದಿರುವ ಅನೇಕ ಸಂಶೋಧನ ಬಹುಮಾನ ಮತ್ತು ಪುರಸ್ಕಾರಗಳಲ್ಲಿ ಭಾರತದ ರಾಷ್ಟ್ರಪತಿಗಳಿಂದ ಲಬ್ಧವಾದ ಪುರಸ್ಕಾರ (1978) ಗಮನಾರ್ಹವಾದುದು. ಇವರು 1994ರಲ್ಲಿ ರೋಹ್ಟಕ್‌ನಲ್ಲಿ ನಡೆದ 'ಅಖಿಲಭಾರತ ಪ್ರಾಚ್ಯವಿದ್ಯಾ ಮಹಾಸಮ್ಮೇಳನ'ದ ಅಧ್ಯಕ್ಷರಾಗಿದ್ದರು. ಅಲಂಕಾರಶಾಸ್ತ್ರದ ಬಗ್ಗೆ ಅಧಿಕಾರವಾಣಿಯಂತಿರುವ ಕೃಷ್ಣಮೂರ್ತಿಗಳು ಇಂದು ವಿದ್ವನ್ಮಣಿಗಳಾದ ಪಿ. ವಿ. ಕಾಣೆ, ಎಸ್. ಕೆ. ಡೇ, ಎಂ. ಹಿರಿಯಣ್ಣ ಮತ್ತು ವಿ. ರಾಘವನ್ ಅವರ ಸಾಲಿನಲ್ಲಿ ಪರಿಗಣಿಸಲ್ಪಡುತ್ತಾರೆ.

ಲೌಕಿಕದೃಷ್ಟಿ ವಸ್ತುನಿಷ್ಠೆ ಎರಡೂ ಡಾ. ಕೆ. ಕೃಷ್ಣಮೂರ್ತಿ ಅವರಿಗೆ ಪ್ರಕೃತಿದತ್ತವಾದ ಪ್ರತಿಭೆಯಿಂದ ಸಹಜವಾಗಿ ಸಿದ್ಧಿಸಿವೆ. ಎಂತಲೇ ಸೌಂದರ್ಯಮೀಮಾಂಸೆಯ ನಿರೂಪಣೆಯ ಎಲ್ಲ ಹಂತಗಳಲ್ಲೂ ... ಮಣಿಯದೆ,

ಕಾಲದೇಶಾತೀತ ವಿಶ್ವಮಾನವನ ಜೀವನವಿಕಾಸಮಾರ್ಗದ ಮುಖ್ಯ ಮಜಲುಗಳನ್ನು ಕಾಣಬಲ್ಲ ಸೂಕ್ಷ್ಮ ಅಂತರ್ದೃಷ್ಟಿಯೇ 'ಪ್ರತಿಭೆ'. ತನ್ನ ಪರಿಸರದ ವಾಸ್ತವಿಕ ಜೀವನವನ್ನು ಗಮನಿಸಿ, ಅನುಭವಿಸಿ, ವಿಶ್ಲೇಷಿಸಿ, ಮೇಲ್ನೋಟಕ್ಕೆ ಕಾಣುವ ಮುಸುಕಿನ ತೆರೆಯ ಹಿಂದಿನ ನಿತ್ಯಸತ್ಯವನ್ನು ಮನಗಂಡು ಅದನ್ನು ಕಲಾತಂತ್ರದ ತನ್ನ ಪ್ರೌಢಿಮೆಯಿಂದ ಸುಂದರವಾಗಿ ಅಭಿವ್ಯಕ್ತಿಗೊಳಿಸುವಾತನೇ ಮಹಾಕವಿಯೆಂಬುದು ಭಾರತೀಯ ರಸಮೀಮಾಂಸೆಯ ಮರ್ಮ. ಇದರಲ್ಲಿ ಇಂದಿನ ಮನಶ್ಶಾಸ್ತ್ರ, ತತ್ತ್ವಶಾಸ್ತ್ರ ಮತ್ತು ಇನ್ನೂ ಹೆಚ್ಚಾಗಿ ಸಮಾಜಶಾಸ್ತ್ರದ ಮೌಲಿಕ ಪ್ರಮೇಯಗಳೂ ಅಡಗಿವೆ. ಸೌಂದರ್ಯಮೀಮಾಂಸೆ ಈ ಮೂರನ್ನೂ ಆಶ್ರಯಿಸಿಯೇ ಸಾಗುತ್ತದೆ.

**ಡಾ. ಕೆ. ಕೃಷ್ಣಮೂರ್ತಿ**

(ಡಿ.ವಿ.ಕೆ. ಮೂರ್ತಿ : 'ಜೀವನಮೌಲ್ಯಗಳು ಮತ್ತು ಸಾಹಿತ್ಯ'
—ಮುನ್ನುಡಿಯಿಂದ)